# ಜೀವ ಬ್ರಹ್ಮೈಕ್ಯ
# ರಾಜಯೋಗ ಸಾರಾಮೃತವು.




ತತ್ಸತ್

ಶ್ರೀ ಪರಬ್ರಹ್ಮಣೇ ನಮಃ.

# ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತವು

## (ಪ್ರಥಮ ಭಾಗ.)


ಪಂಜೆಟ್ಟಿಮಠದ ಮಠಾಧಿಪತಿಗಳಾದ

ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರಿಂದ

ತೆಲುಗುಭಾಷೆಯಲ್ಲಿ ಬರೆಯಲ್ಪಟ್ಟ ಈ ಗ್ರಂಥವು

**ಬಿ. ಭೀಮಸೇನರಾವ್ B. Sc.**

ಇವರಿಂದ,

ಕನ್ನಡ ಭಾಷೆಯಲ್ಲಿ ಪರಿವರ್ತಿಸಲ್ಪಟ್ಟು,



ಬೆಂಗಳೂರು

ವಿ. ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

ಪ್ರಥಮ ಮುದ್ರಣ, 2,000 ಪ್ರತಿಗಳು.

3-12-0


 **1-10-1936. [Vol. I. Price Rs. 3-8-0.**

ವಿ. ಪಿ. ಖರ್ಚುಗಳು ಪ್ರತ್ಯೇಕ.

ಈ ಗ್ರಂಥಕರ್ತರು
ಪ್ರಸ್ತುತ ಪ್ರಚುರಪಡಿಸಿರುವ ಗ್ರಂಥಗಳು.

---

## 1. "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತವು."

---

**ಕನ್ನಡ ಗ್ರಂಥ (ಪ್ರಥಮಭಾಗ) 880-ಪುಟಗಳು,**
56 **ಚಿತ್ರಪಠಗಳುಳ್ಳದ್ದು. ಕ್ಯಾಲಿಕೋಬೈಂಡು ರೂ. 3—8—0**

**2.** ಡಿಟೋ ೩ನೇ ಮುದ್ರಣ ತೆಲುಗುಗ್ರಂಥ 1276 ಪುಟಗಳು,
48 **ಚಿತ್ರಪಠಗಳುಳ್ಳದ್ದು. ಕ್ಯಾಲಿಕೋಬೈಂಡು ರೂ. 4—4—0**

ಹೆಡ್ಡಾಫೀಸು :—

☞ ಶ್ರೀ ಸಚ್ಚಿದಾನಂದರ್ ಕಂಪೆನಿ,
ಚೂಳೇ ಪೋಸ್ಟ್, ಮದ್ರಾಸು.

ಬ್ರಾಂಚ್ ಆಫೀಸುಗಳು :—

☞ ಶ್ರೀ ಸಚ್ಚಿದಾನಂದರ್ ಕಂಪೆನಿ,
**90/B 9th ಕ್ರಾಸ್ ರೋಡು,**
ಚಾಮರಾಜಪೇಟೆ, ಬೆಂಗಳೂರು ಸಿಟಿ.

☞ ಶ್ರೀ ಸಚ್ಚಿದಾನಂದರ್ ಕಂಪೆನಿ,
3137-2nd **Ediga Extension ಮೈಸೂರು.**



# ‘ಮೋಕ್ಷವು ಸೂಕ್ಷ್ಮದಲ್ಲಿದೆ’ ಎಂಬುದರ ರಹಸ್ಯಾರ್ಥವು.

‘ಮೋಕ್ಷವೆಂಬುದು ಸೂಕ್ಷ್ಮದಲ್ಲಿದೆ’ ಎಂದು ಅನೇಕರು ಹೇಳುವುದುಂಟು. ಇದರ ರಹಸ್ಯವನ್ನು ಈ ಕೆಳಗೆ ವಿವರಿಸಿದೆ. ಒಂದು ಘಟದೊಳಗೆ ಆಕಾಶವು ಅಂದರೆ ಬಯಲು ತುಂಬಿರುತ್ತದೆ. ಆ ಘಟದ ಹೊರಭಾಗದಲ್ಲಿಯೂ ಆಕಾಶವೆಂಬ ಬಯಲು ಆವರಿಸಿರುತ್ತದೆ. ಘಟದೊಳಗಿರುವ ಆಕಾಶಕ್ಕೆ ‘**ಘಟಾಕಾಶ**’ವೆಂದೂ ಘಟದ ಹೊರಭಾಗದಲ್ಲಿರುವ ಬಯಲಿಗೆ ‘**ಮಹಾಕಾಶ**’ ವೆಂದೂ ಹೆಸರಿದೆ. ಈ ಮಹಾಕಾಶದಲ್ಲಿ ಯಾವ ಎಣಿಕೆಗಳೂ, ಯಾವ ಕೋರಿಕೆಗಳೂ, ಯಾವ ಆಸೆಗಳೂ, ಯಾವ ಪೂಜಾ ಮಂತ್ರಜಪಗಳೂ, ಯಾವ ಸಂಧ್ಯಾವಂದನಾದಿಗಳೂ, ಯಾವ ಯೋಗಾದಿಗಳೂ—ಇವುಗಳನ್ನು ಅಭ್ಯಾಸಮಾಡುವುದಕ್ಕೆ ಅಲ್ಲಿ ಮನಸ್ಸೆಂಬುದು ಇಲ್ಲದಿರುವುದರಿಂದ ಆ ಮಹಾಕಾಶವು ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಬರಿಯ ಬಯಲಾಗಿಯೇ ನಿಂತಿರುತ್ತದೆ. ಈ ಆಕಾಶದ ಸಂಬಂಧವೇ ಮೇಲೆ ಹೇಳಿದ ಘಟದಲ್ಲಿಯೂ ಅಣಗಿರುತ್ತದೆ. ಈ ಘಟಾಕಾಶಕ್ಕೂ ಮಹಾಕಾಶಕ್ಕೂ ನಡುಭಾಗದಲ್ಲಿ ಹೆಂಚು ಅಂದರೆ ಮಣ್ಣಿನ ಗೋಡೆಯು ಅಡ್ಡವಾಗಿರುತ್ತದೆ. ಆ ಮಣ್ಣಿನ ಹೆಂಚನ್ನು ಒಡೆದಲ್ಲಿ ಘಟದಲ್ಲಿರುವ ಆಕಾಶವೂ ಅದಕ್ಕೆ ಹೊರಗಿರುವ ಮಹಾಕಾಶವೂ ಇವೆರಡೂ ಒಂದಾಗಿ ಸೇರಿಹೋಗುತ್ತವೆ. ಹಾಗೆ ಎರಡೂ ಬೆರೆಯುವುದಕ್ಕೆ ಕಾರಣವೇನೆಂದರೆ, ಘಟದಲ್ಲಿರುವ ಆಕಾಶವು ವಾಸನಾಸಂಸ್ಕಾರಗಳಿಲ್ಲದೆ ಅತಿ ಪರಿಶುದ್ಧವಾಗಿರುತ್ತದೆ, ಮತ್ತು ಆ ಘಟದ ಹೊರಭಾಗದಲ್ಲಿರುವ ಆಕಾಶವೂ ಬಹು ಪರಿಶುದ್ಧವಾಗಿಯೇ ಇರುತ್ತದೆ. ಇವೆರಡು ಬಯಲುಗಳೂ ಪರಿಶುದ್ಧಿಯಾಗಿರುವುದರಿಂದ ಗಡಿಗೆಯ ಹೆಂಚನ್ನು ಒಡೆದುಹಾಕಿದೊಡನೆಯೇ, ಅದರಲ್ಲಿರುವ ಆಕಾಶವು, ಅದಕ್ಕೆ ಹೊರಗಿರುವ ಮಹಾಕಾಶದಲ್ಲಿ ಕಲೆತು ಏಕವಾಗುತ್ತದೆ. ವೇದಾಂತ ವಿಚಾರಗಳನ್ನು ಕುರಿತು ಉಪನ್ಯಾಸ ಮಾಡುವಾಗ ಜೀವ ಬ್ರಹ್ಮೈಕ್ಯವನ್ನು ತೋರಿಸುವ ಸಲುವಾಗಿ ಈ ಘಟಾಕಾಶ ಮಹಾಕಾಶಗಳನ್ನು ಒಂದು ನಿದರ್ಶನವಾಗಿ ಹೇಳಿರುತ್ತಾರೆ.

ಹೀಗೆಯೇ, ಮಾನವನ ಶರೀರವೂ ಕೂಡ ಒಂದು ಗಡಿಗೆಯಂತೆಯೇ ಇರುತ್ತದೆ ಮತ್ತು ಈ ಶರೀರಕ್ಕೆ 'ಘಟ'ವೆಂಬ ಹೆಸರೂ ಇದೆ. ಈ ಶರೀರವೆಂಬ ಘಟದಲ್ಲಿ ಆತ್ಮನೆಂಬ ಬಯಲುಸ್ವರೂಪವು ನೆಲೆಸಿದೆ. ಅಂತಹ ಬಯಲಿನಲ್ಲಿ ಎಣಿಕೆಗಳ ಗಣಿಯಾದ ಮನಸ್ಸೆಂಬುದು ಸೇರಿ ಅನೇಕ ವಿಧಗಳಾದ ಕೋರಿಕೆಗಳನ್ನು ನೆನೆಯುತ್ತಾ ವಿವಿಧ ಆಸೆಗಳಿಂದ ತುಂಬಿ, ಪೂಜೆ, ಮಂತ್ರಜಪಗಳು, ಸಂಧ್ಯಾವಂದನಾದಿಗಳು ಮೊದಲಾದ ಕರ್ಮಗಳನ್ನು ಆ ಮನಸ್ಸು ಮಾಡುತ್ತಲಿರುತ್ತದೆ. ಹೀಗಿರಲು, ಜೀವಿಗಳು ತಾವು ಶರೀರವನ್ನು ಬಿಡುವಾಗ ತಮತಮಗೆ ಯಾವಯಾವ ವಸ್ತುಗಳಲ್ಲಿ ವಿಶೇಷ ಪ್ರೀತಿಯೋ, ಅವುಗಳನ್ನೇ ನೆನೆಸುತ್ತ ಪ್ರಾಣವನ್ನು ಬಿಡುತ್ತಾರೆ. ಹೀಗೆಯೇ ಪ್ರತಿ ಜನ್ಮದಲ್ಲಿಯೂ ಏನೂ ಪ್ರಯೋಜನವಿಲ್ಲದ ಬರಿಯ ಎಣಿಕೆಗಳನ್ನು ನೆನೆಯುತ್ತಲೇ ಪ್ರಾಣಬಿಡುತ್ತಿರುವುದರಿಂದ ಮನಸ್ಸಿನ ಕೋರಿಕೆಗಳೇ ಅವರಿಗೆ ಬೀಜಭೂತವಾಗಿದ್ದು, ಪುನಃ ಬೇರೆಬೇರೆ ರೂಪಗಳಿಂದ ಬೇರೆಬೇರೆ ಶರೀರಗಳನ್ನು ಹೊಂದುತ್ತಾರೆ. ಶರೀರವೆಂಬ ಘಟದಲ್ಲಿರುವ ಆತ್ಮನೆಂಬ ಆಕಾಶವನ್ನೂ ಶರೀರದ ಹೊರಗಿರುವ ಪರಮಾತ್ಮನೆಂಬ ಆಕಾಶವನ್ನೂ ಒಂದಾಗಿ ಸೇರಿಸುವುದಕ್ಕಾಗಿ ಒಂದು ಉಪಾಯವಿದೆ. ಅದನ್ನು ಈ ಕೆಳಗೆ ತಿಳಿಸಿದೆ. ಆ ಉಪಾಯದಿಂದ ಸ್ತ್ರೀಪುರುಷರು ತಮ್ಮತಮ್ಮ ಮನಸ್ಸನ್ನು ಜಯಿಸಬಹುದು. ಹಾಗೆ ನೀವು ಮನಸ್ಸನ್ನು ಸ್ವಾಧೀನಕ್ಕೆ ತಂದಿರಾದರೆ ಸದಾ ಆತ್ಮಸ್ವರೂಪವಾದ ಬಯಲಾಗಿಯೇ ಇರುತ್ತೀರಿ. ಈ ಸ್ಥಿತಿಯನ್ನು ಹೊಂದಬಹುದಾದ ಮಾರ್ಗವನ್ನು ಈ ಕೆಳಗೆ ವಿವರಿಸಿದೆ.

ಒಬ್ಬೊಬ್ಬ ಸ್ತ್ರೀಪುರುಷರೂ ಪ್ರತಿದಿನವೂ ಎಷ್ಟೋ ಯೋಚನೆಗಳಿಗೆ ಮನಸ್ಸಿನಲ್ಲೆಡೆಗುಡುತ್ತಾ ಭಜನೆ, ಪೂಜೆ, ಮಂತ್ರಜಪ, ಸಂಧ್ಯಾವಂದನೆ ಮೊದಲಾದುವುಗಳನ್ನು ಮಾಡುತ್ತಿರುತ್ತಾರೆ. ಈ ಪೂಜೆಗಳೆಲ್ಲವೂ ಕರ್ಮಗಳೆಂದು ಕರೆಯಲ್ಪಡುತ್ತವೆ. ಮೇಲೆ ಹೇಳಿದ ಸರ್ವ ಕರ್ಮಗಳನ್ನು ಮಾಡುವುದಕ್ಕೆ ಮನಸ್ಸೇ ಮೂಲಕಾರಣವು. ಇಂತಹ ಮನಸ್ಸು ಯಾವ ವಿಧವಾದ ಕೋರಿಕೆಗಳನ್ನೂ ನೆನೆಯದಿರುವಂತೆ ಅದನ್ನು ಸಂಹರಿಸಿದ್ದೇ ಆದರೆ, ಆಗ ಶರೀರವೆಂಬ ಘಟದೊಳಗೆ ನೆಲೆಸಿರುವ ಆತ್ಮವೆಂಬ ಆಕಾಶವು, ಯಾವ ಬಂಧಕ್ಕೂ ಸಿಕ್ಕಿ ಬೀಳದೆ ಘಟದೊಳಗಿರುವ ಆಕಾಶವು ಯಾವ ಬಗೆಯಲ್ಲಿ

ನಿರ್ಮಲವಾಗಿರುತ್ತದೆಯೋ ಹಾಗೆಯೇ ಶರೀರ ಘಟದಲ್ಲಿರುವ ಆತ್ಮನೆಂಬ ಆಕಾಶವೂ ನಿರ್ಮಲವಾಗಿಯೇ ಇರುತ್ತದೆ. ಆದರೆ, ಘಟಾಕಾಶಕ್ಕೂ ಮಹಾ ಕಾಶಕ್ಕೂ ಮಧ್ಯಭಾಗದಲ್ಲಿರುವ ಮಣ್ಣಿನ ಹೆಂಚು ಬಹು ಮಂದವಾಗಿರು ತ್ತದೆ. ಇಲ್ಲಿ ಅದರಂತಲ್ಲ. ಎಲ್ಲಾ ಯೋಚನೆಗಳನ್ನೂ, ಎಲ್ಲಾ ಕೋರಿಕೆ ಗಳನ್ನೂ, ಎಲ್ಲಾ ವಿಧವಾದ ಆಸೆಗಳನ್ನೂ ಮತ್ತು ಎಲ್ಲಾ ಮಂತ್ರಜಪಾದಿ ಗಳನ್ನೂ ತೊಲಗಿಸಿ ಬಹು ಪರಿಶುದ್ಧವಾಗಿರುವ ಶರೀರಘಟದಲ್ಲಿರುವ ಆತ್ಮಾ ಕಾಶಕ್ಕೂ ಅದರ ಹೊರವಲಯದಲ್ಲಿ ಅದನ್ನೇ ಆವರಿಸಿರುವ ಪರಮಾತ್ಮ ನೆಂಬ ಆಕಾಶಕ್ಕೂ ನಡುವೆ ಬಹು ತೆಳುವಾದ ಒಂದು ಪೊರೆಯು ತೆರೆಯಂತೆ ಅಡ್ಡವಾಗಿ ನಿಂತಿರುತ್ತದೆ. ಈ ಆತ್ಮಪರಮಾತ್ಮಗಳೆರಡೂ ಬಹು ಸಮೀಪ ವಾಗಿರುವುದರಿಂದ, ಪ್ರಾಣವನ್ನು ಬಿಡುವಾಗ ಯಾವ ವಿಧವಾದ ಕೋರಿಕೆ ಗಳನ್ನೂ ಮನಸ್ಸಿನಲ್ಲಿ ನೆನೆಯದೆ ಬರಿಯ ಬಯಲಾಗಿ ನಿಂತಿದ್ದೇ ಆದರೆ, ಶರೀರಘಟದಲ್ಲಿರುವ ಆತ್ಮಾಕಾಶವೂ, ಆದರ ಹೊರಗಿರುವ ಪರಮಾತ್ಮನೆಂಬ ಮಹಾಕಾಶವೂ ಬೆರೆತುಹೋಗುತ್ತವೆ. ಹೀಗೆ ಕಲೆತುಹೋಗುವುದಕ್ಕೆ '**ಜೀವ ಬ್ರಹ್ಮೈಕ್ಯ**' ಅಥವಾ '**ಮೋಕ್ಷ**' (Salvation) ಎಂದು ಹೇಳುವರು. ಈ ಜೀವಾತ್ಮಪರಮಾತ್ಮರ ನಡುವೆ ಮೇಲೆ ಹೇಳಿದಂತೆ ಬಹು ತೆಳುವಾದ ಒಂದು ಪೊರೆಯು ಅಡ್ಡವಾಗಿ ನಿಂತಿರುತ್ತದೆ. ಈ ತೆರೆಯೇ 'ಮಾಯೆ'ಯೆಂದು ಕರೆಯಲ್ಪಡುತ್ತದೆ. ಮಾಯೆಯೆಂದರೆ, ಅನೇಕ ವಿಧವಾದ ಕೋರಿಕೆಗಳು, ಯೋಚನೆಗಳು, ಆಸೆಗಳು ಮೊದಲಾ ದವುಗಳನ್ನುಳ್ಳದ್ದು. ಇವೆಲ್ಲವೂ ಮಾಯವಾಗಿ 'ಮಾಯೆ'ಯೆಂಬುದು ಕಣ್ಮರೆ ಯಾಗುತ್ತದೆ. ಮಾಯೆಯೆಂಬ ತೆರೆಯು ಹರಿಯಿತೆಂದರೆ ಮೋಕ್ಷವೆಂಬು ದು ಸುಲಭಸಾಧ್ಯವಾಗುವುದು. ಯಾವ ಕೋರಿಕೆಗಳಿಗೂ ಎಡೆಗೊಡದೆ ಸದಾ ಸುಮ್ಮನಿದ್ದುದೇ ಆದರೆ, ಆಗ ಮಾಯೆಯೆಂಬುವ ತೆರೆಯು ಇದ್ದಕ್ಕಿದ್ದ ಹಾಗೆಯೇ ಹರಿದುಹೋಗುತ್ತದೆ. ಈ ಮಾಯೆಯು ಕಳೆದಮೇಲೆ ಜೀವಾ ತ್ಮನು ಪರಮಾತ್ಮನಲ್ಲಿ ಐಕ್ಯವಾಗುತ್ತಾನೆ. ಅಂದರೆ ಒಟ್ಟಿನಲ್ಲಿ ಯಾವ ಕೋರಿಕೆಗಳನ್ನೂ ನೆನೆಯದಿದ್ದಲ್ಲಿ ಮನಸ್ಸೇ ಇಲ್ಲವಾಗಿ ಬರಿಯ ಬಯಲು ಮಾತ್ರ ನಿಲ್ಲುತ್ತದೆ. ಇದೇ ಶ್ರೇಷ್ಠವಾದ ಅಂತ್ಯಸ್ಥಿತಿ. ಈ ಸ್ಥಿತಿಯು ಲಭಿಸಿದನಂತರ ಪ್ರಾಣವನ್ನು ಬಿಟ್ಟಮೇಲೆ ಶರೀರಘಟದೊಳಗಿರುವ ಸಣ್ಣ

ಬಯಲು ಪರಮಾತ್ಮನೆಂಬ ವಿಶಾಲವಾದ ಬಯಲಿನಲ್ಲಿ ಹೋಗಿ ಸೇರುತ್ತದೆ. ಈ ಜೀವಾತ್ಮನಿಗೂ ಪರಮಾತ್ಮನಿಗೂ ಎಷ್ಟು ಹತ್ತಿರವಿದೆ ನೋಡಿರಿ. ಆದುದರಿಂದಲೇ ಜೀವ ಬ್ರಹ್ಮೈಕ್ಯವೆಂದು ಕರೆಯಲ್ಪಡುವ ' ಮೋಕ್ಷ ' ವು ಬಹಳ ' ಸೂಕ್ಷ್ಮ 'ದಲ್ಲಿದೆಯೆಂದು ಹೇಳಲಾಗಿದೆ.

ಓ ಪಾಠಕರೇ ! ಯಾವ ವಿಧವಾದ ಎಣಿಕೆಗಳಿಗೂ ಮನಸ್ಸಿನಲ್ಲಿ ಎಡೆಗುಡದೆ ನೀವು ಸರ್ವಕಾಲದಲ್ಲಿಯೂ ಬಟ್ಟಬಯಲುಸ್ವರೂಪವಾಗಿ ನಿಂತಿರಬೇಕೆಂಬ ಉದ್ದೇಶದಿಂದಲೇ, ಈ ಗ್ರಂಥದ ದ್ವಿತೀಯಭಾಗ (Vol. II.) ದಲ್ಲಿ ಕೊಟ್ಟಿರುವ ಪಠದಲ್ಲಿ ಮೂರು ವಿಧವಾದ ಚಿನ್ಮುದ್ರೆಗಳನ್ನು ಕೈಗಳಿಂದ ಹಿಡಿದು ತೋರಿಸಿರುತ್ತದೆ. ಆದುದರಿಂದ ನೀವು ಯಾವ ಮಂತ್ರಜಪ ಮೊದಲಾದುವುಗಳನ್ನೂ ಮಾಡದೆ, ಆ ಚಿನ್ಮುದ್ರೆಯೊಳಗಿರುವ ಬಯಲನ್ನೇ ಸುಮ್ಮನೆ ನೋಡುತ್ತಿದ್ದು ಅದರ ರಹಸ್ಯವನ್ನು ತಿಳಿದು ಅದನ್ನು ಅನುಕರಿಸಿದ್ದೇ ಆದರೆ, ಆಗ ನಿಮ್ಮ ಮನಸ್ಸು ಆ ಬಯಲಿನಂತೆಯೇ ಸ್ತಬ್ಧವಾಗಿ ನಿಂತುಹೋಗುತ್ತದೆ. ಒಂದು ವೇಳೆ ನಿಮ್ಮ ಮನಸ್ಸು ಹಾಗೆ ನಿಲ್ಲದಿದ್ದರೆ, ಆ ದ್ವಿತೀಯಭಾಗದಲ್ಲಿ ವಿವರಿಸಿರುವ ಮೂರು ವಿಧವಾದ ಮಂತ್ರಗಳನ್ನು ಜಪಮಾಡಿ ಮನಸ್ಸನ್ನು ನಿಲ್ಲಿಸಬೇಕೆಂದು ಉಪದೇಶಮಾಡಿರುತ್ತದೆ. ಇದರಿಂದಲೂ ನಿಮ್ಮ ಮನಸ್ಸು ನಿಲ್ಲದೆ ಹೋದರೆ,

ಶ್ಲೋ ॥ ದೇಶಾದ್ದೇಶಾಂತರಪ್ರಾಪ್ತಿಃ ♦ ಸನ್ನಿಧೌ ಮಧ್ಯಮೇವ ಯತ್ ।
ನಿಮೇಷೇಣ ಚಿದಾಕಾಶಂ ♦ ತದ್ವಿದ್ಧಿ ಮುನಿಪುಂಗವ ! ॥

ಈ ಶ್ರುತಿವಾಕ್ಯದ ಅರ್ಥವು ಸರ್ವರಿಗೂ ಚನ್ನಾಗಿ ತಿಳಿಯುವಂತೆ ದ್ವಿತೀಯಭಾಗದಲ್ಲಿ ವಿಶದವಾಗಿ ಉಪದೇಶಿಸಿದೆ. ಇದರಿಂದ ನಿಮ್ಮ ಮನಸ್ಸು ಖಂಡಿತವಾಗಿ ನಿಲ್ಲುತ್ತದೆ. ಈ ಮೇಲೆ ಹೇಳಿರುವ ಐದು ಉಪದೇಶಗಳಲ್ಲಿ ಯಾವುದರಿಂದಲಾದರೂ ನಿಮ್ಮ ಮನಸ್ಸು ಯಾವ ವಿಧವಾದ ಕೋರಿಕೆಗಳನ್ನೂ ನೆನೆಸದೆ ಒಂದೆಡೆಯಲ್ಲಿ ನಿಂತುಹೋಗುವುದಕ್ಕೆ ಸಂದೇಹವೇ ಇಲ್ಲ.

ಇತಿ,

 ಪರಮಹಂಸ ಸಚ್ಚಿದಾನಂದ.





## ವರಪ್ರದಾಯಕ ವಿಘ್ನರಾಜ!

ಶ್ಲೋ॥ ಧ್ಯಾಯೇ ತ್ಸಿಂಹಗತಂ ವಿನಾಯಕ ಮಮುಂ ♦ ದಿಗ್ಬಾಹು ಮಾದ್ಯೇ ಯುಗೇ ।
ತ್ರೇತಾಯಾಂ ತು ಮಯೂರವಾಹನ ಮಮುಂ ♦ ಷಡ್ಬಾಹುಕಂ ಸಿದ್ಧಿದಂ ॥
ದ್ವಾಪಾರೇ ತು ಗಜಾನನಂ ಯುಗಭುಜಂ ♦ ರಕ್ತಾಂಗರಾಗಂ ವಿಭುಂ ।
ತುರ್ಯೇ ತು ದ್ವಿಭುಜಂ ಸಿತಾಂಗರುಚಿರಂ ♦ ಸರ್ವಾರ್ಥದಂ ಸರ್ವದಾ ॥



ಮ॥ರಾ॥ಶ್ರೀ ಬಿ. ಭೀಮಸೇನರಾವ್ ಬಿ. ಎಸ್ಸಿ.

ಕಡಪ ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರಿಂದ ತೆಲುಗು ಭಾಷೆಯಲ್ಲಿ ಬರೆಯಲ್ಪಟ್ಟಿರುವ ' **ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ** ' ವೆಂಬ ವೇದಾಂತ ಗ್ರಂಥವನ್ನು ಕನ್ನಡಿಸಿದವರು.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ದಂಪತಿ ಸಮೇತರಾಗಿ ತಮ್ಮ 35ನೇ ವರ್ಷ ವಯಸ್ಸಿನಲ್ಲಿ ತೆಗೆಸಿದ ಛಾವಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

1865ನೇ ಸಂ|| ಫೆಬ್ರವರಿ ತಿಂಗಳು 16ನೇ ತಾರೀಖು ಗುರುವಾರ ದಿನ ಲಗ್ನದಲ್ಲಿ ಯೋಗೀಶ್ವರರ ಜನನವು. 48ನೇ ವರ್ಷದಲ್ಲಿ ತೆಗೆದ ಛಾಯಾಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

ಕಲಿಯುಗಾದಿ 1966ನೇ ವರ್ಷಕ್ಕೆ ಸರಿಯಾದ ರಕ್ತಾಕ್ಷಿ ಸಂ॥ ಮಾಘ ಬಹುಳ
ಪಂಚಮಿ ಗುರುವಾರ ಸಿಂಹ ಲಗ್ನದಲ್ಲಿ ಜನನವು.
ಶ್ರೀ ಯೋಗೀಶ್ವರರ 51ನೇ ವಯಸ್ಸಿನಲ್ಲಿ ತೆಗೆಸಿದ ಛಾಯಾಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ಕೋಲಾರ ರಾಬರ್ಟ್‌ಸನ್ ಪೇಟೆಯಲ್ಲಿ 1923ನೇ ಸಂ॥ ಕಟ್ಟಿಸಿದ
ಶ್ರೀ ಸಚ್ಚಿದಾನಂದ ದೇವಾಲಯದಲ್ಲಿ ಕುಂಭಾಭಿಷೇಕ ಸಮಯದಲ್ಲಿ
ಯೋಗೀಶ್ವರರ 53ನೇ ವಯಸ್ಸಿನಲ್ಲಿ ತೆಗೆಸಿದ ಛಾಯಾಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ಕಡಪ ಜಿಲ್ಲೆ-ಗಂಡಿಕೋಟೆಯಲ್ಲಿ ವಟವೃಕ್ಷದ ಕೆಳಗೆ ವ್ಯಾಘ್ರಾಸನದ ಮೇಲೆ ಕುಳಿತು ಮನಸ್ಸನ್ನು ಅತ್ತಿತ್ತ ಚಲಿಸದಂತೆ ನಿಲ್ಲಿಸಿ, 'ನಿಷ್ಠೆ' ಎಂಬ ಸಮಾಧಿಯಲ್ಲಿರುವಾಗ ಅವರ 56ನೇ ವರ್ಷ ವಯಸ್ಸಿನಲ್ಲಿ ತೆಗೆದ ಛಾಯಾಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

ತೆಲುಗು ಭಾಷೆಯಲ್ಲಿ ಉಪನ್ಯಾಸ ಮಾಡಲು ಆಂಧ್ರ ದೇಶಗಳಿಗೆ ಹೊರಟಾಗ
ಮೂರು ವರ್ಷಗಳ ಕಾಲ ಯೋಗಾಭ್ಯಾಸವನ್ನು ಮಾಡದೆ ಬಿಟ್ಟಿದ್ದಾಗ ಇದ್ದ ಶರೀರವು.
ಯೋಗೀಶ್ವರರ 59ನೇ ವಯಸ್ಸಿನಲ್ಲಿ ತೆಗೆಸಿದ ಭಾವಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

[illegible] ತಿಂಗಳು 13 ದಿನಗಳ ವರೆವಿಗೆ ಯೋಗ ಸಮಾಧಿಯಲ್ಲಿದ್ದು ಹೊರಕ್ಕೆ ಬಂದ ತಕ್ಷಣವೇ ಅವರ ಗುಹೆಯ [illegible] ತೆಗೆಸಿದ ಛಾಯಾಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ಅರಸ ಭಾಷೆಯಲ್ಲಿ ಉಪನ್ಯಾಸ ಮಾಡಲು ತಮಿಳು [illegible]
ಎರಡು ವರ್ಷಗಳ ಕಾಲ ಯೋಗಾಭ್ಯಾಸವನ್ನು ಮಾಡದೆ [illegible].
ಯೋಗೀಶ್ವರರ [illegible]ನೇ ವಯಸ್ಸಿನಲ್ಲಿ ತೆಗೆದ ಭಾವಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

ದಕ್ಷಿಣ ಆಫ್ರಿಕಾ ದೇಶಕ್ಕೆ ಹೋದ ಮೇಲೆ ಆ ದೇಶಾಚಾರಕ್ಕೆ ತಕ್ಕಂತೆ ಉಡುಪನ್ನು ಧರಿಸಿ ಅವರ ೯೮ನೇ ವಯಸ್ಸಿನಲ್ಲಿ ತೆಗಸಿದ ಛಾಯಾಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

ದಕ್ಷಿಣ ಆಫ್ರಿಕಾ ದೇಶದಲ್ಲಿ ಮಾರಿಟ್ಸ್‌ಬರ್ಗ್‌ನಲ್ಲಿರುವ ಸಕ್ಕರೆ ಕಾರ್ಖಾನೆಯ ಮಾಲೀಕರಿಗೆ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಮೃತ" ವೆಂಬ ಗ್ರಂಥವನ್ನು ತೋರಿಸುತ್ತಿರುವಾಗ ತೆಗೆಸಿದ ಛಾಯಾಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು**

'[illegible]' ದೇಶದಲ್ಲಿ ತಮ್ಮ ಶಿಷ್ಯರೊಡಗೂಡಿ ದೊಡ್ಡ ಬೆಟ್ಟದ ಮೇಲಿಂದ ಕೆಳಕ್ಕೆ ಇಳಿಯುವಾಗ [illegible] ತೆಗೆದ ಛಾಯಾಚಿತ್ರ



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ಯೋಗೀಶ್ವರರ 69ನೇ ವಯಸ್ಸಿನಲ್ಲಿ ತೆಗೆದ ಛಾಯಾಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

366 ದಿನಗಳು ಯೋಗಸಮಾಧಿಯಲ್ಲಿದ್ದು ಹೊರಗೆ ಬಂದ ನಂತರ
ಅವರ 71ನೇ ವಯಸ್ಸಿನಲ್ಲಿ ತೆಗೆಯಲ್ಪಟ್ಟ ಛಾಯಾಚಿತ್ರ.



ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು

ತಮ್ಮ ಎಡಗಡೆಯ ಮೂಗಿನ ಹೊಳ್ಳೆ ಮುಚ್ಚಿರುವ ಶ್ವಾಸವನ್ನು ಬಲಗಡೆಗೆ ಬರುವಂತೆ
ಮಾಡುವುದನ್ನು ತೋರಿಸುತ್ತಿದ್ದಾರೆ. ಶ್ವಾಸವು ಬಲದ ಹೊಳ್ಳೆಯಲ್ಲಿ
ನಡೆಯುತ್ತಿದ್ದರೆ ಅವರ ಸರ್ವ ಕಾರ್ಯಗಳೂ ಸಿದ್ಧಿಸುತ್ತವೆ.
72ನೇ ವಯಸ್ಸಿನಲ್ಲಿ ತೆಗೆಸಿದ ಫೋಟೋಚಿತ್ರ.



**ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರಿಗೆ**

ಶ್ರೀಮತಿ ಚಲ್ಲಮ್ಮ ನವರು 1923ನೇ ಇಸವಿ ಮಾರ್ಚಿ ತಿಂಗಳು 12ನೇ ತಾರೀಖಿನ ದಿನ
ಅರ್ಪಿಸಿದ ಇನ್ನೂರು ತೊಲಿ ತೂಕವುಳ್ಳ ಚೊಕ್ಕ ಬೆಳ್ಳಿಯ ಪಾದುಕೆಗಳು.

# ವಿ ಷ ಯ ಸೂ ಚಿ ಕೆ .

EXTRACT FROM NEWS PAPERS.

# ಈ ಗ್ರಂಥದ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯಗಳು.

*Dated 12—8—36.*

**C. Venkataravaniah, Esqr.,**

*Retired Inspector of Sanskrit Schools in Mysore,*

Says, Chamarajapet, BANGALORE.

**"ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ"** ವೆಂಬ ಈ ಗ್ರಂಥವು, ಒಬ್ಬ ಮಹಾಯೋಗಿಯ ಅನುಭವಗಳನ್ನು ಒಳಗೊಂಡದು ದಾಗಿರುತ್ತದೆ. ಯೋಗಿಯಾದವನ ಉದ್ದೇಶವು ಎರಡು ವಿಧವು. ತಾನು ತನ್ನ ಯೋಗಾಭ್ಯಾಸದ ಬಲದಿಂದಲೂ ತಪಶ್ಯಕ್ತಿಯ ಮಹಿಮೆಯಿಂದಲೂ ಬ್ರಹ್ಮಸ್ವರೂಪವನ್ನು ಅಥವಾ ಆತ್ಮಸಾಕ್ಷಾತ್ಕಾರವನ್ನು ಅಥವಾ ಕೈವಲ್ಯ ವನ್ನು ಪಡೆಯುವುದೇ ಮೊದಲನೆಯ ಉದ್ದೇಶವು. ತನ್ನ ಅನುಭವಗಳ ನ್ನು ಮಹಾ ಜನಗಳ ಮುಂದಿಟ್ಟು ಅವರುಗಳ ವೃತ್ತಿಯನ್ನು ಸನ್ಮಾರ್ಗದಲ್ಲಿ ಪ್ರವೇಶಿಸುವಂತೆ ಮಾಡಿ ಲೋಕವನ್ನುದ್ಧಾರಮಾಡುವುದೇ ಎರಡನೆಯ ಉದ್ದೇಶವು. ಈ ಎರಡನೆಯ ಉದ್ದೇಶವನ್ನು ಉಪದೇಶಗಳ ಮೂಲಕ ವಾಗಿಯಾಗಲಿ ಉಪನ್ಯಾಸದಮೂಲಕವಾಗಿಯಾಗಲಿ ಗ್ರಂಥರಚನೆಮೂಲಕ ವಾಗಿಯಾಗಲಿ ನೆರವೇರಿಸಬಹುದಾಗಿರುತ್ತದೆ. ಈಗ **ಪ್ರಸಕ್ತರಾದ ಮಹಾತ್ಮರು** ಈ ಮೂರು ವಿಧಗಳಾದ ಉದ್ದೇಶಗಳನ್ನೂ ಲೋಕದಲ್ಲೆಲ್ಲಾ ಸಂಚಾರಮಾಡಿ ನೆರವೇರಿಸುವಂಥವರಾಗಿರುತ್ತಾರೆ. ಉಪದೇಶಗಳಿಗೆ ಮನಗೊಟ್ಟು ಅವುಗಳನ್ನು ಅನುಷ್ಠಾನದಲ್ಲಿಟ್ಟುಕೊಳ್ಳದಿದ್ದರೆ ಅವು ನಿಷ್ಫಲ ವಾಗುವುವು. ಉಪನ್ಯಾಸಗಳು ಶ್ರವಣವಾದ ಬಳಿಕ ಮನನಮಾಡಿ ಸಾರ ವನ್ನು ಸಂಗ್ರಹಿಸಿ ನಡೆನುಡಿಗಳಲ್ಲಿ ಅವುಗಳ ತತ್ವಗಳನ್ನು ಉಪಯೋಗಿಸಿ ಕೊಳ್ಳದಿದ್ದರೆ ಅವುಗಳಿಂದೇನೂ ಪ್ರಯೋಜನವಾಗಲಾರದು; ಮತ್ತು ಅವುಗಳಲ್ಲಿನ ತತ್ವಗಳು ಮರೆತುಹೋಗುವುವು. ಈ ಅಂಶಗಳನ್ನು ತಿಳಿದು, ಆ ಮಹನೀಯರು ದ್ರವಿಡ (ತಮಿಳು), ಆಂಧ್ರ (ತೆಲಗು), ಮೊದಲಾದ

ಭಾಷೆಗಳಲ್ಲಿ ತಮ್ಮ ಅನುಭವಗಳನ್ನು ಲೇಖನ ಮೂಲಕ ಸ್ಥಿರಗೊಳಿಸಿ, ಅವುಗಳ ಪ್ರಯೋಜನವನ್ನು ಯಾವಾಗಲಾದರೂ ಯಾರಿಗೆ ಬೇಕಾದರೂ ದೊರೆಯುವಂತೆ ಮಾಡಿರುವುದು ಪರಮೋಪಕಾರವಾಗಿರುತ್ತದೆ.

ಹಾಗೆ ಬರೆದಿರುವ ಆಂಧ್ರ ಗ್ರಂಥವನ್ನು ಕರ್ಣಾಟಕ ಭಾಷೆಗೆ ಪರಿವರ್ತಿಸಿ ಕನ್ನಡಿಗರಲ್ಲಿ ಆಬಾಲವೃದ್ಧರಿಗೂ ಉಪಯೋಗವಾಗುವಂತೆ ಮಾಡಿದ **ಮ॥ ರಾ॥ ಶ್ರೀ ಬಿ. ಭೀಮಸೇನರಾವ್, ಬಿ. ಎಸ್ಸಿ.** ಯವರ ಉದ್ಯಮವು ವಿಶೇಷ ಸ್ತೋತ್ರಾರ್ಹವಾಗಿರುತ್ತದೆ. ಇವರು ಕನ್ನಡಿಗರು. ಕನ್ನಡ ದೇಶದವರು. ಕನ್ನಡ ಭಾಷೆಯಲ್ಲಿ ತುಂಬಾ ಪರಿಶ್ರಮವನ್ನು ಪಡೆದಿರುವವರು. ಕನ್ನಡ ಭಾಷೆಯಲ್ಲಿ ಉತ್ತಮವಾದ ಗ್ರಂಥಗಳನ್ನು ರಚಿಸಿರುವವರು. ಅಲ್ಲದೆ ಹೂಣಭಾಷೆಯಲ್ಲಿ ಉತ್ತಮ ಪರೀಕ್ಷೆಯನ್ನು ಹೊಂದಿರುವವರು. ಉರ್ದುಭಾಷೆಯ ಪರಿಜ್ಞಾನವುಳ್ಳವರು. ಸಂಸ್ಕೃತಭಾಷೆಯಲ್ಲಿ ಸಂಸ್ಕಾರವನ್ನು ಪಡೆದಿರುವವರು. ಇದರ ಮೇಲೆ ಆಂಧ್ರಭಾಷೆಯಲ್ಲಿ ಗದ್ಯಪದ್ಯ ಗ್ರಂಥಗಳ ಸಾರವನ್ನು ಗ್ರಹಿಸತಕ್ಕ ಯೋಗ್ಯತೆಯುಳ್ಳವರು. ಆದುದರಿಂದಲೇ ಆಂಧ್ರಭಾಷಾತ್ಮಕವಾದ ಗ್ರಂಥವನ್ನು ವಾಕ್ಯಗಳಲ್ಲಿಯೂ, ಪದ್ಯಗಳಲ್ಲಿಯೂ ಸ್ವಲ್ಪವನ್ನೂ ಬಿಡದೆ ಅದರಲ್ಲಿನ ವಿಷಯಗಳನ್ನೆಲ್ಲಾ ಕರ್ಣಾಟಕ ಭಾಷೆಯ ಕನ್ನಡಿಯಲ್ಲಿ ಪ್ರತಿಫಲಿಸುವಂತೆ ಮಾಡಲು ಇವರಿಗೆ ಸಾಧ್ಯವಾಯಿತು. ಇಷ್ಟು ಯೋಗ್ಯತೆಯಿಲ್ಲದಿದ್ದರೆ ಪರಿವರ್ತನೆಯ ಕೆಲಸವೇ ಸಾಗಲಾರದು. ಸಾಗಿದರೂ ಸರಿಯಾಗಿರಲಾರದು. ಸರಿಯಾಗಿದ್ದರೂ ಸ್ವಾರಸಿಕವಾಗಿರಲಾರದು.

ಇವರ ಗ್ರಂಥವನ್ನು ನಾನು ಬಹಳಮಟ್ಟಿಗೆ ಪರಿಶೀಲಿಸಿರುವೆನು. ವಚನಗಳು ಭಾಷಾಸಂಪ್ರದಾಯಕ್ಕನುಸಾರವಾಗಿಯೂ, ಸರಳವಾಗಿಯೂ, ಸುಖಬೋಧಕವಾಗಿಯೂ ಇರುವುವು. ಪದ್ಯಗಳಾದರೋ, ಛಂದಸ್ಸಿನಲ್ಲಿಯೂ ವೃತ್ತದಲ್ಲಿಯೂ ಶಬ್ದಗಾಂಭೀರ್ಯದಲ್ಲಿಯೂ, ಅರ್ಥಗೌರವದಲ್ಲಿಯೂ, ಮೂಲಭೂತವಾದ ಆಂಧ್ರಭಾಷಾತ್ಮಕ ಗ್ರಂಥವನ್ನೇ ಅನುಸರಿಸಿ ಬರೆಯಲ್ಪಟ್ಟಿರುತ್ತವೆಯಾಗಿ ಈ ಭಾಗದಲ್ಲಿ ಕೈಕೊಂಡ ಇವರ ಪ್ರಯತ್ನವು

ಬಹಳ ಕಷ್ಟಸಾಧ್ಯವಾದುದಾಗಿರುತ್ತದೆ. ಇದರಿಂದಲೇ ಇವರ ಬುದ್ಧಿಶಕ್ತಿಯು ಎಂತಹುದೆಂಬುದನ್ನು ವಾಚಕರೇ ತಿಳಿದುಕೊಂಡು ಅಭಿನಂದಿಸಬಹುದು.

ಅಲ್ಲದೆ, ಮೂಲಗ್ರಂಥದಲ್ಲಿ ಉದಹರಿಸಿರುವ ಸಂಸ್ಕೃತ ಶ್ಲೋಕಗಳಲ್ಲಿನ ತಪ್ಪುಗಳನ್ನು ಸರಿಪಡಿಸಿಕೊಂಡು, ಉದಹರಿಸಲ್ಪಟ್ಟಿರುವ ಉಪನಿಷದ್ವಾಕ್ಯಗಳು ಎಲ್ಲಿರುವುವೆಂಬುದಕ್ಕೆ ಸಂಬಂಧಪಟ್ಟ ಪ್ರಕರಣಗಳನ್ನು ಸೂಚಿಸಿ, ಇನ್ನೂ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ತಾವೇ ಇತರ ಗ್ರಂಥಗಳಿಂದ ಉದಾಹರಣೆಗಳನ್ನು ತಿಳಿಯಪಡಿಸಿ, ಈ ಕರ್ಣಾಟಕ ಭಾಷೆಯ ಗ್ರಂಥವನ್ನು ಮೂಲಗ್ರಂಥಕ್ಕಿಂತ ಯಾವವಿಧದಲ್ಲಿಯೂ ಕಡಿಮೆಯಿಲ್ಲದಂತೆ ಪ್ರಶಂಸನೀಯವಾದುದನ್ನಾಗಿ ರಚಿಸಿರುವ ಈ ಮಹನೀಯರಿಗೆ ವಾಚಕರೆಲ್ಲರೂ ಚಿರರುಣಿಗಳಾಗಿರಬೇಕು.

ಈರೀತಿ ಸುಮಾರು ಎಂಟುನೂರು ಪುಟಗಳುಳ್ಳ ಈ ಮಹಾ ಗ್ರಂಥದ ಮೊದಲನೆಯ ಭಾಗವನ್ನು ಕೇವಲ ಭಕ್ತಿ ಶ್ರದ್ಧೆಗಳಿಂದಲೂ ಪರೋಪಕಾರ ಬುದ್ಧಿಯಿಂದಲೂ ರಚಿಸಿದ ಮಹನೀಯರ ಪರಿಶ್ರಮಕ್ಕೆ ತಕ್ಕ ಫಲವು ದೃಷ್ಟವಾಗಲಿ, ಅದೃಷ್ಟವಾಗಲಿ, ಭಗವಂತನ ಅನುಗ್ರಹದಿಂದಲೂ, ಅನುಭವಶಾಲಿಗಳಾದ ಯೋಗಿವರ್ಯರ ಆಶೀರ್ವಾದದಿಂದಲೂ, ನಿಷ್ಪಕ್ಷಪಾತಿಗಳಾದ ಪಂಡಿತರ ಮನ್ನಣೆಯಿಂದಲೂ, ಮತ್ತು ಮಹಾ ಜನಗಳ ಮನಃಪೂರ್ವಕವಾದ ಪ್ರೋತ್ಸಾಹದಿಂದಲೂ ಉಂಟಾಗಲೆಂದು ನಾನು ಪ್ರೀತಿಪುರಸ್ಸರವಾಗಿ ಹಾರೈಸುತ್ತೇನೆ.

C. Venkataramanaiya



*Dated 15—8—36.*

**C. Vijayarungum Naidu, Esqr.,** L.C.E.,

*Retired Executive Engineer, Mysore P. W. D.,*

Surveyor's Street, Basavanagudi, BAÑGALORE.

Says,

I have had the fortune of going through, with absorbing interest, some portions of the Telugu Treatise on **"Jeevabrahmaikya Rajayoga Saramritamu"** by **Sri Paramahamsa Sachidananda Yogeeswarar.** The book is written in such an easy and elegant style that even young men and women can understand it.

Many are the books that profess to teach Vedanta. They content themselves with merely naming the methods of attaining salvation ; but fail to explain how those methods are to be put into practice. Hence the Seeker-after-truth is left to fall back upon the ancient Vedantic Books, a peep into which is denied to most. This work of the Swamiji sets forth in a lucid style and flowing language many a proxis which, when intently followed, bids fair to enable one to see deeper into life. For example the practices outlined by the Yateeswaralu regarding **"The control of Mind"** are set forth with such clearness and in such detail that no one would find any difficulty to follow them. The instructions are simply admirable and mind-stirring. The book is moreover priced so cheap that it is within the reach of even the poor.

A peculiar feature of this book is that it repeats the same ideas more than once in the same page or even in the same para. The object seems to be to impress the subject

well and deep into the average minds, which, as is well-known, forget the path already trodden, as they pass on to a new one and to which the old scenes fade away as new ones come into view. Hence such repetitions are most welcome in a book like this.

The work of the Swamiji is a rare specimen of its kind, where truths gathered from various vedantic sources are brought together and epitomised. It contains in a nutshell the essence extracted and culled from the fountain of Sacred lore. Nay, in its line, the book is "a gem of purest ray serene."

It is a matter for congratulation that the Yogeeswarar should have pitched upon **Mr. B. Bhimasena Rao, B. Sc.,** as the person fit to translate his Telugu Treatise into Kanarese. Mr. Rao fully deserves the honour showered upon him. He has put his heart and soul into the work and has brought out a Kanarese version, which is in keeping with the original in every way.

Again Mr. Rao's translation of Telugu verses into Kanarese verses is praiseworthy and commendable. His verses are couched *in faultless and chaste Kanarese, maintaining, in every detail, the force, spirit and dignity of the original Telugu Stanzas.* He has also added a number of quotations suitable to the context, giving references to the works from which they are drawn.

I have known Mr. Bhimasena Rao for a number of years as a young man of high attainments, and used to wonder why his interest for things spiritual had not yet been awakened. But it is said, "The sovereignty of nature has

been allotted to the silent forces. The moon makes not the faintest echo of a noise, yet it draws millions of tons of tidal waters to and fro at its bidding. We do not hear the sun rise nor the planets set. So too, the dawning of the greatest moment in a man's life comes quietly, with none to herald it to the world. * * * The gliding of the mind's boat into the lagoon of the spirit is the greatest thing I know; it is more hushed than the fall of the eventide."

We often hear it said that the Guru comes when the Sishya is ripe and fit to receive instructions. Such a time has now arrived and such a Teacher has appeared to Mr. Bhimasena Rao, that will, through mere personal contact, kindle the fire of spiritual experience in his Sishya. He has led him on to undertake the translation works, which, indirectly, has been the incentive to Mr. Rao wading through various Sanskrit works, Upanishads &c., in order to grasp the sense of the Sanskrit Slokas found studded in the Telugu Book, and to bring out a Kanarese version which is at once *faithful, elegant, lucid and enjoyable.* He has also corrected the spelling mistakes that had crept into the Sanskrit Shastras here and there.

Is not this the greatest moment in the life of this young man? Is not his future both here and hereafter assured to be bright and happy by the mere "Satsanga" of the great sage? Is he not to be congratulated upon his having unconsciously stambled upon the Mahatma, who has taken upon himself to furnish his Sishya with the arrow that will strike at the Divine Harmony and enable him to sense the same?

The following stanza from "Alawandar Stotram" applies aptly in the case of this Sishya.

ಶ್ಲೋ॥ ನಿಮಜ್ಜತೋಽನಂತ ಮಹಾರ್ಣವಾಂತಃ♦ಚಿರಾಯ ಮೇ ಕೂಲ ಮಿವಾಸಿ ಲಬ್ಧಃ।
ತ್ವಯಾಪಿ ಲಬ್ಧಂ ಭಗವ ನ್ನಿದಾನೀಂ♦ಅನುತ್ತಮಂ ಪಾತ್ರ ಮಿದಂ ದಯಾಯಾಃ॥

Verily, Mr. B. Bhimasena Rao is the deserving recipient of the Paramahamsa's "prasadam" and the Reverend Teacher is the "Sharanya" that will lift the veil which is said to hide the Divine Presence and thus fit up the Sishya to enjoy the Eternal Bliss.

Bijayarangaswami Naidu



*21-8-1936.*

**M. Narasinga Rao, Esqr.** M.B.E.,

*Late of the Imperial Forest Service and*

*for some years Conservator of Forests, Bhopal State.*

Says :— Basavangudi, BANGALORE.

Lately, I had the pleasure of becoming acquainted with **Sri Paramahamsa Sachithanantha Yogeeswarar** of Cuddapah District who has been sojourning here, for some time past. Much before I became acquainted with him I learnt a great deal about his life history and the great social service which he has been rendering, not only to the South Indians but to Indians in other parts of the world, such as South Africa, Mauritius, Penang, Singapore, Ceylon and Lower & Upper Burma in the form of lectures, demonstrations in Yogabhyasa and above all in the form of the great work, '**Jeeva Brahmikya Rajayoga Saramruta**' from my friend, **Mr. B. Bheemasena Rao, B. Sc.,** who is the author of the Kannada version of the Yogeeswarar's work. In the early part of this work will be found the description of the numerous demonstrations of Yogabhyasa, which this great Yogeeswarar has given in different parts of the world for the benefit of humanity. Having forsaken all materialistic interests in this world, the Yogeeswarar has been devoting all the best that is in him, even including the money which he makes out of the sale of his great work, for the benefit of mankind, irrespective of class, creed or country of his followers. He has to a very great extent practised that kind

of Yoga which Sree Krishna has given expression to in the following slokas:—

ಶ್ಲೋ ॥ ಅದ್ವೇಷ್ಟಾ ಸರ್ವಭೂತಾನಾಂ ♦ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ♦ ಸಮದುಃಖಸುಖಃ ಕ್ಷಮೀ ॥

ಸಂತುಷ್ಟಃ ಸತತಂ ಯೋಗೀ ♦ ಯತಾತ್ಮಾ ದೃಢನಿಶ್ಚಯಃ ।

(ಶ್ರೀ ಭಗವದ್ಗೀತಾ, ಅಧ್ಯಾಯ 12, ಶ್ಲೋಕ, 13-14.)

Having disseminated several thousands of copies of his great work, and I am given to understand that they amount to as many as about thirtytwo thousands, in Tamil and Andhra countries in their respective languages, he has luckily turned his attention to the Karnataka. I also consider it a great stroke of luck that he was able to secure the services of a linguistic scholar like **Mr. Bheemasena Rao** who, besides possessing a thorough knowledge of a high order of Sanskrit and Kannada languages, has also cultivated a good working knowledge of Telugu. I had the great pleasure of becoming acquainted with this young man more than five years back when he was teaching Sanskrit to a friend of mine who is a Government pensioner. My acquaintance of him very soon developed into intimate friendship. All these 5 years I have been very carefully watching the excellent literary work which Mr. Bheemasena Rao has been doing. Perhaps I might be partial to him, as generally friends are as prolific in their praises of their friends as enemies are prolific in their abuses. Anyhow I consider that Mr. Bheemasena Rao is **a born poet.** This I say with personal experience. His

rendering into Kannada verses of the 2nd, 3rd and 14th Cantos of Raghuvamsa is a superb piece of Kannada literature. The meter, the choice of words and the skill with which he has most faithfully followed the original text are very pleasing both to the ear and the mind.

For more than three months past I have been seeing how assiduously Mr. Bheemasena Rao has been applying himself to the work of translating Sri Yogeeswarar's work. I have also been observing that his work does not consist of a mere word for word translation of the original work. In the original there are several quotations from other Shastraic works such as Puranas, Upanishads etc. More often than not there are orthographical mistakes in them, probably printers' devil, and the sources from which these quotations are drawn are not given and if given, a vague reference, such as "Bheeshma Parva", is mentioned but the chapter and verse are not quoted. It was not a small business for Mr. Bheemasena Rao to find out the sources of these quotations from amongst 108 Upanishads and Ashtadasa puranas and correct the mistakes. I know he has spent hours together to find out the source of a single error. For instance, in the original work there is a quotation from the "Vanaparva" of Mahabharata. At the end of the quotation merely 'Vanaparva,' is mentioned. Bearing the context of the sloka in mind, Mr. Bheemasena Rao correctly located it in the chapter relating to Dharma Vyadha. He has provided himself with all the 108 Upanishads.

The next taxing work was the versification of about 180 Telugu verses into Kannada. But this was a comparatively easier work for him as I have already said that he is a born poet. I need not say more about his verses as his most graceful style speaks for itself.

The style of his prose is easy, simple and direct. He does not attach much importance to the modern bogey of "Pure Tiligannada" which, by some authors, is interpreted as Kannada without the taint of Sanskrit. He has freely used 'Tatsama' and 'Tadbhava' words when he finds that his ideas can be expressed more aptly and briefly.

Besides the Shastraic quotations given in the original work, Mr. Bheemasena Rao has put in many more suited to the context.

For the past five years I know Mr. Bheemsena Rao is ever ordinarily over-worked. Still, he undertook the responsibility of translating Sri Yogeeswarar's extraordinary work not with any mercenary motive. Being instinctively of a very religious turn of mind he took up the work with devotion, love of work and with a genuine motive to assist the Yogeeswarar in disseminating knowledge. None knows this better than the Yogeeswarar himself. On the whole, Mr. Bheemasena Rao has turned out a most admirable piece of work. So, he deserves the gratitude of both the religious-minded and literary-minded sections of Kannadigas as his

work is undoubtedly a very valuable addition to the Kannada literature.

The numerous illustrations given in the work add both to the utility and beauty of the book. The get up of the book is very good.



'RAMALAYA'
*22nd August 1936.*

**Rao Sahib M. Rama Rao,**

*Retired Forest Officer,*

BASAVANAGUDI.

Says :—

Having had an opportunity of listening to a discourse on Vedantic Religion by **Sri Paramahamsa Sachidananda Yogiswarar of Cuddapah** about a year ago, I was led, by the impressiveness, earnestness and sincerity of his desire to press home on his audience the necessity and importance of thoroughly grasping the religious principles of his discourse, to become acquainted with the Yogiswarar and so called at his temporary Asram in Chamarajpet, Bangalore. In the course of conversation, I gathered that he had written several religious books in Tamil and later in Telugu such as '*Jeevabrahmikya Rajayoga Saramritam,*' '*Sri Bhagavadgita, Gudhartha Sangraha,*' '*Kabirdas Charitram,*' '*Sarira Devalaya-rahasyartha Parijatha*' *and* '*Manjari Dwipada.*'

Being charmed with his simplicity, unostentatiousness, all-round courtesy and suavity towards the high and low, and educated and uneducated among the people that I saw gathered there, I felt inclined to get a deeper insight of the man and his works and therefore bought a copy of his 'Jeevabramhikya Rajayoga Saramritam' and 'Bhagavadgita' in Telugu. A mere skipping through the pages of these two books has greatly enhanced my admiration for the Yogi-

swarar whose selfless and earnest work—to spread a correct and faithful knowledge of the Vedantic Scriptures and a liberal and universal interpretation thereof among all classes, creeds, and countries,-is evidenced in these two books and has led me to hope and believe that his other books are equally free from that narrow-minded and illiberal interpretation of our Sastras which the so-called orthodox Pandits have put upon them thereby unjustly denying to all God's creatures their natural and inherent birth-right of acquiring a true knowledge of the Universal Father and all His Works.

When the Yogiswarar expressed to me his desire to get all his books translated into Kannada and wanted me to suggest a competant scholar to undertake it, I welcomed the idea as a truly beneficial one to all the Karnatakas and suggested the name of a young author and poet whom I personally and intimately knew as the best scholar to undertake the translation. That young author is the one who has so creditably and admirably rendered this book into Kannada at considerable sacrifice and great labour in correcting errors and supplying ommissions and adding appropriate quotations from the various Scriptures referred to in the book, thereby greatly enhancing its utility and value over its Telugu original. It is unnecessary for me to run into panegyrics on the merit of the translator **Mr. Bhimasena Rao, B. Sc.,** as the excellence of his work is visible on every page of this book in the simplicity of the style and the studied avoidance of unfamiliar, difficult and unintelligible words of Sanskrit origin wherever possible, and the *grace beauty and accuracy of his Kannada versification* of the Telugu and Samskrit stanzas.

In respect of the contents of this great book, I do not feel competent to give any opinion, because, my knowledge of Vedanta is somewhat fragmentary and imperfect while my knowledge of the Samskrit language in which all our Original Scriptures are written is practically nil. That the book is a highly useful one to all who are earnestly in search of true and correct knowledge of the Almighty and who are honestly and earnestly attempting to find the ways and means of approaching that Great Father will be obvious to every dispassionate and unbiassed reader of this **"Jeevabrahmikya Raja Yoga Saramritam".**



"ANANDA"
Visveswarapuram,
*Bangalore City.*
*24th August 1936.*

**A. V. Ramanathan, Esqr.** B.A., M.C.S.,

*Development Commissioner, to the Government of* Mysore,

BANGALORE.

I am very glad to learn that **Sri Paramahamsa Sachidananda Yogeeswarar** has brought out a Kannada Edition of his *magnum opus* "**Jiva Brahma Aikya Rajayoga Saramruta**". I have read through this fully in English, Tamil and Kannada. I have heard his lectures. The book is exceedingly useful as a *vade mecum* for the people to attain Yogic calmness and peace, and for the elect to proceed higher.

The Yogeeswarar has spread his influence far and wide and has helped our brethren in South Africa and Mauritius to cheer their hard days.

I am sure that this book will help in the great task of making one and all realise that Realisation is something higher and Truth is something greater than the communal squabbles that India is experiencing in the name of Religion and Social gradations.

# ಗ್ರಂಥಕರ್ತರ ಮುನ್ನುಡಿ.

ಈ ಗ್ರಂಥಕರ್ತರಾದ ಶ್ರೀ ಯೋಗೀಶ್ವರರು ಕ್ರಿ. ಶ. 1890ನೇ ಸಂವತ್ಸರದ ಮೊದಲು ತಮ್ಮ ಧರ್ಮಪತ್ನಿಯವರೊಡಗೂಡಿ ಪ್ರಪಂಚ ದಲ್ಲಿರುವ ಇತರ ಸಾಂಸಾರಿಕರಂತೆಯೇ ಇವರೂ ಇಹಲೋಕ ಭೋಗ ಸೌಖ್ಯಗಳನ್ನನುಭವಿಸುತ್ತಿದ್ದರೂ, ಕೆಸರಿನಲ್ಲಿರುವ ಕುಂಬಾರದ ಹುಳುವು ಆ ಕೆಸರನ್ನು ಅಂಟಿಕೊಳ್ಳದಂತೆ ಹೇಗಿರುತ್ತದೆಯೋ ಹಾಗೆಯೇ, ಇವರು ಸಂಸಾರವೆಂಬ ಬುರುಡೆಯಲ್ಲಿದ್ದರೂ, ಯೋಗಬಲದಿಂದ ಆ ಸಂಸಾರ ಪಂಕ ದಿಂದಂಟದೆ, ಯೋಗಾಭ್ಯಾಸವನ್ನು ಬಿಡದೆ ಅಭ್ಯಾಸಮಾಡುತ್ತ ಬಂದರು. ಇವರ ಧರ್ಮಪತ್ನಿಯವರ ಭಾವಚಿತ್ರವನ್ನು ಈ ಗ್ರಂಥದ ಆದಿಯಲ್ಲಿ ಮೂರ ನೆಯ ಪಠದಲ್ಲಿ ತೋರಿಸಿದೆ. ಈಕೆಯು ಈ ಜನ್ಮದಲ್ಲಿ '**ಪೆರುಂದೇವಿ**' ಎಂಬ ವೈಷ್ಣವಮತ ನಾಮವನ್ನು ವಹಿಸಿದ್ದಳು. ಇದಕ್ಕೆ ಹಿಂದಿನ ಜನ್ಮ ದಲ್ಲಿ ಯಾವಯಾವ ಜಾತಿಯಲ್ಲಿ ಹುಟ್ಟಿ ಎಷ್ಟೆಷ್ಟು ಹೆಸರುಗಳನ್ನು ಆಕೆಯು ವಹಿಸಿದ್ದಳೋ ತಿಳಿಯದು. ಈ ದಂಪತಿಗಳಿಬ್ಬರೂ ಇಹಲೋಕ ಸುಖ ಗಳನ್ನು ಅನುಭವಿಸುತ್ತಿರುವಾಗ ಆಕೆಗೆ ಅಕಸ್ಮಾತ್ತಾಗಿ ಯಾವುದೋ ಒಂದು ವ್ಯಾಧಿಯು ಸಂಭವಿಸಿ, ಕ್ರಿ. ಶ. 1912ನೇ ಸಂವತ್ಸರದಲ್ಲಿ ಪರಮ ಪದವನ್ನು ಹೊಂದಿದಳು. ಈಗ ಆಕೆಯು ಹೋಗಿ ಹುಟ್ಟಿದ ಮನೆಯಲ್ಲಿ ಆಕೆಗೆ ಯಾವ ಹೆಸರನ್ನಿಟ್ಟಿರುವರೋ ತಿಳಿಯದು. ಈಗ ಆಕೆಯು ಇಪ್ಪತ್ತಮೂರು ವರ್ಷ ವಯಸ್ಸಿನವಳಾಗಿ ಆ ಮನೆಯಲ್ಲಿರುತ್ತಾಳೆ. ಈ ಗ್ರಂಥಕರ್ತರೊಡನೆ ಸಂಸಾರಮಾಡುತ್ತಿದ್ದ ಜನ್ಮದಲ್ಲಿ ಆಕೆಗೆ ಸಂತಾನ ಪ್ರಾಪ್ತಿಯಾಗಲಿಲ್ಲ. ಆಕೆಯ ಜನ್ಮಚರಿತ್ರೆಯನ್ನು ತಿಳಿದುಕೊಳ್ಳಬೇಕೆಂದು ಕೋರುವವರು ಇನ್ನು ಮುಂದೆ ಕನ್ನಡ ಭಾಷೆಯಲ್ಲಿ ಮುದ್ರಿಸಲ್ಪಡುವ ಈ ಗ್ರಂಥಕರ್ತರ "**ಪೂರ್ವಜನ್ಮ ಮತ್ತು ಈ ಜನ್ಮಚರಿತ್ರೆ**"ಯನ್ನು ಪಠಿಸಿ, ಈ ಗ್ರಂಥಕರ್ತರ ವಿಷಯವನ್ನೂ ಇವರ ಪತ್ನಿಯವರ ಚರಿತ್ರೆ ಯನ್ನೂ ಚನ್ನಾಗಿ ತಿಳಿದುಕೊಳ್ಳಬಹುದು. ಪ್ರತಿಯೊಬ್ಬ ಸ್ತ್ರೀಪುರುಷರೂ ಆಕೆಯಂತೆಯೇ ಕೆಲವು ವರ್ಷಗಳವರಿವಿಗೆ ಆಯಾ ಕುಟುಂಬದೊಳಗಿದ್ದು

ಸುಖದುಃಖಗಳನ್ನನುಭವಿಸುತ್ತ, ಕಡೆಯಲ್ಲಿ ಯಾವುದೋ ಒಂದು ವ್ಯಾಧಿಗೆ ತುತ್ತಾಗಿ ತಮ್ಮ ತಮ್ಮ ಹಳೆಯ ಶರೀರಗಳನ್ನು ಕೆಳಕ್ಕುರುಳಿಸಿ ಹೊರಟು ಹೋಗುವವರೇ ಆಗುತ್ತಾರೆ.

ಈ ಗ್ರಂಥಕರ್ತರು, ತಮ್ಮ ಪತ್ನಿಯು ಪರಮಪದವನ್ನು ಸೇರಿದ ಮೇಲೆ, ಸನ್ಯಾಸಾಶ್ರಮವನ್ನು ವಹಿಸಿದರು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥವೆಂಬ ಮೂರು ಆಶ್ರಮಧರ್ಮಗಳನ್ನು ಇವರು ಸರಿಯಾಗಿ ಅನುಷ್ಠಿಸಿ, ಕಡೆಯಲ್ಲಿ ಶಾಸ್ತ್ರವಿಧಿಯನ್ನನುಸರಿಸಿ ಸನ್ಯಾಸಾಶ್ರಮವನ್ನು ಪಡೆದರು. ಇದಾದಮೇಲೆ, ತಮ್ಮ ಯೋಗದ ಸ್ವಾನುಭವವನ್ನೆಲ್ಲಾ ಎಲ್ಲರಿಗೂ ತಿಳಿಯಪಡಿಸಬೇಕೆಂಬ ಒಂದು ಕೋರಿಕೆಯು ಇವರಿಗೆ ಹುಟ್ಟಿತು. ಆಮೇಲೆ ಯೋಗಾಭ್ಯಾಸದ ವಿಷಯಗಳನ್ನೂ ಮತ್ತು ವೇದಾಂತ ವಿಷಯಗಳನ್ನೂ ಸೇರಿಸಿ, "**ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ**" ವೆಂಬ ಹೆಸರಿನಿಂದ ಸುಮಾರು ಮೂವತ್ತೆರಡು ಸಾವಿರ (32,000) ಪ್ರತಿಗಳನ್ನು ಮುದ್ರಿಸಿ ವಿಕ್ರಯಿಸಿದರು.

ಈ ಗ್ರಂಥಕ್ಕೆ '**ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ**' ವೆಂದು ಹೆಸರಿಡುವುದಕ್ಕೆ ಕಾರಣವೇನೆಂದರೆ:—ನಮ್ಮಲ್ಲಿರುವ 'ಜೀವಾತ್ಮ' ನನ್ನು 'ಪರಮಾತ್ಮ' ನೆಂಬ ಪರಬ್ರಹ್ಮನಲ್ಲಿ ಐಕ್ಯಮಾಡುವ ವಿಷಯವನ್ನು ಬೋಧಿಸುವುದರಿಂದ '**ಜೀವ ಬ್ರಹ್ಮೈಕ್ಯ**' ವೆಂದೂ, ರಾಜರೂ, ಯೋಗಿಗಳೂ, ಮತ್ತು ಉಳಿದವರೂ ಯೋಗವನ್ನು ಅಭ್ಯಾಸ ಮಾಡುವ ಕ್ರಮವನ್ನು ಇದು ಬೋಧಿಸುತ್ತದಾದುದರಿಂದ '**ರಾಜ ಯೋಗ**' ವೆಂದೂ, ನೂರೆಂಟು ಉಪನಿಷತ್ತುಗಳಲ್ಲಿ ರಹಸ್ಯವಾಗಿ ಕಲೆತಿರುವ ಮುಖ್ಯ ಉಪನಿಷದ್ವಾಕ್ಯಗಳನ್ನು ಮಟ್ಟಿಗೆ ತೆಗೆದು ಅವುಗಳ ಸಾರವನ್ನೆಲ್ಲಾ ರಸವಾಗಿ ಹಿಂಡಿ ಆ ರಸವನ್ನು ಪಾನಮಾಡುವುದಕ್ಕೆ ಯೋಗ್ಯವಾದ 'ಅಮೃತ'ವನ್ನಾಗಿ ಮಾಡಿ ಈ ಗ್ರಂಥದಲ್ಲಿ ತೋರಿಸಿರುವುದರಿಂದ '**ಸಾರಾಮೃತ**'ವೆಂದೂ, ಈ ಗ್ರಂಥಕ್ಕೆ ಈ ಗ್ರಂಥಕರ್ತರು ಹೆಸರನ್ನು ಕೊಟ್ಟರು. ಇವರ ಗ್ರಂಥಗಳೆಲ್ಲವೂ ಕ್ರಮಕ್ರಮವಾಗಿ ಹಿಂದೂದೇಶದಲ್ಲೆಲ್ಲಾ ವ್ಯಾಪಿಸಿರುವುವಲ್ಲದೆ ಸಿಲೋನ್, ದಕ್ಷಿಣ ಆಫ್ರಿಕಾ, ಮೋರೀಷ್, ಸಿಂಗಪೂರ್, ಪೀನಾಂಗ್, ಕೋಲಾಲಂಬೂರ್, ಮೇಲಿನ ಬರ್ಮ, ಕೆಳಗಿನ ಬರ್ಮ

ಮೊದಲಾದ ದೇಶಗಳಲ್ಲೆಲ್ಲಾ ವ್ಯಾಪಿಸಿ ವಿಶೇಷ ಪ್ರಸಿದ್ಧಿಯನ್ನು ಪಡೆದವು. ಇವರ ಗ್ರಂಥಗಳನ್ನು ಓದಿದ ಮೇಲಿನದೇಶವಾಸಿಗಳಲ್ಲಿ, ದಕ್ಷಿಣ ಆಫ್ರಿಕಾ, ಮೋರೀಷ್ ದೇಶದವರು ಈ ಗ್ರಂಥಕರ್ತರಾದ ಶ್ರೀ ಯೋಗೀಶ್ವರರನ್ನು ತಮ್ಮ ತಮ್ಮ ದೇಶಗಳಿಗೆ ಬರಮಾಡಿ ಇವರೊಡನೆ ಉಪದೇಶಗಳನ್ನು ಪಡೆಯಬೇಕೆಂದಿಚ್ಛಿಸಿ, ಈ ಗ್ರಂಥಕರ್ತರ ವಿಷಯಗಳನ್ನೆಲ್ಲಾ ಅರ್ಜಿಯ ಮೂಲಕ ಆಯಾಯಾ ಗೌರ್ಮೆಂಟಿನವರಿಗೆ ತಿಳಿಸಿ ಇವರನ್ನು ತಮ್ಮ ದೇಶಗಳಿಗೆ ಬರಮಾಡಿಕೊಳ್ಳುವುದಕ್ಕಾಗಿ ಆಯಾ ಸರ್ಕಾರದಿಂದ ಅಪ್ಪಣೆ ಚೀಟಿ (Pass Port) ಗಳನ್ನು ಪಡೆದು ಈ ಗ್ರಂಥಕರ್ತರಿಗೆ ಕಳುಹಿಸಿ ತಮ್ಮ ದೇಶಗಳಿಗೆ ಇವರನ್ನು ಬರಮಾಡಿಕೊಂಡರು. ಇವರು ಆಫ್ರಿಕಾದೇಶದಲ್ಲಿ ಒಂಭತ್ತು ತಿಂಗಳೂ, ಮೋರಿಷ್ ದೇಶದಲ್ಲಿ ಹತ್ತು ತಿಂಗಳೂ ಇದ್ದು, ಅಲ್ಲಿ ಉಪನ್ಯಾಸಗಳನ್ನು ಮಾಡಿ, ಅನೇಕರಿಗೆ ಉಪದೇಶಗಳನ್ನು ಕೊಟ್ಟು ಹಿಂದಿರುಗಿದರು. ಇದೇ ರೀತಿಯಲ್ಲಿಯೇ ಸಿಲೋೕ, ಸಿಂಗಪೂರ್, ಪೀನಾಂಗ್, ಬರ್ಮಾ ದೇಶಗಳಿಗೂ ಹೋಗಿ ಹಿಂದಿರುಗಿದರು. ಇದೂ ಅಲ್ಲದೆ, ನಲವತ್ತು ದಿನಗಳು ಹಡಗು ಪ್ರಯಾಣಮಾಡಬೇಕಾದ **ಫೀಜೀ ದ್ವೀಪ** (Fiji Islands) ಗಳಲ್ಲಿ ಇರುವ ನಮ್ಮ ಹಿಂದೂ ಮತಸ್ಥರು ಈ ಯೋಗೀಶ್ವರರು ಮುದ್ರಿಸಿದ ಗ್ರಂಥವನ್ನು ತರಿಸಿ ಆ ಗ್ರಂಥದಲ್ಲಿರುವ ಉಪದೇಶಗಳನ್ನು ಚನ್ನಾಗಿ ಗ್ರಹಿಸಿ, ಆ ಪ್ರಕಾರವೇ ಅನುಷ್ಠಿಸುತ್ತ ಬರುತ್ತಿದ್ದಾರೆ.

ಇಂತಹ ಶ್ರೇಷ್ಠವಾದ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಪ್ರಚುರಪಡಿಸಬೇಕೆಂದು ಅನೇಕರು ಕೋರಿದರು. ಆದುದರಿಂದ ಈ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಮುದ್ರಿಸುವುದಕ್ಕಾಗಿ ಈ ಗ್ರಂಥಕರ್ತರು ಬೆಂಗಳೂರಿಗೆ ಬಂದು ಸೇರಿದರು. ಇದಾದಮೇಲೆ ಇವರು ಮುದ್ರಿಸಿದ ತೆಲುಗು ಗ್ರಂಥವನ್ನು ಬಹಳ ಚನ್ನಾಗಿ ಪರಿವರ್ತನೆಯನ್ನು ಮಾಡುವವರು ಯಾರಿದ್ದಾರೆಂದು ವಿಚಾರ ಮಾಡತೊಡಗಿದರು. ಅಂಥವರು ಕೆಲವು ಕಾಲ ಇವರಿಗೆ ಯಾರೂ ದೊರಕಲಿಲ್ಲ. ಹೀಗಿರಲು, ಒಂದಾನೊಂದು ದಿನ ರಿಟೈರ್ಡ್ ಫಾರೆಸ್ಟ್ ಕನ್ಸರ್‌ವೇಟರ್ ಶ್ರೀ ರಾವ್‌ಸಾಹೇಬ್, ಯಂ. ರಾಮರಾಯರೆಂಬುವರು ಈ ಗ್ರಂಥಕರ್ತರನ್ನು ನೋಡುವುದಕ್ಕಾಗಿ ಅವರ ಸಮೀಪಕ್ಕೆ

ಬಂದರು. ಆಗ ತಮ್ಮ ತೆಲುಗು ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಪರಿವರ್ತನೆ ಮಾಡುವ ವಿಷಯವೆಲ್ಲವನ್ನೂ ಶ್ರೀ ರಾಮರಾಯರಿಗೆ ಈ ಗ್ರಂಥಕರ್ತರು ತಿಳಿಸಿದರು. ಅದಕ್ಕೆ ಶ್ರೀ ರಾಮರಾಯರು, "ಕನ್ನಡ, ತೆಲುಗು, ಸಂಸ್ಕೃತ ಮತ್ತು ಉಪನಿಷತ್ತುಗಳು ಇವುಗಳಲ್ಲಿ ವಿಶೇಷ ಪರಿಶ್ರಮವುಳ್ಳವರು ಒಬ್ಬರಿದ್ದಾರೆ. ಅವರನ್ನು ನಾನು ಕರೆತರುತ್ತೇನೆ," ಎಂದು ಹೇಳಿ ಹೊರಟವರು, ಮೂರು ದಿನಗಳು ಕಳೆದಮೇಲೆ ಅವರನ್ನು ಈ ಗ್ರಂಥಕರ್ತರ ಸಮೀಪಕ್ಕೆ ಕರೆದುಕೊಂಡು ಬಂದರು. ಆಗ ಈ ಗ್ರಂಥಕರ್ತರು ತಮ್ಮ ತೆಲುಗು ಗ್ರಂಥದಲ್ಲಿರುವ ಹದಿನಾರು ಪುಟಗಳುಳ್ಳ ಒಂದು 'ಫಾರಂ'ನ್ನು ಅವರ ಕೈಗೆ ಕೊಟ್ಟು ಅದನ್ನು ಕನ್ನಡ ಪರಿವರ್ತನೆ ಮಾಡಿ ತರಲು ಹೇಳಿ ಕಳುಹಿಸಿ ಕೊಟ್ಟರು. ಅವರು ಅದನ್ನು ತೆಗೆದುಕೊಂಡು ಹೋಗಿ ಬಾಲಕಬಾಲಿಕೆಯರಿಗೂ ಸಹ ಬಹಳ ಚನ್ನಾಗಿ ಬೋಧೆಯಾಗುವಂತೆ ಕರ್ತೃ ಕರ್ಮ ಕ್ರಿಯೆಗಳಿಂದ ಕೂಡಿದ ಅಂದರೆ ವ್ಯಾಕರಣಬದ್ಧವಾದ ವಾಕ್ಯಗಳಿಂದ ಸುಲಲಿತವಾಗಿ ಬರೆದು ತಂದು ಓದಿ ಹೇಳಿದರು. ಆಗ ಈ ಗ್ರಂಥಕರ್ತರಿಗೆ ಬಹು ಸಂತೋಷವುಂಟಾಗಿ, ಈ ಗ್ರಂಥವನ್ನು ಇವರು ಬಹಳ ರಮ್ಯವಾಗಿ ಪರಿವರ್ತನೆ ಮಾಡುವರೆಂದು ಭಾವಿಸಿ, ತೆಲುಗು ಗ್ರಂಥದೊಳಗಿನ ಕಾಲುಭಾಗವನ್ನು ಅವರ ವಶಕ್ಕೆ ಕೊಟ್ಟು ಅದಕ್ಕೆ ಕನ್ನಡಾನುವಾದವನ್ನು ಸರಳಸರಣಿಯಲ್ಲಿ ಮಾಡಬೇಕೆಂದು ಹೇಳಿ ಕಳುಹಿಸಿದರು. ಅವರು ಅದನ್ನು ಕೊಂಡುಹೋಗಿ ಕನ್ನಡ ಭಾಷೆಯಲ್ಲಿ ಬರೆಯುತ್ತ ಬರಬರಲು ಆ ಗ್ರಂಥದಲ್ಲಿರುವ ಸಾರಾಂಶಗಳನ್ನೆಲ್ಲಾ ಚನ್ನಾಗಿ ಗ್ರಹಿಸಿ, ಗ್ರಂಥಕರ್ತರು ತಮ್ಮ ಸ್ವಾನುಭವದಿಂದ ಬರೆದವುಗಳಿಗಿಂತಲೂ ಇನ್ನೂ ಅನೇಕ ವಿಧವಾದ ಅಂದರೆ ಶಾಸ್ತ್ರ, ಪುರಾಣ, ಉಪನಿಷತ್ತು ಇವುಗಳ ಪ್ರಮಾಣಗಳನ್ನು ಆಯಾ ಸಂದರ್ಭಗಳಲ್ಲಿ ಸೇರಿಸಬೇಕೆಂದು ಅವರಿಗೆ ತೋರಿಬರಲು, ಅವರು ಎಲ್ಲೆಲ್ಲಿಂದಲೋ ಅನೇಕ ಉಪನಿಷತ್ತುಗಳನ್ನು ಹುಡುಕಿ ತಂದು ಯಾವಯಾವ ಸಂದರ್ಭದಲ್ಲಿ ಯಾವ ಯಾವ ಉಪನಿಷದ್ವಾಕ್ಯಗಳನ್ನು ಸೇರಿಸಬೇಕೋ ಆಯಾ ಸ್ಥಳದಲ್ಲಿ ಅವುಗಳನ್ನು ಸೇರಿಸುತ್ತ ಬಂದರು.

ಇದೂ ಅಲ್ಲದೆ, 'ಪುನರ್ಜನ್ಮವುಂಟು ಪೂರ್ವಜನ್ಮ ಸಂಸ್ಕಾರ,' ಎಂಬ ವಿಷಯವನ್ನು ಕುರಿತು ಈ ಕನ್ನಡ ಗ್ರಂಥದಲ್ಲಿ ಸೇರಿಸಿ ಮುದ್ರಿಸುವ

ಸಮಯಕ್ಕೆ ಸರಿಯಾಗಿ, 'ಶಾಂತಿದೇವಿ' ಎಂಬ ಹೆಸರಿನ ಒಂಭತ್ತು ವರ್ಷ ವಯಸ್ಸುಳ್ಳ ಒಬ್ಬ ಬಾಲಿಕೆಯೂ, ಮತ್ತೊಂದು ನಾಲ್ಕು ವರ್ಷದ ಹುಡುಗಿಯೂ ತಮ್ಮ ತಮ್ಮ ಪೂರ್ವಜನ್ಮದ ವೃತ್ತಾಂತಗಳನ್ನೆಲ್ಲಾ ಕಣ್ಣಿಗೆ ಕಂಡಂತೆ ಒಂದನ್ನೂ ಬಿಡದೆ ಹೆಚ್ಚುಕಡಿಮೆಯಿಲ್ಲದೆ ಹೇಳಿದ ವಿಷಯವು ವೃತ್ತಪತ್ರಿಕೆಗಳಲ್ಲಿ ಪ್ರಚುರವಾಯಿತು. ಪೂರ್ವಜನ್ಮ ಸ್ಮರಣೆಯನ್ನುಳ್ಳ ಈ ಅದ್ಭುತವಾದ ಆಶ್ಚರ್ಯ ವಿಷಯಗಳು ನಿಜವೆಂಬುದನ್ನು ದೊಡ್ಡ ದೊಡ್ಡ ಪಂಡಿತರು ಪರೀಕ್ಷಿಸಿ ಅವುಗಳ ವಿಷಯಗಳನ್ನೆಲ್ಲಾ ಜನಜನಿತವಾಗುವಂತೆ ತಿಳಿಯಪಡಿಸಿದರು. ಈ ಗ್ರಂಥವನ್ನು ಪರಿವರ್ತನೆ ಮಾಡಿರುವ '**ಚಿರಂಜೀವಿ ಶ್ರೀ ಭೀಮಸೇನರಾವ್**' ಎಂಬುವರು, ಈ ವಿಷಯಗಳನ್ನು ವೃತ್ತಪತ್ರಿಕೆಗಳಿಂದ ತಿಳಿದು, ಅವುಗಳೆಲ್ಲವೂ ಈ ಗ್ರಂಥಕರ್ತರು ಬರೆದಿರುವ 'ಪೂರ್ವಜನ್ಮವೃತ್ತಾಂತ'ವೆಂಬುದಕ್ಕೆ ಸರಿಹೋಲುವುವೆಂದು ತಮಗೆ ತೋರಿಬರಲು, ಪತ್ರಿಕೆಗಳಲ್ಲಿ ಈ ಸಂಬಂಧವಾಗಿರುವ ವಿಷಯಗಳನ್ನೆಲ್ಲಾ ಆರಿಸಿ ಅದೇ ತಾನೆ ಮುದ್ರಣವಾಗುತ್ತಿದ್ದ ಈ ಗ್ರಂಥದಲ್ಲಿ ಸೇರಿಸಿ ಮುದ್ರಿಸಿದುದೇ ಅಲ್ಲದೆ, ಇದೇ ರೀತಿಯಲ್ಲಿ 'ಪೂರ್ವಜನ್ಮ ಸಂಸ್ಕಾರವುಂಟು' ಎಂಬುದನ್ನು ಸ್ಥಿರೀಕರಿಸುವುದಕ್ಕೆ 'ಮೂಕಕವಿ' ಮೊದಲಾದವರ ಉದಾಹರಣೆಗಳನ್ನೂ, ಅದಕ್ಕೆ ಆಧಾರವಾಗಿ ಅಂಥವರು ಬರೆದ ಪದ್ಯಗಳನ್ನೂ ಎಲ್ಲೆಲ್ಲಿಂದಲೋ ಹುಡುಕಿ ತಂದು ಈ ಗ್ರಂಥದಲ್ಲಿ ಸೇರಿಸಿರುತ್ತಾರೆ.

ಮತ್ತು, ಈ ಗ್ರಂಥದಲ್ಲಿರುವ ಅನೇಕ ಸಂಸ್ಕೃತ ಶ್ಲೋಕಗಳಿಗೂ ಮತ್ತು ತೆಲುಗು ಭಾಗವತ, ಭಾರತ, ಸೀತಾರಾಮಾಂಜನೇಯ ಮೊದಲಾದವುಗಳಲ್ಲಿನ ಅನೇಕ ತೆಲುಗು ಪದ್ಯಗಳಿಗೂ ಅಕ್ಷರಶಃ ಸರಿಯಾದ ಕನ್ನಡ ಪದ್ಯಗಳನ್ನು ಸುಲಲಿತ ಸರಣಿಯಲ್ಲಿ ಅದೇ ಛಂದಸ್ಸಿನಲ್ಲಿಯೇ ಬರೆದು, ಚಿಕ್ಕಮಕ್ಕಳಿಗೂ ಸಹ ಬಹು ಸುಲಭವಾಗಿ ಅರ್ಥವಾಗುವಂತೆ ತಿಳಿಗನ್ನಡದಲ್ಲಿ ತಿಳಿಸಿರುತ್ತಾರೆ. ಈ ಗ್ರಂಥಕರ್ತರು ಈ ಗ್ರಂಥದಲ್ಲಿ ತಮ್ಮ ಸ್ವಾನುಭವದಿಂದ ಬರೆದಿರುವವುಗಳಿಗೆಲ್ಲವೂ ಶ್ರೀಭಗವದ್ಗೀತೆ, ಉಪನಿಷತ್ತುಗಳು ಪೂರ್ವಕವಿಗಳಿಂದ ಬರೆಯಲ್ಪಟ್ಟ ಪದ್ಯಗಳು, ಭಾರತ ಭಾಗವತಗಳು, ಶ್ರೀ ಶಂಕರಾಚಾರ್ಯರ ವಾಕ್ಯಗಳು, ಪ್ರಪಂಚಾನುಭವ ದೃಷ್ಟಾಂತಗಳು, ಇವುಗಳೆಲ್ಲವೂ ಈ ಗ್ರಂಥದಲ್ಲಿಲ್ಲದಿದ್ದರೆ ಪಂಡಿತರೂ ಮತ್ತು ವಿದ್ಯಾಭಿ

ಮಾನಿಗಳೂ ಈ ಗ್ರಂಥವನ್ನು ಅಂಗೀಕರಿಸರು. ಆದುದರಿಂದ ಮೇಲ್ಕಂಡ ಗ್ರಂಥಗಳಲ್ಲಿರುವ ಮುಖ್ಯ ವಾಕ್ಯಗಳನ್ನು ಇದರಲ್ಲಿ ಕಂಡುಬರುವ ವಿಷಯ ಗಳನ್ನು ಪ್ರಮಾಣೀಕರಿಸುವುದಕ್ಕಾಗಿ ಅಲ್ಲಲ್ಲಿ ಕೊಟ್ಟಿದೆ. ಇವುಗಳೆಲ್ಲ ವನ್ನೂ ಆಯಾಯಾ ಗ್ರಂಥಗಳನ್ನು ಹುಡುಕಿ ಅವುಗಳು ದೊರಕಿದ ಗ್ರಂಥದ ಹೆಸರು, ಅಧ್ಯಾಯ, ಶ್ಲೋಕ ಇವುಗಳನ್ನು ಹುಡುಕಿ ತಪ್ಪಿಲ್ಲದಂತೆ ಸರಿಪಡಿಸಿ **ಮೇಲ್ಕಂಡ ಭೀಮಸೇನರಾಯರು** ಬರೆದಿರುತ್ತಾರೆ.

ಇದೂ ಅಲ್ಲದೆ, ಈ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಮುದ್ರಿಸು ತ್ತಿರುವಾಗ ಪ್ರತಿಭಾನುವಾರವೂ ಅನೇಕರನ್ನು ಕರೆಕಳುಹಿಸಿ ಈ ಗ್ರಂಥದ ವಿಷಯಗಳನ್ನು ಮೇಲ್ಕಂಡ ರಾಯರು ಓದುವುದೂ ಉಂಟು. ಆಗ ಈ ವಿಷಯಗಳನ್ನು ಕೇಳಿದವರೆಲ್ಲರೂ ಬಹಳವಾಗಿ ಸಂತೋಷಪಟ್ಟು 'ಇದು ಬಹಳ ಉತ್ತಮವಾದ ಗ್ರಂಥವು, ಸಮಸ್ತರಿಗೂ ತಿಳಿಯುವಂತೆ ಬಹಳ ಸ್ವಾರಸ್ಯವಾಗಿ ತಿಳಿಗನ್ನಡದಲ್ಲಿ ಬರೆದಿರುತ್ತಾರೆ' ಎಂದು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು.

ತೆಲುಗು ಗ್ರಂಥವನ್ನು ಕನ್ನಡ ಭಾಷೆಯಲ್ಲಿ **ಚಿರಂಜೀವಿ ಶ್ರೀ 'ಭೀಮಸೇನರಾಯರು'** ಬಹು ಚನ್ನಾಗಿ ಭಾಷಾಂತರವನ್ನು ಮಾಡಿರು ವುದರಿಂದಲೂ, ಆ ಗ್ರಂಥವನ್ನು ಓದುವಾಗ ಸ್ತ್ರೀಪುರುಷರೆಲ್ಲರೂ ಬಹಳ ಆನಂದಪಡುತ್ತಿದ್ದರಾದುದರಿಂದಲೂ, ಆ ಪರಿವರ್ತನಕಾರರ ಮೇಲೆ ಈ ಗ್ರಂಥಕರ್ತರಿಗೆ ಬಹಳ ಪ್ರೀತಿಯುಂಟಾಯಿತು. ಆ ಪ್ರೀತಿಯಿಂದ **'ಭೀಮಸೇನರಾಯರ'** ಭಾವಚಿತ್ರ (Photo) ವನ್ನು ತರಿಸಿ ಅದನ್ನು ಬ್ಲಾಕ್ (Block) ಮಾಡಿಸಿ, ಅದನ್ನು ವಿಘ್ನೇಶ್ವರನ ಪಠದ ಹಿಂದಿನ ಪಕ್ಕದಲ್ಲಿಯೇ ಇಟ್ಟು ಅವರ ಭಾವಚಿತ್ರವನ್ನು ಮುದ್ರಿಸಿ, ಆಮೇಲೆ ಈ ಗ್ರಂಥಕರ್ತರ ಪಠವನ್ನು ಮುದ್ರಿಸಿ ಸೇರಿಸಿರುತ್ತಾರೆ. ಇದೇ ಈ ಗ್ರಂಥ ಕರ್ತರು ಈ ಪರಿವರ್ತನಕಾರರಿಗೆ ಅವರ ಶ್ರಮಕ್ಕಾಗಿ ಕೊಡುವ ಪ್ರತಿಫಲ. ಇವರು ಮೈಸೂರು ವಿಶ್ವವಿದ್ಯಾನಿಲಯ (University) ದಲ್ಲಿ ರಸಾ ಯನಶಾಸ್ತ್ರ (Chemistry) ದೊಳಗೆ ಬಿ.ಯಸ್‌ಸಿ. (B.Sc.) ಪರೀಕ್ಷೆ ಯಲ್ಲಿ ಉತ್ತೀರ್ಣರಾಗಿರುತ್ತಾರೆ. ಇವರಿಗೆ ಇಂಗ್ಲಿಷ್, ಕನ್ನಡ ಮತ್ತು ತೆಲುಗು ಈ ಭಾಷೆಗಳ ಪರಿಶ್ರಮ ಬಹಳ ಚನ್ನಾಗಿದೆ. ವಯಸ್ಸು ಸುಮಾರು

30-ವರ್ಷ 'ಇವರಿಗೆ ಆಯುರಾರೋಗ್ಯಾದಿಗಳು ಲಭಿಸಲಿ, ಇವರು ವಿದ್ಯಾಪ್ರಂಚದಲ್ಲಿ ಮುಂದರಿಯಲಿ' ಎಂಬುದೇ ನಮ್ಮ ಆಶೀರ್ವಾದವು.

ಈ ಗ್ರಂಥವನ್ನು ಬಹಳ ಆತುರವಾಗಿ ಕನ್ನಡ ಭಾಷೆಯಲ್ಲಿ ಮುದ್ರಿಸಿದೆಯಾದುದರಿಂದ ಪ್ರಮಾದವಶದಿಂದ ಅಲ್ಲಲ್ಲಿ ಬಿದ್ದ ತಪ್ಪುಗಳನ್ನು ಎರಡನೇ ಭಾಷೆಯಲ್ಲಿ (2nd Edition) ಸರಿಪಡಿಸುತ್ತೇವೆ. ಇನ್ನೂ ಅನೇಕ ವಿಧವಾದ ನ್ಯೂನಾತಿರೇಕಗಳೂ ಇದರಲ್ಲಿರಬಹುದು. ಅವುಗಳನ್ನೂ ಕ್ರಮಪಡಿಸಿ ಮುಂದಿನ ಮುದ್ರಣದಲ್ಲಿ ಸರಿಪಡಿಸುತ್ತೇವೆ.

ಅಲ್ಲದೆ, ಈ ಗ್ರಂಥಕರ್ತರಿಂದ ತೆಲುಗು ಭಾಷೆಯಲ್ಲಿ ಬರೆದು ಮುದ್ರಿತವಾದ ಗೂಢಾರ್ಥಸಂಗ್ರಹಸಹಿತ '**ಶ್ರೀ ಭಗವದ್ಗೀತೆ' ಯೂ, 'ಶ್ರೀ ಕಬೀರ್‌ದಾಸ್ ಚರಿತ್ರೆ'ಯೂ, 'ಶರೀರ ದೇವಾಲಯ ರಹಸ್ಯಾರ್ಥ ಪಾರಿಜಾತ'ವೂ, 'ಈ ಗ್ರಂಥಕರ್ತರ ಪೂರ್ವಜನ್ಮ ಈ ಜನ್ಮ ಚರಿತ್ರೆಯೂ,'** 'ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ' ವನ್ನೇ ಪದ್ಯರೂಪವಾಗಿ ಬರೆಯಲ್ಪಟ್ಟಿರುವ '**ಮಂಜರೀ ದ್ವಿಪದಾ**' ಎಂಬುದೂ, ಈ ಮೊದಲಾದ ತೆಲುಗು ಗ್ರಂಥಗಳನ್ನೆಲ್ಲಾ ಈ ಗ್ರಂಥವನ್ನು ಕನ್ನಡಿಸಿದ '**ಬಿ. ಭೀಮಸೇನರಾವ್-Bsc.**' ಇವರಿಂದಲೇ ಕನ್ನಡಾನುವಾದವನ್ನು ಮಾಡಿಸಿ ಮುದ್ರಿಸಿ ಶೀಘ್ರದಲ್ಲಿಯೇ ಪ್ರಚುರಪಡಿಸುವವರಾಗಿದ್ದೇವೆ.

ಈ ಗ್ರಂಥವು ಚತುರ್ವೇದಗಳು ಮತ್ತು ಅಷ್ಟೋತ್ತರ ಶತೋಪನಿಷತ್ತುಗಳು ಇವುಗಳ ಸಾರವನ್ನು ಎತ್ತಿ ಹೇಳುತ್ತಿದೆಯಾದುದರಿಂದ, ಇದನ್ನು ಪಠಿಸಿದವರು ಬೇರೆ ಯಾವವಿಧವಾದ ಗ್ರಂಥಗಳನ್ನು ಪಠಿಸುವ ಅವಶ್ಯಕವಿಲ್ಲ. ಇವರಿಂದ ಬರೆಯಲ್ಪಟ್ಟ ಗ್ರಂಥಗಳೆಲ್ಲವೂ ತಮ್ಮ ಯೋಗದ ಸ್ವಾನುಭವದಿಂದ ಬರೆದವುಗಳೇ ಆಗಿರುತ್ತವೆಯಾಗಿ ಇದರಲ್ಲಿರುವಂತೆ ನಡೆದುಕೊಳ್ಳುವ ಸ್ತ್ರೀಪುರುಷರು ತಮ್ಮ ಜೀವಮಾನವನ್ನು ಉತ್ತಮಗೊಳಿಸಿಕೊಳ್ಳುವುದಕ್ಕೆ ಇವುಗಳು ಸಹಕಾರಿಯಾಗಿವೆ.

ಬೆಂಗಳೂರು ದಂಡು, ನಂಬರ್ 11, ಸೈಂಟ್‌ಝಾನ್ಸ್ ರೋಡು, ವಿ. ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್, ಪ್ರೊಪ್ರೈಟರ್: ಚಿರಂಜೀವಿ ವಿ. ನರಶಿಂಹ್ಮಲು ನಾಯುಡು ಯವರು, ಈ ಗ್ರಂಥವನ್ನು ಬಹಳ ಶ್ರದ್ಧೆ

ಯಿಂದ ಗಮನಿಸಿ, ಕೂಡಿದಷ್ಟು ಶೀಘ್ರವಾಗಿ ಗ್ರಂಥಕರ್ತರ ಇಷ್ಟಾನುಸಾರವಾಗಿ ಹೊಸ ಅಕ್ಷರಗಳಲ್ಲಿ ಮುದ್ರಿಸಿ ಕೊಟ್ಟುದಕ್ಕಾಗಿ, ಇವರಿಗೂ, ಇವರ ಕುಟುಂಬದವರೆಲ್ಲರಿಗೂ, ಮುದ್ರಣಾಲಯದಲ್ಲಿ ಸಕಾಲಕ್ಕೆ ತಕ್ಕಹಾಗೆ ಕೆಲಸಗಳನ್ನು ಮುಗಿಸಿಕೊಟ್ಟವರಿಗೂ ಇವರ ಕುಟುಂಬದವರೆಲ್ಲರಿಗೂ, ಈ ಗ್ರಂಥವನ್ನು ಕನ್ನಡಿಸಿದ, ಚಿರಂಜೀವಿ ಬಿ. ಭೀಮಸೇನರಾವ್, ಬಿ. ಎಸ್‌ಸಿ. ಯವರಿಗೂ, ಇವರ ಕುಟುಂಬದವರೆಲ್ಲರಿಗೂ, ಈ ಗ್ರಂಥದ ಅಭಿಪ್ರಾಯಗಳನ್ನು ತಿಳಿಸಿದ ಪಂಡಿತರೆಲ್ಲರಿಗೂ ಇವರ ಕುಂಟುಂಬದವರಿಗೂ ಆಯುರಾರೋಗ್ಯ ಸುಖಜೀವಿಗಳಾಗಿರುವಂತೆ, ಈ ಗ್ರಂಥಕರ್ತರಾದ ಶ್ರೀ ಯೋಗೀಶ್ವರರು ಪರಬ್ರಹ್ಮನಾದ ಈಶ್ವರನನ್ನು ಪ್ರಾರ್ಥಿಸುತ್ತಾರೆ.

'ಓ! ಪರಬ್ರಹ್ಮನೆನಿಸುವ ದೇವಾ!' ಈ ಗ್ರಂಥವನ್ನು ಓದುವವರಿಗೂ ಕೇಳುವವರಿಗೂ ಅನೇಕ ಕೋಟಿ ಜನ್ಮಗಳಿಂದ ಅವರ ಬೆನ್ನಂಟೆ ಬರುತ್ತಿರುವ ಪಾಪವೆಂಬ ಕರ್ಮಗಳನ್ನೆಲ್ಲಾ ಭಸ್ಮವನ್ನಾಗಿ ಮಾಡಿ, ಸಾಯುಜ್ಯಪದವಿಯನ್ನು ಸೇರುವುದಕ್ಕಾಗಿ ಬೇಕಾದ ಒಳ್ಳೆಯ ಬುದ್ಧಿಯನ್ನು ಅವರಿಗೆ ಅನುಗ್ರಹಿಸಿ ಅವರೆಲ್ಲರನ್ನೂ ಕಡೆಹಾಯಿಸು ಆದಿಪುರುಷಾ!

ಓಂ ಶಾಂತಿ ♦ ಶ್ಯಾಂತಿ ♦ ಶ್ಯಾಂತಿಃ.

ನೀನು ವಿಶೇಷ ಶಾಂತಚಿತ್ತವುಳ್ಳವನೆಂದು ನಿನ್ನನ್ನು ಶಾಂತಿ ಮಂತ್ರದಿಂದ ಮೂರು ಸಾರಿ ಸ್ತುತಿಸುತ್ತೇನೆ. ಈ ಸ್ತುತಿಯಿಂದ ನೀನು ಸ್ತ್ರೀಪುರುಷರ ಪಾಪವೆಂಬ ಕರ್ಮಗಳನ್ನೆಲ್ಲಾ ಹೋಗಲಾಡಿಸುವುದಲ್ಲದೆ, ಅವರನ್ನಂಟಿರುವ ಅನೇಕ ಆಸೆಗಳನ್ನೆಲ್ಲಾ ತೊಲಗಿಸು ದೇವಾ!

1-9-1936. ಇತಿ,

ನಿಮ್ಮೆಲ್ಲರ ಕುಟುಂಬ ಕ್ಷೇಮಗಳನ್ನೂ ಸುಖಗಳನ್ನೂ
ಕೋರುವಂಥ,



ಪರಮಹಂಸ ಸಚ್ಚಿದಾನಂದ.



# ಪರಿವರ್ತನಕಾರರ ಮುನ್ನುಡಿ.

**"ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ"** ವೆಂಬ ಈ ವೇದಾಂತ ಗ್ರಂಥರತ್ನವನ್ನು ರಚಿಸಿದ **ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು** ಕಡಪ ಜಿಲ್ಲೆಗೆ ಸೇರಿದ ಮಹಾ ಪುರುಷರು. ಇವರ ಜನ್ಮಚರಿತ್ರೆಯಲ್ಲಿ ವಿವರಿಸಿರುವಂತೆ ಪೂರ್ವ ವಯಸ್ಸಿನಲ್ಲಿಯೇ ಅಂದರೆ ಗೃಹಸ್ಥಾಶ್ರಮವನ್ನು ವಹಿಸಿರುವಾಗಲೇ ಪ್ರಾಪಂಚಿಕ ಸುಖಗಳೆಲ್ಲವೂ ನಶ್ವರವೆಂಬ ಭಾವನೆಯು ಇವರಿಗೆ ಹುಟ್ಟಿ ಕ್ರಮಕ್ರಮವಾಗಿ ಆ ಸೌಖ್ಯಗಳಲ್ಲಿ ವಿರಕ್ತಿಯನ್ನು ಹೊಂದಿ, ಪರಮಾತ್ಮನ ನಿಶ್ಚಯಜ್ಞಾನವನ್ನು ಪಡೆಯಬೇಕೆಂಬ ಸದುದ್ದೇಶದಿಂದ ಇತರ ಕೋರಿಕೆಗಳನ್ನೆಲ್ಲಾ ಒತ್ತಟ್ಟಗಿಟ್ಟು, ಯೋಗಾಭ್ಯಾಸವನ್ನು ಕೈಕೊಂಡರು. ಇವರು, ನಿಂತಲ್ಲಿನಿಲ್ಲದ ಮನಸ್ಸನ್ನು ಸ್ಥಿರೀಕರಿಸುವುದಕ್ಕೆ ಯೋಗಾಭ್ಯಾಸವಲ್ಲದೆ, ಬೇರೆ ಉಪಾಯವಿಲ್ಲವೆಂಬ ರಹಸ್ಯವನ್ನರಿತು, ಅದನ್ನೇ ಅಭ್ಯಾಸಮಾಡಿ, ಕಡೆಗೆ ಯೋಗಸಿದ್ಧಿಯನ್ನು ಪಡೆದು ಯೋಗಿವರ್ಯರೆಂದೆನಿಸಿಕೊಂಡರು. ಮೊದಲೇ ಹೆಂಡತಿ ಮಕ್ಕಳೆಂಬ ಈ ಸಂಸಾರಪಾಶದಿಂದ ಬಿಡುಗಡೆ ಹೊಂದಬೇಕೆಂದು ಇಚ್ಛಿಸುತ್ತಿದ್ದ ಇವರಿಗೆ ದೈವಿಕವಾಗಿ ಸಂಘಟಿಸಿದ ಕಳತ್ರಹಾನಿಯು ಇವರ ಮನಸ್ಸನ್ನು ಪರಿಪಕ್ವಮಾಡುವುದಕ್ಕೆ ಸಹಕಾರಿಯಾಯಿತು. ಆ ದಿನದ ಮೊದಲು ಇವರು ಯೋಗಾಭ್ಯಾಸವನ್ನು ಹೆಚ್ಚಿಸಿಕೊಳ್ಳುತ್ತಾ ಆ ಯೋಗದಲ್ಲಿರುವಾಗ ತಾವು ಅನುಭವಿಸಿದ ಸುಖಗಳ ವಿಷಯವನ್ನು ಪ್ರಪಂಚದಲ್ಲಿರುವ ಮಾನವ ವರ್ಗಕ್ಕೆ ಎತ್ತಿ ಹೇಳುವ ಸಲುವಾಗಿ ಅವೆಲ್ಲವನ್ನು ತಮಿಳು ಮತ್ತು ತೆಲುಗು ಗ್ರಂಥಗಳ ಮತ್ತು ಉಪನ್ಯಾಸಗಳ ಮೂಲಕ ಆಯಾನಾಡಿನ ಜನಗಳಿಗೆ ತಿಳಿಸುತ್ತಾ ಬಂದರು. ಈ ಯೋಗಬಲದಿಂದ ಮನಸ್ಸನ್ನು ಒಂದೆಡೆ ನಿಲ್ಲಿಸಿ ಪರಮಾತ್ಮನ ನಿಶ್ಚಯಜ್ಞಾನವನ್ನು ತಿಳಿದು ಅದನ್ನೂ ಆ ಗ್ರಂಥಗಳಲ್ಲಿ ವಿಶದಪಡಿಸಿದರು. ಇದೇ ರೀತಿಯಲ್ಲಿ ಯೋಗದಲ್ಲಿರುವಾಗಲೆಲ್ಲಾ ಯಾವ ಯಾವ ಅನುಭವಗಳನ್ನು ತಾವು ಪಡೆದರೋ, ಅವೆಲ್ಲವೂ ಉಪನಿಷತ್ತುಗಳಲ್ಲಿ ಹೇಳಿರುವ ರಹಸ್ಯಗಳಿಗೆ ಅನುಗುಣವಾಗಿರುವುದನ್ನು ತಿಳಿದು, ಆ ಉಪನಿಷದ್ವಾಕ್ಯಗಳ ಪ್ರಮಾಣಗಳೊಡನೆ ಪ್ರಚುರಪಡಿಸುತ್ತ ಬಂದರು. ಇದೂ ಅಲ್ಲದೆ, ಸಾಧಾರಣವಾಗಿ ಮಾನವ ವರ್ಗಕ್ಕೆ ಇದುವರಿವಿಗೂ ಅಗೋಚರವಾಗಿದ್ದ ಅನೇಕ ನೂತನ ರಹಸ್ಯಗಳನ್ನೂ ಸೇರಿಸಿ ಸುಮಾರು

1,300 ಪುಟಗಳುಳ್ಳ ಒಂದು ದೊಡ್ಡ ತೆಲುಗು ಗ್ರಂಥವನ್ನು ಎಲ್ಲಾ ದೇಶಗಳಲ್ಲಿಯೂ ಹರಡುತ್ತ ಬಂದರು.

ಹೀಗಿರಲು, ಅದೃಷ್ಟವಶಾತ್ ಈ ಅದ್ಭುತ ಗ್ರಂಥದ ಪರಿಚಯವು ನನ್ನ ಹಿತೈಷಿಗಳಾದ **ಮ॥ರಾ॥ಶ್ರೀ ರಾವ್ ಸಾಹೇಬ್ ರಾಮರಾಯರವರಿಂದ** ನನಗುಂಟಾಯಿತು. 'ಇದು ಬಹು ಉಪಯೋಗಕರವಾದ ಗ್ರಂಥವು. ಇದನ್ನು ಯಾವ ಮಹಾಪುರುಷರು ಬರೆದರೋ?' ಎಂದು ಯೋಚಿಸುತ್ತಿರುವಲ್ಲಿ ಮೇಲೆ ಹೇಳಿದ ಶ್ರೀ|| ರಾಮರಾಯರವರ ಮೂಲಕ ಈ ಗ್ರಂಥಕರ್ತರಾದ ಯೋಗೀಶ್ವರರ ಪರಿಚಯವೂ ನನಗೆ ಲಭಿಸಿತು. ಈ ಮಹಾನುಭಾವರು ಬೆಂಗಳೂರು ಸಿಟಿ ಮತ್ತು ಕಂಟೋನ್ಮೆಂಟ್ ಇವುಗಳ ಅನೇಕ ಸ್ಥಳಗಳಲ್ಲಿ ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಹಲವು ಉಪನ್ಯಾಸಗಳನ್ನು ಮಾಡಿ ಜನಗಳ ಮನಸ್ಸನ್ನು ಆಕರ್ಷಿಸಿದ ವಿಷಯವನ್ನೂ ಶ್ರೀ|| ರಾಮರಾಯರವರಿಂದ ತಿಳಿದೆನು. ಹೀಗಿರಲು ತಮ್ಮ 'ತೆಲುಗು ಭಾಷೆಯಲ್ಲಿರುವ ಈ ಶ್ರೇಷ್ಠವಾದ ಗ್ರಂಥವನ್ನು ಸ್ವಲ್ಪವೂ ಹೆಚ್ಚುಕಡಿಮೆಯಿಲ್ಲದೆ ಕನ್ನಡಿಸಬಲ್ಲವರು ಯಾರಾದರೂ ಇರುತ್ತಾರೆಯೇ?' ಎಂದು ಯೋಗೀಶ್ವರರು ಶ್ರೀ|| ರಾಮರಾಯರವರನ್ನು ಕೇಳಲು ಇವರು, ನನ್ನನ್ನು ನಿರ್ದೇಶಿಸಿ ಸ್ವಾಮಿಗಳ ಬಳಿಗೆ ಕರೆದು ಕೊಂಡುಹೋದರು. ಶ್ರುತಿ ಪ್ರಮಾಣಗಳಿಂದ ತುಂಬಿದ ಗದ್ಯಪದ್ಯಾತ್ಮಕವಾದ ಈ ತೆಲುಗು ಗ್ರಂಥವನ್ನು ಕನ್ನಡಿಸಲು ನನಗೆ ಯೋಗ್ಯತೆಯಿಲ್ಲದಿದ್ದರೂ ಪ್ರಯತ್ನಪಡುತ್ತೇನೆಂದು ಹೇಳಿ ಸ್ವಲ್ಪ ಭಾಗವನ್ನು ಕನ್ನಡಿಸಿ ಯೋಗೀಶ್ವರರಿಗೆ ಓದಿ ಹೇಳಿದೆನು. ತಮ್ಮ ಅಭಿಪ್ರಾಯವು ಸಂಪೂರ್ಣವಾಗಿ ತಿಳಿಗನ್ನಡದಲ್ಲಿ ಪರಿವರ್ತಿಸಲ್ಪಟ್ಟಿದೆಯಾದುದರಿಂದ ಈ ಗ್ರಂಥವನ್ನು ಪೂರ್ಣ ಮಾಡಬೇಕೆಂದು ಹೇಳಿದ್ದರ ಮೇಲೆ, ನನ್ನ ಯೋಗ್ಯತೆಯಲ್ಲಿ ನನಗೆ ನಂಬಿಕೆಯಿಲ್ಲದಿದ್ದರೂ ಈ ಮಹತ್ಕಾರ್ಯಭಾರವನ್ನು ವಹಿಸಿ ಗದ್ಯಕ್ಕೆ ಗದ್ಯವಾಗಿಯೂ ಪದ್ಯಕ್ಕೆ ಪದ್ಯವಾಗಿಯೂ ಕನ್ನಡಿಸಿದೆನು. ನನಗೆ ತೆಲುಗು ಕನ್ನಡ ಸಂಸ್ಕೃತ ಭಾಷಾಪರಿಚಯವು ಹೆಚ್ಚಾಗಿಲ್ಲವಾಗಿ ಈ ಭಾಷಾಂತರದಲ್ಲಿ ಅನೇಕ ನ್ಯೂನಾತಿರೇಕಗಳಿವೆ. ಈ ಗ್ರಂಥವನ್ನು ಶ್ಲಾಘ್ಯರೀತಿಯಿಂದ ಕನ್ನಡಿಸಬಲ್ಲ ವಿದ್ವಾಂಸರು ಅನೇಕರಿದ್ದಾಗ್ಯೂ, 'ನೀನೇ ಇದನ್ನು ಕನ್ನಡಿಸಬೇಕು' ಎಂದು ಯೋಗೀಶ್ವರರು ನನಗೆ ಒತ್ತಿ ಹೇಳಿದುದರಿಂದ ನನ್ನಲ್ಲಿ ಅವರಿಗಿರುವ ಪ್ರೀತಿಯೂ, ಅನುಭವವಿಲ್ಲದ ನನ್ನಂಥವರಿಗೆ ಉತ್ತೇಜನ ಕೊಡಬೇಕೆಂಬ

ಇವರ ಇಚ್ಛೆಯೂ ವ್ಯಕ್ತಪಡಿಸಿದಂತಾಯಿತು. ಇದೂ ಅಲ್ಲದೆ ಯೋಗೀಶ್ವರರು ಭಾಷಾಂತರ ಮಾಡುವುದಕ್ಕೆ ಸಹಕಾರಿಗಳಾದ ಅನೇಕ ಇತರ ಗ್ರಂಥಗಳನ್ನು ಒದಗಿಸಿಕೊಟ್ಟು ಉತ್ತೇಜನ ಕೊಟ್ಟುದರಿಂದ ಇವರ ಔದಾರ್ಯವು ಎಷ್ಟೆಂಬುದು ಗೊತ್ತಾಗುತ್ತದೆ. ಯೋಗೀಶ್ವರರ ಈ ಉಪಕಾರಕ್ಕಾಗಿ ನಾನು ಚಿರರುಣಿಯಾಗಿರುತ್ತೇನೆ.

ಈ ಗ್ರಂಥಕರ್ತರು ತಮ್ಮ ಜನ್ಮಚರಿತ್ರೆಯಲ್ಲಿ ವಿವರಿಸಿದಂತೆ ಹೆಚ್ಚು ವಿದ್ಯಾವಂತರಲ್ಲದಿದ್ದರೂ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ ಮೊದಲಾದ ಪ್ರಮಾಣಗಳೊಡನೆ ತುಂಬಿದ ಈ ಮಹಾ ಗ್ರಂಥವನ್ನು ಬರೆದು ಮುದ್ರಿಸಿ, ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಹರಡಿ ಮತ್ತು ಬೇರೆಬೇರೆ ದೇಶಗಳಿಗೆ ಹೋಗಿ ಶ್ಲಾಘ್ಯರೀತಿಯಿಂದ ಉಪನ್ಯಾಸ ಮಾಡಿ ಜನಗಳ ಮನಸ್ಸನ್ನು ಆಕರ್ಷಿಸುವ ಶಕ್ತಿಯು ಇವರಿಗೆ ಯಾವ ಬಗೆಯಲ್ಲಿ ಲಭಿಸಿತೋ ಎಂಬ ಅನುಮಾನವು ನನಗಿದ್ದಿತು. ಆದರೆ ಈ ಗ್ರಂಥದಲ್ಲಿ 'ಪುನರ್ಜನ್ಮವುಂಟು, ಪೂರ್ವಜನ್ಮ ಸಂಸ್ಕಾರ' ಎಂಬ ಪ್ರಕರಣದಲ್ಲಿ ಅವರೇ ವಿವರಿಸಿರುವಂತೆ 'ಪೂರ್ವಜನ್ಮದ ಸಂಸ್ಕಾರವೇ ಇವರಿಗೆ ಈಶಕ್ತಿಯನ್ನುಂಟುಮಾಡಿದೆ' ಎಂಬ ಸಮಾಧಾನದಿಂದ ನನ್ನ ಈ ಸಂಶಯವು ಅಣಗಿತು. ಈ ಮಹಾನುಭಾವರ ನಡೆನುಡಿಗಳು, ಮುಖದಲ್ಲಿನ ಅದ್ಭುತ ತೇಜಸ್ಸು, ಮತ್ತು ಪ್ರಾಪಂಚಿಕ ವಿಷಯಗಳಲ್ಲಿನ ವಿರಕ್ತಿ, ಸರ್ವಸಮತ್ವ ಭೂತದಯೆ ಮತ್ತು ಯೋಗದ ಮಹಿಮೆ ಇವೆಲ್ಲವೂ ಅವರನ್ನು ದರ್ಶಿಸಿ ಅವರೊಡನೆ ಕೆಲದಿನವಿದ್ದು ಅನುಭವಿಸಿದವರಿಗೆ ತಿಳಿಯುವುದೇ ಹೊರತು ಉಳಿದವರಿಗೆ ತಿಳಿಯದು. ದರ್ಶನ ಮಾತ್ರದಿಂದ ಪೂಜ್ಯಬುದ್ಧಿಯನ್ನು ಹುಟ್ಟಿಸುವ ಇವರಲ್ಲಿ ನನಗಿರುವ ಭಕ್ತಿ ಗೌರವ ವಿಶ್ವಾಸಗಳೇ ನಾನು ಈ ಗ್ರಂಥವನ್ನು ಪರಿವರ್ತಿಸುವ ಕಷ್ಟಸಾಧ್ಯವಾದ ಕೆಲಸವನ್ನು ತೊಡಗುವುದಕ್ಕೆ ಅವಕಾಶಕೊಟ್ಟವುಗಳು.

ತೆಲುಗು ಮೂಲ ಗ್ರಂಥದಲ್ಲಿ ಒಂದೇ ವಿಷಯವನ್ನು ಅನೇಕ ಸ್ಥಳಗಳಲ್ಲಿ ಪುನಃ ಪುನಃ ಹೇಳಿರುತ್ತಾರೆ. 'ಜನಗಳ ಮನಸ್ಸಿಗೆ ಚನ್ನಾಗಿ ಹತ್ತಲಿ' ಎಂಬುದೇ ಇದರ ಉದ್ದೇಶವು. ಆ ರಹಸ್ಯವನ್ನು ತಿಳಿದು ಕನ್ನಡ ಗ್ರಂಥದಲ್ಲಿಯೂ ಅದೇ ಮಾರ್ಗವನ್ನು ಅನುಸರಿಸಿದೆ. ತೆಲುಗು ಗ್ರಂಥದಲ್ಲಿ ಗದ್ಯಪದ್ಯಗಳನ್ನು ಪದಶಃ ಕನ್ನಡಿಸಿದೆಯಾದುದದರಿಂದ ಶೈಲಿಯು ಸರಳವಾಗಿಯೂ ಹೃದಯಂಗಮವಾಗಿಯೂ ಇಲ್ಲದಿರಬಹುದು. ಈ ವಿಧವಾದ ನ್ಯೂನಾತಿರೇಕಗಳು ಎರಡನೆಯ ಮುದ್ರಣದಲ್ಲಿ ಸರಿಪಡಿಸಲ್ಪಡುತ್ತವೆ.

ಈ ತೆಲುಗು ಗ್ರಂಥವನ್ನು ಕನ್ನಡಿಸುವುದಕ್ಕೆ ಉತ್ತೇಜನ ಕೊಟ್ಟ **ಶ್ರೀ ಯೋಗೀಶ್ವರರಿಗೂ** ಮತ್ತು ೪೪೦ ಪುಟಗಳುಳ್ಳ ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯಗಳನ್ನು ಕೊಟ್ಟಂಥ ಮೈಸೂರು ಸಂಸ್ಥಾನದ ಸಂಸ್ಕೃತ ಶಾಲೆಗಳ ಇನ್‌ಸ್ಪೆಕ್ಟರಾಗಿದ್ದು ಈಗ ಆ ಉದ್ಯಮದಿಂದ ನಿವೃತ್ತರಾಗಿರುವ ವೇದಮೂರ್ತಿಗಳಾದ **ಸಿ. ವೆಂಕಟರವಣಯ್ಯನವರಿಗೂ,** ಮೈಸೂರು ಸಂಸ್ಥಾನದಲ್ಲಿ ಎಗ್ಜಿಕ್ಯುಟಿವ್ ಇಂಜನಿಯರಾಗಿದ್ದು ಈಗ ನಿವೃತ್ತರಾಗಿರುವ **ಮ॥ರಾ॥ಶ್ರೀ ಸಿ. ವಿಜಯರಂಗಂ ನಾಯುಡುರವರಿಗೂ,** ಮಧ್ಯಪ್ರಾಂತಗಳಲ್ಲಿಯೂ ಮತ್ತು ಭೂಪಾಲ್ ಸಂಸ್ಥಾನದಲ್ಲಿಯೂ 'ಫಾರೆಸ್ಟ್ ಕನ್‌ಸರ್ವೇಟರ್' ಎಂಬ ಉಚ್ಚಸ್ಥಾನವನ್ನು ಅಲಂಕರಿಸಿ ಪ್ರಸಿದ್ಧಿ ಪಡೆದು ಈಗ ನಿವೃತ್ತರಾಗಿರುವ **ಎಂ. ನರಸಿಂಗರಾವ್, ಯಸ್‌ಕ್ವೈರ್, ಯಂ. ಬಿ. ಇ ಎಂಬುವರಿಗೂ,** ಇದೇ ರೀತಿಯಲ್ಲಿ ವನಶಾಖೆಯಲ್ಲಿ (Forest Department) ಉನ್ನತಪದವಿಯನ್ನು ಪಡೆದು ಪ್ರಖ್ಯಾತಿಹೊಂದಿ ಈಗ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವ **ಶ್ರೀ॥ ರಾವ್. ಸಾಹೇಬ್. ರಾಮರಾಯರವರಿಗೂ** ಮತ್ತು ಹಾಲಿ ಮೈಸೂರು ಸಂಸ್ಥಾನದಲ್ಲಿ ಡೆವೆಲೆಪ್‌ಮೆಂಟ್ ಕಮಿಷನರ್ ಪದವಿಯನ್ನು ಪಡೆದು ಸರ್ಕಾರದ ಉದ್ಯೋಗದಲ್ಲಿ ನಿರತರಾಗಿರುವ **ಮ॥ರಾ॥ಶ್ರೀ ಎ. ವಿ. ರಾಮನಾಥನ್‌ರವರಿಗೂ** ನಾನು ತುಂಬಾ ಕೃತಜ್ಞನಾಗಿರುತ್ತೇನೆ. ಇದೂ ಅಲ್ಲದೆ ಈ ಗ್ರಂಥವನ್ನು ಬಹು ಶ್ರದ್ಧೆಯಿಂದ ಅಂದವಾಗಿ ಮುದ್ರಿಸಿ ಅತ್ಯಲ್ಪಕಾಲದಲ್ಲಿಯೇ ಪ್ರಚುರಪಡಿಸಲು ಅವಕಾಶವನ್ನು ಕಲ್ಪಿಸಿಕೊಟ್ಟ **ವಿ. ನೈಡ್ ಅಂಡ್ ಕಂಪೆನಿ ಪವರ್ ಪ್ರೆಸ್ ನವರನ್ನು** ನಾನು ಬಹಳವಾಗಿ ಅಭಿನಂದಿಸುತ್ತೇನೆ.

ಇತಿ,

B. Bhimasena Rao.



# ವಿಜ್ಞಾಪನೆ.

---

ಓ ಮಾನವಶ್ರೇಷ್ಠರೇ! **ಜಿಟ್ಟೆಜಿಯಲಿನ ರಹಸ್ಯಾರ್ಥವೇನೆಂದರೆ:—** ನಮ್ಮ ಕಣ್ಣೆದುರಿಗೆ ಕಾಣ್ಬರುವ ಬಯಲೂ ಮತ್ತು ಆ ಬಯಲಿನಲ್ಲಿ ಅಣಗಿರುವ ಪರಬ್ರಹ್ಮನಾದ ಈಶ್ವರನೂ ಇವೆರಡೂ ಎಂದೆಂದಿಗೂ ನಾಶವಿಲ್ಲದೆ ಸದಾ ಒಂದೇ ಸಮನಾಗಿರುವುವು. ಈ ಬಯಲು ಒಂದು ವೇಳೆಯಲ್ಲಿದ್ದು ಮತ್ತೊಂದು ವೇಳೆಯಲ್ಲಿ ಇಲ್ಲದೇ ಹೋಗುವುದಲ್ಲವು. ಅದು ಸರ್ವದಾ ಶಾಶ್ವತವಾಗಿರುವಂಥದು. ಈ ಪ್ರಪಂಚವನ್ನ ನಾಲ್ಕುಪಕ್ಕಗಳಲ್ಲಿಯೂ ಸುತ್ತಿಕೊಂಡಿರುವ ಸಮುದ್ರ ಜಲವೆಲ್ಲವೂ ಪ್ರಳಯಕಾಲದಲ್ಲಿ ಹಾಲುಕ್ಕಿದಂತೆ ಅತಿಶೀಘ್ರವಾಗಿ ಆಕಾಶದವರಿವಿಗೂ ಮೇಲಕ್ಕೆ ಉಕ್ಕಿದುದಾಗಿ ಎರಡು ವರ್ಷಗಳ ಪರ್ಯಂತ ಅದೇ ರೀತಿಯಲ್ಲಿರುತ್ತದೆ. ಈ ಬಯಲೇ ಸಮಸ್ತಕ್ಕೂ ಸ್ಥಳವನ್ನು ಕೊಡುವಂಥದು. ಪ್ರಪಂಚವೂ ಮತ್ತು ಅದರಲ್ಲಿ ಅಣಗಿರುವ ಎಲ್ಲಾ ಜೀವರಾಶಿಗಳೂ ಈ ಬಯಲು ಸ್ವರೂಪವಾದ ಆತ್ಮನ ಅಂಶವೇ ಹೊರತು ಬೇರಲ್ಲ. ಅದರಿಂದ ಸಕಲ ಮಾನವರೂ ಈಶ್ವರನ ಅಂಶವೇ ಹೌದೆಂಬುದು ವ್ಯಕ್ತವಾಗುತ್ತದೆ. ಹೀಗೆ ಈಶ್ವರಾಂಶರಾದ ಮಾನವರೆಲ್ಲರನ್ನೂ ಆಸೆಯೆಂಬ ಮಾಯೆಯು ಮುಚ್ಚಿರುವುದರಿಂದ ಅವರು 'ಈಶ್ವರನೇ ಬೇರೆ, ತಾವೇ ಬೇರೆ' ಎಂಬ ಭೇದಭಾವವನ್ನು ಹೊಂದಿರುತ್ತಾರೆ. ಪ್ರತಿ ಸ್ತ್ರೀಪುರುಷರೂ ಮಾಯೆಯೆಂಬುದನ್ನು ತೊಲಗಿಸಿ ತಮ್ಮ ನಿಜಸ್ವರೂಪವನ್ನು ತಿಳಿದುಕೊಳ್ಳುವ ಪರ್ಯಂತ ಭಜನೆ, ಈಶ್ವರ ಪೂಜೆ, ಮಂತ್ರಜಪ ಮೊದಲಾದುವುಗಳನ್ನು ಮಾಡತಕ್ಕುದು ಅತ್ಯವಶ್ಯಕ.

ಇದುವರಿವಿಗೆ ಗಣನೆಯಿಲ್ಲದೆ ಎಷ್ಟೋ ಜನ ಚಕ್ರವರ್ತಿಗಳು, ರಾಜರು ಮತ್ತು ಇತರರು ಪ್ರಪಂಚದ ಆಸೆಯೆಂಬ ಮಾಯೆಯಿಂದ ಆವರಿಸಲ್ಪಟ್ಟು, ಕೆಲವು ವರ್ಷಗಳಕಾಲ ಈ ಭೂಮಿಯ ಮೇಲಿದ್ದು, ರಾಜ್ಯಪರಿಪಾಲನೆ ಕೃಷಿ, ಉದ್ಯೋಗ, ವ್ಯಾಪಾರಾದಿ ಕಾರ್ಯಗಳನ್ನು ಪ್ರತಿನಿತ್ಯವೂ ಮಾಡುತ್ತ ಬಂದು, ಕಡೆಯಲ್ಲಿ ಅಂದರೆ ಅವಸಾನಕಾಲದಲ್ಲಿ ಯಾವುದೋ ಒಂದು

ವ್ಯಾಧಿಗೆ ತುತ್ತಾಗಿ ಒಬ್ಬರಿಗೂ ಹೇಳದಂತೆ ಹೊರಟುಹೋಗುವ ವಿಚಾರವು ಪ್ರತಿಯೊಬ್ಬರಿಗೂ ತಿಳಿದಿರುವುದೇ ಆಗಿದೆ. ಇಂಥವರೆಲ್ಲರೂ ಆಸೆಯೆಂಬ ಮಾಯೆಯಿಂದ ಬಿಗಿಸಲ್ಪಟ್ಟಿರುವುದರಿಂದ ಅವರು ಈ ಆಸೆಯೆಂಬ ಬಂಧನ ದಿಂದ ಯಾವ ಜನ್ಮದಲ್ಲಿ ಬಿಡುಗಡೆಯನ್ನು ಹೊಂದುತ್ತಾರೆಯೋ ಆ ಜನ್ಮ ದಲ್ಲಿಯೇ ತಮ್ಮ ನಿಜಸ್ವರೂಪವಾದ ಬಟ್ಟಬಯಲಿನಲ್ಲಿ ಹೋಗಿ ಸೇರು ತ್ತಾರೆ. ಹಾಗೆ ತಮ್ಮ ಸ್ವಸ್ವರೂಪವಾದ ಬಯಲಿನಲ್ಲಿ ಲೀನವಾದಮೇಲೆ ಅವರು ಪುನರ್ಜನ್ಮವೆತ್ತದೆ ಸದಾ ಬಟ್ಟಬಯಲಾಗಿಯೇ ಇರುತ್ತಾರೆ. ಅಂದರೆ ಪರಬ್ರಹ್ಮನಲ್ಲಿ ಐಕ್ಯವಾಗುತ್ತಾರೆಂದು ಭಾವವು. ಹೀಗೆ ಅವರು ಐಕ್ಯವಾದಮೇಲೆ ಪುನಃ ಅವರಿಗೆ ಯಾವ ಸುಖದುಃಖಗಳ ಸಂಸರ್ಗವೂ ಇರದು. ಶರೀರವಿರುವವರಿವಿಗೆ ಪ್ರತಿ ಜನ್ಮದಲ್ಲಿಯೂ ಸುಖದುಃಖಗಳು ಅವರಿಗೆ ಬರುತ್ತಲೇ ಇರುತ್ತವೆ. ಜೀವಿಗಳು ದೇಹವನ್ನು ಪಡೆದ ಕೆಲವು ಸಂವತ್ಸರಗಳವರಿವಿಗೆ ಮಾತ್ರವೇ ಎಲ್ಲಾ ವಿಧವಾದ ಆಸೆಗಳಿಂದ ಕೂಡಿದ್ದು ಶರೀರವನ್ನು ಬಿಟ್ಟುಹೋದುದರಿಂದ ಫಲವೇನು? ಏನೂ ಇಲ್ಲವಲ್ಲವೇ?

ಸ್ತ್ರೀಪುರುಷರು ಎಲ್ಲಾ ವಿಧವಾದ ಕೋರಿಕೆಗಳು, ಆಸೆಗಳು, ದೇವತಾರಾಧನೆಗಳು, ಮಂತ್ರಜಪಗಳು ಇವೇ ಮೊದಲಾದುವುಗಳೆಲ್ಲವನ್ನೂ ಸಂಪೂರ್ಣವಾಗಿ ಮರೆತು ಸದಾ ಬಟ್ಟಬಯಲಾಗಿಯೇ ಇರಲು ಯತ್ನಿಸ ಬೇಕು. ಈ ಸ್ಥಿತಿಯಲ್ಲಿರುವುದನ್ನು ಅವರು ಸಾಧನೆಮಾಡುತ್ತ ಬಂದು ಕಡೆಯಲ್ಲಿ ಪ್ರಾಣ ಬಿಟ್ಟಮೇಲೆ ಬಟ್ಟಬಯಲಾದ ತಮ್ಮ ನಿಜಸ್ವರೂಪದ ಲ್ಲಿಯೇ ಹೋಗಿ ಸೇರುತ್ತಾರೆ. ಆಮೇಲೆ ಆ ಬಯಲುರೂಪಕ್ಕೆ ಯಾವ ಸುಖದುಃಖಗಳೂ ಅಂಟವು. ಯಾವ ರೀತಿಯಾದ ಪೂಜೆಗಳನ್ನಾಗಲಿ, ಮಂತ್ರಜಪಗಳನ್ನಾಗಲಿ ಮಾಡದೆ ಸರ್ವಕಾಲದಲ್ಲಿಯೂ ಬಟ್ಟಬಯಲಾ ಗಿರುವುದಕ್ಕಾಗಿ **ದ್ವಿತೀಯ ಭಾಗ (Vol. II.)** ದಲ್ಲಿ ಈ ವಿಷಯವನ್ನು "ಚಿದಾಕಾಶ ನಿರ್ವಿಕಲ್ಪ ಸಮಾಧಿಯೆಂಬುವುದೆಂಥದು?" ಎಂಬ ಪ್ರಕರಣ ದಲ್ಲಿ ತಿಳಿಸಿರುತ್ತೇವೆ. ಅದನ್ನು ಗಮನವಿಟ್ಟು ಪಠಿಸಿ ಅದರಲ್ಲಿ ಹೇಳಿರುವ ಪ್ರಕಾರವೇ ಸಾಧನೆ ಮಾಡುತ್ತ ಬಂದರೆ, ಆಗ ಬಟ್ಟಬಯಲು ಸ್ಥಿತಿ ಯನ್ನು ತಪ್ಪದೆ ಪಡೆಯಬಹುದು. ಈ ಗ್ರಂಥಕರ್ತರಾದ ಯೋಗೀಶ್ವರರು,

ಬರೆಯುವಾಗ, ಓದುವಾಗ, ಮಾತಾಡುವಾಗ, ಕೆಲಸ ಮಾಡುವಾಗ ಮತ್ತು ನಿದ್ರಿಸುವಾಗ ವಿನಹ ಉಳಿದ ಕಾಲದಲ್ಲೆಲ್ಲಾ ತಮ್ಮ ಯೋಗಬಲದಿಂದ ಸದಾ ಮನಸ್ಸಿನಲ್ಲಿ ಯಾವ ವಿಧವಾದ ಕೋರಿಕೆಗಳೂ ಇಲ್ಲದೆ, ಬಟ್ಟಬಯಲಾಗಿಯೇ ಇರುತ್ತಾರೆ. ಆದುದರಿಂದ ಆ ಬಯಲಿನ ವಿಷಯವಾಗಿ ತಮ್ಮ ಸ್ವಾನುಭವವೆಲ್ಲವನ್ನೂ ಉಪನಿಷದ್ವಾಕ್ಯಗಳ ಪ್ರಮಾಣಗಳ ಸಹಿತ ಇವರಿಂದ ರಚಿಸಲ್ಪಟ್ಟಿರುವ ಗ್ರಂಥದ ಎರಡು ಭಾಗಗಳಲ್ಲಿಯೂ ತಿಳಿಸಿರುತ್ತಾರೆ. ಇವರ ಗ್ರಂಥಗಳನ್ನು ಓದುತ್ತ ಓದುತ್ತ ಈ ಗ್ರಂಥಕರ್ತರ ಸ್ವಾನುಭವಗಳೆಲ್ಲವೂ ನಿಮಗೆ ಪ್ರತ್ಯಕ್ಷವಾಗುವುದರಲ್ಲಿ ಸಂಶಯವಿಲ್ಲ.

ಈಗ ಈ ಪ್ರಪಂಚದಲ್ಲಿರುವ ಮಾನವರೆಲ್ಲರೂ ಕೆಲವು ಸಂವತ್ಸರಗಳಿದ್ದು ಮೃತಿಹೊಂದಿದ ಮೇಲೆ ಪುನಃ ಯಾವುದೋ ದೇಶದ ಯಾವುದೋ ಜಿಲ್ಲೆಯ ಯಾವುದೋ ಗ್ರಾಮದ ಯಾವುದೋ ಮನೆಯಲ್ಲಿ ಹುಟ್ಟಿ ಕೆಲವು ಕಾಲ ಮಾತ್ರವೇ ತಮಗೆ ಆ ಜನ್ಮದಲ್ಲಿ ಲಭಿಸಿದ ಬಂಧು ಮಿತ್ರರೊಡಗೂಡಿ ಸುಖದುಃಖಗಳನ್ನನುಭವಿಸುತ್ತ ಪುನಃ ಅವರೆಲ್ಲರನ್ನು ತ್ಯಜಿಸಿ ಮರಣವನ್ನು ಹೊಂದಿ ತಮ್ಮ ಕರ್ಮಕ್ಕನುಗುಣವಾಗಿ ಮತ್ತೆ ಬೇರೊಂದು ಮನೆಯಲ್ಲಿ ಹೋಗಿ ಹುಟ್ಟುವವರಾಗುತ್ತಾರೆ. ಹೀಗೆ ಎಷ್ಟೋ ಲೆಕ್ಕವಿಲ್ಲದ ಗೃಹಗಳಲ್ಲಿ ಹೋಗಿ ಹುಟ್ಟುತ್ತ ಸಾಯುತ್ತ ಬಂದು ಕಡೆಯ ಲ್ಲಿಯಾವುದೋ ಒಂದು ಜನ್ಮದಲ್ಲಿ ತಮ್ಮ ಸ್ವಂತಗೃಹಕ್ಕೆ ಹೋಗಿ ಸೇರೇ ಸೇರುತ್ತಾರೆ. ಇವರೆಲ್ಲರಿಗೂ ಸ್ವಂತ ಗೃಹವಾವುದೆಂದರೆ, ಇದುವರಿವಿಗೆ ಹಿಂದೆ ವಿಶದಪಡಿಸಿದ **ಬಟ್ಟಬಯಲಲ್ಲದೆ** ಬೇರಲ್ಲ. ಆ ಬಟ್ಟಬಯಲಿನಲ್ಲಿ ಇವರೆಲ್ಲರೂ ಹೋಗಿ ಕಲೆತ ಮೇಲೆ ಇವರಿಗೆ ಪುನರ್ಜನ್ಮವು ಬರಲಾರದು. ಇದಕ್ಕೇ **ಮೋಕ್ಷ** Salvation) ಎಂದು ಹೇಳುತ್ತಾರೆ.

ಪ್ರಪಂಚದ ಧರ್ಮವು ಹೀಗಿರುವುದರಿಂದ ಈ ಗ್ರಂಥವನ್ನು ಪಠಿಸುವ ಪ್ರತಿಯೊಬ್ಬ ಸ್ತ್ರೀಪುರುಷರೂ ಪರಿಹಾಸಕ್ಕಾದರೂ ಸುಳ್ಳು ನುಡಿಯುವುದು, ಪರಸ್ವತ್ತಾಪಹರಣಕ್ಕೆ ಮನಗೊಡುವುದು, ಕ್ರೋಧಬುದ್ಧಿ, ತಾಳ್ಮೆಯಿಲ್ಲದಿರುವುದು, ಪರಸ್ತ್ರೀಗಮನ ಮತ್ತು ಈಬಗೆಯಾದ ಎಷ್ಟು ದುರ್ಗುಣಗಳಿವೆಯೋ ಅವೆಲ್ಲವನ್ನೂ ಸಂಪೂರ್ಣವಾಗಿ ಬಿಟ್ಟು ಸದಾ ಸತ್ಯ

ಪಥದಲ್ಲಿಯೇ ನಡೆಯುತ್ತಿರಬೇಕು. 'ಸತ್ಯಂ ಬ್ರಹ್ಮ' ಎಂಬ ಉಪನಿಷದ್ವಾಕ್ಯದಂತೆ ಸತ್ಯವೇ ಪರಮಾತ್ಮನ ಸ್ವರೂಪವು. ಈ ಸತ್ಯವೇ ನಿಮ್ಮನ್ನು ಕಾಪಾಡುವುದು. ಇವೆಲ್ಲವೂ ಮೋಕ್ಷಸಾಧನೆಗೆ ಪಥ್ಯವಾದದ್ದೆಂದು ನೀವು ತಿಳಿದುಕೊಳ್ಳಬೇಕು.

ಪರಮಾತ್ಮನಾದ ಈಶ್ವರನು ಅತ್ತಿತ್ತ ಕದಲದೆ ಇದ್ದೆಡೆಯಲ್ಲಿಯೇ ಇದ್ದು ಎಲ್ಲೆಲ್ಲಿಯೂ ಪರಿಪೂರ್ಣನಾಗಿ ಒಂದೇ ಬಟ್ಟಬಯಲಾಗಿರುತ್ತಾನೆ. ಈ ಬಟ್ಟಬಯಲು ಚಲಿಸಬಲ್ಲುದೇ? ಅದು ಇದ್ದ ಸ್ಥಳವನ್ನು ಬಿಟ್ಟು ಎಂದಿಗೂ ಕದಲದು. ಪ್ರಪಂಚದಲ್ಲಿರುವ ವಸ್ತುಗಳೆಲ್ಲವೂ ಬಟ್ಟಬಯಲು ಸ್ವರೂಪನಾದ ಈಶ್ವರನಲ್ಲಿಯೇ ಅಣಗಿರುತ್ತವೆ. ಆದುದರಿಂದ ಯಾವ ಪೂಜೆಗಳನ್ನೂ, ಯಾವ ಮಂತ್ರಜಪಗಳನ್ನೂ, ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲೆಣಿಸದೆ ಎಲ್ಲರೂ ಸುಮ್ಮನಿದ್ದುದೇ ಆದರೆ, ಅವರೂ ಬಟ್ಟಬಯಲಾಗಿಯೇ ಆಗುತ್ತಾರೆ. ಯಾವಾಗ ಬಟ್ಟಬಯಲಾಗುತ್ತಾರೆಯೋ ಆಗಲೇ ಇವರೂ, ಪರಮಾತ್ಮನಾದ ಸಾಕ್ಷಾತ್ ಈಶ್ವರ ಸ್ವರೂಪವನ್ನೇ ಹೊಂದುತ್ತಾರೆ. ಏತಕ್ಕೆಂದರೆ, ಈಶ್ವರನ ರೂಪವು ಬಟ್ಟಬಯಲಾಗಿದೆ, ಹಾಗೆಯೇ ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲೆಣಿಸದಿದ್ದುದೇ ಆದರೆ ಇವರೂ ಬಟ್ಟಬಯಲಾಗುತ್ತಾರೆ. ಆಗ ಬಟ್ಟಬಯಲಾದ ಈಶ್ವರನಿಗೂ ಇವರಿಗೂ ಯಾವ ಭೇದವೂ ಇಲ್ಲದೆ, ಜೀವಾತ್ಮರಾದ ತಾವೂ, ಪರಮಾತ್ಮನಾದ ಈಶ್ವರನೂ ಇವೆರಡೂ ಒಂದಾಗಿ ಕಲೆತುಹೋಗುತ್ತವೆ. 'ಈಶ್ವರನೇ ಬೇರೆ, ನಾವೇ ಬೇರೆ' ಎಂಬುದೆಂದಿಗೂ ಇಲ್ಲವು. ನಾವೆಲ್ಲರೂ ಈಶ್ವರನ ಅಂಶವೇ ಹೌದು. ನಮ್ಮನ್ನು ಆಸೆಯೆಂಬ ಮಾಯೆಯು ತೆರೆಯಂತೆ ಅಡ್ಡವಾಗಿ ಮುಚ್ಚಿರುವುದರಿಂದ ನಮಗಿಂತಲೂ ಬೇರೊಬ್ಬ ಈಶ್ವರನೆಂಬುವನಿದ್ದಾನೆಂದು ಭ್ರಮೆಗೊಂಡು ಮೋಸಹೋಗಿ ವಿಗ್ರಹಗಳೇ ದೇವರೆಂದು ನಿಶ್ಚಯಿಸಿ ಆ ವಿಗ್ರಹಗಳಿಗೆ ಬಿದ್ದು ಬಿದ್ದು ನಮಸ್ಕರಿಸುತ್ತಿದ್ದೇವೆ. ಇದುವರಿವಿಗೂ ಎಷ್ಟೋ ಮಂದಿ ತಮ್ಮ ಮರಣಕಾಲದವರಿವಿಗೂ ಈಶ್ವರ ಪೂಜೆಯನ್ನು ಮಾಡಿ ಮೃತಿಹೊಂದಿರುತ್ತಾರೆ. ಇಂಥವರಲ್ಲಿ ಯಾರಾದರೂ ಈಶ್ವರನನ್ನು ನೋಡಿರುತ್ತಾರೆಯೇ? ಯಾರೂ ನೋಡಿಲ್ಲವು. ನಮ್ಮ

"ಅಯ್ಯೋ ಸ್ವಾಮಿ, ನನ್ನನ್ನು ಮಾಯಾ ಪ್ರಪಂಚದಲ್ಲಿ ಬೀಳುವಂತೆ ನೂಕುತ್ತೀಯಾ?" ಎಂದು ಶಿಶುವು ಎರಡು ಕೈಗಳನ್ನು ಜೋಡಿಸಿಕೊಂಡು ತನ್ನ ತಲೆಯಮೇಲಿಟ್ಟು ಈಶ್ವರನನ್ನು ಬೇಡುತ್ತ, ಗರ್ಭ ಕೋಶದಿಂದ ಹೊರ ಹೊರಟು ಈ ಲೋಕವನ್ನು ಕಾಣುತ್ತದೆ. ಇವೆಲ್ಲವೂ ಈ ಗ್ರಂಥ ದಲ್ಲಿ ವಿಸ್ತಾರವಾಗಿ ಹೇಳಿದೆಯಾದುದರಿಂದ, ಅದನ್ನು ಓದಿ ಎಲ್ಲಾ ವಿಷಯ ಗಳನ್ನು ತಿಳಿದುಕೊಳ್ಳಬೇಕು. ಮತ್ತೆ, ಕಾಮ, ಕ್ರೋಧ, ಲೋಭ, ಮೋಹಾದಿ ದಶ ಗುಣಗಳನ್ನೂ ಕುರಿತು ವಿಶೇಷವಾಗಿ ಇದರಲ್ಲಿ ಹೇಳ ಲಾಗಿದೆ. ಅಂದರೆ, ಹೆಂಡತಿಯಮೇಲೆ ಆಸೆ, ಕುಮಾರರ ಮೇಲೆ ಪ್ರೀತಿ, ಭಂಗಾರ ಬೆಳ್ಳಿಯಲ್ಲಿ ಆಸಕ್ತಿಯೆಂಬ ಈಷಣತ್ರಯಗಳು ಜೀವನಿಂದೊಡ ಗೂಡಿ ಬೇರೆ ಶಿಶುವಿನ ಗರ್ಭದಲ್ಲಿ ಪ್ರವೇಶಿಸಿ ಹುಟ್ಟುತ್ತದೆಯೆಂದು ಹೇಳಿದೆ. ಇಂತಹ ಬಂಧಕಗಳಿಂದ ಕೂಡಿ ಶಿಶುವು ಹುಟ್ಟಿದ ಮೇಲೆ ಅದು ಬೆಳೆಯುತ್ತ ಬರುತ್ತದೆ. ಹಾಗೆ ಬೆಳೆಯುತ್ತಿರುವಾಗ ಆ ಶಿಶುವಿನ ಜೀವದೊಡನೆ ಬಂದು ಗುಪ್ತವಾಗಿದ್ದ ಹಿಂದೆ ಹೇಳಿದ ಕಾಮ ಕ್ರೋಧಾದಿ ದಶ ಗುಣಗಳೂ, ಈಷಣತ್ರಯಗಳೂ ಶಿಶುವಿನ ಜತೆಯಲ್ಲಿಯೇ ಬೆಳೆ ಯುತ್ತಬಂದು ಕಡೆಗೆ ವಿವಾಹವಾದನಂತರ ಪುರುಷನಿಗೆ ಮಿತಿಯಿಲ್ಲದೆ ಆಸೆಯು ಹೆಚ್ಚಿ ಆತನು ಮೋಸ ಹೋಗುತ್ತಿದ್ದಾನೆ. ಈ ರೀತಿಯಾಗಿ ಮೋಸಹೋಗುತ್ತಿರುವ ಜೀವಿಗಳ ಮೇಲೆ ಪರಮೇಶ್ವರನಿಗೆ ದಯೆ ಹುಟ್ಟಿ ಆತನು ತನ್ನ ಶ್ವಾಸಗಳಿಂದ ವೇದಗಳನ್ನು ಹುಟ್ಟಿಸಿ ಆಮುಖೇನ ಜೀವರಿಗೆ ಚಿತ್ತ ಶುದ್ಧಿ ಹುಟ್ಟಿ ಅದರಿಂದ ಮುಕ್ತಿ ಸ್ಥಾನವನ್ನು ಅವರು ಪಡೆಯುವು ದಕ್ಕಾಗಿ ಆ ವೇದಗಳನ್ನು ಕರ್ಮಕಾಂಡ, ಜ್ಞಾನಕಾಂಡಗಳೆಂದು ವಿಭಾಗಿಸಿ, ತಾನು ಶಂಖಚಕ್ರ ಗದಾಧರನಾಗಿ ವಿಷ್ಣುವೆಂಬ ಹೆಸರಿನಿಂದಲೂ ಮತ್ತು ಡಮರುಗ ತ್ರಿಶೂಲಗಳಿಂದ ಕೂಡಿದ ಧವಳ ಶರೀರದಿಂದ ಮಹೇಶ್ವರನೆಂಬ ಹೆಸರಿನಿಂದಲೂ ದೇಹವನ್ನು ಧರಿಸಿ, ವೈಕುಂಠ ಕೈಲಾಸಗಳಲ್ಲಿ ಪ್ರವೇಶಿಸಿ ಜೀವರಿಗೆ ಅನುಗ್ರಹಿಸಿದನು. ಹೀಗೆ ದೇವತಾ ರೂಪದಿಂದ ನಿಂತು ಅನು ಗ್ರಹಿಸಿದರೂ ಜೀವರಿಗೆ ಜ್ಞಾನವುಂಟಾಗದಿರಲು ಆ ವಿಷ್ಣುವಿನ ಅಂಶದಿಂದ ಲೇ ಪರಮಾತ್ಮನು ವ್ಯಾಸ ಮಹರ್ಷಿಯಾಗಿ ಹುಟ್ಟಿ ಆ ವೇದಗಳ ಸಾರಾಂಶ ವೆಲ್ಲವನ್ನೂ ತೆಗೆದು ದಾರದಲ್ಲಿ ಮುತ್ತುಗಳನ್ನು ಪೋಣಿಸುವಂತೆ ಅದಕ್ಕೆ

ತಕ್ಕಂತೆ ಬ್ರಹ್ಮಸೂತ್ರಗಳನ್ನು ಬರೆದನು. ಇವುಗಳ ಸಾರಾಂಶವನ್ನು ಕೂಡ ತಿಳಿದುಕೊಳ್ಳಲು ಶಕ್ತಿ ಸಾಲದೆ, ಅನೇಕ ಮತಸ್ಥರು ತಮ್ಮ ತಮ್ಮ ಯುಕ್ತಿಗೆ ಸರಿಯಾಗಿ ಆ ಸೂತ್ರಗಳಿಗೆ ತಕ್ಕ ವ್ಯಾಖ್ಯಾನಗಳನ್ನು ಮಾಡಿ ಕೊಂಡರು. ಇವೆಲ್ಲವೂ ಸರಿಯಲ್ಲವೆಂದು ತಿಳಿದು ಯಥಾರ್ಥ ವಿಷಯ ಗಳನ್ನು ಮಾನವರಿಗೆ ಬೋಧಿಸುವುದಕ್ಕಾಗಿಯೇ ಶ್ರೀ ಶಂಕರಾಚಾರ್ಯರು ಅವತರಿಸಿ, ಆ ಬ್ರಹ್ಮಸೂತ್ರಗಳಿಗೆ ಪದವಿಭಾಗಮಾಡಿ, ಸರಿಯಾದ ಅರ್ಥ ವನ್ನು ತಿಳಿಸುತ್ತಾ, ಶಾರೀರ ಭಾಷ್ಯಗಳನ್ನೂ ಬರೆದಿಟ್ಟರು.

ಇವೆಲ್ಲವೂ ಸಂಸ್ಕೃತ ಭಾಷೆಯಲ್ಲಿವೆಯಾದಕಾರಣ, ಆ ಭಾಷಾ ಜ್ಞಾನವುಳ್ಳವರಿಗೆ ಮಾತ್ರ ತಿಳಿಯುವುದೇ ಹೊರತು ಇತರರಿಗೆ ತಿಳಿಯ ದಾದುದರಿಂದಲೇ ಈಗ ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾ ಮೃತ" ವೆಂಬ ಗ್ರಂಥವು ಚಂಗಲ್ಪಟ್ಟು ಜಿಲ್ಲೆ ಪಂಜೇಟ್ಟಿಯಲ್ಲಿ ವಾಸಿಸುವ ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರೆಂಬುವರಿಂದ ಬಹಳ ಸುಲಭ ಶೈಲಿಯಲ್ಲಿ ಶೃತಿ, ಸ್ಮೃತಿ ಪ್ರಮಾಣಗಳೊಡಗೂಡಿ ಗದ್ಯರೂಪ ವಾಗಿ ಆಂಧ್ರ, ದ್ರವಿಡ, ಇಂಗ್ಲೀಷು, ಕರ್ನಾಟಕ ಮೊದಲಾದ ಭಾಷೆಗಳಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥ ಪಠನೆಯಿಂದ 'ಬ್ರಹ್ಮನುತಾನೇ' ಎಂದು ತಿಳಿದುಕೊಂಡು ಆನಂದ ಪಡುವುದಕ್ಕೆ ಅನುಕೂಲವಿದೆ. ಆದುದರಿಂದ ಇದು ಒಬ್ಬೊಬ್ಬರಿಗೂ ಬಹು ಮುಖ್ಯ ಗ್ರಂಥವಾಗಿರುತ್ತದೆ. ಲೋಕ ದಲ್ಲಿರುವ ಜನಗಳೆಲ್ಲರು, ತಮಗೆ ಹೆಂಡತಿ, ಮಕ್ಕಳು, ಧನ ಧಾನ್ಯಾದಿ ಸಂ ಪತ್ತುಗಳಿರಬೇಕೆಂದೂ, ಇಷ್ಟೇ ಅಲ್ಲದೆ ಮೋಕ್ಷವು ಬರಬೇಕೆಂದೂ ಇಚ್ಛೆಸು ತ್ತಾರೆ. ಇವೆರಡು ಹೇಗೆ ಒಟ್ಟಿಗೆ ಉಂಟಾದಾವು? ಭಾರ್ಯಾ ಪುತ್ರ ಧನ ಧಾನ್ಯಾದಿ ಸಂಪತ್ತುಗಳೆಲ್ಲವೂ ಮೋಕ್ಷ ಸಾಧನೆಗೆ ವಿರೋಧವಾಗಿರುವುವು ಗಳು. ಈ ಆಸೆಗಳು ಸ್ತ್ರೀ ಪುರುಷರಿಗೆ ಇಲ್ಲವಾದರೆ ಅವರು ಮೋಕ್ಷವೆಂಬ ಶ್ರೇಷ್ಠ ಭವನವನ್ನು ತಪ್ಪದೆ ಹೊಂದಬಹುದು. ಮೋಕ್ಷವೆಂದರೆ ಏನೋ ಎಂದು ಭಾವಿಸಬಾರದು. ಮೋಕ್ಷ ಪದದ ಅರ್ಥವು ಬಿಡುಗಡೆ ಎಂದು. ಬಿಡುಗಡೆಯೆಂದರೆ ಸಕಲ ಬಂಧಗಳಿಂದಲೂ ತಪ್ಪಿಸಿಕೊಳ್ಳುವುದು. ಈ ಬಂಧವೆಂಬ ಆಸೆ ಅನೇಕ ಕೋಟಿ ಜನ್ಮಗಳಿಂದ ಸ್ತ್ರೀ ಪುರುಷರನ್ನು ಹಿಂಬಾ

ಲಿಸಿಯೇ ಬರುತ್ತಿದೆಯಾದುದರಿಂದ, ಆ ಹಾಳು ಆಸೆಯೇ ಮೋಕ್ಷಗೃಹದ ಪ್ರವೇಶಕ್ಕೆ ಅಡಚಣೆಯಾಗಿ ನಿಂತಿರುವುದು. ಈ ಆಸೆಗೆ ಅವಿದ್ಯೆಯೆಂದೂ, ಅಜ್ಞಾನವೆಂದೂ, ಮಾಯೆಯೆಂದೂ ಹೆಸರುಗಳು. ಹೇಗೆಂದರೆ, ನಶ್ವರವಾದ ವಸ್ತುಗಳಲ್ಲಿ ಶಾಶ್ವತವಾದವುಗಳೆಂಬ ಭ್ರಮೆಯನ್ನುಂಟು ಮಾಡುವುದೇ ಮಾಯೆ. ಈ ಮಾಯಾ ಸ್ವರೂಪವಾದ ಭ್ರಾಂತಿಯ ವಿಷಯವು ಈ ಕೆಳಗೆ ವಿವರಿಸಿದೆ.

ನಿಮ್ಮ ತಂದೆ, ನಿಮ್ಮ ತಾಯಿ, ನಿಮ್ಮ ತಾತ, ನಿಮ್ಮಜ್ಜಿ, ನಿಮ್ಮ ಮುತ್ತಾತ, ಮುತ್ತಜ್ಜಿ, ಅವರ ತಂದೆ ತಾಯಿಗಳು ಇವೇ ಮೊದಲಾದವರು ತಮ್ಮ ತಮ್ಮ ಮಕ್ಕಳು ಮೊಮ್ಮಕ್ಕಳ ವಿಷಯದಲ್ಲಿಯೂ ಧನಧಾನ್ಯ ಭೂಷಣಾದಿಗಳ ವಿಷಯದಲ್ಲಿಯೂ ಕೆಲವು ಸಂವತ್ಸರಗಳು ಮಾತ್ರವೇ ತಾವು ಜೀವಿಸಿರುವವರಿಗೂ, ಇವೆಲ್ಲವೂ ತಮ್ಮದೆಂದೂ ಇವರೆಲ್ಲರೂ ತಮ್ಮವರೆಂದೂ ಹೇಳುತ್ತಾ, ಕಡೆಯಲ್ಲಿ ತಮ್ಮ ಹೆಂಡತಿ ಮಕ್ಕಳು ಮೊಮ್ಮಕ್ಕಳನ್ನೂ ಎಲ್ಲಾ ಭೋಗಗಳನ್ನು ತೊರೆದು ತಾವೊಬ್ಬರೇ ಹೊರಟು ಕಣ್ಮರೆಯಾದ ವಿಷಯವು ಪ್ರತಿಯೊಬ್ಬರಿಗೂ ತಿಳಿದ ವಿಷಯವೇ ಆಗಿದೆ. ಆದುದರಿಂದ ಕೆಲವು ದಿನಗಳಲ್ಲಿಯೇ ನಾಶವಾಗುವ ಸ್ತ್ರೀ ಪುರುಷರು ಧನ, ಧಾನ್ಯ, ವಸ್ತುವಾಹನಾದಿಗಳನ್ನು "ನನ್ನದು, ನನ್ನದು" ಎಂದು ಭಾವಿಸಿ ಹೇಳುತ್ತಲೇ ಸಾಯುತ್ತಿರುವವರು ಕೋಟ್ಯಂತರವಾಗಿದ್ದಾರೆ. ಈ ವಿಧವಾಗಿ ಕೆಲವು ದಿನಗಳಲ್ಲಿಯೇ ನಾಶ ಹೊಂದುವ ವಸ್ತುಗಳೆಲ್ಲವನ್ನೂ ನಿತ್ಯವೆಂದು ಭಾವಿಸುವಂತಹ ಭ್ರಾಂತಿಯೇ ಮಾಯೆಯಲ್ಲದೆ ಮಾಯೆ ಬೇರಿಲ್ಲ. ಈ ಮಾಯೆಯೇ ಅವಿದ್ಯೆಯು, ಅಜ್ಞಾನವು ಎಂದು ಹಿಂದೆಯೇ ಹೇಳಿದೆ. ಆದ್ದರಿಂದ ಎಲ್ಲಾ ಜನಗಳೂ ಆಸೆಗಳನ್ನು ಬಿಟ್ಟು ಶ್ರೇಷ್ಠವಾದ ಮುಕ್ತಿ ಸಾಮ್ರಾಜ್ಯವನ್ನು ಪಡೆಯುವುದಕ್ಕಾಗಿ ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ"ವು ಬಹಳ ಉತ್ತಮವಾದ ಗ್ರಂಥವೇ ಸರಿ. ಈ ಗ್ರಂಥವೆಲ್ಲವೂ ವೇದಾಂತ ರಹಸ್ಯಗಳನ್ನೇ ಬೋಧಿಸುತ್ತದೆ. ವೇದಾಂತವೆಂದರೆ, ಋಕ್, ಯಜುಸ್, ಸಾಮ, ಅಥರ್ವಣಗಳೆಂಬ ನಾಲ್ಕು ವೇದಗಳನ್ನು ಪರಿಶೋಧಿಸಿ ಬರುತ್ತಾ ಬರುತ್ತಾ ಕಡೆಯಲ್ಲಿ ಮನಸ್ಸನ್ನು ಒಂದೇ ವಿಧವಾದ ಧ್ಯಾನದಲ್ಲಿ ನಿಲ್ಲಿಸಿ, ಆ ನಂತರ ಆ ಧ್ಯಾನವನ್ನು ಕೂಡ ಮರೆತರೆ

ತಾನೇ ಬ್ರಹ್ಮನಾಗುತ್ತಾನೆಂಬುವ ವಿಷಯವು ವೇದಗಳ ಅಂತ್ಯದಲ್ಲಿ ಹೇಳಿದೆ. ಆ ಅಂತ್ಯವಾದ ವಿಷಯವು ಯಾವುದೋ ಅದೇ ವೇದಾಂತವು. ಆ ವೇದಾಂತವನ್ನೇ ಈ ಗ್ರಂಥದಲ್ಲಿ ವಿವರಿಸಿರುವುದು. ಕಪಿಯಂತೆ ಅನೇಕ ವಿಧವಾಗಿ ಓಡಾಡುತ್ತಿರುವ ಮನಸ್ಸನ್ನು ಸ್ವೇಚ್ಛೆಯಾಗಿ ಬಿಡದೆ ಬ್ರಹ್ಮ ಸೂತ್ರವೆಂಬ ಶ್ವಾಸದಿಂದ ಬಿಗಿಗಟ್ಟಿ ಒಂದೇ ಸ್ಥಳದಲ್ಲಿ (ಸ್ತಬ್ಧವಾಗಿ) ನಿಲ್ಲಿಸಿ ಅನಂತರ ಯಾವ ಸ್ಥಳವೂ ಇಲ್ಲದಂತೆ ಮನಸ್ಸನ್ನು ಶೂನ್ಯವಾಗಿ ಮಾಡಿದ್ದೇ ಆದರೆ ಆ ಕ್ಷಣವೇ ಆನಂದವುಂಟಾಗುತ್ತದೆ. ಮನಸ್ಸು ಎಲ್ಲಿಯವರಿವಿಗೂ ಓಡಾಡುತ್ತಿರುತ್ತದೋ ಅಲ್ಲಿಯವರಿವಿಗೂ ಆನಂದವುಂಟಾಗಲಾರದು.

ಆದ್ದರಿಂದಲೇ, ಯಾವ ಮಂತ್ರಗಳನ್ನೂ ಜಪಗಳನ್ನೂ ಪೂಜೆಗಳನ್ನೂ ಮಾಡುವಂತಹ ಕೆಲಸವನ್ನು ಮನಸ್ಸಿಗಿಡದೆ ಆಕಾಶ ಸ್ವರೂಪನಾದ ಪರಮಾತ್ಮನಲ್ಲಿ ಅದನ್ನು ಲೀನಮಾಡಬೇಕು. ಹೀಗೆ ಮಾಡುವುದೇ ವೇದಗಳ ರಹಸ್ಯಾರ್ಥವು. ಮೊದಲು ಮನಸ್ಸನ್ನು ಪರಮಾತ್ಮನಲ್ಲಿ ಐಕ್ಯಮಾಡುವುದೆಂಬುದು ಬಹಳ ಕಷ್ಟವು. ಮನಸ್ಸನ್ನು ಒಂದೇ ಕಡೆ ನಿಲ್ಲಿಸುವುದಕ್ಕಾಗಿಯೇ ಪ್ರಾರಂಭದಲ್ಲಿ ವಿಗ್ರಹಾರಾಧನೆ ಮೊದಲಾದವುಗಳನ್ನು ಆಚರಿಸಬೇಕು. ಹೀಗೆ ಮಾಡುತ್ತ ಬಂದರೆ ಮನಸ್ಸು ಒಂದೇ ಸ್ಥಳದಲ್ಲಿ ನಿಂತು ಆ ಮೇಲೆ ಆ ಒಂದು ಸ್ಥಳವೂ ಕೂಡ ತನಗೆ ತಾನೇ ಮರೆಯಾಗುತ್ತದೆ. ಹೀಗೆ ಮಾಡದೆ ಜೀವಿಗಳು ಅನೇಕ ಅಕ್ರಮಗಳನ್ನಾಚರಿಸುತ್ತ, ಪಾಪಗಳ ಮೂಟೆಯನ್ನು ಹೊತ್ತುಕೊಂಡು, ಅನೇಕ ವೇಳೆ ಕೀಳು ಜಾತಿಯ ಯೋನಿಗಳಲ್ಲಿ ಹುಟ್ಟಿ, ಅನೇಕ ವಿಧ ದುಃಖಗಳನ್ನನುಭವಿಸಿ, ಪುನಃ ಹುಟ್ಟುವುದು ಪುನಃ ಸಾಯುವುದು, ಎಂಬ ಈ ವಿಧವಾದ ಮಾಯಾಂಧಕಾರದಲ್ಲಿ ಸಿಕ್ಕಿಬಿದ್ದು, ದಾರಿಗಾಣದೆ ದುಃಖವೆಂಬ ಸಮುದ್ರದಲ್ಲಿ ಮುಳುಗಿರುವ ಇಂತಹ ಸ್ತ್ರೀಪುರುಷರನ್ನು ಸೃಷ್ಟಿಮಾಡುವುದಕ್ಕಾಗಿ ಬ್ರಹ್ಮದೇವನಿಗೆ ಬಹಳ ಕಷ್ಟವನ್ನುಂಟುಮಾಡುತ್ತಿದ್ದಾರೆ. "ಪ್ರಪಂಚವನ್ನೂ, ಜೀವಿಗಳನ್ನೂ ಸೃಷ್ಟಿಮಾಡಿ ಆ ಜೀವಿಗಳ ಕೋರಿಗಳನ್ನೆಲ್ಲಾ ಸಲ್ಲಿಸು," ಎಂದು ಈಶ್ವರನು ಬ್ರಹ್ಮನಿಗೆ ಆಜ್ಞಾಪಿಸಿರುವುದರಿಂದ ಸ್ತ್ರೀ ಪುರುಷರು ನಿತ್ಯಾನಂದ ಪದವಿಯನ್ನು ಕೋರದೆ ಕೆಲವು ದಿನಗಳೊಳಗಾಗಿ

ನಾಶವಾಗುವಂತಹ ಅಲ್ಪಸುಖಗಳನ್ನಪೇಕ್ಷಿಸಿ ಅವುಗಳನ್ನೇ ಬೇಡುತ್ತಾರೆ. ಜನಗಳು ಮೋಹವೆಂಬ ಕತ್ತಲೆಯಲ್ಲಿ ಸಿಕ್ಕಿ ಕೇವಲ ವಿಷಯಾನಂದ ಸುಖದಲ್ಲಿಯೇ ಮಗ್ನರಾಗಿ ನಾಶ ಹೊಂದುತ್ತಾರೆ.

ಜನರು ತಮ್ಮ ತಮ್ಮ ಹೃದಯ ಕಮಲಗಳಲ್ಲಿರುವ ಆಶಾಪಾಶವೆಂಬ ಕೊಳೆಯನ್ನು ತೊಳೆದು ಹೋಗಲಾಡಿಸದೆ ಶರೀರದ ಮೇಲಿನ ಕೊಳೆಯನ್ನು ತೊಳೆದು ಬೆಳ್ಳಗೆ ವಿಭೂತಿ ರೇಖೆಗಳನ್ನು ಧರಿಸಿ ರುದ್ರಾಕ್ಷಿ ಮಾಲೆಗಳನ್ನು ಕೊರಳಲ್ಲಿ ಹಾಕಿಕೊಂಡು ಮಣೆಯಮೇಲೆ ಕುಳಿತು ಕಣ್ಣು ಮುಚ್ಚಿ ಮಂತ್ರಗಳನ್ನು ಜಪಿಸುತ್ತಿರುವರು. ಇಂತಹ ಮಂತ್ರ ಜಪಗಳೆಲ್ಲವೂ ಹೃದಯ ಕಮಲದಲ್ಲಿ ಅನೇಕ ಜನ್ಮಗಳಿಂದಲೂ ಹೆಚ್ಚುತ್ತ ಬರುತ್ತಿರುವ ಆಸೆಯೆಂಬ ಕೊಳೆಯನ್ನು ಕಳೆಯಲಾರವು. ಯಾವ ಮಂತ್ರಗಳನ್ನೂ ಯಾವ ಜಪಗಳನ್ನೂ ಯಾವ ಪೂಜೆಗಳನ್ನೂ ಮಾಡುವ ಕೆಲಸಗಳನ್ನು ಮನಸ್ಸಿನಲ್ಲಿ ಯೋಚಿಸದೆ ಸುಮ್ಮನಿದ್ದು, ತನ್ನ ದೇಹವನ್ನೇ ತಾನು ಮರೆತು, ಕಲ್ಲು ಬೊಂಬೆಯಂತೆ ನಿಂತು, ಬ್ರಹ್ಮಾನಂದ ಸುಖವನ್ನು ಒಳಗೇ ಅನುಭವಿಸುತ್ತಿರಬೇಕು. ಇದಕ್ಕಾಗಿ ಕೆಲವರು ದೊಡ್ಡವರನ್ನು ದೃಷ್ಟಾಂತವಾಗಿ ಈ ಕೆಳಗೆ ಉದಹರಿಸಿದೆ.

ಬೆಟ್ಟದ ಗುಹೆಗಳಲ್ಲಿ ಋಷಿಗಳಿದ್ದು ತಪಸ್ಸನ್ನು ಮಾಡುತ್ತಿದ್ದಾರೆಂಬ ವಿಷಯವು ಎಲ್ಲರಿಗೂ ತಿಳಿದಿದೆ. ಆ ತಪಸ್ಸಿನ ರಹಸ್ಯಾರ್ಥವನ್ನು ಈ ಕೆಳಗೆ ವಿಶದಪಡಿಸಿದೆ. ತಪಸ್ಸು ಮಾಡುವವರು ತಮಗೆ ಯಾವುದಾದರೂ ಒಂದು ಫಲವು ದೊರಕಬೇಕೆಂದು ಇಚ್ಛಿಸದೆ, ಯಾವ ದೇವರ ವಿಗ್ರಹದ ರೂಪವನ್ನೂ ತಮ್ಮ ಮನಸ್ಸಿನಲ್ಲಿ ನೆನೆಯದೆ, ಯಾವ ಮಂತ್ರ ಜಪವನ್ನೂ ಮಾಡದೆ, ತಮ್ಮ ಮನಸ್ಸನ್ನು ಪರಮಾತ್ಮ ಸ್ವರೂಪದಲ್ಲಿ ಐಕ್ಯ ಮಾಡಿ ತಾನೂ ಅಂದರೆ ಜೀವಾತ್ಮನೂ ಪರಮಾತ್ಮನೂ ಒಂದಾಗಿ ಬೆರೆಯುವುದಕ್ಕಾಗಿಯೇ ಪರ್ವತ ಗುಹೆಗಳಲ್ಲಿ ಹೋಗಿ ಸೇರುತ್ತಾರೆ. ಇದೇ ತಪಸ್ಸಿನ ರಹಸ್ಯಾರ್ಥವು. ಜನಸಮೂಹಗಳಿರುವ ಪಟ್ಟಣ, ಗ್ರಾಮ, ದೇವಾಲಯ, ಸತ್ರ, ಮಠ ಮೊದಲಾದ ಈ ಸ್ಥಳಗಳಲ್ಲಿದ್ದು ಮನಸ್ಸನ್ನು ಪರಮಾತ್ಮನ ಸ್ವರೂಪದಲ್ಲಿ ಲೀನಮಾಡುವುದು ಸಾಧ್ಯವಲ್ಲವೆಂದು ತಿಳಿದು

ಹಿರಿಯರು ಪರ್ವತ ಗುಹೆಗಳನ್ನು ಸೇರಿ ತಪಸ್ಸುಮಾಡುತ್ತಿದ್ದಾರೆ. ಇಂತಹ ಪೂಜ್ಯರು ಗುಹೆಯೊಳಕ್ಕೆ ಸೇರುವುದಕ್ಕೆ ಮೊದಲು ಪಟ್ಟಣದಲ್ಲಿಯೇ ಆಗಲಿ ಗ್ರಾಮದಲ್ಲಿಯೇ ಆಗಲಿ ಇದ್ದಾಗ ಅವರನ್ನು ಜನಗಳು ಸ್ವಾಮಿಗಳೆಂದು ಕರೆಯುವುದೂ ಉಂಟು. ಇಂತಹ ಸ್ವಾಮಿಗಳು ಪಟ್ಟಣ ಗ್ರಾಮಗಳನ್ನು ತೊರೆದು, ಅಡವಿಗೆ ಹೋಗಿ, ಪರ್ವತದ ಗುಹೆಗಳಲ್ಲಿ ಪ್ರವೇಶಿಸಿ, ಅನೇಕ ತಿಂಗಳುಗಳೋ ಅಥವಾ ಅನೇಕ ವರ್ಷಗಳೋ ತಪಸ್ಸಿನಲ್ಲಿದ್ದು, ನೀಳವಾದ ಜಡೆ, ಉದ್ದವಾದ ಗಡ್ಡ, ಕೈಕಾಲು ಬೆರಳುಗಳಲ್ಲಿ ಹೆಚ್ಚಾಗಿ ಬೆಳೆದು ಉಂಗುರದಂತೆ ಸುತ್ತಿಕೊಂಡಿರುವ ಉಗುರುಗಳು, ಇವುಗಳುಳ್ಳವರಾಗಿ ತಪಸ್ಸು ತೀರಿದ ಮೇಲೆ ಈಚೆಗೆ ಬರುತ್ತಾರೆ. ಹಾಗೆ ಬಂದಮೇಲೆ ಸ್ವಾಮಿಗಳೆಂಬ ಮೊದಲಿನ ಹೆಸರು ಹೋಗಿ ಋಷಿಗಳೆನ್ನಿಸಿಕೊಳ್ಳುತ್ತಾರೆ. ಇವರನ್ನೇ ಮುನೀಶ್ವರರೆಂದೂ ಕೆಲವರು ಕರೆಯುತ್ತಾರೆ. ಸ್ವಾಮಿಯಾಗಿದ್ದ ಒಬ್ಬ ಪುರುಷನ ರೂಪವೇ ಭೇದವನ್ನು ಹೊಂದಿ ಋಷಿ, ಮುನಿ ಎಂಬ ನಾಮಭೇದವನ್ನು ಹೊಂದುತ್ತದೆ. ಮಾಯಾ ಸಂಸಾರವೆಂಬ ಸಮುದ್ರದಲ್ಲಿ ಸಿಕ್ಕಿ ಅಲುಗಾಡುತ್ತಿರುವ ಎಲ್ಲಾ ಸ್ತ್ರೀ ಪುರುಷರೂ ತಾವು ಮಾಡುತ್ತ ಬಂದ ಸತ್ಕರ್ಮ ಪುಣ್ಯ ವಿಶೇಷಗಳಿಂದ ಎಷ್ಟೋ ಜನ್ಮಗಳನ್ನು ಕಳೆದಮೇಲಾದರೂ ಯಾವುದೋ ಒಂದು ಜನ್ಮದಲ್ಲಿ ತನ್ನ ಮನಸ್ಸನ್ನು ಪರಮಾತ್ಮಸ್ವರೂಪದಲ್ಲಿ ಐಕ್ಯಮಾಡುವುದಕ್ಕಾಗಿಯೇ ಋಷಿಸ್ವರೂಪವನ್ನು ಹೊಂದಬೇಕಾಗುತ್ತದೆ. ಹೀಗೆ ಋಷಿಗಳಾಗಿ ಬರುವುದೇ ದೊಡ್ಡ ತಪಸ್ಸು ಎಂದು ತಿಳಿಯಬೇಕು. ಪಟ್ಟಣದಲ್ಲಿಯೂ ಗ್ರಾಮದಲ್ಲಿಯೂ ಇರುವವರಿಗೆ ಇಂತಹ ಪದವಿ ಸಿಕ್ಕುವುದು ತುಂಬಾ ಕಷ್ಟ ಸಾಧ್ಯ.

ಮನೋವೇಗವನ್ನು ನಿಲ್ಲಿಸಲು ಶಕ್ತಿ ಸಾಲದೇ ಕೆಲವರು ಗಾಂಜಾ (ಭಂಗೀ ಸೊಪ್ಪಿನ) ಧೂಮವನ್ನು ಪಾನಮಾಡುತ್ತಾರೆ. ಗಾಂಜಾ ಕುಡಿದ ಮತ್ತಿನಿಂದ ಮನಸ್ಸೆಂಬ ಕಪಿಯು ಅತ್ತಿತ್ತ ಕದಲದೆ ಸ್ವಲ್ಪಕಾಲ ಮಾತ್ರವೇ ನಿಂತಿರುತ್ತದೆ. ಆ ಮತ್ತು ಇಳಿದ ಕ್ಷಣವೇ ಅದು ಪುನಃ ಅಲ್ಲಿಗಿಲ್ಲಿಗೆ ಓಡುವುದಕ್ಕಾರಂಭಿಸುತ್ತದೆ. ಆಗ ಪುನಃ ಗಾಂಜಾ ಹೊಗೆಯನ್ನು ಸೇವಿಸುವರು. ಮತ್ತಿಳಿದಂತೆಲ್ಲಾ ಹೀಗೆಯೇ ಮಾಡುವರು. ಹೀಗೆ ಮಾಡಿದ್ದರಿಂದ ಮನಸ್ಸಿನ ವೇಗವು ತಗ್ಗಲಾರದು. ಮನಸ್ಸಿನ ಆ ವೇಗ

ವನ್ನು ತಗ್ಗಿಸುವುದಕ್ಕಾಗಿ ಈ ಗ್ರಂಥದಲ್ಲಿ ವಜ್ರಾಯುಧಕ್ಕೆ ಸಮವಾದ ಮಂತ್ರಗಳು ಉಪದೇಶಿಸಲ್ಪಟ್ಟಿವೆ. ಇಂತಹ ಮಂತ್ರಗಳಿಂದ ನಿಮ್ಮ ಮನಸ್ಸನ್ನಣಗಿಸಿದರೆ ಮನಸ್ಸು ವ್ಯಕ್ತಿ ಹೊಂದುತ್ತದೆ ಎಂದು ದೊಡ್ಡವರು ಹೇಳಿರುತ್ತಾರೆ.

ಎಲ್ಲಾ ಪೂಜೆಗಳನ್ನೂ ಜಪಗಳನ್ನೂ ಮಾಡುವುದು ಮನಸ್ಸನ್ನು ಶೂನ್ಯವಾಗಿ ಮಾಡುವುದಕ್ಕೇ ಹೊರತು ಬೇರೆಯಲ್ಲ. ಈ ವಿಷಯವನ್ನು ಕುರಿತು ಅನೇಕ ಪರ್ಯಾಯಗಳು ಈ ಗ್ರಂಥದಲ್ಲಿ ಹೇಳಿವೆ. ಅನೇಕ ಕೋಟಿ ವರಹ ಬೆಲೆಯುಳ್ಳ ಮಾಣಿಕ್ಯ, ಪಚ್ಚೆ ಮೊದಲಾದ ನವರತ್ನಗಳಿಗಿಂತಲೂ ಅಧಿಕವಾದ ಜ್ಞಾನ ರತ್ನಗಳು ಈ ಗ್ರಂಥದಲ್ಲಿ ಹೊರಬಿದ್ದಿವೆ. ಇಂಥಾ ಮಹಾರತ್ನಗಳ ರಹಸ್ಯಾರ್ಥವನ್ನು ತಿಳಿದು ಅದರಲ್ಲಿ ಹೇಳಿದ ರೀತಿಯಲ್ಲಿ ಜಪಮಾಡುತ್ತ ಬಂದದ್ದೇ ಆದರೆ, ಅಂತಹರ ಮನೋವೇಗವು ಕುಗ್ಗಿ, ಅವರು ಶಾಂತಚಿತ್ತರಾಗಿ ಮೋಕ್ಷವೆಂಬ ಉತ್ತಮ ಭವನವನ್ನು ತಪ್ಪದೆ ಹೊಂದುವರು. ಇಂತಹ ಸಾಧನೆಗಳಿಗೆಲ್ಲಾ ತನ್ನ ಹೆಂಡತಿ ತನಗೆ ಅನುಕೂಲಳಾಗಿರಬೇಕು.

ಹಾಗೆ ಅನುಕೂಲರಾಗಿ ಇಲ್ಲದವರು, ಪೂರ್ವ ಜನ್ಮದಲ್ಲಿ ತಮಗೆ ವಿರೋಧವಾಗಿ ಇದ್ದವರೇ ಕೆಲವರಿಗೆ ಹೆಂಡತಿಗಳಾಗಿ ಬಂದು ಸೇರಿ, ಸಂಸಾರ ಬಂಧಕದಲ್ಲಿ ಅವರನ್ನು ಸಿಕ್ಕಿ ಬೀಳಿಸಿ, ಅವರಿಗೆ ನಾನಾ ವಿಧವಾದ ದುಃಖಗಳನ್ನುಂಟುಮಾಡುವುದೇ ಅಲ್ಲದೆ ಅವರನ್ನು ವಿಶೇಷವಾಗಿ ದೂಷಿಸಿ, ಸದಾ ಅವರ ಮನಸ್ಸಿಗೆ ನೋವುಂಟಾಗುವಂತೆ ಬಾಧೆಯನ್ನುಂಟುಮಾಡುತ್ತಿರುವರು. ಕುಟುಂಬದಲ್ಲಿ ಇಂತಹ ಹೆಂಡತಿಯರೇ ಪುರುಷರಿಗೆ ಯಮನ ರೀತಿಯಲ್ಲಿರುತ್ತಾರೆ. ಯಮನಬಾಧೆಯಾದರೋ ಮರಣ ಕಾಲದಲ್ಲಿ ಮಾತ್ರ; ಆದರೆ ದುಷ್ಟಪತ್ನಿಯಿಂದಾಗುವ ಬಾಧೆ ಸಾಯುವವರಿವಿಗೂ ಇದ್ದೇ ಇರುವುದು. ಮಹಾ ಪುಣ್ಯಪುರುಷರಿಗೆ ಮಾತ್ರವೇ ಯೋಗ್ಯರಾದ ಪತ್ನಿಯರು ದೊರಕುವುರು. ಆದಕಾರಣ, ಈ ಗ್ರಂಥವನ್ನು ಪಠಿಸುವ ಸ್ತ್ರೀಯರಲ್ಲಿ ಯಾರಿಗಾದರೂ ಹಿಂದೆ ಹೇಳಿದ ದುಷ್ಟ ಗುಣಗಳು ಅಂದರೆ, ಪತಿ ದೂಷಣೆ ಮೊದಲಾದವುಗಳು ಇರುವುದೇ ಆದರೆ, ಆ ಗುಣಗಳನ್ನು

ತೊರೆದು ಪತಿಯ ಆಜ್ಞಾನುಸಾರವಾಗಿ ನಡೆಯುತ್ತಾ ಬರಬೇಕು. ಪತಿಯ ಮನಸ್ಸನ್ನನುಸರಿಸುವವಳೇ ಪತಿವ್ರತೆಯೆಂದು ದೊಡ್ಡವರು ಹೇಳುವರು. ಈ ಪತಿವ್ರತಾ ಧರ್ಮದಿಂದಲೇ ಮರುಜನ್ಮದಲ್ಲಿ ಉತ್ತಮ ಪದವಿಯನ್ನು ತಪ್ಪದೆ ಹೊಂದುವರು. ಸ್ತ್ರೀಪುರುಷರು ಸಂಸಾರ ಚಕ್ರದಲ್ಲಿ ಸಿಕ್ಕಿಬಿದ್ದು, ಅಧೋಗತಿಯನ್ನು ಹೊಂದದಿರುವುದಕ್ಕಾಗಿಯೇ ಈ ಗ್ರಂಥದಲ್ಲಿ ಅನೇಕ ಗುರೂಪದೇಶಗಳು ಮಾಡಲ್ಪಟ್ಟಿವೆ. ಈ ಉಪದೇಶವನ್ನನುಸರಿಸಿ ನಡೆದದ್ದೇ ಆದರೆ, ಅನೇಕ ಜನ್ಮಗಳಿಂದ ಹಿಂಬಾಲಿಸಿ ಬಂದ ಪಾಪಕರ್ಮಗಳೆಲ್ಲವೂ ಭಸ್ಮವಾಗುವುವು.

ಲೋಕದಲ್ಲಿರುವ ಜನಗಳಲ್ಲಿ ಅನೇಕರಿಗೆ ಜ್ಞಾನವನ್ನು ಹೊಂದುವ ಇಚ್ಛೆಯಿದ್ದರೂ, ತಮ್ಮ ಹಿಂದಿನ ಜನ್ಮ ಕರ್ಮಗಳು ಜ್ಞಾನಾರ್ಜನೆಗೆ ತಕ್ಕ ಕಾರ್ಯಗಳನ್ನು ಮಾಡಲೀಯದೆ ಅವಕ್ಕೆ ಬೇಕಾದ ಶಾಸ್ತ್ರಗಳನ್ನು ಓದಲೀಯದೆ ಇರುವ ಬುದ್ಧಿಯನ್ನು ಹುಟ್ಟಿಸಿ ಕೆಲಸಕ್ಕೆ ಬಾರದ ಕಟ್ಟು ಕಥೆಗಳನ್ನು ಓದುವಂತೆ ಮಾಡಿಸುವುವು. ಇಷ್ಟೇ ಅಲ್ಲದೆ ನಾಟಕಗಳನ್ನು ನೋಡುವುದು, ಸಂಗೀತ ಕೇಳುವುದು, ಹಾಡುವುದು ಇವೇ ಮೊದಲಾದುವುಗಳಲ್ಲಿ ಬುದ್ಧಿಯನ್ನು ಹುಟ್ಟಿಸುವುವು. ಇಂತಹರೆಲ್ಲರೂ ಮೇಲೆ ಹೇಳಿದ ಗುಣಗಳನ್ನು ಬಿಟ್ಟು ಸನ್ಮಾರ್ಗವನ್ನು ಹಿಡಿಯುವುದಕ್ಕೆ ಯತ್ನಿಸಬೇಕು.

ಒಬ್ಬನ ಶರೀರದಲ್ಲಿರುವ ರೋಗವನ್ನು ಕಳೆಯುವುದಕ್ಕಾಗಿ ಔಷಧಿಯು ಹೇಗೆ ಅತ್ಯವಶ್ಯಕವೋ ಅದರಂತೆಯೇ ಮನಸ್ಸಿನಲ್ಲಿರುವ ಆಸೆಯೆಂಬ ವ್ಯಾಧಿಯನ್ನು ಹೋಗಲಾಡಿಸುವುದಕ್ಕಾಗಿ ಗುರುವೆಂಬ ವೈದ್ಯನೂ ಯೋಗಾಮೃತವೆಂಬ ಔಷಧಿಯೂ ಅತ್ಯವಶ್ಯಕ. ಸಂಸಾರ ನಿವೃತ್ತಿಯು ಜ್ಞಾನದಿಂದಾಗಬೇಕೇ ಹೊರತು ಕರ್ಮದಿಂದಲ್ಲ. ಪೂರ್ವಜನ್ಮದ ಪುಣ್ಯ ಕರ್ಮಗಳಿಂದ ಪರಿಪಕ್ವವಾದವರಿಗೆ ಮಾತ್ರವೇ ಸಂಸಾರದಲ್ಲಿ ವಿರಕ್ತಿಯುಂಟಾಗಿ ಜ್ಞಾನಾರ್ಜನೆಯ ಪ್ರಯತ್ನವುಂಟಾಗುತ್ತದೆ. ಹೀಗೆ ಪ್ರಯತ್ನಿಸುವವರು ಮುಕ್ತಿಗೆ ಅರ್ಹರಾಗುತ್ತಾರೆ. ಆದುದರಿಂದ ಜನಗಳು ಯೋಗ್ಯನಾದ ಗುರುವನ್ನು ಹುಡುಕಿ, ಉಪದೇಶವನ್ನು ಹೊಂದಬೇಕೆಂಬ ಆಶೆಯನ್ನು ಬಿಟ್ಟು, ಈ ಗ್ರಂಥ ವೊಂದನ್ನೇ ಪಠಿಸಿ, ಇದರಲ್ಲಿ ಉಪದೇಶಿಸ

ಲ್ಪಟ್ಟ ಗುರುರಹಸ್ಯವನ್ನು ತಿಳಿದು, ಮಾಯೆಯೆಂಬ ಅಜ್ಞಾನವನ್ನು ಜಯಿಸಿ, ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಂಡು, ಆನಂದ ಸುಖವನ್ನು ಅನುಭವಿಸಬಹುದು. ಲೋಕದಲ್ಲಿ ಶಾಸ್ತ್ರಗಳನೇಕವಾಗಿವೆ. ಅವೆಲ್ಲವೂ ಆತ್ಮನ ವಿಷಯದಲ್ಲಿಯೇ ಅನೇಕ ಸಂದೇಹಗಳನ್ನು ತಂದೊಡ್ಡುವುವು; ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ವೆಂಬ ಗ್ರಂಥವು ಮಾತ್ರ ಅಂತಹ ಸಂದೇಹಕ್ಕೆ ಸ್ಥಳಕೊಟ್ಟಿಲ್ಲ. ಹೇಗೆಂದರೆ ಇದರಲ್ಲಿ ಈ ದೇಹವೆಂಬ ರಥಕ್ಕೆ ಕಣ್ಣು, ಕಿವಿ, ಮೂಗು, ಬಾಯಿ, ಚರ್ಮ ಎಂಬ ಪಂಚೇಂದ್ರಿಯಗಳೇ ಕುದುರೆಗಳಾಗಿಯೂ, ಮನಸ್ಸೇ ಕುದುರೆಯನ್ನು ಹಿಡಿವ ಲಗಾಮಾಗಿಯೂ, ಬುದ್ಧಿಯೇ ಸಾರಥಿಯಾಗಿಯೂ, ಆತ್ಮನೇ ರಥಿಕ ನಾಗಿಯೂ ಹೇಳಲ್ಪಟ್ಟಿವೆ. ಇಷ್ಟೇ ಅಲ್ಲದೆ ಯಾವನು ತನ್ನ ಇಂದ್ರಿಯಗ ಳೆಂಬ ಕುದುರೆಗಳನ್ನು ಬುದ್ಧಿಯೆಂಬ ಸಾರಥಿಯಿಂದ ಸರಿಯಾದ ಮಾರ್ಗಕ್ಕೆ ತಿರುಗಿಸಿ, ಈ ಶರೀರ ರಥವನ್ನು ನಡೆಸುತ್ತಿದ್ದಾನೆಯೋ ಅಂತಹನಿಗೆ ಮನ ಸ್ಸೆಂಬ ಲಗಾಮು ಇಂದ್ರಿಯಗಳೆಂಬ ಕುದುರೆಗಳು ವಶವಾಗಿ ರಥಿಕನಾದ ಆತ್ಮನು ಮೋಕ್ಷವೆಂಬ ಗೃಹಕ್ಕೆ ಕರೆದುಕೊಂಡು ಹೋಗಿ ಸೇರಿಸುವನೆಂದು ಈ ಗ್ರಂಥವು ಬೋಧಿಸುತ್ತದೆ. ಹಾಗಲ್ಲದೆ, ಯಾವನ ಬುದ್ಧಿಯೆಂಬ ಸಾರಥಿಯು ಇಂದ್ರಿಯವೆಂಬ ಕುದುರೆಗಳನ್ನು ಸರಿಯಾದ ದಾರಿಗೆ ತಿರುಗಿಸಿ ನಡೆಸಲಾರದೋ, ಅಂಥವನ ಇಂದ್ರಿಯಗಳೆಂಬ ಕುದುರೆಗಳು ದುರ್ಮಾರ್ಗ ವಿಷಯಗಳಲ್ಲಿ ಎಳೆದುಕೊಂಡು ಹೋಗಿ ತಳ್ಳುತ್ತವೆ. ಹಾಗೆ ಬೀಳಿಸದಂತೆ ರಥದಲ್ಲಿರುವ ಆತ್ಮನೆಂಬ ರಥಿಕನು ಮೋಕ್ಷಗೃಹಕ್ಕೆ ಕೊಂಡು ಬಿಡಲಾರನು. ಆತ್ಮನು ಇಂತಹ ಮುಕ್ತಿ ಭವನಕ್ಕೆ ಸೇರಿಸುವ ವರಿವಿಗೂ ಆತನಿಗೆ ಸಾಕ್ಷಿ ಮಾತ್ರನಾಗಿ ಇರುವುದಕ್ಕಾಗಿ, ಸದಾ ಅವನ ಈ ಶರೀರರಥದಲ್ಲಿ ಆತ್ಮ ನೆಂಬ ರಥಿಕನು ನೆಲೆಸಿರುವನೆಂದು ಈ ಗ್ರಂಥವು ತಿಳಿಯಹೇಳುತ್ತದೆ. ಪುರುಷನಾದವನು ಬುದ್ಧಿಸಾರಥಿಗೆ ಚನ್ನಾಗಿ ಉಪದೇಶಿಸಿ, ಪಂಚೇಂದ್ರಿಯ ಗಳೆಂಬ ಕುದುರೆಗಳನ್ನು ಸರಿಯಾದ ಮಾರ್ಗದಲ್ಲಿ ಹೋಗುವಂತೆ ಮನ ಸ್ಸೆಂಬ ಲಗಾಮನ್ನು ಆಗಾಗ್ಗೆ ತಿರುಗಿಸುತ್ತಿರಬೇಕು. ಹಾಗೆ ತಿರುಗಿಸುತ್ತ ಬಂದದ್ದೇ ಆದರೆ, ಮುಕ್ತಿ ಭವನವನ್ನು ತಪ್ಪದೆ ಹೋಗಿ ಸೇರುತ್ತಾ ನೆಂಬುದೇ ಈ ಗ್ರಂಥದ ಸದ್ಬೋಧೆ.

ಕನ್ನಡ ದೇಶದಲ್ಲಿ ಪಂಡಿತರೂ, ಪ್ರಸಿದ್ಧಿ ಪಡೆದ ವಿದ್ವಾಂಸರೂ ಅನೇಕರಿರಬಹುದು. ಈ ಗ್ರಂಥಕರ್ತರಾದ ಯೋಗೀಶ್ವರರು, ವಿಶೇಷ ವಿದ್ಯಾವಂತರಲ್ಲವಾದುದರಿಂದ, ಇವರಿಗೆ ದ್ರವಿಡ (ಅರವ) ಮತ್ತು ಸ್ವಲ್ಪ ಆಂಧ್ರ ಭಾಷೆಗಳ ಪರಿಶ್ರಮವಿದೆಯಾಗಿ, ಈ ಗ್ರಂಥದಲ್ಲಿ ಶಬ್ದೋಚ್ಚಾರಣೆಗಳು, ಮಾತುಗಳ ಭೇದಗಳು ಮತ್ತು ಅಕ್ಷರ ಲೋಪಗಳು ಅನೇಕವಾಗಿರಬಹುದು. ಆದುದರಿಂದ, ನೀರಿನಿಂದ ಮಿಶ್ರವಾದ ಹಾಲನ್ನು, ಪ್ರತ್ಯೇಕ ಮಾಡುವುದು ಸಾಧ್ಯವಲ್ಲವಾದರೂ, ರಾಜಹಂಸವು ನೀರನ್ನು ಬಿಟ್ಟು ಹಾಲನ್ನು ಮಾತ್ರ ಯಾವ ರೀತಿಯಲ್ಲಿ ತೆಗೆದುಕೊಳ್ಳುತ್ತದೆಯೋ, ಅದರಂತೆಯೇ ವಿದ್ವಾಂಸರು ಈಗ್ರಂಥದಲ್ಲಿರುವ ಗುಣದೋಷಗಳಲ್ಲಿ ಗುಣಗಳನ್ನೇ ಗ್ರಹಿಸಬೇಕೆಂದು ಬಹು ವಿನಯದಿಂದ ಬೇಡಿಕೊಳ್ಳುತ್ತಾರೆ.

ಈ ಗ್ರಂಥದಲ್ಲಿ ವಿಶದಪಡಿಸಿರುವ ಜಾತಿಭೇದಗಳು, ಬ್ರಾಹ್ಮಣತ್ವವು ಮೊದಲಾದ ಎಲ್ಲಾ ವಿಷಯಗಳು ವೇದಗಳನ್ನೂ ಉಪನಿಷತ್ತುಗಳನ್ನೂ ಅನುಸರಿಸಿ ಹೇಳಲ್ಪಟ್ಟಿವೆ. ಈ ವಿಷಯದಲ್ಲಿ ಸಮಸ್ತರೂ ಮನ್ನಿಸಬೇಕೆಂದು ವಿನಯಪೂರ್ವಕವಾದ ಪ್ರಾರ್ಥನೆ.



ಈ ಗ್ರಂಥವನ್ನು ಓದಿದವರಿಗೂ, ಕೇಳಿದವರಿಗೂ ಗ್ರಂಥದಲ್ಲಿ ಉಪದೇಶಿತವಾದ ಎಲ್ಲಾ ನಡವಳಿಕೆಗಳನ್ನೂ ಎಲ್ಲಾ ಗುಣಗಳನ್ನೂ ಅನುಗ್ರಹಿಸು ಕೃಷ್ಣಾ !

ಠ ಠ ಡು ಹಾಂಸ ಸಿಬ್ಬಿ ಶಾಸಂಧಿ.

# ಗ್ರಂಥಕರ್ತರ ವಿದ್ಯಾಭ್ಯಾಸ

## ಮತ್ತು

## ಇವರು ಈ ಗ್ರಂಥವನ್ನು ರಚಿಸಿದ ಕ್ರಮ.



ಅಯ್ಯಾ !

ಈ ಗ್ರಂಥಕರ್ತರಾದ ಯೋಗೀಶ್ವರರು ಕ್ರಿ. ಶ. 1880ನೇ ಇಸವಿಯಲ್ಲಿ ಪಾಠಶಾಲೆಯಲ್ಲಿ ವಿದ್ಯಾಭ್ಯಾಸಮಾಡುವ ಕಾಲದಲ್ಲಿ, ಮೊದಲನೇ ತರಗತಿಯಿಂದ ನಾಲ್ಕನೆಯ ತರಗತಿಯವರಿವಿಗೂ, ಆ ತರುವಾಯ ಒಂದು, ಎರಡು, ಮೂರನೇ ಫಾರಂಗಳೂ, ಲೋಯರ್ ಫೋರ್ತ್, ಅಪ್ಪರ್ ಫೋರ್ತ್, ಅದಾದಮೇಲೆ ಮಿಡಲ್‌ಸ್ಕೂಲ್ ಪರೀಕ್ಷೆಯನ್ನೂ ಗೌರ್ನಮೆಂಟಿನವರು ಇಟ್ಟಿದ್ದರು. ಈ ರೀತಿಯಾಗಿ ಕೆಲವು ವರ್ಷಗಳು ನಡೆದ ಮೇಲೆ, ಆ ಮಿಡಲ್‌ಸ್ಕೂಲ್ ಎಂಬ ಹೆಸರನ್ನು ತೆಗೆದು ಆ ಪರೀಕ್ಷೆಗೆ ಮೆಟ್ರಿಕ್ಯುಲೇಷನ್ ಎಂಬ ಹೆಸರನ್ನಿಟ್ಟರು. ಆ ಕಾಲದಲ್ಲಿ ಈ ಗ್ರಂಥಕರ್ತರು ಲೋಯರ್‌ಫೋರ್ತ್ ಎಂಬುವ ತರಗತಿಯವರಿವಿಗೇ ಓದಿ ವಿದ್ಯಾಭ್ಯಾಸವನ್ನು ಮುಗಿಸಿದರು. ಅಂದರೆ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಎರಡು ತರಗತಿಗಳು ಕಡಮೆಯೇ ಓದಿ ಬಿಟ್ಟುಬಿಟ್ಟರು. ಇವರು ಮೇಲೆ ಹೇಳಿದ ತರಗತಿಗಳಲ್ಲಿ ಓದುತ್ತಿದ್ದಾಗ ಎಷ್ಟು ಓದಿದರೂ ಜ್ಞಾಪಕವಿಲ್ಲದೆ ಆಗಾಗ್ಗೆ ಮರೆತುಹೋಗುವುದೂ ಇತ್ತು. ಆದ್ದರಿಂದ ಆ ತರಗತಿಯಲ್ಲಿ ಎಲ್ಲರಿಗಿಂತಲೂ ಕಡೆಯವನಾಗಿದ್ದು "ಕಡೆಯ ಹುಡುಗ (Last boy)" ಎಂಬ ಹೆಸರನ್ನು ಪಡೆದದ್ದು ಮಾತ್ರವಲ್ಲದೆ, ಪ್ರತಿ ಬೆಳಿಗ್ಗೆ ಸಾಯಂಕಾಲಗಳಲ್ಲಿ ಉಪಾಧ್ಯಾಯರು ಈ ಗ್ರಂಥಕರ್ತನನ್ನು ಬೆಂಚಿನ ಮೇಲೆಯೇ ನಿಲ್ಲಿಸುತ್ತಿದ್ದರು. ಹೀಗೆ ವಿದ್ಯೆಯಲ್ಲಿ ಬಹಳ ಮಡ್ಡಿಯಾದ (ಹಿಂದುಳಿದ) ಹುಣಿಸೆಯ ಮದ್ದಿನಂತಿರುವ ಈಗ್ರಂಥಕರ್ತನಿಗೆ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ವೆಂಬ ಇಂತಹ ದೊಡ್ಡ ಗ್ರಂಥವನ್ನು ಬರೆಯುವಂಥ ಶಕ್ತಿಯು ಹೇಗುಂಟಾಯಿತೆಂಬುದು ಈ ಕೆಳಗೆ ವಿವರಿಸಿದೆ.

ಈ ಗ್ರಂಥಕರ್ತರು ಮೊದಮೊದಲು ಕೆಲವು ವರ್ಷಗಳು ಯೋಗಾಭ್ಯಾಸವನ್ನು ನಡೆಸಿದನಂತರ, ತಮ್ಮ ಸ್ವಾನುಭವವನ್ನು ಎಲ್ಲರಿಗೂ ತಿಳಿಯಪಡಿಸಬೇಕೆಂಬುವ ಇಚ್ಛೆ ಅವರಿಗುಂಟಾಯಿತು. ಈ ಇಚ್ಛೆ ಹುಟ್ಟಿದಮೇಲೆ ಇವರು ಯೋಗವನ್ನಭ್ಯಾಸಿಸುವ ಕೊಠಡಿಯಲ್ಲಿ ಕಾಗದಗಳು ಪೆನ್ಸಿಲ್ (ಸೀಸದಕಡ್ಡಿ), ದೀಪ ಇವುಗಳನ್ನು ಸಿದ್ಧಪಡಿಸಿ ಇಟ್ಟಿದ್ದರು. ಆಮೇಲೆ ಆ ಕೋಣೆಯಲ್ಲಿ ಅರ್ಧರಾತ್ರಿ ಸಮಯದಲ್ಲಿ ಯೋಗಾಭ್ಯಾಸಮಾಡಿ ಮುಗಿಸಿದ ಮೇಲೆ, ಒಂದು ಘಂಟೆಕಾಲ ನಿಷ್ಠೆಯೆಂಬ ಸಮಾಧಿಯಲ್ಲಿದ್ದು, ಆ ಸಮಾಧಿಯು ತೀರಿದ ಬಳಿಕ, ದೀಪವನ್ನು ಹತ್ತಿಸಿ, ಮೊದಲೇ ಸಿದ್ಧವಾಗಿದ್ದ ಕಾಗದ, ಸೀಸದಕಡ್ಡಿ ಮೊದಲಾದುವನ್ನು ಕೈಲಿ ತೆಗೆದುಕೊಂಡು ಸಣ್ಣ ಕಾಲ್ಮಣೆ (ಸ್ಟೂಲ್) ಮೇಲೆ ಗ್ರಂಥವನ್ನು ಬರೆಯಲು ಆರಂಭಿಸಿದನಂತರ, ಆ ಸಮಯದಲ್ಲಿ ಅಂಜರೆ ನಿಷ್ಠೆ ತೀರಿದ ಮೇಲೆ ವಿದ್ಯೆಯಲ್ಲಿ ಹುಣಿಸೆಮುದ್ದಿಗೆ ಸಮನಾದ ಈ ಗ್ರಂಥಕರ್ತರು, ಒಂದು ಪೂರ್ಣವಿರಾಮ (ಚುಕ್ಕೆ) ದಿಂದ ಮತ್ತೊಂದರ ವರಿವಿಗೂ ಕರ್ತೃ-ಕರ್ಮ ಕ್ರಿಯೆಗಳನ್ನು ಎಲ್ಲೆಲ್ಲಿ ಹೇಗಿರಬೇಕೋ ಅದಕ್ಕೆ ಸರಿಯಾಗಿ ವಾಕ್ಯಗಳು ಕುದುರುವಂತೆ ಮನಸ್ಸಿನಲ್ಲಿಯೇ ಯೋಚಿಸುತ್ತಾ, ಬರೆಯಲುಪಕ್ರಮಿಸಿದ ಬಳಿಕ, ಆಗ ತಾವು ಮಾಡುತ್ತ ಬರುತ್ತಿದ್ದ ಯೋಗ ಶಕ್ತಿಯಿಂದ ಅದ್ಭುತವಾದ ಯೋಚನೆಗಳು ತಮಗೆ ತಾವೇ ಹುಟ್ಟಿ, ಚುಕ್ಕೆಯಿಂದ ಚುಕ್ಕೆಯವರಿವಿಗಿರುವ ಪ್ರತಿಯೊಂದು ವಾಕ್ಯವನ್ನು ಕರ್ತೃ-ಕರ್ಮ ಕ್ರಿಯಾನುಸಾರ ಕ್ರಮದಿಂದ ಬರೆದು ಮುಗಿಸಿದ ಮೇಲೆ ಮುಂದಿನ ವಾಕ್ಯವನ್ನೂ ಇದೇ ಕ್ರಮದಿಂದ ಬರೆಯುವುದಕ್ಕೆ ಮೊದಲು ಮಾಡುತ್ತಿದ್ದರು. ಈ ಕರ್ತೃ-ಕರ್ಮ ಕ್ರಿಯೆಗಳೆಂಬುವು ಇದ್ದರೇ ಬಾಲಕ ಬಾಲಕಿಯರೂ ಕೂಡ ಅತಿ ಸುಲಭವಾಗಿ ಓದಿ ಎಲ್ಲಾ ವಿಷಯಗಳನ್ನು ಗ್ರಹಿಸುವರು. ಈ ವ್ಯಾಕರಣ ಪದ್ಧತಿಯನ್ನನುಸರಿಸದ ಪಕ್ಷದಲ್ಲಿ ಅವರಿಗೆ ಯಾವುದೂ ಅರ್ಥವಾಗದು. ಈ ವಿಧವಾಗಿ ಮೊದಮೊದಲು ಕರ್ತೃ-ಕರ್ಮ ಕ್ರಿಯಾ ಬದ್ಧವಾದ ವಾಕ್ಯಗಳಿಂದ ಅರವ (ದ್ರವಿಡ) ಭಾಷೆಯಲ್ಲಿ "ಜೀವ ಬ್ರಹ್ಮೈಕ್ಯ ವೇದಾಂತ ರಹಸ್ಯ" ವೆಂಬ ಹೆಸರಿನಿಂದ ಒಂದು ಸಣ್ಣ ಪುಸ್ತಕವನ್ನು ಬರೆದು, ಆರಾಣೆ ಕ್ರಯವಿಟ್ಟು ಪ್ರಚುರಪಡಿಸಲು ಬಹಳ ಅಲ್ಪಕಾಲದಲ್ಲಿಯೇ ಪ್ರತಿಗಳೆಲ್ಲವೂ ತೀರಿ

ಹೋದವು. ಇದಾದಮೇಲೆ ಅದೇ ಗ್ರಂಥದಲ್ಲಿ ಅದಕ್ಕಿಂತಲೂ ಹೆಚ್ಚು ರಹಸ್ಯಗಳುಳ್ಳ ದೊಡ್ಡ ದೊಡ್ಡ ವಿಷಯಗಳನ್ನು ಸೇರಿಸಿ, ಎರಡನೇ ಸಾರಿ ಮುದ್ರಿಸಿ, ಹನ್ನೆರಡಾಣೆ ಬೆಲೆಯಿಟ್ಟು, ವಿಕ್ರಯಿಸಿದರು. ಈ ಪ್ರತಿಗಳೂ ಬಹು ಶೀಘ್ರಕಾಲದಲ್ಲಿಯೇ ತೀರಿಹೋದವು. ಹೀಗೆ ತಾವು ಅಭ್ಯಾಸ ಮಾಡುತ್ತಿದ್ದ ಯೋಗಬಲದಿಂದ ತಮಗೆ ತಾವೇ ಉಂಟಾಗುವ ಯೋಚನೆಗಳಿಂದ ದ್ರವಿಡ (ಅರವ) ಗ್ರಂಥದ ಹತ್ತನೆಯ ಛಾಪೆ (edition) ಯವರಿವಿಗೂ ಪ್ರತಿಯೊಂದಕ್ಕೆ ನಾಲ್ಕು ರೂಪಾಯಿನಂತೆ ಇಪ್ಪತ್ತಾರು ಸಾವಿರ(26,000) ಪ್ರತಿಗಳು ಮುದ್ರಿತವಾಗಿವೆ. ಈ ಅರವ ಗ್ರಂಥವನ್ನು ಈಗ ಆಂಧ್ರ (ತೆಲುಗು) ಭಾಷೆಯಲ್ಲಿ ಮೂರನೆಯ ಛಾಪೆಯಾಗಿ ಮದ್ರಿಸಲಾಗಿದೆ. ಈ ಗ್ರಂಥಕರ್ತರಿಗೆ, ದ್ರವಿಡ ಮತ್ತು ಆಂಧ್ರ ಈ ಎರಡು ಭಾಷೆಗಳಲ್ಲಿ ಸ್ವಲ್ಪ ಪರಿಶ್ರಮವಿದೆಯೇ ಹೊರತು ಹೆಚ್ಚಿಲ್ಲ. ಇವರಿಗೆ ಸಂಸ್ಕೃತ ಭಾಷೆಯ ಪರಿಶ್ರಮವಷ್ಟೇನೂ ಇಲ್ಲ. ಆದರೂ ಈ ದ್ರವಿಡಾಂಧ್ರ ಗ್ರಂಥಗಳನ್ನು, ಇವರು, ತಮ್ಮ ಯೋಗಬಲದಿಂದ ತಾವೇ ಸ್ವಂತವಾಗಿ ಬರಿದಿದ್ದೇ ಹೊರತು ಬೇರೆಯವರಿಂದ ಬರೆಸಿದ್ದಲ್ಲ. ಹೀಗೆ ಬರೆದು ರಚಿಸಿದ ಮೇಲೆ, ದೊಡ್ಡ ವಿದ್ವಾಂಸರೊಡನೆ ಕೂಡಿ ಮಾತನಾಡಿ, ಈ ಗ್ರಂಥವನ್ನು ಅವರಿಗೆ ತೋರಿಸಿ "ಇನ್ನು ಇದಕ್ಕಿಂತಲೂ ಶ್ರೇಷ್ಠ ವಿಷಯಗಳು ಇವೆಯೆಂದು ನಿಮಗೆ ತೋರಿದರೆ ಅವುಗಳನ್ನು ಈ ಗ್ರಂಥದಲ್ಲಿ ಸೇರಿಸಬೇಕು. ಅವುಗಳನ್ನು ಬೇರೆ ಮುದ್ರಣದಲ್ಲಿ (edition) ಸೇರಿಸುತ್ತೆ. ಅದಕ್ಕೆ ಬೇಕಾದ ಹಣವನ್ನು ಸಹ ನಿಮಗೆ ಕೊಡಲಾಗುತ್ತದೆ" ಎಂದು ಈ ಗ್ರಂಥಕರ್ತರು ಅವರಿಗೆ ತಿಳಿಸಿ, ಈ ಗ್ರಂಥವನ್ನು ಅವರಿಗೆ ಕೊಟ್ಟರೇ ಹೊರತು, ಆ ವಿದ್ವಾಂಸರು ಈ ಗ್ರಂಥವನ್ನು ಪರಿಶೋಧಿಶಿ ಇದಕ್ಕಿಂತಲೂ ವಿಶೇಷವಾದ ವಿಷಯಗಳನ್ನು ತಮಗೆ ಬರೆಯಲು ಶಕ್ತಿಸಾಲದೆಂದು ಹೇಳಿ ಹೆಚ್ಚೇನೂ ಬರೆಯದೆ ಸುಮ್ಮನಾದರು.

ಆದುದರಿಂದ ಈ ಗ್ರಂಥವನ್ನು ಪಠಿಸುವವರಿಗೆ ಇಷ್ಟು ದೂರ ತಿಳಿಯ ಹೇಳಿ ಬರೆಯಲು ಕಾರಣವೇನಂದರೆ, ಎಷ್ಟು ವಿದ್ಯೆಯಿಲ್ಲದ ಮೂಢನಾದರೂ, ಯೋಗಸಿದ್ಧಿಯಾದಮೇಲೆ, ಆ ಯೋಗಬಲದಿಂದ

ಅನೇಕ ದೊಡ್ಡ ದೊಡ್ಡ ಯೋಚನೆಗಳು ತಾವಾಗಿಯೇ ಹುಟ್ಟಿ, ಪ್ರತಿ ವಾಕ್ಯವನ್ನೂ ಕರ್ತೃ-ಕರ್ಮ ಕ್ರಿಯಾನುಸಾರವಾಗಿ ಬರೆಯುವುದಕ್ಕೆ ಅವಕಾಶವಾಗುತ್ತದೆ. ಈ ದ್ರವಿಡ, ಆಂಧ್ರ ಗ್ರಂಥಗಳು ಆಲೋಚಿಸಿ ಬರೆದವಲ್ಲವು. ಯೋಗಬಲದಿಂದ ಹುಟ್ಟಿದ ವಿಷಯುಗಳನ್ನು ಬರೆದು ರಚಿಸಿದ ಗ್ರಂಥಗಳೆಂದು ತಿಳಿಯಬೇಕು. ಇವೆಲ್ಲವೂ ಸತ್ಯವಾದ ವಾಕ್ಯಗಳೇ ಹೌದು. ಯೋಗನಿಷ್ಠೆಯಿಲ್ಲದಿರುವಕಾಲದಲ್ಲಿ ಅಂದರೆ ಹಗಲಿನಲ್ಲಿ ಯಾವಾಗಲಾದರೂ ಈ ಗ್ರಂಥವನ್ನು ಬರೆಯಲುದ್ದೇಶಿಸಿ ಮೊದಲು ಮಾಡಿದರೆ, ಏನು ಬರೆಯುವುದಕ್ಕೂ ಬುದ್ಧಿಗೆ ತೋಚದೆ ಯಿರುವದರಿಂದ ಹಿಡಿದ ಸೀಸದ ಕಡ್ಡಿಯು ಏನನ್ನೂ ಬರೆಯದೆ ಹಾಗೆಯೇ ನಿಂತಿರುವುದೇ ಹೊರತು ರಾತ್ರಿ ವೇಳೆಯಲ್ಲಿ ಯೋಗನಿಷ್ಠೆ ಮುಗಿದ ಮೇಲೆ ತಾನಾಗಿಯೇ ಬರವಣಿಗೆಯು ಮುಂದೆ ಸಾಗಿದಂತೆ ಮುಂದೆ ಸಾಗದು. ಆದ್ದರಿಂದ, ಈ ಗ್ರಂಥವೆಲ್ಲವೂ ಅರ್ಧರಾತ್ರಿ ಸಮಯದಲ್ಲಿ ಯೋಗನಿಷ್ಠೆಯಿಂದ ಹೊರ ಹೊರಟಮೇಲೆ ಬರೆದಂಥ ದೊಡ್ಡ ಗ್ರಂಥವೆಂದು ಊಹಿಸಬೇಕು.

ಗ್ರಂಥಕರ್ತರು ಈ ರೀತಿಯಾಗಿ ಈ ಗ್ರಂಥವನ್ನು ಯೋಗನಿಷ್ಠೆಯಿಂದೆದ್ದು ಬರೆಯುವ ಕಾಲದಲ್ಲಿ, ದ್ರವಿಡಾಂಧ್ರ ಭಾಷೆಗಳಲ್ಲಿರುವ ವೇದವಾಕ್ಯಗಳಾದ ಉಪನಿಷತ್ತುಗಳ ಗ್ರಂಥಗಳನ್ನು ಯಾರೋ ಒಬ್ಬರು ಆಯಾ ಸಂದರ್ಭಕ್ಕೆ ತಕ್ಕಂತೆ ಆಗಾಗ್ಗೆ ಈ ಗ್ರಂಥಕರ್ತರಿಗೆ ತಂದು ಕೊಡುತ್ತಿದ್ದರು. ಆಗ, ಈ ಗ್ರಂಥಕರ್ತರು ತಮ್ಮೊಳಗೆ ತಾವೇ ಹೀಗೆಂದುಕೊಳ್ಳುತ್ತಿದ್ದರು. "ಈತನಲ್ಲಿ ಅಂತರ್ಯಾಮಿಯಾಗಿಯೂ, ಸಾಕ್ಷಿಸ್ವರೂಪವಾಗಿಯೂ ಇರುವ ಪರಮಾತ್ಮನು, ಆತನ ಗ್ರಂಥವನ್ನು ತೆಗೆದುಕೊಂಡುಹೋಗಿ ಈ ಗ್ರಂಥಕರ್ತರಿಗೆ ಕೊಡುವಂತೆ ಆತನ ಮನಸ್ಸಿಗೆ ತಾಳಿಕೆಯನ್ನು ಕೊಟ್ಟು ಹೇಳಿರುವುದರಿಂದಲೇ ಆತನು ಆ ಗ್ರಂಥವನ್ನು ಇಲ್ಲಿಗೆ ತಂದುಕೊಟ್ಟಿದ್ದಾನೆ. ಆದ್ದರಿಂದ ಇದರಲ್ಲಿ ಏನೋ ವಿಶೇಷವಾದ ವಿಷಯಗಳಿರಬಹುದು" ಎಂಬದಾಗಿ ತಿಳಿದು ಈ ಗ್ರಂಥಕರ್ತರು ಅವರು ತಂದುಕೊಟ್ಟ ಗ್ರಂಥವನ್ನು ಅತಿ ಪ್ರೀತಿಯಿಂದ ಸ್ವೀಕರಿಸಿ ಅದನ್ನು ಪರಿಶೋಧಿಸಿ, ಅದರಲ್ಲಿರುವ ಮುಖ್ಯಾಂಶಗಳನ್ನು ಬರೆದು

ಕೊಂಡು ಅವರವರ ಗ್ರಂಥವನ್ನು ಅವರಿಗೆ ಹಿಂದಕ್ಕೆ ಕೊಟ್ಟು ಆಮೇಲೆ ಆ ಉಪನಿಷದ್ವಾಕ್ಯಗಳನ್ನು ಯಾವ ಯಾವ ಸ್ಥಳದಲ್ಲಿ ಸೇರಿಸಬೇಕೋ ಅಲ್ಲಲ್ಲಿ ಸೇರಿಸಿದುದು ಉಂಟು. ಈ ವಿಧವಾಗಿ ಅನೇಕರು ದ್ರವಿಡ ಆಂಧ್ರ ಗ್ರಂಥಗಳನ್ನು ಆಗಾಗ್ಗೆ ಆಯಾ ಸಂದರ್ಭಾನುಸಾರವಾಗಿ ತಂದುಕೊಡು ತ್ತಿದ್ದರು. ಅವುಗಳನ್ನು ಓದಿ ಅದರಲ್ಲಿರುವ ಶ್ರೇಷ್ಠವಾದ (ಸತ್ವಾದ) ಉಪನಿಷತ್ತುಗಳನ್ನು ತೆಗೆದುಕೊಂಡು ಈ ಗ್ರಂಥಗಳಲ್ಲಿ ಎಲ್ಲೆಲ್ಲಿ ಸೇರಿಸ ಬೇಕೋ ಅಲ್ಲಲ್ಲಿ ಸೇರಿಸುತ್ತ ಬರುವುದೇ ಹೊರತು ಈ ಗ್ರಂಥಕರ್ತರ ಹತ್ತಿರ ಯಾವ ಉಪನಿಷತ್ತೂ ಇಲ್ಲ. ಈ ವಿಧವಾಗಿ ಆಯಾ ಜೀವಿ ಗಳಲ್ಲಿರುವ ಪರಮೇಶ್ವರನಾದ ಆತ್ಮನಿಂದ ಕಳುಹಿಸಲ್ಪಟ್ಟ ಗ್ರಂಥ ಗಳಲ್ಲಿರುವ ಉಪನಿಷದ್ವಾಕ್ಯಗಳನ್ನು ಈ ಗ್ರಂಥದಲ್ಲಿ ಸೇರಿಸುತ್ತ ಬಂದರು. ಇದೇ ರೀತಿಯಲ್ಲಿ ಈ ಗ್ರಂಥಗಳಲ್ಲಿ ಸೇರಿಸಿರುವ ಶರೀರದಲ್ಲಿರುವ ರಕ್ತನಾಳದ ಪಟಗಳೂ, ಬೆನ್ನೆಲುಬಿನ ನಕ್ಷೆಗಳೂ, ಹೃದಯ ಕಮಲದ ಚಿತ್ರಗಳೂ ಮತ್ತು ಶರೀರ ಸಂಬಂಧವಾದ ಅನೇಕ ಚಿತ್ರಪಟಗಳೂ ಇವುಗಳನ್ನು ಡಾಕ್ಟರುಗಳು ಆಗಾಗ್ಗೆ ಈ ಗ್ರಂಥಕರ್ತರಿಗೆ ತಂದುಕೊಡುತ್ತಿದ್ದರು. ಇದರ ಮೇಲೆ ಈ ಗ್ರಂಥಕರ್ತರು ಶಾರೀರಕ ವಿಷಯಗಳುಳ್ಳ ಸ್ಥಳಗಳಲ್ಲಿ ಆಯಾ ಪಟಗಳನ್ನು ಗ್ರಂಥಗಳಲ್ಲಿ ಸೇರಿಸುವುದಕ್ಕಾಗಿ, ಆ ಚಿತ್ರಗಳಂತೆಯೇ ಕೈಯಲ್ಲಿ ಚಿತ್ರಿಸಿ (ಡ್ರಾಯಿಂಗ್ ಬರೆದು) ಬ್ಲಾಕುಗಳನ್ನು ತಯಾರಿಸಿ ಆ ಮೂಲಕ ಚಿತ್ರಗಳನ್ನು ಮುದ್ರಿಸಿ ಈ ಗ್ರಂಥದಲ್ಲಿ ಸೇರಿಸಿದ್ದಾರೆಂದು ತಿಳಿಯಬೇಕು.

ಶಾ ॥ ಯೋಗಾಭ್ಯಾಸದ ಸೈಪದ ಪ್ರಾಪ್ತ ಪಥಗಳ್ ♦ ಯೋಗಪ್ರಧಾನಂಗಳಿಂ
ಯೋಗೀಂದ್ರ ರ್ಬಹುಕಾಲಮುಂ ಭುವಿಯೊಳೀ ♦ ದೇಹಂಗಳಂ ಸಿಲ್ಲಿಸಲ್ ॥
ರಾಗೋತ್ಪಾಟನೆ ನೈಜ ತೀವ್ರತರದಾ ♦ ವೈರಾಗ್ಯಮುಂ ಪ್ರಾಂತು ಸೋ
ಜ್ಞಾನಾರಂ ಭುಗ ಲಕ್ಷ್ಯಗಳ್ ತಿಳಿಪುದೀ ♦ ಸದ್ಗ್ರಂಥ [illegible]

ಉ ॥ ಯೋಗಿಗ ಳಿಷ್ಟ ಸಂಪದ ಯುಕ್ತಿ ♦ ಯೋ ಳಿಪದೊಳ್ಪರೆ? ಯಿರ್ದ ರಲ್ಲ ತಾ ।
ನಾಗಿಪರಲ್ಲ ಪಲ್ಲಗಿಗ ♦ ಸುಸ್ರ್ಮನೆ [illegible]

ಯೋಗಿಯ ಗ್ರಂಥಗಳ ಪಠಿಸ ♦ ಲಾಮತಿವಂತರಿಗುಂ ನಿಜಂ ಮಹಾ ।
ಯೋಗವು ನಂದವುಂ ಪ್ರತಿ ದಿ ♦ ನಂ ಬಿಡ ದಾಚರಿಸಲ್ಕೆ ಸಿದ್ಧಿಕುಂ ॥

## ಕಲುವಲಪಲ್ಲಿ ರಂಗನಾಥ ಶಾಸ್ತ್ರಿ. (ತೆಲುಗು)

ಓ ಸಹೋದರ ಸಹೋದರಿಯರೇ ! ಇದು ಪಂಡಿತರಿಂದ ಪರಿಶೀಲಿಸಲ್ಪಟ್ಟು ತಪ್ಪು ಸರಿಪಡಿಸಿ ಮುದ್ರಿತವಾದ ಗ್ರಂಥವಲ್ಲ. ಇದರಲ್ಲಿ ಲಿಪಿಯಲ್ಲಿನ ತಪ್ಪುಗಳೂ, ಮಾತಿನ ಭೇದಗಳೂ ಅನೇಕವಿರಬಹುದು. ಅವುಗಳನ್ನೆಲ್ಲಾ, ಕವಿಶ್ರೇಷ್ಠರೂ, ವಿದ್ವಾಂಸರೂ ಮತ್ತು ಉಳಿದ ಸ್ತ್ರೀ ಪುರುಷರೂ ಮನ್ನಿಸಿ ಸತ್ತು ವಿಷಯಗಳನ್ನು ಮಟ್ಟಿಗೆ ಗ್ರಹಿಸಬೇಕೆಂದು ಈ ಗ್ರಂಥವನ್ನು ಓದಿದವರೆಲ್ಲರಿಗೂ ಅತಿ ವಿನಯಪೂರ್ವಕವಾಗಿ ನಮಸ್ಕರಿಸಿ ಬೇಡುವಂಥ ಮತ್ತು ಸಮಸ್ತರಿಗೂ ಕ್ಷೇಮವನ್ನು ಕೋರುವಂಥ,

ಶ್ರೀ

ಪರಮಹಂಸ ಸಚ್ಚಿದಾನಂದ.

---




ತತ್ಸತ್.

ಶ್ರೀ ಪರಬ್ರಹ್ಮಣೇ ನಮಃ.

# ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತವು.

## ಗ್ರಂಥ ಪ್ರಾರಂಭಃ.

## ಶ್ರೀ ಸದ್ಗುರು ಸ್ತುತಿ.

ಶ್ಲೋ ॥ " ಯಸ್ಯಾಂತರ್ನಾದಿಮಧ್ಯಂ ನ ಹಿ ಕರಚರಣಂ ನಾಮಗೋತ್ರಂ ನ ಸೂತ್ರಂ।
ನೋ ಜಾತಿ ರ್ನೈವ ವರ್ಣಾ ನ ಭವತಿ ಪುರುಷೋ ನಾ ನಪುಂಸಂ ನ ಚ ಸ್ತ್ರೀ ॥
ನಾಕಾರಂ ನೋ ವಿಕಾರಂ ನ ಹಿ ಜನಿಮರಣಂ ನಾಸ್ತಿ ಪುಣ್ಯಂ ನ ಪಾಪಂ।
ನೋ ತತ್ವಂ ತತ್ವ ಮೇಕಂ ಸಹಜಸಮರಸಂ ಸದ್ಗುರುಂ ತಂ ನಮಾಮಿ " ॥

ಭಗವಂತನಾದ ಆ ಸ್ವಾಮಿಯು ಎಂಥವನು ಆತನ ಸ್ವರೂಪವೆಂತಹದು ಎಂದರೆ:—ಯಸ್ಯಾಂತರ್ನಾದಿಮಧ್ಯಂ=ಮೊದಲು ಮಧ್ಯ ಕೊನೆಯಿಲ್ಲದವನು; ಆತನಿಲ್ಲದಿರುವ ಸ್ಥಳವು ಸೂಜಿ ಚುಚ್ಚುವಷ್ಟೂ ಇಲ್ಲ; ಎಂದು ಗುರುವು ಹೇಳಲು ಶಿಷ್ಯನು, "ಓ ಸ್ವಾಮಿ! ಆ ಭಗವಂತನು ಇಲ್ಲದಿರುವ ಸ್ಥಳವು ಸೂಜಿಯ ಮೊನೆ ಇಡುವಷ್ಟೂ ಇಲ್ಲವೆಂದು ಹೇಳಿದಿರಲ್ಲವೇ! ಸೂಜಿಯನ್ನು ಭೂಮಿಯಲ್ಲಿ ನಿಲ್ಲಿಸಿದರೆ ನಿಂತುಕೊಳ್ಳುತ್ತದೆ. ಹೀಗಿರಲು ಆತನಿಲ್ಲದಿರುವ ಸ್ಥಳವು ಸೂಜಿ ನಾಟುವಷ್ಟು ಕೂಡ ಇಲ್ಲವು ಎಂದು ಹೇಗೆ ಹೇಳಬಹುದು?" ಎಂದು ಕೇಳಲು, ಗುರುವು "ಬಾಲಾ! ಹೇಳುವೆನು ಕೇಳು; ಸೂಜಿ ನಿಲ್ಲುವ ಸ್ಥಳದಲ್ಲಿ ಗುಂಡಿ ಅಗೆದದ್ದೇ ಆದರೆ ಆಕಾಶ ಅಂದರೆ ಬಯಲು ಉಂಟಾಗು

ತ್ತದೆ. ಹೀಗೆ ಅಗೆಯುತ್ತಾ ಹೋದರೆ ಒಂದು ಬಾವಿಯಾಗಿ ಅದರಲ್ಲಿ ನೀರಿನ ಊಟೆಯೂ ಹುಟ್ಟುತ್ತದೆ. ಈ ನೀರನ್ನೆಲ್ಲಾ ತೆಗೆದು ಪುನಃ ಅಗೆಯುತ್ತಾ ಹೋದರೆ ಭಂಗಾರ, ಬೆಳ್ಳಿ, ತಾಮ್ರ, ಕಬ್ಬಿಣ, ಸೀಸ, ಕಲ್ಲಿದ್ದಲು (Coal) ಇವೇ ಮೊದಲಾದುವುಗಳು ಕಾಣಬರುತ್ತವೆ. ಇವುಗಳ ಕೆಳಗೆ ಪಾತಾಳ ಗಂಗೆ ಇದೆ. ಈ ಪಾತಾಳಗಂಗೆಯನ್ನು ತೆಗೆಯಲು ಸಾಧ್ಯವಿಲ್ಲ. ಆ ಪಾತಾಳಗಂಗೆಯಲ್ಲಿ ಮುಳುಗಿ ಮುಂದರಿದರೆ ಅದರ ಕೆಳಗೆ ಬಯಲು ಸಿಕ್ಕುತ್ತದೆ. ನಾವು ವಾಸಮಾಡುವ ಭೂಮಿಯ ಮೇಲಿರುವ ಬಯಲೂ ಪಾತಾಳಗಂಗೆಯ ಕೆಳಗಿರುವ ಬಯಲೂ ಒಂದಾಗಿ ಬೆರೆತು ಹೋಗುತ್ತದೆ. ಈ ಎರಡು ಬಯಲುಗಳೂ ಒಂದಾಗಿ ಸೇರಿದಾಗ ಸೂಜಿ ನಿಲ್ಲಿಸುವುದಕ್ಕೆ ಜಾಗವೆಲ್ಲಿಯದು ? ಜಾಗವಿಲ್ಲವಲ್ಲವೇ ? ನಮ್ಮ ಮೇಲ್ಭಾಗದಲ್ಲಿರುವ ಬಯಲಿನ ಗುಣವು ಎಂತಹುದೆಂದರೆ, ಒಂದು ಕಲ್ಲನ್ನು ಮೇಲಕ್ಕೆಸೆದದ್ದೇ ಆದರೆ ಅದನ್ನು ಕೆಳಕ್ಕೆ ಬೀಳಿಸುತ್ತದೆ. ಆದರೆ ಪಾತಾಳಗಂಗೆಯ ಕೆಳಗಿರುವ ಬಯಲು ಇಂತಹುದಲ್ಲ. ಆ ಬಯಲು ಯಾವ ವಸ್ತುವನ್ನೂ ಕೆಳಕ್ಕೆ ಹೋಗಲೀಯದೆ ಮೇಲೆಯೇ ನಿಲ್ಲುವಂತೆ ಮಾಡುವುದು. ಭೂಮಿಯ ಮೇಲಿರುವ ಬಯಲೂ ಪಾತಾಳಗಂಗೆಯ ಕೆಳಗಿರುವ ಬಯಲೂ ಬರಿಯವಲ್ಲ. ಇವುಗಳಲ್ಲಿ ವಾಯುವು ತುಂಬಿದೆ. ಪಾತಾಳಗಂಗೆಯ ಕೆಳಗಿರುವ ಬಯಲಿನಲ್ಲಿ ಅಣಗಿರುವ ವಾಯುವಿನ ಮೇಲ್ಭಾಗದಲ್ಲಿ ಹಿಂದೆ ಹೇಳಿದ ಭಂಗಾರ, ಬೆಳ್ಳಿ, ತಾಮ್ರ, ಇವೇ ಮೊದಲಾದ ಲೋಹಗಳೂ ಅದರಮೇಲೆ ಪಾನಕ್ಕೆ ಯೋಗ್ಯವಾದ ನೀರಿನ ಬುಗ್ಗೆಗಳೂ ಅವುಗಳ ಮೇಲೆ ಭೂಮಿಯೂ, ಭೂಮಿಯ ಮೇಲೆ ಪರ್ವತ, ವನ, ದುರ್ಗ ಮೊದಲಾದುವುಗಳೂ ಮತ್ತು ನಾವು ವಾಸಮಾಡುವಂಥ ಮನೆಗಳೂ ಉಪ್ಪರಿಗೆಗಳೂ ಇವೆಲ್ಲವೂ ನಿಂತಿರುತ್ತವೆ. ಅಲ್ಲಲ್ಲಿ ಆಗಾಗ್ಗೆ ಆಕಾಶದಲ್ಲಿ ತುಂಬಿರುವ ವಾಯುವು ಕದಲುವುದೂ ಉಂಟು. ಹೀಗೆ ಪಟ್ಟಣ, ಗ್ರಾಮ, ವನ, ಪರ್ವತ ಇವೇ ಮೊದಲಾದುವುಗಳ ಕೆಳಗಿರುವ ಪಾತಾಳಗಂಗೆಯ ತಳಭಾಗದಲ್ಲಿ ಅಡಕವಾಗಿರುವ ವಾಯುವಿನ ಸ್ವಲ್ಪ ಭಾಗವು ಕದಲಿ ಮತ್ತೆ ಸ್ವಲ್ಪ ಭಾಗವು ಕದಲದೇ ಇದ್ದರೆ ತಕ್ಷಣವೇ ಭೂಮಿಯು ಬಿರುಕು ಬಿಡುತ್ತದೆ. ಹೀಗೆ ಭೂಮಿ ಒಡೆದ ಸ್ಥಳದಲ್ಲಿ ನಿಂತಿರುವ ಮನೆಗಳು, ಉಪ್ಪರಿಗೆಗಳು

ಇನೇ ಮೊದಲಾದವುಗಳು ನಿಲ್ಲುವುದಕ್ಕೆ ಯಾವ ಆಧಾರವೂ ಇಲ್ಲವಾಗಿ ಆ ಮನೆಗಳೆಲ್ಲವೂ ಪಾತಾಳಗಂಗೆಯ ಕೆಳಗಿರುವ ಆಕಾಶದಲ್ಲಿ ಅಡಗಿರುವ ವಾಯುವಿನ ಮೇಲೆ ಬಿದ್ದು ಅವುಗಳೆಲ್ಲವೂ ಆ ಆಕಾಶದ ಮೇಲೆಯೇ ನಿಂತುಹೋಗುವುವೇ ಹೊರತು ಅದರೊಳಕ್ಕೆ ಹೋಗಲಾರವು. ಇದರ ಮೇಲೆ, ಎರಡಾಗಿ ಸೇರಿದ ವಾಯುವಿನಲ್ಲಿ ಒಂದುಭಾಗ ಮಾತ್ರ ಮೆಲ್ಲಗೆ ಕದಲುತ್ತಿದ್ದರೆ, ಅದರಲ್ಲಿ ನಿಂತಿರುವ ಮನೆಮಠಗಳೂ ಮೆಲ್ಲಗೇ ಕದಲುತ್ತವೆ. ಹಾಗಿಲ್ಲದೆ, ಆ ವಾಯುವು ಅತಿವೇಗವಾಗಿ ಕದಲಿದ್ದೇ ಆದರೆ, ಆಗ ಮನೆಮೊದಲಾದುವುಗಳೂ ವೇಗವಾಗಿ ಅಲ್ಲಾಡುತ್ತವೆ. ಇನ್ನೂ ವೇಗವಾಗಿ ಆ ವಾಯುವು ಚಲಿಸಿದ್ದೇ ಆದರೆ, ಮನೆಗಳೂ ವಿಶೇಷ ವೇಗವಾಗಿಯೇ ಅಲ್ಲಾಡಿ ಬಿದ್ದುಹೋಗುತ್ತವೆ. ಇದನ್ನೇ ಜನರು ಭೂಕಂಪವೆಂದು ಹೇಳುತ್ತಾರೆ. ಇದರಮೇಲೆ ಚಲಿಸುತ್ತಿದ್ದ ವಾಯುವು ಚಲಿಸದೆ ನಿಂತರೆ, ಚಲಿಸದಿರುವ ಬೇರೆ ಭಾಗದ ವಾಯುವಿನೊಡನೆ ಸೇರಿ ಒಂದಾಗುತ್ತದೆ. **ಆಗ ಒಡೆದ ಭೂಮಿಯೂ ಒಡೆಯದೆ ಇದ್ದ ಭೂಭಾಗವೂ ಒಂದಾಗಿ ಕಲೆತುಹೋಗುತ್ತದೆ.** ಇದುವೇದಪ್ರಮಾಣವು. ವೇದದಲ್ಲಿ ಹೇಳಿರುವುದಕ್ಕೂ ಪ್ರಪಂಚಾನುಭವಕ್ಕೂ ಪ್ರತ್ಯಕ್ಷ ದೃಷ್ಟಾಂತವನ್ನು ಈ ಕೆಳಗೆ ವಿವರಿಸಿದೆ.

ಪಾತಾಳಗಂಗೆಯ ಕೆಳಗಿರುವ ಬಯಲಿನಲ್ಲಿ ತುಂಬಿರುವ ವಾಯುವಿನ ಒಂದುಭಾಗವು ಕದಲದೆಯಿದ್ದು ಮತ್ತೊಂದು ಭಾಗವು ಕದಲಿದ್ದೇ ಆದರೆ ಭೂಮಿಯು ಒಡೆಯುತ್ತದೆ ಎಂದು ಹಿಂದೆಯೇ ತಿಳಿಸಿದೆ. ಅದಕ್ಕೆ ದೃಷ್ಟಾಂತವಾಗಿ 1935ನೇ ಇಸವಿಯಲ್ಲಿ ಬ್ರಿಟಿಷ್ ಬೆಲೂಚಿಸ್ಥಾನದ ಮುಖ್ಯ ಪಟ್ಟಣವಾದ'ಕ್ವೆಟ್ಟಾ'ಎಂಬುವ ಸ್ಥಳದಲ್ಲಿ ಭೂಕಂಪವುಂಟಾಗಿ ಭೂಮಿಯು ಒಡೆದಿರುವುದನ್ನು ಇಗೋ ☞ ಈ ಮುಂದೆ ಕಾಣುವ ಚಿತ್ರದಲ್ಲಿ ಬಾಣದ ಕೊನೆಯ (arrow mark) ಸಹಾಯದಿಂದ ತೋರಿಸಿದೆ. ಭೂಮಿಯು ಬಿರುಕು ಬಿಟ್ಟಿರುವ ಭಾಗದಲ್ಲಿ ಇದ್ದ ಮನೆಗಳು, ಉಪ್ಪರಿಗೆಗಳು ಮೊದಲಾದುವುಗಳು ತಮಗೆ ನಿಲ್ಲುವುದಕ್ಕೆ ಯಾವ ಆಧಾರವೂ ಇಲ್ಲದಿರುವುದರಿಂದ ಅವುಗಳೆಲ್ಲವೂ ಪಾತಾಳಗಂಗೆಯ ತಳಭಾಗದಲ್ಲಿ ಅಡಗಿರುವ ವಾಯುವಿನ ಮೇಲೆಬಿದ್ದು ಅಲ್ಲಿಯೇ ನಿಂತುಹೋಗುತ್ತವೆಯೆಂಬ ವಿಷಯವನ್ನು ಹಿಂದೆಯೇ ಹೇಳಿದೆ.



1. ಕ್ವೆಟ್ಟಾದಲ್ಲಿ ಭೂಕಂಪದಿಂದ " ಆಫೀಸರ ಕ್ಲಬ್ " ಬಿದ್ದುಹೋಗಿರುವ ದೃಶ್ಯ.



2. ಕ್ವೆಟ್ಟಾದಲ್ಲಿ ಭೂಕಂಪದಿಂದ ಭೂಮಿಯು ಒಡೆದಿರುವ ದೃಶ್ಯ.



3. ಕ್ವೆಟ್ಟಾದಲ್ಲಿ ಭೂಕಂಪಕ್ಕೆ ಮೊದಲಿದ್ದ "ಬ್ರೂಸ್ ರೋಡ್."



4. ಕ್ವೆಟ್ಟಾದಲ್ಲಿ ಭೂಕಂಪವಾದಮೇಲೆ "ಬ್ರೂಸ್ ರೋಡ್" ನ ಸ್ಥಿತಿ.



5. ಕ್ವೆಟ್ಟಾದಲ್ಲಿ ಭೂಕಂಪಕ್ಕೆ ಮೊದಲಿದ್ದ "ಟೌನ್ ಹಾಲ್."



6. ಕ್ವೆಟ್ಟಾದಲ್ಲಿ ಭೂಕಂಪವಾದ ನಂತರ ಇರುವ "ಟೌನ್ ಹಾಲ್" ಸ್ಥಿತಿ.



7. ಕ್ವೆಟ್ಟಾದಲ್ಲಿ ಭೂಕಂಪವಾದಮೇಲೆ ಇರುವ " ಸೆಂಟ್‌ಜಾರ್ಜ್ ರೋಡ್ " ಸ್ಥಿತಿ.



8. ಕ್ವೆಟ್ಟಾದಲ್ಲಿ ಭೂಕಂಪವಾದಮೇಲೆ ಇರುವ " ಸಿವಿಲ್ ಜೈಲ್ " ಸ್ಥಿತಿ.



9. ಕ್ವೆಟ್ಟಾದಲ್ಲಿ ಭೂಕಂಪವಾದ ಬಳಿಕ ಇರುವ "ರೈಲ್ವೇ ಸ್ಟೇಷನ್" ಸ್ಥಿತಿ.



10. ಕ್ವೆಟ್ಟಾದಲ್ಲಿ ಭೂಕಂಪವಾದ ನಂತರ ಇರುವ "ಸಿಂಧಿಸಾರೆ" ಸ್ಥಿತಿ.



11. ಕ್ವೆಟ್ಟಾದಲ್ಲಿ ಭೂಕಂಪವಾದ ನಂತರ ಇರುವ "ಕಿಂಗ್ ಎಡ್ವರ್ಡ್ ಮೆಮೋರಿಯಲ್ ಸಾರೆ" ಸ್ಥಿತಿ.



12. ಕ್ವೆಟ್ಟಾ ಸಾರಜ್‌ಗಂಜ್ ಬಜಾರ್‌ನಲ್ಲಿ ಭೂಕಂಪದಿಂದ ಮೃತಿಹೊಂದಿರುವದೃಶ್ಯ.



13. ಕ್ವೆಟ್ಟಾದಲ್ಲಿ ಭೂಕಂಪವಾದಮೇಲೆ “ ಮುಸ್ತಂಗ್ ಸಿಟಿ ”ಯು ಇರುವ ಸ್ಥಿತಿ.



14. ಕ್ವೆಟ್ಟಾದಲ್ಲಿ ಭೂಕಂಪವಾದ ನಂತರ “ ಅಂಗಲ್ ರೋಡ್ ” ಇರುವ ರೀತಿ.

ಇದೇ ರೀತಿಯಲ್ಲಿಯೇ ಮೇಲ್ಕಂಡ ಸ್ಥಳದಲ್ಲಿದ್ದ ಕಟ್ಟಡಗಳೆಲ್ಲವೂ ಬಿದ್ದು ಬಿರುಕುಗಳಲ್ಲಿ ಕೆಳಗಿಳಿದು ಅಧೋಮುಖವಾಗಿ ಚಲಿಸುತ್ತಿರುವುದನ್ನು ಆ ಚಿತ್ರಪಟದಲ್ಲಿ ಕಾಣಬಹುದು. ಈ ಕಟ್ಟಡಗಳ ಭಾಗಗಳೆಲ್ಲವೂ ಪಾತಾಳ ಗಂಗೆಯ ಕೆಳಭಾಗದಲ್ಲಿರುವ ವಾಯುವಿನಲ್ಲಿ ಹೋಗಿ ಸೇರಿ ಅಲ್ಲಿಯೇ ನಿಂತು ಬಿಡುವುವೆಂದು ತಿಳಿಯಬೇಕು.

ಇದರ ಮೇಲೆ ಪಾತಾಳಗಂಗೆಯ ತಳಭಾಗದಲ್ಲಿರುವ ವಾಯುವು ಕದಲಿದ್ದರ ಫಲವಾಗಿ ಭೂಮಿಯು ಒಡೆದು ಮನೆಗಳು ಬಿದ್ದು ಜನಗಳು ಸಾಯುತ್ತಿರುವುದು ಮೊದಲಾದುವುಗಳನ್ನು ತೋರಿಸುವ ಕೆಲವು ಚಿತ್ರ ಪಠಗಳನ್ನು ಮಾತ್ರ ಇದರಲ್ಲಿ ತೋರಿಸಿದೆ. ಹೀಗೆ ಭೂಕಂಪದ ಸಲು ವಾಗಿ ನೆಲಕ್ಕುರುಳಿ ಹಾಳಾದ ಅನೇಕ ಸುಂದರಭವನಗಳ ಚಿತ್ರಪಠಗಳನ್ನು ಇದರಲ್ಲಿ ಸೇರಿಸಿಲ್ಲವು.

ಯಾವುದೊಂದು ವಿಷಯವನ್ನಾಗಲಿ ಶೃತಿ, ಯುಕ್ತಿ, ಅನುಭವ ಇವುಗಳಿಗೆ ಸರಿಯಾಗಿರಬೇಕೆಂದು ವಿಶದಪಡಿಸಬೇಕಾದುದು ನ್ಯಾಯ ಸಮ್ಮತವಾದದ್ದು. ಆದುದರಿಂದಲೇ ಶೃತಿಯಲ್ಲಿರುವುದೂ ನಮ್ಮ ಯುಕ್ತಿ ಯಿಂದ ಅಂದರೆ ಬುದ್ಧಿಬಲದಿಂದ ಇಲ್ಲಿ ಹೇಳಿರುವುದೂ ಮತ್ತು ಪ್ರತ್ಯಕ್ಷ ನಿದರ್ಶನವೂ ಒಂದಕ್ಕೊಂದು ತಾಳೆಹಾಕಿ ಹೀಗೆಯೇ ಸರಿಯೆಂದು ನಿರ್ಣಯಿಸುವುದಕ್ಕಾಗಿಯೇ ಈ ವಿಷಯವನ್ನು ಇಲ್ಲಿ ಇಷ್ಟು ವಿಸ್ತರಿಸಿ ಹೇಳಿದೆ. ಇದೇ ರೀತಿಯಲ್ಲಿ ಈ ಗ್ರಂಥದಲ್ಲಿ ಹೇಳಿರುವ ವಿಷಯಗಳೆಲ್ಲವೂ ಶೃತಿ, ಯುಕ್ತಿ ಅಂದರೆ ಬುದ್ಧಿಚಾತುರ್ಯ ಮತ್ತು ಅನುಭವ ಇವುಗಳಿಗೆ ಸರಿಯಾದವುಗಳೇ ಹೊರತು ಮತ್ತೆ ಬೇರೆಯಿಲ್ಲ. ಇದರಲ್ಲಿರುವ ಅನೇಕ ವಿಷಯುಗಳನ್ನು ಯೋಗದೃಷ್ಟಿಯಿಂದ ತಿಳಿದು ಪ್ರಪಂಚಕ್ಕೆ ತಿಳಿಯಹೇಳ ಬೇಕೆಂಬ ಉದ್ದೇಶದಿಂದ ಎಲ್ಲವನ್ನೂ ಇಲ್ಲಿ ವಿಸ್ತಾರವಾಗಿ ಹೇಳಿದೆ.

ವೇದಗಳಲ್ಲಿ ಭಗವಂತನಾದ ದೇವರು ಬಟ್ಟಬಯಲು (ಆಕಾಶ) ಎಂದು ಹೇಳಿದೆಯಲ್ಲವೇ? ಇದುವರಿವಿಗೂ ಹೇಳಿದ ಬಯಲು ಭಗವಂತನೇ ಎಂದರೆ, ಈ ಬಯಲು ಭಗವಂತನಲ್ಲ. ಭಗವಂತನು ಈ ಬಯಲಿನಲ್ಲಿ ಬಯಲಾಗಿ ಅಣಗಿದ್ದಾನೆಯೇ ಹೊರತು ನಮ್ಮ ಕಣ್ಣೆದುರಿಗಿರುವ ಬಯಲು ಪರಮಾ ತ್ಮನಲ್ಲ. ಇದಕ್ಕೆ ಒಂದು ದೃಷ್ಟಾಂತವುಂಟು, ಕೇಳು.

ಒಂದು ವಿಶಾಲವಾದ ಕಟ್ಟಡದ ನಡುಭಾಗದಲ್ಲಿ (ಅಂದರೆ ಹಾಲಿನಲ್ಲಿ) ಉಪನ್ಯಾಸ ನಡೆಯುತ್ತಿದ್ದಾಗ, ಈ ನಡುಮನೆಗೆ ಸ್ವಲ್ಪ ದೂರದಲ್ಲಿರುವ ನಡುಹಾದಿಯಲ್ಲಿ ಯಾವನೋ ಒಬ್ಬನು ಸುವಾಸನೆಯುಳ್ಳ ಮಲ್ಲಿಗೆ ಹೂವನ್ನು ತೆಗೆದುಕೊಂಡು ಹೋಗುತ್ತಿರಲು ಸಮೀಪದಲ್ಲಿರುವ ವಾಯುವು ಆ ಪುಷ್ಪದ ವಾಸನೆಯನ್ನು ತೆಗೆದುಕೊಂಡು ಉಪನ್ಯಾಸ ಭವನದಲ್ಲಿರುವ ವಾಯುವಿನಲ್ಲಿ ಬೆರತು ಅದೆಲ್ಲವನ್ನೂ ಸುವಾಸನೆಯುಳ್ಳನ್ನಾಗಿ ಮಾಡುತ್ತದೆ. ಈ ವಾಯುವನ್ನು ಆ ಸ್ಥಳದಲ್ಲಿ ನೆರೆದಿದ್ದ ಜನಗಳೆಲ್ಲರೂ ತಮ್ಮ ಮೂಗಿನಿಂದ ವಾಸಿಸಿ, ತಾವು ಆ ಮಲ್ಲಿಗೆ ಹೂವನ್ನು ನೋಡದಿದ್ದರೂ ಸುವಾಸನೆಯನ್ನು ತಿಳಿದಿದ್ದರಿಂದ ಯಾವನೋ ಒಬ್ಬನು ಮಲ್ಲಿಗೆಯ ಹೂವನ್ನು ನಡುಹಾದಿಯಲ್ಲಿ ತೆಗೆದುಕೊಂಡು ಹೋಗಿರಬೇಕು ಎಂದು ತಿಳಿದುಕೊಳ್ಳುತ್ತಾರೆ.

ಗಾಳಿಯಲ್ಲಿ ಹೂವಿನ ವಾಸನೆ ಹೇಗೆ ಅಡಗಿದೆಯೋ ಅದರಂತೆಯೇ ಭಗವಂತನಾದ ದೇವರು ಈ ಬಯಲಾಗಿ ಕಾಣಿಸುವ ಆಕಾಶದಲ್ಲಿಯೇ ಅಡಗಿರುತ್ತಾನೆ. ಇದೂ ಅಲ್ಲದೆ, ನಾವು ವಾಸಮಾಡುವ ಭೂಮಿಯ ಮೇಲ್ಭಾಗದಲ್ಲಿ ಕಾಣ್ಬರುವ ಆಕಾಶವು ಅಂದರೆ ಬಯಲು, ನೀಲವರ್ಣವಾಗಿ ತೋರಿ ಬರುತ್ತದೆಯೇ ಹೊರತಾಗಿ ವಸ್ತುತಃ ನೀಲವರ್ಣವು ಅಲ್ಲಿ ಇಲ್ಲವೇ ಇಲ್ಲ. ಹಾಗೆ ನಮ್ಮ ಕಣ್ಣುಗಳಿಗೆ ಕಾಣ್ಬರುವುದಕ್ಕೆ ಕಾರಣವೇನಂದರೆ, ಮಾಂಸಖಂಡಗಳಿಂದ ಕೂಡಿದ ಈ ನಮ್ಮ ಕಣ್ಣುಗಳ ದೃಷ್ಟಿಯು ಯಾವ ಸ್ಥಳದಲ್ಲಿ ಹೋಗಿ ನಿಲ್ಲುವುದೋ ಆ ಸ್ಥಳದಲ್ಲಿ ನೀಲವರ್ಣವಾಗಿ ಕಾಣುತ್ತದೆಯೇ ಹೊರತು ನೀಲವರ್ಣವೆಂಬುದೇ ಇಲ್ಲ.” ಎಂದು ತಿಳಿಯಬೇಕು.

“ಯಸ್ಯಾಂತರ್ನಾದಿಮಧ್ಯಂ” ಎಂಬ ವಾಕ್ಯಕ್ಕೆ ಇಷ್ಟು ವಿಶೇಷವಾಗಿ ತಾತ್ಪರ್ಯ ಹೇಳಬೇಕಾಯಿತು. ಆಕಾಶಸ್ವರೂಪನಾದ ಆ ಪರಬ್ರಹ್ಮನಿಗೆ, ನ ಹಿ ಕರಚರಣಂ=ಕೈಕಾಲುಗಳಿಲ್ಲವು. ನಾಮ.ಗೋತ್ರಂ ನ=ರಾಮ, ಕೃಷ್ಣ, ಗೋವಿಂದ, ಪರಂಧಾಮಾದಿ ನಾಮುಗಳೂ, ಶಿವಗೋತ್ರ, ವಿಷ್ಣುಗೋತ್ರ ಇವೇ ಮೊದಲಾದ ಹುಟ್ಟಿದ ವಂಶಗಳ ಹೆಸರೂ ಆತನಿಗೆ ಇಲ್ಲವು. ನ ಸೂತ್ರಂ=ಯಜ್ಞೋಪವೀತವೆಂಬ ಜನಿವಾರದ ಚಿಹ್ನೆಯೂ

ಇಲ್ಲವು. ನೈೂ ಜಾತಿಃ=ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲಾದಿ ಜಾತಿಗಳೂ ಮನುಷ್ಯ, ದೇವತೆ, ರಾಕ್ಷಸ ಮೊದಲಾದ ಜಾತಿಗಳೂ ಇಲ್ಲವು. ನೈವ ವರ್ಣಾಃ=ಕೆಂಪು, ಬಿಳುಪು, ಹಸುರು, ನೀಲ, ಕಪ್ಪು, ಹಳದಿ ಮೊದಲಾದ ಬಣ್ಣಗಳೂ ಆತನಿಗಿಲ್ಲವು. ನ ಭವತಿ ಪುರುಷಃ=ಆತನು ಪುರುಷನೂ ಅಲ್ಲ, ನಾ ನಪುಂಸಃ= ನಪುಂಸಕನೂ (ಷಂಡನೂ) ಅಲ್ಲ, ನ ಚ ಸ್ತ್ರೀ= ಹೆಂಗಸೂ ಅಲ್ಲ. ನಾಕಾರಂ=ಯಾವ ಬಗೆಯಾದ ರೂಪವೂ ಇಲ್ಲ. ನೋ ವಿಕಾರಂ=ಎಂತಹ ಸ್ಥಿತಿ ಅಥವಾ ರೂಪ ವ್ಯತ್ಯಾಸವೂ ಇಲ್ಲ. ನ ಹಿ ಜನಿಮರಣಂ=ಆತನಿಗೆ ಹುಟ್ಟುಸಾವುಗಳೂ ಇಲ್ಲ, ಮತ್ತು ನಾಸ್ತಿ ಪುಣ್ಯಂ ನ ಪಾಪಂ=ಪುಣ್ಯಪಾಪಗಳೆರಡೂ ಆತನನ್ನು ಮುಟ್ಟವು. ನೋ ತತ್ವಂ= ಯಾವ ಬಗೆಯ ತತ್ವವೂ ಇಲ್ಲದವನಾಗಿಯೂ, ತತ್ವಮೇಕಂ=ಎಲ್ಲೆಲ್ಲಿಯೂ ತುಂಬಿ ತುಳುಕಾಡುತ್ತಿರುವ ಒಂದೇ ತತ್ವದಿಂದ ಕೂಡಿರುವನಾಗಿಯೂ, ಸಹಜಸಮರಸಂ=ಸಮಸ್ತ ಜೀವರಾಶಿಗಳ ಹೃದಯ ಕಮಲಗಳಲ್ಲಿ ಸಮರಸವಾಗಿ ಅಂದರೆ ಭೇದವಿಲ್ಲದೆ ಏಕಭಾವದಿಂದ ತುಂಬಿಕೊಂಡೂ ಆ ಪರಮಾತ್ಮನು ಇದ್ದಾನೆ. ಅಂತಹ ಸದ್ಗುರುಂ=ಅಜ್ಞಾನವನ್ನು ನಾಶಮಾಡಿ ಜ್ಞಾನವನ್ನು ಹುಟ್ಟಿಸುವುದರಲ್ಲಿ ಶಕ್ತನಾದ ಆ ಪರಮ ಸದ್ಗುರುವಾದ ತಂ=ಆ ಪರಮಾತ್ಮನಿಗೆ, ನಮಾಮಿ=ನಮಸ್ಕರಿಸುತ್ತಿದ್ದೇನೆ.

ಆನಂದ ಮಾನಂದಕರಂ ಪ್ರಸನ್ನಂ ।
ಜ್ಞಾನಸ್ವರೂಪಂ ನಿಜಬೋಧಯುಕ್ತಂ ॥
ಯೋಗೀಂದ್ರಮೀಡ್ಯಂ ಭವರೋಗವೈದ್ಯಂ ।
ಶ್ರೀಮದ್ಗುರುಂ ನಿತ್ಯ ಮಹಂ ನಮಾಮಿ ॥

ಆನಂದ ಸ್ವರೂಪನಾದ, ಪರಮ ಸುಖಸಂತೋಷವನ್ನುಂಟುಮಾಡುವಂಥ, ಅನುಗ್ರಹವನ್ನು ದಯಪಾಲಿಸುವ, ನಿರ್ಮಲಜ್ಞಾನಸ್ವರೂಪನಾದ, ತನ್ನ ಬೋಧೆಯನ್ನು ಅಂದರೆ ತನ್ನ ಸ್ವರೂಪವನ್ನು ತಿಳಿಸುವುದಕ್ಕೆ ಅಥವಾ ತಿಳಿಯುವುದಕ್ಕೆ ತಾನೇ ಶಕ್ತನಾದ, ಸದಾ ಯೋಗೀಶ್ವರರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಡುವ, ಸಂಸಾರವೆಂಬ ವ್ಯಾಧಿಗೆ ವೈದ್ಯನಂತಿರುವ, ಎಲ್ಲೆಲ್ಲಿಯೂ ತುಂಬಿ ಆಕಾಶಸ್ವರೂಪನಾಗಿರುವಂಥ, ಆ ಜ್ಞಾನಸ್ವರೂಪಿಯಾದ ಪರಮಾತ್ಮನಿಗೆ ಎಡೆಬಿಡದೆ ನಮಸ್ಕರಿಸುತ್ತೇನೆ.

ನಮೋಽಸ್ತು ಗುರವೇ ತಸ್ಮೈ । ಇಷ್ಟವೇದಸ್ವರೂಪಿಣೇ ॥
ಯಸ್ಯ ವಾಕ್ಯಂ ರುತಂ ಹಂತಿ । ವಿಷಯಂ ಭವಪಂಕಿಲಂ ॥

ಯಾವಾತನ ಅಮೃತಮಯವಾದ ವಾಕ್ಯವು ಸಂಸಾರವೆಂಬ ವಿಷಯವನ್ನು ಹೋಗಲಾಡಿಸುತ್ತದೆಯೋ ಅಂತಹ ಆಕಾಶ ಸ್ವರೂಪನಾದ (ಬಟ್ಟೆ ಬಯಲಾದ) ಶ್ರೀ ಸದ್ಗುರುವನ್ನು ಕುರಿತು ನಮಸ್ಕರಿಸುತ್ತೇನೆ.

ಶ್ಲೋ ॥ ನಮಸ್ತೇ ನಮಸ್ತೇ ಜಗತ್ಕಾರಣಾಯ ।
ನಮಸ್ತೇ ಽ ಸ್ತು ತೇ ಸರ್ವಲೋಕಾಶ್ರಯಾಯ ॥
ನಮೋ ಽ ದ್ವೈತತತ್ವಾಯ ಮುಕ್ತಿಪ್ರದಾಯ ।
ನಮೋ ಬ್ರಹ್ಮಣೇ ವ್ಯಾಪಿನೇ ಶಾಶ್ವತಾಯ ॥

ಸ್ವಯಂಪ್ರಕಾಶನಾದ, ಪ್ರಪಂಚದ ಉತ್ಪತ್ತಿಗೆ ಕಾರಣಭೂತನಾದ ಸಮಸ್ತ ಲೋಕಗಳಿಗೂ ಆಧಾರಭೂತನಾದ, ಅದ್ವಿತೀಯನಾದ ಅಂದರೆ ನಾನು ನೀನು ಎಂಬ ಭೇದವಿಲ್ಲದಿರುವವನಾದ, ಮುಕ್ತಿಸಾಮ್ರಾಜ್ಯವನ್ನು ದಯಪಾಲಿಸುವವನಾದ,ಅಂದರೆ ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತನಾದ, ಎಲ್ಲೆಲ್ಲಿಯೂ ಎಡೆಬಿಡದೆ ಸಮರಸವಾಗಿ ತುಂಬಿತುಳುಕಾಡುತ್ತಿರುವ, ನಾಶರಹಿತನಾದ, ಬ್ರಹ್ಮಸ್ವರೂಪಿಯಾದ ನಿನಗೆ ನಮಸ್ಕಾರವು.

ಶ್ಲೋ ॥ ವಯಂ ತ್ವಾಂ ಸ್ಮರಾಮೋ ವಯಂ ತ್ವಾಂ ಭಜಾಮೋ ।
ವಯಂ ತ್ವಾಂ ಜಗತ್ಸಾಕ್ಷಿರೂಪಂ ನಮಾಮಃ ॥
ಸವೇಗಂ ನಿದಾನಂ ನಿರಾಲಂಬ ಮೀಶಂ ।
ಭವಾಂಬೋಧಿಪೋತಂ ಶರಣ್ಯಂ ವ್ರಜಾಮಃ ॥

ನಾವು ನಿನ್ನನ್ನು ಸ್ಮರಿಸುತ್ತಿದ್ದೇವೆ; ನಾವು ನಿನ್ನನ್ನು ಭಜನೆ ಮಾಡುತ್ತಿದ್ದೇವೆ; ಪ್ರಪಂಚಕ್ಕೆಲ್ಲ ಸಾಕ್ಷಿಭೂತನಾದ ನಿನ್ನೊಬ್ಬನಿಗೇ ನಮ್ಮ ನಮಸ್ಕಾರವು. ಸಮಸ್ತಕ್ಕೂ ಆದಿಕಾರಣನು ನೀನು. ನೀನೇ ಸತ್ಯಸ್ವರೂಪಿಯು; ಆದಿಪುರುಷನೂ ನೀನೇ. ಯಾವ ಆಧಾರವೂ ಇಲ್ಲದೇ ಬಟ್ಟಬಯಲಾಗಿರುವವನೂ ನೀನೇ. ಸಂಸಾರವೆಂಬ ಈ ಸಮುದ್ರವನ್ನು ದಾಟಿಸುವುದಕ್ಕಾಗಿ ನಾವೆಯಂತಿರುವವನೂ ನೀನೆ ಅಂದರೆ ಸಂಸಾರಬಂಧವನ್ನು ಹೋಗಲಾಡಿಸಿ ಮುಕ್ತಿಯನ್ನು ಕಾಣಿಸುವವನೂ ನೀನೆ. ಇಂತಹ ನಿನ್ನನ್ನೇ ರಕ್ಷಕನನ್ನಾಗಿ ನಂಬಿ ನಿನಗೆ ನಾವು ನಮಸ್ಕರಿಸುತ್ತೇವೆ.

ಶ್ಲೋ ॥ ತ್ವಮೇವ ಮಾತಾ ಚ ಪಿತಾ ತ್ವಮೇವ ।
ತ್ವಮೇವ ಬಂಧುಶ್ಚ ಸಖಾ ತ್ವಮೇವ ॥

ತ್ವಮೇವ ವಿದ್ಯಾ ದ್ರವಿಣಂ ತ್ವಮೇವ |
ತ್ವಮೇವ ಸರ್ವಂ ಮಮ ದೇವದೇವ! ||

ನನಗೆ ತಂದೆತಾಯಿಗಳೂ ನೀನೆ, ಸ್ನೇಹಿತ, ಬಂಧುಬಳಗಗಳೂ ನೀನೆ. ನೀನೇ ವಿದ್ಯೆ, (ಜ್ಞಾನ) ನೀನೇ ಧನವು, ಹೆಚ್ಚೇಕೆ ಸಮಸ್ತವೂ ನೀನೆ, ಓ ಪ್ರಕಾಶ ಸ್ವರೂಪಿಯಾದ ಭಗವಂತನೇ! ನೀನೇ ನನ್ನೊಡೆಯನಾದುದರಿಂದ ನಿನಗೆ ನನ್ನ ನಮಸ್ಕಾರವು.

ಶ್ರುತಿ || "ತಸ್ಯ ನಿಶ್ಚಿಂತಾ ಧ್ಯಾನಂ, ಸರ್ವಕರ್ಮ ನಿರಾಕರಣಂ ಆವಾಹನಂ, ನಿಶ್ಚಯಜ್ಞಾನ ಮಾಸನಂ, ಉನ್ಮನೀಭಾವಃ ಪಾದ್ಯಂ, ಪದಾऽಮನಸ್ಕಂ ಅರ್ಘ್ಯಂ, ಸದಾ ದೀಪ್ತಿರಪಾನಾಮೃತವೃತ್ತಿಃ ಸ್ನಾನಂ, ಸರ್ವಾತ್ಮ ಭಾವನಾ ಗಂಧಃ, ದೃಕ್ಸ್ವರೂಪಾವಸ್ಥಾನಂ ಅಕ್ಷತಾಃ, ಚಿದಾಪ್ತಿಃ ಪುಷ್ಪಂ, ಚಿದಗ್ನಿ ಸ್ವರೂಪಂ ಧೂಪಃ, ಚಿದಾದಿತ್ಯಸ್ವರೂಪಂ ದೀಪಃ, ಪರಿಪೂರ್ಣಚಂದ್ರಾಮೃತ ಸ್ಯೈಕೀಕರಣಂ ನೈವೇದ್ಯಂ, ನಿಶ್ಚಲತ್ವಂ ಪ್ರದಕ್ಷಿಣಂ, ಸೋऽಹಂಭಾವೋ ನಮಸ್ಕಾರಃ, ಮೌನಂ ಸ್ತುತಿಃ, ಸರ್ವಸಂತೋಷೋ ವಿಸರ್ಜನಮಿತಿ."

ಎಂಬುವ ಮಂಡಲಬ್ರಾಹ್ಮಣೋಪನಿಷದ್ವಾಕ್ಯ ರೀತಿಯಾಗಿ, ಸಂಧ್ಯಾವಂದನೆ, ಜಪತಪಗಳು, ಪೂಜೆಗಳು, ಮಂತ್ರಪಠನೆ ಇವೇ ಮೊದಲಾದುವೊಂದನ್ನೂ ಮಾಡದೆ ಸುಮ್ಮನೆ ನಿಶ್ಚಿಂತೆಯಿಂದಿದ್ದು ಪರಮಾತ್ಮನನ್ನು ಧ್ಯಾನಮಾಡುವುದೇ ಆವಾಹನೆ; ಎಲ್ಲಿಯೂ ಕುಂದಿಲ್ಲದೆ, ಎಡಬಿಡದೆ ತುಂಬಿಕೊಂಡಿರುವ ಪರಬ್ರಹ್ಮನೇ ಸತ್ಯವು. ಪ್ರಪಂಚವೆಲ್ಲವೂ ಮಾಯಾಮಯವಾದದ್ದು ಎಂದು ತಿಳಿದುಕೊಳ್ಳುವುದೇ ಆಸನವು. ತದೇಕಧ್ಯಾನದಲ್ಲಿ ಉನ್ಮತ್ತತೆಯಿಂದಿರುವುದೇ ಪಾದ್ಯವು; ಒಳ್ಳೆಯದು ಕೆಟ್ಟದು ಎಂಬ ಭೇದಭಾವವಿಲ್ಲದೆ ನಿಶ್ಚಿಂತೆಯಿಂದ ಮನಸ್ಸನ್ನು ಶಾಂತಿಯಿಂದಿಟ್ಟಿರುವುದೇ ಎರಡು ಕೈ ಜೋಡಿಸಿ ಕೊಡುವ ಅರ್ಘ್ಯ ಅಂದರೆ ಜಲತರ್ಪಣ; ಮನಸ್ಸಿಗೆ ನೆನಪು ಮರವು ಎಂಬುದಿಲ್ಲದಿರುವುದೇ ಜಲಾಚಮನ; ಜಾತಿಭೇದಗಳನ್ನೆಣಿಸದಿರುವುದೇ ಜ್ಞಾನವು; ಕಣ್ಣು, ಮೂಗು, ಬಾಯಿ, ಕಿವಿ, ಕೈಕಾಲುಗಳು ಇವೇ ಮೊದಲಾದ ಇಂದ್ರಿಯಗಳನ್ನೂ, ಮನಸ್ಸು ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣಗಳನ್ನೂ, ತಮ್ಮ ತಮ್ಮ ಇಷ್ಟಾನುಸಾರ ಹೋಗದಂತೆ ತಡೆದು ಸ್ವಾಧೀನದಲ್ಲಿಟ್ಟಿರುವುದೇ ಶೌಚವು; ಯಾವ ಪದಾರ್ಥವನ್ನು ನೋಡಿದರೂ ಅದು ಪರಬ್ರಹ್ಮವಸ್ತುವೇ ಎಂದು ತಿಳಿದು ಕಡೆಗೆ ಅದನ್ನೂ ಕೂಡ ಮನಸ್ಸಿನಲ್ಲಿಡದಿರುವುದೇ ಗಂಧವು;

ತನ್ನ ದೃಷ್ಟಿಯನ್ನು ಸದಾ ಪರಬ್ರಹ್ಮವೆಂದು ಹೇಳುವ ಬಟ್ಟಬಯಲಿನಲ್ಲಿ ಅಂದರೆ ಆಕಾಶದಲ್ಲಿ ಸೇರಿಸುವುದೇ ಅಕ್ಷತೆಯು; ಆತ್ಮನನ್ನು ನೋಡ ಬೇಕೆಂಬ ಕುತೂಹಲವೇ ಜ್ಞಾನವು; ಈ ಜ್ಞಾನವೇ ಪುಷ್ಪವು; ಯಾವ ಇಚ್ಛೆಯೂ ಇಲ್ಲದೆ ಆತ್ಮನೇ ತಾನೆಂದು ನಿಶ್ಚಯಿಸುವಿಕೆಯೇ ಧ್ಯಾನವು; ಮನಸ್ಸು ಬುದ್ಧಿ ಚಿತ್ತ ಅಹಂಕಾರಗಳುಳ್ಳ ಚೇಷ್ಟೆಗಳೆನ್ನೆಲ್ಲಾ ತೊಲಗಿಸುವಿಕೆಯೇ ಭಕ್ತಿಯುತವಾದ ನಿನ್ನ ಪೂಜೆ; ಮನಸ್ಸನ್ನು ಅತ್ತಿತ್ತ ಕದಲುವುದಕ್ಕೆ ಅವಕಾಶ ಕೊಡದೆ ಸ್ಥಿರವಾಗಿ ನಿಲ್ಲಿಸುವುದೇ ಜ್ಞಾನಾಗ್ನಿ; ಇಂಥಾ ಜ್ಞಾನಾಗ್ನಿಯೇ ಧೂಪವು; ನಾನು ದೇಹವೂ ಅಲ್ಲ, ಜೀವನೂ ಅಲ್ಲ, ಪ್ರಪಂಚವೂ ಅಲ್ಲ, ಮನಸ್ಸೂ ಅಲ್ಲವೆಂಬುದನ್ನು ತಿಳಿದು ಕೊಳ್ಳುವ ವಿವೇಕವೇ ಜ್ಞಾನಸೂರ್ಯ; ಇಂತಹ ಸೂರ್ಯನೇ ದೀಪವು; ನಾನೇ ಬ್ರಹ್ಮನೆಂದೂ ಬ್ರಹ್ಮನೇ ನಾನೆಂದೂ ಮನಸ್ಸಿನಲ್ಲಿ ತಿಳಿದು ಆ ಬ್ರಹ್ಮನಲ್ಲಿ ಐಕ್ಯವಾಗುವುದೇ ನೈವೇದ್ಯವು; ಸರ್ವ ಪರಿಪೂರ್ಣನಾಗಿಯೂ ಸಮಸ್ತಕ್ಕೂ ಸಾಕ್ಷಿಭೂತನಾಗಿಯೂ ಇರುವ ಪರಮಾತ್ಮನಲ್ಲಿ ಬೆರತು ಅತ್ತಿತ್ತ ಕದಲದಿರುವುದೇ ಪ್ರದಕ್ಷಿಣವು; ಮುಂದೆ ವಿವರಿಸುವ "ಸೋಽಹಂ" ಎಂಬ ಮಂತ್ರವನ್ನು ಜಪಿಸುವಿಕೆಯೇ ಧ್ಯಾನವು; ಅಂದರೆ ಮನಸ್ಸು ಮತ್ತಾವುದರಲ್ಲಿಯೂ ಆಸಕ್ತಿಯನ್ನಿಡದಿರುವುದೇ ಧ್ಯಾನ. ಉಪ್ಪನ್ನು ನೀರಿನಲ್ಲಿ ಹಾಕಿದ ಒಡನೆಯೇ ಅದು ಕರಗಿ ಹೇಗೆ ಅದೂ ದ್ರವ ಭಾವವನ್ನು ಹೊಂದುತ್ತದೆಯೋ ಅದರಂತೆ ನಿನ್ನ ನಾಮಕೀರ್ತನೆ ಮಾಡು ವವರ ಮನಸ್ಸು ನಿನ್ನಲ್ಲಿ ಐಕ್ಯವಾಗಿ ಆನಂದವನ್ನು ಹೊಂದುತ್ತದೆ. ಎಲ್ಲೆಲ್ಲಿಯೂ ತುಂಬಿರುವ ಅಂದರೆ ಆಬ್ರಹ್ಮಕಿರೀಟ ಪರ್ಯಂತವಾದ ಜೀವಿಗಳಲ್ಲಿಯೂ ಉಳಿದ ಸ್ಥಾವರ ಜಂಗಮಾದಿಗಳಲ್ಲಿಯೂ ಪರಿಪೂರ್ಣ ಭಾವವನ್ನು ಹೊಂದಿರುವ ಪರಬ್ರಹ್ಮನನ್ನು ಸ್ತುತಿಸುವುದೇ ಜಪವು; ಯಾವ ಇಚ್ಛೆಯೂ ಯಾವ ಧ್ಯಾನವೂ ಇಲ್ಲದೆ ಮೌನವಾಗಿರುವುದೇ ನಿನ್ನನ್ನು ಅತಿಶಯವಾಗಿ ಸ್ತುತಿಸುವ ರೀತಿ; ಎರಡು ಕೈ ಜೋಡಿಸಿ ನಮಸ್ಕರಿಸುವುದೇ ಜೀವಾತ್ಮ ಪರಮಾತ್ಮ ಐಕ್ಯಭಾವವು; ಶರೀರದೊಳಗಿ ನಿಂದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರವೆಂಬ ಈ ವಿಷಯುಕಗಳಾದ ಪದಾರ್ಥಗಳ ಮತ್ತು ಕಣ್ಣಿನಿಂದ ನೋಡಬಹುದಾದ ಬಾಹ್ಯ ಪ್ರಪಂಚ

ವಸ್ತುಗಳ ನಾಮರೂಪಗಳನ್ನು ಸಂಪೂರ್ಣವಾಗಿ ದೂರಮಾಡಿ ಅಖಂಡ ನಾದ ಪರಮಾತ್ಮನಲ್ಲಿ ಐಕ್ಯವಾಗುವುದೇ ಮೋಕ್ಷವು.

ಶ್ರುತಿ ॥ " ಅಜಾತಮಭೂತ ಮಪ್ರತಿಷ್ಠಿತ ಮಪ್ರಾಣ ಮಮುಖ ಮಶ್ರೋತ್ರ ಮವಾ ಙ್ಮನೋ ತೇಜಸ್ಕ ಮಚಕ್ಷುಷ್ಕ ಮನಾಮಗೋತ್ರ ಮಶಿರ ಮಪಾಣಿ ಪಾದ ಮಸ್ನಿಗ್ಧ ಮಲೋಹಿತ ಮಪ್ರಮೇಯ ಮಹ್ರಸ್ವ ಮದೀರ್ಘ ಮನ್ವಣ್ವ ಮನಲ್ಪ ಮಪಾರ ಮನಿರ್ದೇಶ್ಯಂ "

ಎಂಬ ಸುಬಾಲೋಪನಿಷದ್ವಾಕ್ಯ ರೀತಿಯಾಗಿ, ಇಂತಹ ಪರಬ್ರಹ್ಮವು, ಹುಟ್ಟುಸಾವುಗಳಿಲ್ಲದೆ ಇದೆ; ಇದು ದೇವಾಲಯದಲ್ಲಿ ಪ್ರತಿಷ್ಠೆಮಾಡಲ್ಪಡುವಂಥ ವಿಗ್ರಹಗಳಂತಲ್ಲ. ಈ ಪರಬ್ರಹ್ಮನಿಗೆ ಮುಖ, ಕಿವಿ, ಮೂಗು, ಕಣ್ಣು, ಬಾಯಿ, ಮನಸ್ಸು, ಬುದ್ಧಿ ಮೊದಲಾದವು ಯಾವವೂ ಇಲ್ಲದಿರುವ ನಿರಾಕಾರನು, ಮತ್ತು ರಾಮ, ಕೃಷ್ಣ, ಗೋವಿಂದ, ನಾರಾಯಣ, ಕೇಶವ, ಗಣಪತಿ, ಸುಬ್ರಹ್ಮಣ್ಯ, ಮಹೇಶ್ವರ ಮೊದಲಾದ ನಾಮ ಭೇದಗಳೂ, ಕುಲಗೋತ್ರಗಳೂ, ಅವಯವಗಳೂ, ಕೆಂಪು, ಕಪ್ಪು, ಬಿಳುಪು, ಹಸುರು, ಹಳದಿ ಎಂಬ ವರ್ಣ ಭೇದಗಳೂ, ಉದ್ದ, ಮೋಟು, ತೆಳುವು, ದಪ್ಪ, ಚಿಕ್ಕದು, ದೊಡ್ಡದು, ಅಣುವು ಬ್ರಹ್ಮಾಂಡ ಮೊದಲಾದ ರೂಪ ಭೇದಗಳೂ ಇಲ್ಲವು. ಮತ್ತು ಈ ಸ್ವರೂಪವು ಅಗಾಧವಾದದ್ದು ಮತ್ತು ಅಪಾರವಾದದ್ದು. ಅಂದರೆ ಈ ಸ್ವರೂಪಕ್ಕೆ ಇಷ್ಟೆಂಬ ಮಿತಿಯಿಲ್ಲ. ಅಂತಹದಿಂತಹದೆಂದು ಮನಸ್ಸಿನಲ್ಲಿ ಯೋಚಿಸಿ ಹೇಳಲು ಅಶಕ್ಯವಾದದ್ದು. ಇಷ್ಟೇ ಅಲ್ಲವು ಆ ಪರಬ್ರಹ್ಮಸ್ವರೂಪವು ಇನ್ನೂ ಎಂಥಹುದೆಂದರೆ:—

ಶ್ರುತಿ ॥ ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ ।
ತಥಾರಸಂ ನಿತ್ಯ ಮಗಂಧ ವಚ್ಚಯತ್ ॥
ಅನಾದ್ಯನಂತಂ ಮಹತಃ ಪರಂ ಧ್ರುವಂ ।
ತದೇವ ಶಿಷ್ಯ ತ್ವಮಲಂ ನಿರಾಮಯಂ ॥

ಎಂಬ ಪೈಂಗಳೋಪನಿಷದ್ವಾಕ್ಯಾನುಸಾರವಾಗಿ, ಈ ಪರಬ್ರಹ್ಮನನ್ನು ಕೇಳಿ ತಿಳಿದುಕೊಳ್ಳುವುದಕ್ಕೆ ಶಬ್ದವಲ್ಲ. ಸ್ಪರ್ಶದಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲ. ಕಣ್ಣಿನಿಂದ ನೋಡಿ, ನಾಲಗೆಯಿಂದ ರುಚಿಸಿ ತಿಳಿದುಕೊಳ್ಳು

ವಂತಹದೂ ಅಲ್ಲ. ಹಾಗೆಯೇ ಮೂಗಿನಿಂದ ವಾಸಿಸಿ ಸುಗಂಧ ದುರ್ಗಂಧ ಗಳ ಭೇದದಂತೆ ಇದನ್ನು ತಿಳಿದುಕೊಳ್ಳಲೂ ಶಕ್ಯವಲ್ಲ. ಇದು ನಾಶ ವಿಲ್ಲದೆ ಶಾಶ್ವತವಾಗಿರುವಂತಹುದು. ಮತ್ತು ಸತ್ಯ ಸ್ವರೂಪಿಯಾಗಿಯೂ ಮಾಯೆಯಿಂದ ಅಜ್ಞಾನಕ್ಕೆ ಸಿಕ್ಕದಿರುವುದಾಗಿಯೂ ನಿತ್ಯವಾಗಿಯೂ ಮಲಿನವಿಲ್ಲದೆ ನಿರ್ಮಲವಾದದ್ದಾಗಿಯೂ ಇದೆ.

ಶ್ರುತಿ ॥ " ಏಕಮೇವಾ z ದ್ವಿತೀಯಂ ಬ್ರಹ್ಮ "

ಎಂಬ ಛಾಂದಾಗ್ಯೋಪನಿಷದ್ವಾಕ್ಯ ರೀತಿಯಾಗಿ, ಸಜಾತೀಯವೆಂದೂ, ವಿಜಾತೀಯವೆಂದೂ, ಸ್ವಗತಭೇದವೆಂದೂ ಇಲ್ಲದಿರುವುದೇ ಪರಬ್ರಹ್ಮ ವೆನಿಸುತ್ತದೆ.

**ಸಜಾತೀಯವೆಂದರೆ:**—ದೃಷ್ಟಿಯಲ್ಲಿ ಮನುಷ್ಯರೆಲ್ಲರೂ ಒಂದೇ ಜಾತಿಗೆ ಸೇರಿದವರು. ಹಾಗಿದ್ದರೂ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ಮಿಶ್ರ ಚಂಡಾಲಾದಿ ಭೇದಗಳನ್ನು ಮಾಡಿಕೊಂಡಿರುತ್ತಾರೆ.

**ವಿಜಾತೀಯಗಳೆಂದರೆ:**—ಈ ಒಂದು ಮನುಷ್ಯ ಜಾತಿಯಲ್ಲಿಯೇ ಬೇರೆ ಬೇರೆ ಜಾತಿಗಳನ್ನು ಕಾಣಬಹುದು. ಅದರಂತೆಯೇ ಮೃಗಜಾತಿ ಗಳಲ್ಲಿಯೂ, ದೇವಯೋನಿಗಳಲ್ಲಿಯೂ, ಅನೇಕ ಜೀವ ಜಂತುಗಳಲ್ಲಿಯೂ, ನಾನಾವಿಧ ವೃಕ್ಷಗಳಲ್ಲಿಯೂ, ಪುಷ್ಪಗಳಲ್ಲಿಯೂ ಅನೇಕ ಭೇದಗಳು ಕಾಣ ಬರುತ್ತವೆ.

**ಸ್ವಗತ ಭೇದವೆಂದರೆ:**—ಎಲ್ಲಾ ಜಾತಿ ಜೀವಜಂತುಗಳಿಗೂ ತಲೆ, ಕಣ್ಣು, ಮೂಗು, ಬಾಯಿ, ಕಿವಿಗಳು, ಕೈಕಾಲು, ಚರ್ಮ, ಗುಹ್ಯಸ್ಥಾನ, ಗುದಸ್ಥಾನ ಮೊದಲಾದ ಬೇರೆ ಬೇರೆ ರೂಪಗಳು ತೋರು ತ್ತಿರುತ್ತದೆ. ಈ ವಿಧವಾದ ಭೇದಗಳಿಲ್ಲದಿರುವುದೇ ಭಗವಂತನೆಂದೂ ಪರಬ್ರಹ್ಮನೆಂದೂ ಹೇಳಲ್ಪಡುವುದು.

ಅಂದರೆ ಬ್ರಹ್ಮ ವಿಷ್ಣು ಮಹೇಶ್ವರರೂ, ಸಾವಿರಾರು ಋಷಿಗಳು, ದೇವತೆಗಳು, ಗಿಡಗಳು, ಬೆಟ್ಟಗಳು ಮತ್ತು ಮನುಷ್ಯಜಾತಿಗೆ ಸೇರಿದವ ರಲ್ಲಿಯೇ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಮಿಶ್ರ ಚಂಡಾಲಾದಿ ಜಾತಿ

ಗಳೂ, ಪಶುಗಳು, ಪಕ್ಷಿಗಳು ಕಣ್ಣಿಗೆ ಕಾಣಿಸದಷ್ಟು ಸಣ್ಣ ಸಣ್ಣ ಕ್ರಿಮಿ ಕೀಟಗಳು ಇವೆಲ್ಲವೂ ತತ್ವತಃ ತಲೆ, ಕೈಕಾಲು ಮೊದಲಾದ ಅವಯವ ಭೇದಗಳು ಯಾವುವೂ ಇಲ್ಲದೆ ಬಟ್ಟಬಯಲಿನಂತಿರುವುದೇ ಪರಬ್ರಹ್ಮವು. ಈ ಪರಬ್ರಹ್ಮನ ವಿಷಯವನ್ನು ಕುರಿತೇ ಅಧ್ಯಾತ್ಮೋಪನಿಷತ್ತಿನಲ್ಲಿ ಕೆಳಗೆ ಕಂಡಂತೆ ಹೇಳಿದೆ.

ಶ್ರುತಿ || " ಪರಿಪೂರ್ಣ ಮನಾದ್ಯಂತ ಮಪ್ರಮೇಯ ಮವಿಕ್ರಿಯಂ ಸಘನಂ ಚಿದ ನಂ ಚಿಪ್ಸನಂ ನಿತ್ಯ ಮಾನಂದಘನ ಮವ್ಯಯಂ ಪ್ರತ್ಯಗೇಕರಸಂ ಪೂರ್ಣ ಮನಂತಂ ಸರ್ವತೋಮುಖಂ ಅಹೇಯ ಮನುಪಾಧೇಯ ಮನಾಶ್ರಯಂ ನಿರ್ಗುಣಂ ನಿಷ್ಕ್ರಿಯಂ ಸೂಕ್ಷ್ಮಂ ನಿರ್ವಿಕಲ್ಪಂ ನಿರಂಜನಂ ಅನಿರೂಪ್ಯ ಸ್ವರೂಪಂ ಯನ್ಮವಾಚಾಮಗೋಚರಂ ಸತ್ಯಾಂ ಖುತಂ ಸ್ವತಸ್ಸಿದ್ಧಂ ಶುದ್ಧ ಮನೀದೃಶಂ ಏಕಮೇವಾಽದ್ವಿತೀಯಂ ಬ್ರಹ್ಮ ನೇಹನಾ ನಾಸ್ತಿ ಕಿಂಚನ"

ಅಂದರೆ ಈ ಪರಬ್ರಹ್ಮವು ಎಲ್ಲೆಲ್ಲಿಯೂ ತುಂಬಿ ತುಳುಕಾಡುತ್ತಿದೆ. ಮೊದಲು, ಮಧ್ಯ, ಕೊನೆ ಇವುಗಳಿಲ್ಲದ್ದು. ಯಾವ ವಿಕಾರವೂ ಯಾವ ರೂಪವೂ ಯಾವ ವಿಷಯ ಸಂಬಂಧವೂ ಇಲ್ಲದೇ ಸದಾ ಒಂದೇ ಸಮನಾಗಿರುವಂಥದು. ಇದಕ್ಕೆ ನಾಶವಿಲ್ಲ. ಇದರ ಅಂಶವೇ ಸಮಸ್ತ ಜೀವ ರಾಶಿಗಳಲ್ಲಿಯೂ ಸಾಕ್ಷಿಭೂತವಾಗಿದ್ದು ಆಯಾ ಜೀವಿಗಳು ಮಾಡುವ ಪುಣ್ಯಪಾಪ ಕರ್ಮಗಳಿಗೆ ತಕ್ಕಂತೆ ಆಯಾ ಜನ್ಮಗಳನ್ನುಂಟುಮಾಡುವಂಥದು. ಮತ್ತು ಖಂಡವಿಲ್ಲದೇ ಅಖಂಡವಾಗಿರುವಂಥದು. ಇದೂ ಅಲ್ಲದೆ, ಕೊನೆಯಿಲ್ಲದುದು, ಸರ್ವ ಪರಿಪೂರ್ಣವಾದುದು, ಎಲ್ಲಕ್ಕಿಂತಲೂ ಶ್ರೇಷ್ಠವಾದುದು, ಆಧಾರ ರಹಿತವಾದುದು. ಯಾವ ಗುಣವೂ ಇಲ್ಲದುದು, ಯಾವ ವ್ಯಾಪಾರಗಳನ್ನೂ ನಡೆಸದಿರುವುದು, ಕಣ್ಮನಗಳಿಗೆ ಅಗೋಚರವಾದದ್ದು, ನೆನಪು, ಮರವು ಮೊದಲಾದುವುಗಳಿಲ್ಲದುದು, ಸರ್ವವ್ಯಾಪಿಯು ಆಗಿರುವುದೇ ಆ ಪರಬ್ರಹ್ಮ ವಸ್ತುವು. ಇದು ಇಂಥದಂಥದೆಂದು ಹೇಳಲಶಕ್ಯವಾದದ್ದು, ಮನೋವಾಕ್ಕುಗಳಿಗೆ ನಿಲುಕದಿರುವುದು, ತನಗೆ ತಾನೇ ಬೆಳಗುತ್ತಿರುವುದು, ಮಹಾ ಪರಿಶುದ್ಧವಾದುದು, ಕೇವಲ ಜ್ಞಾನಸ್ವರೂಪವಾಗಿರುವುದು. ಹೋಲಿಕೆಯಿಲ್ಲದುದು, ತನ್ನನ್ನು ಬಿಟ್ಟರೆ ಬೇರೆಯಿಲ್ಲದುದು, ಅಣುವಿಗಿಂತ ಪರಮಾಣುವಾಗಿಯೂ ಮಹತ್ತಿಗಿಂತಲೂ ಮಹತ್ತರ

ವಾಗಿಯೂ ಅಂದರೆ ಸಣ್ಣ ವಸ್ತುಗಳಿಗಿಂತಲೂ ಅತಿ ಸಣ್ಣದಾಗಿಯೂ ದೊಡ್ಡ ವಸ್ತುಗಳಿಗಿಂತಲೂ ಅತಿ ದೊಡ್ಡದಾಗಿಯೂ ಇರುವುದೆಂದು ತಿಳಿಯಬೇಕು.

**ಶಿಷ್ಯ:**—ಓ ಸದ್ಗುರೂತ್ತಮ! ತಂದೆ! ಪರಬ್ರಹ್ಮನಿಗೆ ಹೆಸರಾಗಲಿ ರೂಪವಾಗಲಿ ಇಲ್ಲವೆಂದು ತಾವು ಇದುವರಿವಿಗೂ ಅಪ್ಪಣೆ ಕೊಡಿಸಿರುವಿರಲ್ಲವೇ? ಹಾಗಿದ್ದರೆ, 'ಪರಬ್ರಹ್ಮ'ಎಂದು ಕರೆಯುವುದೇ ಒಂದು ಹೆಸರಾಗಿರುವಾಗ ಆ ಪರಬ್ರಹ್ಮ ವಸ್ತುವಿಗೆ ಹೆಸರಿಲ್ಲವೆಂದು ಹೇಗೆ ಹೇಳಲು ಸಾಧ್ಯ?

**ಗುರುವು:**—"ಅಪ್ಪಾ, ಮಗೂ! ನಿನ್ನ ಪ್ರಶ್ನೆ ಬಹಳ ಚನ್ನಾಗಿದೆ. ಅದರ ಮರ್ಮವನ್ನು ತಿಳಿಸುತ್ತೇನೆ, ಮನವಿಟ್ಟು ಕೇಳು."

ಶ್ರುತಿ ॥ "ಋತ ಮಾತ್ಮಾ ಪರಂ ಬ್ರಹ್ಮ ಸತ್ಯ ಮಿತ್ಯಾದಿಕಾ ಬುಧೈಃ ।
ಕಲ್ಪಿತಾ ವ್ಯವಹಾರಾರ್ಥಂ ಯಸ್ಯ ಸಂಜ್ಞಾ ಮಹಾತ್ಮನಃ" ॥

ಎಂಬ ಮಹೋಪನಿಷದ್ವಾಕ್ಯ ರೀತಿಯಾಗಿ, ಪರಬ್ರಹ್ಮವೆಂಬ ಹೆಸರು ಮನಸ್ಸಿನಿಂದಲೂ, ಮಾತುಗಳಿಂದಲೂ ಇಂತಹದಂತಹದೆಂದು ನಿರ್ಣಯಿಸಿ ಹೇಳಲು ಸಾಧ್ಯವಿಲ್ಲವೆಂದು ತಿಳಿಯಬೇಕು. ಇದು, ಸೃಷ್ಟಿಗೆ ಒಳಗಾದ ವಸ್ತುಗಳಿಗಿರುವ, ಕೃಷ್ಣ, ನಾರಾಯಣ, ಕೇಶವ ಎಂಬಂತಲ್ಲ. ಕಣ್ಣಿಗೆ ಕಾಣದಂಥ ಈಶ್ವರನಿಗೆ ಬದಲಾಗಿ ಒಂದು ವಿಗ್ರಹವನ್ನು ನಿರ್ಮಿಸಿ ಈಶ್ವರನೊಬ್ಬನಿದ್ದಾನೆಂದು ಆ ವಿಗ್ರಹ ರೂಪವನ್ನು ತೋರಿಸಿ ಅದರಲ್ಲಿ ಮನಸ್ಸನ್ನು ನಿಲ್ಲಿಸುವುದಕ್ಕಾಗಿಯೂ, ಕಣ್ಣಿಗೆ ಗೋಚರಿಸುವ ಈ ಪ್ರಪಂಚದ ಸೃಷ್ಟಿಗೆ ಮೊದಲು ನಾಮ ರೂಪಗಳಿಲ್ಲದಿರುವ, ನಾಶ ರಹಿತವಾದ, ಸ್ವಯಂ ಪ್ರಕಾಶದಿಂದ ಬೆಳಗುವಂಥ ಆ ಒಂದು ವಸ್ತುವಿನ ವಿಷಯವನ್ನು ಶಿಷ್ಯನಿಗೆ ಬೋಧಿಸುವ ಸಲುವಾಗಿಯೂ ಸ್ವಯಂಪ್ರಕಾಶ ವಸ್ತುವಿಗೆ "ಪರಬ್ರಹ್ಮ" ಎಂಬ ಹೆಸರು ನೆಪಮಾತ್ರಕ್ಕೆ ಇಟ್ಟಿರುವುದೇ ಹೊರತು ನಿಜವಾಗಿ ಪರಬ್ರಹ್ಮನಿಗೆ ನಾಮರೂಪಗಳೇ ಇಲ್ಲವು.

ಈ ಪರಬ್ರಹ್ಮವು, ಇರುವೆಯಿಂದ ಬ್ರಹ್ಮನ ವರಿವಿಗೂ ಸಮಸ್ತ ಸೃಷ್ಟಿಗೆ ಮೊದಲು, ಈಗ ಕಾಣ್ಬರುವ ಸಕಲ ಜೀವರಾಶಿಗಳ ಸ್ತ್ರೀ ಗರ್ಭ

ದಲ್ಲಿನ ಶಿಶುವಿನ ಹೃದಯ ಕಮಲದಲ್ಲಿ ಸೂಕ್ಷ್ಮರೂಪವಾಗಿ ಅಂದರೆ ವಾಯು ರೂಪದಿಂದ ತಾಯಿಯ ಮೂಗಿನ ಹೊಳ್ಳೆಯಿಂದ ಎಳೆಯಲ್ಪಟ್ಟ ಶ್ವಾಸದಲ್ಲಿ ಕಲೆತು, ಜೀವಾತ್ಮ ಸ್ವರೂಪದಿಂದ ಪ್ರವೇಶಿಸಿ, ಹುಟ್ಟಿದುದು ಮೊದಲು ಸಾಯುವವರಿವಿಗೂ ಆ ಜೀವಿ ಮಾಡುವ ಸರ್ವಕರ್ಮ ಗಳಲ್ಲಿಯೂ ಸಾಕ್ಷಿಭೂತನಾಗಿ ವ್ಯಾಪಿಸಿದ್ದು, ಮರಣ ಹೊಂದಿದ ಮೇಲೆ ಆ ಜೀವಿ ಮಾಡಿದ ಸುಕೃತ ದುಷ್ಕೃತ ಕರ್ಮಗಳಿಗೆ ತಕ್ಕಂತೆ, ಆಯಾ ಕುಲದಲ್ಲಿ ಮೇಲೋ ಕೀಳೋ ಅಂದರೆ ಧನಿಕನೋ ಅಥವಾ ಕಡು ಬಡವ ನೋ ಆಗಿ ಹುಟ್ಟುವಂತೆ ಮಾಡುತ್ತಿರುತ್ತದೆ. ಈ ಸಾಕ್ಷಿಭೂತನಾದ ಆತ್ಮನೇ ಚಿತ್ರಗುಪ್ತನೆಂಬ ಹೆಸರಿನಿಂದ ಕರೆಯಲ್ಪಡುವವನು. ಈ ಚಿತ್ರಗುಪ್ತರ ರಹಸ್ಯವನ್ನು ಈ ಮುಂದೆ ವಿವರಿಸಿದೆ. ಇದಕ್ಕೆ ಪ್ರಮಾಣವಾಗಿ ಭಗವ ದ್ಗೀತಾ 10 ನೇ ಅಧ್ಯಾಯ 20ನೇ ಶ್ಲೋಕದಲ್ಲಿ ಹೀಗೆಂದು ಹೇಳಿದೆ.

ಶ್ಲೋ॥ ಅಹ ಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂಚ ಭೂತಾನಾ ಮಂತ ಏವಚ ॥

"ಸಮಸ್ತ ಶರೀರಗಳಲ್ಲಿಯೂ ರಹಸ್ಯವಾಗಿಯೂ, ಆತ್ಮ ಸ್ವರೂಪ ವಾಗಿಯೂ ಇದ್ದುಕೊಂಡು ಆಯಾ ಜೀವಿಗಳ ಕರ್ಮಗಳನ್ನನುಸರಿಸಿ ಹುಟ್ಟಿಸುವವನೂ, ಬೆಳೆಸುವವನೂ, ಪೋಷಿಸುವವನೂ ನಾನೇ" ಎಂದು ತಿಳಿಸಿದೆ. ಹೀಗಿರುವ ಜೀವಾತ್ಮನನ್ನು ಪರಮಾತ್ಮನಲ್ಲಿ ಐಕ್ಯಮಾಡುವ ಸಲುವಾಗಿಯೇ ಈ ಗ್ರಂಥದಲ್ಲಿ ವಿಸ್ತಾರವಾಗಿ ತಿಳಿಯ ಹೇಳಿರುತ್ತೆಯಾಗಿ "ಜೀವ ಬ್ರಹ್ಮೈಕ್ಯ" ವೆಂದು, ಋಗ್ಯಜು ಸ್ಸಾಮಾಥರ್ವಣ ವೇದಗಳೆಂಬ ಚತುರ್ವೇದಗಳ ಸಾರವಾದ ಉಪನಿಷತ್ತುಗಳಲ್ಲಿರುವ ಅಮೃತ ಸಮಾನ ವಾದ ರಹಸ್ಯಗಳನ್ನೆಲ್ಲಾ ತಿಳಿಸಿರುತ್ತೆಯಾದ್ದರಿಂದಲೇ, ಈ ಗ್ರಂಥಕ್ಕೆ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ವೆಂಬ ಹೆಸರನ್ನಿಟ್ಟಿದೆ.

ಶ್ಲೋ॥ ಅಚಿಂತ್ಯಾವ್ಯಕ್ತರೂಪಾಯ ನಿರ್ಗುಣಾಯ ಗುಣಾತ್ಮನೇ ।
ಸಮಸ್ತ ಜಗದಾಧಾರಮೂರ್ತಯೇ ಬ್ರಹ್ಮಣೇ ನಮಃ ॥

ಮೇಲೆ ಹೇಳಿದ ಪರಬ್ರಹ್ಮನು ಮನೋವಾಕ್ಕುಗಳಿಗೆ ನಿಲುಕ ದವನೂ, ಯಾವ ಗುಣಗಳೂ ಇಲ್ಲದ ನಿರ್ಗುಣನೂ, ಸಗುಣನೂ, ಸಮಸ್ತ

ಜಗತ್ತುಗಳಿಗೆ ಆಧಾರ ಭೂತನೂ, ಸ್ಥೂಲದೃಷ್ಟಿಗೆ ಗೋಚರಿಸದವನೂ ಆಗಿರುವುದರಿಂದ ಆತನಿಗೆ ನನ್ನ ನಮಸ್ಕಾರವು.

ಶ್ಲೋ ॥ ನಿತ್ಯಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।
ವಿಶ್ವಾತೀತಂ ಗಗನಸದೃಶಂ ತತ್ವಮಸ್ಯಾದಿಲಕ್ಷ್ಯಂ ॥
ಏಕಂ ನಿತ್ಯಂ ವಿಮಲ ಮಚಲಂ ಸರ್ವಧೀಸಾಕ್ಷಿಭೂತಂ ।
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥

ಶಾಶ್ವತವಾದ ಆನಂದ ಸುಖವನ್ನು ಅನುಭವಿಸುತ್ತಿರುವ, ಶ್ರೇಷ್ಠವಾದ ಮುಕ್ತಿಸುಖವನ್ನು ಕೊಡುವ ಶಕ್ತಿಯುಳ್ಳ, ಜ್ಞಾನವೊಂದೇ ತನ್ನ ಸ್ವರೂಪವಾಗಿ ಉಳ್ಳ, ಪ್ರಪಂಚದ ಒಳಗೂ ಹೊರಗೂ ತುಂಬಿರುವ ಆಕಾಶದಂತೆ ನಿರ್ವಿಕಾರನಾದ ತತ್ವಮಸ್ಯಾದಿ ಜೀವಬ್ರಹ್ಮೈಕ್ಯವೆಂಬ ಅರ್ಥವನ್ನು ಬೋಧಿಸುವ ವೇದವಾಕ್ಯಗಳಿಂದ ತಿಳಿಯಲ್ಪಡುವ ಸ್ವರೂಪವನ್ನುಳ್ಳ, ಬೇರಿಲ್ಲದೆ ತಾನೊಬ್ಬನೇ ಮೆರೆಯುತ್ತಿರುವ, ಶಾಶ್ವತವಾದ, ನಿರ್ಮಲ ಸ್ವರೂಪನಾದ, ಸಂಚಾರ ರಹಿತನಾದ, ಸಮಸ್ತರ ಬುದ್ಧಿಗೂ ಸಾಕ್ಷಿಭೂತನಾದ ಅಂದರೆ ಎಲ್ಲಾ ಜೀವಿಗಳ ಬುದ್ಧಿ ವಿಷಯುಗಳನ್ನು ಚನ್ನಾಗಿ ತಿಳಿದಿರುವ, ಬುದ್ಧಿಗೆ ನಿಲುಕದವನಾದ, ಸತ್ವರಜಸ್ತಮೋಗುಣಗಳಿಲ್ಲದೆ ಇರುವ, ಅಜ್ಞಾನಾಂಧಕಾರವನ್ನು ಹೋಗಲಾಡಿಸುವುದರಿಂದಲೇ ಸದ್ಗುರುವೆಂದು ಪ್ರಸಿದ್ಧನಾದ ಆ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

ಶ್ಲೋ ॥ ಸಚ್ಚಿದಾನಂದರೂಪಾಯ ವ್ಯಾಪಿನೇ ಪರಮಾತ್ಮನೇ ।
ನಮಃ ಶ್ರೀಗುರುನಾಥಾಯ ಪ್ರಕಾಶಾನಂದಮೂರ್ತಯೇ ॥

ಸತ್, ಚಿತ್, ಆನಂದ ಇವು ಮೂರು ಸ್ವರೂಪಗಳೂ ಉಳ್ಳ, ಸರ್ವವ್ಯಾಪಿಯಾದ, ಪರಮಾತ್ಮನೂ, ಸ್ವಪ್ರಕಾಶನೂ, ಆನಂದಮಯನೂ ಆದ ಆ ಗುರುನಾಥನಿಗೆ ನಮಸ್ಕಾರವು.

ಶ್ಲೋ ॥ ಸತ್ಯಾನಂದಾಯ ರೂಪಾಯ ಬೋಧೈಕಸುಖಕಾರಿಣೇ ।
ನಮೋ ವೇದಾಂತವೇದ್ಯಾಯ ಗುರವೇ ಬುದ್ಧಿಸಾಕ್ಷಿಣೇ ॥

ಸತ್ಯವೇ ಆನಂದ ರೂಪವಾಗಿ ಉಳ್ಳವನೂ, ಜ್ಞಾನಸ್ವರೂಪವೇ ಸುಖಸ್ವರೂಪವೆಂದು ಬೆಳಗುವವನೂ, ವೇದಾಂತಗಳಾದ ಉಪನಿಷ

ದ್ವಾಕ್ಯಗಳಿಂದ ತಿಳಿಯಲ್ಪಡುವವನೂ, ಮತ್ತು ಬುದ್ಧಿಗೆ ಸಾಕ್ಷಿಭೂತನಾದವನೂ ಆದ ಆ ಪರಮಾತ್ಮ ಸ್ವರೂಪಿಯಾದ ಗುರುವಿಗೆ ನಮಸ್ಕಾರವು.

ಶ್ಲೋ ॥ ಯೇನ ಚೇತಯತಾ ಹೀದಂ ಚಿತ್ತಂ ಚೇತಯತೇ ನರಃ ।
ಜಾಗ್ರತ್ಸ್ವಪ್ನಸುಷುಪ್ತ್ಯಾದಿ ತಸ್ಮೈ ಶ್ರೀಗುರವೇ ನಮಃ ॥

ಯಾರ ಶಕ್ತಿಯಿಂದ ಜಡರೂಪವಾದ ಈ ಚಿತ್ತವು, ತನಗೆ ತಾನೇ ಇದ್ದು ಸಮಸ್ತ ಕರ್ಮಗಳನ್ನು ನಡೆಸುತ್ತದೋ, ಯಾರ ಶಕ್ತಿಯಿಂದ ಜೀವನು ಆತ್ಮಸ್ವರೂಪನಾಗಿಯೇ ಜಾಗ್ರತ್ಸ್ವಪ್ನಸುಷುಪ್ತಿಯೆಂಬ ಮೂರವಸ್ಥೆಗಳನ್ನು ಹೊಂದುತ್ತ ಸಮಸ್ತವನ್ನೂ ಅನುಭವಿಸುತ್ತಿದ್ದಾನೋ, ಅಂತಹ ಸಾಕ್ಷಿಭೂತನಾದ ಸದ್ಗುರುಸ್ವಾಮಿಗೆ ನಮಸ್ಕಾರವು.

ಶ್ಲೋ ॥ ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ ।
ನಾದಬಿಂದುಕಳಾತೀತಂ ತಸ್ಮೈ ಶ್ರೀಗುರವೇ ನಮಃ ॥

ಚೈತನ್ಯಸ್ವರೂಪಿಯಾಗಿ ತನಗೆ ತಾನೇ ಪ್ರಕಾಶಿಸುತ್ತಿರುವ, ನಿತ್ಯನಾದ (ಅಂದರೆ ನಾಶವಿಲ್ಲದೆ ಸದಾ ಇರುತ್ತಿರುವ), ಶಾಂತಮೂರ್ತಿಯಾದ, ಆಕಾಶಾತೀತನಾದ (ಅಂದರೆ ಗಗನಸ್ವರೂಪಿಯಾದ), ನಿರಂಜನನಾದ, ದೋಷಕ್ಕೆ ದೂರನಾದ, ನಾದಬಿಂದು ಕಳೆಗಳಿಗೂ ಸಿಲುಕದಿರುವ ಆ ಬ್ರಹ್ಮಮಯನಾದ ಸದ್ಗುರುವಿಗೆ ನಮಸ್ಕಾರವು.

ಶ್ಲೋ ॥ ಗುರು ರ್ಬ್ರಹ್ಮಾ ಗುರು ರ್ವಿಷ್ಣುಃ ಗುರು ರ್ದೇವೋ ಮಹೇಶ್ವರಃ ।
ಗುರು ಸ್ಸಾಕ್ಷಾತ್ ಪರಂ ಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

ಗುರುವು ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಭೂತರಾದ ಬ್ರಹ್ಮ, ವಿಷ್ಣು, ಮಹೇಶ್ವರರೂಪಿಯು. ಆತನು ಅದ್ವಿತೀಯನು, ಮತ್ತು ಪರಬ್ರಹ್ಮಸ್ವರೂಪನು. ಆದುದರಿಂದ ಆತನಿಗೆ ನನ್ನ ನಮಸ್ಕಾರವು.

ಶ್ಲೋ ॥ ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷು ರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥

ಅಮಾವಾಸ್ಯೆಯ ಕಗ್ಗತ್ತಲೆಯಂತಿರುವ ಅಜ್ಞಾನವೆಂಬುದರಿಂದ ಮುಚ್ಚಲ್ಪಟ್ಟಿದ್ದ ನನ್ನ ಕಣ್ಣು, ಜ್ಞಾನವೆಂಬ ಅಂಜನವನ್ನುಪಯೋಗಿಸಿ ಯಾವ ಪ್ರಭುವಿನ ಸಹಾಯದಿಂದ ತೆರೆಯಲ್ಪಟ್ಟು ಬ್ರಹ್ಮಸ್ವರೂಪ ವ್ಯಕ್ತಪಡಿಸಲ್ಪಟ್ಟಿತೋ, ಅಂತಹ ಗುರುವಿಗಾಗಿ ನನ್ನ ನಮಸ್ಕಾರವು.

ಶ್ಲೋ॥ ನ ಸುಖಂ ವೇದಶಾಸ್ತ್ರೇಷು ನ ಸುಖಂ ಮಂತ್ರಯಂತ್ರಕೇ।
ಗುರೋಃ ಪ್ರಸಾದಾ ದನ್ಯತ್ರ ಸುಖಂ ನಾಸ್ತಿ ಮಹೀತಲೇ॥

ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದಿದ್ದರಿಂದಲೂ, ಮಂತ್ರಯಂತ್ರ ವಿಧಾನಗಳನ್ನು ತಿಳಿದಿದ್ದರಿಂದಲೂ ನಿಜವಾದ ಸುಖವುಂಟಾಗದು. ಈ ಭೂಲೋಕದಲ್ಲಿ ಗುರುವಿನ ಅನುಗ್ರಹದಿಂದುಂಟಾಗುವ ನಿತ್ಯಸುಖಕ್ಕಿಂತಲೂ ಉತ್ತಮವಾದ ಸುಖವು ಇಲ್ಲವೇ ಇಲ್ಲ.

ಶ್ಲೋ॥ ಸ್ವಾಶ್ರಮಂ ಚ, ಸ್ವಜಾತಿಂ ಚ, ಸ್ವಕೀರ್ತಿಂ ಪುಷ್ಟಿವರ್ಧನಂ।
ಏತ ತ್ಸರ್ವಂ ಪರಿತ್ಯಜ್ಯ ಗುರೋ ರನ್ಯಂ ನ ಭಾವಯೇತ್॥

ಎಂಬ ಗುರುಗೀತಾ ವಾಕ್ಯಾನುಸಾರವಾಗಿ, ತನಗಿಂತ ಕೀಳುಜಾತಿಯಲ್ಲಿ ಹುಟ್ಟಿದವನೆಂದಾಗಲಿ, ತನ್ನಾಶ್ರಮಕ್ಕಿಂತಲೂ ಕಡಮೆಯಾದ ಆಶ್ರಮದಲ್ಲಿದ್ದಾನೆಂದಾಗಲಿ (ಅಂದರೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಈ ಆಶ್ರಮಗಳಲ್ಲಿ ಯಾವ ಆಶ್ರಮದಲ್ಲಿರುವವನೇ ಆಗಲಿ) ತನಗಿಂತಲೂ ಕೀರ್ತಿಯಲ್ಲಿ ಕಡಮೆಯಾದವನೆಂದಾಗಲಿ, ತನಗಿಂತಲೂ ಬಲಹೀನನಾಗಿದ್ದಾನೆಂದಾಗಲಿ ಯಾವ ಮಾತ್ರವೂ ತಿಳಿಯದೆ ಸದ್ಗುರುವಾದವನಲ್ಲಿ ಜಾತಿ ಅಥವ ಆಶ್ರಮಭೇದಗಳನ್ನೆಣಿಸದೆ ಆತನನ್ನು ಆಶ್ರಯಿಸಬೇಕು. ಇದಕ್ಕೆ ಮನುಸ್ಮೃತಿಯ ಪ್ರಮಾಣವು ಹೀಗಿದೆ:—

ಶ್ಲೋ॥ ಶ್ರದ್ದಧಾನಃ ಶುಭಾಂ ವಿದ್ಯಾಂ ಆದದೀತಾ ವರಾದಪಿ।
ಅಂತ್ಯಾ ದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾ ದಪಿ॥

ವಿದ್ಯಾರ್ಜನೆಯಲ್ಲಿ ಶ್ರದ್ಧೆಯುಳ್ಳ ಮನುಷ್ಯನು ಉತ್ತಮ ವಿದ್ಯೆಯನ್ನು ಹೀನ ಜಾತಿಯವನಿಂದಾದರೂ ಸಂಪಾದಿಸಿಕೊಳ್ಳಬಹುದು. ಹಾಗೆ

ಯೇ ಮೋಕ್ಷೋಪದೇಶವನ್ನು ಅಂದರೆ ಬ್ರಹ್ಮಜ್ಞಾನವನ್ನು ಚಂಡಾಲ ನಿಂದಾದರೂ ಪಡೆಯಬಹುದು. ಹಾಗೆಯೇ ಗುಣಶಾಲಿನಿಯಾದ ಸ್ತ್ರೀಯನ್ನು ಹೀನಜಾತಿಯಲ್ಲುದಿಸಿದವಳಾದರೂ ಕೈಹಿಡಿಯಬಹುದು. ಇದರಿಂದ ದೋಷವಿಲ್ಲ.

ಶ್ಲೋ॥ ಆಬ್ರಹ್ಮಸ್ತಂಭಪರ್ಯಂತಂ ಪರಮಾತ್ಮಸ್ವರೂಪಕಂ ।
ಸ್ಥಾವರಂ ಜಂಗಮಂ ಚೈವ ಪ್ರಣಮಾಮಿ ಜಗನ್ಮಯಂ ॥

ಬ್ರಹ್ಮ ಮೊದಲು ಸ್ತಂಭದವರಿವಿಗೂ ಇರುವ ಸಮುಸ್ತ ವಸ್ತುಗಳೂ ಪರಮಾತ್ಮಸ್ವರೂಪಗಳೇ ಹೌದು. ಆದುದರಿಂದ ಜಗತ್ತನ್ನೆಲ್ಲಾ ಆವರಿಸಿರುವ ಸ್ಥಾವರ (ಸ್ಥಿರ) ಜಂಗಮ (ಚರ) ವಸ್ತುಗಳಿಗೆಲ್ಲಾ ನನ್ನ ನಮಸ್ಕಾರವು.

ಶ್ಲೋ॥ ಮನ್ನಾಥ ಶ್ರೀಜಗನ್ನಾಥೋ ಮದ್ಗುರು ಶ್ರೀಜಗದ್ಗುರುಃ
ಸ್ವಾತ್ಮೈವ ಸರ್ವಭೂತಾತ್ಮಾ ತಸ್ಮೈ ಶ್ರೀ ಗುರವೇ ನಮಃ ॥

ನನ್ನ ಸ್ವಾಮಿಯೇ ಲೋಕನಾಥನು. ನನ್ನ ಗುರುವೇ ಲೋಕಗುರುವು. ನನ್ನಲ್ಲಿರುವ ಆತ್ಮವೇ ಸಮುಸ್ತ ಭೂತಗಳಲ್ಲಿಯೂ ಇರುವ ಪರಮಾತ್ಮನು. ಇಂತಹ ಪರಮಾತ್ಮಸ್ವರೂಪನಾದ ಸದ್ಗುರುನಾಥನಿಗೆ ನನ್ನ ನಮಸ್ಕಾರವು.

ಶ್ಲೋ॥ ಯಸ್ಯ ಪ್ರಸಾದಾ ದಹಮೇವ ಸರ್ವಂ ।
ಮಯ್ಯೇವ ಸರ್ವಂ ಪರಿಕಲ್ಪಿತಂಚ ॥
ಇತ್ಥಂ ವಿಜಾನಾಮಿ ಸದಾತ್ಮರೂಪಂ ।
ತಸ್ಯಾಂಘ್ರಿಪದ್ಮಂ ಪ್ರಣತೋಽಸ್ಮಿ ನಿತ್ಯಂ ॥

ಯಾವನ ಅನುಗ್ರಹದಿಂದ ಜಗತ್ತೆಲ್ಲವೂ ನಾನೇ ಆಗಿದ್ದೇನೆಯೋ, ಯಾವನ ಕರುಣದಿಂದ ಸಮುಸ್ತವೂ ನನ್ನಲ್ಲಿಯೇ ಇದೆಯೆಂದು ತಿಳಿದೆನೋ ಮತ್ತು ಯಾವಾತನ ದಯೆಯಿಂದ ನನ್ನ ನಿಜ ಸ್ವರೂಪವೇ ಪರಮಾತ್ಮನೆಂದು ತಿಳಿದೆನೋ ಅಂತಹ ಸದ್ಗುರುವಿಗೆ ನಮಸ್ಕಾರವು.

ಶ್ಲೋ॥ ಗುರು ಶ್ಶಿವೋ ಗುರು ರ್ದೇವೋ ♦ ಗುರು ರ್ಬಂಧುಃ ಶರೀರಿಣಾಂ ।
ಗುರು ರಾತ್ಮಾ ಗುರು ರ್ಜೀವೋ ♦ ಗುರೋ ರನ್ಯಂ ನ ವಿದ್ಯತೇ ॥

ನ ಗುರೋ ರಧಿಕಂ ನ ಗುರೋ ರಧಿಕಂ । ನ ಗುರೋ ರಧಿಕಂ ನ ಗುರೋ ರಧಿಕಂ।
ಶ್ಶಿವಶಾಸನತ ಶ್ಶಿವಶಾಸನತ । ಶ್ಶಿವಶಾಸನತ ಶ್ಶಿವಶಾಸನತಃ ॥

ಇದ ಮೇವ ಶಿವಂ ಇದ ಮೇವ ಶಿವಂ । ಇದ ಮೇವ ಶಿವಂ ಇದ ಮೇವ ಶಿವಂ ।
ಮಮ ಶಾಸನತೋ ಮಮ ಶಾಸನತೋ । ಮಮ ಶಾಸನತೋ ಮಮ ಶಾಸನತಃ ॥

ವಿದಿತಂ ವಿದಿತಂ ವಿದಿತಂ ವಿದಿತಂ । ವಿಜನಂ ವಿಜನಂ ವಿಜನಂ ವಿಜನಂ ।
ಹರಿಶಾಸನತೋ ಹರಿಶಾಸನತೋ । ಹರಿಶಾಸನತೋ ಹರಿಶಾಸನತಃ ॥

ಎಂಬ ಗುರುಗೀತಾ ವಾಕ್ಯಾನುಸಾರವಾಗಿ, ತನಗೆ ಜ್ಞಾನವನ್ನು ಉಪದೇಶಿಸದ ಸದ್ಗುರುವೇ ಶಿವನು. ಆತನೇ ದೇವರು, ಆತನೇ ಬಂಧುವು, ಆತನೇ ಶರೀರದಲ್ಲಿರುವ ಆತ್ಮ, ಆ ಗುರುವೇ ಜೀವನು, ಆ ಜೀವನೇ ದೇವರು. ಗುರುವಿಲ್ಲದುದೇ ಮಾಯೆ, ಗುರುವಿಗಿಂತಲೂ ಅಧಿಕವಾದುದು ಯಾವುದೂ ಇಲ್ಲ; ಆತನೇ ಪರಬ್ರಹ್ಮಸ್ವರೂಪವೆಂದು ಶಿವಕೇಶವರೂ ನುಡಿಯುತ್ತಿದ್ದಾರೆ. ಇಷ್ಟೇ ಅಲ್ಲ—

ಶ್ಲೋ॥ ಗುಕಾರಂ ಚ ಗುಣಾತೀತಂ, ರುಕಾರಂ ರೂಪವರ್ಜಿತಂ ।
ಗುಣಾತೀತ ಸ್ವರೂಪಂ ಚ, ಯೋ ದದ್ಯಾತ್ಸ ಗುರುಃ ಸ್ಮೃತಃ ॥

ಗುಕಾರಃ ಪ್ರಥಮೋ ವರ್ಣೋ, ಮಾಯಾದಿಗುಣಭಾಸಕಃ ।
ರುಕಾರಸ್ತು ಪರಬ್ರಹ್ಮ, ಮಾಯಾಭ್ರಾಂತಿ ವಿಮೋಚಕಃ ॥

ಗುಕಾರಶ್ಚ ಗುಣಾತೀತೋ ರೂಪಾತೀತೋ ರುಕಾರಕಃ ।
ಗುಣರೂಪವಿಹೀನತ್ವಾತ್, ಗುರು ರಿತ್ಯಭಿಧೀಯತೇ ॥

ಗುಕಾರ ಶ್ಚಾಂಧಕಾರಸ್ತು, ರುಕಾರ ಸ್ತನ್ನಿರೋಧಕೃತ್ ।
ಅಂಧಕಾರವಿನಾಶಿತ್ವಾತ್, ಗುರು ರಿತ್ಯಭಿಧೀಯತೇ ॥

ಗುಕಾರ ಶ್ಚಾಂಧಕಾರೋ ಹಿ, ರುಕಾರ ಸ್ತೇಜ ಉಚ್ಯತೇ ।
ಅಜ್ಞಾನಗ್ರಾಸಕಂ ಬ್ರಹ್ಮ, ಗುರು ರೇವ ನ ಸಂಶಯಃ ।

ಮಂತ್ರರಾಜ ಮಿದಂ ದೇವಿ, ಗುರು ರಿತ್ಯಕ್ಷರದ್ವಯಂ ।
ಸ್ಮೃತಿವೇದಾರ್ಥವಾಕ್ಯಾನಾಂ, ಗುರುಃ ಸಾಕ್ಷಾತ್ಪರಂ ಪದಂ ।

ಸಪ್ತಕೋಟಿಮಹಾಮಂತ್ರಾಃ । ಚಿತ್ತವಿಭ್ರಮಕಾರಕಾಃ ।
ಏಕ ಮೇವ ಪರಂ ಮಂತ್ರಂ । ಗುರು ರಿತ್ಯಕ್ಷರದ್ವಯಂ ॥

ಎಂಬ ಗುರುಗೀತಾ ವಾಕ್ಯದಂತೆ, "ಗುರು" ವೆಂಬ ಅಕ್ಷರಗಳೆರಡರಲ್ಲಿ, "ಗು" ಎಂಬುದು ನಿರ್ಮಲ ನಿರ್ಗುಣಸ್ವರೂಪವಾಗಿಯೂ, "ರು" ಎಂಬುದು ಕೇವಲ ಆಕಾರ ರಹಿತನಾದ ಪರಮಾತ್ಮ ಸ್ವರೂಪವಾಗಿಯೂ ಇದೆ. ಆದುದರಿಂದ ಅಂಥ ನಿರ್ಮಲವಾದುದೂ, ಗುಣರಹಿತವೂ, ಆದ ಯಾವ ಪರಬ್ರಹ್ಮವಸ್ತುವುಂಟೋ ಅದರ ತತ್ವವನ್ನು ಬೋಧಿಸುವವನೇ ಸದ್ಗುರುವೆಂದು ತಿಳಿಯಬೇಕು.

ಇದೂ ಅಲ್ಲದೆ, "ಗು" ಎಂದರೆ ಮಾಯೆ, "ರು" ಎಂದರೆ ಅದನ್ನು ಹೋಗಲಾಡಿಸುವವನು; ಆದ್ದರಿಂದ "ಗುರು" ವೆಂದರೆ ಅಜ್ಞಾನವೆಂಬ ಮಾಯೆಯನ್ನು ಹೋಗಲಾಡಿಸುವ ಪರಬ್ರಹ್ಮವೆಂದರ್ಥ.

ಅಥವಾ, "ಗು" ಎಂದರೆ ಗುಣತ್ರಯವೂ ಇಲ್ಲದ್ದು. "ರು" ಎಂದರೆ ರೂಪವಿಲ್ಲದ್ದು, ಅಂದರೆ, ಸತ್ವರಜಸ್ತಮೋಗುಣಗಳಿಲ್ಲದೆಯೂ ಮತ್ತು ಕಣ್ಣು, ಕಿವಿ, ಮೂಗು, ಬಾಯಿ, ಕೈ, ಕಾಲು ಮೊದಲಾದ ಅವಯವಗಳಿಂದ ಕೂಡಿದ ರೂಪವಿಲ್ಲದೆಯೂ ಇರುವುದು. "ಗುರು" ಎಂದರೆ ನಿರ್ಗುಣ ನಿರಾಕಾರನಾದ ಪರಮಾತ್ಮನೆಂದರ್ಥ.

ಮತ್ತೆ "ಗು" ಎಂದರೆ ಅಜ್ಞಾನವೆಂಬ ಅಂಧತೆ, "ರು" ಅದನ್ನು ಹೋಗಲಾಡಿಸುವ ಅಂಜನ. ಅಂದರೆ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನೋದಯವನ್ನುಂಟುಮಾಡುವವನು ಎಂಬುದೇ "ಗುರು" ಶಬ್ದದ ಅರ್ಥ.

ಮೇಲೆ ಹೇಳಿದ ಕಾರಣಗಳಿಂದಲೇ, ಸಪ್ತಕೋಟಿ ಮಹಾ ಮಂತ್ರಗಳಲ್ಲೆಲ್ಲಾ "ಗುರು" ಎಂಬ ಎರಡಕ್ಷರದ ಮಂತ್ರವೇ ಮಹಾ ಶ್ರೇಷ್ಠತರವಾದುದು.

ಶ್ಲೋ ॥ ವೇದಾಂತಾರ್ಥವಿಚಾರೇಣ ಜಾಯತೇ ಜ್ಞಾನ ಮುತ್ತಮಂ ।
ಯೇನಾತ್ಯಂತಿಕಸಂಸಾರದುಃಖನಾಶೋ ಭವ ತ್ಯನು ॥

ವೇದಶಿಖೆಗಳಾದ ಉಪನಿಷತ್ತುಗಳ ಗೂಢಾರ್ಥಗಳನ್ನು ಇದುವರಿವಿಗೂ ವಿವರಿಸಿದ ಗುರುಗಳಿಂದ ತಿಳಿದಿದ್ದೇ ಆದರೆ, ಆತ್ಮ ಮತ್ತು ಅನಾತ್ಮ ಇವುಗಳ ಭೇದಗಳನ್ನು ವಿವರವಾಗಿ ತಿಳಿದುಕೊಳ್ಳಬಹುದು. ಅಂತಹ ಉತ್ತಮ ಜ್ಞಾನವು ಹುಟ್ಟು ಸಾವುಗಳೆಂಬ ದುಃಖದಿಂದ ಕೂಡಿದ ಸಂಸಾರವೆಂಬ ಸಮುದ್ರವನ್ನು ದಾಟಿಸಿ ಮೋಕ್ಷದ್ವಾರದಲ್ಲಿ ಪ್ರವೇಶಿಸುವಂತೆ ಮಾಡುತ್ತದೆ.

ರಂಭೆಯು ಶುಕಮಹರ್ಷಿಗಳನ್ನು ಕುರಿತು, ಸ್ತ್ರೀಸಂಭೋಗವೇ ಶ್ರೇಷ್ಠವಾದ ಸುಖವೆಂದು ಈ ಕೆಳಗೆ ಹೇಳುವಂತೆ ಹೇಳುತ್ತಾಳೆ.

ಶ್ಲೋ॥ ಗೇಹೇ ಗೇಹೇ ಜಂಗಮಾ ಹೇಮವಲ್ಲೀ ।
ವಲ್ಯಾಂ ವಲ್ಯಾಂ ಭಾಸತೇ ಪಾರ್ವಣಬಿಂಬಂ ॥
ಬಿಂಬೇ ಬಿಂಬೇ ದೃಶ್ಯತೇ ಮೀನಯುಗ್ಮಂ ।
ಯುಗ್ಮೇ ಯುಗ್ಮೇ ಪಂಚಬಾಣಪ್ರಹಾರಃ ॥

(ರಂಭಾ ಶುಕಸಂವಾದ.)

ಪ್ರತಿಯೊಂದು ಮನೆಯಲ್ಲಿಯೂ ಸಂಚರಿಸುವ ಒಂದು ಭಂಗಾರದ ಬಳ್ಳಿಯಿದೆ ಅಂದರೆ ಒಬ್ಬೊಬ್ಬ ಸುಂದರ ಸ್ತ್ರೀ ಇರುತ್ತಾಳೆ. ಆ ಬಳ್ಳಿಯ ಕೊನೆಯಲ್ಲಿ ಒಂದು ಚಂದ್ರಬಿಂಬವಿದೆ ಅಂದರೆ ಆಕೆಗೆ ಚಂದ್ರಬಿಂಬದಂತಿರುವ ಮುಖವಿದೆ. ಆ ಬಿಂಬದಲ್ಲಿ ಎರಡು ಮೀನುಗಳಿವೆ ಅಂದರೆ ಆ ಮುಖದಲ್ಲಿ ಎರಡು ಮೀನಿನಂತಿರುವ ಕಣ್ಣುಗಳಿವೆ. ಆ ಕಣ್ಣುಗಳಲ್ಲಿಯೇ ಮನ್ಮಥನ ಪ್ರಹಾರ ಅಂದರೆ ಕಾಮಸುಖವಿದೆ.

ಅದಕ್ಕೆ ಶುಕಮಹರ್ಷಿಯು ಉತ್ತರ ಹೇಳುತ್ತಾರೆ.

ಶ್ಲೋ॥ ತೀರ್ಥೇ ತೀರ್ಥೇ ಭಾಸತೇ ಬ್ರಹ್ಮವೃಂದಂ ।
ವೃಂದೇ ವೃಂದೇ ತತ್ವಚಿಂತಾನುವಾದಃ ॥
ವಾದೇ ವಾದೇ ಜಾಯತೇ ಬ್ರಹ್ಮಬೋಧೋ ।
ಬೋಧೇ ಬೋಧೇ ಭಾಸತೇ ಚಂದ್ರಚೂಡಃ ॥

(ರಂಭಾ ಶುಕಸಂವಾದ.)

ಪ್ರತಿಯೊಂದು ಪವಿತ್ರ ಪ್ರದೇಶದಲ್ಲಿಯೂ ವೇದವಿತ್ತುಗಳಾದ ಋಷಿಗಳ ಸಮೂಹವಿರುತ್ತದೆ. ಅವರಿರುವ ಸ್ಥಳಗಳಲ್ಲಿ ತತ್ವಚಿಂತೆಯು ಅಂದರೆ ಪರಮಾತ್ಮವಿಚಾರ ಚರ್ಚೆಯು ನಡೆಯುತ್ತಿರುತ್ತದೆ. ಆ ವಿಚಾರ ನಡೆಯುತ್ತ ನಡೆಯುತ್ತ ಪರಮಾತ್ಮ ವಿಚಾರಜ್ಞಾನವುಂಟಾಗುತ್ತದೆ. ಆ ಜ್ಞಾನವುಂಟಾದ ಒಡನೆಯೇ ಪರಮಾತ್ಮನು ಪ್ರತ್ಯಕ್ಷನಾಗುತ್ತಾನೆ. ಅಂದರೆ ಪರಮಾತ್ಮನಲ್ಲಿ ಐಕ್ಯಸುಖವನ್ನು ಹೊಂದುತ್ತಾನೆ.

ಶ್ರುತಿ ॥ ಮೋಕ್ಷದ್ವಾರೇ ದ್ವಾರಪಾಲಶ್ಚತ್ವಾರಃ ಪರಿಕೀರ್ತಿತಾಃ ।
ಶಮೋ ವಿಚಾರಸ್ಸಂತೋಷಶ್ಚತುರ್ಥಸ್ಸಾಧುಸಂಗಮಃ ।
ಏಕಂ ವಾ ಸರ್ವಯತ್ನೇನ, ಸರ್ವಮುತ್ಸೃಜ್ಯ ಸಂಶ್ರಯೇತ್ ।
ಏಕಸ್ಮಿನ್ ವಶಗೇ ಯಾಂತಿ ಚತ್ವಾರೋಽಪಿ ವಶಂಗತಾಃ ॥

(ಮಹೋಪನಿಷತ್ತು.)

**ಮೋಕ್ಷದ್ವಾರದ ಹತ್ತಿರ ದ್ವಾರಪಾಲಕರು ನಾಲ್ಕು ಮಂದಿ.** ಯಾರೆಂದರೆ:—1. ಶಮವು ಅಂದರೆ-ಶಾಂತಿ, 2. ವಿಚಾರವು ಅಂದರೆ-ಆತ್ಮಾನಾತ್ಮ ತತ್ವವಿಚಾರ, 3. ಸಂತೋಷವು ಅಂದರೆ-ಪೂರ್ವಕರ್ಮ ಪರಿಪಾಕದಿಂದ ತನಗೆ ಲಭಿಸಿದಷ್ಟರಲ್ಲಿಯೇ ತೃಪ್ತಿಹೊಂದಿ ತನಗೆ ದೊರಕದಿದ್ದರಲ್ಲಿ ಆಶೆಪಡದೆ ಮನಸ್ಸನ್ನು ಸಮಾಧಾನದಿಂದಿಟ್ಟುಕೊಂಡಿರುವುದು. 4. ಸಾಧುಸಂಗವು ಅಂದರೆ-ವೇದಾಂತ ರಹಸ್ಯವನ್ನು ತಿಳಿದ ಜ್ಞಾನಿಗಳೊಡನೆ ಯಾವಾಗಲೂ ಸ್ನೇಹದಿಂದಿದ್ದು ಅವರಿಂದ ತತ್ವವಿಚಾರವನ್ನು ತಿಳಿದುಕೊಳ್ಳುವುದು. ಈ ಮೇಲೆ ಹೇಳಿದ ನಾಲ್ಕೂ ಮೋಕ್ಷಭವನ ಪ್ರವೇಶಕ್ಕೆ ಅನುಕೂಲಪಡಿಸುವ ದ್ವಾರಪಾಲಕರು, ಎಂದು ಶ್ರುತಿಯು ಹೇಳುತ್ತದೆ. ಇವುಗಳಲ್ಲಿ ಯಾವುದಾದರೊಂದನ್ನಾದರೂ ಪ್ರಯತ್ನಪೂರ್ವಕವಾಗಿ ಸ್ವಾಧೀನಪಡಿಸಿಕೊಳ್ಳುವುದಾದರೆ ಉಳಿದ ಮೂರೂ ತಮಗೆ ತಾವೇ ವಶವಾಗುತ್ತದೆ. ಆಗ ಮೋಕ್ಷವನ್ನು ನಿರಾತಂಕವಾಗಿ ಪಡೆಯಬಹುದು.

ಶ್ರುತಿ ॥ " ಅವಿಚಾರಕೃತೋ ಬಂಧೋ ವಿಚಾರಾ ನ್ಮೋಕ್ಷೋ ಭವತಿ ।
ತಸ್ಮಾ ತ್ಸದಾ ವಿಚಾರಯೇ ಜ್ಜಗಜ್ಜೀವ ಪರಮಾತ್ಮ ನಃ ।
ಜೀವಭಾವಜಗದ್ಭಾವಬೋಧೇ ಪ್ರತ್ಯ ಗಭಿನ್ನಂ ಬ್ರಹ್ಮೈವಾಽವಶಿಷ್ಯತ " ॥

(ಪೈಂಗಳೋಪನಿಷತ್ತು.)

ಅಂದರೆ ಆತ್ಮಾನಾತ್ಮ ವಿಚಾರಣೆ ಮಾಡದಿದ್ದಲ್ಲಿ ಬಂಧವು ಸರ್ವಥಾ ಉಂಟಾಗುತ್ತದೆ. ಅಂತಹ ಆತ್ಮವಿಚಾರದಲ್ಲಿ ಪ್ರವೇಶಿಸಿದರೆ ಮೋಕ್ಷವು ಅಂದರೆ ಬಂಧವಿಮೋಚನೆಯು ಉಂಟಾಗುತ್ತದೆ. ಆಕಾರಣವನ್ನು ಹಿಡಿದೇ ಸದಾ ಜೀವಾತ್ಮನೆಂದರೇನು ? ಪರಮಾತ್ಮನೆಂದರೇನು ? ಜೀವಾತ್ಮ ಪರಮಾತ್ಮ ಭಾವಗಳು ಯಾವ ಯಾವುಗಳು ಎಂದು ವಿಚಾರ ಮಾಡಿದ್ದೇ ಆದರೆ, ಜೀವಾತ್ಮ ಪರಮಾತ್ಮರಿಗಿರುವ ಭೇದಗಳನ್ನು ಚನ್ನಾಗಿ ತಿಳಿಯಬಹುದು. ಎಂಬುದೇ ಮೇಲಿನ ಶ್ರುತಿವಾಕ್ಯದಿಂದ ತಿಳಿಯಬರುವಂಥದು. ಹಾಗೆ ತಿಳಿದ ಒಡನೆಯೇ ಮೋಕ್ಷವು ಬಹು ಸುಲಭಸಾಧ್ಯವಾಗಿ ಸಿದ್ಧಿಸುವುದು.

ಆದುದರಿಂದ, ಈ ಗ್ರಂಥರಚನೆಯ ಉದ್ದೇಶವೇನೆಂದು ಕೇಳಿದರೆ, ಇದರಲ್ಲಿ ವಿವರಿಸಲ್ಪಟ್ಟ ವೇದಾಂತರಹಸ್ಯಗಳನ್ನು ವಿಪುಲವಾಗಿ ತಿಳಿದುಕೊಂಡು, ಇತರ ಶಾಸ್ತ್ರಗಳ ಪರಿಶೋಧನೆಗೆ ಮನಗೊಡದೆ, ವಿಧವಿಧವಾಗಿ ದಿಕ್ಕುದಿಕ್ಕಿಗೂ ಚದರುತ್ತಿರುವ ಮನಸ್ಸೆಂಬ ಕಪಿಯನ್ನು ಚನ್ನಾಗಿ ಬಿಗಿಗಟ್ಟಿ, ಅಂದರೆ ಸ್ಥಿರಮನಸ್ಕನಾಗಿ ಅಹೋರಾತ್ರಿಗಳೂ ನಿಷ್ಠಾಗರಿಷ್ಠನಾಗಿದ್ದದ್ದೇ ಆದರೆ, ಮೋಕ್ಷವು ಅಂಗೈಯಲ್ಲಿಯೇ ಇರುವುದು. ಆದುದರಿಂದ ಮುಮುಕ್ಷುಗಳೆಲ್ಲರೂ ಸಂಸಾರಸಮುದ್ರವನ್ನು ದಾಟಿ ಮೋಕ್ಷವನ್ನು ಪಡಿಯಬೇಕೆಂಬುದೇ ಈ ಗ್ರಂಥದ ಉದ್ದಿಶ್ಯ.

ಶ್ರುತಿ ॥ ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ ತತ್ತು ಸರ್ವಸ್ಯ ಬಾಹ್ಯತಃ ॥

(ಈಶಾವಾಸ್ಯೋಪನಿಷತ್ತು.)

ಈ ಶ್ರುತಿ ವಾಕ್ಯವು ಹೇಳುವುದೇನೆಂದರೆ, ಆತ್ಮಾನಾತ್ಮ ವಿಚಾರ ಮಾಡದ ಮಾನವರಿಗೆ ಪರಮಾತ್ಮನು ದೇಹೇಂದ್ರಿಯಗಳುಳ್ಳವನಾಗಿಯೂ,

ಸೃಷ್ಟಿ-ಸ್ಥಿತಿ-ಸಂಹಾರಾದಿ ಕರ್ಮಗಳನ್ನು ಮಾಡುವವನಾಗಿಯೂ ಕಾಣ ಬರುತ್ತಾನೆ; ವೇದಾಂತ ವಿಚಾರಮಾಡುವ ಜ್ಞಾನಸಂಪನ್ನರಿಗಾದರೋ ಆ ಪರಮಾತ್ಮನು ನಿರ್ಗುಣ, ನಿರಾಕಾರ, ನಿರಂಜನನಾಗಿ ಗೋಚರಿಸು ತ್ತಾನೆ. ಅಂದರೆ ಆತ್ಮವಿಚಾರ ಶೂನ್ಯರಿಗೆ ಬಹುದೂರನಾಗಿಯೂ, ಜ್ಞಾನಿ ಗಳಿಗೆ ಸಮೀಪವರ್ತಿಯಾಗಿಯೂ ಆ ಪರಮಾತ್ಮನು ಕಾಣಬರುತ್ತಾನೆ. ಅಂತಹ ಪರಮಾತ್ಮನೇ ಜೀವಕೋಟಿಯ ಅಂತಃಕರಣಸಾಕ್ಷಿಯಾಗಿಯೂ ಜ್ಞಾನಾತ್ಮಕನಾಗಿಯೂ ತುಂಬಿಕೊಂಡಿರುತ್ತಾನೆ. ಈ ಸೃಷ್ಟಿಯಲ್ಲಿ ಅಂತರ್ಯಾಮಿಯಾಗಿಯೂ ಬಾಹ್ಯದಲ್ಲಿಯೂ ಅಂದರೆ ಒಳಗೂ ಹೊರಗೂ ಪರಮಾತ್ಮನು ತುಂಬಿಕೊಂಡಿದ್ದಾನೆಯೆಂಬುದೇ ಈ ಶ್ರುತಿವಾಕ್ಯದ ನಿಶ್ಚ ಯಾರ್ಥವು.

ಶ್ರುತಿ ॥ "ತಸ್ಮಾ ತ್ಸಾಕಾರ ಮನಿತ್ಯಂ ನಿತ್ಯಂ ನಿರಾಕಾರ ಮಿತಿ"

ಈಮಹಾ ನಾರಾಯಣೋಪನಿಷತ್ತಿನ ವಾಕ್ಯದಂತೆ, ಆಕಾರದಿಂದ (ರೂಪದಿಂದ) ಕೂಡಿರುವ ಪ್ರತಿ ವಸ್ತುವೂ ಅನಿತ್ಯವೆಂದೂ ಅಂದರೆ, "ಯದ್ದೃಶ್ಯಂ ತನ್ನಶ್ಯತಿ" ಎಂಬಂತೆ ಬಾಹ್ಯದೃಷ್ಟಿಗೆ ಕಾಣುವವುಗಳೆಲ್ಲ ವೂ ನಶ್ವರವಾದುವುಗಳೇ ಎಂದೂ, ನಿರಾಕಾರವಾದದ್ದೇ ನಿತ್ಯವೆಂದೂ ತಿಳಿಯಬೇಕು. ಅಂದರೆ ನಿರಾಕಾರನಾದ ನಾನು ನಿತ್ಯ, ಸಾಕಾರವಾಗಿರುವ ವಿಗ್ರಹಾದಿಗಳೆಲ್ಲವೂ ಅನಿತ್ಯವೆಂಬುದೇ ಈ ಶ್ರುತಿಯ ಭಾವಾರ್ಥ.

ಶ್ರುತಿ ॥ "ಯತ್ರ ನಾನ್ಯ ತ್ಪಶ್ಯತಿ ನಾನ್ಯತ್ ಶೃಣೋತಿ ನಾನ್ಯ ದ್ವಿಜಾನಾತಿ ಸ ಭೂಮಾಯೋವೈ ಭೂಮಾ ತದಮೃತಂ ಅಥ ಯತ್ರಾನ್ಯತ್ಪಶ್ಯತಿ ಅನ್ಯತ್ ಶೃಣೋತಿ ಅನ್ಯ ದ್ವಿಜಾನಾತಿ ತದಲ್ಪಂ ಅಥಯದಲ್ಪಂ ತನ್ಮರ್ತ್ಯಂ" ॥

ಶ್ರುತಿ ॥ "ಸಂಪೂರ್ಣಮನ್ಯತ್ ಶೂನ್ಯಮನ್ಯತ್ ಸ್ಥಾನಂ" ॥

ಎಂಬ ಛಾಂದಾಗ್ಯೋಪನಿಷದ್ವಾಕ್ಯರೀತಿಯಾಗಿಯೂ, ಬೃಹದಾರ ಣ್ಯಕೋಪನಿಷದ್ವಾಕ್ಯಾನುಗುಣವಾಗಿಯೂ, "ನನ್ನ ನಿಜ ಸ್ವರೂಪವು ನಿರಾಕಾರವಾದದ್ದು ಅಂದರೆ ಬಟ್ಟಬಯಲು, ಆ ಬಯಲೇ (ಆಕಾಶವೇ) ಎಲ್ಲೆಲ್ಲಿಯೂ ತುಂಬಿರುವುದು; ಅದಕ್ಕೆ ನಾಶವಿಲ್ಲ; ನನ್ನ ಸಾಕಾರ

ಸ್ವರೂಪವೆಂದರೆ ನನ್ನನ್ನು ಕುರಿತು ಮಾಡಿದ ವಿಗ್ರಹಗಳು ಅಲ್ಪವಾದದ್ದು, ಎಲ್ಲಾ ಕಡೆಯೂ ತುಂಬಿರುವುದಿಲ್ಲ, ಈ ರೂಪಕ್ಕೆ ನಾಶವುಂಟು" ಎಂದು ಪರಬ್ರಹ್ಮನೇ ತನ್ನ ಸ್ವರೂಪವನ್ನು ಕುರಿತು ಹೇಳುತ್ತಾನೆಂಬುದೇ ಶ್ರುತಿ ವಾಕ್ಯದ ಸಾರಾಂಶ.

ಶ್ರುತಿ ॥ "ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ।
ಭೂಮೈವ ಸುಖಂ ಭೂಮಾತ್ವೇವ ವಿಜಿಜ್ಞಾಸಿತವ್ಯ" ಇತಿ ॥

'ಅಖಂಡ ಪರಿಪೂರ್ಣ ನಿರಾಕಾರವಾದ ನನ್ನ ನಿಜಸ್ವರೂಪವನ್ನು ತಿಳಿದುಕೊಳ್ಳುವವರಿಗೆ ಸುಖವುಂಟಾಗುತ್ತದೆ. ಖಂಡಸ್ವರೂಪವಾದ ನನ್ನ ಸಾಕಾರ ರೂಪವನ್ನು ತಿಳಿದಿದ್ದೇ ಆದರೆ ಅಷ್ಟು ಸುಖವನ್ನು ಹೊಂದ ಲಾರರು. ಮೋಕ್ಷಾಪೇಕ್ಷಿಯಾದದ್ದೇ ಆದರೆ ನನ್ನ ನಿಜಸ್ವರೂಪವನ್ನು ತಿಳಿದುಕೊಳ್ಳಲೇಬೇಕು', ಎಂಬುದೇ ಮೇಲಿನ ಶ್ರುತ್ಯರ್ಥ.

ಓ ಪಾಠಕರಿರಾ! ಬಟ್ಟಬಯಲಾಗಿರುವ ಪರಮಾತ್ಮನೇ ಅಧಿಕ ವೆಂದೂ, ದೇವಾಲಯಗಳಲ್ಲಿರುವ ವಿಗ್ರಹಗಳೇ ಕಡೆಮೆಯಂದೂ ಹೇಳುವ ಈ ವಿಷಯವು ಜ್ಞಾನಿಗಳಿಗೇ ಹೊರತು ಸಂಸಾರ ಬಂಧವುಳ್ಳವರಿಗಲ್ಲ. ಜ್ಞಾನಿಗಳೂ ಕೂಡ ಮೊದಮೊದಲು ದೇವಾಲಯಗಳಿಗೆ ಹೋಗಿ ಕಲ್ಲುಕೂಡ ನೀರಗುವಂಥ ಬಹು ಭಕ್ತಿಯಿಂದ ಆ ಶಿಲಾವಿಗ್ರಹಗಳನ್ನು ಪೂಜಿಸಿಯೇ ಸಿದ್ಧಿಹೊಂದಿರುವರಾಗಿ, ಅವರು ಆ ಅಂತರವ (ಮೆಟ್ಟಿಲ) ನ್ನು ದಾಟಿರು ವುದ್ದರಿಂದಲೇ ಪುನಃ ಅವರು ವಿಗ್ರಹಾರಾಧನೆ ಮಾಡಬೇಕಾದುದಿಲ್ಲ. ಅಂಥವರು ಬಟ್ಟಬಯಲಾಗಿ ಉಳ್ಳ (ಶೂನ್ಯನಾದ) ಪರಮಾತ್ಮಸ್ವರೂಪ ದಲ್ಲಿ ಮನಸ್ಸನ್ನು ಐಕ್ಯಮಾಡಬೇಕೆಂಬುದೇ ಶ್ರುತಿವಾಕ್ಯಗಳು ಒತ್ತಿ ಹೇಳುವ ವಿಷಯ. ಅದನ್ನು ಸಂಸಾರಿಕರಿಗೆ ಮನದಟ್ಟುವಂತೆ ಇಲ್ಲಿ ಹೇಳಿದೆ. ಮೇಲೆ ಹೇಳಿದ ಜ್ಞಾನಿಗಳಂತೆಯೇ ಅವರಂತಾಗುವುದಕ್ಕೆ ಮೊದಲು ಸಂಸಾರಿಗಳು ಮೊದಮೊದಲು ದೇವಸ್ಥಾನಾದಿಗಳಿಗೆ ಹೋಗಿ ನಿಮಗೆ ಇಷ್ಟಬಂದ ಶಿವ ಇಲ್ಲವೇ ವಿಷ್ಣು ವಿಗ್ರಹಗಳನ್ನು ಬಹು ಭಕ್ತಿ ಶ್ರದ್ಧೆಗಳಿಂದ ಪೂಜಿಸಿ, ಮನಸ್ಸನ್ನು ಪರಿಪಕ್ವವಾದಮೇಲೆ ಪರಬ್ರಹ್ಮನಲ್ಲಿ

ಲೀನವಾಗುವಂತೆ ಸಾಧನೆ ಮಾಡುವುದಕ್ಕಾಗಿ ಪ್ರತಿಯೊಬ್ಬರೂ ಪ್ರಯತ್ನ ಮಾಡಬೇಕು.

ಸ್ತ್ರೀಪುರುಷರು ದೇವಾಲಯಗಳಿಗೆ ಹೋಗಿ ಶಿವಕೇಶವರನ್ನು ಭಕ್ತಿ ಶ್ರದ್ಧೆಗಳಿಂದ ಪೂಜಿಸುವ ಮೊದಲು ಅದರ ಮುಂದಿನ ಮೆಟ್ಟಿಲಾದ ಬಯಲುರೂಪಿಯಾದ (ಶೂನ್ಯನಾದ) ಪರಮಾತ್ಮನಲ್ಲಿ ಮನಸ್ಸನ್ನು ಐಕ್ಯ ಮಾಡುವುದು ತುಂಬಾ ಕಷ್ಟವು. ಆದ್ದರಿಂದ, ಎಲ್ಲರೂ ಮೊಟ್ಟಮೊದಲು ಹೋಗಿ ದೇವತಾಸ್ವರೂಪವನ್ನು ತೋರಿಸುವ ನಾಮರೂಪಾತ್ಮಕವಾದ ವಿಗ್ರಹಗಳಲ್ಲಿ ಭಕ್ತಿ ಶ್ರದ್ಧೆಗಳಿಂದ ಪೂಜೆಯನ್ನು ಸಲ್ಲಿಸಬೇಕಾದುದೇ ಮೊದಲಿನ ಮೆಟ್ಟಿಲು. ಇದಾದ ತರುವಾಯ ಮನಸ್ಸು ಸ್ವಾಧೀನಪಡಿಸುವ ಸಾಧನೆಗಾಗಿ ಅದನ್ನು ಧ್ಯಾನದಲ್ಲಿ ನಿಲ್ಲಿಸಿ, ಆ ಧ್ಯಾನವನ್ನು ಪೂರ್ತಿಗೊಳಿಸಿ ಯೋಗಸಿದ್ಧಿಯನ್ನು ಹೊಂದಿದಮೇಲೆ ಪರಬ್ರಹ್ಮನಲ್ಲಿ ಐಕ್ಯಹೊಂದುವುದು. ಮನಸ್ಸು ಬಹು ಸುಲಭವಾಗಿ ವಶವಾಗುವುದಕ್ಕಾಗಿಯೇ ಈ ಗ್ರಂಥದಲ್ಲಿ ಅನೇಕ ಉಪದೇಶಗಳನ್ನು ಮಾಡಿದೆ. ಮತ್ತು ಮನಸ್ಸನ್ನು ಸ್ಥಿರೀಕರಿಸಿ ಮೋಕ್ಷವನ್ನು ಪಡೆಯುವುದಕ್ಕಾಗಿ, ಈ ಗ್ರಂಥದಲ್ಲಿ ಅನೇಕ ದೇವರಹಸ್ಯಗಳೂ, ವೇದಾಂತವಾಕ್ಯಗಳೂ, ಶ್ರೀ ಭಗವದ್ಗೀತಾದಿ ದೃಷ್ಟಾಂತಗಳಿಂದ ವಿಶದಪಡಿಸಿ ಹೇಳಲ್ಪಟ್ಟಿವೆ. ಅವಲ್ಲೆವನ್ನು ತಿಳಿದು ಸಾಧನೆಮಾಡುತ್ತ ಬಂದದ್ದೇ ಆದರೆ ಸಂಸಾರ ಬಂಧಕವನ್ನು ತೊಲಗಿಸಿ ಮೋಕ್ಷವನ್ನು ಪಡೆಯಬಹುದು.

ಅಯ್ಯಾ! ಮೋಕ್ಷವನ್ನು ಹೊಂದಲು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳು ಇವೆ. ಪ್ರತಿ ಪುರುಷನೂ ಈ ನಾಲ್ಕು ಆಶ್ರಮಧರ್ಮಗಳನ್ನು ಅನುಷ್ಠಿಸಿದ್ದೇ ಆದರೆ, ನಶ್ವರವಾದ ಭೋಗಭಾಗ್ಯಗಳೆಲ್ಲವನ್ನೂ ತೊಲಗಿಸಿ ಅನಂತರ ತನ್ನ ಕರ್ಮಾನುಸಾರವಾಗಿ ಮೋಕ್ಷವೆಂಬ ಶ್ರೇಷ್ಠವಾದ ಸಾಮ್ರಾಜ್ಯ ಪದವಿಯನ್ನು ಹೊಂದುತ್ತಾನೆಯೇ ಹೊರತು, ಬ್ರಹ್ಮಚರ್ಯಾಶ್ರಮದಿಂದಲೇ ಮನಸ್ಸು ಪರಿಪಕ್ವವಾಗುವುದಕ್ಕೆ ಮುಂಚೆ, ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದೇ ಆದರೆ ಮೋಕ್ಷಪದವಿಯನ್ನು ಹೊಂದಲಾರನು. ಹಾಗೆ ಬ್ರಹ್ಮಚಾರಿಯಾದ

ವನು ಸನ್ಯಾಸಾಶ್ರಮವನ್ನು ಹೊಂದಿದರೆ, ಯೌವನ ಪ್ರಾಪ್ತವಾದಾಗ ಕಾಮಾಂಧನಾಗಿ, ಆ ಕಾಮವನ್ನು ತೀರಿಸಿಕೊಳ್ಳುವ ಸಲುವಾಗಿ ಸ್ತ್ರೀಯರ ಬಲೆಗೆ ಬಿದ್ದು, ಉಭಯಭ್ರಷ್ಟತ್ವವನ್ನು ಹೊಂದುವವನಾಗುತ್ತಾನೆ. ಅನೇಕರು ಸನ್ಯಾಸಿವೇಷವನ್ನು ಧರಿಸಿ ಸಂಸಾರಿಕರಾದ ಅನೇಕ ಸ್ತ್ರೀಯರನ್ನು ಕರೆದುಕೊಂಡು ದೇಶಾಂತರಕ್ಕೆ ಓಡಿಹೋಗಿರುವ ದೃಷ್ಟಾಂತಗಳು ಅನೇಕರಿಗೆ ತಿಳಿದೇ ಇವೆ. ಆದುದರಿಂದ ವಿವಾಹ ಮಾಡಿಕೊಂಡು ತನ್ನ ಇಷ್ಟಾನುಸಾರವಾಗಿ ನಡೆದುಕೊಳ್ಳುವ ಹೆಂಡತಿಯೊಡಗೂಡಿ ಸಂಸಾರವೆಂಬ ಗೃಹಕೃತ್ಯವನ್ನು ನಡೆಸಿಕೊಂಡು ಬರಬೇಕು. ತನ್ನ ಮನಸ್ಸನ್ನನುಸರಿಸದ ಹೆಂಡತಿಯೊಡನೆ ಸಂಸಾರ ನಡೆಸುವುದಕ್ಕಿಂತಲೂ ಸನ್ಯಾಸವನ್ನು ಸ್ವೀಕರಿಸುವುದೇ ಅತ್ಯುತ್ತಮವಾದುದು. ಬ್ರಹ್ಮಚರ್ಯೆಯಲ್ಲಿದ್ದ ಒಬ್ಬ ಪುರುಷನು ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕೆಂದಿರುವ ಸಮಯದಲ್ಲಿ ಬ್ರಾಹ್ಮಣೋತ್ತಮರು ಅವನಿಗೆ ಸ್ವಲ್ಪ ಎಚ್ಚರಿಕೆ ಕೊಟ್ಟರು. ಆ ವಿಷಯವನ್ನು ಕೇಳಿದ ತಕ್ಷಣವೇ ಇವನು ಬಹಳ ಎದೆಗುಂದಿ ಓಡಿಹೋದನು. ಆ ವಿಷಯವು ಈ ಮುಂದೆ ವಿಸ್ತರಿಸಿದೆ.



# ವಿವಾಹವಾದನಂತರ ಸಂಸಾರ ತಾಪತ್ರಯಗಳು ಸಂಭವಿಸುವಿಕೆ.

---

ಈ ಗ್ರಂಥದಲ್ಲಿ ಮುಖ್ಯವಾಗಿರುವುದು ಪ್ರಾಣಾಯಾಮವು ಅಂದರೆ ಯೋಗಾಭ್ಯಾಸವು. ಎರಡನೆಯದು ರಾಜಯೋಗ. ಈ ರಾಜಯೋಗಕ್ಕಿಂತಲೂ ಮುಖ್ಯವಾದದ್ದು "ಸೋऽಹಂ" ಮಂತ್ರವು. ಈ "ಸೋऽಹಂ" ಮಂತ್ರವನ್ನು ಹೇಗೆ ಉಪದೇಶಮಾಡಬೇಕೋ ಅದಕ್ಕಾಗಿ ಉಪನಿಷತ್ತುಗಳಲ್ಲಿನ ದೃಷ್ಟಾಂತಗಳು ಇನ್ನು ಮುಂದೆ ಈ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಈ "ಸೋऽಹಂ" ಮಂತ್ರವನ್ನು ಯಾವ ರೀತಿಯಲ್ಲಿ ಜಪಮಾಡಬೇಕೆಂಬ ಈ ವಿಷಯವು ಉಪನಿಷತ್ತುಗಳೊಡನೆ ಅನಂತರ ವಿವರಿಸಲ್ಪಟ್ಟಿದೆ. ಈ "ಸೋऽಹಂ" ಮಂತ್ರೋಪದೇಶದಿಂದ ಸಂಸಾರವೆಂಬ ಬಂಧವು ತೊಲಗಿ ಮೋಕ್ಷವೆಂಬ ದೊಡ್ಡ ಸಾಮ್ರಾಜ್ಯ ಪದವಿಯು ದೊರಕುವುದು. ಈ ಸಂಸಾರ ಬಂಧವು ಪುರುಷನಿಗೆ ಹೇಗೆ ಸಂಭವಿಸುತ್ತದೆಯೆಂಬುದು ಈ ಕೆಳಗೆ ವಿವರಿಸಿದೆ.

ಅಯ್ಯಾ, ಹಿಂದೂಸ್ಥಾನ್ ದೇಶದಲ್ಲಿ "ಸತ್ ಜನ್ ಗಡ" ಎಂಬ ಗ್ರಾಮದಲ್ಲಿ ರಾಮಾನಂದಸ್ವಾಮಿಯೆಂಬ ಒಬ್ಬ ಮಹಾನುಭಾವನಿದ್ದನು. ಆವನ ವಿವಾಹಕಾಲದಲ್ಲಿ ಮಂಗಳಸೂತ್ರವನ್ನು ಕಂಠದಲ್ಲಿ ಕಟ್ಟುವುದಕ್ಕೆ ಮೊದಲು ದಂಪತಿಗಳ ಮಧ್ಯದಲ್ಲಿ ತೆರೆಯು ಹಾಕಲ್ಪಟ್ಟಿತು. ಆ ಸಮಯದಲ್ಲಿ ವಿವಾಹ ನೆರವೇರುವ ಸಮಯದಲ್ಲಿ ಬ್ರಾಹ್ಮಣರು "ಸಾವಧಾನಾ, ಸಾವಧಾನಾ" ಎಂದು ಗಟ್ಟಿಯಾಗಿ ಕೂಗಿ ಹೇಳಿ, ಜನಗಳಿಗೆ ಹೆಚ್ಚರಿಕೆ ಕೊಟ್ಟು ತರುವಾಯ "ಸುಲಗ್ನಾ ಸಾವಧಾನಾ, ಶುಭ ಮುಹೂರ್ತಾ ಸಾವಧಾನಾ" ಎಂದು ಗಟ್ಟಿಯಾಗಿ ಅರಚಿದರು. ಆಗ ಮದುವಣಿಗನಾದ ರಾಮಾನಂದಸ್ವಾಮಿಯು ಈ ವಾಕ್ಯವನ್ನು ಕೇಳಿದೊಡನೆಯೇ ತನ್ನ ಸಮೀಪದಲ್ಲಿದ್ದ ಒಬ್ಬ ಬ್ರಾಹ್ಮಣನನ್ನು ನೋಡಿ "ಸಾವಧಾನಾ, ಸಾವಧಾನಾ ಎಂದು ಗಟ್ಟಿಯಾಗಿ ಅರಚುತ್ತೀದ್ದಿರಲ್ಲಾ ಅದೇನು ಹಾಗೆಂದರೆ?"

ಎಂದನು. ಅದಕ್ಕೆ ಆ ಬ್ರಾಹ್ಮಣನು, "ಒಬ್ಬ ರಾಕ್ಷಸಿಯು ನಿನ್ನ ಹೆಗಲ ಮೇಲೆ ಬಂದು ಬೀಳುತ್ತಿದ್ದಾಳೆ. ನೀನು ಸಾವಧಾನದಿಂದಿದ್ದು ತಪ್ಪಿಸಿಕೋ ಎಂದು ಬ್ರಾಹ್ಮಣರು ನಿನಗೆ ಎಚ್ಚರಿಕೆ ಕೊಡುತ್ತಿದ್ದಾರೆ" ಎಂದು ಹೇಳಿದನು. ಆ ಬ್ರಾಹ್ಮಣನ ಮಾತು ರಾಮಾನಂದಸ್ವಾಮಿಯ ಕಿವಿಗೆ ಬಿದ್ದೊಡನೆಯೇ ಆತನು ತೆರೆಯೊಳಗಿನಿಂದ ತಪ್ಪಿಸಿಕೊಂಡು ಓಡಿಹೋದನು; ವಿವಾಹವನ್ನು ಮಾಡಿಕೊಳ್ಳಲಿಲ್ಲ. ಸ್ತ್ರೀ ಮೇಲಿನ ಮೋಹದಿಂದ ಆಕೆಯನ್ನು ಮದುವೆಮಾಡಿಕೊಂಡು, ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಆಕೆಯು ಎಲ್ಲಿಯೂ ಓಡಿಹೋಗದೇ ತಮ್ಮ ಸಮೀಪದಲ್ಲಿ ಇಟ್ಟುಕೊಳ್ಳುವುದಕ್ಕಾಗಿಯೇ ಮೊದಲು ಮಂಗಳಸೂತ್ರವೆಂಬ ಪಾಶವನ್ನು ಆಕೆಯ ಕೊರಳಲ್ಲಿ ಕಟ್ಟುವರು. 'ಈ ರಾಕ್ಷಸಿಯು ಅಂಥಾ ಪಾಶಕ್ಕೆ ಒಳಗಾಗದು' ಎಂದು ಭಾವಿಸಿ ನವರತ್ನಾಭರಣರೂಪದಿಂದ ಸುವರ್ಣಮಯವಾದ ಅನೇಕ ಸರಪಣಿಗಳನ್ನು ಆಕೆಯ ಕೊರಳಲ್ಲಿ ಹಾಕಿ, 'ಅದಕ್ಕೂ ಒಳಗಾಗದು' ಎಂದು ತಿಳಿದು, ಕೈಕಾಲುಗಳಿಗೆ ಬಿಗಿಸುವ ಸಲುವಾಗಿಯೇ ಆಭರಣರೂಪವಾದ ಭಂಗಾರ ಮತ್ತು ಬೆಳ್ಳಿಯಿಂದ ಮಾಡಲ್ಪಟ್ಟ ಸಂಕಲೆಗಳನ್ನು ತಗುಲಿಸಿ, ಅದೇ ಲೋಹಗಳಿಂದ ಮಾಡಲ್ಪಟ್ಟ ವಡ್ಯಾಣವನ್ನು ನಡುವಿನಲ್ಲಿ ಬಿಗಿಸಿ, ಮೂಗಿನ ದಾರದಂತಿರುವ ಮೂಗು ಬೊಟ್ಟು, ಬುಲಾಕು, ಮುಕ್ಕರ ಮೊದಲಾದುವುಗಳನ್ನು ಮೂಗಿಗೆ ತಗುಲಿಸಿ, ಮುಖವನ್ನು ಅತ್ತಿತ್ತ ತಿರುಗಿಸಿ ಸಂಕುಚಿಸಿಕೊಂಡು ತೋರಿಸದಿರುವುದಕ್ಕಾಗಿ ಕಿವಿಯಲ್ಲಿ ಬೆಂಡೋಲೆ, ಬಾವಲಿ, ಲೋಲಾಕು ಮೊದಲಾದುವುಗಳನ್ನು ಇಟ್ಟು, ಹೆಚ್ಚಾಗಿ ಮಾತನಾಡದಿರುವುದಕ್ಕಾಗಿಯೇ ರತ್ನಖಚಿತವಾದ ಅಡ್ಡಿಕೆಯನ್ನು ಕೊರಳಲ್ಲಿ ಬಿಗಿಗಟ್ಟಿ, ಪುರುಷರು ಕಾಮಾಂಧಕಾರದಿಂದ ಈ ಬಗೆಯಾಗಿ ನಡೆಸುತ್ತಿದ್ದಾರೆ. ಈ ಬಗೆಯಾದ ಆಭರಣ ರೂಪವಾದ ಪಾಶಗಳಿಂದ ಆಕೆಯನ್ನು ಬಿಗಿಗಟ್ಟಿ, ಎಲ್ಲಿಗೂ ಓಡಿಹೋಗದೆ ತನ್ನ ಬೆನ್ನ ಹಿಂದೆಯೇ ಹಾಕಿಕೊಂಡು ಹೋಗುವುದಕ್ಕಾಗಿಯೇ, ತನ್ನೆಡಗೈ ಬೆರಳಿನಿಂದ ಆಕೆಯ ಬಲಗೈ ಬೆರಳನ್ನು ಹಿಡಿದುಕೊಂಡು ವಿವಾಹರೂಪದಿಂದ ಎಳೆದುಕೊಂಡು ಹೋಗುತ್ತಿದ್ದಾರೆ. ಆಕೆಯನ್ನು ತಮ್ಮ ವಶಪಡಿಸಿಕೊಳ್ಳುವುದಕ್ಕಾಗಿಯೇ ಇಂತಹ ಆಭರಣಗಳೆಂಬ ಹಗ್ಗದಿಂದ ಅಲಂಕರಿಸಿ ತಮ್ಮ ಹಿಂದೆ ಕರೆದು

ಕೊಂಡು ಹೋದರೂ ಕಾಲಕ್ರಮದಿಂದ ಪುರುಷರ ಸಾಮರ್ಥ್ಯವೆಲ್ಲವೂ ಹೋಗಿ, ಅವರು ಕೇವಲ ಮೂಢರಾಗಿ ಆಕೆಯ ಬಲೆಗೆ ಸಿಕ್ಕಿ ಬಿದ್ದು ಆಕೆಯು 'ನಿಲ್ಲು' ಎಂದರೆ ನಿಂತುಕೊಳ್ಳುವುದೂ 'ಹೋಗು'ಎಂದರೆ ಹೋಗುವುದೂ ಹೀಗೆ ಆಕೆಯ ಆಜ್ಞಾವಶವರ್ತಿಗಳಾಗಿರುತ್ತಾರೆ. ಇಂಥಹ ಅಪವಿತ್ರ ರಾಕ್ಷಸಿಯನ್ನು ಮೋಹಿಸಿದ್ದರಿಂದ ಏನು ಫಲ? ಸುಖವೋ ಇಲ್ಲವೇ ಪುರುಷಾರ್ಥವೋ? ಆಕೆಯಿಂದ ದುಃಖವೇ ಹೊರತು ಸುಖವೇನಾದರೂ ದೊರಕೀತೇ? ಯಾವುದೂ ಇಲ್ಲವಲ್ಲಾ! ಹೆಂಡತಿಯಾದವಳು ಹೇಗಿರಬೇಕೆಂದರೆ,

ಶ್ಲೋ ॥ ಕಾರ್ಯೇಷು ದಾಸೀ ಕರುಣೇಷು ಮಂತ್ರೀ ।
ರೂಪೇಚ ಲಕ್ಷ್ಮೀ ಕ್ಷಮಯಾ ಧರಿತ್ರೀ ॥
ಭೋಜ್ಯೇಷು ಮಾತಾ ಶಯನೇಷು ರಂಭಾ ।
ಷಾಡ್ಗುಣ್ಯಯುಕ್ತಾ ಕುಲಧರ್ಮಪತ್ನೀ ॥

ಎಂಬ ಆರ್ಯೋಕ್ತಿಯಂತೆ ಮನೆಗೆಲಸವನ್ನು ಮಾಡುವುದರಲ್ಲಿ ದಾಸಿಯಂತೆಯೂ, ಪತಿಯ ಕಾರ್ಯಾಲೋಚನೆಯಲ್ಲಿ ಮಂತ್ರಿಯಂತೆಯೂ, ರೂಪದಲ್ಲಿ ಲಕ್ಷ್ಮಿಯಂತೆಯೂ, ಶಾಂತಿಯಲ್ಲಿ ಭೂದೇವಿಯಂತೆಯೂ, ಭೋಜನಾದಿಗಳಲ್ಲಿ ತಾಯಿಯಂತೆಯೂ, ರತಿಸುಖವನ್ನು ಕೊಡುವುದರಲ್ಲಿ ರಂಭೆಯಂತೆಯೂ ಇರುವ ಈ ಆರು ಶ್ರೇಷ್ಠವಾದ ಗುಣಗಳನ್ನುಳ್ಳವಳೇ "ಕುಲಧರ್ಮಪತ್ನಿ" ಯೇ ಹೊರತು, ಯಾವಾಗಲೂ ಪತಿಯೊಡನೆ ಕಲಹ ಗೈಯುತ್ತಾ ಅವನ ಮನಸ್ಸನ್ನು ಅನುಸರಿಸದಿರುವವಳು ಎಂದಿಗೂ ಗೃಹಿಣಿಯೆನಿಸಲಾರಳು. ಮೇಲೆ ಹೇಳಿದ ಯೋಗ್ಯವಾದ ಪತ್ನಿಗಿರಬೇಕಾದ ಗುಣಗಳಿಲ್ಲದಿರುವ ಹೆಂಡತಿಯೊಡನೆ ಸಂಸಾರ ಮಾಡುವುದಕ್ಕಿಂತಲೂ ಸನ್ಯಾಸವನ್ನು ಸ್ವೀಕರಿಸುವುದೇ ಅತ್ಯುತ್ತಮವಾದುದು.

ಸೀ ॥ ಮನೆಯೊಳಗೆ ತಾಸಿರ್ದು ◆ ಶುದ್ಧ ದೇಹವನೊಂದಿ,
ಸತತವುಂ ಸಿಂಗರವ ◆ ನೆಸಗಬೇಕು ; ।
ಸತ್ಯಪ್ರಿಯಾಲಾಪ ◆ ಚಾತುರ್ಯದಿಂ ತನ.
ಪತಿಯ [illegible] ◆ [illegible] ; ।

ದಾಕ್ಷಿಣ್ಯ ಸಂತೋಷ ♦ ಧರ್ಮ ಯಾಗಗಳಲ್ಲಿ,
ಪತಿಯೆ ಪರ ದೈವವೆಂ ♦ ದೆಣಿಸಬೇಕು ; ।
ತನ್ನೊಡೆಯು ನಡೆವಂಥ ♦ ಹಾದಿಯೋಳ್ತಾ ನಡೆದು,
ಬಂಧುಗಳಿ ಗುಪಚಾರ ♦ ಗೆಯ್ಯಬೇಕು ; ॥

ತೇ ॥ ಮೃದುಭಾವದಿಂ ಪತಿಗೆ ಭೋ ♦ ಜನ ಮಜ್ಜನ ।
ಶಯನ ಪಾನ ರತಿಗಳನು ನೆರೆ ♦ ನಡೆಸಬೇಕು ; ॥
ವಿಭುವು ಪತಿತನಾದರು ಸತಿಯು ♦ ಪಾತಿವ್ರತ್ಯ ।
ಮಹಿಮೆಯು ಪುಣ್ಯದಿಂ ಪವನ ♦ ನುಳಿಸಬೇಕು ॥

([illegible]-ಬಿ. ಭೀಮಸೇನರಾವ್)

ಮ ॥ ಗುಣಮಂ ಸುಂದರರೂಪಮಂ ವಿಭವಮಂ ♦ ಸೌಹಾರ್ದ್ರ ಸೌಭಾಗ್ಯ ಲ ।
ಕ್ಷಣಮಂ ಚಾರುಚರಿತ್ರವಂ ವಿನಯಮಂ ♦ ಚಾತುರ್ಯಮಂ ಧರ್ಮಭೂ ॥
ಷಣಮಂ ಪೊಂದಿ ಪತಿವ್ರತಾ ಮಹಿಮೆ ನಿಂ ♦ ಜಲ್ಕೈ ಕೊಡ ಲ್ತತ್ಸತೀ ।
[illegible] ಚಿಂತಾಮಣಿ [illegible] ♦ ತ್ಯಾಗಂ ಧನ್ಯ ನೀ ಲೋಕದೊಳ್ ॥

ಕಂ ॥ ಸತಿ ಗುಣ[illegible] ।
ಪತಿಗದೆ ರತ್ನಂ ಮೋಕ್ಷಾಣ ♦ ಬಂಧುವು ಮಿತ್ರಂ ।
ಸತಿ ತಾ ದುರ್ಗುಣೆ ಯಾಗಲು ।
[illegible] ಬಡಬಾಗ್ನಿ ತಾಂ ದ ♦ [illegible] ॥

(ರಾ. ತಿಪ್ಪನಾಮಾತ್ಯಕವಿ-ಬಿ. ಭೀಮಸೇನರಾವ್)

ಈ ಪ್ರಪಂಚದಲ್ಲಿರುವವರೆಲ್ಲರೂ ಸಂಸಾರವೆಂಬ ಮಾಯೆಯಿಂದ ಕಟ್ಟಲ್ಪಟ್ಟಿದ್ದಾರೆ. ಈ ಮಾಯಾಪ್ರಪಂಚವಾದರೋ ಹಗ್ಗವನ್ನು ನೋಡಿ ಸರ್ಪವೆಂದು ಭ್ರಮೆಪಡುವಂತೆ ಇದೆಯೆಂದು ಶ್ರೀ ಶಂಕರಾಚಾರ್ಯರು ಹೇಳಿರುತ್ತಾರೆ.

ಶ್ಲೋ ॥ ರಜ್ಜೌ ಸರ್ಪಂ ಭ್ರಮಣನಿರೂಪಂ । ತದ್ವ ದ್ಬ್ರಹ್ಮಣಿ ಜಗತಾಂ ರೂಪಂ ॥
ಮಿಥ್ಯಾಮಾಯಾ ಮೋಹವಿಕಾರಂ । ಮನಸಿ ವಿಚಾರಯ ವಾರಂ ವಾರಂ ॥
ಭಜ ಗೌರೀಶಂ ಭಜ ಗೌರೀಶಂ ಗೌರೀಶಂ ಭಜ ಮಂದಮತೇ ॥

ಜನಗಳು ರಾತ್ರಿಯಲ್ಲಿ ದಾರಿನಡೆವಾಗ ತನ್ನಮುಂದೆ ಹಗ್ಗವು ಬಿದ್ದಿದ್ದರೆ ಅದನ್ನು ಹಗ್ಗವೆಂದು ತಿಳಿಯದೆ ಹಾವೆಂದು ಭಾವಿಸಿ ಭ್ರಮೆಗೊಂಡು ಭಯಪಡುತ್ತಾರೆ. ಅನಂತರ ಅದರ ನಿಜಸ್ಥಿತಿಯನ್ನು ತಿಳಿದ ಅಂದರೆ

ಹಗ್ಗವೆಂದೇ ತಿಳಿದ ಬೇರೊಬ್ಬ ಮನುಷ್ಯನು "ಭಯಪಡಬೇಡ ಅದು ಹಾವಲ್ಲ, ಹಗ್ಗ" ವೆಂದು ಹೇಳಿದಮೇಲೆ ಆ ಭಯವು ಹೇಗೆ ಹೋಗುತ್ತದೆಯೋ ಅದೇ ರೀತಿಯಲ್ಲಿ, ಆತ್ಮನೇ ತಾನೆಂದು ತಿಳಿಯದೆ, ತಾನೇ ಜೀವನೆಂದು ತಿಳಿದು ಭ್ರಾಂತಿಪಡುವ ಮನುಷ್ಯನು, ಗುರೂಪದೇಶದಿಂದ "ನಾನು ಜೀವನಲ್ಲ, ಆತ್ಮಸ್ವರೂಪಿಯಾದ ನಾನೇ ಆ ಪರಬ್ರಹ್ಮನು" ಎಂದು ತಿಳಿದುಕೊಳ್ಳುತ್ತಾನೆ.

ಒಬ್ಬನು ಹಗ್ಗವನ್ನು ನೋಡಿ ಹಾವೆಂದು ಭಯಪಡುವಂತೆ ಜನಗಳೆಲ್ಲರೂ ಈ ಮಾಯಾ ಪ್ರಪಂಚವನ್ನು ನೋಡಿ ಇದೇ ಸತ್ಯವಾದದ್ದು, ಶಾಶ್ವತವಾದದ್ದು ಎಂದು ಭ್ರಮೆಗೊಂಡು ಮೋಸಹೋಗುತ್ತಿದ್ದಾರೆ. ಹೀಗೆ ಮೋಸಹೋಗುವುದಕ್ಕೇ ರಜ್ಜುಸರ್ಪ ದೃಷ್ಟಾಂತವು ವೇದಾಂತವನ್ನು ಬೋಧಿಸುವ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಆ ವಿಷಯವನ್ನು ಈ ಕೆಳಗೆ ವಿಶದಪಡಿಸಿದೆ.

ಒಬ್ಬ ಗೃಹಸ್ಥನ ಮನೆಯ ಮುಂದೆ ಒಂದು ಭಾವಿಯಿತ್ತು. ☞ ಈ ಎದುರಾಗಿರುವ **No. 1** ನೇ ಚಿತ್ರವನ್ನು ನೋಡಿ. ಆ ಗ್ರಾಮದಲ್ಲಿರುವ ಜನಗಳೆಲ್ಲರೂ ನೀರು ತರುವುದಕ್ಕೆ ಅಲ್ಲಿಗೆ ಬರುತ್ತಿದ್ದರು. ಒಂದು ದಿನ ಸಾಯಂಕಾಲ ಹೊತ್ತು ಮುಳುಗಿ ದೀಪವನ್ನು ಹೊತ್ತಿಸುವ ಸಮಯದಲ್ಲಿ ಒಬ್ಬ ಹೆಂಗಸು ನೀರನ್ನು ಸೇದಿಕೊಂಡು ಹೋಗುವುದಕ್ಕೆ ಒಂದು ಕೊಡವನ್ನು ಕೌಂಕುಳಲ್ಲಿಟ್ಟುಕೊಂಡು ಆ ಭಾವಿಯ ಸಮೀಪಕ್ಕೆ ಬಂದು "ಹಾವು! ಹಾವು! ಅಮ್ಮಮ್ಮಾ! ಎಷ್ಟು ದೊಡ್ಡ ಹಾವು!" ಎಂದು ಗಟ್ಟಿಯಾಗಿ ಕೂಗಿಕೊಂಡು ಕೊಡವನ್ನು ಕೆಳಗೆ ಎತ್ತಿ ಹಾಕಿ ತಾನು ಕೆಳಗೆ ಮೂರ್ಛಿತಳಾದಳು. ಆಕೆಯು ಕೂಗಿದ ಶಬ್ದವನ್ನು ಕೇಳಿ ಸುತ್ತಮುತ್ತಲಿರುವವರೆಲ್ಲರೂ ಓಡಿ ಬಂದು ಭಾವಿಗೆ ಸ್ವಲ್ಪ ದೂರದಲ್ಲಿ ನಿಂತು ನೋಡುತ್ತಿದ್ದರು. ಅವರಲ್ಲೊಬ್ಬನು ಮೂರ್ಛಿತಳಾದ ಆಕೆಯ ತಲೆಯನ್ನೆತ್ತಿ ತನ್ನ ತೊಡೆಯಮೇಲಿಟ್ಟು ತನ್ನ ಎರಡು ಕೈಗಳಿಂದಲೂ ಹಿಡಿದುಕೊಂಡನು. ಬೇರೊಬ್ಬನು ಆಕೆಯ ಎಡದ ಕೈಹಿಡಿದು ನಾಡೀ ಪರೀಕ್ಷೆಗೆ ಪ್ರಾರಂಭಿಸಿದನು. ಮತ್ತೊಬ್ಬನು ದೂರದಲ್ಲಿಯೇ ನಿಂತು, "ಭೂ" "ಭಾ"

ಸುತ್ತಿಟ್ಟಿರುವ ಕೈಹಗ್ಗವನ್ನು ನೋಡಿ ಹಾವೆಂದು ಭ್ರಾಂತಿ ಹೊಂದುವಿಕೆ.



ಎಂದು ಅರಚುವುದಕ್ಕೆ ಆರಂಭಿಸಿದನು. ಸ್ವಲ್ಪ ಹೊತ್ತಿನೊಳಗಾಗಿ ಈ ಮೂವರೂ ಮೂರ್ಛಿತರಾದರು. ಇನ್ನೊಬ್ಬನು ಆ ಹಾವನ್ನು ತುಪಾಕಿಯಿಂದ ಸುಡುವುದಕ್ಕಾಗಿ ಗುರಿಯಿಡುತ್ತಿದ್ದನು. ಮಗದೊಬ್ಬನು ಕತ್ತಿಯಿಂದ ಕತ್ತರಿಸಲನುವಾದನು. ಹೀಗೆಯೇ ಒಬ್ಬನು ಭರ್ಜಿಯನ್ನು ಸರಿಪಡಿಸಿಕೊಂಡನು, ಒಬ್ಬನು ಗಿಡವನ್ನು ಹತ್ತಿ ಬಾಣವನ್ನು ಪ್ರಯೋಗಿಸುವುದಕ್ಕೆ ಗುರಿನೋಡುತ್ತಿದ್ದನು, ಒಬ್ಬನು ಮೀಸೆಯನ್ನು ತೀಡುತ್ತಿದ್ದನು, ಒಬ್ಬನು ಹಾವಾಡಿಗನ ನಾಗಸ್ವರದಿಂದ ಮೋಡಿಯನ್ನು ಬಾರಿಸುತ್ತಿದ್ದನು; (ಇವೆಲ್ಲವನ್ನೂ ನಂ. 1ನೇ ಚಿತ್ರಪಟದಲ್ಲಿ ತೋರಿಸಿದೆ.)

ಒಬ್ಬನು ಕೋಲಿನಿಂದ ಕದಲಿಸಿ ನೋಡಿದನು. ಒಬ್ಬ ಹೆಂಗಸು ತನ್ನ ಮಗುವನ್ನ ಮೇಲಕ್ಕೆತ್ತಿ ಅದಕ್ಕೆ ತೋರಿಸಿದಳು. ಕೆಲವು ಜನ ಸ್ತ್ರೀ ಪುರುಷರು ಈ ತಮಾಷೆಯನ್ನು ನೋಡುತ್ತಿದ್ದರು. ಹೀಗೆ ಅನೇಕರು ಅನೇಕ ವಿಧವಾಗಿ ಆ ಹಾವನ್ನು ಕೊಲ್ಲಲು ಯತ್ನಿಸುತ್ತಿದ್ದರು. ಹೀಗಿರಲು ಭಾವಿಯ ಸಮೀಪದಲ್ಲಿದ್ದ ಒಂದು ಮನೆಯಿಂದ ಒಬ್ಬ ಬ್ರಾಹ್ಮಣ ಮುದುಕಿಯು ದೀಪವನ್ನು ತಂದು ದೂರವಾಗಿ ನಿಂತು ಆ ಹಾವಿನ ಕಡೆಗೆ ಹಿಡಿದಳು. ದೀಪದ ಬೆಳಕು ಆ ಹಾವಿನ ಮೇಲೆ ಬಿದ್ದ ತಕ್ಷಣವೇ ಅದನ್ನು ನೋಡಿದವರೆಲ್ಲರೂ ಹಾವಲ್ಲ, ಹಗ್ಗ, ಹಗ್ಗ ಎಂದು ಗಟ್ಟಿಯಾಗಿ ಕೂಗಿ ನಗಹತ್ತಿದರು. (ಇದು ಈ ಎದುರಾಗಿರುವ **No. 2**ನೇ ಚಿತ್ರಪಟದಲ್ಲಿ ತೋರಿಸಿದೆ) ಇಷ್ಟು ಹೊತ್ತಿಗೆ ಅವರ ಮನೆಯಲ್ಲಿ ಕೆಲಸಮಾಡುವವನು ಹೊರಹೊರಟು ತಾನು ಬಿಟ್ಟಿದ್ದ ಸೇದುವ ಹಗ್ಗವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಭಾವಿಯ ಸಮೀಪಕ್ಕೆ ಬಂದು ನೋಡಿದನು. ಆಗ ಅಲ್ಲಿರುವವರು ಮಾಡುತ್ತಿದ್ದ ಇಷ್ಟು ಸಾಹಸಗಳನ್ನೂ ನೋಡಿ ಹೊಟ್ಟೆ ಹುಣ್ಣಾಗುವಂತೆ ನಕ್ಕು, 'ಸೇದುವ ಗಾಲಿಯಮೇಲಿದ್ದ ಹಗ್ಗವನ್ನು ತೆಗೆದು ಸುತ್ತಿ ಭಾವಿಯ ಕಟ್ಟೆಯ ಮೇಲಿಟ್ಟಿದ್ದವನು ನಾನೇ' ಎಂದು ಎತ್ತಿ ಹೇಳಲು, ಅಲ್ಲಿ ನೆರೆದಿದ್ದ ಜನಗಳೆಲ್ಲರೂ ತಾವು ಹೊಂದಿದ ಆ ವಿಧವಾದ ಭ್ರಾಂತಿಗಾಗಿ ಆಶ್ಚರ್ಯಹೊಂದಿ ನಾಚಿಕೆಗೊಂಡರು.

ಬ್ರಾಹ್ಮಣ ಮುದಿಕಿಯ ದೀಪದ ಬೆಳಕಿನಿಂದ ಭ್ರಾಂತಿಯನ್ನು ಬಿಡುವಿಕೆ.



ಇದರಿಂದ ತಿಳಿದುಕೊಳ್ಳಬೇಕಾದುದೇನಂದರೆ, ಹಗ್ಗವು ಹಾವಾಗಿ ಕಂಡಿತು, ಆದುದರಿಂದಲೇ ಅದನ್ನು ಕೊಲ್ಲುವುದಕ್ಕಾಗಿ ಅನೇಕರು ಅನೇಕ ವಿಧವಾದ ಉಪಾಯಗಳನ್ನು ಮಾಡ ಹತ್ತಿದರು. ಕಡೆಗೆ ಅವೆಲ್ಲವೂ ವ್ಯರ್ಥವಾದವು. ನಂತರ ಆ ವೃದ್ಧ ಸ್ತ್ರೀಯಿಂದ ತರಲ್ಪಟ್ಟ ದೀಪದ ಬೆಳಕಿನಿಂದ ಹಾವೆಂಬ ಭ್ರಾಂತಿಯು ತೊಲಗಿ ಹಗ್ಗವೆಂಬ ನಿಜಸ್ವರೂಪವು ಗ್ರಾಹ್ಯವಾಯಿತು. ಅದರಿಂದ ಎಲ್ಲರ ಸಂಶಯವೂ ಹೋಗಿ ಆಶ್ಚರ್ಯವನ್ನುಂಟುಮಾಡಿದ್ದು ಆ ಮುದುಕಿಯ ದೀಪವಲ್ಲವೇ! ಹಾಗೆಯೇ ಸಂಸಾರವೆಂಬುದು ಒಂದು ದೊಡ್ಡ ಹಾವು. ಇದು ಆದಿಯಲ್ಲಿ ಬ್ರಹ್ಮನಿಂದ ಸೃಷ್ಟವಾದ ಮಾಯೆ. (ಅಜ್ಞಾನವು). ಈ ಅಜ್ಞಾನವು ಭ್ರಾಂತಿಯಿಂದಾದುದು. ಆದುದರಿಂದ ಈ ಸಂಸಾರವೆಂಬ ಸರ್ಪವು ಅನೇಕ ಜನ್ಮಾಂತರಗಳಿಂದಲೂ ಸ್ತ್ರೀಪುರುಷರೊಡಗೂಡಿ ಬರುತ್ತಿದೆ. ಇದರಿಂದ ತಪ್ಪಿಸಿಕೊಳ್ಳುವುದಕ್ಕಾಗಿಯೇ ಅನೇಕರು ಹಲವು ಉಪಾಯಗಳನ್ನು ಮಾಡುತ್ತ ಬರುತ್ತಿದ್ದಾರೆ.

ಇದೂ ಅಲ್ಲದೆ, ಕೆಲವರು ಗಾಂಜಾ ಅಂದರೆ ಭಂಗೀ ಸೊಪ್ಪಿನ ಹೊಗೆಯನ್ನು ಕುಡಿಯುತ್ತಾರೆ, ಕೆಲವರು ಜಪ ಮಾಡುವರು, ಕೆಲವರು ಧ್ಯಾನವನ್ನಾಚರಿಸುವರು, ಕೆಲವರು ತೀರ್ಥಯಾತ್ರೆಗಳನ್ನೂ ಕೆಲವರು ಸತ್ಕರ್ಮಾನುಷ್ಠಾನಗಳನ್ನೂ ಮಾಡುವರು. ಕೆಲವರು ಭಜನೆ, ಶಿವಪೂಜೆ ಮೊದಲಾದುವುಗಳಲ್ಲಿ ಮನಗೊಡುವರು. ಕೆಲವರು ಯಾಗಗಳನ್ನು ನಡೆಸಿ ವಿಶೇಷ ದಾನ ಧರ್ಮಗಳನ್ನು ಮಾಡುವರು. ಕೆಲವರು ಗುಡಿ ಗೋಪುರಗಳನ್ನೂ ಕೆಲವರು ಕೆರೆ ಕಟ್ಟೆ ಭಾವಿಗಳನ್ನೂ ಕಟ್ಟಿಸುವರು ಹೀಗೆ ಅನೇಕ ವಿಧ ಸತ್ಕರ್ಮಾಚರಣೆಯುಳ್ಳವರು ಪ್ರಪಂಚದಲ್ಲಿ ಹಲವರಿರುತ್ತಾರೆ. ಇಂತಹ ಉಪಾಯಗಳಿಂದ ಈ ಸಂಸಾರವೆಂಬ ಹಾವು ನಾಶವಾಗದು. ನಾಶವಾಗುವ ಬಗೆ ಹೇಗೆಂದರೆ:—ಜ್ಞಾನವೃತ್ತಿಗಾಗಿ ಸಮಾಧಿ ನಿಷ್ಠೆ ಸಾಧನೆಯನ್ನು ಮಾಡಬೇಕು. ಅಂದರೆ ನಿಶ್ಚಲವಾದ ಶುದ್ಧಾಂತಃಕರಣವುಳ್ಳವನಾಗಿ "ಅಹಂ ಬ್ರಹ್ಮಾಽಸ್ಮಿ" ಮತ್ತು "ಸೋಽಹಂ" ಎಂಬ ಮಂತ್ರಜ್ವಾಲೆಯಿಂದ "ನಾನು" ಎಂಬ ದೀಪವು ಬೆಳಗುವಂತೆ ಮಾಡಿದ್ದೇ ಆದರೆ, ತಕ್ಷಣವೇ ಸಂಸಾರವೆಂಬ ಹಾವು ನಾಶಹೊಂದಿ,

ಸಚ್ಚಿದಾನಂದ ಬ್ರಹ್ಮಸ್ವರೂಪವು ಕಾಣ್ಬಂದು, ಆನಂದವೆಂಬ ಸಮುದ್ರ ದಲ್ಲಿ ಮುಳುಗುತ್ತಿರಬಹುದು. ಇದಕ್ಕೆ ದೃಷ್ಟಾಂತವನ್ನು ಭಗವದ್ಗೀತೆಯ 17ನೇ ಅಧ್ಯಾಯದಲ್ಲಿನ 16ನೆಯ ಈ ಕೆಳಗಿನ ಶ್ಲೋಕವು ಹೇಳಿರುತ್ತದೆ:—

ಶ್ಲೋ॥ ಮನಃಪ್ರಸಾದಃ ಸೌಮ್ಯತ್ವಂ, ಮೌನ ಮಾತ್ಮ ವಿನಿಗ್ರಹಃ।
ಭಾವಸಂಶುದ್ಧಿ ರಿತ್ಯೇತತ್, ತಪೋ ಮಾನಸ ಮುಚ್ಯತೇ॥

ಮನಸ್ಸನ್ನು ಕಾಮ ಕ್ರೋಧಗಳೆಂಬ ಅರಿಷಡ್ವರ್ಗಗಳಲ್ಲಿ ಹೋಗುವುದಕ್ಕೆ ಬಿಡದೆ ಪರಿಶುದ್ಧವಾಗಿಟ್ಟುಕೊಂಡದ್ದೇ ಆದರೆ ಮುಖವು ಸಂತೋಷದಿಂದ ಸದಾ ಪ್ರಕಾಶಿಸುತ್ತಿರುತ್ತದೆ. ಮನಸ್ಸು ಬೇರೆ ಬೇರೆ ವಿಧವಾಗಿ ಹೋಗದಿದ್ದರೆ ಆಗ ಬಾಯಿಯು ಮಾತನಾಡುವುದಕ್ಕೂ ಆಗದೆ ಆತ್ಮದಲ್ಲೇ ಸೇರಿಹೋಗುತ್ತದೆ. ಆಗ ಮನಸ್ಸಿಗುಂಟಾಗುವ ನೆನಪು ಮರವುಗಳೆಲ್ಲವೂ ಆ ಆತ್ಮನಲ್ಲಿಯೇ ಐಕ್ಯವಾಗಿ ಹೋಗುವುವು. ಹಗ್ಗವು ಸರ್ಪವಾಗಿ ತೋರುವ ದೃಷ್ಟಾಂತವು ವೇದಾಂತ ಶಾಸ್ತ್ರಗಳಿಗೆ ಸರಿಯಾದುದೆಂದು ಕಂಡು ಬಂದಿತು. ಪ್ರಾಣವಿಲ್ಲದ ಶರೀರವು ಹೇಗೆ ವ್ಯರ್ಥವೋ ಹಾಗೆಯೇ 'ರಜ್ಜು ಸರ್ಪ' ದೃಷ್ಟಾಂತ ಸಹಾಯವಿಲ್ಲದಿದ್ದರೆ ವೇದಾಂತ ಶಾಸ್ತ್ರರಹಸ್ಯವನ್ನು ಸ್ಥಿರಪಡಿಸುವುದು ಕಷ್ಟಸಾಧ್ಯವು.

ಓಂಕಾರರೂಪನಾದ, ನಿರ್ಗುಣನಾದ ಪರಬ್ರಹ್ಮನ ಸ್ವರೂಪವನ್ನು ಈ ಗ್ರಂಥದಲ್ಲಿ ವಿಸ್ತಾರವಾಗಿ ತಿಳಿಸಿದೆ. ಅದನ್ನು ಸರ್ವಕಾಲದಲ್ಲಿಯೂ ಜಪಮಾಡುತ್ತ ಬರಬೇಕು. ಈ ನಿರ್ಗುಣ ಜಪವು ಸಾಧ್ಯವಾಗದಿದ್ದಲ್ಲಿ ಸಗುಣರೂಪವಾದ ವಿಗ್ರಹಾರಾಧನೆಗಳನ್ನು ಮಾಡುತ್ತ ಬರಬೇಕು. ಈ ಸಗುಣರೂಪದ ಆರಾಧನೆಯನ್ನು ಮಾಡಲು ಸಾಧ್ಯವಿಲ್ಲವಾದರೆ ನಿಷ್ಕಾಮ ಕರ್ಮದಿಂದ ಒಂದು ರೂಪವನ್ನು ನಿಲ್ಲಿಸಿ ಪರಮಾತ್ಮ ಸ್ವರೂಪವೆಂದು ಭಾವಿಸಿ ಭಜನೆಯನ್ನು ಮಾಡುತ್ತ ಬರಬೇಕು. ಅದೂ ಸಾಧ್ಯವಿಲ್ಲವಾದರೆ ಕಾಮ್ಯಕರ್ಮದಿಂದಾದರೂ ಕರ್ಮಗಳನ್ನು ಮಾಡುತ್ತ ಬರಬೇಕು. ಈ ಕಾಮ್ಯ ಕರ್ಮಗಳನ್ನು ಮಾಡಲಸಾಧ್ಯವಾದರೆ ಜನ್ಮ ಪರಂಪರೆಗಳನ್ನು ತಪ್ಪದೆ ಹೊಂದಬೇಕಾಗುತ್ತದೆ.

ಆದ್ದರಿಂದ, ಮೇಲೆ ಹೇಳಿದ ಹಗ್ಗವನ್ನು ನೋಡಿ ಹಾವೆಂದು ಭ್ರಾಂತಿಗೊಂಡಿರುವಾಗ ಆ ಮುದುಕಿಯು ತಂದ ದೀಪದ ಬೆಳಕಿನಿಂದ ಹಗ್ಗದ ನಿಜಸ್ಥಿತಿಯು ಕಂಡುಬಂದು, ಹಾವೆಂಬ ಭ್ರಮೆಯು ಹೋಗಿ ಎಲ್ಲರ ಸಂಶಯವೂ ನಾಶವಾದಂತೆ, ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ಎಂಬುದೇ ಆ ವೃದ್ಧ ಸ್ತ್ರೀಯಿಂದ ತರಲ್ಪಟ್ಟ ದೀಪ ಪ್ರಕಾಶದಂತೆ ಇದ್ದು ಸಮಸ್ತ ಜನಗಳ ಸಂದೇಹವನ್ನು ಹೋಗಲಾಡಿಸಿ, ನಿರಾಕಾರ (ಬಟ್ಟಬಯಲಾದ) ಪರಬ್ರಹ್ಮಸ್ವರೂಪವನ್ನು ಕಾಣುವಂತೆ ಮಾಡುವುದೆಂದು ನಿಶ್ಚೈಸಿಕೊಳ್ಳಬೇಕು.



# ಶವವನ್ನು ನೋಡಿ ದುಃಖಪಡುವವರ ಶೋಕನಿವಾರಣೆ.



ಸೀ ॥ ಯಮನು ಬಂದೇ ಬರುವ ◆ ಜೀವವನು ತಾ ಸೆಳೆವ,
ಬೇಡೆಂದು ಬೇಡಿದರು ◆ ಪೋಗನವನು ।
ಧನರಾಶಿ ನಿನಗೀವೆ ◆ ಸತಿಪುತ್ರರಸುವೀವೆ,
ಪೋಗೆಂದು ಮಣಿದೊಡಂ ◆ ಕದಲನವನು ।
ನಾನೇ ಮಹಾಜ್ಞಾನಿ, ◆ ನಾಧನಿಕ, ನಾವೀರ,
ಬಿಡು ಬಿಡೆಂದೆರಗಿದರು ◆ ಮೊಗದಿರುಹನು ।
ನಿಮಿಷ ಮಾತ್ರವು ಜೀವ ◆ ವನು ಬಿಡದೆ ಕಸುಕೊಂಡು,
ದೇಹವನು ಕಡೆಸೂಕಿ ◆ ಮುಂದೆ ಸರಿವಂ ॥

ಗೀ ॥ ಅದರಿಂದ ಲಸುದೊರೆದ ಕಾ ◆ ಷ್ಠವನೆ ನೋಡಿ !
ಬಹುದುಃಖವನ್ನೇಕೆ ಪೊಂ ◆ ದಳುವಿ ರಕಟ ?
ನೀವೆಲ್ಲ ಸಾವಿಲ್ಲದಂ ◆ ತಿರುವಿರೇನು ?
ಸ್ತ್ರೀ ಪುರುಷರೇ ! ಮೂಢರೆಂ ◆ ದೇಕೆನಿಪಿರಿ ॥

(ಕನ್ನಡ ಪರಿವರ್ತನೆ–ಬಿ. ಭೀಮಸೇನರಾವ್)

ಭಾಮಿನೀಷಟ್ಪದಿ ॥ ಎಂಟುಗೇಣಿನ ದೇಹ, ರೋಮಗ ।
ಳೆಂಟು ಕೋಟಿಯು, ಕೀಲ್ಗಳರವ ।
ತ್ತೆಂಟು, ಮಾಂಸಗಳಿಂದ ಮಾಡಿದ ಮನೆಯು ಮನಸ್ಸೋಲಿದು ॥
ನೆಂಟ ನೀ, ನಗಲಿದೊಡೆ ಒಣ ।
ಹೆಂಟೆಯಲಿ ಮುಚ್ಚುವರು ದೇಹದ ।
ಲುಂಟೆ ಪರಪುರುಷಾರ್ಥ ರಕ್ಷಿಸು ನಮ್ಮನನವರತ ॥

ಭಾಮಿನೀಷಟ್ಪದಿ ॥ ಸತ್ತವರಿ ಗಳಲೇಕೆ ತನ್ನನು ।
ಹೆತ್ತವರು ಹೊತ್ತವರುಗಳು ತಾ ।
ಸತ್ತು ಹೋಗುವರಲ್ಲ ದಿರುವರೆ ಮರುಗ ಲೇಕಿನ್ನು ॥

ಮೃತ್ಯು ಬೆನ್ನ ಹಿಂದಿರುವುದು ತಾವೆ |
ಮೃತ್ಯು ಮಾಡುವುದೇನು ? ಪೂರ್ವದ |
ತೆತ್ತಿಗನು ಶ್ರೀಶನ ರಕ್ಷಿಸು ನಮ್ಮ ಸನಕರತ ||

(ಕನಕದಾಸ)

ಉ | ಎತ್ತಣನೇಹ ಲೋಕಕಿದು ♦ ಜೋಡ್ಯವು ದೇಹಿಯು ಪುಟ್ಟು ಸಾವ್ಗಳಾ |
ಮೊತ್ತವ ನಿತ್ಯ ನೋಡಿದರು ♦ ಸಾಯದೆ ಜೀವಿಪನಂತೆ ಮತ್ತೆ ತಾ ||
ಸತ್ತವಗೋಸ್ಕ ರತ್ತಪನು ♦ ಸಾವನು ತಪ್ಪಿಸಿಕೊಳ್ಳ ಬಲ್ಲನೇ ? |
ಎತ್ತಲಿ ಬಂದು ದತ್ತಕಡೆ ♦ ಸಾರ್ವುದು ನೈಜವು ಪ್ರಾಣಿ ಕೋಟಿಗಂ ||

(ಬಮ್ಮೆರಪೋತನ–ಬಿ. ಭೀಮಸೇನರಾವ್)

ಮತ್ತ || ದಾರಿನೆಂಟಿರು ಬಾಸಿನಲ್ಲಿನ ♦ ಮೋಡಗಳ್ ಹಡೆಗಲ್ಲಿ ಸಂ |
ಚಾರಿಗಳ್ ಸಲಿಲ ಪ್ರವಾಹ ದೊ ♦ ಳುಂ ಗಿಡಂಗಳು ಸೇರುತಂ ||
ಬೇರೆಯಾಗುವ ರೀತಿಯಿಂ ಪಿತೃ ♦ ಪುತ್ರ ಬಂಧು ವಿಯೋಗವಂ |
ದಾರಿಪರ್ ನಿಜ ಚಿತ್ತದೋಳಿಹ ♦ ಶೋಕವಹ್ನಿಯ ಸೂರಿಗಳ್ ||

(ನಂದಿಮಲ್ಲಯ್ಯ—ಕನ್ನಡ ಪರಿವರ್ತನೆ–ಬಿ. ಭೀಮಸೇನರಾವ್)

ಶ್ಲೋ || ಶತಮಪಿ ಶರದಾಂ ತ್ವಂ ಜೀವಿತಂ ಧಾರಯಿತ್ವಾ |
ಶಯನ ಮಧಿಶಯಾನಃ ಸರ್ವಥಾ ನಾಶಮೇತಿ ||
ಸುಲಭವಿಪದಿ ದೇಹೇ ಸೂರಿಲೋಕೈಕ ನಿಂದ್ಯೇ |
ನ ವಿದಧತಿ ಮಮತ್ವಂ ಮುಕ್ತಿಕಾಂಕ್ಷಾತ್ಮಕಾಸ್ತೇ |

[ನೂರು ವರ್ಷಗಳು ಜೀವವನ್ನು ಕಾಪಾಡಿಕೊಂಡರೂ, ಹಾಸಗೆಯ ಮೇಲೆ ಸುಖವಾಗಿ ಮಲಗಿಕೊಂಡಿದ್ದರೂ ಈ ದೇಹಕ್ಕೆ ನಾಶವು ಸರ್ವಥಾ ಉಂಟಾಗುತ್ತದೆ. ಆದುದರಿಂದಲೇ ಮೋಕ್ಷವನ್ನು ಬಯಸುವ ಪಂಡಿತರು ಸುಲಭದಲ್ಲಿಯೇ ನಾಶವನ್ನು ಹೊಂದುವ ಈ ದೇಹದಲ್ಲಿ ಎಂದಿಗೂ ಪ್ರೀತಿಯನ್ನಿಡರು.]

ಇದೂ ಅಲ್ಲದೆ,

ಶ್ಲೋ || ಸರ್ವದೈವ ರುಜಾಕ್ರಾಂತಂ ಸರ್ವದೈವ ಶುಚೋ ಗೃಹಂ |
ಸರ್ವದಾ ವಿಪದಾಂ ಪಾತ್ರಂ ಮರ್ತ್ಯಾನಾಂ ದೇಹಪಂಜರಂ ||

[ಮನುಷ್ಯರ ದೇಹವೆಂಬ ಈ ಗೂಡು, ಸದಾ ರೋಗಕ್ಕೀಡಾದದ್ದು, ಸದಾ ದುಃಖಕ್ಕೆ ತೌರುಮನೆ, ಮತ್ತು ಸದಾ ವಿಪತ್ತುಗಳ ನೆಲೆ.]

"ಪ್ರತಿ ಪುರುಷನೂ ಸಾಯುವುದು ನಿಶ್ಚಯ. ಯಮನು ಯಾವ ವೇಳೆಯಲ್ಲಿಯೋ ಜೀವವನ್ನು ಸೆಳೆದುಕೊಂಡು ಹೋಗಬಹುದು. ಆತನು ಪ್ರಾರ್ಥಿಸಿಕೊಂಡರೂ ಧನವನ್ನು ಕೊಡುತ್ತೇನೆಂದು ಹೇಳಿದರೂ ಪ್ರಾಣವನ್ನು ತೆಗೆದುಕೊಳ್ಳದೆ ಬಿಡನು. ತನಗಾಗಿ ತನ್ನ ಹೆಂಡತಿ ಮಕ್ಕಳನ್ನು ಕೊಡುತ್ತೇನೆಂದರೂ ಆತನು ಅಂಗೀಕರಿಸನು. ನಾನು ಮಹಾ ಬಲಶಾಲಿ, ಮಹಾ ಧನಿಕನೆಂದರೂ ಮುಖತಿರುಗಿಸನು. ಕ್ಷಣಮಾತ್ರದಲ್ಲಿಯೇ ಜೀವವನ್ನು ಸೆಳೆದುಕೊಂಡು ಹೋಗುವನು. ಆದರೆ ಶರೀರವನ್ನು ಮಟ್ಟಿಗೆ ಇಲ್ಲಿಯೇ ಬಿಟ್ಟು ಹೋಗುತ್ತಾನೆ. ಇದರ ಮೇಲೆ ಆ ಬರೀ ತುಂಡನ್ನು ನೋಡಿ ಏತಕ್ಕಾಗಿ ದುಃಖವನ್ನು ಹೊಂದುವಿರಿ?" ಎಂದು ಕಪಿಲ ಋಷಿಯು ಲೋಕಕ್ಕೆಲ್ಲಾ ಎಚ್ಚರಿಕೆಯನ್ನು ಕೊಟ್ಟಿರುತ್ತಾನೆ. ಆದುದರಿಂದ ಭ್ರಾತೃಭಗಿನಿಯರೇ! ಕಾಲಗತಿಗೆ ಬದ್ಧರಾಗಿ ಸತ್ತವರನ್ನು ಕುರಿತು ನೀವೇತಕ್ಕೆ ಚಿಂತಿಸುವಿರಿ?

ನಿಮ್ಮ ಮನೆಯಲ್ಲಿ ಸತ್ತುಹೋದ ಪ್ರಾಣಿಯೂ ನೀವೂ ಒಂದೇ ಸಮಯದಲ್ಲಿ ಈ ಲೋಕಕ್ಕೆ ಬಂದವರಲ್ಲವಲ್ಲಾ! ಸಂತೆಯಲ್ಲಿ ಸೇರಿದ ಜನಸಮೂಹದಂತೆ ಎಲ್ಲೆಲ್ಲಿಂದಲೋ ಬಂದು ಸೇರಿರುತ್ತಾರೆ. ಹೆಂಡತಿ, ಮಕ್ಕಳು, ಸ್ನೇಹಿತರು ಮೊದಲಾದವರ ಪೂರ್ವ ಜನ್ಮ ವೃತ್ತಾಂತ ನಿಮಗೇನೂ ತಿಳಿಯದಲ್ಲವೇ? ಇದಕ್ಕೆ ಭಾಗವತದಲ್ಲಿ ಈ ಕೆಳಗೆ ಹೇಳಿದಂತೆ ಹೇಳಿದೆ.

ಶ್ಲೋ || ನೀರಾಗಾರದ ಪೊಕ್ಕ ದಾರಿಗರಪೋಲ್ ♦ ಸಂಸಾರ ಸಂಚಾರಿಗಳ್ |
ಸೇರುತ್ತೊಂದೆಡೆ ಪೊಟ್ಟುಗೂಡಿ ಮರೆವರ್ ♦ ಸಂಬಂಧ ವಿಲ್ಲೆಂದಿಗುಂ ||
ಊರೂರುಂ ಕುರಿ ತೈದುವಂತೆ ಸರಿವರ್ ♦ ತ್ವತ್ಪುತ್ರ ಸಮ್ಮಾ ! ಮಹಾ |
ಶೂರಂ ಧೀರನು ತದ್ವಿಯೋಗ ಕುರಿತುಂ ♦ ನೀನೇಕೆ ಗೋಳಾಡುವೆ ? ||

(ಬಮ್ಮೆರಪೋತನಾ–ಬಿ. ಭೀಮಸೇನರಾವ್)

ಯಾರೋ ಬಂದು ತನ್ನ ಮನೆಯಲ್ಲಿ ಜನನ ಹೊಂದಿದ ಮೇಲೆ ತಮ್ಮವರು ಎಂದು ಭಾವಿಸಿ ಅವರನ್ನು ಪ್ರೀತಿಸುತ್ತಾ ಅವರ ಮೇಲೆ ಆಶಾಪಾಶವನ್ನು ಬೀಸಿ ವೃಥಾ ಭ್ರಾಂತಿಪಡುತ್ತಿದ್ದೀರಿ. ಈ ಕಳೇಬರ

ವನ್ನು ಬಿಟ್ಟು ಮೃತ್ಯುವಶವಾದ ಮೇಲೆ ಅವರೇನಾಗುವರೆಂಬುದನ್ನು ತಿಳಿದುಕೊಳ್ಳಬಲ್ಲಿರಾ? ಮಧ್ಯದಲ್ಲಿ ಕೆಲವು ಕಾಲ ಮಾತ್ರವೇ ತಮ್ಮಲ್ಲಿರುವ ಪ್ರೇಮವನ್ನು ಹೆಚ್ಚಿಸಿ ಭ್ರಮೆಯನ್ನು ಹುಟ್ಟಿಸುವಂತಹ ದಾರಾಪುತ್ರರಿಗಾಗಿ ವ್ಯಥೆಪಡುವುದೇತಕ್ಕೆ? "ಯದ್ದೃಷ್ಟಂ ತನ್ನಷ್ಟಂ" ಎಂಬಂತೆ ಗೋಚರಿಸುವ ಪ್ರತಿ ವಸ್ತುವೂ ನಾಶವಾಗುವುದು ನಿಶ್ಚಯವು. ಪ್ರತಿ ಮನುಷ್ಯನಿಗೂ ಇರುವ ಬಂಧುಕೋಟಿಗಳಲ್ಲಿ ತನಗಿಂತಲೂ ಹಿರಿಯರೂ, ಚಿಕ್ಕವರೂ ಇರುವರಲ್ಲವೇ? ಆಗ ತನಗೂ ತನಗಿಂತ ಮೊದಲು ಹುಟ್ಟಿದ ವೃದ್ಧನಿಗೂ ತಾನು ಹುಟ್ಟುವದಕ್ಕಿಂತ ಮೊದಲು ಯಾವ ತರಹ ಬಾಂಧವ್ಯವಿದ್ದಿತು ಎಂಬುದನ್ನು ಹೇಳಲು ಸಾಧ್ಯವೇ?

ಅದರಂತೆಯೇ 'ತಾನೂ ತನ್ನ ಬಂಧುಗಳೂ ಹುಟ್ಟುವುದಕ್ಕೆ ಮೊದಲು ಎಲ್ಲಿದ್ದರು ಯಾವ ಸ್ಥಿತಿಯಲ್ಲಿದ್ದರು?' ಎಂಬುದನ್ನೂ, 'ಸತ್ತ ತರುವಾಯ ಎಲ್ಲಿಗೆ ಹೋಗುತ್ತಾರೆ ಮತ್ತು ಯಾವ ಸ್ಥಿತಿಯಲ್ಲಿರುತ್ತಾರೆ?' ಎಂಬುದನ್ನೂ ತಿಳಿಯಲು ಸಾಧ್ಯವೇ? ತನ್ನ ಹೆಂಡತಿ ಮಕ್ಕಳ ವಿಷಯದಲ್ಲಿಯೂ ಹೀಗೆಯೇ ಅಂದರೆ ಅವರು ಹುಟ್ಟುವುದಕ್ಕೆ ಮೊದಲು ಯಾವ ರೀತಿಯಾಗಿ ಅವರ ಸಂಬಂಧವಿತ್ತು ಮರಣಾನಂತರ ಯಾವ ಸಂಬಂಧವುಂಟಾದೀತು ಎಂಬುದನ್ನು ತಿಳಿಯಲು ಸಾಧ್ಯವಿಲ್ಲ. ಮೊದಲಿನ ಸಂಬಂಧವಿಲ್ಲ ಮುಂದೆ ಇವರ ಸಂಬಂಧವೇ ಉಂಟಾಗುತ್ತದೆಯೆಂಬುವ ನಂಬಿಕೆಯಿಲ್ಲ; ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದ ಹೆಣ್ಣು ತನ್ನ ಕೈಹಿಡಿದ ಸಂಬಂಧದಿಂದಲೇ "ನನ್ನ ಹೆಂಡತಿ" ಎಂಬ ಭಾವನೆಯುಂಟಾಗಿ, ಪ್ರೇಮವೆಂಬ ಪಾಶಕ್ಕೆ ಕಟ್ಟುಬಿದ್ದು, ಮಕ್ಕಳು ಉದಿಸಿದ ಮೇಲೆ ಅವರಲ್ಲಿನ ಪ್ರೀತಿಗಾಗಿ ಮತ್ತಷ್ಟು ಹೆಚ್ಚುತ್ತ ಬಂದಂಥ ಈ ಬಂಧವು ಕಾಲವಶದಿಂದ ಸಡಿಲವಾಗಿ ವಿಚ್ಛಿನ್ನವಾದರೆ ಅದಕ್ಕೇಕೆ ದುಃಖಪಡಬೇಕು? ಹೀಗೆ ದುಃಖಿಸುವುದು ಅಜ್ಞಾನದ ಫಲವಲ್ಲದೆ ಬೇರೇನು? ಆತ್ಮಾನಾತ್ಮ ವಿಚಾರ ಮಾಡಿದವರು ಎಂದಿಗೂ ಇಂತಹ ಅಜ್ಞಾನಕ್ಕೆ ಸಿಕ್ಕಿ ದುಃಖಿಸರು. ಮೃತನಾದವನ ಆತ್ಮಕ್ಕೆ ನಾಶವುಂಟಾಯಿತೆಂದು ಎಂದಿಗೂ ಎಣಿಸಬಾರದು. ಪಂಚಭೂತಾತ್ಮಕವಾದ ಈ ದೇಹಕ್ಕೆ ನಾಶವೇ ಹೊರತು ಆತ್ಮನಿಗೆ ಸರ್ವಥಾ ನಾಶವಿಲ್ಲ. ಅದಕ್ಕೆ ಈ ಭಾವನೆಯ ವಿವರಣೆ ಈ ಕೆಳಗೆ ಹೇಳಿದೆ.

ಸಾಯುವುದೆಂದರೆ ಆತ್ಮನು ತಾನು ಆಶ್ರಯಿಸಿದ್ದ ಒಂದು ಗೂಡನ್ನು ಬಿಟ್ಟು ಬೇರೊಂದನ್ನು ಸೇರುವುದು. ಆಗ ಆತ್ಮನಿಂದ ಬಿಡಲ್ಪಟ್ಟ ಶರೀರಕ್ಕೆ ನಾಶವುಂಟು. ಜೀರ್ಣವಾದ ಬಟ್ಟೆಯನ್ನು ತೊರೆದು ಬೇರೆ ಬಟ್ಟೆಯನ್ನು ಸ್ವೀಕರಿಸುವಂತೆ ಆತ್ಮನು ತಾನು ಹೊಂದಿದ್ದ ಶರೀರವನ್ನು ಬಿಟ್ಟು ಸಿದ್ಧವಾದ ಮತ್ತೊಂದು ಹೊಸ ಶರೀರವನ್ನು ಪ್ರವೇಶಿಸುತ್ತಾನೆ. ಕೆಲವು ಕಾಲದ ಮೇಲೆ ಅದನ್ನು ಬಿಟ್ಟು ಮತ್ತೊಂದನ್ನಾಶ್ರಯಿಸುತ್ತಾನೆ. ಹೀಗೆಯೇ ಆತ್ಮನು ಅನೇಕ ಶರೀರಗಳನ್ನು ಬಿಟ್ಟು ನೂತನ ಶರೀರಗಳನ್ನು ಪಡೆಯುತ್ತಾ ಇರುವನೇ ಹೊರತು ಆತ್ಮನಿಗೆ ಜನನಮರಣಾದಿಗಳಿಲ್ಲ. ಆತ್ಮನೇ ದೇಹವಲ್ಲವಾದುದರಿಂದ ಆತ್ಮನು ದೇಹಗಳ ಸಂಬಂಧವನ್ನು ಹೊಂದಿ ಅವುಗಳನ್ನು ಬಿಟ್ಟು ಹೊಸದಾದುವುಗಳನ್ನು ಪಡೆದಾಗ ತಾನು ಬಿಟ್ಟ ಮತ್ತು ತಾನು ಪ್ರವೇಶಿಸಿದ ದೇಹಗಳಿಗೆ ಸಂಬಂಧಗಳೇನಾದರೂ ಇವೆಯೇ? ಆತ್ಮನು ನಿತ್ಯನಾದ ಮೇಲೆ, ದೇಹಗಳು ನಶ್ವರವಾದ ಮೇಲೆ ಜಡವಾದ ದೇಹವು ಬಿದ್ದು ಹೋದರೆ ನಾವು ಏತಕ್ಕೆ ದುಃಖಿಸಬೇಕು? ಯಾರಿಗಾಗಿ ದುಃಖಿಸಬೇಕು? ನಶ್ವರವಾದ ದೇಹಕ್ಕೋ? ಇಲ್ಲವೇ ನಿತ್ಯನಾದ ಆತ್ಮಕ್ಕೋ? ಈ ರಹಸ್ಯವನ್ನು ತಿಳಿಯುವವರಿವಿಗೂ, ಬಿಸಿಲ್ಗುದುರೆ (ಮರೀಚಿಕೆ) ಯನ್ನು ನೋಡಿ ನೀರೆಂದು ಭ್ರಮಿಸುವಂತೆ ದೇಹವನ್ನೇ ಆತ್ಮವೆಂದು ಭಾವಿಸಿ ಬಂಧುಗಳ ಮರಣಕ್ಕಾಗಿ ಜನಗಳು ದುಃಖಿಸುತ್ತಲೇ ಇರುವರು. 'ಆತ್ಮನಿಗೆ ಹೊಸದೇಹ ದೊರಕುವುದೇ ಹುಟ್ಟು, ಆತನು ಅದನ್ನು ಬಿಡುವುದೇ ಸಾವು' ಎಂಬ ಈ ಗುಟ್ಟನ್ನು ತಿಳಿದುಕೊಂಡವನು ಎಂದಿಗೂ ಹುಟ್ಟುಸಾವುಗಳಿಗಾಗಿ ಸುಖದುಃಖಗಳನ್ನು ಹೊಂದಲಾರನು. ಬಹು ಜನ್ಮಗಳಿಂದ ಸಂಪಾದಿಸಿದ ಪುಣ್ಯ ಫಲದಿಂದ ಆತ್ಮಾನಾತ್ಮ ವಿಚಾರ ದಲ್ಲಿ ಮನಗೊಟ್ಟಿದ್ದೇ ಆದರೆ ಆತನಿಗೆ ಜನನ ಮರಣಗಳಿಗೆ ಕಾರಣವಾದ ಸಂಚಿತ ಕರ್ಮರಾಶಿಯು ನಾಶವನ್ನು ಹೊಂದುತ್ತದೆ. ಆ ಸಂಚಿತ ಕರ್ಮ ಗಳು ನಾಶಹೊಂದಿದೊಡನೆಯೇ ಜೀವಾತ್ಮನು ಪರಮಾತ್ಮನಲ್ಲಿ ಲೀನ ವಾಗುತ್ತಾನೆಯೇ ಹೊರತು, ಆತನು ಈ ಶರೀರವು ನಾಶವಾಗುವಂತೆ ಅದರೊಡನೆಯೇ ನಾಶವಾಗುವನೆಂಬ ಮಾತು ಸುಳ್ಳು. ಒಟ್ಟಿನಲ್ಲಿ ಕಣ್ಣಿಗೆ ಕಾಣ್ಬರುವ ಈ ಶರೀರವೆಂಬ ಪಾಂಚಭೌತಾತ್ಮಿಕವಾದ ದೇಹಕ್ಕೆ ನಾಶ

ವುಂಟು ನಿರಾಕಾರನಾದ ಪರಮಾತ್ಮನಿಗೆ ನಾಶವಿಲ್ಲವೆಂಬುದೇ ಮುಖ್ಯ ತತ್ವ.

ವಾಚಕರೇ, ಮೇಲೆ ಹೇಳಿದ ಜೀವಾತ್ಮನು ಪರಮಾತ್ಮನ ಒಂದು ಭಾಗವೇ ಹೊರತು ಮತ್ತೆ ಬೇರಲ್ಲ. ಈ ಜೀವಾತ್ಮನೇ ಪ್ರತಿಯೊಂದು ಪ್ರಾಣಿಯ ಹೃದಯ ಕಮಲದಲ್ಲಿದ್ದು, ಅವರವರು ಮಾಡುವ ಪಾಪಪುಣ್ಯ ಕರ್ಮಗಳಿಗೆ ಸಾಕ್ಷಿಯಾಗಿರುವಂಥದು. ಈ ಜೀವಾತ್ಮವು ಮಾಯೆಯಿಂದ ಮುಚ್ಚಲ್ಪಟ್ಟಿದೆ. ಈ ಮಾಯೆಗೆ ಅಜ್ಞಾನವೆಂದೂ ಪ್ರಕೃತಿಯೆಂದೂ ಉಪನಾಮಗಳು. ಈ ಮಾಯೆಯಿಂದ ತಪ್ಪಿಸಿಕೊಂಡ ತಕ್ಷಣವೇ, ಜೀವಾತ್ಮನೆಂಬ ಹೆಸರು ಹೋಗಿ ಪರಮಾತ್ಮನೆಂಬ ಹೆಸರುಂಟಾಗುವುದು.

ಅಜ್ಞಾನರಹಿತವಾದದ್ದೂ, ಸ್ವಯಂಪ್ರಕಾಶವಾದದ್ದೂ ಆದ ಆ ಪರಮಾತ್ಮನೆಂಬ ವಸ್ತುವು ಜನನ ಮರಣಗಳಾಗಲಿ ವೃದ್ಧಿಕ್ಷಯಗಳಾಗಲಿ ಎಲ್ಲಾ ಕಾಲದಲ್ಲಿಯೂ ಒಂದೇ ಸಮನಾಗಿರುವುದು ಮತ್ತು ಇರುವೆಯಿಂದ ಬ್ರಹ್ಮನವರಿವಿಗೂ ಇರುವ ಸಮಸ್ತ ಜೀವರಾಶಿಗಳಲ್ಲಿಯೂ ಸಮಸ್ತ ಸ್ಥಾವರ ಜಂಗಮ ವಸ್ತುಗಳಲ್ಲಿಯೂ ಪರಿಪೂರ್ಣವಾಗಿರುವುದು.

ಜೀವಾತ್ಮನು ಮಾಯಾ ಸಂಬಂಧವಿರುವವರಿವಿಗೂ ಯಾವುದೋ ಒಂದು ಶರೀರ ಸಂಬಂಧವನ್ನು ಪಡೆದೇ ಇರುವನು. ಮಾಯೆ ಹರಿಯಿತೆಂದರೆ ಅಂದರೆ ಜ್ಞಾನೋದಯವಾಯಿತೆಂದರೆ ಆತನಿಗೆ ಶರೀರ ಸಂಬಂಧವು ತಪ್ಪಿ ಪರಮಾತ್ಮನಲ್ಲಿ ಐಕ್ಯಹೊಂದುತ್ತಾನೆ. ಇಂತಹ ಶರೀರ ಸಂಬಂಧ ಬಿಡುಗಡೆಗೆ ಅಂದರೆ ಪರಮಾತ್ಮನಲ್ಲಿ ಐಕ್ಯಹೊಂದುವುದಕ್ಕೆ ಮೋಕ್ಷವೆಂದು ಹೆಸರು. ಇದರ ಪ್ರಮಾಣಕ್ಕಾಗಿ ಶ್ರೀ ಕೃಷ್ಣಾರ್ಜುನ ಸಂವಾದ ರೂಪದಿಂದ ಭಗವದ್ಗೀತೆಯ ಎರಡನೇ ಅಧ್ಯಾಯ 16ನೇ ಶ್ಲೋಕವು ತಾತ್ಪರ್ಯದೊಡನೆ ಈ ಕೆಳಗೆ ವಿವರಿಸಿದೆ.

ಶ್ಲೋ ॥ ನಾಽಸತೋ ವಿದ್ಯತೇ ಭಾವೋ ನಾಽಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋನ್ತ ಸ್ತ್ವನಯೋ ಸ್ತತ್ವದರ್ಶಿಭಿಃ ॥

ಕೃಷ್ಣ:—"ಸತ್" ಎಂದರೆ ನಿತ್ಯವಾದ (ನಾಶರಹಿತವಾದ) ಪದಾರ್ಥವು. "ಅಸತ್" ಎಂದರೆ ಅನಿತ್ಯವಾದ (ನಾಶವಾಗುವ)

ಪದಾರ್ಥವು. "ಸತ್" ಪದಾರ್ಥಕ್ಕೆ ಅನಿತ್ಯತ್ವವೂ "ಅಸತ್" ಎಂಬುದಕ್ಕೆ ನಿತ್ಯತ್ವವೂ ಎಂದಿಗೂ ಉಂಟಾಗಲಾರದು. ಇವೆರಡರ ಯಥಾರ್ಥಭಾವವನ್ನು ಜ್ಞಾನಿಗಳು ಮಾತ್ರ ತಿಳಿಯಬಲ್ಲರು.

ಅರ್ಜುನ:—"ಸತ್" ಎಂದರೇನು? ಅದರ ಸ್ವಭಾವವೆಂತಹದು? "ಅಸತ್" ಎಂಬುದರ ಬಗೆ ಹೇಗೆ? ಎಂಬುದನ್ನು ವಿವರಿಸಬೇಕು.

ಕೃಷ್ಣ:—ನನ್ನಲ್ಲಿರುವ ಪರಮಾತ್ಮನೂ, ನಿನ್ನಲ್ಲಿ ಮತ್ತು ನಿನ್ನೆದುರು ಭಾಗದಲ್ಲಿ ಕಾಣಿಸುವ ಇತರ ರಾಜರುಗಳ ಹೃದಯ ಕಮಲಗಳಲ್ಲಿಯೂ ಮತ್ತೆ ಪಿಪೀಲಿಕಾದಿ ಬ್ರಹ್ಮಪರ್ಯಂತವಾಗಿರುವ ಅನೇಕ ಜೀವಕೋಟಿಗಳಲ್ಲಿಯೂ ವ್ಯಾಪಿಸಿರುವ ಜೀವಾತ್ಮಗಳು ಎಂದಿಗೂ ನಾಶವನ್ನು ಹೊಂದುವವುಗಳಲ್ಲವು. ಆದುದರಿಂದ ಈ ಜೀವಾತ್ಮ ಪರಮಾತ್ಮರಿಗೆ "ಸತ್" ಎಂದೂ, ಉಳಿದ ಎಲ್ಲಾ ಕಣ್ಣಿಗೆ ಕಾಣ್ಬರುವ ಈ ಪ್ರಪಂಚದ ವಸ್ತುಗಳೆಲ್ಲವೂ ನಾಶದಲ್ಲಿ ಕೊನೆಗಾಣುವುವಾದುದರಿಂದ ಅವಕ್ಕೆ "ಅಸತ್" ಎಂದೂ ಹೇಳುತ್ತಾರೆ.

ಅರ್ಜುನ:—ಓ ಭಗವಂತಾ! ಕೃಷ್ಣಾ! ನಿಮ್ಮಲ್ಲಿರುವುದು ಪರಮಾತ್ಮನೆಂದೂ, ನಾನು ಮೊದಲಾಗಿ ಎಲ್ಲಾ ಜಂತುಜಾಲಗಳಲ್ಲಿರುವುದು ಜೀವಾತ್ಮನೆಂದೂ ಹೇಳಿದಿರಲ್ಲವೇ? ಹಾಗೆ ಹೇಳಲು ಕಾರಣವೇನು? ಪರಮಾತ್ಮ ಜೀವಾತ್ಮರು ಬೇರೆಬೇರೆಯೇ? ಹಾಗಿದ್ದರೆ ಅವುಗಳಿಗಿರುವ ಭೇದಗಳಾವುವು? ನನ್ನಲ್ಲಿರುವಂತೆ ಸಮಸ್ತ ಜೀವಿಗಳಲ್ಲಿರುವುದೂ ಜೀವಾತ್ಮನೆಂದು ಹೇಳಿದಿರಲ್ಲವೇ! ಜೀವಾತ್ಮನೊಬ್ಬನೇ ಎಲ್ಲಾ ಪ್ರಾಣಿಗಳಲ್ಲಿ ವ್ಯಾಪಿಸಿದ್ದಾನೆಯೇ? ಇಲ್ಲವೇ ಪ್ರತಿಯೊಂದು ಪ್ರಾಣಿಯಲ್ಲಿಯೂ ಬೇರೆ ಬೇರೆ ಜೀವಾತ್ಮರು ನೆಲಸಿರುವರೇ? ಮತ್ತು ಈ ಜೀವಾತ್ಮ ಪರಮಾತ್ಮರಿಗೆ ಮಾತ್ರ ನಾಶವಿಲ್ಲದಿರುವುದು ಹೇಗೆ? ಇದನ್ನು ವಿಶದಪಡಿಸಬೇಕೆಂಬುದು ನನ್ನ ಕೋರಿಕೆ.

ಕೃಷ್ಣ:—ಪರಮಾತ್ಮಸ್ವರೂಪವೆಂತಹದೆಂದರೆ:—

ಶ್ಲೋ॥ ವಿಶ್ವೋದ್ಭವಸ್ಥಿತಿಲಯಾದಿಷು ಹೇತು ಮೇಕಂ।
ಮಾಯಾಶ್ರಯಂ ವಿಗತಮಾಯ ಮಚಿಂತ್ಯಮೂರ್ತಿಂ॥

ಆನಂದಸಾಂದ್ರ ಮಮಲಂ ನಿಜಬೋಧರೂಪಂ ।
ಸೀತಾಪತಿಂ ವಿದಿತತ್ವ ಮಹಂ ನಮಾಮಿ ॥

ಎಂಬ ಅಧ್ಯಾತ್ಮರಾಮಾಯಣ ವಚನದಂತೆ ಈ ಪ್ರಪಂಚದ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣಭೂತನಾದ, ಅಖಂಡವಾಗಿ ತಾನೊಬ್ಬನೇ ಎಲ್ಲೆಲ್ಲಿಯೂ ತುಂಬಿರುವ, ಮಾಯೆಗೆ ಆಶ್ರಯವನ್ನು ಕೊಟ್ಟಿದ್ದರೂ ಮಾಯಾ ರಹಿತನಾದ, ಧ್ಯಾನಮಾಡಲು ಮನಸ್ಸಿಗೆ ಇಂತಹ ಮೂರ್ತಿಯೇ ಸರಿಯೆಂದು ತಿಳಿಯಲಶಕ್ಯನಾದ, ಸರ್ವದಾ ಆನಂದದಿಂದ ತುಂಬಿ ತುಳುಕಾಡುತ್ತಿರುವ, ಮಹಾಪರಿಶುದ್ಧನಾದ, ತನ್ನ ಸ್ವರೂಪಜ್ಞಾನವನ್ನು ತಿಳಿದಿರುವ ಅಂದರೆ ಸ್ವಯಂಜ್ಞಾನಮಯನಾದ, ಮತ್ತು ತತ್ವಗಳನ್ನು ಚನ್ನಾಗಿ ತಿಳಿದಿರುವ (ರಾಮನೆಂಬ ಹೆಸರಿನಿಂದ ಭೂಲೋಕದಲ್ಲಿ ಅವತರಿಸಿರುವ) ಆ ಪರಬ್ರಹ್ಮನಿಗೆ ನಮಸ್ಕಾರವು.

ಇದೂ ಅಲ್ಲದೆ ಆ ಪರಮಾತ್ಮನು,

ಶ್ಲೋ ॥ ಯೋಽಯಂ ಸಾಕ್ಷಾ ತ್ಪರಬ್ರಹ್ಮ ಸಚ್ಚಿದಾನಂದವಿಗ್ರಹಃ ।
ಏಕಂ ಪರೋಽವ್ಯಯಃ ಸಾಕ್ಷೀ ಕೂಟಸ್ಥೋಽವ್ಯಕ್ತಸಂಜ್ಞಕಃ ॥

ನಿರಂಜನೋ ನಿರಾಭಾಸೋ ದುರ್ಜ್ಞೇಯೋ ಮಾನವರ್ಜಿತಃ ।
ನಿರ್ವಿಕಲ್ಪೋಽಕ್ಷಯೋ ಮುಕ್ತೋ ನಿರ್ಗುಣೋ ರೂಪವರ್ಜಿತಃ ॥

ಪ್ರಪಂಚೋಪಶಮ ಶ್ಶುದ್ಧಃ ಸರ್ವಯೋನಿ ರಜ ಶ್ಶುಭಃ ।
ನಾನ್ತಃ ಪ್ರಜ್ಞಶ್ಚ ನ ಪ್ರಜ್ಞಃ ನಾಽಪ್ರಜ್ಞೋ ನ ಬಹಿ ಸ್ತಥಾ ॥
ಅದೃಶ್ಯೋಽವ್ಯವಹಾರಶ್ಚ ಮನಸೋಽಪಿ ನ ಗೋಚರಃ ।
ಆಕಾಶವತ್ ಸ್ಥಿತೋಽನನ್ತ್ಯಂ ಸರ್ವತ್ರೈವಂವಿಧೋ ವಿಭುಃ ॥

ಅಪಾಣಿಪಾದೋ ಜವನೋ ಗ್ರಹೀತಾ ।
ಪಶ್ಯ ತ್ಯಚಕ್ಷುಃ ಸ ಶೃಣೋ ತ್ಯಕರ್ಣಃ ॥
ಸ ವೇತ್ತಿ ವೇದ್ಯಂ ನ ಚ ತಸ್ಯ ವೇತ್ತಾ ।
ತ ಮಾಹುರ ಗ್ರ್ಯಂ ಪುರುಷಂ ಮಹಾನ್ತಂ ॥

ಎಂಬ ತತ್ವಸಂಗ್ರಹರಾಮಾಯಣದ ಆಧಾರದಂತೆ ಆ ಪರಮಾತ್ಮನು ಅಂದರೆ ಆ ಬ್ರಹ್ಮಪದಾರ್ಥವು ಸತ್ಯಜ್ಞಾನಾನಂದ ಸ್ವರೂಪವಾದುದು; ಅದ್ವಿತೀಯವಾದುದು; ಎಲ್ಲಕ್ಕಿಂತಲೂ ಆಚೆಯಿರುವುದು

(ಪರಾತ್ಪರಃ) ಅಂದರೆ ಯಾವುದಕ್ಕೂ ನಿಲುಕದಿರುವುದು ; ಅದಕ್ಕೆ ನಾಶವಿಲ್ಲ; ಅದು ಸರ್ವಸಾಕ್ಷಿಯಾದುದು ; ಕೂಟಸ್ಥನೆಂದೂ ಅವ್ಯಕ್ತನೆಂದೂ ವ್ಯವಹಾರನಾಮವನ್ನು ಹೊಂದಿರುವಂಥದು. ಮತ್ತು ಆ ವಸ್ತುವು ನಿರ್ದೋಷವಾದುದು ; ಯಾವ ವಿಧವಾದ ಆಭಾಸವೂ ಅದರಲ್ಲಿಲ್ಲ ; ಮಾಯೆಯಿಂದ ಮುಚ್ಚಲ್ಪಟ್ಟಿರುವವರಿಗೆ ತಿಳಿಯಲಶಕ್ಯವಾದುದು ; ಇದು ಇಷ್ಟೇ ಇದೆಯೆಂದು ಇದು ಹೀಗೇ ಇದೆಯೆಂದು ತಿಳಿಯಲಸಾಧ್ಯವಾದುದು. ಇದರಲ್ಲಿ ಯಾವ ವಿಕಲ್ಪವೂ ಇಲ್ಲ; ಯಾವ ಲಯವೂ ಇದಕ್ಕಿಲ್ಲ; ಇದು ಮಾಯಾಪಾಶದಿಂದ ಮುಕ್ತವಾಗಿರುವುದು ; ಇದರಲ್ಲಿ ಗುಣರೂಪಗಳೆಂಬ ವಿಷಯವೇ ಇಲ್ಲ. ಸಮಸ್ತ ಪ್ರಪಂಚವೂ ಇದರಲ್ಲಿ ಲಯಹೊಂದುವುದು ; ಮಹಾ ಪರಿಶುದ್ಧವಾದುದು ; ಸಮಸ್ತಕ್ಕೂ ಇದೇ ಮೂಲವು ; ಇದು ಹುಟ್ಟತಕ್ಕ ಸ್ಥಳವಾವುದೂ ಇಲ್ಲ ; ಇದು ಸರ್ವದಾ ಶುಭವಾದುದು ; ಇದಕ್ಕೆ ಅಂತಃಪ್ರಜ್ಞವೂ ಇಲ್ಲ, ಬಹಿಃಪ್ರಜ್ಞವೂ ಅಲ್ಲ ; ಮತ್ತು ಜ್ಞಾನ ಹೀನವೂ ಅಲ್ಲ, ಆದರೆ ಜ್ಞಾನಮಯವಾದುದು. ಇದು ಯಾರ ಕಣ್ಣಿಗೂ ಗೋಚರವಾಗದು, ಇದರ ಸ್ಥಿತಿಯು ಹೀಗಿದೆಯೆಂದು ಹೇಳುವದಸಾಧ್ಯ. ಯೋಗಿಗಳ ಜ್ಞಾನಹೃದಯಕ್ಕೆ ಮಾತ್ರ ಗೋಚರಿಸಬಲ್ಲುದು; ಆಕಾಶದಂತೆ ನಿರ್ಲಿಪ್ತವಾಗಿ ಸರ್ವವ್ಯಾಪಿಯಾಗಿರುವುದು.

ಮೇಲೆ ಹೇಳಿದುವಲ್ಲದೆ, ಆ ಪರಬ್ರಹ್ಮವಸ್ತುವು ಕೈಕಾಲುಗಳಿಲ್ಲವಾದರೂ ಅತಿ ವೇಗವಾಗಿ ಸಂಚರಿಸುತ್ತಲೂ, ಎಲ್ಲವನ್ನು ವಶಪಡಿಸಿಕೊಳ್ಳುತ್ತಲೂ ಇರುವುದು ; "ಕಣ್ಣೆಂಬುದು ತನಗಿಲ್ಲಂತೆ, ಕಣ್ಣಿಗೆ ಕಣ್ಣಾಗಿಹನಂತೆ" ಎನ್ನುವಂತೆ, ಕಣ್ಣು ತನಗಿಲ್ಲದಿದ್ದರೂ ಸಮಸ್ತವನ್ನೂ ನೋಡಬಲ್ಲದು ; ಕಿವಿಯಿಲ್ಲದಿದ್ದರೂ ಕೇಳಬಲ್ಲುದು. ಅದಕ್ಕೆ ತಿಳಿಯದ ವಿಷಯವೇ ಇಲ್ಲ; ಆದರೆ ಅದನ್ನು ತಿಳಿದುಕೊಳ್ಳುವವರು ಯಾರೂ ಇಲ್ಲ. ಇಂತಹ ಬ್ರಹ್ಮಪದಾರ್ಥವನ್ನು ಎಲ್ಲಕ್ಕೂ ಆದಿಯಾದ ಪುರುಷನೆಂದೂ, ಪರಮಾತ್ಮನೆಂದೂ ತಿಳಿಯಬೇಕು. ಅಂತಹ ಪರಮಾತ್ಮನೇ ನಾನು.

ಅರ್ಜುನಾ ! ಜೀವಾತ್ಮನಾದರೋ ಆ ಪರಮಾತ್ಮನ ಅಂಶವೇ ಹೊರತು ಬೇರಿಲ್ಲ. ಆ ಅಂಶವೇ ಸಮಸ್ತ ಜೀವಿಜಾಲಗಳನ್ನು ವ್ಯಾಪಿಸಿರುವುದು.

ಈ ಜೀವಾತ್ಮನು ಮಾಯೆಯಿಂದ ಮುಚ್ಚಲ್ಪಟ್ಟಿರುವುದರಿಂದಲೇ ಅದಕ್ಕೆ ಆ ಹೆಸರು. ಈ ಮಾಯೆಗೆ ಅವಿದ್ಯೆಯೆಂದೂ ಅಜ್ಞಾನವೆಂದೂ ಉಪನಾಮಗಳು. ಸ್ವಯಂಪ್ರಕಾಶನಾದುದರಿಂದಲೇ ಪರಮಾತ್ಮನಿಗೆ ಈ ಹೆಸರು. ಹುಟ್ಟು-ಸಾವು, ಸುಖ-ದುಃಖ, ಏರಿಳಿತ ಮೊದಲಾದ ದ್ವಂದ್ವ ಗುಣಗಳು ಯಾವುವೂ ಇಲ್ಲದ ಆ ಪರಮಾತ್ಮನ ಅಂಶವೇ ಜೀವಾತ್ಮನೆಂಬ ಹೆಸರಿನಿಂದ ಸಮಸ್ತ ಪ್ರಾಣಿಪ್ರಪಂಚವನ್ನು ತುಂಬಿರುವುದು. ಈ ಆತ್ಮಕ್ಕೆ ಮಾಯಾ ಸಂಬಂಧವಿರುವವರಿವಿಗೂ ಹುಟ್ಟುವುದು ಸಾಯುವುದು ಅಂದರೆ ದೇಹಬದಲಾವಣೆಗಳು ಆಗಿಯೇ ಆಗುತ್ತವೆ. ಎಂದಿಗೆ ಈ ಜೀವಾತ್ಮನಿಗೆ ಮಾಯೆಯಿಂದ ಬಿಡುಗಡೆಯಾಗುವುದೋ ಅಂದಿಗೆ ಜನನಮರಣಾದಿ ವಿಕಾರಗಳು ತೊಲಗಿ ಪರಮಾತ್ಮನಲ್ಲಿ ಐಕ್ಯವಾಗುತ್ತದೆ ಇದಕ್ಕೇ ಮೋಕ್ಷವೆಂಬ ಹೆಸರು ಬಂದಿರುವುದು. ಇದಕ್ಕೆ ಒಂದು ದೃಷ್ಟಾಂತವುಂಟು. ಈ ಪ್ರಪಂಚದಲ್ಲಿ ಪರಿಶುದ್ಧವಾದ (ಸ್ವಚ್ಛವಾದ) ಭಂಗಾರಕ್ಕೆ 'ಅಪರಂಜಿ' ಎಂದು ಹೇಳುತ್ತಾರೆ. ತಾಮ್ರವೇ ಮೊದಲಾದ ಲೋಹಗಳು ಮಿಶ್ರವಾಗಿದ್ದಾಗ್ಯೂ ಅದನ್ನೂ ಭಂಗಾರವೆಂದು ಕರೆಯುವುದೇ ಜನಗಳ ವಾಡಿಕೆ. ಇತರ ಲೋಹಗಳಿಂದ ಬಿಡುಗಡೆ ಮಾಡಿದ್ದೇ ಆದರೆ ಅದು ಪುನಃ ಅಪರಂಜಿಯೇ ಆಗುತ್ತದೆ. ಈರೀತಿಯಾಗಿ ಇತರ ಲೋಹಗಳ ಸಂಪರ್ಗದಿಂದ ನಾಮ ಭೇದಗಳನ್ನು ಹೊಂದುತ್ತದೆ. ಈ ನಾಮಭೇದಗಳಾಗುವುದಕ್ಕೆ ಕಾರಣ ನಿನಗೆ ತಿಳಿಯುವುದೇ? ಅರ್ಜುನಾ!

ಅರ್ಜುನ—ಆಹಾ! ನನಗೆ ಗೊತ್ತುಂಟು. ಅಪರಂಜಿಯೆಂದರೆ ಸ್ವಚ್ಛವಾದದ್ದು, ಇತರ ಲೋಹ ಸಂಪರ್ಗವಿಲ್ಲದೆ ಇರುವವರಿವಿಗೂ ಇದು ಅಪರಂಜಿಯೇ. ಎಷ್ಟು ಸಾರಿ ಕರಗಿದರೂ ಅದರ ಗುಣದಲ್ಲಿ ಭೇದವೇ ಉಂಟಾಗದು. ಅದಕ್ಕೆ ರೂಪ, ಬಣ್ಣ, ತೂಕ ಇವುಗಳಲ್ಲಿ ವ್ಯತ್ಯಾಸವುಂಟಾಗದು. ಆದರೆ ಲೋಹಮಿಶ್ರವಾದ ಭಂಗಾರವನ್ನು ಪುಟಕ್ಕೆ ಇಟ್ಟದ್ದೇ ಆದರೆ ರೂಪ, ಬಣ್ಣ, ತೂಕಗಳು ವ್ಯತ್ಯಾಸವಾಗುತ್ತ ಬಂದು ಕಡೆಗೆ ಲೋಹ ಸಂಬಂಧವು ಸಂಪೂರ್ಣವಾಗಿ ಕಳೆದುಹೋದಮೇಲೆ ಅದು ಸ್ವಚ್ಛವಾದ ಅಪರಂಜಿಯಾಗುವುದು. ಹೀಗೆ ಸ್ವಚ್ಛ ಮತ್ತು ಮಿಶ್ರ ಲೋಹಗಳಿಗೆ ನಾಮಭೇದಗಳು ಬಂದಿರುತ್ತವೆ ಎಂಬ ಕಾರಣ ನನಗೆ ತಿಳಿದಿದೆ.

ಕೃಷ್ಣ :—ಒಳ್ಳೆಯದು ; ಈ ನಾಮ ಭೇದಗಳು ಸ್ವಚ್ಛ ಮತ್ತು ಮಿಶ್ರಲೋಹಗಳಿಗೆ ಯಾವ ರೀತಿಯಲ್ಲಿ ಉಂಟಾದವೋ ಪರಮಾತ್ಮ ಜೀವಾತ್ಮರ ನಾಮಗಳ ಭೇದವೂ ಹಾಗೆಯೇ ಉಂಟಾಗಿದೆಯೆಂದು ತಿಳಿ. ಪರಮಾತ್ಮನೇ ಸ್ವಚ್ಛವಾದ ಅಪರಂಜಿ. ಜೀವಾತ್ಮನೇ ಇತರ ಲೋಹಗಳಿಂದ ಮಿಶ್ರವಾದ ಭಂಗಾರ; ಅಂದರೆ ಮಾಯಾತೀತನು ಮತ್ತು ನಿರಾಮಯನಾದವನು ಪರಮಾತ್ಮ; ಮಾಯಾಚ್ಛಾದಿತನಾಗಿ ಹುಟ್ಟು-ಸಾವುಗಳೆಂಬ ಉಪಾಧಿಯಿಂದ ಕೂಡಿದವನು ಜೀವಾತ್ಮ. ಹೇಗೆ ಅಸ್ವಚ್ಛವಾದ ಭಂಗಾರವನ್ನು ಪುಟಕ್ಕೆ ಹಾಕುತ್ತ ಹಾಕುತ್ತ ರೂಪಬಣ್ಣಗಳು ಅಧಿಕವಾಗಿ ಕಡೆಗೆ ಅಪರಂಜಿ ಆಗುತ್ತದೆಯೋ ಹಾಗೆಯೇ ಜೀವಾತ್ಮನೂ ಅನೇಕ ಜನ್ಮಗಳನ್ನು ಪಡೆದು ಅವುಗಳಲ್ಲಿ ತಾನು ಮಾಡುವ ನಿಷ್ಕಾಮ ಪುಣ್ಯಕರ್ಮಫಲದಿಂದ ಕ್ರಮಕ್ರಮವಾಗಿ ಮಾಯಾಸಂಬಂಧವು ತಗ್ಗುತ್ತಾ ತಗ್ಗುತ್ತಾ, ಕಡೆಗೆ ಮಾಯೆಯು ಸಂಪೂರ್ಣವಾಗಿ ತೊಲಗಿ ಅಂದರೆ ಜ್ಞಾನವುಂಟಾಗಿ ಪರಮಾತ್ಮನ ಸ್ವರೂಪವನ್ನು ಪಡೆಯುವನು ಅಂದರೆ ಪರಮಾತ್ಮನಲ್ಲಿ ಕಲೆತು ಹೋಗುವನು. ಇದಕ್ಕೆ "ಜೀವ ಬ್ರಹ್ಮೈಕ್ಯ" ವೆಂದು ಹೆಸರು.

ಈ ಮೇಲೆ ಹೇಳಿದ ಜೀವಬ್ರಹ್ಮ ರಹಸ್ಯವನ್ನು ಕೃಷ್ಣಾರ್ಜುನ ಸಂವಾದರೂಪವಾಗಿ ಈ ಗ್ರಂಥಕರ್ತ ಯೋಗೀಶ್ವರರಾದ ಶ್ರೀ ಪರಮಹಂಸ ಸಚ್ಚಿದಾನಂದರಿಂದ ರಚಿಸಲ್ಪಟ್ಟ ಶ್ರೀ ಭಗವದ್ಗೀತಾ ಗೂಢಾರ್ಥ ದೀಪಿಕೆಯಲ್ಲಿ ಅಧ್ಯಾಯ 2 ಶ್ಲೋಕ 11 ರಿಂದ 30 ರ ವರಿವಿಗೂ ಗಮನವಿಟ್ಟು ಪಠಿಸಿದ್ದೇ ಆದರೆ ಸಂಬಂಧಿಗಳ ಮರಣದಿಂದುಂಟಾಗುವ ದುಃಖವನ್ನು ಕಳೆದು ಶಾಂತಿಯನ್ನು ಹೊಂದಬಹುದು. ಮೇಲ್ಕಂಡ ತೆಲುಗು ಭಗವದ್ಗೀತೆಯು ಶೀಘ್ರದಲ್ಲಿಯೆ ಕನ್ನಡದಲ್ಲಿ ಪರಿವರ್ತನೆಯಾಗಿ ಬರುತ್ತದೆ.

ಸೀ ॥ ಸತಿಸುತರ ಬಾಂಧವರ ♦ ಕೂಡಿಕೊಂಡಿರುವುದೇ,
ಗೌರವವು ನಿಮಗೆಂದು ♦ ಹಿಗ್ಗುತಿಹಿರಿ ।
ಪೀತಾಂಬರಂಗಳಿಂ ♦ ರನ್ನದೊಡವುಗಳಿಂದ,
ಸಿಂಗರವ ಕೈಕೊಂಡು ♦ ಮೆರೆಯುತಿಹಿರಿ ॥

ಹಲವು ಬಗೆ ಹೂಗಿಡಂ ♦ ಗಳಲಿ ಬೆಳಗುತಲಿರ್ಪ,
ಕಮನೀಯ ಗೃಹಗಳಲಿ ♦ ನೆಲಸುತಿಹಿರಿ।
ಸತತ ಕಿವಿಗಿಂಪಾದ ♦ ಸಂಗೀತ ಸಭೆಗಳನು,
ನೆರಸಿ ಮಿಗೆ ಸಂತಸವ ♦ ಪೊಂದುತಿಹಿರಿ॥

ಗೀ॥ ಅಲ್ಲದೆಯೆ ಮುಖ್ಯ ವಿಷಯುಗಳ ♦ ಕಾಣದಿಹಿರಿ;
ಹಸಿದವರಿ ಗಶನವನು ಕೊಡ ♦ ದಿಹಿರಿ ನೀವು;
ಪಯೆ ಪೊರೆದ ಬದುಕಿಂಥದುಂ ♦ ಬದುಕೆ ಪೇಳಿ;
ನಿತ್ಯವಲ್ಲವಿದೆನುತ ಮನು ♦ ಜರೆ! ತಿಳಿಯುರಿ.

ಗೀ॥ ಅಲ್ಪ ಸುಖಗಳಿಗಾಸೆ ಬಿ ♦ ದ್ದಕಟ! ಮುಖ್ಯ
ವಿಷಯುಗಳ ಯೋಚಿಸದೆಯೆ ವಿ ♦ ವೇಕಮುಹುದೆ?
ಕ್ಷೋಣಿ, ರೇಚಕ, ಪೂರಕ ♦ ಕುಂಭಕಗಳ।
ನರಿಯುದೆಷ್ಟು ಶಾಸ್ತ್ರಗಳ ♦ ಪಠಿಸಲೇಕೆ?

ಭಾಮಿನೀಷಟ್ಪದಿ॥ ಶಕ್ತಿ ಗನುಗುಣಮಾಗಿ ಮನುಜ ನ।
ಶಕ್ತ ವರ್ಗವನರಸಿ ಯುತ್ನಾ।
ಸಕ್ತಿಯಿಂದಲೆ ಸೇವಿಸಲು ಮೈಗುಡುವನಂ ಕಂಡು॥
ಯುಕ್ತಿಯಲಿ ದುರಿತೌಘದಿಂ ನಿ।
ರ್ಮುಕ್ತನಹ ಮದ್ಭಕ್ತನೆನುತಲೆ।
ಮುಕ್ತಿ ಯೀವನು ಹರಿಯುಪಗೆ ನಿಜವೆಂದನಾವಿದುರ॥

ಈ ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನೂ ತನ್ನ ಶಕ್ತಿಗೆ ತಕ್ಕಂತೆ ಅಶಕ್ತರ ಗುಂಪನ್ನು ಹುಡುಕಿ, ಅವರನ್ನು ಬಹಳ ಆಸಕ್ತಿಯಿದ ಉಪಚರಿಸುವುದರಲ್ಲಿ ಯತ್ನಿಸುತ್ತಿರಬೇಕು. ಇಂತಹನನ್ನು ನೋಡಿ, ಶ್ರೀಹರಿಯು, "ಬಹಳ ಉಪಾಯದಿಂದ ಇವನು ತನ್ನ ಪಾಪವನ್ನೆಲ್ಲಾ ಹೋಗಲಾಡಿಸಿಕೊಳ್ಳುವಂತಹ ನನ್ನ ಭಕ್ತನು" ಎಂದು ತಿಳಿದು ಅವನಿಗೆ ಮುಕ್ತಿಯನ್ನು ಕೊಡುತ್ತಾನೆ.

ಈ ಲೋಕದಲ್ಲಿರುವ ಜನಗಳು ಪುತ್ರ, ಮಿತ್ರ, ಕಳತ್ರ, ಬಾಂಧವರು ಇವರುಗಳಿಂದ ಕೂಡಿ ಮೆರೆಯುತ್ತಾ ಬಹು ಗೌರವದಿಂದಿದ್ದೇವೆಂದು ಗರ್ವಪಡುತ್ತಿದ್ದಾರೆ. ಓ ಸ್ತ್ರೀಪುರುಷರಿರಾ! ನೀವು ಬಹು ಬೆಲೆಯುಳ್ಳ

ವಸ್ತ್ರಾಭರಣಗಳನ್ನು ಧರಿಸಿದ್ದರೂ, ಶೌರ್ಯ, ಔದಾರ್ಯ ಪ್ರತಾಪಗಳಿಂದ ಮೆರೆಯುತ್ತಿದ್ದರೂ, ಸಾರ್ವಭೌಮಪದವಿಯನ್ನು ಹೊಂದಿದ್ದರೂ ಆಸೆಯೆಂಬ ಪಿಶಾಚಕ್ಕೆ ಒಳಗಾಗುತ್ತಿದ್ದೀರಿ. ಹಸಿದು ಬಂದಂಥ ಅತಿಥಿಗಳಿಗೆ ಆದರಿಸಿ ಅನ್ನವಿಡಲಾರಿರಿ. ನಿಮ್ಮ ನಿಮ್ಮ ಕುಟುಂಬ ಪೋಷಣೆಗೆ ಮಟ್ಟಿಗೆ ಗಮನಕೊಡುತ್ತಿದ್ದೀರಿ. ಮೇಳತಾಳಗಳಿಂದ ಬೀದಿಗಳಲ್ಲಿ ವೈಭವದಿಂದ ಮೆರೆಯುತ್ತಿದ್ದೀರಿ. ಇಂತಹ ಅಲ್ಪಸುಖಕ್ಕೆ ಮನಗೊಟ್ಟು ನಿಮಗೆ ಅತ್ಯವಶ್ಯಕವಾಗಿರುವ ಶಾಶ್ವತಸುಖವನ್ನು ಯಾವುದರಿಂದ ಪಡೆಯಬಹುದೋ ಆ ಮಾರ್ಗವನ್ನು ತಿಳಿಯದೆ ಇದ್ದೀರಿ. ಅಕಾರ, ಉಕಾರ, ಮಕಾರಗಳೆಂಬ ರೇಚಕ, ಪೂರಕ, ಕುಂಭಕ ಇವುಗಳ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೂ ಪ್ರಯತ್ನಪಡದೆ, ಎಷ್ಟು ಶಾಸ್ತ್ರಗಳನ್ನು ಓದಿದರೆ ತಾನೇ ಏನು ಪ್ರಯೋಜನ. ಆದುದರಿಂದ ಮೇಲೆ ಹೇಳಿದ ಅ, ಉ, ಮ ಇವುಗಳಿಂದ ಕೂಡಿದ ಅಂದರೆ ಓಂಕಾರಾತ್ಮಕನಾದ, ತನ್ನಲ್ಲಿ ಸರ್ವದಾ ಸಾಕ್ಷಿಭೂತನಾಗಿ ಅಂತರ್ಯಾಮಿಯಾಗಿ ಅಡಗಿರುವ ಆ ಪರಮಾತ್ಮನ ಸ್ವರೂಪವನ್ನು, ಯೋಗಾಭ್ಯಾಸದಿಂದ ಮನಸ್ಸನ್ನು ಸ್ಥಿರೀಕರಿಸಿ, ಚನ್ನಾಗಿ ತಿಳಿದು, ಆನಂದಸುಖವನ್ನು ಅನುಭವಿಸಬೇಕು. ಇದೇ ಬ್ರಹ್ಮಾನಂದ, ಇದೇ ಪರಮಸುಖ, ಇದೇ ನಿತ್ಯಸುಖ.

ಪರಮಾತ್ಮ ಸ್ವರೂಪವನ್ನು ಎಲ್ಲರೂ ತಿಳಿದುಕೊಳ್ಳುವುದಕ್ಕಾಗಿಯೇ ಈಶ್ವರನು ಬುದ್ಧಿಯನ್ನು ಕೊಟ್ಟಿದ್ದರೂ ಪೂರ್ವಜನ್ಮದಲ್ಲಿ ಮಾಡಿದ ಪಾಪಕರ್ಮಗಳ ಬಲಿಯದಿಂದ ಅದನ್ನು ನೀವು ತಿಳಿಯದೇ ಇದ್ದೀರಿ. ಆ ಪರಮಾತ್ಮನಾದ ಸಚ್ಚಿದಾನಂದಮೂರ್ತಿಯ ಸ್ವರೂಪವನ್ನು ತಿಳಿಸುವುದಕ್ಕೆ ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ವೆಂಬ ಗ್ರಂಥವು ಬಹು ಉಪಯೋಗಕರವಾದುದು ಎಂದು ತಿಳಿಯಬೇಕು. ಈ ಗ್ರಂಥವನ್ನು ಓದಿ ಇದರಲ್ಲಿ ತಿಳಿಯ ಹೇಳಿದ ಉಪದೇಶಗಳನ್ನು ಗುರುವಾಕ್ಯೆಂದು ಭಾವಿಸಿ ಅವುಗಳನ್ನು ಜಪಿಸುತ್ತಾ ಬರುವವರು ನರಕ ಬಾಧೆಯಿಂದ ಮುಕ್ತರಾಗಿ, ಮುಕ್ತಿ ಮಾರ್ಗವನ್ನು ತಪ್ಪದೆ ಹೊಂದುತ್ತಾರೆ.



# ಸಂಚಿತ, ಪ್ರಾರಬ್ಧ, ಆಗಾಮ್ಯ ಕರ್ಮಗಳು.

---

**1. ಸಂಚಿತವು :—** ಈ ಪ್ರಪಂಚದಲ್ಲಿ ಮಾನವರಲ್ಲನೇಕರಿಗೆ ಈಶ್ವರ ಭಕ್ತಿಯು ಎಷ್ಟುಮಾತ್ರವೂ ಇಲ್ಲದೆ ಸದಾ ಹಣವನ್ನು ಗಳಿಸುವುದರಲ್ಲಿಯೇ ನಿರತರಾಗಿ ಆ ಹಣದಿಂದ ಕೆಲವರು ಪುಣ್ಯ ಕರ್ಮಗಳನ್ನು ಮಾಡುತ್ತಿರುವುದೂ; ಮತ್ತೆ ಕೆಲವರು ಈ ವಿಧವಾದ ವಿಷಯಗಳಲ್ಲಿ ತೊಡಗದೆ ಸಾಯುತ್ತಿರುವುದೂ ನಿಮ್ಮೆಲ್ಲರಿಗೂ ತಿಳಿದ ಅಂಶವೇ ಅಲ್ಲವೆ? ಈ ಈರ್ವರಲ್ಲಿ ಪುಣ್ಯಮಾಡಿದವನಿಗೆ ಮುಂದಿನ ಜನ್ಮದಲ್ಲಿ ಸ್ವಲ್ಪವಾದರೂ ಈಶ್ವರಭಕ್ತಿಯು ಹುಟ್ಟಿ ಅದರಿಂದ ಆತನು ಭಜನೆ ಮೊದಲಾದ ಈಶ್ವರ ಸೇವೆಯನ್ನು ಪ್ರಾರಂಭಿಸಿ, ಕ್ರಮಕ್ರಮವಾಗಿ ಆ ಈಶ್ವರಭಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುವನೆಂದು ತಿಳಿಯಬೇಕು.

ದುರ್ಲಭವಾದ ಈ ಮಾನವಶರೀರವನ್ನು ಹೊಂದಿದ ನಂತರ ಭಜನೆಯಿಂದಲೂ, ದೇವಾಲಯದ ದರ್ಶನದಿಂದಲೂ, ವೇದಾಂತವಿಚಾರ ಮಾಡುವುದರಿಂದಲೂ, ಮಹಾತೀರ್ಥಸ್ನಾನಾದಿಗಳಿಂದಲೂ, ಸತ್ಯದ ಹಾದಿಯನ್ನತಿಕ್ರಮಿಸದಿರುವುದರಿಂದಲೂ ಈಶ್ವರಭಕ್ತಿಯು ಜನ್ಮ ಜನ್ಮಕ್ಕೂ ಹೆಚ್ಚುತ್ತಾ ಬರುವುದು. ಬಹು ಕಷ್ಟದಿಂದ ಈ ಮಾನವಶರೀರವನ್ನು ಪಡೆದೂ, ಹಿರಿಯರು, ಸಾಧುಗಳು, ಭಗವದ್ಭಕ್ತರು, ಜ್ಞಾನಿಗಳು ಇವೇ ಮೊದಲಾದವರನ್ನು ದೂಷಿಸಿದಲ್ಲಿ ಅವರು ಮಾಡಿದ ಪಾಪಕರ್ಮವನ್ನು ನಿಂದಿಸುವವರು ಹಂಚಿಕೊಂಡು, ಪುನಃ ಹೀನವಾದ ಜನ್ಮವನ್ನು ಹೊಂದುವರು. ಈ ಗುಟ್ಟನ್ನು ಸ್ತ್ರೀಪುರುಷರು ತಿಳಿದುಕೊಳ್ಳಲಾರದೆ ಪ್ರತಿ ಜನ್ಮದಲ್ಲಿಯೂ ಪಾಪಕರ್ಮಗಳ ಮೂಟೆಗಳನ್ನು ತಲೆಯಮೇಲೆ ಹೊತ್ತುಕೊಂಡು, ಕಡೆಯಲ್ಲಿ ನೀಚಜನ್ಮವನ್ನೆತ್ತಿ, ತಮ್ಮ ಕರ್ಮಾನುಸಾರವಾಗಿ ಒದಗಿದ ವ್ಯಾಧಿ ಮೊದಲಾದವುಗಳಿಂದ ಮನನೊಂದು, ಎಷ್ಟು ದಿನಗಳು

ಆ ಕರ್ಮ ಫಲವನ್ನನುಭವಿಸಬೇಕೋ ಅಷ್ಟು ದಿನಗಳನ್ನೂ ಅನುಭವಿಸಿ, ಕಡೆಗೆ ಪ್ರಾಣವನ್ನು ಬಿಡುತ್ತಿದ್ದಾರೆ.

ಹೀಗೆ ಪ್ರತಿ ಜನ್ಮದಲ್ಲಿಯೂ ಮಾಡುತ್ತಾ ಬರುತ್ತಿರುವ ಪುಣ್ಯಪಾಪ ಗಳೆಲ್ಲವೂ, ಹೊರೆಹೊರೆಯಾಗಿ ಪರ್ವತದಂತೆ ಹೆಚ್ಚುತ್ತಾ ಬರುತ್ತಿರುವ ಕರ್ಮಗಳೇ **ಸಂಚಿತ**ವೆಂಬದಾಗಿ ಹೇಳಲ್ಪಡುತ್ತದೆ. ಈ ಸಂಚಿತ ಕರ್ಮದಿಂದಲೇ ಪ್ರಾರಬ್ಧವುಂಟಾಗಿ ದುಃಖವನ್ನನುಭವಿಸುವ ಸಮಯ ದಲ್ಲಿ ಈಶ್ವರನನ್ನು ಜನರು ದೂಷಿಸುತ್ತಿದ್ದಾರೆ.

ಚ ॥ ಪರಿಕಿಸೆ ಪೂರ್ವಜನ್ಮ ಕೃತ ♦ ಕರ್ಮಗಳಿಂ ದೊದವಿರ್ದ ದುಃಖಗಳ್ ।
ನಿರುಕಿಸಿ ಯೆಲ್ಲ ಪೂರ್ವಭವ ♦ ಕರ್ಮಫಲಂಗಳಿವೆಂದು ಚಿತ್ತದೋ ॥
ಅರಿಯದೆ ಕಷ್ಟವಿತ್ತಿಹನು ♦ ದುಷ್ಟಪಿತಾಮಹನೆಂದು ದೂರುವಾ ।
ನರಪಶು ಘೋರನಾರಕವ ♦ ನೆಂದಿಗು ತಪ್ಪದೆ ಕಾಂಬುದೇ ನಿಜಂ ॥

ಚ ॥ ಪರಿಕಿಸೆ ಪೂರ್ವ ಜನ್ಮ ಕೃತ ♦ ಕರ್ಮಗಳಿಂದೊದವಿರ್ದ ದುಃಖಗಳ್ ।
ನಿರುಕಿಸಿ ಯೆಲ್ಲ ಪೂರ್ವಭವ ♦ ಕರ್ಮಫಲಂಗಳಿವೆಂದು ಚಿತ್ತದೋ ॥
ಳ್ನೆರೆ ತಿಳಿದಾವಿರಿಂಚಿಯನು ♦ ಸಂತತವುಂ ಮುದದಿಂದ ಜಾನಿಪಾ ।
ನರರೊಳಗುತ್ತಮುಂ ದಿಟವು ♦ ತಪ್ಪದೆ ಸದ್ಗತಿಯನ್ನೆ ಪೊಂದುವಂ ॥

ಆಯಾ ಜೀವರು ಮಾಡುತ್ತಾ ಬರುತ್ತಿರುವ ಕರ್ಮಫಲಕ್ಕನುಗುಣ ವಾಗಿ ದುಃಖವನ್ನನುಭವಿಸುವಾಗ, ಇವೆಲ್ಲವೂ ತಮ್ಮ ಕರ್ಮಾನುಸಾರ ವಾಗಿ ಬಂದವುಗಳೆಂದು ತಿಳಿಯದೆ ಬ್ರಹ್ಮದೇವನು ಈ ರೀತಿಯಾಗಿ ಮಾಡಿದ್ದಾನೆಂದು ತಿಳಿದು ಆತನನ್ನು ದೂಷಿಸುವ ಮೂಢರು ನರಕಭಾಜನ ರಾಗುತ್ತಾರೆ.

ಆಯಾ ಜೀವರು ಮಾಡುವಂಥ ಕರ್ಮಗಳಿಗೆ ಕಾರಣವು ಆಯಾ ಜೀವರೇ ಹೊರತು ಬ್ರಹ್ಮದೇವನಲ್ಲವು ಎಂದು ತಿಳಿದಿರುವ ಜ್ಞಾನಿಗಳು ಸದ್ಗತಿಯನ್ನು ಹೊಂದುವರು; ಈ ನುಡಿ ಸತ್ಯ. ಇನ್ನು ಮುಂದೆ ಪ್ರಾರಬ್ಧ ಕರ್ಮವನ್ನು ಕುರಿತು ಹೇಳಲಾಗುತ್ತದೆ.

2. **ಪ್ರಾರಬ್ಧವು:**—ಹಿಂದೆ ಹೇಳಿದ ಸಂಚಿತದಿಂದಲೇ ಅವರವರು ಮಾಡಿದ ಕರ್ಮಕ್ಕನುಗುಣವಾಗಿ ಪುಣ್ಯ ಪಾಪಗಳನ್ನನುಭವಿಸುವುದ ಕ್ಕೋಸ್ಕರ, ತಾಯಿಯ ಗರ್ಭದಲ್ಲಿ ಶಿಶುವಾಗಿರುವಾಗಲೇ ಸೃಷ್ಟಿಕರ್ತನಿಂದ ಹಂಚಿಟ್ಟು ಕಳುಹಿಸಿದ ಆ ಪುಣ್ಯಪಾಪಗಳನ್ನು ಅನುಭವಿಸುತ್ತ ಬರುವುದೇ ಪ್ರಾರಬ್ಧವೆನ್ನಿಸುವುದು. ಈ ಪ್ರಾರಬ್ಧ ಕರ್ಮವನ್ನು ಈ ಮುಂದೆ ವಿವರಿಸಿದೆ.

ಒಬ್ಬನು ಅನೇಕ ಜನ್ಮಗಳಿಂದಲೂ ತಾನು ಮಾಡುತ್ತ ಬಂದ ಕರ್ಮಗಳಲ್ಲಿ ಇನ್ನೂರು ಮೂಟೆಗಳು ಪುಣ್ಯವೂ ಮೂವತ್ತು ಮೂಟೆಗಳು ಪಾಪವೂ ಇರುವಂತೆ ಭಾವಿಸೋಣ. ಆತನಿಗೆ ಎಪ್ಪತ್ತು ವರ್ಷಗಳ ವಯಸ್ಸನ್ನು ವಿಧಿಸಿ ಜನ್ಮವನ್ನಿತ್ತಂತೆ ಊಹಿಸೋಣ. ಈತನು ಪುಣ್ಯ ವನ್ನು ಸ್ವಲ್ಪ ಹೆಚ್ಚಾಗಿ ಮಾಡಿರುವುದರಿಂದಲೇ ಈ ಎಪ್ಪತ್ತು ವರ್ಷ ಗಳಿಗೆ ತಕ್ಕಂತೆ ಇನ್ನೂರು ಮೂಟೆ ಪುಣ್ಯದಿಂದ ಇಪ್ಪತ್ತು ಮೂಟೆಯನ್ನೂ ಅದರಂತೆಯೇ ಮೂವತ್ತು ಮೂಟೆ ಪಾಪದಿಂದ ಐದನ್ನೂ ಈ ಜನ್ಮದಲ್ಲಿ ಅನುಭವಿಸುವುದಕ್ಕಾಗಿ ಹಂಚಿಕೊಟ್ಟು ಉಳಿದ ನೂರೆಂಭತ್ತು ಮೂಟೆ ಪುಣ್ಯ ಮತ್ತು ಇಪ್ಪತ್ತೈದು ಮೂಟೆ ಪಾಪ ಇವುಗಳನ್ನು ಇನ್ನು ಮುಂದೆ ಬರುವ ಜನ್ಮಗಳಲ್ಲಿ ಅನುಭವಿಸಲು ಸಂಚಿತವಾಗಿ ಸೃಷ್ಟಿಕರ್ತ ನಿಟ್ಟಿದ್ದಾನೆಂದೂ ಊಹಿಸುವ. ಈತನು ಈ ಜನ್ಮದಲ್ಲಿ ಹೆಚ್ಚು ಪುಣ್ಯ ವನ್ನು ಪಡೆದಿರುವುದರಿಂದಲೇ ಆ ಪುಣ್ಯಫಲಕ್ಕೆ ತಕ್ಕಂತೆ ಅರಮನೆ ಯಲ್ಲಿಯಾಗಲಿ ಇಲ್ಲವೇ ಮಹಾ ಧನಿಕರ ಮನೆಯಲ್ಲಿಯಾಗಲಿ ಹುಟ್ಟಿ, ಭೋಗಭಾಗ್ಯವನ್ನು ಹೆಚ್ಚಾಗಿಯೂ ಚಿಂತೆಯನ್ನು ಕಡಮೆಯಾಗಿಯೂ ಅನುಭವಿಸುತ್ತ ಬರುವನು. ಮನೋವ್ಯಥೆ ಎಂತಹುದೆಂದರೆ, 'ನನ್ನ ಆಸ್ತಿಯನ್ನು ಅನುಭವಿಸಲು ತಕ್ಕ ಮಗನು ಹುಟ್ಟಲಿಲ್ಲವಲ್ಲಾ' ಎಂದಾ ಗಲಿ, 'ಮಗನು ಹುಟ್ಟಿಯೂ ನನ್ನ ಮನಸ್ಸನ್ನನುಸರಿಸದೆ ದುರ್ಮಾರ್ಗ ನಾಗಿ ಬಹು ಕಷ್ಟದಿಂದ ನಾನು ಸಂಪಾದಿಸಿದ ಹಣವನ್ನು ವ್ಯರ್ಥವಾಗಿ ಹಾಳುಮಾಡುವನೆಂದಾಗಲಿ, 'ನನ್ನ ಪತ್ನಿಯು ನನ್ನಿಷ್ಟದಂತಿಲ್ಲದೆ ವ್ಯತಿ ರೇಕವಾಗಿ ನಡೆಯುತ್ತಿದ್ದಾಳೆ. ನನಗೆ ಎಷ್ಟು ಹಣವಿದ್ದರೆ ಏನು ಫಲ'

ಎಂದಾಗಲಿ, ಅಥವಾ 'ತನ್ನ ಹಣವನ್ನು ಕಳ್ಳರ ಬಾಧೆಯಿಂದ ತಪ್ಪಿಸುವ ಬಗೆ ಹೇಗೆ?' ಎಂಬುದಾಗಲಿ, ಇಲ್ಲವೇ ರೋಗಗಳಿಂದ ನರಳುವುದರಿಂದಾಗಲಿ ಹೀಗೆ ಯಾವುದೋ ಒಂದು ವ್ಯಸನವನ್ನು ಮೇಲ್ಕಂಡ ಐದು ಮೂಟೆ ಪಾಪಕರ್ಮಗಳ ಫಲಕ್ಕಾಗಿ ಪಡೆಯುತ್ತಾನೆ.

ಶುದ್ಧ ಬೋಧಸ್ವರೂಪಿಗಳಾದ ಸಹೋದರ ಸಹೋದರಿಯರೇ! ಮತ್ತೊಬ್ಬನಿಗೆ ಇನ್ನೂರು ಮೂಟೆ ಪಾಪವೂ ಮೂವತ್ತು ಮೂಟೆ ಪುಣ್ಯವೂ ಸಂಚಿತವಾಗಿವೆಯೆಂದು ಭಾವಿಸುವ. ಈತನಿಗೂ ಎಪ್ಪತ್ತು ವರ್ಷಗಳೇ ವಿಧಿಸಿ ಜನ್ಮ ದೊರಕಿದೆ ಎಂದು ತಿಳಿಯೋಣ. ಈತನು ಪಾಪವನ್ನು ಹೆಚ್ಚಾಗಿ ಮಾಡಿರುವುದರಿಂದ ಈ ಎಪ್ಪತ್ತು ವರ್ಷಗಳಿಗೆ ತಕ್ಕಂತೆ ಇನ್ನೂರು ಮೂಟೆ ಪಾಪದಲ್ಲಿ ಇಪ್ಪತ್ತನ್ನೂ ಮೂವತ್ತು ಮೂಟೆ ಪುಣ್ಯ ದಿಂದ ಐದನ್ನೂ ಈ ಜನ್ಮದಲ್ಲಿ ಅನುಭವಿಸಲು ಹಂಚಿಕೊಟ್ಟು ಉಳಿದ ನೂರೆಂಭತ್ತು ಮೂಟೆ ಪಾಪ, ಇಪ್ಪತ್ತೈದು ಮೂಟೆ ಪುಣ್ಯ, ಇವುಗಳನ್ನು ಇನ್ನು ಮುಂದೆ ಬರುವ ಜನ್ಮಗಳಲ್ಲಿ ಅನುಭವಿಸುವುದಕ್ಕಾಗಿ ಸಂಚಿತವಾಗಿ ಸೃಷ್ಟಿಕರ್ತನಿಟ್ಟಿದ್ದಾನೆಂದು ಊಹಿಸುವ. ಈತನು ಈ ಜನ್ಮದಲ್ಲಿ ಹೆಚ್ಚು ಪಾಪವನ್ನು ಸಂಪಾದಿಸಿಕೊಂಡು ಬಂದಿರುವುದರಿಂದಲೇ, ವಿಶೇಷ ಕಷ್ಟ ಪಟ್ಟು ಕೂಲಿಮಾಡುವವರ ಗುಡಿಸಿಲಿನಲ್ಲಾಗಲಿ, ಇಲ್ಲವೇ ಚಳಿ, ಗಾಳಿ, ಮಳೆ, ಹಿಮ ಇವುಗಳನ್ನು ತಡೆಯುವ ಗುಡಿಸಲೂ ಇಲ್ಲದೆ, ಅಲ್ಲಲ್ಲಿರುವ ಮನೆಗಳ ಬೀದಿಜಗಲಿಗಳಮೇಲೆ ಇದ್ದು ಗಡಗಡನೆ ನಡುಗುತ್ತಾ ಭಿಕ್ಷಾನ್ನವನ್ನು ತಿಂದು ಜೀವಿಸುವವರ ಹೊಟ್ಟೆಯಲ್ಲಿಯಾಗಲಿ ಹುಟ್ಟಿ, ಯಾವಾಗಲೂ ವಿಶೇಷ ಕಷ್ಟವನ್ನನುಭವಿಸುವನು ಎಂದು ತಿಳಿಯಬೇಕು. ಈತನು ನಿದ್ರೆಕಾಲದಲ್ಲಿ ಹೊರತು ಉಳಿದ ಎಲ್ಲಾ ಕಾಲದಲ್ಲಿಯೂ ಹಸಿವಿನಿಂದಾಗಲಿ, ಅಥವಾ ಚಳಿಗಾಳಿಗೆ ಬಟ್ಟೆಗಳಿಲ್ಲವೆಂದಾಗಲಿ ಹೆಚ್ಚಾಗಿ ದುಃಖವನ್ನನುಭವಿಸುತ್ತಿರುವನು. ಎಪ್ಪತ್ತು ವರ್ಷಗಳಿಗಾಗಿ ಐದು ಮೂಟೆ ಪುಣ್ಯವಿರುವುದರಿಂದ, ಆಗಾಗ್ಗೆ ಒಂದೊಂದು ದಿನ ಸ್ವಲ್ಪ ಹಣ ದೊರಕಿ ಆ ಹಣಕ್ಕೆ ಸುರಾಪಾನವನ್ನು ಮಾಡಿ ಮಾಂಸಾದಿಗಳನ್ನು ಭುಜಿಸಿ ಆ ನಿಷಾ (ಮತ್ತು) ಫಲದಿಂದ ಸ್ವಲ್ಪ ಸಂತೋಷಪಡುತ್ತಿರುವನು ಎಂದು

ತಿಳಿಯಬೇಕು. ಇದೇ ರೀತಿಯೇ ಪ್ರತಿ ಮನುಷ್ಯನ ಪುಣ್ಯ ಪಾಪಕ್ಕನು ಗುಣವಾಗಿ ಆಯಾ ಶರೀರಗಳು ಬರುತ್ತಿರುತ್ತವೆ.

ಗೆಳೆಯರೇ! ಜೀವಿಗಳಿಗೆ ಅವರ ಸುಕೃತ ದುಷ್ಕೃತ ಕರ್ಮಗಳಿಗೆ ತಕ್ಕಂತೆ ಮೇಲುಕೀಳು ಜನ್ಮಗಳು ಬರುತ್ತಲೇ ಇರುತ್ತವೆ. ಅಂದರೆ ಮಹಾ ಧನಿಕರ ಮನೆಯಲ್ಲಿಯೋ ಕಡುಬಡವರ ಮನೆಯಲ್ಲಿಯೋ ಇಲ್ಲವೇ ಭಿಕ್ಷುಕರ ಮನೆಯಲ್ಲಿಯೋ ಅವರು ಹುಟ್ಟುತ್ತಿರುವರು. ಹೀಗೆ ಹುಟ್ಟಿದ ಸ್ತ್ರೀ ಪುರುಷರೆಲ್ಲರೂ ತಮ್ಮ ಭೂತಭವಿಷ್ಯದ್ವರ್ತಮಾನ ಅಂದರೆ ಹಿಂದೆ ಕಳೆದುಹೋದ, ಮುಂದೆ ತಮಗೆ ಬರುವ, ಈಗ ತಮಗೆ ಉಂಟಾಗಿರುವ ಜನ್ಮ ವಿಷಯಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ತಮ್ಮ ಈ ಮೂರು ಜನ್ಮಗಳನ್ನು ತಿಳಿದುಕೊಳ್ಳುವ ರೀತಿ ಈ ಕೆಳಗೆ ವಿವರಿಸಿದೆ.



# ಪುಣ್ಯವನ್ನು ಮಾಡಿದ ಒಬ್ಬನು ಆಲೋಚಿಸುವ ರೀತಿ.

ಪ್ರತಿ ಸ್ತ್ರೀಯೂ ಪುರುಷನೂ ಶಿಶುವಾಗಿದ್ದ ಮೊದಲನೇ ಹನ್ನೆರಡು ವರ್ಷಗಳವರಿವಿಗೂ ತಾವು ಮಾಡುತ್ತಬಂದ ಪುಣ್ಯಪಾಪಗಳೆಲ್ಲವೂ ಮೇಲೆ ಹೇಳಿದ ಸಂಚಿತವೆಂಬ ಪುಣ್ಯ ಪಾಪಗಳ ಮೂಟೆಗಳಲ್ಲಿ ಹೋಗಿ ಸೇರವು. ಹದಿಮೂರನೇ ಸಂವತ್ಸರದ ಮೊದಲು ಅವರು ಸಾಯುವ ವರಿವಿಗೂ ಮಾಡುತ್ತಬಂದ ಪುಣ್ಯಪಾಪಕರ್ಮಗಳೆಲ್ಲವೂ ಹಿಂದೆ ಹೇಳಿದ ಸಂಚಿತವೆಂಬ ಮೂಟೆಗಳಲ್ಲಿ ಹೋಗಿ ಸೇರುತ್ತವೆ. ತನ್ನ ಭೂತಭವಿಷ್ಯದ್ವರ್ತಮಾನ ಜನ್ಮಗಳನ್ನು ತಿಳಿಯುವುದಕ್ಕಾಗಿ ಒಬ್ಬನು ಈ ಕೆಳಗೆ ವಿವರಿಸಿರುವಂತೆ ಆಲೋಚಿಸುತ್ತಿದ್ದಾನೆ.

"ನಾನು ಹುಟ್ಟಿದುದು ಮೊದಲು ನನ್ನ ಹದಿಮೂರನೆಯ ವರ್ಷದಿಂದ ಇಂದಿನವರಿವಿಗೆ ಯಾವ ದುಷ್ಕೃತ್ಯಗಳನ್ನೂ ಮಾಡದೆ ಒಳ್ಳೆಯ ಕರ್ಮಗಳನ್ನೇ ನಡೆಸುತ್ತ ಬಂದಿದ್ದೇನೆ. ಆ ಕಾರ್ಯಗಳನ್ನು ಕುರಿತು ಈಗ ಸ್ವಲ್ಪ ಯೋಚಿಸುವ. ನಾನು ಹಿಂದಿನ ಜನ್ಮದಲ್ಲಿ ಪಾಪಕರ್ಮಗಳನ್ನು ಬಹಳ ಕಡಮೆಯಾಗಿಯೂ ಪುಣ್ಯ ಕೆಲಸಗಳನ್ನು ಹೆಚ್ಚಾಗಿಯೂ ಮಾಡಿರುವುದರಿಂದಲೇ ಈಗ ನಾನು ಧನಿಕರ ಮನೆಯಲ್ಲಿ ಜನ್ಮವೆತ್ತಿ ಯಾವ ಕಷ್ಟವೂ ಇಲ್ಲದೆ ಸುಖಜೀವನವನ್ನು ಮಾಡುತ್ತಿದ್ದೇನೆ. ಹಿಂದಿನ ಜನ್ಮದಲ್ಲಿ ನಾನು ಪುಣ್ಯವನ್ನು ಮಾಡದಿದ್ದಲ್ಲಿ ಇಂತಹರ ಮನೆಯಲ್ಲಿ ಹುಟ್ಟದೆ, ಕಡುಬಡವರ ಮನೆಯಲ್ಲಿಯೋ ಅಥವಾ ಕೂಲಿಗಾರರ ಮನೆಯಲ್ಲಿಯೋ ಹುಟ್ಟಿ ಅನ್ನಪಾನಾದಿಗಳಿಗೇ ಬಹಳ ಕಷ್ಟಪಡುತ್ತಿದ್ದೆನು. ಹಿಂದಿನ ಜನ್ಮದಲ್ಲಿ ಇನ್ನೂ ವಿಶೇಷವಾಗಿ ಪುಣ್ಯಮಾಡಿದ್ದೆನಾದರೆ ಈ ಜನ್ಮದಲ್ಲಿ ಇನ್ನೂ ಉತ್ತಮರಾದವರ ಮನೆಯಲ್ಲಿಯೇ ಹುಟ್ಟಿ ಇದಕ್ಕಿಂತಲೂ ಹೆಚ್ಚು ಸುಖವನ್ನನುಭವಿಸುತ್ತಿದ್ದೆನು ; ಮತ್ತು ಹೆಚ್ಚಾಗಿ ದಾನಧರ್ಮಾದಿ

ಕಾರ್ಯಗಳಲ್ಲಿ ತೊಡಗುತ್ತಿದ್ದೆನು. ಹಿಂದಿನ ಜನ್ಮದಲ್ಲಿ ಎಷ್ಟು ಪುಣ್ಯ ಮಾಡಿದ್ದೆನೋ ಅದಕ್ಕೆ ತಕ್ಕ ಜನ್ಮವು ನನಗೆ ಸಿಕ್ಕಿದೆ. ಇದರಿಂದ ಪ್ರತಿಯೊಬ್ಬನ ಜನ್ಮರಹಸ್ಯವು ಅವನವನ ಪೂರ್ವಜನ್ಮ ಕರ್ಮಫಲವನ್ನನುಸರಿಸಿದೆಯೆಂದು ತಿಳಿಯಬೇಕು. ಮತ್ತು ಎಲ್ಲರೂ ತಮಗೆ ದೊರಕಿದ ಜನ್ಮದಲ್ಲಿ ಹೆಚ್ಚು ಪುಣ್ಯವನ್ನು ಗಳಿಸುತ್ತ ಬರಬೇಕು.'' ಇಂತಹ ಪುಣ್ಯದಿಂದ ದೊರಕುವ ಫಲವು ಈ ಕೆಳಗೆ ವಿವರಿಸಿದೆ.

''ನನಗಿಂತಲೂ ಕಡಮೆ ಪುಣ್ಯ ಕರ್ಮಗಳನ್ನು ಮಾಡಿದವರು ನನಗೆ ದೊರಕಿದಂತಹ ಜನ್ಮವೂ ಸಿಕ್ಕದೆ ನಾನು ಅನುಭವಿಸುತ್ತಿರುವ ಸುಖವನ್ನೂ ಹೊಂದದೆ ನನಗಿಂತಲೂ ಕೀಳುಸ್ಥಿತಿಯಲ್ಲಿರುವರು. ಆದುದರಿಂದಲೇ ಅವರೊಡನೆ ಹೋಲಿಸಲು, ನನ್ನ ಸ್ಥಿತಿಯೇ ಉತ್ತಮವಾದದ್ದು ಎಂದು ನನ್ನ ಬುದ್ಧಿಗೆ ಹೊಳೆಯುತ್ತದೆ. ಹಿಂದಿನ ಜನ್ಮದಲ್ಲಿ ನಾನು ಪಾಪವನ್ನು ಮಾಡಿದ್ದೆನಾದರೆ ನನಗೆ ಇಂತಹ ಜನ್ಮವೂ ಸಿಕ್ಕದೆ, ಇಷ್ಟು ಸುಖವೂ ದೊರಕದೆ, ಕೀಳು ಜನ್ಮವು ಸಿಕ್ಕಿ, ಕಷ್ಟವನ್ನನುಭವಿಸಬೇಕಾಗುತ್ತಿತ್ತೆಂದು ನನಗೆ ತೋರುತ್ತದೆ. ಈ ಜನ್ಮದಲ್ಲಿ ಇದುವರಿವಿಗೂ ನಾನು ಮಾಡಿದ ಪುಣ್ಯವನ್ನು ಕುರಿತು ಸ್ವಲ್ಪ ಆಲೋಚಿಸೋಣ.

''ಈಗ ನನಗೆ ಎಪ್ಪತ್ತು ವರ್ಷಗಳು ತುಂಬುತ್ತವೆ. ನಾನು ಹುಟ್ಟಿದ ಮೇಲೆ ಹನ್ನೆರಡುವರ್ಷಗಳ ವರಿವಿಗೂ ನಡೆಸಿದ ಕರ್ಮಗಳನ್ನು ಕುರಿತು ಯೋಚಿಸಲು, ಎಲ್ಲವೂ ಸ್ವಪ್ನದಲ್ಲಿ ಕಂಡಂತೆ ಕೆಲವು ತೋಚಿಯೂ ಕೆಲವು ತೋಚದೆಯೂ ಇವೆ. ಹದಿಮೂರನೇ ವರ್ಷದ ಮೊದಲು ಎಪ್ಪತ್ತನೇ ವರ್ಷದ ವರಿವಿಗೆ ನಾನು ಮಾಡುತ್ತ ಬಂದ ಕಾರ್ಯಗಳನ್ನು ಯೋಚಿಸಲು ಎಲ್ಲವೂ ಸ್ಪಷ್ಟವಾಗಿ ಕಾಣಬರುತ್ತವೆ. ನಾನು ಹುಟ್ಟಿ ಐದುವರ್ಷಗಳು ಕಳೆದ ನಂತರ ನಮ್ಮ ತಾಯಿತಂದೆಗಳು ನನ್ನನ್ನು ಪಾಠಶಾಲೆಗೆ ಕಳುಹಿಸಿದರು. ಐದನೇ ವರ್ಷದಿಂದ ಹನ್ನೆರಡನೇ ವಯಸ್ಸಿನ ವರಿವಿಗೂ ಮಾಡುತ್ತಬಂದ ಕಾರ್ಯಗಳನ್ನು ಯೋಚಿಸಿನೋಡಲು ಕೆಲವು ಜ್ಞಾಪಕವಿವೆ ಮತ್ತೆ ಕೆಲವು ಮರೆತಿವೆ. ನನ್ನ ಹದಿಮೂರನೇ ಸಂವತ್ಸರ

ದಿಂದ ಇಂದಿನ ವರಿವಿಗೂ ಮಾಡಿದ ಕರ್ಮಗಳಾದರೋ ಎಲ್ಲವೂ ಜ್ಞಾಪಕ ದಲ್ಲಿವೆ. ಆದುದರಿಂದ ಅವೆಲ್ಲವನ್ನೂ ಈಗ ಆಲೋಚಿಸಿ ನೋಡೋಣ.

"ನಾನು ಬಾಲ್ಯದಲ್ಲಿ ಪಾಠಶಾಲೆಗೆ ಹೊರಡುವಾಗ ಪ್ರತಿದಿನವೂ ನಮ್ಮ ತಾಯಿ ನನಗೆ ಒಂದು ದೊಡ್ಡಾಣೆ (ಎರಡಾಣೆ)ಯೋ ಅಥವಾ ಪಾವಲೆ (ನಾಲ್ಕಾಣೆ)ಯೋ ಕೊಡುತ್ತಿದ್ದ ಪದ್ಧತಿ. ಈ ರೊಕ್ಕದಲ್ಲಿ ನಾನು ಸ್ವಲ್ಪವನ್ನು ತಿಂಡಿಗಾಗಿ ವ್ಯಯಮಾಡಿ ಉಳಿದುದನ್ನು ಭಿಕ್ಷುಕರೇ ಮೊದಲಾದವರಿಗೆ ದಾನಮಾಡುತ್ತಿದ್ದೆನು. ಹೀಗೆ ಆಗಾಗ್ಗೆ ನನಗೆ ಸಿಕ್ಕುತ್ತಿದ್ದ ಈ ಹಣದಲ್ಲಿ ಸ್ವಲ್ಪ ಭಿಕ್ಷುಕರಿಗೂ, ಸ್ವಲ್ಪ ಸಾಧುಗಳಿಗೂ, ಸ್ವಲ್ಪ ಫಕೀರರಿಗೂ ಕೊಟ್ಟು ಉಳಿದ ಹಣಕ್ಕೆ ತಿಂಡಿಯನ್ನು ಕೊಂಡು, ತಿಂಡಿಯಿಲ್ಲದೆ ಅಲೆಯುತ್ತಿರುವ ಬೀದಿ ನಾಯಿಗಳಿಗೂ ಹಾಕುತ್ತಿದ್ದೆನು. ಮತ್ತು ಭಿಕ್ಷುಕರು ಯಾರೇ ಆಗಲಿ ಹಸಿವೆಂದು ನನ್ನನ್ನು ಯಾಚಿಸಿದ್ದೇ ಆದರೆ ಅವರನ್ನು ನಮ್ಮ ಮನೆಗೆ ಒಯ್ದು, ನಮ್ಮ ತಾಯಿಗೆ ಈ ವಿಷಯವನ್ನು ತಿಳಿಸಿ, ಅವರಿಗೆ ಹೊಟ್ಟೆತುಂಬ ಅನ್ನವನ್ನು ಕೊಡಿಸುತ್ತಿದ್ದೆನು. ಯಾರಾದರೂ ಬಡವರು ವಸ್ತ್ರವನ್ನು ಯಾಚಿಸಲು ಹಾಗೆಯೇ ನಮ್ಮ ತಾಯಿಯವರಿಂದ ಹಳೆಯ ಬಟ್ಟೆಗಳನ್ನು ಕೊಡಿಸುತ್ತಿದ್ದೆನು. ಬಡ ಹೆಂಗಸರಿಗೆ ಸೀರೆಗಳನ್ನು ಕೊಡಿಸುವ ಪದ್ಧತಿಯಿತ್ತು. ಹೀಗೆ ನಾನು ಬಾಲ್ಯದಿಂದ ಬಿ. ಎ. (B.A.) ಪರೀಕ್ಷೆ ಮಾಡುವ ವರಿವಿಗೂ ಭೂತದಯೆ ಪಶ್ಚಾತ್ತಾಪವು ನನಗೆ ಹೆಚ್ಚಾಗಿದ್ದುದರಿಂದ ಈ ಮೇಲೆ ಹೇಳಿದ ರೀತಿಯಲ್ಲಿಯೇ ದಾನ ಧರ್ಮಗಳನ್ನು ನಡೆಸುತ್ತ ಬರುತ್ತಿದ್ದೆನಲ್ಲದೆ ಯಾರು ಯಾರು ತಮಗಿಲ್ಲವೆಂದು ಯಾವ ವಸ್ತುವನ್ನು ಅಪೇಕ್ಷಿಸಿ ಯಾಚಿಸಿದರೂ ನನ್ನ ಶಕ್ತಿಗೆ ತಕ್ಕಂತೆ ಅದನ್ನು ಅವರಿಗೆ ಕೊಟ್ಟು ಸಹಾಯ ಮಾಡುತ್ತಿದ್ದೆನು.

"ನಾನು ಬಿ ಎ. ವ್ಯಾಸುಮಾಡಿದ ತರುವಾಯ ನಮ್ಮ ತಾಯಿತಂದೆಗಳು 'ಬಿ. ಎಲ್. ಪರೀಕ್ಷೆಗೆ ಓದು' ಎಂದು ಹೇಳಿದರು. ಈ ಪರೀಕ್ಷೆನಾಡಿದರೆ ವಕೀಲುಕೆಲಸಕ್ಕೆ ತಾನೇ ಕೈಹಚ್ಚಬೇಕು. ಅಬ್ಬಬ್ಬಾ! ವಕೀಲು ಕೆಲಸವು ಹೆಚ್ಚು ಪಾಪಕರವಾದದ್ದು. ಹೇಗೆಂದರೆ, ತನ್ನ ಕೇಸು (ತಾನು ಹಿಡಿದಿರುವ ವ್ಯವಹಾರವು) ಗೆಲ್ಲಬೇಕೆಂಬ ಇಚ್ಛೆಯಿಂದ ಅದಕ್ಕೆ ಬೇಕಾದ

ಸುಳ್ಳುಗಳನ್ನು ಜೊತೆಮಾಡಿ ಹೇಳಬೇಕೆಂದು ಸಾಕ್ಷಿಗಳಿಗೆ ಬೋಧಿಸಿ, ಆ ತಪ್ಪುಸಾಕ್ಷಿಯಿಂದ ಕೇಸು (ವ್ಯವಹಾರ) ಗಳನ್ನು ಜಯಿಸಬೇಕಾಗುತ್ತದೆ ಹೀಗೆ ಮಾಡದಿದ್ದಲ್ಲಿ ವಕೀಲರಿಗೆ ಒಂದು ದೊಡ್ಡಾಣೆಯೂ ದೊರಕದು ಸುಳ್ಳುಸಾಕ್ಷಿಗಳಿಂದ ಕೇಸುಗಳನ್ನು ಜಯಿಸಿದ್ದೇ ಆದರೆ, ಈ ವಕೀಲ ತುಂಬಾ ಗಟ್ಟಿಗನು ಎಂಬ ದೊಡ್ಡ ಹೆಸರು ಬರುತ್ತದೆ; ಮತ್ತು ಇದ ರಂತೆಯೇ ಅನೇಕ ಕೇಸುಗಳು ಇವನ ಹತ್ತಿರ ಬರುತ್ತವೆ. ಹೀಗೆ ಕೇಸು ಗಳು ಬರುತ್ತ ಬರುತ್ತ ಪ್ರತಿದಿನವೂ ಅವಕ್ಕೆ ಬೇಕಾದ ಸುಳ್ಳುಗಳನ್ನು ಸೇರಿಸಿ ಅವುಗಳಿಂದ ವ್ಯವಹಾರಗಳನ್ನು ಗೆದ್ದು, ಅದರಿಂದುಂಟಾದ ಪಾಪಕರ್ಮಗಳನ್ನು ಅನುಭವಿಸುವುದಕ್ಕಾಗಿ ಬೇರೆ ಜನ್ಮದಲ್ಲಿ ಎಂತಹ ಶರೀರವು ಬರುತ್ತದೆಯೋ ತಿಳಿಯದು. ಛೀ! ಛೀ! ಬಿ.ಎಲ್. ಪರೀಕ್ಷೆಗೆ ಓದಿ ತೇರ್ಗಡೆಯಾಗುವುದರಿಂದ ಪ್ರತಿದಿನವೂ ಸುಳ್ಳುಹೇಳುವುದರ ಪಾಪ ವನ್ನು ಗಳಿಸಿ ಮೂಟೆ ಹೊತ್ತುಕೊಂಡು ಮುಂದಿನ ಜನ್ಮದಲ್ಲಿ ದುಃಖವ ನ್ನನುಭವಿಸಬೇಕಾಗುವುದು. ಆದುದರಿಂದ ಆ ಪರೀಕ್ಷೆಗೆ ವ್ಯಾಸಂಗ ಮಾಡಬಾರದು.

"ಇನ್ನು ಮೇಲೆ ಗೌರ್ನಮೆಂಟ್ (ಸರ್ಕಾರಿ) ಉದ್ಯೋಗಕ್ಕೆ ಸೇರಿ, ಅದರಿಂದ ಬರುವ ತಲಬಿನಿಂದ ನನ್ನ ಕುಟುಂಬ ರಕ್ಷಣೆಯನ್ನು ಮಾಡಿ ಕೊಳ್ಳುತ್ತ, ಮತ್ತು ತಕ್ಕ ಮಟ್ಟಿಗೆ ಅಂದರೆ ಶಕ್ತಿಗನುಗುಣವಾಗಿ ದಾನ ಧರ್ಮಾದಿಗಳನ್ನು ಮಾಡುತ್ತ ಬಂದರೆ ನನಗೆ ಪಾಪವೂ ಉಂಟಾಗುವು ದಿಲ್ಲ ಮತ್ತು ಮುಂದಿನ ಜನ್ಮದಲ್ಲಿ ಉತ್ತಮ ಗತಿಯನ್ನು ತರುವ ಪುಣ್ಯವೂ ಉಂಟಾಗುತ್ತದೆ. ಈಗ, ಬಿ.ಎ. ಪ್ಯಾಸ್ ಮಾಡಿದುದು ಸಾಕೆಂದು ತೃಪ್ತಿ ಪಟ್ಟು ಸರ್ಕಾರಿ ಉದ್ಯೋಗಕ್ಕೆ ಸೇರಿದೆನು. ಸೇರಿದ ನಂತರ ನಾನು ನನ್ನ ಮೇಲ್ಪಟ್ಟ ಅಧಿಕಾರಿಗಳ ಮನಸ್ಸನ್ನನುಸರಿಸಿಕೊಂಡು ಅವರ ಪ್ರೀತಿಗೆ ಪಾತ್ರನಾಗಿ ಅವರ ಸಹಾಯದಿಂದಲೂ ಮತ್ತು ನನ್ನ ಪೂರ್ವಜನ್ಮ ಪುಣ್ಯ ಕರ್ಮಫಲದಿಂದಲೂ ನನ್ನ ಕೆಲಸವು ಹೆಚ್ಚುತ್ತ ಹೆಚ್ಚುತ್ತ, ಕಡೆಗೆ ನನಗೆ ಡೆಪ್ಯುಟಿ ಕಲೆಕ್ಟರ್ (ಜಿಲ್ಲಾ ದ್ವಿತೀಯಾಧಿಕಾರಿ) ಕೆಲಸವು ದೊರಕಿತು. ಆ ಉದ್ಯೋಗದಲ್ಲಿ ನಾನು ಲಂಚ ಮೊದಲಾದ ಅಕ್ರಮವಾದ ಸಂಪಾ

ದನೆಗೆ ಗಮನವಿಡದೆ, ಸುಳ್ಳುಹೇಳದೆ, ಸತ್ಯದ ಹಾದಿಯಲ್ಲಿಯೇ ನಡೆಯುತ್ತಿದ್ದುದರಿಂದಲೂ ನನಗೆ ಬರುತ್ತಿದ್ದ ಮೂರುನೂರಐವತ್ತು ರೂಪಾಯಿಗಳೊಳಗೆ ಕುಟುಂಬ ಪೋಷಣೆಗೆ ಬೇಕಾದ ಹಣವನ್ನು ಬಿಟ್ಟು ಉಳಿದುದನ್ನು ಒಟ್ಟುಸೇರಿಸಿ ಅವುಗಳನ್ನು ನನ್ನ ಸಂತತಿಯವರಿಗೆ ಉಳಿಸದೆ ಒಂದು ಸಣ್ಣ ಅನ್ನಸತ್ರವನ್ನು ಕಟ್ಟಿಸಿ ಅನ್ನದಾನವನ್ನೂ, ಸಾಧುಗಳಿಗೆ ಸ್ವಯಂಪಾಕವನ್ನೂ ಅಂದರೆ ಅವರಿಗೆ ಬೇಕಾದ ಗೋಧಿಹಿಟ್ಟು, ಸಕ್ಕರೆ, ತುಪ್ಪ, ತೊಗರೀಬೇಳೆ, ಅಡಿಗಬ್ಬು (ಸೌದೆ), ಒಂದಾಣೆ ದಕ್ಷಿಣೆ, ಇವೆಲ್ಲವನ್ನೂ ನಿರಂತರವಾಗಿ ನಡೆಯಬೇಕೆಂಬ ಉದ್ದೇಶದಿಂದ ಒಂದು ನಿಧಿಯನ್ನು (Fund) ಏರ್ಪಡಿಸಿದೆನು. ಇದೂ ಅಲ್ಲದೆ, ವಸ್ತ್ರಗಳಿಲ್ಲದೆ ದುಃಖಿಸುತ್ತಿರುವ ಬಡ ಭಿಕ್ಷುಕ ಸ್ತ್ರೀಪುರುಷರಿಗೆ ತಕ್ಕ ಸೀರೆ-ಕುಪ್ಪಸಗಳು, ಪಂಚೆ-ಕೋಟುಗಳು ಇವೇ ಮೊದಲಾದುವುಗಳನ್ನು ಕೊಡಿಸುವ ಸಿಸ್ತು ಮಾಡಿದ್ದೆನು. ಹಸಿವಿನಿಂದ ದುಃಖಿಸುವವರನ್ನು ನೋಡಿ "ಅಯ್ಯೋ ಪಾಪ" ಎಂದು ಮನಕರಗಿ ಎಷ್ಟೋ ವೇಳೆ ನಾನು ಭುಜಿಸಬೇಕೆಂದಿದ್ದ ಅನ್ನವನ್ನೂ ಅವರಿಗೆ ಕೊಟ್ಟುಬಿಟ್ಟು ನಾನು ಉಪವಾಸವಿರುತ್ತಿದ್ದೆನು. ಈಗ ನನಗೆ ವಯಸ್ಸು ಎಪ್ಪತ್ತಾಗಿದೆ. ಇನ್ನು ಅಂತಕಾಲವು (ಮರಣ ಸಮಯವು) ಸಮೀಪಿಸಿತು. ಹದಿಮೂರನೆಯ ಸಂವತ್ಸರದ ಮೊದಲು ಈ ದಿನದವರಿವಿಗೂ ನಾನು ಪುಣ್ಯಕಾರ್ಯಗಳನ್ನು ಮಾಡುತ್ತಿದ್ದೆನೇ ಇಲ್ಲವೇ ಪಾಪ ಕಾರ್ಯಗಳನ್ನು ಮಾಡುತ್ತಿದ್ದೆನೇ ಎಂಬುದನ್ನು ಸ್ವಲ್ಪ ಯೋಚಿಸೋಣ.

"ನಾನು ಹಿಂದಿನ ಜನ್ಮದಲ್ಲಿ ಹೆಚ್ಚೇ ಆಗಲಿ ಅಥವಾ ಕಡಿಮೆಯೇ ಆಗಲಿ ಪಾಪವನ್ನು ಮಾಡಿದ್ದಲ್ಲಿ, ಈ ಜನ್ಮದಲ್ಲಿ ಈ ಮನೆಯಲ್ಲಿ ಹುಟ್ಟದೆ, ಕುಡಿಯುವುದಕ್ಕೆ ಅಂಬಲಿಯೂ, ಹೊದೆಯುವುದಕ್ಕೆ ಬಟ್ಟೆಯೂ ಇಲ್ಲದೆ ಕಡುಬಡವರ ಮನೆಯಲ್ಲಿ ಹುಟ್ಟಿ ದುಃಖವನ್ನನುಭವಿಸುತ್ತಿದ್ದೆನು. ನಾನು ಆ ಜನ್ಮದಲ್ಲಿ ಸ್ವಲ್ಪ ಪುಣ್ಯ ಕರ್ಮಗಳನ್ನು ಮಾಡಿರುವುದರಿಂದಲೇ ನನಗೆ ಈ ವಿಧವಾದ ಹಣವಂತರ ಮನೆಯಲ್ಲಿನ ಜನ್ಮವು ಸಿಕ್ಕಿತು. ಈ ವಿಷಯವು ಹಿಂದೆ ವಿಸ್ತರಿಸಿದೆ. ಹೀಗೆ ನನ್ನ ಬುದ್ಧಿಬಲದಿಂದ ಹಿಂದಿನ ಜನ್ಮದಲ್ಲಿ ಪುಣ್ಯಮಾಡಿದ್ದೆನೆಂದು ತಿಳಿದೆನೇ ಹೊರತು, ಆಗ ಯಾವ ಜಾತಿಯಲ್ಲಿ

ಯಾರ ಮನೆಯಲ್ಲಿ ಹುಟ್ಟಿದ್ದೆನೆಂಬುದನ್ನು ತಿಳಿಯಲಾರದೆ ಹೋದೆನು. ಏತಕ್ಕೆಂದರೆ ನಾನು ಮಾಯೆಯೆಂಬ ತೆರೆಯಲ್ಲಿ ಮುಚ್ಚಲ್ಪಟ್ಟಿದ್ದೇನೆ. ಎಂದು ಈ ಮಾಯೆಯೆಂಬ ತೆರೆಯಿಂದ ತಪ್ಪಿಸಿಕೊಳ್ಳುವೆನೋ ಅಂದು ನನ್ನ ಪೂರ್ವಜನ್ಮವೃತ್ತಾಂತವನ್ನು ಸುಲಭವಾಗಿ ತಿಳಿದುಕೊಳ್ಳಬಲ್ಲೆನು. ಇನ್ನು ಮುಂದೆ ಎಂತಹ ಜನ್ಮವು ನನಗೆ ಸಿಗುತ್ತದೆಯೋ ಆ ವಿಚಾರವನ್ನು ಸ್ವಲ್ಪ ಪರಿಶೀಲಿಸಿ ನೋಡುವ.

ನಾನು ಬಾಲ್ಯದಿಂದಲೂ ಬಿ. ಎ. ಪ್ಯಾಸ್ ಮಾಡುವವರಿಗೂ ನಮ್ಮ ತಾಯಿ ನನ್ನ ಖರ್ಚಿಗಾಗಿ ಆಗಾಗ ಕೊಡುತ್ತಿದ್ದ ಹಣದಲ್ಲಿ ನಾನು ಸ್ವಲ್ಪವಾಗಿ ವ್ಯಯಮಾಡಿ ಉಳಿದ ಹಣವನ್ನು ಸಾಧುಗಳಿಗೂ ದುಃಖಿತರಿಗೂ ಕೊಟ್ಟು ಅವರ ಹಸಿವನ್ನು ತೀರಿಸಿದೆನು. ನಂತರ ಸರ್ಕಾರಿ ಉದ್ಯೋಗಕ್ಕೆ ಸೇರಿ ಅದರಿಂದ ಬಂದ ಸಂಬಳದಲ್ಲಿ ಮನೆಖರ್ಚು ಹೋಗಿ ಉಳಿದ ಹಣವನ್ನು ಶೇಖರಿಸಿ ಆದರಿಂದ ಸತ್ರಕಟ್ಟಿಸಿ, ಅನ್ನದಾನಾದಿಗಳೂ ಸಾಧುಗಳ ಸೇವೆ ಇವುಗಳೂ ಮಾಡಿದುದಲ್ಲದೆ ಬಡಬಗ್ಗರಿಗೆ ವಸ್ತ್ರಾದಿಗಳ ದಾನವನ್ನೂ ಮಾಡಿದೆನು ಮತ್ತು ಹಸಿದು ಬಂದವರ ಹಸಿವನ್ನು ಹೋಗಲಾಡಿಸಿದೆನು. ನನಗೆ ಬುದ್ಧಿ ತಿಳಿದುದು ಮೊದಲು ಇಂದಿನವರಿವಿಗೂ ಪುಣ್ಯಕರ್ಮಗಳನ್ನೇ ನಡೆಸುತ್ತಾ ಬಂದಿದ್ದೇನೆಯೇ ಹೊರತು ಪಾಪಕರ್ಮಗಳನ್ನು ಮಾಡಲಿಲ್ಲವು. ಒಳ್ಳೆಯದು, ನಾನು ನನ್ನ ಹದಿಮೂರನೆಯ ವಯಸ್ಸಿನಿಂದ ಇದುವರಿವಿಗೆ ಏನಾದರೂ ಪಾಪಕರ್ಮವನ್ನು ಮಾಡಿದ್ದೇನೆಯೇ ಎಂಬುದನ್ನು ಸ್ವಲ್ಪ ಯೋಚಿಸೋಣ.

ನಾನು ಚಿಕ್ಕಂದಿನಿಂದ ಇದುವರಿವಿಗೂ ಏನಾದರೂ ಪಾಪಕರ್ಮವನ್ನು ಮಾಡಿದ್ದೇನೆಯೇ ಎಂಬ ವಿಷಯವನ್ನು ಎರಡು ದಿನಗಳಿಂದ ಆಲೋಚಿಸಿದೆನು. ನನ್ನ ಹದಿಮೂರನೆಯ ವರ್ಷದಿಂದ ಎಪ್ಪತ್ತನೇ ವರ್ಷದವರಿವಿಗೆ ಯಾವ ಪಾಪಕರ್ಮವನ್ನೂ ಬುದ್ಧಿಪೂರ್ವಕವಾಗಿ ಮಾಡಿದೆನೆಂಬ ನೆನಪೇ ನನಗಿಲ್ಲ. ಆದುದರಿಂದ ಇನ್ನು ಮುಂದೆ ನನಗುಂಟಾಗುವ ಜನ್ಮದಲ್ಲಿ ನಾನು ಈ ಹುಟ್ಟಿದ ಮನೆಗಿಂತಲೂ ಹೆಚ್ಚಾದ ಧನಿಕರ ಮನೆಯಲ್ಲಿ ಹುಟ್ಟುವೆನೇ ಹೊರತು, ಈಗ ಹುಟ್ಟಿದ ಅಥವಾ ಇದಕ್ಕಿಂತ ಕೀಳಾದವರ ಮನೆಯಲ್ಲಿ ನಾನು ಹುಟ್ಟೆನು ಎಂಬುದು ಸ್ಪಷ್ಟವಾಗಿ ತಿಳಿಯಬರುತ್ತದೆ. ನಾನು ಹಿಂದಿನ ಜನ್ಮದಲ್ಲಿ ಸ್ವಲ್ಪ ಪುಣ್ಯ

ಮಾಡಿದ್ದರಿಂದ ಆ ಪುಣ್ಯಕ್ಕನುಗುಣವಾಗಿ ಈ ಜನ್ಮದಲ್ಲಿ ಅಲ್ಪ ಸ್ವಲ್ಪ ಧನಿಕರ ಮನೆಯಲ್ಲಿ ಜನ್ಮಿಸಿದ್ದು, ಈ ಜನ್ಮದಲ್ಲಿ ನನ್ನ ಹೆಂಡತಿ ಮಕ್ಕಳಿಗೂ ಕೂಡ ನಾನು ಸಂಪಾದಿಸಿದ ಆಸ್ತಿಯನ್ನಿಡದೆ, ಎಲ್ಲವನ್ನೂ ದಾನಧರ್ಮ ಗಳಿಗಾಗಿಯೇ ವ್ಯಯಮಾಡಿದೆನು. ನಾನು ಮಾಡಿದ ಇಂತಹ ಧರ್ಮ ಸೇವೆಯಿಂದ ಕಳೆದ ಜನ್ಮದಲ್ಲಿ ನಾನು ಮಾಡಿದ ಪುಣ್ಯಕ್ಕಿಂತಲೂ ಅಧಿಕ ವಾಗಿ ಪುಣ್ಯವುಂಟಾಗಿದೆಯೆಂಬುದು ನನಗೆ ತೋರುತ್ತದೆ. ನಾನು ಈಗ ಮೃತಿ ಹೊಂದಿದರೆ ನನಗೆ ಬರಬಹುದಾದ ಜನ್ಮದಲ್ಲಿ ಇದಕ್ಕಿಂತಲೂ ಅಧಿಕ ಧನಿಕರ ಮನೆಯಲ್ಲಿ ಹುಟ್ಟುವೆನೆಂದು ನನ್ನ ಬುದ್ಧಿಯಿಂದ ತಿಳಿದು ಕೊಂಡೆನು. ಇದೂ ಅಲ್ಲದೆ ಈ ಜನ್ಮದಲ್ಲಿ ಉದ್ದಿಶ್ಯವಾದ ಪಾಪಕಾರ್ಯ ವನ್ನೇ ಮಾಡಿಲ್ಲವಾಗಿ ಮುಂದಿನ ಜನ್ಮದಲ್ಲಿ ಜ್ವರ, ತಲೆನೋವು ಮೊದ ಲಾದ ರೋಗಬಾಧೆಗಳು ಯಾವವೂ ಇಲ್ಲದೆ ನಾನು ಸುಖವಾಗಿರುತ್ತೇನೆ ಮತ್ತು ನನಗೆ ಅನಾಯಾಸ ಮರಣವು ದೊರಕುತ್ತದೆಂದು ನನ್ನ ನಂಬಿಕೆ. ಪಾಪಕರ್ಮ ಮಾಡಿದ್ದೇ ಆದರೆ ಅದಕ್ಕೆ ತಕ್ಕಂತೆ ಸಾಧಾರಣ ಅಥವ ವಿಶೇಷ ರೋಗಗಳು ಸಂಭವಿಸುತ್ತವೆಯಾದುದರಿಂದ, ಮುಂದಿನ ಜನ್ಮದಲ್ಲಿ ರೋಗಗಳಿಲ್ಲದೆ ಸುಖಪಡಬೇಕೆಂದಿರುವವರು ಯಾರೂ ಎಷ್ಟು ಚಿಕ್ಕದೇ ಆಗಲಿ ಆ ಪಾಪಕಾರ್ಯವನ್ನು ಮಾಡಬಾರದು.

ಈ ಗ್ರಂಥವನ್ನು ಪಠಿಸುವ ಒಬ್ಬೊಬ್ಬ ಸ್ತ್ರೀಪುರುಷರೂ ಅವರವರು ಈಗ ಅನುಭವಿಸುತ್ತಿರುವ ಸ್ಥಿತಿಯನ್ನರಿತು ಪೂರ್ವಜನ್ಮಕರ್ಮಫಲದಿಂದ ಈ ಸ್ಥಿತಿ ತಮಗೊದಗಿದೆಯೆಂದೂ ಈ ಜನ್ಮದಲ್ಲಿನ ಪುಣ್ಯ ವಿಶೇಷಗಳಿಂದ ಮುಂದೆ ಸಂಭವಿಸುವ ಜನ್ಮದಲ್ಲಿ ಎಂತಹ ಸ್ಥಿತಿಯು ತಮಗೆ ದೊರಕುವು ದೆಂದೂ ತಮ್ಮಷ್ಟಕ್ಕೆತಾವೇ ಯೋಚಿಸಿ ತಿಳಿದುಕೊಳ್ಳಬಹುದು. ಇಷ್ಟು ಹೊತ್ತೂ ಪುಣ್ಯಮಾಡಿದವನ ವಿಷಯವನ್ನು ಕುರಿತು ಹೇಳಿದ್ದಾಯಿತು." ಇನ್ನುಮೇಲೆ ಈ ಗ್ರಂಥವನ್ನು ಪಠಿಸುವವರೆಲ್ಲರೂ ಇನ್ನುಮುಂದೆ ಪುಣ್ಯ ಕಾರ್ಯಗಳನ್ನು ಮಾಡುತ್ತಾಬಂದರೆ ಮುಂದಿನ ಜನ್ಮದಲ್ಲಿ ಮೇಲ್ಮೆಯನ್ನು ಹೊಂದುವಿರಿ. ಪಾಪಮಾಡಿದವನ ವಿಷಯವು ಹೇಳಲ್ಪಡುತ್ತದೆ. ಅಂದರೆ ಈ ಜನ್ಮದಲ್ಲಿ ಮಹಾ ಪಾಪಕರ್ಮಗಳನ್ನು ಮಾಡಿದ ಒಬ್ಬನು ಈ ಮುಂದೆ ಹೇಳುವರೀತಿಯಾಗಿ ತನ್ನ ವಿಷಯವನ್ನು ಹೇಳಿಕೊಳ್ಳುತ್ತಿದ್ದಾನೆ.

# ಪಾಪವನ್ನು ಮಾಡಿದ ಒಬ್ಬನು ಆಲೋಚಿಸುವ ಬಗೆ.

---

"ಅಯ್ಯಾ, ನಾನು ಕಳೆದ ಜನ್ಮದಲ್ಲಿ ಏನೋ ಸ್ವಲ್ಪ ಪುಣ್ಯ ಮಾಡಿದ್ದೆನಾದುದರಿಂದಲೇ, ಬಹಳ ಬಡವನಾಗಿಯೂ, ಕಷ್ಟಜೀವಿಯಾಗಿಯೂ ಇಲ್ಲದೆ ಮಧ್ಯಮ ತರಗತಿಗೆ ಸೇರಿದವರ ಮನೆಯಲ್ಲಿ ಹುಟ್ಟಿದೆನು. ಹುಟ್ಟಿದುದು ಮೊದಲು ಹನ್ನೆರಡು ವರ್ಷಗಳ ವರಿವಿಗೆ ನಾನು ಬಾಲನಾಗಿದ್ದೆನು. ಆಗ ನಾನು ಏನು ಕಾರ್ಯಗಳನ್ನು ಮಾಡಿದ್ದೆನೋ ಅವು ನನಗೆ ಜ್ಞಾಪಕವಿಲ್ಲ. ಈಗ ನನಗೆ ವಯಸ್ಸು ಐವತ್ತೈದು ನಡೆಯುತ್ತಿದೆ. ನನ್ನ ಹದಿಮೂರನೇ ಸಂವತ್ಸರ ಮೊದಲುಗೊಂಡು ಇದುವರಿವಿಗೂ ನಾನು ಮಾಡಿದ ಕಾರ್ಯಗಳನ್ನು ಯೋಚಿಸಿದರೆ ಎಲ್ಲವೂ ನೆನಪಿಗೆ ಬರುತ್ತದೆ. ನಾನು ಮಾಡಿದ ಎಲ್ಲ ಕರ್ಮಗಳೂ ಕೆಟ್ಟವುಗಳೇ ಹೊರತು ಅವುಗಳಲ್ಲಿ ಒಳ್ಳೆಯದೊಂದೂ ಇಲ್ಲ. ಹೇಗೆಂದರೆ:—

"ನಾನು ಚಿಕ್ಕಂದಿನಲ್ಲಿ ಪಾಠಶಾಲೆಯಲ್ಲಿ ಓದುತ್ತಿದ್ದಾಗ ಇತರ ಹುಡುಗರ ಪುಸ್ತಕಗಳು, ಕಪ್ಪುಹಲಗೆಗಳು, ಕೊಡೆಗಳು ಮೊದಲಾದುವುಗಳನ್ನು ಕದ್ದುಕೊಂಡು ಹೋಗಿ ಅವನ್ನು ಮಾರಿ ತಿಂಡಿಯನ್ನು ಕೊಂಡು ತಿನ್ನುತ್ತ ಬಂದೆನು. ಹೀಗೆ ಹದಿನಾರನೆಯ ವರ್ಷದವರಿವಿಗೂ ಮಠದಲ್ಲಿ ಓದಿದನಂತರ ವಿದ್ಯಾಭ್ಯಾಸವನ್ನು ಮುಗಿಸಿಬಿಟ್ಟೆನು. ತರುವಾಯ ಚಿಲ್ಲರೆ ಸಾಮಾನು ಮಾರುವ ಅಂಗಡಿಯಲ್ಲಿ ಕೆಲಸ ಕಲಿಯುವುದಕ್ಕಾಗಿ ನನ್ನನ್ನು ನನ್ನ ತಾಯಿತಂದೆಗಳು ಅಲ್ಲಿಗೆ ಕರೆದುಕೊಂಡು ಹೋಗಿಬಿಟ್ಟು, "ಅಯ್ಯಾ, ಈ ನಮ್ಮ ಮಗನನ್ನು ನಿಮ್ಮ ಮಳಿಗೆಯಲ್ಲಿ ಕೆಲಸ ಕಲಿಯುವುದಕ್ಕಾಗಿ ಬಿಡುತ್ತೇವೆ. ಚನ್ನಾಗಿ ಕೆಲಸ ಕಲಿತನಂತರ ಇವನಿಗೆ ಏನಾದರೂ ಸಂಬಳವನ್ನು ಗೊತ್ತುಮಾಡಿ," ಎಂದು ಆ ಅಂಗಡಿ ಯಜಮಾನನಿಗೆ ಹೇಳಿ ನನ್ನನ್ನು ಆತನಿಗೆ ಒಪ್ಪಿಸಿದರು. ನಾನು ಆ ಮಳಿಗೆ ಸೇರಿದ ಮೊದಲು ಅಲ್ಲಿನ ಸರಕುಗಳನ್ನು ಮಾರಿ ಬಂದ ದುಡ್ಡನ್ನು ಗಲ್ಲಾ ಪೆಟ್ಟಿಗೆಯಲ್ಲಿ

ಹಾಕುತ್ತಿದ್ದುದನ್ನು ನೋಡುತ್ತ ನೋಡುತ್ತ ದುಡ್ಡಿನ ಮೇಲೆ ನನಗೆ ಆಸೆ ಹುಟ್ಟಿತು. ಆಸೆಗೆ ತಕ್ಕಂತೆ ಪ್ರತಿದಿನವೂ ಏನಾದರೂ ಸ್ವಲ್ಪ ದುಡ್ಡನ್ನು ಕದಿಯೋಣವೆಂಬ ಬುದ್ಧಿ ಹುಟ್ಟಿತು. ಆದರೆ 'ಪ್ರತಿದಿನವೂ ನನ್ನ ಬಟ್ಟೆಗಳನ್ನೆಲ್ಲಾ ಚನ್ನಾಗಿ ಪರೀಕ್ಷಿಸಿ ನನ್ನನ್ನು ಬಿಡುತ್ತಾರಲ್ಲಾ, ಹೇಗೆ ಕದ್ದುಕೊಂಡು ಹೋಗುವುದು,' ಎಂಬ ಯೋಚನೆ. ಯೋಚನೆ ಮಾಡುತ್ತ ಮಾಡುತ್ತ ಒಂದು ಉಪಾಯವು ಮನಸ್ಸಿಗೆ ಹೊಳೆಯಿತು. ಅದೇನೆಂದರೆ, "ಬೆಳ್ಳಿ ನಾಣ್ಯವಾಗಿದ್ದ ಅರ್ಧ ರೂಪಾಯಿಯೊಂದನ್ನು ತೆಗೆದು ಗುದಸ್ಥಾನದಲ್ಲಿಟ್ಟುಕೊಂಡು ಕೌಪೀನ (ಗೋಸಿ) ವನ್ನು ಬಿಗಿಯಾಗಿ ಕಟ್ಟಿಕೊಂಡು ನಡೆಯುವಾಗ ಪಿರ್ರ್ರಿಗಳಿಂದ ಆ ನಾಣ್ಯವನ್ನು ಬೀಳದಂತೆ ಔಕಿಕೊಂಡು ಹೊರಡಬೇಕು" ಎಂಬುದೇ. ಇಂತಹ ಯೋಚನೆ ಹೊಳೆದ ದಿನದ ಮೊದಲು ಪ್ರತಿನಿತ್ಯವೂ ಇದೇ ರೀತಿಯಲ್ಲಿ ತೆಗೆದುಕೊಂಡು ಹೋಗಿ ಆ ಹಣವನ್ನು ಮನೆಯಲ್ಲಿಯೂ ಕೊಡದೆ ಪ್ರತಿದಿನವೂ ತಿಂಡಿ ತೆಗೆದುಕೊಂಡು ತಿನ್ನುತ್ತ ಬಂದೆನು. ಕೆಲವು ದಿನಗಳು ಕಳೆದ ತರುವಾಯ ಈ ವಿಷಯವು ಯಜಮಾನನಿಗೆ ಪತ್ತೆಯಾಗಿ ಆತನು ನನ್ನನ್ನು ಪ್ರಶ್ನೆಮಾಡಿದನು. ಅವನ ಪ್ರಶ್ನೆಗೆ ಉತ್ತರ ಕೊಡದೆ ನಾನು ಸುಮ್ಮನಿದ್ದೆನು. ತಕ್ಷಣವೇ ನನಗೆ ಬೆತ್ತದ ಪೂಜೆಯಾಯಿತು. ಆ ಏಟು ತಡೆಯಲಾರದೆ ನಿಜವನ್ನು ಹೇಳಿದೆನು. ಹಿಂದೆಯೇ ನನ್ನನ್ನು ಅಂಗಡಿಯಿಂದ ಓಡಿಸಿಬಿಟ್ಟರು. ಇದಾದಮೇಲೆ ನಾನು ಕೆಲವು ದಿವಸ ಮನೆಯಲ್ಲಿಯೇ ಸುಮ್ಮನಿದ್ದು ಕಡೆಗೆ ಇಪ್ಪತ್ತು ರೂಪಾಯಿ ತಲಬಿನ ಗುಮಾಸ್ತೆಯಾಗಿ ಒಬ್ಬ ವಕೀಲನ ಹತ್ತಿರ ಸೇರಿದೆನು. ಅಲ್ಲಿ ಸೇರಿದ ಮೇಲೆ ಆ ವಕೀಲನು, ಸುಳ್ಳು ಕೇಸುಗಳನ್ನು ನಿಜಮಾಡುತ್ತಲೂ, ನಿಜವಾದುವುಗಳನ್ನು ಸುಳ್ಳು ಮಾಡುತ್ತಲೂ ಇರುವುದನ್ನು ನಾನು ಗಮನವಿಟ್ಟು ನೋಡಿದೆನು. ಅಮೇಲೆ 'ಈತನೂ ಗುಣದಲ್ಲಿ ನನ್ನನ್ನು ಹೋಲುವನು,' ಎಂದು ತಿಳಿದು, ಅದು ಮೊದಲು ನಾನು ವಕೀಲರ ವಾದಿಯ ಪರವಾಗಿಯೋ ಅಥವ ಪ್ರತಿವಾದಿಯ ಪರವಾಗಿಯೋ ಸಾಕ್ಷಿಯಾಗಿ ಸೇರಿ, ನಾನು ಯಾವುದನ್ನೂ ಕಾಣದಿದ್ದರೂ ಪ್ರತ್ಯಕ್ಷವಾಗಿ ನೋಡಿದ್ದಂತೆ ಸಾಕ್ಷ್ಯವನ್ನು ನುಡಿಯುತ್ತ ಬಂದೆನು. ನನಗೆ ಇನ್ನೂರು ರೂಪಾಯಿಗಳು ಕೊಡಿರೆಂದು ಅವರಿಂದ ಅಕ್ರಮವಾಗಿ ಹಣವನ್ನು ಕಸುಕೊಳ್ಳುವುದೂ

ಇತ್ತು. ಹೀಗೆಯೇ ಅನೇಕ ಕೇಸುಗಳಲ್ಲಿ ಸುಳ್ಳು ಸಾಕ್ಷ್ಯಗಳನ್ನು ಹೇಳಿ ದೊಡ್ಡ ಧನಿಕನಾದೆನು. ಮತ್ತು ಖೂನಿ ಕೇಸುಗಳಲ್ಲಿ ಸಾವಿರಾರು ರೂಪಾಯಿಗಳ ಆದಾಯಹೊಂದಿ, ಖೂನಿ ಮಾಡದವನನ್ನು ಮಾಡಿದ್ದಾನೆಂದು ಸುಳ್ಳು ಸಾಕ್ಷ್ಯ ನುಡಿದು ನಿರಪರಾಧಿಯನ್ನು ಗಲ್ಲಿಗೇರಿಸುವುದಕ್ಕೆ ಸಹಾಯಕನಾದೆನು. ಇಂತಹ ದುಷ್ಟಕರ್ಮಗಳ ದೆಸೆಯಿಂದ ಹೆಚ್ಚು ಹಣವನ್ನು ಸಂಪಾದಿಸಿ ಒಬ್ಬನಿಗೆ ರೂಪಾಯಿ ಒಂದಕ್ಕೆ ಒಂದಾಣೆ ಬಡ್ಡಿಯಂತೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು, ಅದಕ್ಕೆ ಬಡ್ಡಿಗೆ ಬಡ್ಡಿ ಹತ್ತಿಸಿ ಹತ್ತುಸಾವಿರ ರೂಪಾಯಿಗಳು ಮಾಡಿ ಕಡೆಯಲ್ಲಿ ಕೋರ್ಟಿನಲ್ಲಿ "ಡಿಕ್ರೀ" ಮಾಡಿಸಿ ಸಾಲತೆಗೆದವನ ಮನೆಮಠಗಳನ್ನು ಹರಾಜು ಹಾಕಿಸಿದ್ದೇನೆ. ಆ ಸಮಯದಲ್ಲಿ ಅವನ ಹೆಂಡತಿ ಮಕ್ಕಳು ಹೊಟ್ಟೆಯುರಿಯಿಂದ "ಓ ಪಾಪಿ! ಒಂದುಸಾವಿರ ರೂಪಾಯಿಗಳನ್ನು ಕೂಡ ನಮಗೆ ಸರಿಯಾಗಿ ಕೊಡದೆ ಅದರ ಆರುತಿಂಗಳ ಬಡ್ಡಿಯನ್ನು ಮೊದಲೇ ತೆಗೆದುಕೊಂಡು ಪತ್ರದಲ್ಲಿ ಸಾವಿರ ರೂಪಾಯಿಗಳೆಂದು ಬರೆದುಕೊಂಡು, ಆಗಾಗ್ಗೆ ಕೊಟ್ಟಂಥ ಹಣವನ್ನು ಅಸಲು ಮತ್ತು ಬಡ್ಡಿಗಾಗಿ "ಜಮಾ" ಕಟ್ಟಿಕೊಳ್ಳದೆಯೂ ನಮಗೆ ತಿಳಿಸದೆಯೇ ಕೋರ್ಟು ಮುಖದಿಂದ ವ್ಯವಹಾರಮಾಡಿ ಈಗ ನಮ್ಮ ಮನೆಯನ್ನು ಹಾಳುಮಾಡಿದೆಯಾ? ನೀನು ನಾಶವಾಗಿ ಹೋಗಬಾರದೇ" ಎಂದು ಹೊಟ್ಟೆ ಹಿಡಿಸಲಾರದಷ್ಟು ಸಂಕಟದಿಂದ ನನ್ನನ್ನು ಬೈದರು. ಹೀಗೆ ಅನೇಕ ಮೋಸ ಕೃತ್ಯಗಳನ್ನು ಮಾಡಿಯೇ ಅಧಿಕ ಧನವನ್ನುಗಳಿಸಿ, ನನ್ನ ಹೆಂಡತಿ ಮಕ್ಕಳಿಗಾಗಿ ಶೇಖರಿಸಿ ಇಟ್ಟಿದ್ದೇನೆ. ನನಗೆ ಮರಣಕಾಲವು ಸಮೀಪಿಸುತ್ತ ಬಂದಿದೆ. ನಾನು ಬಾಲ್ಯದಿಂದಲೂ ಮಾಡಿದ ಪಾಪಕರ್ಮಗಳನ್ನೆಲ್ಲಾ ನೆನಸಿಕೊಂಡರೆ ನನ್ನ ಶರೀರವು ಜರ್ಝರಿತವಾಗಿ, ಬೆವರಿಟ್ಟು, ಎದೆಯು 'ಢಕ, ಢಕ' ಎಂದು ಹೊಡೆದುಕೊಳ್ಳುತ್ತ ನನಗೆ ಬಹಳವಾಗಿ ಭಯವನ್ನುಂಟುಮಾಡುತ್ತಿದೆಯಲ್ಲಾ! ಈಗ ನಾನಿನ್ನೇನುಮಾಡಲಿ? ಈ ಜನ್ಮದಲ್ಲಿ ನಾನು ಕಳವು ಮೊದಲಾದುವನ್ನು ಮಾಡಿದ್ದಕ್ಕಾಗಿ ಬರುವ ಜನ್ಮದಲ್ಲಿ ದಾರಿದ್ರ್ಯವುಂಟಾಗಿ ಕಷ್ಟಪಡಬೇಕಾಗುವುದು. ಪಾಠಶಾಲೆಯಲ್ಲಿ ಬಾಲಕರ ಪುಸ್ತಕ ಮೊದಲಾದುವುಗಳನ್ನು ಕದ್ದದ್ದಕ್ಕಾಗಿ ನನಗೆ ಮುಂದಿನ ಜನ್ಮದಲ್ಲಿ ಬಿಳೀ ಕುಷ್ಠ

ರೋಗವು (ತೊನ್ನು) ಸಂಭವಿಸುತ್ತದೆಯೋ, ನಾನು ಅಂಗಡಿ ಮಳಿಗೆಯಲ್ಲಿ ಹಣವನ್ನು ಕದ್ದು ಗುದಸ್ಥಾನದಲ್ಲಿ ಬೈಚಿಟ್ಟುಕೊಳ್ಳುತ್ತಿದ್ದೆನಾದುದರಿಂದ ಆದಕ್ಕಾಗಿ ಮೂಲವ್ಯಾಧಿಯು ನನಗೆ ಸಂಭವಿಸುತ್ತದೆಯೋ, ಸುಳ್ಳು ಸಾಕ್ಷ್ಯದಿಂದ ಕೇಸುಗಳನ್ನು ಗೆಲ್ಲಿಸಿದ್ದಕ್ಕಾಗಿ ನನ್ನ ಬಾಯಿಯಲ್ಲಿ ಹುಣ್ಣಾಗಿ ಹುಳುಗಳು ಬೀಳುವುವೋ, ಸ್ವಲ್ಪ ಹಣವನ್ನು ಕೊಟ್ಟು ಬಡ್ಡಿಗೆ ಬಡ್ಡಿ ಸೇರಿಸಿ ವೃದ್ಧಿಮಾಡಿ ಸಾಲ ತೆಗೆದುಕೊಂಡವರ ಮನಸ್ಸನ್ನು ನೋಯಿಸಿ ಅವರ ಮನೆಯನ್ನು ಅಪಹರಿಸಿದುದಕ್ಕಾಗಿ ನನಗೆ ಅವರ ಶಾಪವು ಬಂದದ್ದರಿಂದ ಆ ಪಾಪಕ್ಕಾಗಿ ನನಗೆ ಕುಷ್ಠವ್ಯಾಧಿಯುಂಟಾಗುತ್ತದೆಯೋ ಕಾಲಿನಿಂದೊದ್ದು ಕೈತುಂಬ ಹಣವನ್ನು ಅನ್ಯಾಯದಿಂದ ಸಂಪಾದಿಸಿದುದಕ್ಕಾಗಿ ನನ್ನ ಕೈಕಾಲು ಬೆರಳುಗಳಲ್ಲಿ ಹುಣ್ಣೆದ್ದು ಕೀವುಸೋರಿ ಹುಳುಗಳು ಬಿದ್ದು ಸುತ್ತುಮುತ್ತಲಿರುವವರಿಗೂ ಅಸಹ್ಯವಾಗುವಂತಹ ದುರ್ವಾಸನೆಹುಟ್ಟಿ ದಿವಾರಾತ್ರಿಯೂ ಎಡಬಿಡದೆ ಬಹು ನೋವಿನಿಂದ ಅವಸ್ಥೆ ಪಡುತ್ತ, ಸಾಯುವವರಿವಿಗೂ ದುಃಖಪಡಬೇಕಾಗುತ್ತದೆಯೋ ಏನೋ! ಕೊಲೆ (ಖೂನಿ) ಕೇಸುಗಳಲ್ಲಿ ಸುಳ್ಳುನುಡಿದು ತಪ್ಪಿಲ್ಲದವನಿಗೆ ಗಲ್ಲಿಗೇರಿಸಲು ಸಹಾಯಮಾಡಿದ್ದಕ್ಕೆ ನನಗೆ ಬರುವ ಜನ್ಮದಲ್ಲಿ, ರೈಲು ಚಕ್ರ, ಮೋಟಾರು ಬಂಡಿ ಮೊದಲಾದುವುಗಳ ಕೆಳಗೆ ಸಿಕ್ಕಿ ದುರ್ಮರಣವನ್ನು ಹೊಂದಬೇಕಾಗುವುದೋ ಏನೋ ತಿಳಿಯಲಿಲ್ಲವಲ್ಲಾ. ಮೇಲೆ ಹೇಳಿದ ದುಃಖಗಳನ್ನು ಅನುಭವಿಸುತ್ತಿರುವಾಗ ಜನಗಳು 'ಅವನ ಪೂರ್ವಜನ್ಮ ಕರ್ಮಫಲವೋ ಅವನ ಹಣೆಯ ಬರಹವೋ ಅಥವಾ ಅವನ ಪ್ರಾರಬ್ಧವೋ' ಎಂದು ಹೇಳುತ್ತಾರೆ. ನಾನು ಈ ಜನ್ಮದಲ್ಲಿ ಮಾಡಿದ ಕರ್ಮಫಲವಾಗಿ ಮುಂದಿನ ಜನ್ಮದಲ್ಲಿ ಹಿಂದೆ ಹೇಳಿದ ದುಃಖಗಳು ನನಗೆ ಶಿಕ್ಷಾರೂಪವಾಗಿ ಉಂಟಾಗುವುವೋ ಏನೋ ತಿಳಿಯದು. ಅಬ್ಬಬ್ಬಾ! ಈ ಪಾಪಕರ್ಮಕ್ಕಾಗಿ ನಾನೇನು ಮಾಡಲಿ. ಇದನ್ನು ತಪ್ಪಿಸಲು ಈಶ್ವರನಿಗೂ ಸಾಧ್ಯವಿಲ್ಲವೆಂದು ವೇದಗಳೂ, ಮಹಾತ್ಮರೂ, ಹಿರಿಯರೂ ಹೇಳಿರುವ ವಿಷಯವನ್ನು ನಾನು ಕೇಳಿರುತ್ತೇನೆ. ಇನ್ನು ಈ ಪಾಪಕರ್ಮಫಲದಿಂದ ಹೇಗೆ ತಪ್ಪಿಸಿಕೊಳ್ಳಲಿ? ಈಗ ನನ್ನ ಹತ್ತಿರ ಇರುವ ಹಣವನ್ನೆಲ್ಲಾ ದಾನಧರ್ಮದಲ್ಲಿ ವ್ಯಯಮಾಡಿದರೂ, ಅದು ನಾನು ಪುಣ್ಯವಂತರ ಮನೆಯಲ್ಲಿ ಹುಟ್ಟಲು

ಅನುಕೂಲಮಾಡುವುದೇ ಹೊರತು ನಾನು ಮಾಡಿದ ಪಾಪಕ್ಕನುಗುಣವಾಗಿ ದುಃಖಗಳನ್ನು ತಪ್ಪದೆ ಅನುಭವಿಸಲೇ ಬೇಕಾಗುತ್ತದೆ. ಇದಕ್ಕೇನು ಮಾಡಲಿ? ಈಗಿನ ಯೋಚನೆಯೇ ಬಾಲ್ಯದಿಂದಲೂ ಹೊಳೆದಿದ್ದರೆ ಈ ಪಾಪಕರ್ಮಗಳನ್ನು ಮಾಡಲು ಮನಗೊಡುತ್ತಿರಲಿಲ್ಲವಲ್ಲವೇ? ನಾನು ಬಾಲ್ಯದಿಂದಲೂ ಮಾಡುತ್ತ ಬಂದ ಪಾಪಕಾರ್ಯಗಳನ್ನು ಅನೇಕರು ಮಾಡ ಬಹುದು. ಹಾಗೆ ಮಾಡುತ್ತಿರುವವರೆಲ್ಲರೂ ಮೇಲೆ ಹೇಳಿದ ಪಾಪಕರ್ಮ ಗಳ ಫಲರೂಪವಾದ ಶಿಕ್ಷೆಯನ್ನು ಮನಸ್ಸಿನಲ್ಲಿ ಚನ್ನಾಗಿ ಆಲೋಚಿಸಿ ಜಾಗ್ರತೆಯನ್ನು ತಂದುಕೊಳ್ಳುವರೆಂದು ನಂಬಿದೆ.

"ಹಾಸ್ಯಕ್ಕಾದರೂ ಸುಳ್ಳುಹೇಳದೆ ಪುಣ್ಯಕರ್ಮಗಳಿಗೇ ಮನಗೊಡಿರಿ. ಇದರಿಂದಮುಂದೆ ನಿಮಗೆ ಒಳ್ಳೆಯ ಜನ್ಮವು ದೊರಕುವುದು. ಬುದ್ಧಿಯಿಲ್ಲದ್ದ ರಿಂದ ನಾನು ಮೋಸಹೋದೆನು. ಹೀಗೆ ಮೋಸಹೋಗುವುದಕ್ಕೆ ನನ್ನ ಪೂರ್ವಜನ್ಮ ಕರ್ಮಗಳೇ ಕಾರಣವಾಗಿದ್ದು ನನ್ನನ್ನು ಈಗತಿಗೆ ತಂದವೇ ಹೊರತು ನಾನಾಗಿಯೇ ಉದ್ದಿಶ್ಯಪಟ್ಟು ಇವುಗಳನ್ನು ಮಾಡಿದವನಲ್ಲ. ಪ್ರತಿ ವಿಷಯವೂ ಅವರವರ ಕರ್ಮಾನುಸಾರವಾಗಿ ನಡೆಯುವುವೇ ಹೊರತು ಕರ್ಮಫಲವಿಲ್ಲದೇ ಯಾವುದೂ ನಡೆಯುವು ಎಂಬುದನ್ನರಿಯಬೇಕು."

ಈಗ ಸಂಚಿತ, ಪ್ರಾರಬ್ಧಗಳೆಂಬ ಎರಡು ಬಗೆ ಕರ್ಮಗಳನ್ನು ಕುರಿತು ವಿವರಿಸಿದ್ದಾಯಿತು. ಈ ಸಂಚಿತವೆಂಬ ಕರ್ಮವೂ ಆಗಾಮಿ ಕರ್ಮಗಳಿಂದಲೇ ಬಂದದ್ದು. ಈ ವಿಷಯವನ್ನು ಈ ಕೆಳಗೆ ವಿವರಿಸಿದೆ.

**3. ಆಗಾಮಿ ಕರ್ಮಗಳು :—** ಸ್ತ್ರೀಪುರುಷರು ಹುಟ್ಟಿದ ಮೇಲೆ ಪುನಃ ಸಾಯುವವರಿವಿಗೂ ಪ್ರತಿದಿನವೂ ಮಾಡುತ್ತ ಬರುತ್ತಿರುವ ಪುಣ್ಯ ಪಾಪಕರ್ಮಗಳು, 'ಆಗಾಮಿ ಕರ್ಮಗಳು' ಎಂದು ಕರೆಯಲ್ಪಡುತ್ತವೆ. ಮೇಲೆ ಹೇಳಿದ ಸ್ತ್ರೀಪುರುಷರು ಹೀಗೆ ಮಾಡುತ್ತ ಬಂದು ಮರಣಹೊಂದಿದ ತಕ್ಷಣವೇ ಈ ಆಗಾಮಿಯೆಂಬ ಪುಣ್ಯಪಾಪಕರ್ಮಗಳು, ಹಿಂದಿನ ಜನ್ಮದಲ್ಲಿ ಶೇಷವಾಗಿ ನಿಂತಿದ್ದ ಸಂಚಿತವೆಂಬ ಮೂಟೆಗಳಲ್ಲಿ ಹೋಗಿ ಸೇರಿ ಅದನ್ನು ಹೆಚ್ಚಿಸುತ್ತವೆ. ಸ್ತ್ರೀ-ಪುರುಷರು ಪ್ರತಿಜನ್ಮದಲ್ಲಿಯೂ ಪುಣ್ಯಪಾಪಗಳನ್ನು ಮಾಡುತ್ತ ಬರುತ್ತಿರುವುದರಿಂದಲೇ ಇವು ಹೆಚ್ಚಾಗುತ್ತ ಸಂಚಿತವೆಂಬ

ಮೂಟೆಗಳಾಗಿ ಪರಿಣಮಿಸುತ್ತವೆ. ಈ ಸಂಚಿತವೆಂಬ ಮೂಟೆಗಳೇ ಪೂರ್ವಜನ್ಮಕರ್ಮಗಳೆಂದು ಕರೆಯಲ್ಪಡುವುವು.

ಈ ಕರ್ಮಕ್ಕೆ ಕಾರಣವು ಮನಸ್ಸಿನ ಕೋರಿಕೆಗಳೇ ಹೊರತು ಬೇರೇನೂ ಅಲ್ಲ. ಯಾವನಾದರೂ ಒಬ್ಬನು ಯಾವುದುಬೇಕೆಂದು ಮನಸ್ಸಿನಲ್ಲಿ ಇಚ್ಛಿಸುತ್ತಾನೆಯೋ ಆಕೋರಿಕೆಯೇ ಆಗಾಮಿಯೆಂಬುದು. ಇಂತಹ ಕೋರಿಕೆಗಳು ಲೆಕ್ಕವಿಲ್ಲದಷ್ಟು ಸೇರಿ ಹೆಚ್ಚುತ್ತಾ ಬರುವುವೇ ಸಂಚಿತವೆಂಬುದು. ತಾನುಕೋರಿದಂತೆ ಮೇಲೆ ಹೇಳಿದ ಸಂಚಿತದಿಂದ ಮರುಜನ್ಮಕ್ಕೆ ಬೇಕಾದಷ್ಟು ಪುಣ್ಯಪಾಪಗಳನ್ನು ಹಂಚಿಕೊಂಡು ಬಂದು ಅನುಭವಿಸುವುದೇ ಪ್ರಾರಬ್ಧವೆನಿಸುವುದು. ಪ್ರಪಂಚದಲ್ಲಿರುವ ಮಾನವ ರೆಲ್ಲರೂ ಅನುಭವಿಸುತ್ತಿರುವ ಸುಖದುಃಖಕ್ಕೆ ಕಾರಣವೇನೆಂದರೆ:— ಪೂರ್ವಜನ್ಮದಲ್ಲಿ ತಾವುತಾವು ಮಾಡುತ್ತಬಂದ ಪುಣ್ಯಪಾಪಗಳ ಕರ್ಮಗಳೇ ಕಾರಣಗಳಾಗಿವೆಯೇ ಹೊರತು ಮತ್ತೆಬೇರೆ ಅಲ್ಲ. ಹೇಗೆಂದರೆ, ಒಬ್ಬ ಪುರುಷನು ಹಿಂದಿನ ಜನ್ಮದಲ್ಲಿ ಏನೋ ಒಂದು ವಸ್ತುವು ಬೇಕಂದು ಕೋರುತ್ತಾನೆ. ಕೋರಿದ ಫಲವನ್ನು ಮರುಜನ್ಮದಲ್ಲಿ ಅನುಭವಿಸುತ್ತಾನೆ.

ಪ್ರತಿ ಮನುಷ್ಯನೂ ಅಹಂಕಾರಾವೇಶದಿಂದ "ನಾನು ಅದನ್ನು ಮಾಡಿದೆನು. ಅವೆಲ್ಲವೂ ನನ್ನಿಂದ ಸಾಧ್ಯ. ನನಗಾಗಿಯೇ ಅದನ್ನು ನಾನು ಮಾಡಿದೆನು." ಹೀಗೆ "ನಾನು, ನನ್ನದು," ಎಂದೇ ಮಾತುಮಾತಿಗೂ ಹೇಳುತ್ತಿರುವನೇ ಹೊರತು ತಾನು ಮಾಡಿದುದು ಯಾವುದೂ ಇಲ್ಲ; ತನ್ನಿಂದ ಏನು ಮಾಡುವುದಕ್ಕೂ ಸಾಧ್ಯವಿಲ್ಲ; ತನಗೋಸ್ಕರ ತಾನು ಏನನ್ನೂ ಮಾಡುವುದಕ್ಕೆ ಅವನು ಸಮರ್ಥನಲ್ಲ. ಇದೆಲ್ಲವೂ ಅವನ ಪೂರ್ವ ಜನ್ಮದಲ್ಲಿ ಅವನು ಮಾಡಿದ ಕರ್ಮಗಳನ್ನು ಅನುಸರಿಸಿರುವುದೇ ಹೊರತು ಮತ್ತೆ ಬೇರಿಲ್ಲ. ಒಬ್ಬನು ಎಷ್ಟೋ ಕೋರಿಕೆಗಳನ್ನು ಕೋರುತ್ತಾನೆ. ಇವೆಲ್ಲವೂ ಪ್ರಾರಬ್ಧ ಕರ್ಮಗಳಿಲ್ಲದಿದ್ದರೆ ಎಂದಿಗೂ ಅವು ಅವನಿಗೆ ಸಲ್ಲವು. ಇದಕ್ಕೆ ಒಂದು ಸಾದೃಶ್ಯವುಂಟು. ಅದೇನೆಂದರೆ:—

ಮಕ್ಕಳಿಲ್ಲದ ಒಬ್ಬನು ಸಂತಾನ ಪ್ರಾಪ್ತಿಗಾಗಿ ಉಪವಾಸ ವ್ರತಗಳನ್ನೂ, ದೇವತಾರಾಧನೆಗಳನ್ನೂ, ಪುಣ್ಯಕ್ಷೇತ್ರದರ್ಶನಾದಿಗಳನ್ನೂ, ಮಹಾನದೀ

ಸ್ನಾನಗಳನ್ನೂ, ಅನ್ನದಾನಾದಿಗಳನ್ನೂ, ಕೆರೆ, ಕಟ್ಟೆ, ಭಾವಿ, ದೇವಾಲಯ, ತೋಟ, ಇವೇ ಮೊದಲಾದುವುಗಳನ್ನು ಪ್ರತಿಷ್ಠೆಮಾಡುವುದನ್ನೂ ಇನ್ನೂ ಅನೇಕ ಇಂತಹ ಸತ್ಕರ್ಮಗಳನ್ನು ಮಾಡುತ್ತಿದ್ದನು. ಆದರೆ, ಹೀಗೆ ಎಷ್ಟು ಕರ್ಮಗಳನ್ನು ನಡೆಸಿದಾಗ್ಯೂ ಪ್ರಾರಬ್ಧಕರ್ಮಗಳ ಫಲದಲ್ಲಿ ಸಂತಾನ ಲಾಭವು ಇಲ್ಲದಿದ್ದರೆ, ಎಂದಿಗೂ ಪುತ್ರವಂತನಾಗಲಾರ. ಆದರೂ, ಈ ಜನ್ಮದಲ್ಲಿ ಸಂತಾನಕ್ಕಾಗಿ ಮಾಡಿದ ಪುಣ್ಯ ಕರ್ಮಗಳಿಂದ ಮುಂದಿನ ಜನ್ಮದಲ್ಲಿ ತಪ್ಪದೆ ಪುತ್ರವಂತನಾಗುತ್ತಾನೆ.

ಯಾವನಾದರೂ, ಮೇಲೆ ಹೇಳಿದ ಪುಣ್ಯಕರ್ಮಗಳನ್ನು ಹಿಂದಿನ ಜನ್ಮದಲ್ಲಿ ನಡೆಸಿದ್ದರೆ ಈ ಜನ್ಮದಲ್ಲಿ ಪುತ್ರವಂತನಾಗುವುದು ನಿಜ. ಆದರೆ ಈ ಜನ್ಮದಲ್ಲಿ ಅವನ್ನು ನಡೆಸಿದ್ದರ ಫಲವಾಗಿ ಈಗಲೇ ಪುತ್ರವಂತನಾಗ ಲಾರ. ಈ ಕರ್ಮಗಳನ್ನು ನಡೆಸಿದ ಮೇಲೆ ಪುತ್ರವಂತನಾದರೂ ಅದು ಪೂರ್ವಜನ್ಮದ ಕರ್ಮಫಲವೇ ಹೊರತು ಬೇರಲ್ಲ. ಆದುದರಿಂದ ಸಂಚಿತ ವೆಂಬ ಕರ್ಮಗಳನ್ನು ಯೋಗಾಗ್ನಿಯಿಂದ ದಹಿಸಿದ ಪುರುಷನು ಬರುವ ಜನ್ಮದಲ್ಲಿಯೇ ಮುಕ್ತಿಯನ್ನು ತಪ್ಪದೆ ಹೊಂದುತ್ತಾನೆ.

ಶ್ರುತಿ || " ಪ್ರಜ್ಞಾನ ಘನಯೇವೈ ತೇಭ್ಯೋ ಭೂತೇಭ್ಯ
ಸ್ಸಮುತ್ಥಾಯ ತಾನ್ಯೇ ವಾನು ವಿನಶ್ಯತಿ."

ಎಂದು ಯಾಜ್ಞವಲ್ಕ್ಯ ಋಷಿಯು ಮೈತ್ರೇಯನಿಗೆ ತಿಳಿಸಿದ ಶ್ರುತಿ ರೀತಿಗೆ ತಕ್ಕಂತೆ, ಬಹುಜನ್ಮಗಳಿಂದ ಸಂಪಾದಿಸಿದ ಆಗಾಮಿಯಿಂದ ಕಂಡು ಬಂದ ಸಂಚಿತಕರ್ಮಗಳು ನಾಶವಾದ ತಕ್ಷಣವೇ, ಶರೀರವೂ, ಸಂಕಲ್ಪ ಸ್ವರೂಪವಾಗಿರುವ ಮನಸ್ಸೂ, ಇವೆರಡೂ ನಾಶಹೊಂದಿ, **"ಬ್ರಹ್ಮ ವೇದ ಬ್ರಹ್ಮೈವ ಭವತಿ"** ಎಂಬ ಶ್ರುತಿ ಪ್ರಮಾಣಾನುಸಾರವಾಗಿ, ಘಟದಲ್ಲಿರುವ ಆಕಾಶವು ಆ ಘಟವು ಒಡೆದ ತಕ್ಷಣವೇ ಮಹಾಕಾಶದಲ್ಲಿ ಬೆರೆತು ಒಂದಾಗುವಂತೆ ಮೇಲೆ ಹೇಳಿದ ಜನ್ಮರಾಹಿತ್ಯ ಪುರುಷನು ಪರಬ್ರಹ್ಮನಲ್ಲಿ ಐಕ್ಯವಾಗುತ್ತಾನೆ.

ಪ್ರಾರಬ್ಧ ಕರ್ಮಗಳನ್ನು ತಪ್ಪಿಸಿಕೊಳ್ಳಲು ಯೋಗಿಗೂ ಸಾಧ್ಯವಿಲ್ಲ. ಪೂರ್ವಜನ್ಮ ಸುಕೃತ ದುಷ್ಕೃತ ಕರ್ಮಗಳನ್ನನುಸರಿಸಿಯೇ ಫಲವನ್ನು ಹೊಂದುತ್ತಿರುತ್ತಾನೆ. ಬ್ರಹ್ಮಾರ್ಪಣವೆಂದು ಮಾಡಿದ ಸುಕೃತ ಕರ್ಮಗಳು

ಬ್ರಹ್ಮನಿಗೆ ಸೇರುತ್ತವೆಯೇ ಹೊರತು ಸಂಚಿತದೊಡನೆ ಸೇರಲಾರವು. ಈ ಬ್ರಹ್ಮಾರ್ಪಣ ಕರ್ಮಗಳ ಫಲವೇ ಮುಕ್ತಿಯು.

ಶ್ಲೋ॥ "ಮನ ಸ್ಸಂಕಲ್ಪನಂ ತ್ಯಕ್ತ್ವಾ ಸಂಕ್ಷಿಪ್ಯಾತ್ಮನಿ ಬುದ್ಧಿಮಾನ್ ।
ಧಾರಯಿತ್ವಾ ತದಾತ್ಮಾನಂ ಧಾರಣಾ ಪರಿಕೀರ್ತಿತಾ ॥"

ಪ್ರಜ್ಞಾಶಾಲಿಗಳಾದವರು ವಿವಿಧ ವಿಷಯಗಳಲ್ಲಿ ಪ್ರವೇಶಿಸುತ್ತಿರುವ ಮನಸ್ಸನ್ನು ಆ ವಿಷಯ ಮಾರ್ಗಗಳಿಂದ ತಿರುಗಿಸಿ, ಪರಮಾತ್ಮಸ್ವರೂಪದಲ್ಲಿಯೇ ಲಯಮಾಡಬೇಕೆಂದು ನಿಶ್ಚೈಸಿ, ಸರ್ವಕಾಲ ಮತ್ತು ಸರ್ವಾವಸ್ಥೆಗಳಲ್ಲಿಯೂ ಆ ಸಚ್ಚಿದಾನಂದ ಸ್ವರೂಪದಲ್ಲಿ ಲೀನವಾಡಬೇಕು. ಹೀಗೆ ಮನಸ್ಸನ್ನು ನಿಲ್ಲಿಸುವುದಕ್ಕೆ ಧ್ಯಾನವೆಂದೂ ಸಮಾಧಿಯೆಂದೂ ಹೇಳುವರು. ಇದುವರಿವಿಗೂ ಹೇಳಿದ ವಿಷಯಗಳನ್ನೂ, ಇನ್ನು ಮುಂದೆ ತಿಳಿಸುವ ವಿಷಯಗಳನ್ನೂ ಓದುವವರೆಲ್ಲರೂ ಈ ಗ್ರಂಥಕರ್ತನಿಂದ ಇನ್ನು ಮುಂದೆ ಕನ್ನಡದಲ್ಲಿ ರಚಿಸಲ್ಪಟ್ಟ ಶ್ರೀ ಭಗವದ್ಗೀತ, ಅಧ್ಯಾಯ 4 ಶ್ಲೋ॥ 4) ರಲ್ಲಿ ವಿವರಿಸಿರುವಂತೆ,

ಶ್ಲೋ॥ ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ ।
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥

ಫಲಾಪೇಕ್ಷೆಯನ್ನು ಬಿಟ್ಟು ಈಶ್ವರಾರ್ಪಣ-ಬುದ್ಧಿಯಿಂದ ಕರ್ಮಗಳನ್ನು ಮಾಡಿದ ನಿಷ್ಕಾಮ ಕರ್ಮಯೋಗಿಯು, ಗುರುವು ಉಪದೇಶಿಸಿದ ಬ್ರಹ್ಮಜ್ಞಾನದಿಂದಲೇ ಸಕಲ ಸಂಶಯಗಳನ್ನೂ ಹೋಗಲಾಡಿಸಿ, ಬ್ರಹ್ಮನಿಷ್ಠೆಯಿಂದಿರುವವನನ್ನು ಕರ್ಮಗಳು ತೊಡಲಾರವು. ಆದುದರಿಂದ ಮೇಲೆ ಹೇಳಿದ ರೀತಿಯಲ್ಲಿ ಎಲ್ಲವನ್ನೂ ಈಶ್ವರಾರ್ಪಣ ಮಾಡಿದ್ದೇ ಆದರೆ, ಅದರಿಂದ ಚಿತ್ತಶುದ್ಧಿಯೂ, ಆ ಚಿತ್ತಶುದ್ಧಿಯಿಂದ ಜ್ಞಾನವೂ, ಆ ಜ್ಞಾನದಿಂದ ಮೋಕ್ಷವೂ ಉಂಟಾಗುತ್ತದೆ. ಇಂದ್ರಿಯ ನಿಗ್ರಹಮಾಡಿ, ಮನಸ್ಸನ್ನು ಅತ್ತಿತ್ತ ಚಲಿಸದೆ ಸ್ಥಿರೀಕರಿಸಿ ಮೋಕ್ಷವನ್ನು ಹೊಂದುವುದಕ್ಕಾಗಿಯೇ ಈ ಗ್ರಂಥದಲ್ಲಿ ಅನೇಕ ಉಪದೇಶಗಳನ್ನು ನಿರೂಪಿಸಿದೆ.

ಪಾಠಕರಿರಾ! ಅಮಾವಾಸ್ಯೆಯ ರಾತ್ರಿಯು ಕತ್ತಲಿನ ಜೊತೆಗೆ ಆಕಾಶವು ಮೇಘಗಳಿಂದ ತುಂಬಿದ್ದೇ ಆದರೆ, ಯಾವರೀತಿ ಆ ಕತ್ತಲೆಯು ಮತ್ತಷ್ಟು ಹೆಚ್ಚುತ್ತದೆಯೋ, ಹಾಗೆಯೇ ಪ್ರಪಂಚದಲ್ಲಿರುವವರೆಲ್ಲರಿಗೂ

ಆಗಾಮಿಯೆಂಬ ಕರ್ಮದಿಂದುಂಟಾದ ಅಜ್ಞಾನವೆಂಬ ಮಾಯೆಯೂ ಜನ್ಮ ಜನ್ಮಕ್ಕೂ ಹೆಚ್ಚುತ್ತಲೇ ಬರುವುದು. ಹಿಂದೆ ಹೇಳಿದಂತೆ ಅಮಾವಾಸ್ಯೆ ರಾತ್ರಿಯಲ್ಲಿ ಮೇಘಗಳು ತುಂಬಿದ್ದರೆ, ಆ ಕಗ್ಗತ್ತಲಿನಲ್ಲಿ ಮನುಷ್ಯನಾಗಲಿ ಚತುಷ್ಪಾದಿ ಜಂತುವಾಗಲಿ ಯಾವುದು ತನ್ನ ಮುಂದೆ ಬಂದರೂ, 'ಇಂತಹ ಜಾತಿಯ ಮನುಷ್ಯ. ಇಂತಹ ಜಾತಿಯ ಪ್ರಾಣಿ' ಎಂದು ತಿಳಿಯದೆ ಒಬ್ಬರಿಗೊಬ್ಬರು ಎದುರು ತಾಕುವುದು ಎಲ್ಲರಿಗೂ ತಿಳಿದ ದೃಷ್ಟಾಂತವೇ ಆಗಿದೆ. ಇದರಂತೆಯೇ ಜನ್ಮಗಳು ಹೆಚ್ಚುತ್ತ ಬರುವಂತೆಲ್ಲಾ ಅಜ್ಞಾನವು ವೃದ್ಧಿಯಾಗಿ ಮಾಯೆಯೂ ಅಧಿಕವಾಗಿ ಮೇಲೆ ಹೇಳಿದ ಅಮಾವಾಸ್ಯೆ ರಾತ್ರಿಯ ಕಗ್ಗತ್ತಲಿನಂತೆ ಪುರುಷನನ್ನು ಆವರಿಸಿ, ಆತ್ಮಸ್ವರೂಪವನ್ನು ಸ್ವಲ್ಪವೂ ಕಾಣದಂತೆ ಮುಚ್ಚಿ ಮರೆಮಾಡುತ್ತದೆ. ಮೇಘಾಚ್ಛಾದಿತವಾದ ಕಾಳರಾತ್ರಿಯಲ್ಲಿ 'ಮನುಷ್ಯ ಅಥವಾ ಮೃಗ' ಎಂಬ ಗುರುತನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲದಿದ್ದು ಸೂರ್ಯೋದಯವಾದ ನಂತರ ಆ ಬೆಳಕಿನಿಂದ ಕತ್ತಲೆ ಕಳೆದು ವಸ್ತುಗಳ ನಿಜಸ್ಥಿತಿಯು ಯಾವ ರೀತಿಯಲ್ಲಿ ಹೊರಬೀಳುವುದೋ ಹಾಗೆಯೇ, ಪುರುಷನಿಗೆ, ಆಗಾಮಿಕರ್ಮದಿಂದ ವೃದ್ಧಿಯಾಗುತ್ತಿದ್ದ ಅಜ್ಞಾನಾಂಧಕಾರವು ತತ್ವಜ್ಞಾನವೆಂಬ ಸೂರ್ಯನ ಬೆಳಕಿನಿಂದ ಹರಿದುಹೋಗಿ ಪರಮಾತ್ಮನ ನಿಜಸ್ವರೂಪವು ಇಂತಹುದೆಂದು ಸ್ಪಷ್ಟವಾಗುತ್ತದೆ. ಅಮಾವಾಸ್ಯೆಯ ರಾತ್ರಿಯಲ್ಲಿ ಮೇಘವು ಕವಿದು ಕತ್ತಲೆಯು ಆವರಿಸಿದ್ದರೂ, ಆ ಮೇಘದಲ್ಲಿ ಹುದುಗಿರುವ ಮಿಂಚು ಮಿಳುಕಿದ ಒಡನೆಯೇ ದಾರಿಯು ಕಂಡುಬರುವಂತೆ ಸದ್ಗುರುವಿನ ಉಪದೇಶ ವಾಕ್ಯಗಳು ಆಗಾಗ್ಗೆ ಮನದಟ್ಟುವುದರಿಂದ ಸ್ವಲ್ಪ ಸ್ವಲ್ಪವಾಗಿ ತತ್ವಜ್ಞಾನದ ಮಾರ್ಗವು ಕಾಣ್ಬರುತ್ತಿರುವುದು ಎಂದು ತಿಳಿಯಬೇಕು.

ಈ ವಿಧವಾಗಿ ಸ್ತ್ರೀಪುರುಷರನ್ನು ಕವಿದಿರುವ ಅಜ್ಞಾನಮಯವಾದ ಮಾಯೆಯೆಂಬ ಕತ್ತಲನ್ನು ಕಳೆದು ದಾರಿ ತೋರಿಸುವಂತಹ ಈ "ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ" ವೆಂಬ ಗ್ರಂಥವು ಪ್ರತಿಯೊಬ್ಬರಿಗೂ ಬಹಳ ಸಹಕಾರಿಯಾಗಿದೆ. ಆತ್ಮಜ್ಞಾನವನ್ನು ಆತ್ಮವಿಚಾರದಿಂದ ತಿಳಿದುಕೊಳ್ಳಬೇಕೇ ಹೊರತು ಬೇರೆ ವಿಧವಾಗಿ ಸಾಧ್ಯವಿಲ್ಲ. ಈ ಆತ್ಮವಿಚಾರವು ಸಾಧು ಸಜ್ಜನ ಸಂಗದಿಂದ ದೊರಕುತ್ತದೆ. ಇದಕ್ಕೆ

ಶ್ರೀ ಪರಮಹಂಸ ಪರಿವ್ರಾಜಿಕಾಚಾರ್ಯ ಶಂಕರಾಚಾರ್ಯರ ವಚನವೇ ಪ್ರಮಾಣವು.

ಶ್ಲೋ॥ ಸತ್ಸಂಗತ್ವೇ ನಿಸ್ಸಂಗತ್ವಂ । ನಿಸ್ಸಂಗತ್ವೇ ನಿರ್ಮೋಹತ್ವಂ ॥
ನಿರ್ಮೋಹತ್ವೇ ನಿಶ್ಚಲತತ್ವಂ । ನಿಶ್ಚಲತತ್ವೇ ಜೀವನ್ಮುಕ್ತಿಃ ॥

ಎಂಬಂತೆ, ಸತ್ಸಂಗದಿಂದ ಸ್ನೇಹವೆಂಬ ಬಂಧದ ವಿಮೋಚನೆಯೂ, ಆ ಬಂಧವು ಸಡಿಲಲು ಮೋಹನಾಶವೂ, ಆ ಮೋಹವು ನಾಶವಾದೊಡನೆಯೇ ನಿಶ್ಚಲವಾದ ಮನಸ್ಸಿನಿಂದ ಪರಮಾತ್ಮಧ್ಯಾನತತ್ಪರತೆಯೂ, ಅದರಿಂದ ಜೀವನ್ಮುಕ್ತಿಯೂ ಸಿದ್ಧಿಸುವುದು. ಇಂತಹ ಸಾಧು ಯೋಗಿಗಳ ಸತ್ಸಂಗವು ಎಲ್ಲರಿಗೂ ದೊರಕುವುದು ಸಾಧ್ಯವಿಲ್ಲವಾಗಿ, ಅಂತಹರ ಸಂಗವನ್ನು ಶ್ರೇಷ್ಠತರವಾದ ಉಪದೇಶವಾಕ್ಯಗಳಿಂದೊಡಗೂಡಿರುವ ಆ ಸಾಧು ಯೋಗಿಗಳು ಬರೆದಂಥ ಗ್ರಂಥಪಠನೆಯಿಂದ ಪಡೆಯಬಹುದು. ಈ “ರಾಜಯೋಗ ಸಾರಾಮೃತ” ವೆಂಬ ಗ್ರಂಥವು ಸ್ವಾನುಭವದಿಂದ ಮೆರೆಯುವ ಯೋಗಿವರ್ಯರಾದ ಶ್ರೀ ಪರಮಹಂಸ ಸಚ್ಚಿದಾನಂದರಿಂದ ರಚಿತವಾಗಿದೆಯಾಗಿ, ಮುಮುಕ್ಷುಗಳಾದ ಸಂಸಾರಿಕರು ಇದನ್ನು ಸಾವಧಾನವಾಗಿ ಪಠಿಸಿ ಅದರಲ್ಲಿರುವ ಉಪದೇಶಗಳನ್ನು ಗ್ರಹಿಸಿ ಮುಕ್ತಿಮಾರ್ಗವನ್ನು ಹಿಡಿಯುವ ಪ್ರಯತ್ನಮಾಡಬೇಕು. ಸಂಧ್ಯಾವಂದನೆ, ಜಪತಪಗಳು, ದೇವತಾರ್ಚನೆಗಳು, ಉಪವಾಸಾದಿ ವ್ರತಗಳು, ತೀರ್ಥಸ್ನಾನಗಳು, ಕ್ಷೇತ್ರದರ್ಶನಾದಿಗಳು ಇವೆಲ್ಲವೂ ಸತ್ಕರ್ಮಗಳೆಂದೇ ಕರೆಯಲ್ಪಡುವುವು. ಇವುಗಳನ್ನು ಪ್ರತಿದಿನವೂ ಆಚರಿಸುತ್ತಾ ಬರುವುದಾಗಿದೆಯೇ ಹೊರತು ಇದರಿಂದ ಸ್ವಲ್ಪಮಟ್ಟಿಗಾದರೂ ಆತ್ಮಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ. ಆದುದರಿಂದಲೇ, ಸತ್ಪುರುಷರ ಸಹವಾಸ, ಸದ್ಗುರುಸೇವೆ, ಸದುಪದೇಶಗ್ರಹಣ ಮತ್ತು ಅನುಷ್ಠಾನ, ಸದ್ಗ್ರಂಥಪಠನ, ಇವೆಲ್ಲಕ್ಕೂ ಅತ್ಯವಶ್ಯಕವಾದ ನಿರ್ಮಲವಾದ ಮನಸ್ಸಿನಿಂದ ಆಚರಿಸಿದ ಸದಾಚಾರ ಸಂಪನ್ನತೆ ಇವುಗಳನ್ನು ಜನಗಳು ಕೈಕೊಳ್ಳಬೇಕೆಂಬುದೇ ಈ ಗ್ರಂಥಕರ್ತರಾದ ಯೋಗೀಶ್ವರರ ಮುಖ್ಯ ಆಶಯು.

# ಕಾಮ - ಕ್ರೋಧಗಳೆಂಬ ದಶ ಗುಣಗಳು.



ಶ್ಲೋ ॥ " ಕಿಂವಾऽನೇನ ಧನೇನ ? ವಾಜಿಕರಿಭಿಃ ಪ್ರಾಪ್ತೇನ ರಾಜ್ಯೇನ ಕಿಂ ? ।
ಕಿಂ ವಾ ಪುತ್ರಕಳತ್ರಮಿತ್ರಪಶುಭಿ ರ್ದೇಹೇನ ಗೇಹೇನ ಕಿಂ ? ॥
ಜ್ಞಾತ್ವೈ ತತ್ ಕ್ಷಣಭಂಗುರಂ ಸಪದಿ ರೇ ! ತ್ಯಾಜ್ಯಂ ಮನೋ ದೂರತಃ
ಸ್ವಾತ್ಮಾರ್ಥಂ ಗುರುವಾಕ್ಯತೋ ಭಜಭಜ ಶ್ರೀ ಪಾರ್ವತೀವಲ್ಲಭಂ ॥

ಓ ಸಹೋದರ ಸಹೋದರಿಯರೇ ! ನಮ್ಮ ಶರೀರವು ಮಲಮ ಗಳಿಂದ ತುಂಬಿದ ಗಡಿಗೆಯಂತಿದೆ. ಒಂದು ಸಂತೆಯು ಸೇರಿ ಅನೇ ಬೇರೆಬೇರೆ ಊರುಗಳಿಂದ ಆ ಸಂತೆಯಲ್ಲಿ ಮಾರುವ ದಿನಸುಗಳ ಕೊಳ್ಳುವುದಕ್ಕೋ ಅಥವಾ ಮಾರುವುದಕ್ಕೋ ಗುಂಪುಸೇರುವ ರೀತಿ ಜೀವಿಗಳು ಅವರವರ ಪುಣ್ಯಪಾಪ ಕರ್ಮಗಳಿಗೆ ತಕ್ಕಂತೆ ಆಯಾ ವರ್ಣಗಳಲ್ಲಿ ತಾಯಿ, ತಂದೆ, ಅಣ್ಣ, ತಮ್ಮ, ಅಕ್ಕ, ತಂಗಿ, ಹೆಂ ಮಗ, ಮಗಳು ಹೀಗೆ ಯಾವುದೋ ಒಂದಾಗಿ ಹುಟ್ಟುತ್ತಾರೆ. ಇದ ದೃಷ್ಟಾಂತವೇನೆಂದರೆ :—

ಉ ॥ ದೇಹವು ಗಾಳಿಗೊಡ್ಡಿರುವ ◆ ದೀವಿಗೆ, ಪುತ್ರ ಕಳತ್ರ ಮಿತ್ರ ಸಂ ।
ದೋಹವು ಸ್ವಪ್ನಕಾಲದೊಳು ◆ ತೋರುವ ಸಂದಣಿ, ರಾಜ್ಯ ಭೋಗ ಸ ॥
ನ್ನಾಹವು ಯಂತ್ರದ ಪ್ರತಿಮೆ ◆ ಯಾಟವು, ಸಂಪದ ವಿಂದ್ರಜಾಲ ಮೀ ।
ಯ್ಯೆಹಿಕ ಸೌಖ್ಯವೇನು ಸುಖ ◆ ವೆಂದೆನುತಾಂ ತಿಳಿದಿರ್ಪೆ ಸಾರದಾ ॥

(ತೆಲುಗು—ಅಬ್ಬಯಾಮಾತ್ಯಕ

ಅಂದರೆ ಈ ಶರೀರವು ಗಾಳಿಯ ಹೊಡೆತಕ್ಕೆ ಸಿಕ್ಕಿದ ದೀಪದಂ ಅಂದರೆ ಕ್ಷಣಿಕವಾದದ್ದು. ಮಕ್ಕಳು, ಹೆಂಡಿರು, ಗೆಳೆಯರು ಇ ಗುಂಪೆಲ್ಲವೂ ಸ್ವಪ್ನದಲ್ಲಿ ಕಾಣ್ಬರುವ ಪರಿವಾರವು, ಚತುರಂಗಬಲದೊ ಮೆರೆಯುವಂತಹ ರಾಜನ ರಾಜ್ಯಭಾರ ವೈಭವವೆಲ್ಲವೂ ಯಂತ್ರದ ಬೊ ಕುಣಿತಕ್ಕೆ ಸಮಾನವಾದುದ್ದು ತಾವು ಅನುಭವಿಸುತ್ತಿರುವ ಐಶ್ವರ್ಯವು ಎಲ್ಲ ಮಾಯಾಜಾಲ; ಹೀಗಿರುವ ಇಹಲೋಕದ ಈ ಅನಿತ್ಯವಾದ ಸುಖ

ಎಂದಿಗೂ ನಿಜವಾದ ಸೌಖ್ಯವೆಂದು ಪರಿಗಣಿಸಲ್ಪಡಲಾರದು, ಎಂದು ತಿಳಿಯಬೇಕು. ಏಕೆಂದರೆ ಈ ಮೇಲೆ ಹೇಳಿದವುಗಳೆಲ್ಲವೂ ಕೆಲವು ಕಾಲ ಮಾತ್ರವಿದ್ದು ಕ್ಷಣಿಕವಾದ ಸುಖವನ್ನು ಕೊಟ್ಟು ಅಡಗುವುವು. ಇಂತಹ ಅಭಿಪ್ರಾಯಕ್ಕೆ ಮಹಾ ಭಾಗವತವೇ ಪ್ರಮಾಣವು.

ಮ ॥ ಜನನೀ ತಾತರು, ತಂಗಿ ತಮ್ಮದಿರು, ಪೆಂ ♦ ಡಿರ್ಮಕ್ಕಳುಂ ಮೇಣ್ನಿಕೇ ।
ತನವುಂ ತನ್ನ ವಿವೆಂದು ಪೇಳ್ವರು ಮಹಾ ♦ ಮಾಯಾಗುಣ ಭ್ರಾಂತಿಯಿಂ ॥
ಕನಸೋ ಳ್ತೋರುತಿ ಹರ್ಷಗ ಳ್ನಿಜನಗಳೇಂ ♦ ಕರ್ಮಾನು ಬಂಧಂಗಳಿಂ ।
ಮನುಜರ್ತಾವ್ ಪಡೆದಾದಮೇಲೆ ಯಡಗುಂ ♦ ಕರ್ಮಾಂತ ಕಾಲಂ ಬರಲ್ ॥
ಬಮ್ಮೆರ ಪೋತನ ಕವಿ-(ತೆಲುಗು.)

ಎಂದರೆ ಜನಗಳು ಮಹಾ ಮಾಯೆಗೆ ಒಳಪಟ್ಟವರಾಗಿ, ತಂದೆತಾಯಿಗಳು, ಸಹೋದರ ಸಹೋದರಿಯರು, ಸತೀಸುತರು ಇದೂ ಅಲ್ಲದೆ ತಾನು ವಾಸಿಸುವ ಮನೆ, ಇವುಗಳನ್ನು ತನ್ನವು ಎಂದು ಹೇಳುತ್ತಾರೆ. ಇವೆಲ್ಲವೂ ಕನಸ್ಸಿನಲ್ಲಿ ಕಾಣ್ಬರುವ ವಸ್ತುಗಳೇ ಹೊರತು ವಸ್ತುತಃ ನಿಜವಾದವುಗಳಲ್ಲ. ಇವೆಲ್ಲವೂ ತಾವು ತಾವು ಮಾಡಿದ ಕರ್ಮಗಳಿಂದ ಪ್ರಾಪ್ತವಾಗುವುವು. ಆ ಕರ್ಮ ಪರಿಪಕ್ವವಾದಮೇಲೆ ತಾವಾಗಿಯೇ ಅಣಗಿಹೋಗುವುವು.

ಕಾಲಜ್ಞಾನದಲ್ಲಿ ಇದೇ ಅರ್ಥವನ್ನು ಎತ್ತಿ ಹೇಳಿದೆ:—

ಕೀರ್ತನೆ—ಏಕನಾದ.

ಭವನ ಬಾಗಿಲೆನ್ನದು । ಪೆಂಡಿತಿಯು ನನ್ನವಳು ।
ಎಂದೇಕೆ ಭ್ರಮಿಸಿದೆಯೋ ? ಅಯ್ಯೋ ಮನವೇ ! ॥
ಜವನ ಪಾಶಗಳಲ್ಲಿ ಕಾಣದೆಯೆ ಸೆರೆಬಿದ್ದೆ ।
ಬಿಡುಗಡೆಯ ನಾಂ ಕಾಣೆ ನಿನಗೆ ಮನವೇ ॥೧॥
ತನಯರುಂ ಬಂಧುಗಳು ನಂಬಿ ತನ್ನವರೆಂದು ।
ನೆರೆ ಮೋಸಪೋಗದಿರು ಹುಚ್ಚು ಮನವೇ ॥
ತನುವನುಂ ಕೆಡೆನೂಕಿ ಪೊರಡುವಾ ಸಮಯ ।
ದೊಳು ತನ್ನೊಡನೆ ಬರಲಾರರಿವರು ಮನವೇ ॥೨॥ ಭವನ ॥

ಇದೂ ಅಲ್ಲದೆ ಪುರಂಧರ ದಾಸರು ಹೆಣ್ಣು (ಹೆಂಗಸು) ಮಣ್ಣು (ಭೂಮಿ) ಹೊನ್ನು (ಐಶ್ವರ್ಯ) ಇವುಗಳ ಅಸಾರತೆಯನ್ನು ಕುರಿತು ಈ ಮುಂದೆ ಹೇಳುವ ರೀತಿಯಲ್ಲಿ ಕೀರ್ತಿಸಿದ್ದಾರೆ:—

## ಕೀರ್ತನೆ–ಕಾಂಬೋಧಿ–ಝಂಪೆ-ತಾಳ.

ಆರು ಹಿತವರು ನಿನಗೆ ಮೂರು ಮಂದಿಗಳೊಳಗೇ ? । ಪಲ್ಲವಿ ॥
ನಾರಿಯೋ, ಧಾರಿಣಿಯೋ, ಬಲುಧನದ ಸಿರಿಯೋ ? ॥ ಅ–ಪಲ್ಲವಿ ॥

ಅನ್ಯರಲಿ ಜನಿಸಿರ್ದ ಅಂಗನೆಯು ಕರೆತಂದು ।
ತನ್ನ ಮನೆಗವಳ ಯಜಮಾನಿ ಯೆನಿಸಿ ॥
ಭಿನ್ನವಿಲ್ಲದೆ ಅರ್ಧ ದೇಹವೆನಿಸುವ ಸತಿಯು ।
ಕಣ್ಣಿನೊಳು ನೋಡಲಮ್ಮಳು ಕಾಲವಶದಿ ॥೧॥ ಆರು ॥

ಮುನ್ನ ಶತಕೋಟಿ ರಾಯರುಗಳಾಳಿದಾ ನೆಲನ ।
ತನ್ನದೆಂದೆನುತ ಶಾಸನವ ಬರೆಸಿ ॥
ಚಿನ್ನದಾ ಮನೆಗಟ್ಟಿ ಕೋಟೆ ಕೊತ್ತಳವಿಕ್ಕಿ ।
ತನ್ನವನು ತನುವಳಿಯೆ ಹೊರಗೆ ಹಾಕುವರು ॥೨॥ ಆರು ॥

ಉದ್ಯೋಗ, ವ್ಯವಹಾರ, ನೃಪಸೇವೆ, ಕುಶಲಗತಿ, ।
ಕ್ಷುದ್ರತನ, ಕಳವು, ಪರಿತಾಪದಿಂದ ॥
ಬುದ್ಧಿಯಿಂದಲೆ ಗಳಿಸಿ ಸಿಕ್ಕಿರ್ದ ಅರ್ಥವನು ।
ಸದ್ಯದಲಿ ಅರುಂಬವರು ? ಹೇಳು ಮನುಜಾ ! ॥೩॥ ಆರು ॥

ಎಂಬಂತೆ ಎಲ್ಲಿಯೋ ಯಾರ ಮನೆಯಲ್ಲಿಯೋ ಯಾರ ಹೊಟ್ಟೆಯ ಯೋ ಹುಟ್ಟಿದ ಹೆಣ್ಣನ್ನು ಕರೆತಂದು ತನ್ನ ಮನೆಗೆ ಅವಳೇ ಒಡತಿಯೆಂ ಭಾವಿಸಿ, ಸಮಸ್ತ ವಿಷಯಗಳಲ್ಲಿಯೂ ಪತಿಯ 'ಅರ್ಧಾಂಗಿ' ಎಂದೆನಿ ದರೂ ಪತಿಯು ಮೃತನಾದರೆ ಅವನ ದೇಹದ ಕಡೆಯೂ ನಿಟ್ಟಿಸದೆ ಇರು ಆ ಸತಿಯು ಹಿತಳೇ ? ಇಲ್ಲವೇ, ಹಿಂದೆ ಅನೇಕ ರಾಜಾಧಿರಾಜರುಗ ಆಳಿದ್ದ ಈ ಭೂಮಿಯನ್ನು 'ಈ ರಾಜ್ಯವು ನನ್ನದು ನಾನೇ ಚಕ್ರವರ್ತಿ ಯೆಂದು ಹೊಗಳಿಸಿಕೊಂಡು, ಅರಮನೆ, ಕೋಟೆ ಇವೇ ಮೊದಲಾದು ಗಳನ್ನು ಕಟ್ಟಿಕೊಂಡು. ಕೆಲವುಕಾಲ ಬಹು ವೈಭವದಿಂದ ಬಾಳಿ ಮೃ ನಾದದ್ದೇ ಆದರೆ ಆತನನ್ನು ತಾನು ಕಟ್ಟಿದ ಅರಮನೆಯಿಂದಲೇ ಹೊರಕ ಸಾಗಿಸುತ್ತಾರೆ. ಹೀಗೆ ತನ್ನ ಮನೆ-ಮಠ ರಾಜ್ಯಗಳನ್ನು ನಂಬಬಹುದೇ ಅಥವಾ, ಉದ್ಯೋಗ, ವ್ಯವಹಾರ, ರಾಜಸೇವೆ, ಚಮತ್ಕಾರ, ಮೋಸ ಕಳ್ಳತನ ಇವೇ ಮೊದಲಾದ ಮಾರ್ಗಗಳಿಂದ ಬಹು ಕಷ್ಟಪಟ್ಟು ಸಂಪಾ ದಿಸಿದ ಐಶ್ವರ್ಯವು, ಮನುಷ್ಯನು ಮೃತಿಹೊಂದಿದ ಮೇಲೆ ಇವನ ಹಿಂ

ಬಂದೀತೆ? ಅಥವಾ ಇವನಿಗೆ ಸದ್ಗತಿ ಕೊಡುವುದಕ್ಕೆ ಸಹಾಯವಾದೀತೆ? ಎಂದಿಗೂ ಇಲ್ಲ. ಇಂತಹ ಐಶ್ವರ್ಯವನ್ನು ನಂಬಿಕೊಂಡಿರಬಹುದೇ?

ರಾಗ–ಪೀಲು–ಮಠ್ಯತಾಳ.

ನಾನು ನೀನು ಎನ್ನದಿರು ಹೀನಮಾನವ ||ಪ||
ಜ್ಞಾನದಿಂದ ನಿನ್ನ ನೀನು ತಿಳಿದು ನೋಡೆಲೋ ||ಅ||
ಹೆಣ್ಣು ಹೊನ್ನು ಮಣ್ಣು ಮೂರು ನಿನ್ನ ದೇನೆಲೋ |
ಅನ್ನ ದಿಂದ ಬಂದ ಕಾಮ ನಿನ್ನ ದೇನೆಲೋ ||
ಕರ್ಣ ದಿಂದ ಬರುವ ಘೋಷ ನಿನ್ನದೇನೆಲೋ |
ನಿನ್ನ ಬಿಟ್ಟು ಪೋಪ ದೇಹ ನಿನ್ನದೇನೆಲೋ || ೧ || ನಾನು ||
ಹಲವು ಜನ್ಮ ದಿಂದ ಬಂದಿರುವೆ ನೀನೆಲೋ |
ಮಲದ ಗರ್ಭದಲಿ ನಿಂದಿರುವೆ ನೀನೆಲೋ ||
ಜಲದ ದಾರಿಯಲ್ಲಿ ಬಂದಿರುವೆ ನೀನೆಲೋ |
ಕುಲವು ಜಾತಿ ಗೋತ್ರವುಳ್ಳವನು ನೀನೆಲೋ || ೨ || ನಾನು ||
ಕಾಲ ಕರ್ಮ ಶೀಲ ನೇಮ ನಿನ್ನ ದೇನೆಲೋ |
ಜಾಲ ವಿದ್ಯೆ ಬಯಲ ಮಾಯೆ ನಿನ್ನ ದೇನೆಲೋ ||
ಕೀಲು ಜಡಿದ ತೊಗಲ ಬೊಂಬೆ ನಿನ್ನ ದೇನೆಲೋ |
ಲೋಲ ಆದಿಕೇಶವನ ಭಕ್ತ ನಾಗೆಲೋ || ೩ || ನಾನು || (ಕನಕದಾಸ)

ಮನುಷ್ಯನ ಜೀವಮಾನದ ಅಸಾರತೆಯೆಷ್ಟೆಂಬುದು ಮೇಲಿನ ಕೀರ್ತನೆಯಿಂದ ತಿಳಿಯುತ್ತದೆ.

ಈ ವಿಧವಾದ ದೃಶ್ಯಗಳು ಪ್ರತಿದಿನವೂ ಪ್ರತಿಯೊಬ್ಬರಿಗೂ ಈ ಲೋಕದಲ್ಲಿ ಕಾಣ್ಬರುತ್ತಿರುವುದರಿಂದ, ಜನಗಳು, ಸತ್ತವರಿಗೂ ತಮಗೂ ಪೂರ್ವಜನ್ಮದಲ್ಲಿ ಮಾಡಿದ ಯಾವುದೋ ಒಂದು ಕರ್ಮಫಲದಿಂದ ಕೆಲ ಕಾಲಮಟ್ಟಿಗೆ ಈ ಸಂಬಂಧವು ದೊರಕಿ, ಈ ದೇಹ ಕಳೆದೊಡನೆಯೇ ಆ ಸಂಬಂಧವು ಹರಿದುಹೋಗುವುದೆಂದೂ ಮರಣಾನಂತರ ಪುನಃ ಮುಂದಿನ ಜನ್ಮದಲ್ಲಿಯೂ ಇದೇ ಸಂಬಂಧವು ದೊರಕುವುದೆಂಬ ಸಂಭವವಿಲ್ಲವೆಂದೂ ತಿಳಿದು, ಸತ್ತವರಿಗಾಗಿ ಯಾವ ಮಾತ್ರವೂ ದುಃಖಿಸಿ ಫಲವಿಲ್ಲವೆಂದು ತಿಳಿಯಬೇಕು.

# ಸ್ತ್ರೀಪುರುಷರಲ್ಲಿ ನೆಲಸಿರುವ ಕಾಮಕ್ರೋಧಾದಿ ದಶ ಗುಣಗಳು.

ಮನುಷ್ಯನು ನೀರಿನಮೇಲಿನ ಗುಳ್ಳೆಯಂತೆ ಕ್ಷಣಿಕವಾದ ಹೆಂಡತಿ ಮಕ್ಕಳು, ಬಂಧುಮಿತ್ರರು ಇವರ ವಿಯೋಗಕ್ಕೆ ಒಂದು ಕಡೆ ದುಃಖಪಡುತ್ತಲೂ, ಮತ್ತೊಂದು ಕಡೆ ತಮ್ಮ ಸ್ವಭಾವಜನ್ಯವಾದ ದುರ್ಮಾರ್ಗವನ್ನು ಬಿಡದೆ ಮೋಸವೃತ್ತಿಯಿಂದ ಧನಾರ್ಜನೆಮಾಡುತ್ತಲೂ, ನೀಚವೃತ್ತಿಯನ್ನನುಸರಿಸುತ್ತಲೂ ಇರುವನು. ಇಷ್ಟೇ ಅಲ್ಲದೆ, ಬಹು ಮದಾಂಧನಾಗಿ ಮುಂದೆ ಬರುವ ಜನ್ಮದ ವಿಷಯದಲ್ಲಿ ಯಾವ ಯೋಚನೆಯನ್ನೂ ಮಾಡದೆ, ಸ್ತ್ರೀ ಮೋಹವೆಂಬ ಬಲೆಗೆ ಸಿಕ್ಕಿಬಿದ್ದು, ದಾರೇಷಣ, ಪುತ್ರೇಷಣ, ಧನೇಷಣ ಗಳೆಂಬ ಈಷಣತ್ರಯಗಳಿಂದ ಕೂಡಿದ ಸಂಸಾರಸಮುದ್ರದ ತರಂಗ ಗಳಲ್ಲಿ ತೇಲಿ ಮುಳುಗುತ್ತ ನಿತ್ಯಸುಖದ ವಾಸನೆಯೇ ಅರಿಯದವನಾಗಿ ದುಃಖಪಡುತ್ತಿರುವನು. ಇಂತಹ ಮಾಯೆಯಿಂದ ದುಃಖಿಸುವವರು ಜ್ಞಾನವನ್ನು ಸಂಪಾದಿಸಿ, ದೇಹವೇ ಬೇರೆ ತಾನೇ ಬೇರೆ ಎನ್ನುವ ವಿಷಯ ಗಳನ್ನು ತಿಳಿದುಕೊಂಡು ಸುಖವನ್ನನುಭವಿಸಲು ಪ್ರಯತ್ನ ಪಡದೆ, ಸ್ತ್ರೀ ಪುರುಷರು ಕಾಮಾದಿ ದಶವರ್ಗಗಳಲ್ಲಿ ಸಿಕ್ಕಿಕೊಂಡು ನಶಿಸುತ್ತಿರುತ್ತಾರೆ. ಈ ದಶ ಗುಣಗಳೂ ಈ ಕೆಳಗೆ ವಿವರಿಸಲ್ಪಟ್ಟಿವೆ.

1. **ಕಾಮವು:—** ಹೆಂಡತಿಮಕ್ಕಳಲ್ಲಿಯೂ, ಧನಧಾನ್ಯಾದಿ ಐಶ್ವರ್ಯ ಗಳಲ್ಲಿಯೂ ಅಧಿಕ ಪ್ರೀತಿಯಿಟ್ಟಿರುವುದಕ್ಕೆ ಕಾಮವೆಂದು ಹೆಸರು. ಈ ಕಾಮದಿಂದ ಕಷ್ಟವನ್ನು ಹೊಂದಿದವರು ರಾವಣ, ನರಕಾಸುರ ನೊದಲಾ ದವರು.

2. **ಕ್ರೋಧವು:—** ಒಬ್ಬರು ಸುಖವಾಗಿರುವುದನ್ನು ನೋಡಿ ಸಹಿಸಲಾರದೆ ಅವರನ್ನು ಕೆಡಿಸುವುದಕ್ಕಾಗಿ ಪ್ರಯತ್ನ ಪಡುವುದೇ ಕ್ರೋಧ ವೆನ್ನಿಸಿಕೊಳ್ಳುವುದು. ಈ ಕ್ರೋಧದಿಂದಲೇ ಬಕಾಸುರಾದಿ ರಾಕ್ಷಸರು ಕಷ್ಟವನ್ನು ಅನುಭವಿಸಿದರು.

3. **ಲೋಭವು :**— ತನಗೆ ಸಂಬಂಧಿಸಿದ ಸ್ವತ್ತುಗಳಲ್ಲಿ ಮತ್ತೊಬ್ಬರಿಗೆ ಸ್ವಲ್ಪವೂ ಕೊಡದೆ, ಎಲ್ಲವನ್ನೂ ತಾನೇ ಅನುಭವಿಸತಕ್ಕುದೇ ಲೋಭವು. ಈ ಲೋಭದಿಂದ ದುರ್ಯೋಧನಾದಿಗಳು ಹತರಾದರು.

4. **ಮೋಹವು :**— ಮಾತೃಪುತ್ರ ಕಳತ್ರಾದಿಗಳಲ್ಲಿ ವಿಶೇಷ ಪ್ರೀತಿಯನ್ನಿಟ್ಟು ತನಗಿರುವ ದ್ರವ್ಯವು ಸಾಲದೆಂದು ಮತ್ತಷ್ಟು ಮತ್ತಷ್ಟು ಸಂಪಾದಿಸಬೇಕೆಂಬ ಆಶೆಯೇ ಮೋಹವು. ಪುತ್ರಮೋಹದಿಂದ ದಶರಥನು ಮೃತಪಟ್ಟುದೇ ಇದಕ್ಕೆ ನಿದರ್ಶನ.

5. **ಮದವು :**— ದ್ರವ್ಯವು ಹೆಚ್ಚಾಗಿರುವುದರಿಂದ ಇತರರನ್ನು ಲಕ್ಷಿಸದೆ ಗರ್ವಪಡುವಿಕೆಯೇ ಮದವು. ಕಾರ್ತವೀರ್ಯಾರ್ಜುನನ ನಾಶಕ್ಕೆ ಅವನ ಮದವೇ ಮೂಲ.

6. **ಮತ್ಸರ :**— ಇತರರ ಉತ್ತಮ ಸ್ಥಿತಿಯನ್ನು ನೋಡಿ ಸಹಿಸದೆ ಅವರಿಗೆ ಕೆಡಕನ್ನೆಣಿಸುವುದಕ್ಕೆ ಮತ್ಸರವೆಂದು ಹೆಸರು. ಈ ಮಾತ್ಸರ್ಯದಿಂದಲೇ ಶಿಶುಪಾಲನು ಶ್ರೀ ಕೃಷ್ಣನ ಚಕ್ರಕ್ಕೆ ಬಲಿಯಾದನು.

7. **ದರ್ಪವು :**— ಪುತ್ರಮಿತ್ರ ಧನಧಾನ್ಯಾದಿಗಳಲ್ಲಿ ತನಗೆ ಸಮನಾದವರು ಬೇರೊಬ್ಬರೂ ಇಲ್ಲವೆಂದು ತಿಳಿಯುವ ಹೆಮ್ಮೆಗೆ ದರ್ಪವೆಂದು ಹೆಸರು. ಪರಶುರಾಮನ ಗರ್ವಭಂಗವು ಅವನಿಗಿರುವ ದರ್ಪದ ಫಲ.

8. **ಡಂಭವು :**— ಪಾರಮಾರ್ಥಿಕ ಜ್ಞಾನವಿಲ್ಲದೆ ಜನಮೆಚ್ಚಿಕೆಗಾಗಿ ದಾನಧರ್ಮಾದಿಗಳನ್ನು ಮಾಡುವುದಕ್ಕೆ ದಂಭವೆಂದು ಹೆಸರು. ಪುರೂರವ ಚಕ್ರವರ್ತಿಯು ಇದಕ್ಕೆ ದೃಷ್ಟಾಂತವು.

9. **ಈರ್ಷ್ಯ :**— ತನಗೆ ಉಂಟಾದ ದುಃಖ ಮತ್ತು ಕಷ್ಟಗಳು ಇತರರಿಗೂ ಉಂಟಾಗಬೇಕೆಂದು ಕೋರುವುದೇ ಈರ್ಷ್ಯ. ಇದಕ್ಕೆ ಹರಿಸಾಕ್ಷನೇ ನಿದರ್ಶನ.

10. **ಅಸೂಯೆ :**— ಕೆಟ್ಟದ್ದನ್ನು ಎಣಿಸಿದವನಿಗೆ ಪುನಃ ಕೆಟ್ಟದ್ದನ್ನು ಮಾಡಬೇಕೆಂದು ಯತ್ನಿಸುವುದು. ಪರರೇಳಿಗೆಯನ್ನು ಸಹಿಸದೆ ಅವರ ಉತ್ತಮ ಸ್ಥಿತಿಗಾಗಿ ದುಃಖಪಟ್ಟು ಅವರಿಗೆ ಯಾವಾಗಲೂ ಕೆಟ್ಟದ್ದನ್ನು ಎಣಿಸುತ್ತಿರುವುದು ಅಸೂಯೆಯೆಂದೆನಿಸುವುದು. ಇದಕ್ಕೆ

ಪೌಂಡರೀಕವಾಸುದೇವನೇ ಉದಾಹರಣೆ. ಇವೆಲ್ಲಕ್ಕೂ ದೃಷ್ಟಾಂತವು ಶ್ರೀ ಭಗವದ್ಗೀತೆ ಅಧ್ಯಾಯ 16 ಶ್ಲೋಕ 13-14-15-16 ಇವುಗಳು. ಅವುಗಳನ್ನು ಇಲ್ಲಿ ಉದಹರಿಸಿವೆ.

ಶ್ಲೋ ॥ ಇದ ಮದ್ಯ ಮಯಾ ಲಬ್ಧ ಮಿಮಂ ಪ್ರಾಪ್ಸ್ಯೇ ಮನೋರಥಮ್ ।
ಇದ ಮಸ್ತೀ ದಮಪಿ ಮೇ ಭವಿಷ್ಯತಿ ಪುನ ರ್ಧನಂ ॥
ಅಸೌ ಮಯಾ ಹತ ಶ್ಶತ್ರುಃ ಹನಿಷ್ಯೇ ಚಾ ಪರಾ ನಪಿ ।
ಈಶ್ವರೋಽಹ ಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥
ಆಢ್ಯೋಽಭಿಜನವಾ ನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥

ಅಂದರೆ ಈ ಭೋಗ್ಯ ಪದಾರ್ಥವು ನನ್ನಿಂದ ಹೊಂದಲ್ಪಟ್ಟಿತು. ಈಗ ನನ್ನ ಮನಸ್ಸಿನಲ್ಲಿ ನೆನೆಸಿದ ಭೋಗ್ಯಪದಾರ್ಥವು ಶೀಘ್ರವಾಗಿಯೇ ನನಗೆ ಲಭಿಸುವುದು. ನನ್ನಲ್ಲಿ ಇಷ್ಟು ಪದಾರ್ಥವಿದೆ, ಮುಂದೆ ನನಗೆ ಧನಪ್ರಾಪ್ತಿಯೂ ಆಗುವುದು. ಆ ಶತ್ರುವು ನನ್ನಿಂದ ಹತನಾದನು. ನನ್ನ ಇತರ ಶತ್ರುಗಳನ್ನೂ ನಾನು ಕೊಲ್ಲಬಲ್ಲೆನು. ನನಗೆ ಸಾಮರ್ಥ್ಯವಿದೆ. ಸಮಸ್ತ ಭೋಗಗಳನ್ನೂ ಅನುಭವಿಸುತ್ತಿರುವೆನು ; ಎಲ್ಲಾ ವಿಧವಾಗಿಯೂ ಸಿದ್ಧನಾಗಿಯೇ ಇರುವೆನು ; ಮಿತ್ರರು, ಆಪ್ತರು ಇವರೊಡನೆ ಕೂಡಿರುವುದರಿಂದಲೇ ಬಲವಾಗಿಯೂ ಸುಖಿಯಾಗಿಯೂ ಇರುವೆನು. ಇದಲ್ಲದೆ ನಾನು ಧನಿಕನೂ ಪರಿವಾರದಿಂದ ಕೂಡಿದವನೂ ಆಗಿರುವುದರಿಂದ ನನ್ನ ಸಮಾನನು ಬೇರೆ ಯಾವನಿರುವನು ? ಯಶಸ್ಸನ್ನು ಗಳಿಸಲು ಯಜ್ಞಯಾಗಾದಿಗಳನ್ನು ನಡೆಸುವೆನು. ನಟವಿಟಾದಿಗಳಿಗೆ ಬೇಕಾದಷ್ಟು ಹಣವನ್ನು ಕೊಡುವೆನು ಮತ್ತು ಅದರಿಂದ ಹೆಚ್ಚಾದ ಆನಂದವನ್ನು ಅನುಭವಿಸುವೆನು. ಎಂಬದಾಗಿ ಅಜ್ಞಾನದಿಂದ ವ್ಯಾಮರೆತವರು ಹೆಮ್ಮೆಪಡುತ್ತಿರುವರು. ಮೇಲೆ ಹೇಳಿದಂತೆ ಮೋಹಪಾಶದಲ್ಲಿ ಸಿಕ್ಕಿಬಿದ್ದು, ನಾನಾವಿಧವಾದ ಯೋಚನಾತರಂಗಗಳಿಗೆ ಎಡೆಗೊಟ್ಟು, ವಿಷಯಭೋಗಗಳಲ್ಲಿ ಆಸಕ್ತರಾಗಿ ಕಡೆಯಲ್ಲಿ ಅಪರಿಶುದ್ಧವಾದ ಮತ್ತು ಘೋರವಾದ ನರಕಕ್ಕೆ ಬೀಳುವರು. ಇದೂ ಅಲ್ಲದೆ ಈ ವಿಷಯವೇ 17-18-19 ಶ್ಲೋಕಗಳಲ್ಲಿ ಮುಂದರಿಸಲ್ಪಟ್ಟಿದೆ.

ಶ್ಲೋ ॥ ಆತ್ಮಸಂಭಾವಿತಾಃ ಸ್ತಬ್ಧಾಃ ಧನಮಾನಮದಾನ್ವಿತಾಃ ।
ಯಜಂತೇ ನಾಮ ಯಜ್ಞೈಸ್ತೇ ದಂಭೇನಾ ವಿಧಿಪೂರ್ವಕಂ ॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾ ಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥

ತಾ ನಹಂ ದ್ವಿಷತಃ ಕ್ರೂರಾ ಸಂಸಾರೇಷು ನರಾಧಮಾ ।
ಕ್ಷಿಪಾ ಮ್ಯಜಸ್ರ ಮಶುಭಾ ಆಸುರೀ ಷ್ವೇವ ಯೋನಿಷು ॥

ಎಂದರೆ—ತಮ್ಮನ್ನು ತಾವೇ ಹೊಗಳಿಕೊಳ್ಳುವವರೂ, ಧನ, ಮಾನ, ಮದ ಇವುಗಳಿಂದ ಕೂಡಿದವರಾಗಿಯೂ, ತಮ್ಮ ಮತ್ತು ಇತರರ ಹೃದಯ ಕಮಲದಲ್ಲಿ ನೆಲಸಿರುವ ನನ್ನನ್ನು ದೂಷಿಸುವವರೂ, ಜನಗಳನ್ನು ಮೆಚ್ಚಿಸುವ ಸಲುವಾಗಿಯೇ ವೇದಮಾರ್ಗಗಳಿಗೆ ವಿರುದ್ಧವಾದ ರೀತಿಯಲ್ಲಿ ಹೆಸರಿಗೆ ಮಟ್ಟಿಗೆ ಯಜ್ಞಯಾಗಾದಿಗಳೆಂದು ಕರೆಯಲ್ಪಡುವ ಕರ್ಮಗಳನ್ನು ಆಚರಿಸುತ್ತಿರುವವರೂ, ಅಂದರೆ ಡಂಭದಿಂದ ಸತ್ಕರ್ಮಗಳನ್ನು ನಡೆಸುವವರಂತೆ ನಟಿಸುತ್ತಿರುವರೂ, ಗುಣಿಗಳಲ್ಲಿ ದೋಷಗಳನ್ನೆಣಿಸುತ್ತ ದುರ್ಗುಣಿಗಳನ್ನು ಸಂಭಾವಿಸುತ್ತ, ಅಹಂಕಾರ, ಬಲ, ದರ್ಪ, ಕಾಮ ಕ್ರೋಧ ಇವುಗಳನ್ನು ಆಶ್ರಯಿಸಿದವರೂ ಆಗಿ ಅಂತರ್ಯಾಮಿಯಾದ ನನ್ನಲ್ಲಿ ದ್ವೇಷವನ್ನೇ ಸಾಧಿಸುತ್ತಿರುವ ದುಷ್ಟಾತ್ಮರನ್ನು ಅಪರಿಶುದ್ಧವಾದ ಆಸುರೀ ಯೋನಿಗಳಲ್ಲಿಯೇ ಜನ್ಮವೆತ್ತುವಂತೆ ಮಾಡುವೆನು ಎಂದು ಕೃಷ್ಣಪರಮಾತ್ಮನು ಅರ್ಜುನನ್ನು ಕುರಿತು ಹೇಳುತ್ತಾನೆ. ಇಷ್ಟೇ ಅಲ್ಲದೆ, ಅಧ್ಯಾಯ 16 ಶ್ಲೋಕ 7ರಲ್ಲಿ

ಶ್ಲೋ ॥ ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದು ರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥

ಆಸುರಭಾವ ಗುಣಗಳನ್ನುಳ್ಳವರು, ಧರ್ಮಕಾರ್ಯಗಳಲ್ಲಿ ಪ್ರವೃತ್ತಿಯನ್ನೂ, ಅಧರ್ಮಾಚರಣೆಗಳಲ್ಲಿ ನಿವೃತ್ತಿಯನ್ನೂ ತಿಳಿಯರು. ಇಂತಹ ಜನಗಳಲ್ಲಿ ವಿಧ್ಯುಕ್ತವಾದ ಶೌಚ ಅಂದರೆ ಮನಶ್ಶುದ್ಧಿಯೂ, ವರ್ಣಾಶ್ರಮ ಧರ್ಮಗಳಿಗೆ ತಕ್ಕಂತೆ ಸದಾಚಾರ ಸಂಪನ್ನತೆಯೂ, ಸತ್ಯವೂ ಎಂದಿಗೂ ಇರುವುದಿಲ್ಲ. ಅಧ್ಯಾಯ 16 ಶ್ಲೋಕ 4.

ಶ್ಲೋ॥ ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯ ಮೇವ ಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದ ಮಾಸುರೀಂ ॥

ಎಲೈ ಪಾರ್ಥನೇ! ತಾನು ಮಾಡುವ ಸತ್ಕಾರ್ಯವನ್ನು ಇತರರು ನೋಡಿ ತನ್ನನ್ನು ಹೊಗಳಬೇಕೆಂಬ ಉದ್ದೇಶ್ಯದಿಂದ ಮಾಡುತ್ತಿರುವುದೂ, ಒಳ್ಳೆಯ ನಡತೆಯಿಂದ ಕೂಡಿದ ಹಿರಿಯರಿಗೆ ಅಂದರೆ ಪ್ರಾಜ್ಞರ ವಿಷಯದಲ್ಲಿ ತಗ್ಗಿ ನಡೆಯದಿರುವುದೂ, ಆತ್ಮ ಪ್ರಶಂಸೆ ಮಾಡಿಕೊಳ್ಳುವುದೂ, ತನ್ನನ್ನು ಗೌರವಿಸಲಿಲ್ಲವೆಂದು ಅವರಲ್ಲಿ ದ್ವೇಷವನ್ನು ಸಾಧಿಸುವುದೂ, ಯಾರನ್ನಾದರೂ ಬಹು ಕಾಠಿಣ್ಯದಿಂದ ದೂಷಿಸಿ ಮಾತನಾಡುವಿಕೆಯೂ, ಇವೇ ಮೊದಲಾದ ಗುಣಗಳನ್ನು ಹೊಂದಿ, ತಿಳಿವಳಿಕೆಯನ್ನು ತಿಳಿಸುವವರನ್ನೂ ಲಕ್ಷಿಸದೆ, ತಮ್ಮಿಷ್ಟ ಬಂದಂತೆ ಮೂಢಮಾರ್ಗದಲ್ಲಿ ನಡೆದುಕೊಳ್ಳುವವರು ಭವಿಷ್ಯದಲ್ಲಿ ದುಃಖವನ್ನುಂಟುಮಾಡುವ ಆಸುರೀ ಮಾರ್ಗಾವಲಂಬಿಗಳಾಗುವರು. ಮತ್ತು ಅಧ್ಯಾಯ 16 ಶ್ಲೋಕ 21.

ಶ್ಲೋ॥ ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನ ಮಾತ್ಮನಃ ।
ಕಾಮಃ ಕ್ರೋಧ ಸ್ತಥಾ ಲೋಭಃ ತಸ್ಮಾ ದೇತತ್ತ್ರಯಂ ತ್ಯಜೇತ್ ॥

ಲೋಕದಲ್ಲಿ ವಿಧ್ಯುಕ್ತವಾಗಿ ನಡೆಯಬೇಕೆಂಬ ಇಚ್ಛೆಯನ್ನುಳ್ಳವರೂ, ಕಾಮ, ಕ್ರೋಧ, ಲೋಭ ಈ ಗುಣಗಳನ್ನು ಬಿಡದಿರುವವರಾದರೆ, ಅವರಿಗೆ ಆಸುರ (ಅಂದರೆ ಹುಲಿ ಮೊದಲಾದ ಕ್ರೂರ ಜಂತುಗಳ) ಯೋನಿಗಳಲ್ಲಿ ಪ್ರವೇಶವನ್ನುಂಟುಮಾಡಿಸಿ ಅವರನ್ನು ನರಕಭಾಜನರನ್ನಾಗಿ ಮಾಡುತ್ತೇನಾಗಿ, ಮುಮುಕ್ಷುಗಳಾದವರು ಇಂತಹ ದುರ್ಗುಣಗಳನ್ನು ಸರ್ವಥಾ ತ್ಯಜಿಸತಕ್ಕದ್ದು. ಇದೂ ಅಲ್ಲದೆ ಅಧ್ಯಾಯ 16 ಶ್ಲೋಕ 20.

ಶ್ಲೋ॥ ಆಸುರೀಂ ಯೋನಿ ಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾ ಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥

ಓ ಕುಂತೀಕುಮಾರಾ! ಪ್ರತಿಯೊಂದು ಜನ್ಮದಲ್ಲಿ ಆಸುರಭಾವವನ್ನು ಹೊಂದಿ ಹುಟ್ಟಿದ ಮೂಢರು ನನ್ನಲ್ಲಿ ಐಕ್ಯಹೊಂದುವುದಕ್ಕೆ ಶಕ್ತಿಸಾಲದೆ, ಆ ಜನ್ಮವನ್ನು ಬಿಟ್ಟು ಅತಿ ನೀಚವಾದ ಮತ್ತೊಂದು ಜನ್ಮವನ್ನು ಹೊಂದುವರು. ಈ ಗುಣಗಳೆಲ್ಲವನ್ನೂ ತೊಲಗಿಸಿ ಕೆಳಗೆ ಹೇಳಿದ ಮೂರು ಗುಣಗಳನ್ನು ಮಾತ್ರವೇ ಅಂಗೀಕರಿಸಬೇಕು. ಅವು ಯಾವುವೆಂದರೆ:—**ಇಚ್ಛೆ, ಭಕ್ತಿ ಮತ್ತು ಶ್ರದ್ಧೆ.**

1. **ಇಚ್ಛೆ:—**ಆಹಾರವನ್ನು ತೆಗೆದುಕೊಳ್ಳಬೇಕು, ಮಲಮೂತ್ರಾದಿಗಳನ್ನು ವಿಸರ್ಜಿಸಬೇಕು, ಎಂಬುವ ಇಷ್ಟವನ್ನು ತೋರ್ಪಡಿಸುವುದಕ್ಕೆ ಇಚ್ಛೆಯೆಂದು ಹೆಸರು. ಇವುಗಳು ಕ್ರಮವಾಗಿ ನಡೆಯದಿದ್ದರೆ ಶರೀರಕ್ಕೆ ಸುಖವಿರದು. ಇವುಗಳನ್ನು ತಡೆಯಿಲ್ಲದೆ ನಡೆಸುತ್ತಿರುವುದರಿಂದ ಇತರರಿಗೆ ಯಾವ ಮಾತ್ರವೂ ಕಷ್ಟವುಂಟಾಗದು.

2. **ಭಕ್ತಿ:—**ಗುರು, ಈಶ್ವರ ಇವೇ ಮೊದಲಾದ ಪೂಜ್ಯವಸ್ತುಗಳಲ್ಲಿ ಗೌರವಯುಕ್ತವಾದ ಪ್ರೀತಿಯನ್ನಿಡುವುದಕ್ಕೆ ಭಕ್ತಿಯೆಂದು ಹೆಸರು.

3. **ಶ್ರದ್ಧೆ:—**ಗುರೂಪದೇಶಗಳಲ್ಲಿ ನಂಬಿಕೆಯನ್ನಿಟ್ಟು ನಿಶ್ಚಲವಾದ ಮನಸ್ಸಿನಿಂದ ಆ ಗುರುವು ಹೇಳಿದಂತೆ ನಡೆಯುತ್ತಿರುವುದೇ ಶ್ರದ್ಧೆ.

ಈ ಮೊದಲು ಹೇಳಿದ ದಶಗುಣಗಳೂ ಜನ್ಮಗಳಿಗೆ ಮೂಲಕಾರಣಗಳಾದ ಕೋರಿಕೆಗಳನ್ನು ಹುಟ್ಟಿಸಿ ಹುಟ್ಟುಸಾವುಗಳೆಂಬ ಮಾಯೆಯೊಳಕ್ಕೆ ಸೆಳೆದುಕೊಂಡುಹೋಗಿ ಬಿಡುತ್ತವೆ. ಆದುದರಿಂದ ಅವುಗಳನ್ನು ತ್ಯಜಿಸಿ ಇಚ್ಛೆ, ಭಕ್ತಿ ಮತ್ತು ಶ್ರದ್ಧೆಗಳೆಂಬ ಮೇಲೆ ವಿವರಿಸಿದ ಮೂರು ಗುಣಗಳನ್ನು ಸಾಧನೆ ಮಾಡುವವರು, ಜನ್ಮರಾಹಿತ್ಯಕ್ಕೆ ಪಾತ್ರರಾಗಿ ಮೋಕ್ಷಭಾಗಿಗಳಾಗುತ್ತಾರೆಂದು ಶ್ರುತಿ ಸ್ಮೃತಿಗಳು ಸಾರಿಹೇಳುತ್ತಿವೆ.

ಈ ಲೋಕದಲ್ಲಿರುವ ಮಾನವರಲ್ಲಿ ಹಿಂದೆ ಹೇಳಿದ ಹತ್ತು ಗುಣಗಳಲ್ಲಿ ಒಂದೆರಡು ಗುಣಗಳಾದರೂ ಪ್ರತಿಯೊಬ್ಬನಲ್ಲಿಯೂ ಇದ್ದೇ ಇರುವುವು. ಇದನ್ನು ತಿಳಿದುಕೊಳ್ಳಬೇಕಾಗಿದ್ದಲ್ಲಿ, ಮೇಲೆ ಹೇಳಿದ ಗುಣವಿವರಣೆಯನ್ನು ಯೋಚಿಸುತ್ತ ಬಂದರೆ, ತನ್ನಲ್ಲಿರುವ ಗುಣಗಳು ಇಂತಹವೆಂದು ತಿಳಿಯಬಹುದು. ಈ ದಶವಿಧ ಗುಣಗಳಲ್ಲಿ ಒಂದೂ ಇಲ್ಲದೆ ಇರುವವನು ಪರಬ್ರಹ್ಮನೊಬ್ಬನೇ ಹೌದು. ಆ ಪರಬ್ರಹ್ಮನಲ್ಲಿ ಐಕ್ಯವನ್ನು ಕೋರುವವರು ಈ ಗುಣಗಳ ಸಂಬಂಧವು ಲೇಶವೂ ಇಲ್ಲದಂತೆ ಪ್ರಯತ್ನಿಸಬೇಕು. ಇವುಗಳಲ್ಲ ಒಂದಿದ್ದರೂ ಜನನಮರಣರೂಪವಾದ ಸಂಸಾರಕ್ಕೆ ಭಾಗಿಯಾಗುವರೆಂಬುದು ನಿಜ. ಆದುದರಿಂದ ಈ ಗುಣಗಳ ವಿವರವನ್ನೂ ಅವು ಮುಕ್ತಿಯ ಮಾರ್ಗಕ್ಕೆ ಹೇಗೆ ಅಡ್ಡಿಬರುತ್ತವೆಂಬುದನ್ನೂ ತಿಳಿದು ಮುಮುಕ್ಷುಗಳು ಅವುಗಳನ್ನು ಕ್ರಮಕ್ರಮವಾಗಿ ಒಂದೊಂದಾಗಿ ಬಿಡುತ್ತ ಬರಬೇಕೆಂಬುದೇ ಈ ಗ್ರಂಥಕರ್ತರ ಆಶಯ.



# ಕಾಳಿಂಗನರ್ತನದ ರಹಸ್ಯಾರ್ಥ ವಿವರಣೆ.

---

ನಮ್ಮ ಶರೀರದಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಗಳೆಂಬ ಐದು ಬಗೆ ವಾಯುಗಳಿವೆ. ಇವೈದಕ್ಕೂ ಪ್ರಧಾನವಾದದ್ದು ಪ್ರಾಣವಾಯುವು. ಇವುಗಳು ಕಣ್ಣಿಗೆ ಅಗೋಚರವಾದದ್ದು. ಇವುಗಳ ಸ್ಥಿತಿ ಮತ್ತು ವ್ಯಾಪಾರಗಳನ್ನು ಜನಗಳಿಗೆ ಚನ್ನಾಗಿ ಮನದಟ್ಟುವಂತೆ ಮಾಡುವುದಕ್ಕಾಗಿಯೇ ಋಷಿಗಳು ಈ ಐದು ವಾಯುಗಳ ಆಕಾರವನ್ನು ತೋರಿಸುವಂತೆ ಐದು ತಲೆಯುಳ್ಳ ಆದಿಶೇಷನ ವಿಗ್ರಹವನ್ನು ಕಲ್ಲಿನಲ್ಲಿ ಕೆತ್ತಿಸಿ ಪೂಜೆಗೆ ಇಟ್ಟರು. ಇದರ ರಹಸ್ಯವೇನೆಂದರೆ:—ಮಧ್ಯ ತಲೆಯು ಪ್ರಾಣವಾಯುವನ್ನೂ, ಉಳಿದ ತಲೆಗಳು ಕ್ರಮವಾಗಿ ಅಪಾನ, ವ್ಯಾನ, ಉದಾನ, ಸಮಾನ ವಾಯುಗಳನ್ನೂ ಸೂಚಿಸುತ್ತವೆ. ಮೇಲೆ ಹೇಳಿದ ಪಂಚವಾಯುಗಳ ವ್ಯಾಪಾರಗಳನ್ನು ಬಂಧಿಸಿ ವಶಪಡಿಸಿಕೊಂಡದ್ದೇ ಆದರೆ, ಇವುಗಳ ಬಲಿಯದಿಂದ ಹೆಚ್ಚುವ ನಮ್ಮಲ್ಲಿರುವ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳನ್ನೂ ಜಯಿಸಬಹುದು. ಇದನ್ನು ಜನಗಳಿಗೆ ತಿಳಿಸುವ ಸಲುವಾಗಿಯೇ ಶ್ರೀ ಕೃಷ್ಣಪರಮಾತ್ಮನು ಪಂಚಶಿರಸ್ಸುಗಳುಳ್ಳ ಕಾಳಿಂಗನೆಂಬ ಸರ್ಪದ ಹೆಡೆಯಮೇಲೆ ತನ್ನ ಕಾಲನ್ನಿಟ್ಟು ಅದರ ಗರ್ವವನ್ನು ನಾಶಮಾಡುವ ನೆಪದಿಂದ ನರ್ತನಮಾಡಿದನು. ಬಾಹ್ಯಪ್ರಪಂಚಕ್ಕೆ ಅದ್ಭುತವಾದ ಆಟ ವಾಗಿ ಕಾಣ್ಬರುವ ಈ ಶ್ರೀ ಕೃಷ್ಣನ ನರ್ತನವು ಅಂತರ್ಮುಖಿಗಳಿಗೆ ಇದು ಅರಿಷಡ್ವರ್ಗಕ್ಕೆ ಮೂಲಕಾರಣಗಳಾದ ನಮ್ಮ ದೇಹದಲ್ಲಿ ಸದಾ ನೆಲೆಸಿರುವ ಪಂಚ ವಾಯುಗಳನ್ನು ತಡೆದು ಅವುಗಳ ವ್ಯಾಪಾರಗಳನ್ನು ಬಂಧಿಸುವ ರೀತಿಯನ್ನು ತಿಳಿಯಹೇಳುವುದಕ್ಕಾಗಿಯೇ, ಎಂದು ತೋರುತ್ತದೆ. ಶ್ರೀ ಕೃಷ್ಣನು ತನ್ನ ಪಾದಗಳಿಂದ ಕಾಳಿಂಗ ಸರ್ಪದ ತಲೆಯಮೇಲೆ ನರ್ತಿಸುತ್ತಿರುವುದನ್ನು ☞ ಈ ಮುಂದೆ ಕಾಣುವ ಪಟದಲ್ಲಿ ನೋಡಿರಿ.



ಕಾಳಿಂಗನರ್ತನವು.

ಮೇಲೆ ಹೇಳಿದುದಲ್ಲದೆ ಕಾಳಿಂಗನರ್ತನದ ರಹಸ್ಯವು ಮತ್ತೊಂ ದುಂಟು. ನಾವು ಸೇವಿಸುವ ಮತ್ತೆ ಹೊರಕ್ಕೆ ಬಿಡುವ ಉಚ್ಛ್ವಾಸ ನಿಶ್ವಾಸ ವಾಯುಗಳಿಗೆ ಯಜ್ಞೋಪವೀತವೆಂದೂ, ಬ್ರಹ್ಮಸೂತ್ರವೆಂದೂ, ಹಂಸವೆಂದೂ, ಶ್ವಾಸವೆಂದೂ, ಉಸಿರೆಂದೂ, ಪ್ರಾಣವೆಂದೂ, ಕುದುರೆ ಯೆಂದೂ, ಕಾಲು ಎಂದೂ ಹೀಗೆ ಅರ್ಥಗಳನ್ನು ಕೊಡುವ ಪರ್ಯಾಯ ನಾಮಗಳುಂಟು. ಈ ಶ್ವಾಸಕ್ಕೆ ಕಾಲು ಎಂಬ ಹೆಸರಿರುವುದರಿಂದ ಈ ಶ್ವಾಸವೆಂಬ ಕಾಲು, ನಾಭಿಸ್ಥಾನವೆಂಬ ಹೊಕ್ಕಳಿನಿಂದ ಹೊರಹೊರಟು, ಲಿಂಗಾಕಾರದಂತಿರುವ ಮೂಗಿನ ಹೊಳ್ಳೆಗಳಲ್ಲಿಳಿದು ಪುನಃ ಆ ಮೂಗಿನ ಹೊಳ್ಳೆಗಳೊಳಕ್ಕೇರುತ್ತ ಸದಾ ಮೂಗಿನಲ್ಲಿಯೇ ಈ ಶ್ವಾಸವು ನರ್ತನವು ಮಾಡುತ್ತಿರುತ್ತದೆಯಾಗಿ ಇದಕ್ಕೆ ಕಾಳಿಂಗನರ್ತನವೆಂದು ಹೆಸರುಬಂದಿದೆ. ಇದರ ಭಾವವೇನೆಂದರೆ, ಕಾಲು ಅಂದರೆ ಶ್ವಾಸ; ಲಿಂಗವೆಂದರೆ ಮೂಗಿನ ಹೊಳ್ಳೆಗಳು. ಈ ಹೊಳ್ಳೆಗಳ ಮೂಲಕ ಶ್ವಾಸಕ್ಕೆ ಏರಿಳಿತಗಳೆಂಬ ನರ್ತನವು ನಡೆಯುತ್ತಿರುವುದರಿಂದ ಇದಕ್ಕೆ ಕಾಳಿಂಗನರ್ತನವೆಂಬ ಹೆಸರು ಉಂಟಾ ಗಿದೆ. ಮೇಲೆ ವಿವರಿಸಿರುವ ಅರ್ಥಗಳೇ ಭಾಗವತದಲ್ಲಿ ಪ್ರತಿಪಾದಿತವಾ ಗಿರುವ ಕಾಳಿಂಗನರ್ತನದ ರಹಸ್ಯಗಳು.



# ಶ್ವಾಸವು ಸ್ತ್ರೀಪುರುಷರ ಆಯುಃಪ್ರಮಾಣವನ್ನು ತಿಳಿಸುವಿಕೆ.

ಒಬ್ಬ ಪುರುಷನಿಗಾಗಲಿ ಸ್ತ್ರೀಗಾಗಲಿ ಎಂಭತ್ತೈದು ವರ್ಷಗಳು ಜೀವಿಸಿರಬೇಕೆಂಬ ಆಯುಃಪ್ರಮಾಣವು ವಿಧಿಸಿದ್ದೇ ಆದರೆ, ಜೀವನಿಗೆ ಅರವತ್ತೇಳುಕೋಟಿ ಒಂದುಲಕ್ಷ ನಲವತ್ತುಸಾವಿರ ಶ್ವಾಸಗಳು ನಡೆಯ ಬೇಕು. ಅದು ಹೇಗೆಂದರೆ ಪ್ರತಿಯೊಂದು ನಿಮಿಷಕ್ಕೂ ಹದಿನೈದುಸಾರಿ

ಉಚ್ಛ್ವಾಸ ನಿಶ್ವಾಸಗಳು ನಡೆಯುತ್ತವೆ. ಒಂದು ಘಂಟೆಗೆ ಅರವತ್ತು ನಿಮಿಷಗಳು, ಇಪ್ಪತ್ತನಾಲ್ಕು ಘಂಟೆಗಳು ಒಂದು ದಿನ, ಇಂತಹ ಮುನ್ನೂರರವತ್ತೈದು ದಿನಗಳಾದರೆ ಒಂದು ವರ್ಷವಾಗುತ್ತದೆ. ಇಂತಹ ಎಂಭತ್ತೈದು ವರ್ಷಗಳಿಗೆ ಒಂದನ್ನೊಂದು ಕ್ರಮಕ್ರಮವಾಗಿ ಹೆಚ್ಚಿಸುತ್ತ ಬಂದರೆ ಅಂದರೆ ಒಂದನ್ನೊಂದು ಗುಣಿಸುತ್ತ ಬಂದರೆ ಮೇಲೆ ಹೇಳಿದಷ್ಟು ಶ್ವಾಸಗಳು ನಡೆಯುತ್ತವೆ. ಅಂಕೆಗಳಲ್ಲಿಯೂ 85×365×24×60×15= 67,01,40,000 ಎಂದು ನಿರೂಪಿತವಾಗಿದೆ. ಇಂತಹ ಅರವತ್ತೇಳು ಕೋಟಿ ಒಂದುಲಕ್ಷ ನಲವತ್ತುಸಾವಿರ ಶ್ವಾಸಗಳು ಸ್ತ್ರೀಪುರುಷರ ಶರೀರಗಳಲ್ಲಿ ನೆಲೆಸುವುದಕ್ಕೆ ಒಂದು ಸ್ಥಳವು ಬೇಕಲ್ಲವೇ? ಆ ಸ್ಥಾನವಾವುದೆಂಬ ವಿಷಯುವು ಈ ಮುಂದೆ ಹೇಳಲಾಗಿದೆ. ಹೊಟ್ಟೆಯಲ್ಲಿ ಮಲಮೂತ್ರಗಳ ಚೀಲಗಳಿವೆ. ಈ ಸ್ಥಳಗಳಲ್ಲಿ ಮೇಲೆ ಹೇಳಿದ ಶ್ವಾಸಗಳಲ್ಲವು. ಹೃದಯದಲ್ಲಿ, ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬುವ ಪಂಚಭೂತಗಳಿವೆ. ಆ ಸ್ಥಳಗಳು ಯಾವುವೆಂದರೆ "ನೆರೆಡೆ" ಇಲ್ಲವೇ "ಮಟ್ಟೆಗುಂಡಕಾಯಿ." ಇದನ್ನು "ಸ್ಪ್ಲೀನ್" ಎಂದು ಹೇಳುತ್ತಾರೆ. ಇದೇ ಪೃಥ್ವೀಭಾಗವು. ಅಪ್ಪು ಎಂದರೆ ಜಲವು. ಈ ಜಲದ ಭಾಗವು "ಕರೀ ಗುಂಡಕಾಯಿ." ಇದು ನೀರಿನಿಂದ ತುಂಬಿಕೊಂಡು ಥಳಥಳನೆ ಹೊಳೆಯುತ್ತಿರುತ್ತದೆ. ಇದಕ್ಕೆ 'ಲಿವರ್' ಎಂದು ಹೆಸರು. ತೇಜಸ್ಸು ಅಂದರೆ ಅಗ್ನಿ, ಈ ಅಗ್ನಿಭಾಗವು ಯಾವುದೆಂದರೆ:—ನಮ್ಮ ಶರೀರದೊಳಗಿನ "ಲಿವರ್" ಎಂಬುದರ ಒಳಭಾಗದಲ್ಲಿ ಒಂದು ವಿಷದ (ಕಹಿಯ) ಚೀಲವು ಕಚ್ಚಿಕೊಂಡಿದೆ. ಅದರಲ್ಲಿಯೇ ಅಗ್ನಿಭಾಗವಿರುವುದು. ಶೀತಕಾಲದಲ್ಲಿ ಪ್ರಾತಃಕಾಲ ನಾವು ಎದ್ದೊಡನೆಯೇ ನಮ್ಮ ಬಾಯಿಯಲ್ಲಿಯೂ ಮಲಮೂತ್ರಾದಿಗಳಲ್ಲಿಯೂ ಹಬೆ ಬರುವುದು; ಅಗ್ನಿಭಾಗವೇ ಈ ಹಬೆಗೆ ಕಾರಣ. ಇಷ್ಟೇ ಅಲ್ಲ, ನಾವು ಭೋಜನ ಪದಾರ್ಥಗಳನ್ನು ನುಂಗಿ ಹೊಟ್ಟೆಗೆ ಸೇರಿಸುವಾಗ ಮೇಲೆ ಹೇಳಿದ ಚೀಲದಿಂದ ಒಂದು ಒಗೆಯ ರಸ ವಿಶೇಷವು ಬಂದು ಸೇರಿ ಆಹಾರವನ್ನು ಜೀರ್ಣಿಸುವುದಕ್ಕೆ ಸಹಕಾರಿಯಾಗಿದೆ. ವಾಯುಪದಾರ್ಥದ ಸ್ಥಾನಗಳು "ಶ್ವಾಸಕೋಶ"ಗಳು ಅಥವಾ

ಉಸುರಿನ ಚೀಲಗಳು. ಇವಕ್ಕೆ ಇಂಗ್ಲೀಷ್ ಭಾಷೆಯಲ್ಲಿ "ಲಂಗ್ಸ್" ಎಂದು ಕರೆಯುತ್ತಾರೆ. ಈ ಶ್ವಾಸಕೋಶಗಳ ಮೂಲಕ ಅನೇಕ ವ್ಯಾಧಿಗಳು ಹುಟ್ಟುತ್ತವೆ. ಈ ವ್ಯಾಧಿಗಳ ನಾಶಕ್ಕೆ ನಾಡೀಶುದ್ಧಿಯು ಅತ್ಯವಶ್ಯಕ. ನಾಡೀಶುದ್ಧಿಯೆಂದರೆ:—ಶ್ವಾಸವನ್ನು ಬಲದ ಮತ್ತು ಎಡದ ಮೂಗಿನ ಹೊಳ್ಳೆಗಳ ಮೂಲಕವೂ ಮತ್ತು ಎರಡು ಹೊಳ್ಳೆಗಳಲ್ಲಿ ಏಕಕಾಲದಲ್ಲಿಯೂ ಎಳೆದು ಒಳಗೆ ನುಂಗಿ ಆ ಶ್ವಾಸವನ್ನು ತಡೆದು ನಿಲ್ಲಿಸುವುದು. ಈ ಶ್ವಾಸವನ್ನು ಯಾರು ಯಾರು ಎಷ್ಟೆಷ್ಟು ತಡೆದರೆ ನಾಡೀಶುದ್ಧಿಯನ್ನು ಪಡೆಯಬಹುದೆಂಬ ವಿಷಯವನ್ನು ಈ ಗ್ರಂಥಕರ್ತರಾದ ಯೋಗೀಶ್ವರರಿಂದ ತಿಳಿಯಬೇಕು. ಇದನ್ನು ಸರಿಯಾಗಿ ಅಭ್ಯಸಿಸಿ ಸ್ವಾಧೀನಾನುಭವವನ್ನು ಪಡೆದದ್ದೇ ಆದರೆ ವ್ಯಾಧಿಗಳನ್ನು ಸುಲಭವಾಗಿ ದೂರಮಾಡಬಹುದು. ಹೀಗೆ ಒಳಕ್ಕೆ ಎಳೆದುಕೊಂಡು ತಡೆಯಲ್ಪಟ್ಟ ಶ್ವಾಸವು ಶ್ವಾಸಕೋಶಗಳಲ್ಲಿ ಕೆಲವುಕಾಲವಿದ್ದು ಅಲ್ಲಿ ಹುಟ್ಟುವ ವ್ಯಾಧಿಗಳನ್ನು ಕ್ರಮಕ್ರಮವಾಗಿ ಕಳೆಯುತ್ತ ಬರುತ್ತದೆ. ಈ ರೀತಿಯಾದ ನಾಡೀಶುದ್ಧಿಯನ್ನು ಮಾಡಿದಮೇಲೆ ಪ್ರಾಣಾಯಾಮವಾಗಲಿ ಇಲ್ಲವೇ ಸಂಧ್ಯಾವಂದನೆಯಾಗಲಿ ಮಾಡುತ್ತ ಬಂದರೆ ಮನಸ್ಸಿನಲ್ಲಿ ಹುಟ್ಟುವ ಕೋರಿಕೆಗಳ ವೇಗವು ತಗ್ಗಿ ಆ ಮನಸ್ಸು ವಿಶ್ರಾಂತಿಯನ್ನು ಹೊಂದುವುದು ಅಂದರೆ ಮನಸ್ಸಿನಲ್ಲಿ ಯಾವುದೊಂದು ಅಪೇಕ್ಷೆಯೂ ಹುಟ್ಟದೆ ನಿರ್ಮಲವಾಗಿರುವುದು. ಈರೀತಿಯಾಗಿ ಮನಸ್ಸನ್ನು ನಿಷ್ಕಲ್ಮಷವಾಗಿಟ್ಟಿರುವುದೇ ಯೋಗದ ಕಡೆಯ ಸ್ಥಿತಿ. ಮೇಲೆ ಹೇಳಿದವುಗಳೆಲ್ಲವೂ ಈ ಗ್ರಂಥಕರ್ತರ ಸ್ವಾನುಭವವೇ ಹೊರತು ಬೇರಲ್ಲ. ಇವರು ತಮ್ಮ ಅನುಭವರಹಸ್ಯಗಳನ್ನು ಈ ಗ್ರಂಥದ ಮೂಲಕ ತಿಳಿಯಪಡಿಸುತ್ತಿದ್ದಾರೆ.

ಇದರ ಮೇಲೆ ಆಕಾಶದ ವಿಷಯ. ಇದರ ವಾಸಸ್ಥಾನವು ಹೃದಯಕಮಲವು. ಇದರಲ್ಲಿ ಒಂದಂಗುಲಪ್ರಮಾಣದಷ್ಟು ಆಕಾಶವಿರುತ್ತದೆ. ಈ ಭಾಗದಲ್ಲಿ ಸಮುದ್ರದಂತೆ ಸಂಪೂರ್ಣವಾಗಿ ನೀರು ತುಂಬಿರುತ್ತದೆ. ಈ ಜಲಮಧ್ಯದಲ್ಲಿ ಪರಬ್ರಹ್ಮಸ್ವರೂಪನಾದ ಹಂಸಪರಮಾತ್ಮನು ವಾಸಿಸುತ್ತಿದ್ದಾನೆ. ಈ ಜಲದಲ್ಲಿ ವಾಸಿಸುತ್ತಿರುವ ಹಂಸವೇ ಹೃದಯಕಮಲದಿಂದ ಹೊರಹೊರಟು ನಾಲಿಗೆಯ ಕೆಳಭಾಗದಲ್ಲಿರುವ ಲಾಲಾಗ್ರಂಥಿಗಳನ್ನು

ಪ್ರವೇಶಿಸಿ ಸೂಕ್ಷ್ಮಗಳಾದ ಲೋಮನಾಳಗಳ ಮೂಲಕ ಲಾಲಾಜಲವನ್ನು ಅಂದರೆ ಜೊಲ್ಲೆಂಬ ರಸವಿಶೇಷವನ್ನು ಬಾಯಿಯಲ್ಲಿ ಊಟೆಯಂತೆ ಒಂದೇ ಸಮನಾಗಿ ಹುಟ್ಟಿಸುತ್ತಿರುತ್ತದೆ. ಹೀಗೆ ಊಟೆಯಂತೆ ಬರುತ್ತಿರುವ ಜೊಲ್ಲನ್ನು ಜನಗಳು ನುಂಗುತ್ತಾ ಬರುತ್ತಿದ್ದರೆ, ಪುನಃ ಹೃದಯಕಮಲ ದೊಳಗಿನಿಂದ ಸದಾ ನೀರಿನ ಊಟೆಯು ಹುಟ್ಟುತ್ತಲೇ ಇರುವುದು. ಇದನ್ನು ಎಂಜಲೆಂದೂ, ಆಸುರೀಕವಸ್ತುವೆಂದೂ, ಆದುದರಿಂದಲೇ ಅಶುದ್ಧ ವಾದುದೆಂದೂ ಹೇಳುತ್ತಾರೆ. ಆದರೆ ಇದು ಅಶುದ್ಧವಾದ ವಸ್ತುವಲ್ಲವು. ಈ ರಸವು ದೇವಾಮೃತಕ್ಕಿಂತಲೂ ಶ್ರೇಷ್ಠವಾದದ್ದು. ಇದಕ್ಕೆ ಒಂದು ದೃಷ್ಟಾಂತವುಂಟು. ಶರೀರದ ಮೇಲಿರುವ ಆದ್ಯಂತಭಾಗವೂ ಚರ್ಮ ರೋಗಗಳಾದ ಕಜ್ಜಿ, ತುರಿ, ಕುರುವುಗಳು ಇವೇ ಮೊದಲಾದುವುಗಳಿಗೆ ಈಡಾಗಿದೆ. ಆದರೆ ಬಾಯಿಯ ಒಳಭಾಗದಲ್ಲಿ ಅಂದರೆ ದವಡೆಗಳು, ಮೂರ್ಧನ್ಯ (ಬಾಯಿಮೇಲ್ಭಾಗ) ನಾಲಿಗೆಯ ಕೆಳಭಾಗ ಮತ್ತು ನಾಲಿಗೆ ಈ ಭಾಗಗಳಲ್ಲಿ ಮೇಲೆ ಹೇಳಿದ ಚರ್ಮರೋಗಗಳು ಉಂಟಾಗವು. ಇದ ಕ್ಕೆ ಕಾರಣವೇನೆಂದರೆ, ಪರಬ್ರಹ್ಮನಾದ ಆ ಆತ್ಮನಿಂದ ಕೂಡಿರುವ ಆ ಲಾಲಾ ಜಲದ ಊಟೆಯು ಸದಾ ಅದನ್ನು ಉತ್ಪತ್ತಿ ಮಾಡುತ್ತ ಇರುವುದರಿಂದ ಈ ರೋಗಗಳು ಬರುವುದಕ್ಕೆ ಅವಕಾಶ ಸಿಕ್ಕಲಾರದು. ಇದೂ ಅಲ್ಲದೆ ಮೃಗಾದಿಗಳು ತಮ್ಮ ಮೈಮೇಲೆ ಯಾವುದಾದರೂ ಒಂದು ಸ್ಥಳದಲ್ಲಿ ಘಾಯ ವಾದದ್ದೇ ಆದರೆ ಆಗಾಗ್ಗೆ ಅದನ್ನು ತಮ್ಮ ನಾಲಿಗೆಗಳಿಂದ ನಾಕುತ್ತ, ಲಾಲಾಜಲವನ್ನು ಆ ಹುಣ್ಣಿರುವ ಸ್ಥಳಕ್ಕೆ ಎರೆಯುತ್ತಿರುತ್ತವೆ. ಹೀಗೆ ಮಾಡುವುದರಿಂದ ಉಳಿದ ಔಷಧಗಳ ಸಹಾಯವಿಲ್ಲದೆಯೇ ಬಹು ಶೀಘ್ರ ವಾಗಿ ಹುಣ್ಣು ಮಾಯುತ್ತದೆ. ಪರಮಾತ್ಮನಿಗೆ ನೆಲೆಯಾದ ಈ ಲಾಲಾ ಜಲದಿಂದ ಮೃಗಗಳ ಮೈಮೇಲಿರುವ ಸಮಸ್ತ ವ್ರಣಗಳೂ ನಾಶವಾಗುವು ವೆಂದು ತಿಳಿಯಬೇಕು.

ಬಾಯಿಯಲ್ಲಿ ಹುಟ್ಟುವ ಲಾಲಾಜಲವನ್ನು ಎಂಜಲೆಂದು ಜನಗಳು ಕರೆಯುವುದು ರೂಢಿ. ಈ ಎಂಜಲಿನ ವಿಷಯವು ಈ ಮುಂದೆ ಮತ್ತಷ್ಟು ವಿವರಿಸಿ ಹೇಳಿದೆ. ಮರಳಿನಲ್ಲಿ ಚಿಲುಮೆಯನ್ನು ತೆಗೆದದ್ದೇ ಆದರೆ ಅದರಲ್ಲಿ ನೀರಿನ ಊಟೆ ಹುಟ್ಟುತ್ತದೆ. ಊಟೆಯಿಂದ ಹುಟ್ಟಿದ ಆ ನೀರನ್ನು

ಕೈಯಿಂದ ಚೆಲ್ಲುತ್ತಾ ಬಂದರೆ, ನಾಲ್ಕೂ ಕಡೆಯಿಂದ ನೀರಿನ ಊಟೆಗಳು ಹುಟ್ಟಿ ನೀರು ಸಮೃದ್ಧಿಯಾಗಿ ಬರುತ್ತದೆ. ನೀರನ್ನು ಚೆಲ್ಲುವುದು ನಿಲ್ಲಿಸಿದ್ದೇ ಆದರೆ ಚಿಲುಮೆಯ ಪಾತ್ರೆಯು ತುಂಬ ನೀರು ತುಂಬಿಕೊಂಡಮೇಲೆ ಆ ಊಟೆಯಿಂದ ನೀರು ಬರುವುದು ನಿಲ್ಲುತ್ತದೆ. ಇದರಂತೆಯೇ, ನಾವು ಎಚ್ಚರಿಕೆಯಾಗಿದ್ದಾಗ ನಮ್ಮ ಬಾಯಿಯೆಂಬ ಚಿಲುಮೆಯಿಂದ ಹುಟ್ಟಿದ ನೀರನ್ನು ನುಂಗುತ್ತ ಬಂದರೆ, ಪುನಃಪುನಃ ನೀರು ಹುಟ್ಟುತ್ತಲೇ ಇರುತ್ತದೆ. ಹೀಗೆ ಹುಟ್ಟುವುದಕ್ಕೆ ಆ ಜಲದಲ್ಲಿ ಸದಾ ಶ್ರೀ ಪರಮಾತ್ಮನು ವಾಸಿಸುವುದೇ ಮೂಲಕಾರಣ. ರಾತ್ರಿಯುವೇಳೆ ನಾವು ನಿದ್ರಿಸುತ್ತಿದ್ದಾಗ ಬಾಯಿಯಲ್ಲಿ ಹುಟ್ಟಿದ ಲಾಲಾಜಲವನ್ನು ನಾವು ನುಂಗುತ್ತಿರುವುದಿಲ್ಲವಾದುದರಿಂದ, ಹೃದಯ ಕಮಲದಲ್ಲಿ ಈ ನೀರಿನ ಊಟೆ ಹುಟ್ಟುವುದಿಲ್ಲ. ಪುನಃ ನಿದ್ರೆ ತಿಳಿದೆದ್ದಮೇಲೆ ಎಂಜಲನ್ನು (ಲಾಲಾಜಲವನ್ನು) ನುಂಗುತ್ತಿರುತ್ತೇವೆ. ಎಂದಿನಂತೆ ಪುನಃ ಲಾಲಾಜಲವು ಉತ್ಪನ್ನವಾಗುತ್ತಲೇ ಇರುತ್ತದೆ.

ಇದೂ ಅಲ್ಲದೆ "ಎಂಜಲು, ಎಂಜಲು" ಎಂಬುದಾಗಿ ಜನಗಳು ಬಹಳ ಹೇಯವಾಗಿ ಅದನ್ನೆಣಿಸುವುದು ಸೂಕ್ತವೂ ಅಲ್ಲ ಮತ್ತು ಹಾಗೆ "ಎಂಜಲು" ಎಂದು ಅನೇಕ ವಿಷಯಗಳಲ್ಲಿ ಪರಿತ್ಯಾಗಮಾಡುವುದಕ್ಕೆ ಸಾಧ್ಯವೂ ಇಲ್ಲ. ಈ ವಿಷಯದಲ್ಲಿ ಕನಕದಾಸರು ಹೀಗೆಂದು ಹೇಳಿರುತ್ತಾರೆ.

ಭಾ ‖ ಎಂಜಲೆಂಜಲು [illegible] ।
ಎಂಜಲಲ್ಲವೆ? ವಾರಿ ಜಲಚರ ।
ದೆಂಜಲಲ್ಲವೇ? ಹಾಲು ಕರುವಿನ ಎಂಜಲೆನ್ನಿಸದೆ? ‖
ಎಂಜಲೆ[illegible] ।
ರೆಂಜಲಲ್ಲವೆ [illegible] ।
ಲೆಂಜಲುಂಟೇ? ದೇವ! ರಕ್ಷಿಸು ನಮ್ಮ ನನವರತ ‖

ಎಂಜಲು, ಎಂಜಲು ಎನ್ನುವ ನುಡಿಗಳೇ ಎಂಜಲಲ್ಲವೇ? ಒಬ್ಬರು ಹೇಳಿದ ಮಾತುಗಳನ್ನು ಮತ್ತೊಬ್ಬರು ಆಡಿದರೇ ಅವು ಎಂಜಲಾಗುತ್ತವೆ. ನಾವು ಪ್ರತಿದಿನವೂ ಕುಡಿಯುವ ನೀರೂ ಜಲಚರ ಜಂತುಗಳ ಎಂದರೆ

ಮೀನು, ಕಪ್ಪೆ, ಆಮೆ ಮೊದಲಾದ ಪ್ರಾಣಿಗಳ ಎಂಜಲಲ್ಲವೇ? ಆಬಾಲ ವೃದ್ಧರೂ ಪ್ರತಿನಿತ್ಯವೂ ಸೇವಿಸುತ್ತಿರುವ, ಮತ್ತು ಯಜ್ಞಯಾಗಾದಿಗಳಿಗೂ ಯೋಗ್ಯವಾದ ಹಾಲು, ಕರುವಿನ ಎಂಜಲಲ್ಲವೇ? ಎಂಜಲು ಎಂಬ ಮಾತಿಗೆ ಅರ್ಥವಿಲ್ಲ. ಎಲ್ಲೆಲ್ಲಿ ನೋಡಿದರೂ ಇತರರ ಎಂಜಲಿಲ್ಲದೆ ಬೇರೆ ಎಂಜಲಿದೆಯೇ? ಈ ವಿಷಯವನ್ನು ಸರಿಯಾಗಿ ಯೋಚಿಸಿ ನೋಡಿದರೆ ಎಂಜಲೆಂಬುದು ಲೋಕದಲ್ಲಿಲ್ಲ ಎಂಬುದೇ ಮೇಲಿನ ಪದ್ಯಕ್ಕೆ ತಾತ್ಪರ್ಯ.

ಪ್ರತಿ ಜೀವಿಗೂ ಈ ಎಂಜಲೆಂಬ ಹೃದಯಕಮಲದೊಳಗೆ ಹುಟ್ಟುವ ಜಲವು ಪ್ರಾಣಾಧಾರವಾದದ್ದು ಎಂಬ ವಿಷಯವು ಈ ಕೆಳಗೆ ತಿಳಿಸಿದೆ. ಪ್ರಾಣಪ್ರಯಾಣ ಕಾಲದಲ್ಲಿ ಅಂದರೆ ಸಾಯುವ ಸಮಯದಲ್ಲಿ ಹೃದಯಕಮಲದಲ್ಲಿ ಸಮುದ್ರದಂತೆ ತುಂಬಿರುವ ನೀರಿನಲ್ಲಿ ಮೊದಲು ಒಂದು ಕೂದಲಿನ ಪ್ರಮಾಣದಷ್ಟು ತಗ್ಗುತ್ತದೆ. ಹೃದಯ ಕಮಲದಲ್ಲಿದ್ದ ನೀರು ತಗ್ಗುವುದಕ್ಕೆ ಪ್ರಾರಂಭಿಸುತ್ತಲೆ ಬಾಯಿಯಲ್ಲಿ ನೀರು ಊರುವುದು ಕಡಮೆಯಾಗುತ್ತದೆ. ಬಾಯಿಯ ಒಳಭಾಗವು ತೇವವಿಲ್ಲದೆ ನಾಲಗೆಯು ಬಿರುಸಾಗಿ, ಅದರ ವ್ಯಾಪಾರ ಕಡಮೆಯಾಗುತ್ತಿರುವುದನ್ನು ನೋಡಿ ಸ್ತ್ರೀಯರು ನಾಲಿಗೆಯಲ್ಲಿ ಬೆರಳಿಟ್ಟು ಪರೀಕ್ಷಿಸಿ ಆ ಜೀವಿಗೆ ಮರಣವು ಸಮೀಪಿಸುತ್ತ ಬರುತ್ತಿದೆಯೆಂದು ಹೇಳುವರು. ಇವೆಲ್ಲವೂ ಹೃದಯಕಮಲದಲ್ಲಿದ್ದ ಜಲವು ತಗ್ಗುತ್ತ ಬರುವುದರಿಂದ ಉಂಟಾಗುತ್ತದೆ. ಈ ನೀರಿನ ಪ್ರಮಾಣವು ತಗ್ಗುತ್ತ ತಗ್ಗುತ್ತ ಕಡೆಗೆ ಆ ಜಲವೆಲ್ಲವೂ ಇಂಗಿಹೋಗಲು ಹೃದಯಕಮಲದಲ್ಲಿ ವಾಸವಾಗಿದ್ದ ಆತ್ಮನು ಆ ಜೀವಿಯ ದೇಹವನ್ನು ಬಿಟ್ಟು ಹೊರಹೊರಡುತ್ತಾನೆ. ಇದಕ್ಕೆ ಮೃತಿ ಅಥವಾ ಮರಣವೆಂದು ಹೆಸರು.

ಆತ್ಮನು ಹೃದಯಕಮಲದಲ್ಲಿ ತುಂಬಿರುವ ಜಲದಲ್ಲಿ ವಾಸಿಸುತ್ತಿರುವುದರಿಂದಲೇ ಆ ಆತ್ಮನಿಗೆ ನಾರಾಯಣ ಎಂದು ಹೆಸರಾಯಿತು. ನಾರ ಅಂದರೆ ನೀರು ಎಂದರ್ಥ; ಅಯನ ಅಂದರೆ ವಾಸಸ್ಥಾನ; ಆದುದರಿಂದ

ಹೃದಯಕಮಲದಲ್ಲಿರುವ ಜಲದಲ್ಲಿ ವಾಸಿಸುವನಾದುದರಿಂದ 'ನಾರಾಯಣ' ಎಂಬ ಹೆಸರು ಪ್ರಸಿದ್ಧವಾಗಿದೆ.

ಹಿಂದೆ ಹೇಳಿದ ಅರವತ್ತೇಳು ಕೋಟಿ ಒಂದು ಲಕ್ಷ ನಲವತ್ತು ಸಾವಿರ ಶ್ವಾಸಗಳು ಮನುಷ್ಯನ ಹೊಟ್ಟೆಯಲ್ಲಿಯಾಗಲಿ, ಮಲಮೂತ್ರ ಕೋಶಗಳಲ್ಲಿಯಾಗಲಿ, ಹೃದಯ, ಮೇದೋಜೀರಕ, ಗುಲ್ಮ, ಕರುಳು ಇವುಗಳಲ್ಲಿಯಾಗಲಿ ಅಥವ ಶ್ವಾಸಕೋಶ (Lungs) ಗಳಲ್ಲಿಯಾಗಲಿ ಅಡಗಿರುವುದಿಲ್ಲ. ಇದರ ವಾಸಸ್ಥಾನ ನಾಭಿ ಅಂದರೆ ಹೊಕ್ಕಳು. ಮನುಷ್ಯನ ಒಟ್ಟು ಜೀವಮಾನಕ್ಕೆ ಅವಶ್ಯಕವಾದ ಈ ಮೇಲೆ ಹೇಳಿದ ಶ್ವಾಸಗಳು ನಾಭಿಸ್ಥಾನದಲ್ಲಿ, (ಬಹು ನೀಳವಾದ ಹಗ್ಗವನ್ನು ಸುತ್ತುಗಟ್ಟಿಟ್ಟರೆ ಹೇಗೆ ಹಾವಿನಂತೆ ಸುತ್ತಿಕೊಂಡಿರುತ್ತದೆಯೋ ಹಾಗೆಯೇ) ಬಹಳ ಒತ್ತಾಗಿಯೂ ತಾವರೆಯ ದಂಟಿನ ಒಳಭಾಗದ ತಂತುವಿಗಿಂತಲೂ ಸಣ್ಣನಾಗಿಯೂ ಬಹು ನೀಳವಾಗಿಯೂ ಇರುವುದರಿಂದ, ಅನೇಕ ಸುತ್ತುಗಳಿಂದ ಕೂಡಿ ಅಡಗಿರುತ್ತವೆ. ಹಾವಿನಂತೆ ಸುತ್ತಿಕೊಂಡಿರುವ ಶ್ವಾಸಗಳ ಸುತ್ತುಗಳು ನಾಭಿ ಪ್ರದೇಶದಲ್ಲಿ ಅಡಗಿರುವುದನ್ನು ಈ ಕೆಳಗೆ ಕಾಣುವ




ಪಟದಲ್ಲಿ ನೋಡಬಹುದು. ಹೀಗೆ ಶ್ವಾಸಗಳು ಸುತ್ತುಗಟ್ಟಿ ನಾಭಿಯ ಒಳಭಾಗದಲ್ಲಿ ಅಡಗಿವೆ ಎಂಬ ಭಾವನೆಗೆ ಯೋಗಕುಂಡಲಿ ಉಪನಿಷತ್ತು, 66-67 ಮೂಲವೇ ಪ್ರಮಾಣವು.

ಗುಂಡಾಗಿ ಸುತ್ತಿಕೊಂಡಿರುವ ಹಾವನ್ನು ಕೋಲಿನಿಂದ ಹೊಡೆದರೆ, ಆಗ ಆಹಾವು ಸುತ್ತುಗಳನ್ನು ಬಿಚ್ಚಿ ತನ್ನ ಶರೀರವನ್ನು ನೀಳವಾಗಿ ಮಾಡಿಕೊಂಡು ಓಡಿಹೋಗುವ ರೀತಿಯಲ್ಲಿ ನಾಭಿಯ ಒಳಭಾಗದಲ್ಲಿ ಸುತ್ತಿಕೊಂಡು ಅಡಗಿರುವ ಈ ಶ್ವಾಸವೆಂಬ ಹಾವೂ ಕೂಡ, ಯೋಗಾಭ್ಯಾಸವೆಂಬ ಕೋಲಿನಿಂದ ಹೊಡೆದರೆ, ಆಗ ಆ ಶ್ವಾಸವೆಂಬ ಹಾವು ಸರ್ರನೆ ಎದ್ದು ಬೆನ್ನೆಲುಬಿನ ಮಧ್ಯಭಾಗದಲ್ಲಿರುವ ಬಿಳೀ ನರಗಳ ಸಣ್ಣ ರಂಧ್ರಗಳ ಮೂಲಕ ಪ್ರವೇಶಿಸಿ ಬ್ರಹ್ಮಕಪಾಲದ್ವಾರಾ ಸುತ್ತಿ ತಿರುಗುತ್ತದೆ. ಈ ಹೊಕ್ಕಳು ಕುಂಡಲಿಶಕ್ತಿಯೆಂಬದಾಗಿಯೂ ಮಣಿಪೂರಕವೆಂಬದಾಗಿಯೂ ಕರೆಯಲ್ಪಡುತ್ತದೆ. ಇದು ಹಾಗಿರಲಿ. ಇನ್ನು ಮೇಲೆ ಯಾವ ಯಾವ ಕಾಲದಲ್ಲಿ ಎಷ್ಟೆಷ್ಟು ಶ್ವಾಸಗಳು ನಷ್ಟವಾಗುತ್ತ ನಮ್ಮ ಜೀವಮಾನವು ಕಡಮೆಯಾಗುತ್ತ ಬರುತ್ತದೆ ಮತ್ತು ಈ ಶ್ವಾಸಗಳು ನಷ್ಟವಾಗುವ ಕ್ರಮ ಹೇಗೆಂಬುದನ್ನು ಈ ಕೆಳಗೆ ವಿಶದಪಡಿಸಿದೆ.

ಸಾಧಾರಣವಾಗಿ ಮಾತನಾಡುವ ಕಾಲದಲ್ಲಿ ನಾಭಿಯಲ್ಲಿ ಸುತ್ತಿಕೊಂಡು ಮಲಗಿರುವ ಶ್ವಾಸವೆಂಬ ಹಾವು, ಮೆಲ್ಲಗೆ ತನ್ನ ಸುತ್ತನ್ನು ಬಿಚ್ಚಿ ಹನ್ನೆರಡು ಅಂಗುಲಪ್ರಮಾಣವೇ ಎದ್ದು ಇಂಗಾಲಾಮ್ಲವೆಂಬ ಅಶುದ್ಧವಾಯುವಾಗಿ ಪರಿಣಮಿಸಿ, ಅದು ಹೊರಕ್ಕೆ ಬಂದು ಅದರಲ್ಲಿ ನಾಲ್ಕಂಗುಲದಷ್ಟು ಶ್ವಾಸವು ಹೊರಗೆ ನಷ್ಟವಾಗಿ, ಉಳಿದ ಎಂಟಂಗುಲ ಪ್ರಮಾಣದ ವಾಯುವು ಹೊರಗಿರುವ ಆಮ್ಲಜನಕವೆಂಬ ಶುದ್ಧವಾಯುವಿನ ಜೊತೆಗೂಡಿ ಶುದ್ಧಿಹೊಂದಿ, ಪುನಃ ಎಂಟಂಗುಲದ ಪ್ರಮಾಣದಷ್ಟು ಮಾತ್ರವೇ ಶುದ್ಧವಾಯುವು ಮೂಗಿನ ಹೊಳ್ಳೆಗಳ ಮೂಲಕ ಶರೀರದ ಒಳಕ್ಕೆ ಪ್ರವೇಶಿಸಿ, ನಾಭಿಯಲ್ಲಿರುವ ಶ್ವಾಸದೊಳಗೆ ಬೆರೆತು, ಪುನಃ ಹನ್ನೆರಡಂಗುಲ ಪ್ರಮಾಣದಷ್ಟು ಹೊರಹೊರಟು, ಹಿಂದಿನಂತೆ ನಾಲ್ಕಂಗುಲ ಪ್ರಮಾಣದಷ್ಟು ಹೊರಗೆ ನಷ್ಟವಾಗುವುದು. ಈರೀತಿಯಾಗಿ, ಮಾತನಾಡುತ್ತಿರುವಕಾಲದಲ್ಲಿ ನಿಮಿಷಕ್ಕೆ ಹದಿನೈದರಂತೆ ಪ್ರತಿಯೊಂದುಸಲವೂ ನಾಲ್ಕಂಗುಲದಷ್ಟು ಉದ್ದ ಶ್ವಾಸವು ನಷ್ಟವಾಗುತ್ತಲಿರುವುದು. ಅಶುದ್ಧಿಯನ್ನು ಹೊಂದುವುದು, ಹೊರಕ್ಕೆ ಬರುವುದು, ನಾಲ್ಕಂಗುಲದಷ್ಟು ನಷ್ಟವಾಗುವುದು, ಪುನಃ ಶುದ್ಧಿಹೊಂದುವುದು, ನಷ್ಟವಾಗಿ ಕಳೆದುಳಿದಷ್ಟು

ಮಾತ್ರ ಪುನಃ ಒಳಕ್ಕೆ ಪ್ರವೇಶಿಸುವುದು, ನಾಭಿಯಲ್ಲಿರುವ ಶ್ವಾಸದೊಡನೆ ಬೆರೆಯುವುದು ಅದರಲ್ಲಿ ತಾನು ಹೊರಗೆ ಕಳೆದುಕೊಂಡಿದ್ದಷ್ಟು ತೆಗೆದು ಕೊಂಡು ಪುನಃ ಹೊರಕ್ಕೆ ಬರುವುದು, ನಷ್ಟವಾಗುವುದು ಇವೇ ಮೊದಲಾದ ವ್ಯಾಪಾರಗಳು ಮನುಷ್ಯನು ಮಾತನಾಡುವಾಗಲೆಲ್ಲಾ ಪ್ರತಿಯೊಂದು ಶ್ವಾಸಕ್ಕೂ ನಡೆಯುತ್ತಿರುತ್ತವೆ. ಹೀಗೆ ಪ್ರತಿ ಶ್ವಾಸಕ್ಕೂ ಸ್ವಲ್ಪಸ್ವಲ್ಪ ವಾಗಿ ನಷ್ಟವಾಗುತ್ತಿರುವುದರಿಂದಲೇ ಮನುಷ್ಯನ ಆಯುಸ್ಸು ಕ್ರಮೇಣ ಕಡಿಮೆಯಾಗುತ್ತಾ ಬರುತ್ತದೆ. ಹೀಗೆ ಮನುಷ್ಯನ ಬೇರೆ ಬೇರೆ ವಿಧವಾದ ವ್ಯಾಪಾರಗಳಲ್ಲಿಯೂ, ಕೆಲವುಗಳಲ್ಲಿ ಹೆಚ್ಚು, ಕೆಲವುಗಳಲ್ಲಿ ಕಡಿಮೆ ಹೀಗೆ ಶ್ವಾಸಶ್ವಾಸಕ್ಕೂ ಸ್ವಲ್ಪ ಅಂಶ ನಷ್ಟವಾಗುತ್ತಲೇ ಇರುತ್ತದೆ. ನಡೆಯು ವುದು, ಓಡುವುದು, ಆಡುವುದು, ಜಗಳವಾಡುವುದು, ನಿದ್ರಿಸುವುದು ಸಂಭೋಗಸುಖವನ್ನನುಭವಿಸುವುದು ಇವೇ ಮೊದಲಾದ ವ್ಯಾಪಾರಗಳು ಕ್ರಮಕ್ರಮವಾಗಿ ಹೆಚ್ಚು ಹೆಚ್ಚಾಗಿಯೇ ಶ್ವಾಸಗಳಲ್ಲಿ ಹೆಚ್ಚು ಅಂಶಗಳ ನಷ್ಟವನ್ನುಂಟುಮಾಡುತ್ತವೆ. ಈ ವಿಷಯಗಳನ್ನು ಪ್ರತಿ ಮನುಷ್ಯನೂ ತಿಳಿಯಬೇಕಾದುದವಶ್ಯಕವಾದುದರಿಂದ ಅವುಗಳನ್ನು ಈ ಮುಂದೆ ಕ್ರಮ ವಾಗಿ ವಿಶದಪಡಿಸಿದೆ.

ಜೀವಿಗಳ ಪ್ರಾಣಾಧಾರಕ್ಕೆ ಹೊರಗಿನ ಗಾಳಿಯೇ ಮುಖ್ಯ, ಇದನ್ನು ಸೇವಿಸಿಯೇ ಜೀವಿಗಳು ಬದುಕುವುವು ಎಂಬದಾಗಿ ಜನಗಳು ಹೇಳುತ್ತಾರೆ. ಈ ಅಭಿಪ್ರಾಯವು ನ್ಯಾಯವಾದುದಲ್ಲ. ಹೊರಗಿರುವ ವಾಯುವು ಪ್ರಾಣ ರಹಿತವಾದ ವಾಯುವು. ನಮ್ಮ ಶರೀರದಲ್ಲಿ ನಾಭಿ ಪ್ರದೇಶದಲ್ಲಿರುವುದು ಪ್ರಾಣಾಧಾರಕವಾದ ವಾಯುವು. ಹೊರಗಿನ ವಾಯುವೇ ಪ್ರಾಣಾಧಾರಕ ವಾದದ್ದಾದರೆ ಮನುಷ್ಯರು ಆ ವಾಯುಸೇವನೆಯಿಂದ ಚಿರಂಜೀವಿಗಳಾಗಿರ ಬೇಕು. ಈ ಅಭಿಪ್ರಾಯವನ್ನು ಬಿಟ್ಟು ನಮ್ಮ ಶರೀರದಲ್ಲಿ ಅಡಗಿರುವ ವಾಯುವೇ ಪ್ರಾಣಾಧಾರವೆಂದೂ ಅವುಗಳ ನಷ್ಟದಿಂದ ಆಯುಸ್ಸು ಕ್ಷೀಣ ವಾಗುವುದೆಂದೂ ತಿಳಿಯಬೇಕು. ಹೊರಗಿರುವ ವಾಯುವಿಗೂ ನಾಭಿಯಲ್ಲಿ ಅಡಕವಾಗಿರುವ ಶ್ವಾಸಕ್ಕೂ ಯಾವುದೊಂದು ಸಂಬಂಧವೂ ಇಲ್ಲವು.

ಮೇಲೆ ಹೇಳಿದಂತೆ ಮಾತನಾಡುವಾಗ ಒಳಗಿರುವ ಹನ್ನೆರಡು ಅಂಗುಲಗಳ ಉದ್ದದಷ್ಟು ಶ್ವಾಸವು ಹೊರಕ್ಕೆ ಬಂದು ಅವುಗಳಲ್ಲಿ

ನಾಲ್ಕಂಗುಲಗಳಷ್ಟು ನಷ್ಟವಾಗಿ ಉಳಿದ ಎಂಟಂಗುಲಗಳು ಶುದ್ಧಿಹೊಂದಿ, ಮೂಗಿನ ಮೂಲಕ ಒಳಕ್ಕೆ ಪ್ರವೇಶಿಸಿ, ನಾಭಿ ಪ್ರದೇಶದಲ್ಲಿರುವ ಪ್ರಾಣ ವಾಯುವಿನೊಡನೆ ಕಲೆತು, ಪುನಃ ಹನ್ನೆರಡು ಅಂಗುಲಗಳಷ್ಟು ಅಶುದ್ಧ ವಾಯುವೆನಿಸಿಕೊಂಡು, ಹೊರಕ್ಕೆ ಬಂದು, ಪುನಃ ನಾಲ್ಕಂಗುಲಗಳಷ್ಟು ನಷ್ಟ ವಾಗುತ್ತಾ ಬರುತ್ತದೆ. ಶ್ವಾಸಶ್ವಾಸಕ್ಕೂ ನಾಲ್ಕಂಗುಲ ಪ್ರಮಾಣದಷ್ಟು ನಷ್ಟವಾಗುತ್ತಾ ಆಗುತ್ತಾ ಆಯುಃಪ್ರಮಾಣವು ತಗ್ಗುತ್ತಾ ಬರುತ್ತದೆ. ಇದರಿಂದ ಹೆಚ್ಚು ಮಾತನಾಡುವುದರಿಂದ ಆಯುಸ್ಸು ಜಾಗ್ರತೆಯಾಗಿ ನಶಿಸು ತ್ತದೆ ಎಂದು ತಿಳಿದು ಸ್ತ್ರೀಪುರುಷರು ಯಾವಾಗಲೂ ಕೆಲಸಕ್ಕೆ ಬಾರದ ಪೊಳ್ಳು ಹರಟೆಗಳನ್ನು ಹರಟುವುದಕ್ಕೆ ಅವಕಾಶ ಕೊಡಬಾರದು.

ಈಗ ನಡೆಯುವಾಗ ಎಷ್ಟುಭಾಗ ಶ್ವಾಸ ನಷ್ಟವಾಗುತ್ತದೆ ಎಂಬು ದನ್ನು ಯೋಚಿಸೋಣ. ನಡೆಯುತ್ತಿರುವಾಗ ಶ್ವಾಸಶ್ವಾಸಕ್ಕೂ ಸಾಧಾ ರಣವಾಗಿ ಹದಿನಾರಂಗುಲದ ಉದ್ದ ಶ್ವಾಸವು ಅಶುದ್ಧವಾಗಿ ಪರಿಣಮಿಸಿ, ಹೊರಹೊರಟು ಹೊರಗಡೆ ಎಂಟು ಅಂಗುಲದಷ್ಟು ಪ್ರಮಾಣ ನಷ್ಟವಾಗಿ ಉಳಿದ ಎಂಟಂಗುಲದಷ್ಟು ಆಮ್ಲಜನಕದೊಡನೆ ಶುದ್ಧಿಯನ್ನು ಹೊಂದಿ, ಆ ಎಂಟಂಗುಲದಷ್ಟು ಮಾತ್ರ ಶುದ್ಧವಾಯುವು ಮೂಗಿನ ಹೊಳ್ಳೆಗಳ ಮೂಲಕ ಶರೀರದ ಒಳಕ್ಕೆ ಪ್ರವೇಶಿಸಿ, ಅಲ್ಲಿ ನಾಭೀ ಪ್ರದೇಶದಲ್ಲಿರುವ ಪ್ರಾಣವಾಯುವಿನೊಡನೆ ಕಲೆತು ಅಲ್ಲಿಂದ ಪುನಃ ಹದಿನಾರು ಅಂಗುಲ ದಷ್ಟು ಹೊರಟು, ಅಶುದ್ಧವಾಯುವಾಗಿ ಪರಿಣಮಿಸಿ, ಮೂಗು ಬಾಯಿಗಳ ಮೂಲಕ ಹೊರಕ್ಕೆ ಬಂದು, ಅಲ್ಲಿ ಹಿಂದಿನಂತೆಯೇ ಎಂಟು ಅಂಗುಲ ದಷ್ಟು ನಷ್ಟಹೊಂದಿ, ಉಳಿದ ಎಂಟಂಗುಲವೂ ಪರಿಶುದ್ಧಿಯನ್ನು ಹೊಂದಿ, ಎಂಟಂಗುಲದಷ್ಟು ಮಾತ್ರ ಒಳಕ್ಕೆ ಪ್ರವೇಶಿಸಿ ನಾಭಿಯಲ್ಲಿರುವ ಶ್ವಾಸ ದೊಡನೆ ಕಲೆತು ಪುನಃ ಹದಿನಾರು ಅಂಗುಲದಷ್ಟು ಹೊರಕ್ಕೆಬಂದು ಪುನಃ ಎಂಟಂಗುಲದಷ್ಟು ನಷ್ಟವಾಗುತ್ತದೆ. ಹೀಗೆ ನಡೆಯುತ್ತಿರುವಾಗ ಶ್ವಾಸ ಶ್ವಾಸಕ್ಕೂ ಎಂಟಂಗುಲದಷ್ಟು ನಷ್ಟವಾಗುತ್ತಾ ಆಯಸ್ಸನ್ನು ಕ್ರಮವಾಗಿ ಕ್ಷೀಣಿಸುತ್ತಾ ಬರುತ್ತದೆ. ಮಾತನಾಡುವುದರಲ್ಲಿ ಉಂಟಾಗುವ ಶ್ವಾಸ ನಷ್ಟದ ಎರಡರಷ್ಟು ದಾರಿನಡೆಯುವಾಗ ಉಂಟಾಗುತ್ತದೆ.

ಕೆಲಸಮಾಡುತ್ತಿರುವಾಗ ಇಪ್ಪತ್ತಂಗುಲ ಉದ್ದವುಳ್ಳ ಶ್ವಾಸವು ಹೊಕ್ಕಳು ಭಾಗದಿಂದ ಹೊರಟು ಅಶುದ್ಧಿಯಾಗಿ ಪರಿಣಮಿಸಿದಮೇಲೆ, ನಾಸಿಕಾರಂಧ್ರಗಳಿಂದ ಹೊರಭಾಗಕ್ಕೆ ಬಂದು ಅಲ್ಲಿ ಹಿಂದೆ ಹೇಳಿದಂತೆ ಹತ್ತಂಗುಲದಷ್ಟು ನಷ್ಟವಾಗಿ ಉಳಿದ ಹತ್ತಂಗುಲದಷ್ಟು ಶುದ್ಧಿಯನ್ನು ಹೊಂದಿ ಅಷ್ಟುಮಾತ್ರವೇ ಶರೀರದ ಒಳಕ್ಕೆ ಪ್ರವೇಶಿಸಿ, ನಾಭಿಯ ಕುಹರ ದಲ್ಲಿರುವ ಶ್ವಾಸದಲ್ಲಿ ಬೆರೆತು ಮತ್ತೆ ಹತ್ತಂಗುಲದಷ್ಟು ಅದರಿಂದ ತೆಗೆದು ಕೊಂಡು ಅಶುದ್ಧಿಯಾಗಿ ಪುನಃ ಇಪ್ಪತ್ತಂಗುಲದಷ್ಟು ಈಚೆಗೆ ಬಂದು ಪುನಃ ಹತ್ತಂಗುಲದಷ್ಟನ್ನು ಕಳೆದುಕೊಳ್ಳುತ್ತದೆ. ಹೀಗೆ ಕೆಲಸಮಾಡುತ್ತಿರು ವಾಗಲೆಲ್ಲಾ ಶ್ವಾಸಶ್ವಾಸಕ್ಕೂ ಹತ್ತತ್ತಂಗುಲದಷ್ಟು ಶ್ವಾಸವು ನಷ್ಟವಾಗುತ್ತ ಬರುತ್ತದೆ. ಕೆಲಸಮಾಡುವುದರಿಂದ ಆಯುಃಕ್ಷೀಣತೆಯು ಮಾತನಾಡು ವಾಗ ಆಗುವುದಕ್ಕಿಂತ ಎರಡೂವರೆಯಷ್ಟು ಆಗುತ್ತದೆ.

ಜಗಳವಾಡುವಾಗ ಇಪ್ಪತ್ತನಾಲ್ಕಂಗುಲಗಳಷ್ಟು ಶ್ವಾಸವು ನಾಭಿ ಯಿಂದ ಮೂಗಿನ ಮೂಲಕ ಹೊರಕ್ಕೆ ಬಂದು ಅಲ್ಲಿ ಹನ್ನೆರಡಂಗುಲಗಳಷ್ಟು ನಷ್ಟವಾಗಿ ಉಳಿದ ಹನ್ನೆರಡು ಅಂಗುಲಗಳು ಶುದ್ಧಿಯನ್ನು ಹೊಂದಿ, ಶರೀರದೊಳಕ್ಕೆ ಹೋಗಿ ನಾಭಿಯ ಭಾಗದಲ್ಲಿರುವ ಶ್ವಾಸದೊಡನೆ ಕಲೆತು, ಮತ್ತೆ ಹನ್ನೆರಡಂಗುಲದಷ್ಟು ಶ್ವಾಸವನ್ನು ತೆಗೆದುಕೊಂಡು ಪುನಃ ಇಪ್ಪತ್ತ ನಾಲ್ಕಂಗುಲವು ಹೊರಬಿದ್ದು ಪುನಃ ಹನ್ನೆರಡಂಗುಲದಷ್ಟು ನಷ್ಟವನ್ನು ಹೊಂದುತ್ತದೆ. ಇದು ಪ್ರತಿ ಶ್ವಾಸಕ್ಕೂ ನಡೆಯುತ್ತಿರುತ್ತದೆ. ಇದ ರಿಂದ ಆಯಸ್ಸು ಮಾತನಾಡುವಾಗ ಎಷ್ಟು ಕ್ಷೀಣವಾಗುತ್ತದೆಯೋ ಅದರ ಮೂರರಷ್ಟಾಗುತ್ತದೆ. ಆದುದರಿಂದಲೇ ಸ್ತ್ರೀಪುರುಷರು ಸಾಧ್ಯವಾದ ಮಟ್ಟಿಗೆ ಜಗಳವಾಡುವುದಕ್ಕೆ ಅವಕಾಶ ಕೊಡಲೇ ಬಾರದು. ಅಲ್ಲದೆ ಜಗಳಕ್ಕೆ ಅವಕಾಶ ಕೊಟ್ಟಿದ್ದೇ ಆದರೆ, ಅವರ ಆಯಸ್ಸು ಬಹುವೇಗವಾಗಿ ನಶಿಸುತ್ತ ಬರುತ್ತದೆ.

ನಿದ್ರೆಮಾಡುವಾಗ ನಲವತ್ತೆಂಟು ಅಂಗುಲಗಳ ಉದ್ದದಷ್ಟು ಶ್ವಾಸವು ನಾಭಿದೇಶವನ್ನು ಬಿಟ್ಟು ಹೊರಟು, ಅಶುದ್ಧಿಹೊಂದಿ ಹೊರಕ್ಕೆ ಬಂದೊಡನೆಯೇ ಹದಿನೆಂಟಂಗುಲದಷ್ಟು ನಷ್ಟವಾಗಿ, ಪರಿಶುದ್ಧಿಯನ್ನು

ಹೊಂದಿ ಉಳಿದ ಮೂವತ್ತಂಗುಲದಷ್ಟು ಮಾತ್ರ ಒಳಕ್ಕೆ ಹೋಗಿ ನಾಭಿಯಲ್ಲಿನ ಪ್ರಾಣವಾಯುವಿನೊಡನೆ ಬೆರೆತು ಪುನಃ ನಲವತ್ತೆಂಟು ಅಂಗುಲದಷ್ಟು ಈಚೆಗೆ ಬಂದು ಪುನಃ ಹದಿನೆಂಟಂಗುಲದಷ್ಟು ನಷ್ಟವನ್ನು ಪಡೆಯುತ್ತದೆ. ಈರೀತಿಯಾಗಿ ನಿದ್ರಿಸುತ್ತಿರುವಾಗಲೆಲ್ಲಾ ಪ್ರತಿ ಶ್ವಾಸಕ್ಕೂ ಹದಿನೆಂಟಂಗುಲದಷ್ಟು ಶ್ವಾಸನಷ್ಟವುಂಟಾಗುತ್ತಲೇ ಇರುತ್ತದೆ. ಇದರಿಂದ ಆಯುರ್ನಷ್ಟವು ಮಾತನಾಡುವುದರಲ್ಲಿ ಉಂಟಾಗುವ ನಷ್ಟಕ್ಕಿಂತ ನಾಲ್ಕೂವರೆಯಷ್ಟು ವೇಗವಾಗಿ, ನಿದ್ರೆಮಾಡುತ್ತಿರುವಾಗ ನಡೆಯುತ್ತಿರುವುದರಿಂದ, ಜನಗಳು ತಮ್ಮ ವಿಶ್ರಾಂತಿಗೆ ಬೇಕಾದಷ್ಟಕ್ಕಿಂತಲೂ ಹೆಚ್ಚಾಗಿ ನಿದ್ರೆ ಮಾಡುವುದು ಯುಕ್ತವಲ್ಲ. ಇದರಿಂದ ತಮ್ಮ ಆಯಸ್ಸನ್ನು ತಾವೇ ಅನ್ಯಾಯವಾಗಿ ಕಳೆದುಕೊಳ್ಳುತ್ತ ಬರುತ್ತಾರೆ.

ಓಡುವಾಗ ಪ್ರತಿ ಶ್ವಾಸಕ್ಕೂ ಐವತ್ತನಾಲಕ್ಕು ಅಂಗುಲದುದ್ದ ಶ್ವಾಸವು ನಾಭಿಯಿಂದ ಹೊರಹೊರಟು ಹೊರಭಾಗದಲ್ಲಿ ಇಪ್ಪತ್ತೇಳು ಅಂಗುಲದಷ್ಟು ನಷ್ಟಹೊಂದಿ, ಉಳಿದ ಇಪ್ಪತ್ತೇಳಂಗುಲವು ಶುದ್ಧಿಹೊಂದಿದೊಡನೆಯೇ ನಾಸಾಕುಹರದಿಂದ ನಾಭಿಪ್ರದೇಶಕ್ಕೆ ಹೋಗಿ ಅಲ್ಲಿರುವ ಶ್ವಾಸದೊಡನೆ ಬೆರೆತು ಪುನಃ ಐವತ್ತನಾಲ್ಕಂಗುಲವು ಈಚೆಗೆ ಬಂದು ಪುನಃ ಇಪ್ಪತ್ತೇಳಂಗುಲದಷ್ಟು ನಷ್ಟವನ್ನು ಹೊಂದುತ್ತದೆ. ಹೀಗೆ ಶ್ವಾಸಶ್ವಾಸಕ್ಕೂ ನಡೆಯುತ್ತಿರುತ್ತದೆ. ಈಗಿನ ಕಾಲದ ಫುಟ್‌ಬಾಲ್, ಬ್ಯಾಡ್‌ಮೆಂಟನ್, ಕ್ರಿಕೆಟ್ ಮೊದಲಾದ ಆಟಗಳಲ್ಲಿ ಓಡುವಿಕೆಯೇ ಪ್ರಾಮುಖ್ಯವಾದುದರಿಂದ ಈ ಆಟಗಳನ್ನಾಡುವಾಗ ಶ್ವಾಸವೊಂದಕ್ಕೆ ಇಪ್ಪತ್ತೇಳಂಗುಲದ ನಷ್ಟವು ಆಗುತ್ತಿರುತ್ತ, ಮಾತನಾಡುವಾಗ ಆಗುವ ಆಯುಃಕ್ಷೀಣತೆಯ ಆರೂಮುಕ್ಕಾಲರಷ್ಟು ವೇಗವಾಗಿ ನಡೆಯುತ್ತಿರುವುದರಿಂದ, ಮೇಲೆ ಹೇಳಿದ ಆಟಗಳು ಶರೀರದ ಅವಯವಗಳಿಗೆ ಬಲವನ್ನು ಕೊಡುವುವಾದರೂ ಆಯುಸ್ಸು ಹೆಚ್ಚಾಗಿ ನಶಿಸುವುದೆಂದು ತಿಳಿದು, ಜನಗಳು ಅವಕ್ಕೆ ಹೆಚ್ಚಾಗಿ ಗಮನಕೊಡಬಾರದು.

ಇವೆಲ್ಲಕ್ಕಿಂತಲೂ ಸಂಭೋಗಕಾಲದಲ್ಲಿ ಆಗುವ ನಷ್ಟವು ಬಹಳ ಭಯಂಕರವಾದದ್ದು. ಸಂಭೋಗ ಸಮಯದಲ್ಲಿ ಪ್ರತಿಯೊಂದು ಶ್ವಾಸಕ್ಕೂ

ಅರವತ್ತನಾಲ್ಕಂಗುಲಗಳ ಉದ್ದ ಶ್ವಾಸವು ನಾಭಿಯಿಂದ ಹೊರಟು ಅದರಲ್ಲಿ ನಲವತ್ತಂಗುಲದಷ್ಟು ಹೊರಗೆ ನಷ್ಟವಾಗಿ, ಉಳಿದ ಇಪ್ಪತ್ತನಾಲ್ಕಂಗುಲವು ಶುದ್ಧಿಹೊಂದಿದಮೇಲೆ ಒಳಕ್ಕೆ ಪ್ರವೇಶಿಸಿ, ಮತ್ತೆ ನಲವತ್ತಂಗುಲದಷ್ಟು ಶ್ವಾಸವನ್ನು ತೆಗೆದುಕೊಂಡು ಒಟ್ಟು ಅರವತ್ತನಾಲ್ಕಂಗುಲಗಳಷ್ಟು ಹಿಂದಿನಂತೆಯೇ ಹೊರಕ್ಕೆ ಬಂದು ಪುನಃ ನಲವತ್ತಂಗುಲದಷ್ಟು ನಷ್ಟವಾಗುತ್ತದೆ. ಇದರಲ್ಲಿ ಶ್ವಾಸನಷ್ಟವು ಮಾತನಾಡುವುದರಲ್ಲಿ ಉಂಟಾಗುವ ಹತ್ತರಷ್ಟಾಗುತ್ತದೆ. ಹೀಗೆ ಆಯುಃಪ್ರಮಾಣವು ಸಂಭೋಗಕರ್ಮದಿಂದ ಅಪರಿಮಿತವಾಗಿ ತಗ್ಗುತ್ತದೆ. ಹೀಗೆ ಮೇಲೆ ಹೇಳಿದವುಗಳಿಗೆಲ್ಲಾ ಒಂದು ದೃಷ್ಟಾಂತವಿದೆ. ಒಂದು ಗಡಿಯಾರಕ್ಕೆ ಬೀಗವನ್ನು ಕೊಟ್ಟಾಗ, ಒಳಗಿರುವ ಮೈ್ಯೆಸ್ಪ್ರಿಂಗ್ ಎಂಬುವ ಮುಖ್ಯ ಕಂಬಿಯ ಸುತ್ತು, ಒತ್ತಾಗಿ ಸುತ್ತಿಕೊಂಡಿರುತ್ತದೆ. ಗಡಿಯಾರವು ನಡೆಯುವುದಕ್ಕೆ ಪ್ರಾರಂಭಿಸಿದ ಮೊದಲು ಕ್ಷಣಕ್ಷಣಕ್ಕೂ ಈ ಮೆಯಿನ್‌ಸ್ಪ್ರಿಂಗು ಮೆಲ್ಲಮೆಲ್ಲಗೆ ಸಡಿಲವಾಗುತ್ತ ಬರುತ್ತದೆ. ಇದೇ ರೀತಿಯಲ್ಲಿ ನಾಭಿಪ್ರದೇಶದಲ್ಲಿ ಬಿರುಸಾಗಿ ಸುತ್ತಿಕೊಂಡಿರುವ ಶ್ವಾಸವು ಹೊರಕ್ಕೆ ಬರುವಾಗಲೆಲ್ಲ ಹಿಂದೆ ಹೇಳಿದಂತೆ, ಮಾತನಾಡುವುದು, ನಡೆಯುವುದು, ಕೆಲಸಮಾಡುವುದು, ವ್ಯಾಜ್ಯಮಾಡುವುದು, ನಿದ್ರೆಮಾಡುವುದು, ಓಡುವುದು ಮತ್ತು ಸಂಭೋಗಸುಖವನ್ನನುಭವಿಸುವುದು, ಈ ವಿಧವಾದ ಕಾರ್ಯಗಳು ನಡೆಸುವಾಗ ಕ್ರಮವಾಗಿ 4, 8, 10, 12, 18, 24, 27 ಮತ್ತು 40 ಅಂಗುಲಗಳ ಉದ್ದದಷ್ಟು ಶ್ವಾಸಗಳು ತಗ್ಗುತ್ತ ತಗ್ಗುತ್ತ ಬರುತ್ತದೆ. ಶ್ವಾಸವು ಹೊರಕ್ಕೆ ಬಂದಂತೆಲ್ಲ ಪ್ರತಿ ಕ್ಷಣವೂ ಶ್ವಾಸವು ನಷ್ಟಹೊಂದಿ ಸ್ತ್ರೀಪುರುಷರ ಆಯುಃಪ್ರಮಾಣವು ಕಡಮೆಯಾಗುತ್ತ ಬರುತ್ತದೆ. ಪ್ರತಿ ಶ್ವಾಸಕ್ಕೂ ಆಯಸ್ಸು ಹೀಗೆ ತಗ್ಗುತ್ತ ಬಂದು ನಾಭಿಯಲ್ಲಡಗಿರುವ ಶ್ವಾಸಗಳೆಲ್ಲವೂ ವ್ಯಯವಾದಮೇಲೆ ಅಂತ್ಯ (ಕಡೆಯ) ಶ್ವಾಸವು ಶರೀರವನ್ನು ತ್ಯಜಿಸಿ ವಾಯುರೂಪದಿಂದ ಹೊರಹೊರಡುತ್ತದೆ. ಹೀಗೆ ಹೊರಟಮೇಲೆ ಆ ಶರೀರವು ಪ್ರೇತಭಾವವನ್ನು ಹೊಂದುತ್ತದೆ. ಈ ಶ್ವಾಸದ ಸುತ್ತುಗಳಿಗೆ ಮೇಲೆ ಹೇಳಿದ ಗಡಿಯಾರದ ಮೈ್ಯೆಸ್ಪ್ರಿಂಗ್ ದೃಷ್ಟಾಂತದ ಜೊತೆಗೆ 176ನೇ ಪುಟದಲ್ಲಿ ಸುತ್ತಿಟ್ಟ ಹಗ್ಗವನ್ನು ದೃಷ್ಟಾಂತ

ವಾಗಿ ಹಿಂದೆಯೇ ತಿಳಿಸಿದೆ. ಆದುದರಿಂದ ಜನಗಳು, ತಾವು ಸತ್ಕರ್ಮಿಗಳಾಗಿ ಭೂಲೋಕದಲ್ಲಿ ಹೆಚ್ಚುಕಾಲ ಜೀವಿಸಬೇಕೆಂಬ ಅಪೇಕ್ಷೆಯಿದ್ದದ್ದೇ ಆದರೆ, ಮೇಲೆ ಹೇಳಿದ, ಆಯುಸ್ಸನ್ನು ಹೆಚ್ಚಾಗಿ ನಾಶಮಾಡುವ ವಿಷಯಗಳಲ್ಲಿ ಹೆಚ್ಚು ಆಸಕ್ತರಾಗಿರಬಾರದೆಂಬುದೇ ಈ ಗ್ರಂಥಕರ್ತರ ಕೋರಿಕೆ.

ಈ ಗ್ರಂಥಕರ್ತರಾದ ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು, ತಮ್ಮ ಯೋಗಬಲದಿಂದ ಸುಖವಾಗಿ ಎರಡಂಗುಲ ಉದ್ದದಷ್ಟು ಶ್ವಾಸವನ್ನು ಮಾತ್ರ ಹೊರಕ್ಕೆ ಬಿಟ್ಟು, ಸ್ವಲ್ಪಹೊತ್ತು ಅಲ್ಲಿ ನಿಲ್ಲಿಸಿ, ಅದು ಶುದ್ಧಿಹೊಂದಿದಮೇಲೆ ಎರಡಂಗುಲದಷ್ಟೂ ತಮ್ಮ ಮೂಗಿನ ಹೊಳ್ಳೆಗಳಿಂದ ಒಳಕ್ಕೆ ಸೆಳೆದುಕೊಂಡು ಭ್ರೂಮಧ್ಯ (ಹುಬ್ಬುಗಳ ನಡು) ಭಾಗದಲ್ಲಿ ಮತ್ತೆ ಸ್ವಲ್ಪಹೊತ್ತು ಅದನ್ನು ನಿಲ್ಲಿಸಿ, ಅನಂತರ ಅದು ಶ್ವಾಸದೊಡನೆ ಬೆರೆತಮೇಲೆ ಪುನಃ ಎರಡಂಗುಲದಷ್ಟು ಮಾತ್ರವೇ ಹೊರಕ್ಕೆ ಬಿಡುತ್ತಾ ಸ್ವಲ್ಪವೂ ನಷ್ಟವುಂಟಾಗದಂತೆ ಒಳಕ್ಕೆಳೆಯುತ್ತಾ ಇರುತ್ತಾರೆ. ಆದುದರಿಂದಲೇ ಇವರ ನಾಭೀ ಪ್ರದೇಶದಲ್ಲಿ ಸುತ್ತಿಕೊಂಡು ಮಲಗಿರುವ ಶ್ವಾಸವೆಂಬ ಹಾವು ಬಹಳ ನೆಮ್ಮದಿಯಾಗಿ ಸುತ್ತು ತಿರುಗುತ್ತಿರುತ್ತದೆ. ಇದರಿಂದಲೇ ಅವರ ಆಯುಃಪ್ರಮಾಣವು ದಿನೇ ದಿನೇ ಅಭಿವೃದ್ಧಿಯಾಗುವುದಲ್ಲದೆ ಇವರು ಒಂದೊಂದು ಶ್ವಾಸವನ್ನೂ ಮೇಲೆ ಹೇಳಿದ ರೀತಿಯಲ್ಲಿ ನಿರಂತರವೂ ನಿಲ್ಲಿಸುತ್ತಲೂ ಮತ್ತೆ ಬಿಡುತ್ತಲೂ ಇರುವುದರಿಂದ ಈ ಗ್ರಂಥಕರ್ತರ ಮನಸ್ಸು ಯಾವುದೊಂದು ಕೋರಿಕೆಗಳೂ ಇಲ್ಲದೆ ನಿರ್ಮಲವಾಗಿರುತ್ತದೆ. ಹೀಗೆ ಕೋರಿಕೆಗಳಿಲ್ಲದೆ ಮನಸ್ಸು ಶುದ್ಧಭಾವದಿಂದಿರುವಾಗ ಉಂಟಾಗುವ ಸುಖವು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಇವರೊಡನೆ ಯಾರಾದರೂ ಕಲೆತು ಮಾತನಾಡುವಾಗ ಮಾತ್ರವೇ ಇವರು ಮಾತನಾಡುವರು. ಮಾತುಗಳಿಲ್ಲದ ಕಾಲದಲ್ಲೆಲ್ಲಾ ಇವರು ಯಾವಬಗೆ ಕೋರಿಕೆಗಳನ್ನೂ ಮನಸ್ಸಿನಲ್ಲಿ ನೆನಸದೆ ಸದಾ ನಿರ್ಮಲಚಿತ್ತರಾಗಿಯೇ ಇರುವರು. ಇದೂ ಅಲ್ಲದೆ, ಇವರು ಗ್ರಂಥವನ್ನು ಬರೆಯುವಾಗ ಮಾತ್ರ ಆಯಾ ಸಂದರ್ಭಗಳಿಗೆ ತಕ್ಕಂತೆ ಮನಸ್ಸಿನಲ್ಲಿ ವಿಷಯಗಳನ್ನು ಗ್ರಹಿಸುವರೇ ಹೊರತು ಉಳಿದ ಕಾಲಗಳಲ್ಲಿ ಇವರ ಮನಸ್ಸು ಸುಮ್ಮನಿರುವುದು.

ಈ ವಿಷಯುಗಳೆಲ್ಲವೂ **“ಗ್ರಂಥಕರ್ತರ ಮನಸ್ಸು ವಿಶ್ರಾಂತಿಯನ್ನು ಹೊಂದಿರುವಿಕೆ”** ಎಂಬ ವಿಷಯ ಸೂಚಿಕೆಯ ಕೆಳಗೆ ಇನ್ನು ಮುಂದೆ ವಿಸ್ತಾರವಾಗಿ ಹೇಳಲ್ಪಡುವುವು. ಹೀಗೆ ಸದಾ ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲಿ ನೆನಸದೆ ಸುಮ್ಮನಿರುವುದಕ್ಕೆ ಕಾರಣವೇನಂದರೆ:—ವಾಯುವಿನ ಅಂಶವಾಗಿರುವ ಶ್ವಾಸವೇ ಮನಸ್ಸು; ಆ ಮನಸ್ಸೇ ಶ್ವಾಸ ಎಂದು ತಿಳಿಯಬೇಕು. ಈ ಶ್ವಾಸದ ವೇಗವನ್ನು **ಯೋಗಬಲದಿಂದ** ಸಂಹರಿಸಿದ್ದೇ ಆದರೆ ಮನಸ್ಸಿನ ವೇಗವೂ ನಿಂತುಹೋಗುವುದು. ಹಾಗೆ ನಿಂತ ತಕ್ಷಣವೇ ಯಾವ ಕೋರಿಕೆಗಳೂ ಯೋಚನೆಗಳೂ ಹುಟ್ಟವು. ಈ ಕೋರಿಕೆಗಳಿಗೇ ಮನಸ್ಸು ಎಂಬ ಹೆಸರು ಬಂದಿರುವುದು. ಈ ಶ್ವಾಸದ ವಿನಹ ಅನೇಕ ಕೋರಿಕೆಗಳಿಗೆ ನೆಲೆಯಾದ ಮನಸ್ಸೆಂಬುದು ಬೇರೆಯಿಲ್ಲವು. ಇಂತಹ ದೊಡ್ಡ ಸಾಧನೆಗಳನ್ನು ಮಾಡದೆ ಪ್ರಪಂಚವೆಲ್ಲವನ್ನೂ ಏಕಾಧಿಪತ್ಯದಿಂದಾಳುವ ಚಕ್ರವರ್ತಿಯಾಗಿದ್ದರೂ ಅದರಿಂದ ಫಲವಿಲ್ಲ.

ಕೋರಿಕೆಗಳೆಲ್ಲವೂ ಅಂದರೆ ಇಂದ್ರಿಯಾರ್ಥಗಳೆಲ್ಲವೂ ಶ್ವಾಸದಲ್ಲಿಯೇ ಹುಟ್ಟುವುವು. ಶ್ವಾಸಗಳು ಹೊರಗೆ ನಷ್ಟವಾಗುವುದಕ್ಕೆ ಅವಕಾಶಕೊಡದಿದ್ದಲ್ಲಿ ಈ ರೀತಿಯಾದ ಕೋರಿಕೆಗಳು ಹುಟ್ಟಲೇ ಹುಟ್ಟವು. ಈ ಶ್ವಾಸಗಳೇ ನಮ್ಮ ಆಯುಃಪರಿಮಿತಿಯನ್ನು ತೋರಿಸುವುವಲ್ಲದೆ ಸೂರ್ಯ ಚಂದ್ರರ ಚಲನೆಗಳಿಂದುಂಟಾದ ದಿನಗಳು, ಮಾಸಗಳು, ಸಂವತ್ಸರಗಳೂ ಅಲ್ಲವು. ಸೂರ್ಯಚಂದ್ರರು ಪ್ರತಿದಿನವೂ ತಿರುಗೋಣದರಿಂದ ಆದಿತ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ ಎಂಬ ಹೆಸರುಗಳುಳ್ಳ ದಿನಗಳೂ, ದಿನಗಳಿಂದ ವಾರಗಳೂ, ವಾರಗಳಂದ ಪಕ್ಷಗಳೂ, ಪಕ್ಷಗಳಿಂದ ಮಾಸಗಳೂ, ಮಾಸಗಳಿಂದ ಋತುಗಳೂ, ಋತುಗಳಿಂದ ಅಯನಗಳೂ, ಅಯನಗಳಿಂದ ಸಂವತ್ಸರಗಳೂ, ಆ ಸಂವತ್ಸರಗಳಿಂದ ಯುಗಗಳೂ ಉಂಟಾಗುತ್ತವೆ. ಯೋಗಾಭ್ಯಾಸವನ್ನು ಮಾಡಿ, ಯಾವಾಗಲೂ ನಿರ್ವಿಕಲ್ಪಸಮಾಧಿಯಲ್ಲಿ ನೆಲೆಸಿರುವ ಯೋಗಿಗಳಿಗೆ ಹಗಲೆಂದೂ ರಾತ್ರಿಯೆಂದೂ ತಿಳಿಯದೆ ಸದಾ ಸಮಾಧಿಯಲ್ಲಿರುವುದರಿಂದ ಅವರಿಗೆ ದಿನಗಳು, ವಾರಗಳು, ಮಾಸಗಳು ಸಂವತ್ಸರಗಳೆಂಬುದೇ ತಿಳಿಯದು. ಕೋರಿಕೆಗಳೂ ಮತ್ತು ಮರವುಗಳೂ ಇಲ್ಲದಿರುವ ಸ್ಥಿತಿಯು ನಿರ್ವಿಕಲ್ಪಸಮಾಧಿಯೆನಿಸುವುದು.

ಈ ಸ್ಥಿತಿಯು ಯೋಗಾಭ್ಯಾಸದಿಂದಲ್ಲದೆ ಮತ್ತಾವುದರಿಂದಲೂ ಸಾಧ್ಯವಿಲ್ಲ.

ಒಂದು, ಎರಡು, ಮೂರು, ನಾಲ್ಕು ಮತ್ತು ಐದು ಈ ತಿಂಗಳೊಳಗೂ, ಒಂದು, ಎರಡು, ಮೂರು, ನಾಲ್ಕು, ಐದು, ಹತ್ತು ಮತ್ತು ಇಪ್ಪತ್ತು ಈ ಸಂವತ್ಸರಗಳೊಳಗೂ, ಸ್ತ್ರೀಪುರುಷರು ಮೃತಿಯನ್ನು ಹೊಂದುತ್ತಾರೆ. ಹೀಗೆ ಸಾಯುವುದಕ್ಕೆ ಕಾರಣವೇನೆಂದರೆ:—ಆಯಾ ತಿಂಗಳುಗಳು, ಆಯಾ ವರ್ಷಗಳು ಇವುಗಳಿಗೆ ತಕ್ಕಂತೆ ಎಷ್ಟು ಕೋಟಿ, ಎಷ್ಟು ಲಕ್ಷ, ಎಷ್ಟು ಸಾವಿರ ಶ್ವಾಸಗಳು ನಿಯಮಿತವಾಗಿಯೋ ಅಷ್ಟು ಶ್ವಾಸಗಳು ಮಾತ್ರ ವಿದ್ದು, ದಿವಾರಾತ್ರಿಗಳಲ್ಲಿಯೂ ಕಣ್ಣುರೆಪ್ಪೆ ಹೊಡೆಯುವಷ್ಟು ಕಾಲವೂ ಈ ಶ್ವಾಸಗಳು ಸುಮ್ಮನಿರದೆ ಎರಡು ಮೂಗಿನ ಹೊಳ್ಳೆಗಳ ಮೂಲಕವಾಗಿ ಬಂದು ಹೊರಗೆ ನಷ್ಟವಾಗುತ್ತಲೇ ಇರುತ್ತವೆ. ಕಡೆಯಲ್ಲಿ ಅಂದರೆ ಸಾಯುವ ಕಾಲದಲ್ಲಿ ಬರುವ ಅಂತ್ಯಶ್ವಾಸವು, ಸ್ತ್ರೀಪುರುಷರಿಗಿರುವ ಆಶಾ ಪಾಶಗಳೂ, ಕಾಮಕ್ರೋಧಾದಿ ಗುಣಗಳೂ ಒಟ್ಟಿಗೆಸೇರಿ, ಬಹಳ ನೀಳವಾಗಿ ಹೊರಹೊರಟು ಬೇರೊಬ್ಬ ತಾಯಿಯ ಗರ್ಭದಲ್ಲಿ ನೂತನವಾಗಿ ಬ್ರಹ್ಮ ನಿಂದ ಸೃಷ್ಟಿಸಲ್ಪಟ್ಟಿರುವ ಶಿಶುವಿನ ಶರೀರವನ್ನು ಪ್ರವೇಶಿಸುತ್ತದೆ. ಇದಕ್ಕೆ ಭಗವದ್ಗೀತೆಯಲ್ಲಿನ 15ನೆಯ ಅಧ್ಯಾಯ 8ನೇ ಶ್ಲೋಕವು ಪ್ರಮಾಣವು.

ಶ್ಲೋ ॥ ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥

ಆಯಾ ಜೀವಿಗಳು ಆಯಾ ಶರೀರಗಳನ್ನು ಬಿಟ್ಟು ಹೊರಟುಹೋಗುವಾಗ, ಆಯಾ ಶರೀರಗಳಿಗೆಲ್ಲ ಸ್ವಾಮಿಯಾಗಿರುವ ಆತ್ಮನು ವರ್ತಮಾನ ಅಂದರೆ ತಾನುಹೊಂದಿರುವ ಶರೀರವನ್ನು ಬಿಟ್ಟು ಬ್ರಹ್ಮಸೃಷ್ಟವಾದ ಬೇರೇ ತಾಯಿಯ ಗರ್ಭದಲ್ಲಿರುವ ಶಿಶುವಿನ ನೂತನ ಶರೀರವನ್ನು ಹೊಂದುವಾಗಲೂ ಮತ್ತು ಆ ಶರೀರವನ್ನು ಬಿಡುವಾಗಲೂ, ಪುಷ್ಪದಲ್ಲಿರುವ ವಾಸನೆಯನ್ನು ವಾಯುವು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯುವಂತೆ, ಬಂಧಮೋಕ್ಷಗಳಿಗೆ ಕಾರಣಭೂತವಾದ ಆಯಾ ಜೀವರನ್ನು ಅಂಟಿಕೊಂಡಿರುವ ಆಶಾಪಾಶಗಳು, ಕಾಮಕ್ರೋಧಾದಿಗಳು ಇವುಗಳ ತೌರುಮನೆ

ಯಾದ ಮನದಿಂದೊಡಗೂಡಿದ ಇಂದ್ರಿಯಶಕ್ತಿಗಳನ್ನು ತೆಗೆದುಕೊಂಡು ಹೋಗುವನು.

ಇದೂ ಅಲ್ಲದೆ ಭಗವದ್ಗೀತೆಯ 2ನೇ ಅಧ್ಯಾಯ 22ನೇ ಶ್ಲೋಕವು ಹೀಗೆಂದು ಉಸುರುತ್ತದೆ.

ಶ್ಲೋ ॥ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ।
ನವಾನಿ ಗೃಹ್ಣಾತಿ ನರೋಽಪರಾಣಿ ॥
ತಥಾ ಶರೀರಾಣಿ ವಿಹಾಯ ಜೀರ್ಣಾ ।
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥

ಮನುಷ್ಯನು ಹರಿದುಹೋದ ಹಳೆಯ ಬಟ್ಟೆಗಳನ್ನು ತೆಗೆದುಹಾಕಿ, ಹೊಸ ವಸ್ತ್ರಗಳನ್ನು ಯಾವರೀತಿಯಲ್ಲಿ ಧರಿಸುತ್ತಾನೆಯೋ, ಹಾಗೆಯೇ, ಆತ್ಮನು ತಾನು ಹೊಂದಿದ್ದ ಹಿಂದಿನ ಅಂದರೆ ಹಳೆಯ ಶರೀರವನ್ನು ಬಿಟ್ಟು, ಬೇರೆ ತಾಯಿಯ ಗರ್ಭದಲ್ಲಿ ಹೊಸದಾಗಿ ಸೃಷ್ಟಿಸಲ್ಪಟ್ಟಿರುವ ಶಿಶುವಿನ ಶರೀರದಲ್ಲಿ ಪ್ರವೇಶಿಸುತ್ತಾನೆ. ಆತ್ಮನು ಬೇರೆ ಶಿಶುವಿನ ಗರ್ಭದಲ್ಲಿ ಸೇರಿದ ಮೇಲೆ ಹಿಂದೆ ತನಗಂಟಬಂದಿರುವ ಆಶಾಪಾಶಗಳು ಆ ಆತ್ಮನನ್ನು ಹೇಗೆ ಮುಚ್ಚುತ್ತವೆಯಂದರೆ, ಮನೆಗೆಲ್ಲ ಬೆಳಕನ್ನು ಕೊಡುತ್ತಿದ್ದ ಒಂದಾನೊಂದು ದೀಪದ ಮೇಲೆ ಒಂದು ಗೂಡೆಯನ್ನು ಮುಚ್ಚಲು ಆ ದೀಪದ ಪ್ರಕಾಶವು ಗೂಡೆಯೊಳಗೇ ಅಡಗಿ ಈಚೆಗೆ ಬರದೆ ಮನೆಯನ್ನೆಲ್ಲಾ ಯಾವರೀತಿಯಲ್ಲಿ ಕತ್ತಲು ಮಾಡುತ್ತದೆಯೋ ಅದೇ ರೀತಿಯಲ್ಲಿಯೇ, ನಮ್ಮ ಶರೀರದಲ್ಲಿರುವ ಆತ್ಮಪ್ರಕಾಶವನ್ನು ಆಶಾಪಾಶಗಳೆಂಬ ಅಜ್ಞಾನವು ಮುಚ್ಚಿರುತ್ತದೆ. ಆದುದರಿಂದಲೇ ನಮ್ಮಲ್ಲಿರುವ ಆತ್ಮನ ಸ್ವರೂಪವನ್ನು ತಿಳಿದುಕೊಳ್ಳದಿದ್ದೇವೆ. ನಮ್ಮಲ್ಲಿರುವ ಅಜ್ಞಾನವೆಂಬ ಈ ಮುಚ್ಚಳವನ್ನು ತೆಗೆದದ್ದೇ ಆದರೆ ಆಗ ಆಕಾಶಸ್ವರೂಪಿಯಾದ ಪರಮಾತ್ಮನ ನಿಜಸ್ವರೂಪವನ್ನು ತಿಳಿದು ಆತನಲ್ಲೇ ಐಕ್ಯವಾಗುತ್ತೇವೆ. ಜನಗಳು ಆಶಾಪಾಶಗಳೆಂಬ ಬಲೆಗಳಲ್ಲಿ ತಗುಲಿಕೊಂಡು ತಮ್ಮ ನಿಜಸ್ವರೂಪವನ್ನೇ ತಾವು ತಿಳಿಯದೆ ನಾಶವಾಗುತ್ತಿದ್ದಾರೆ. ಜನಗಳಲ್ಲಿನ ಆಶೆಯೆಂಬ ಪಿಶಾಚದ ಮಹತ್ತು ಈ ಕೆಳಗಿನ ಪದ್ಯದಲ್ಲಿ ಸೂಚಿತವಾಗಿದೆ.

ಸೀ ॥ ವರಹವೊಂದನು ಪಡೆಯೆ ♦ ಹತ್ತು ಬೇಕೆಂಬುವನು,
ಪತ್ತನೊಂದಲು ನೂರ ♦ ಕಾಸೆಪಡುವ ;

ನೂರನೊಂದಲು ಮತ್ತೆ ♦ ಸಾವಿರವ ನೆಳಸುವನು,
ಸಾವಿರಾಗಲು ಹತ್ತ ♦ ರಷ್ಟು ಕೋರ್ವ;
ಆಯುತಕಧಿಪತಿಯಾಗೆ ♦ ಲಕ್ಷಕಿಡುವನು ಗುರಿಯು,
ಲಕ್ಷಬರ ಲದರದಶ ♦ ಗುಣಕೆ ಚೀರ್ವ;
ದಶಲಕ್ಷ ಕೈಸಾರೆ ♦ ಕೋಟಿವರಹವು ತನಗೆ,
ಬರಲಿಲ್ಲವೆಂದು ದುಃ ♦ ಖಿಪನು ನರನು;

ಗೀ ॥ ಎಷ್ಟುಬಂದರುಂ ಮತ್ತೆ ಬೇ ♦ ಕೆಂಬನವನು;
ತೃಪ್ತಿಯೆಂದಿಗು ಪಡೆಯನಾ ♦ ಧನಪಿಶಾಚಿ
ಆಸೆ ಬಿಡದೊಡೆ ಸೌಖ್ಯಮಂ ♦ ಪಡೆಯಲಹುದೆ?
ರಾಮಲಿಂಗೇಶ! ರಾಮಚಂ ♦ ದ್ರ ಪುರವಾಸ. (ತೆಲುಗು)

ಆಸೆಗೆ ಮಿತಿಯಿಲ್ಲ. ಮನುಷ್ಯರಿಗೆ ಮಿತಿಯಿಲ್ಲದ ಆಸೆಯುಂಟು. ಹೇಗೆಂದರೆ, ಒಂದು ಬಂದಾಗ, ಹತ್ತಾಗಬೇಕೆಂದೂ, ಹತ್ತು ದೊರಕಿದಾಗ ನೂರು ಬೇಕೆಂದೂ ಅದೂ ದೊರೆತಾಗ ಸಾವಿರ ದೊರಕಬೇಕೆಂದೂ, ಸಾವಿರ ವುಂಟಾದಾಗ, ಹತ್ತುಸಾವಿರ ಬರಬೇಕೆಂದೂ, ಅಷ್ಟೂ ಬಂದಾಗ ಅದರ ಹತ್ತರಷ್ಟು ಅಂದರೆ ಒಂದುಲಕ್ಷ ತನಗೆ ಬೇಕೆಂದೂ ಹೀಗೆಯೇ ಹತ್ತುಲಕ್ಷ, ಕೋಟಿ ಧನವುಂಟಾಗಬೇಕೆಂದೂ ಆಶಿಸುವರೇ ಹೊರತು, ಈ ಆಸೆ ತುಚ್ಛ ವಾದುದೆಂದೂ, ಅಶಾಶ್ವತವಾದುದೆಂದೂ, ಮೋಕ್ಷಮಾರ್ಗಕ್ಕೆ ಪ್ರತಿ ಬಂಧಕವೆಂದೂ ಎಂದಿಗೂ ಮನಸ್ಸಿನಲ್ಲಿ ಎಣಿಸರು. ಇದೇ ರೀತಿಯಲ್ಲಿಯೇ ನಾವು ಸುಖಗಳೆಂದು ಭಾವಿಸುವುವುಗಳೆಲ್ಲವೂ ತುಚ್ಛವೇ ಸರಿ. ದೇವಾಧಿ ಪತ್ಯವು ಬಂದರೂ ಅದಕ್ಕಿಂತ ಹೆಚ್ಚು ಸುಖವನ್ನೇ ಆಶಿಸುವ ರಲ್ಲದೆ, ಅಷ್ಟರಲ್ಲಿಯೇ ಎಂದಿಗೂ ತೃಪ್ತಿಪಡರು. ಇಂತಹ ನಶ್ವರವಾದ ಸುಖಗಳನ್ನುಂಟುಮಾಡುವ ಆಸೆಗಳನ್ನು ಹೊಂದಿರುವಷ್ಟುದಿನವೂ ಜನ ಗಳು ಎಂದಿಗೂ ಮೋಕ್ಷವನ್ನು ಹೊಂದಲಾರರು. ಇದು ಅತಿನೀಚವಾದ ದ್ದೆಂದು ತಿಳಿದು ಅದನ್ನು ದೂರಮಾಡಿದ್ದೇ ಆದರೆ ಮುಕ್ತಿಯು ಖಂಡಿತ ವಾಗಿ ದೊರಕುತ್ತದೆ.

ಮತ್ತು ಸ್ತ್ರೀಲೋಲುಪತೆಯೂ ಇಂತಹದೇ. ರೆಪ್ಪೆಹೊಡೆಯುವಷ್ಟು ಕಾಲ ಇರುವಂತಹ ಸಂಭೋಗಸುಖಕ್ಕಾಗಿ ಜನಗಳು ಆಸೆಬಿದ್ದು ತನಗೆ

ಇದರಿಂದ ಯಾವ ಫಲವಾಗುತ್ತದೆಂಬ ವಿಷಯವನ್ನು ತಿಳಿಯದ ಮಾನವರು ಮುಕ್ತಿಮಾರ್ಗವನ್ನು ಎಂದಿಗೂ ಹತ್ತಲಾರರು. ಇದಕ್ಕೆ ಪ್ರಮಾಣವು ಭಗವದ್ಗೀತೆ 16ನೇ ಅಧ್ಯಾಯ 11 ಮತ್ತು 12ನೇ ಶ್ಲೋಕಗಳು.

ಶ್ಲೋ ॥ ಚಿಂತಾ ಮಪರಿಮೇಯಾಂ ಚ ಪ್ರಳಯಾಂತಾ ಮುಪಾಶ್ರಿತಾಃ ।
ಕಾಮೋಪಭೋಗ ಪರಮಾ ಏತಾವ ದಿತಿ ನಿಶ್ಚಿತಾಃ ॥

ಶ್ಲೋ ॥ ಆಶಾಪಾಶಶತೈ ರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥ ಮನ್ಯಾಯೇ ನಾರ್ಥಸಂಚಯಾನ್ ॥

ಸಾಯುವವರಿವಿಗೂ ಅಪರಿಮಿತ ಚಿಂತೆಯನ್ನು ಹೊಂದಿದವರಾಗಿ, ವಿಷಯಭೋಗವೇ ಪರಮಪುರುಷಾರ್ಥವೆಂಬದಾಗಿ ಯಾರು ತಿಳಿದಿರುವರೋ, ಆ ವಿಷಯದಿಂದ ಹುಟ್ಟುವ ಸುಖವೇ ಪರಮಸುಖವೆಂಬದಾಗಿಯೂ ತಿಳಿದಿರುವರೋ, ಮತ್ತು ಆಶಾಪಾಶಗಳಿಂದ ಬಿಗಿಯಲ್ಪಟ್ಟವರಾಗಿಯೂ, ಕಾಮಕ್ರೋಧಪರಾಯಣರಾಗಿಯೂ ಇರುವ ಆ ಆಸುರೀ ಪುರುಷರು ಅನ್ಯಾಯವಾಗಿ ವಿಷಯಭೋಗಗಳಿಗಾಗಿಯೇ ಧನಧಾನ್ಯ ವಸ್ತುವಾಹನಾದಿಗಳೂ, ಸ್ರಕ್ಚಂದನವನಿತಾದಿಗಳೂ ಇವೇ ಮೊದಲಾದ ಭೋಗ್ಯವಸ್ತುಗಳನ್ನಪೇಕ್ಷಿಸುವರು. ಇದಕ್ಕೇ ಈಷಣತ್ರಯವೆಂಬ ಹೆಸರು. ಈ ಈಷಣತ್ರಯಗಳು ಯಾವುವೆಂದರೆ:—1. ಪತ್ನಿಯಮೇಲೆ ಆಸೆ. 2. ಪುತ್ರರಲ್ಲಿ ಪ್ರೇಮ 3. ಭಂಗಾರ ಬೆಳ್ಳಿ ಮೊದಲಾದವುಗಳಲ್ಲಿ ಆಸಕ್ತಿ. ಇವುಗಳನ್ನು ಕ್ರಮವಾಗಿ ಮುಂದೆ ವಿವರಿಸಿದೆ.

# ಪತ್ನಿಯಮೇಲೆ ಆಸೆ.

ಶ್ಲೋ ॥ "ಸನ್ಯಾಸ ಮಗ್ನಿಹೋತ್ರಂ ಚ ದ್ವಿಜಾತೀನಾಂ ಪ್ರಶಾಸ್ಯತೇ" ॥

ಎಂಬ ಸಿದ್ಧಾಂತವನ್ನನುಸರಿಸಿ, ಬ್ರಹ್ಮಚರ್ಯವ್ರತವನ್ನು ಅನುಷ್ಠಾನ ಮಾಡಿ, ಇದರಮೇಲೆ ಮುಕ್ತಿಯನ್ನು ಪಡೆಯಲು ಅಪೇಕ್ಷೆಯು ಉಂಟಾದರೆ, ಸನ್ಯಾಸಾಶ್ರಮವನ್ನು ಹೊಂದಬಹುದು. ಬ್ರಹ್ಮಚಾರಿಯು ಕಾಮೇಚ್ಛೆ

ಯುಳ್ಳವನಾದರೆ, ಶಾಸ್ತ್ರಪ್ರಮಾಣರೀತಿಯಾಗಿ, ಆತನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅಂದರೆ ಮದುವೆಮಾಡಿಕೊಂಡು, ಅದರಲ್ಲಿ ಕೆಲಕಾಲ ಕಾಮೇಚ್ಛೆಯನ್ನು ಪೂರ್ತಿಗೊಳಿಸಿ, ಅನಂತರ ಮೋಕ್ಷಾಪೇಕ್ಷಿಯಾಗಿ ಸನ್ಯಾಸಾಶ್ರಮವನ್ನು ನಿರಾತಂಕವಾಗಿ ಪಡೆಯುಬಹುದು. ಬ್ರಹ್ಮಚಾರಿಯಾಗಿ ಗೃಹಸ್ಥಾಶ್ರಮವನ್ನು ಪಡೆಯುದೆಯೇ ಸನ್ಯಾಸವನ್ನು ಹೊಂದಿದವನಿಗೆ "ಸಾಂಖ್ಯ" ನೆಂದೂ, ಹಾಗಿಲ್ಲದೆ, ಗೃಹಸ್ಥಾಶ್ರಮವನ್ನು ಹೊಂದಿ ಕಡೆಗೆ ಅದರಲ್ಲಿ ಆಸಕ್ತಿಯನ್ನು ಬಿಟ್ಟು ಮುಮುಕ್ಷುವಾಗಿ ಸನ್ಯಾಸವನ್ನು ಕೈಗೊಂಡರೆ ಆತನಿಗೆ "ಕರ್ಮಯೋಗಿ" ಯೆಂದೂ ಹೇಳುವರು. ಈ ಅರ್ಥವನ್ನು ತಿಳಿಯದೆ ಜನಗಳು ಸಂಸಾರಿಗಳಾಗಿದ್ದು ಪತ್ನಿಯನ್ನು ಹೊಂದುವುದೇ ತಮ್ಮ ಪುರುಷಾರ್ಥವೆಂದು ತಾವು ಭ್ರಾಂತಿಹೊಂದುವುದಲ್ಲದೆ, ಇತರರನ್ನೂ ಇಂಥಾ ಭ್ರಾಂತಿಗೆ ಒಳಗಾಗುವಂತೆ ಮಾಡುತ್ತಿದ್ದಾರೆ.

ಶ್ರುತಿ ॥ ಆದಿಮಧ್ಯಾವಸಾನೇಷು ದುಃಖಂ ಸರ್ವಮಿದಂ ಯತಃ ।
ಸ್ತ್ರಿಯಂ ತ್ಯಕ್ತ್ವಾ ಜಗತ್ತ್ಯಕ್ತಂ ಜಗತ್ಯಕ್ತ್ವಾ ಸುಖೀ ಭವೇತ್ ॥

ಎಂಬ ಪ್ರಮಾಣವನ್ನನುಸರಿಸಿ, ಸಂಸಾರವೆಂಬುದು ಸದಾ ದುಃಖವನ್ನೇ ಉಂಟುಮಾಡುವಂಥದು. ಈ ಸಂಸಾರಕ್ಕೆ ಪತ್ನಿಯೇ ಮೂಲಕಾರಣವು. ಆದುದರಿಂದ, ಅಂತಹ ಭಾರ್ಯೆಯ ದೆಶೆಯಿಂದ, ಜ್ಞಾನಿಗಳಿಗೆ ಸರ್ವಥಾ ಸುಖವಿಲ್ಲ. ವಿವಾಹವಾಗುವವರಿವಿಗೂ ವಿವಾಹವಾಗಲಿಲ್ಲವೆಂಬ ಚಿಂತೆ; ವಿವಾಹವಾಗಿ ಹೆಂಡತಿ ಸಂಸಾರಕ್ಕೆ ಮನೆಗೆ ಬಂದಮೇಲೆ ತನ್ನ ಇಷ್ಟಾನುಸಾರವಾಗಿ ನಡೆಯದಿದ್ದರೆ ಅದೊಂದು ಚಿಂತೆ ; ಆಕೆ ಬಂದಮೇಲೆ ಸ್ವಲ್ಪವೂ ಗೋಪ್ಯವಿಲ್ಲದೆ ಸಂಸಾರದ ಗುಟ್ಟನ್ನೆಲ್ಲಾ ಬಯಲುಮಾಡುತ್ತ, ನೆರೆಹೊರೆಯುವರೊಡನೆ ಜಗಳವನ್ನು ಸಂಪಾದಿಸಿಕೊಳ್ಳುತ್ತ, ಸ್ವಲ್ಪವೂ ಮಾತುಗಳನ್ನು ಸಹಿಸದೆ ಪ್ರೇಮವೆಂಬುವ ಹೆಸರೇ ಇಲ್ಲದಿದ್ದಲ್ಲಿ ಅದೊಂದು ದೊಡ್ಡ ಚಿಂತೆ.

ಇದೂ ಅಲ್ಲದೆ, ಆ ಹೆಂಡತಿಯು ನಿರಂತರವೂ ಪತಿಯನ್ನು, ತಾನು ಅಲಂಕರಿಸಿಕೊಳ್ಳುವುದಕ್ಕಾಗಿ ಬೆಲೆಯುಳ್ಳ ಒಡವೆ ವಸ್ತುಗಳನ್ನು ತಂದು ಕೊಡಬೇಕೆಂದು ಪೀಡಿಸುತ್ತಿರುವಳು. ಅದಕ್ಕಾಗಿ ಪತಿಯು ಚಿಂತಿಸು

ತ್ತಿರುವನು. ಇಷ್ಟೇ ಅಲ್ಲದೆ, ಪೂರ್ವಜನ್ಮದ ಕರ್ಮಫಲದಿಂದೊದಗಿದ ಬಡತನದಿಂದ ಕೇಳಿದುದನ್ನು ತಂದುಕೊಡದಿರಲು ಪತಿಯಮೇಲಿನ ಕೋಪದಿಂದ ಮನೆಯಲ್ಲಿ ಅಸಹ್ಯಕರವಾದ ವ್ಯಾಪಾರಗಳನ್ನು ನಡೆಸುತ್ತಿರುವಳು. ಇದರಿಂದ ಗಂಡನಾದವನಿಗೆ ದುಃಖವೇ ಹೊರತು ಸುಖದ ಸುಳಿವೇ ಇಲ್ಲ. ಇದರಮೇಲೆ ಅವರಿಗೆ ರೋಗರುಜಿನಾದಿಗಳೂ, ಪಿಶಾಚಾದಿಗಳ ಪೀಡೆಗಳೂ, ಸಂಭವಿಸಿದಲ್ಲಿ ಅದರಿಂದ ಗಂಡಂದಿರಿಗೆ ಹೆಚ್ಚು ಧನವ್ಯಯವೂ, ಮನೋದುಃಖವೂ ತಂಡೋಪತಂಡವಾಗಿ ಉಂಟಾಗುವುವು. ಇಷ್ಟೇ ಅಲ್ಲದೆ, ಹೆಂಡತಿಯು ಗುಣವತಿಯಾಗಿಯೂ, ಸುಂದರಿಯಾಗಿಯೂ, ಮತ್ತು ಎಲ್ಲಾ ವಿಧಗಳಲ್ಲಿ ಅನುಕೂಲಳಾಗಿಯೂ ಇದ್ದು ದುರದೃಷ್ಟವಶಾತ್ ಮರಣ ಹೊಂದಿದಲ್ಲಿ ಆಕೆಯಲ್ಲಿರುವ ಅಪರಿಮಿತ ಪ್ರೇಮದಿಂದ ಸದಾ ಚಿಂತಿಸುತ್ತಲೇ ಇರುವನಲ್ಲದೆ, ಪತಿಯು ಇಂತಹ ದುಃಖದ ಫಲವಾಗಿ ಕಡೆಗೆ ಮೃತಿಯನ್ನು ಹೊಂದುವುದೂ ಉಂಟು. ಇದಕ್ಕೆ ದಶರಥನ ತಂದೆಯಾದ ಅಜಮಹಾರಾಜನು, ತನಗೆ ಲಭಿಸಿದ, ಕುಲ, ರೂಪ, ಯೌವನ ಮತ್ತು ಶೀಲ ಇವುಗಳಿಂದ ಕೂಡಿದ ಇಂದುಮತಿಯೆಂಬ ರಾಜಪುತ್ರಿಯು ಅಕಸ್ಮಾತ್ತಾಗಿ ಅಂದರೆ ದೈವವ್ಯಾಪಾರದಿಂದ ಪ್ರಾಣವನ್ನು ಬಿಡಲು, ಆಕೆಯನ್ನು ಕುರಿತು ಹಗಲಿರುಳು ಚಿಂತಿಸುತ್ತ ಕಡೆಗೆ ಪ್ರಾಣವನ್ನು ಬಿಟ್ಟುದೇ ದೃಷ್ಟಾಂತವು. ಈ ವಿಧವಾದ ಚಿಂತೆಗಳಿಗೆಲ್ಲಾ ಭಾರ್ಯೆಯೇ ಮೂಲಕಾರಣವೆಂದು ತಿಳಿಯಬೇಕು. ಅದೃಷ್ಟವಶದಿಂದ ತನಗೆ ಸದ್ಗುಣಶಾಲಿನಿಯಾದ ಭಾರ್ಯೆಯು ದೊರೆತರೂ ಸ್ವಲ್ಪ ಚಿಂತೆಗಳು ಕಡಿಮೆಯಾಗುವುವೇ ಹೊರತು ಪತಿಯು ಎಂದಿಗೂ ಚಿಂತೆಯಿಂದ ಸಂಪೂರ್ಣವಾಗಿ ಮುಕ್ತನಾಗಲಾರನು. ಚಿಂತೆಯು ಹೋದ ಹೊರತು ಮನಸ್ಸು ನಿರ್ಮಲವಾಗುವುದಿಲ್ಲ, ಮನಸ್ಸು ನಿರ್ಮಲವಾದ ಹೊರತು ಜ್ಞಾನವುಂಟಾಗಲಾರದು, ಜ್ಞಾನೋದಯವಾದ ಹೊರತು ಪರಮಾತ್ಮನಲ್ಲಿ ಐಕ್ಯವಿಲ್ಲ ಅಂದರೆ ಮುಕ್ತಿಯು ದೊರೆಯಲಾರದು. ಆದುದರಿಂದ ಹೆಂಡತಿಯಾದವಳು ದುರ್ಗುಣಿಯೇ ಆಗಿರಲಿ ಅಥವಾ ಸುಗುಣಿಯೇ ಆಗಿರಲಿ ಆಕೆಯು ಪತಿಯ ಮುಕ್ತಿಮಾರ್ಗಕ್ಕೆ ಒಂದು ತಡೆ. ಈ ವಿಷಯವನ್ನು ಕುರಿತು ದೊಡ್ಡವರ ಅಭಿಪ್ರಾಯವು ಹೇಗಿದೆ ಎಂಬುದನ್ನು ಈ ಕೆಳಗೆ ತಿಳಿಸಿದೆ.

ಶ್ಲೋ ॥ ಕಾಮಕ್ರೋಧಂ ಚ ಲೋಭಂ ಚ ದೇಹೇ ತಿಷ್ಠಂತಿ ತಸ್ಕರಾಃ ।
ಜ್ಞಾನರತ್ನಾಪಹಾರಾಯ ತಸ್ಮಾ ಜ್ಜಾಗ್ರತ ಜಾಗ್ರತ ॥

ಆರ್ಯಾ ॥ ಈ ನರದೇಹದೊಳಿರುವರು ತಸ್ಕರ ♦ ರರಿಷಡ್ವರ್ಗದ ಹೆಸರಿಂದ ।
ಜ್ಞಾನರತ್ನವನ್ನಪಹರಿಸುವರೈ ♦ ಎಚ್ಚರಿಕೇ ನರ ಎಚ್ಚರಿಕೆ ॥

ಈ ನಮ್ಮ ಶರೀರಗಳಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆಂಬ ಅರಿಷಡ್ವರ್ಗಗಳು ನೆಲಸಿ, ನಮಗೆ ಜ್ಞಾನೋದಯವಾಗದಂತೆ ತಡೆಯುತ್ತಿವೆಯಾಗಿ ಅವುಗಳನ್ನು ಜಯಿಸುವ ಪ್ರಯತ್ನವನ್ನು ಮಾಡಬೇಕು.

ಶ್ಲೋ ॥ ಮಾತಾ ನಾಸ್ತಿ ಪಿತಾ ನಾಸ್ತಿ ನಾಸ್ತಿ ಬಂಧುಸಹೋದರಃ ।
ಅರ್ಥಂ ನಾಸ್ತಿ ಗೃಹಂ ನಾಸ್ತಿ ತಸ್ಮಾಜ್ಜಾಗ್ರತ ಜಾಗ್ರತ ॥

ಆರ್ಯಾ ॥ ಜನನಿಯಿಲ್ಲವು ಜನಕನು ಇಲ್ಲವು ♦ ಸೋದರ ನಂಟರು ಮತ್ತಿಲ್ಲ ।
ಧನವು ಇಲ್ಲವು ಮನೆಯೂ ಇಲ್ಲವು ♦ ಎಚ್ಚರಿಕೇ ನರ ಎಚ್ಚರಿಕೆ ॥

ತಂದೆ, ತಾಯಿ, ನಂಟರಿಷ್ಟರು, ಅಣ್ಣತಮ್ಮಂದಿರು ಇವರಾರೂ ಶಾಶ್ವತವಲ್ಲ. ಹಣ ಮನೆ ಮೊದಲಾದುವುಗಳೂ ನಿತ್ಯವಲ್ಲ. ಆದುದರಿಂದ ಅವುಗಳನ್ನು ನಿತ್ಯವೆಂದು ಭಾವಿಸದೇ ಬಹಳ ಎಚ್ಚರಿಕೆಯಿಂದಿರು; ಇವುಗಳನ್ನು ನಂಬಿದರೆ ಎಂದಿಗೂ ಜ್ಞಾನೋದಯವಾಗುವುದಿಲ್ಲ.

ಶ್ಲೋ ॥ ಪುನರಪಿ ಜನನಂ ಪುನರಪಿ ಮರಣಂ ।
ಪುನರಪಿ ಜನನೀಜಠರೇ ಶಯನಂ ॥
ಇಹಸಂಸಾರೇ ಬಹು ವಿಸ್ತಾರೇ ।
ಕೃಪಯಾ ಪಾರೇ ಪಾಹಿ ಮುರಾರೇ ॥

(ಶಂಕರಾಚಾರ್ಯ)

ಶ್ಲೋ ॥ ಜನ್ಮ ದುಃಖಂ ಜರಾದುಃಖಂ, ಜಾಯಾದುಃಖಂ ಪುನಃ ಪುನಃ ।
ಸಂಸಾರಸಾಗರಂ ದುಃಖಂ, ತಸ್ಮಾಜ್ಜಾಗ್ರತಜಾಗ್ರತ ॥

ಆರ್ಯಾ ॥ ಪುಟ್ಟುವ ದುಕ್ಕವು, ಮುಪ್ಪಿನ ದುಕ್ಕವು ♦ ಹೆಂಡತಿ ದುಕ್ಕವು ಮರಮರಳಿ ।
ಒಟ್ಟೊಳು ಸಂಸಾರಾಬ್ಧಿಯೆ ದುಕ್ಕವು ♦ ಎಚ್ಚರಿಕೇ ನರ ಎಚ್ಚರಿಕೆ ॥

ಜನನ ಮರಣಗಳ ದುಃಖವು ಪುನಃ ಪುನಃ ಬರುತ್ತಿರುವುದೇ ಈ ಸಂಸಾರ. ಇದು ಬಹು ವಿಸ್ತಾರವಾದದ್ದು, ಮತ್ತು ದುಃಖದಿಂದ ತುಂಬಿರುವಂಥದು. ಆದುದರಿಂದ ಇದರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಬಹಳ ಜಾಗರೂಕರಾಗಿರಬೇಕು.

ಶ್ಲೋ ॥ ಆಶಯಾ ಬದ್ಧತೇ ಲೋಕಃ ♦ ಕರ್ಮಣಾ ಬಹುಚಿಂತಯಾ ।
ಆಯುಃಕ್ಷೀಣಂ ನ ಜಾನಾತಿ ♦ ತಸ್ಮಾಜ್ಜಾಗ್ರತ ಜಾಗ್ರತ ॥

ಆರ್ಯ ॥ ಕರ್ಮದಲಾಸೆಯು ಲತಿಚಿಂತೆಯುಲಿ ♦ ಬದ್ಧಿತವಾಗಿಹುದೀ ಲೋಕ ।
ಮರ್ಮದಲಾಯುವು, ಕಳೆವುದನರಿಯದು ♦ ಎಚ್ಚರಿಕೇ ನರ ಎಚ್ಚರಿಕೆ ॥

ಈ ಲೋಕದ ಜನಸಮುದಾಯವು, ಆಸೆ, ಕರ್ಮ ಮತ್ತು ಚಿಂತೆ ಇವುಗಳ ಬಂಧನಕ್ಕೊಳಗಾಗಿದೆ. ಆಯುಸ್ಸು ಗುಟ್ಟಾಗಿಯೇ ಕ್ಷೀಣವಾಗುತ್ತಿರುವದನ್ನರಿಯದೆ ಮೋಸಹೋಗುತ್ತಿದೆ. ಇಂತಹ ಮೋಸಕ್ಕೆ ಅವಕಾಶಕೊಡದೆ ಎಚ್ಚರಿಕೆಯಿಂದಿರಬೇಕು.

ಶ್ಲೋ ॥ ಸತ್ಯಂ ಮಾತಾ, ಪಿತಾ ಜ್ಞಾನಂ, ♦ ಧರ್ಮೋ ಭ್ರಾತಾ, ದಯಾ ಸಖಾ।
ಶಾಂತಿಃ ಪತ್ನೀ, ಕ್ಷಮಾ ಪುತ್ರಃ ♦ ಷಡೇತೇ ಮಮಬಾಂಧವಾಃ ॥

ಆರ್ಯ ॥ ಸತ್ಯವೆ ತಾಯಿಯು, ಜ್ಞಾನವೆ ತಂದೆಯು ♦ ಧರ್ಮವೆ ಸೋದರ, ದಯೆ ಗೆಳೆಯಂ ।
ನಿತ್ಯಶಾಂತಿ ಸತಿ, ಕ್ಷಮೆಯುಂ ಪುತ್ರನು ♦ ಆರ್ವರು ಬಂಧುಗಳೆನಗಿಹರು ॥

ಎನ್ನುವ ಪಾಂಡವ ಗೀತಾವಾಕ್ಯರೀತಿಯಾಗಿ, ಸತ್ಯವೇ ತಾಯಿ, ಜ್ಞಾನವೇ ತಂದೆ, ಧರ್ಮವೇ ಸಹೋದರರು, ದಯೆಯೇ ಪ್ರಿಯ ಸ್ನೇಹಿತ, ಶಾಂತಿಯೇ ಪತ್ನಿ ಮತ್ತು ಕ್ಷಮಾಗುಣವೇ ಮಗ, ಈ ತೆರನಾದ ಆರು ಗುಣಗಳೂ ನನಗೆ ಆರ್ವರು ನಂಟರು. ಇವರಲ್ಲದೆ ಹಿತವನ್ನು ಕೋರುವ ನಂಟರು ಮತ್ತಾರಾದರೂ ಇದ್ದಾರೆಯೆ? ತನಗೆ ತಾನೇ ಬಂಧ ವಲ್ಲದೆ ತನ್ನ ಶರೀರಕ್ಕಾಗಿ ಬಂದಂಥವರೆಲ್ಲ ಬಂಧುಗಳಾಗಲಾರರು ಎಂಬುದೇ ಇದರ ಅಭಿಪ್ರಾಯ. ಇನ್ನುಮೇಲೆ ಮಕ್ಕಳಲ್ಲಿರುವ ಪ್ರೀತಿಯನ್ನು ಕುರಿತು ಹೇಳುತ್ತದೆ.



# ಪುತ್ರರಲ್ಲಿ ಮೋಹ.

ಶ್ರುತಿ ॥ " ಪುತ್ರೇಣ ಲೋಕಾ೯ ಜಯತಿ. "
" ಅಪುತ್ರಸ್ಯ ಗತಿ ರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ."
" ಪುನ್ನಾಮ್ನೋ ನರಕಾ ತ್ತ್ರಾಯತ ಇತಿ ಪುತ್ರಃ. "

ಶ್ಲೋ ॥ " ಪುನ್ನಾಮ್ನೋ ನರಕಾ ದ್ಯಸ್ಮಾತ್ ♦ ಪಿತರಂ ತ್ರಾಯತೇ ಸ್ವಯಂ ।
ತಸ್ಮಾ ತ್ಪುತ್ರ ಇತಿ ಪ್ರೋಕ್ತಃ ♦ ಸ್ವಯಮೇವ ಸ್ವಯಂಭುವಾ ॥ "

" ಪುತ್ರನಿರುವವನು ಸಮಸ್ತ ಲೋಕಗಳನ್ನೂ ಜಯಿಸುವನು. ಪಿತೃತರ್ಪಣಾದಿಗಳು ಪುತ್ರನಿಂದಾಗಬೇಕಲ್ಲದೆ ಮತ್ತಾರಿಂದಲೂ ಅಲ್ಲ. ಪಿತೃಋಣವು ಆ ಪುತ್ರನಿಂದ ತೀರಿದಲ್ಲದೆ ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗಲಾರದು; ಅಂದರೆ ಯೋಗ್ಯನಾದ ಪುತ್ರನಿಂದ ಶ್ರೇಷ್ಠವಾದ ಲೋಕಗಳನ್ನು ಪಡೆಯಬಹುದು. ಪುತ್ರನಿಲ್ಲದವನಿಗೆ ಸ್ವರ್ಗವೂ ಇಲ್ಲ ಮತ್ತು ಮುಂದಿನಗತಿ ಹೇಳಬೇಕಾದುದೇ ಇಲ್ಲ. " ಪುತ್ " ಎಂಬ ಹೆಸರುಳ್ಳ ನರಕವುಂಟಾಗದಂತೆ ಪಿತೃಗಳನ್ನು ಕಾಪಾಡುವವನೇ ಪುತ್ರನು. ಹೀಗೆಂದು ಸಾಕ್ಷಾತ್ ಬ್ರಹ್ಮನೇ ಹೇಳಿರುತ್ತಾನೆ. ಈ ಮೇಲೆ ಹೇಳಿದ ಶ್ರುತಿವಾಕ್ಯರೀತ್ಯಾ ಪುತ್ರಶಬ್ದದ ಅರ್ಥವನ್ನು ತಿಳಿಯದೆ, ಮಕ್ಕಳಾದ ಮಾತ್ರಕ್ಕೇ ಮೋಕ್ಷವನ್ನು ಪಡೆಯಬಹುದೆಂದೂಹಿಸಿ ತಾವು ಮಕ್ಕಳ ವಿಷಯದಲ್ಲಿ ಭ್ರಾಂತಿಪಡುವುದಲ್ಲದೆ, ಇತರರನ್ನೂ ಈ ವಿಧವಾದ ಭ್ರಾಂತಿಗೆ ಗುರಿ ಮಾಡುತ್ತಾರೆ. ಇದು ಅಜ್ಞಾನದ ಫಲ. ಪುತ್ರರಲ್ಲಿ ಹೆಚ್ಚಾದ ಮೋಹವನ್ನಿಡುವುದು ಅಧಿಕವಾದ ದುಃಖವನ್ನು ಹೊಂದುವುದಕ್ಕಾಗಿಯೇ ಹೊರತು ಬೇರೆಯಲ್ಲ. ಇದಕ್ಕೆ ಪ್ರಮಾಣವು ಈ ಕೆಳಗೆ ವಿವರಿಸಿದೆ.

ಶ್ಲೋ ॥ " ಅಲಭ್ಯಮಾನ ಸ್ತನಯಃ ♦ ಪಿತರಂ ಕ್ಲೇಶಯೇ ಚ್ಚಿರಂ ।
ಲಬ್ಧೋ ಹಿ ಗರ್ಭಪಾತೇನ ♦ ಪ್ರಸವೇನ ಚ ಬಾಧತೇ ॥ "

" ಜಾತಸ್ಯ ಗ್ರಹರೋಗಾದಿ ♦ ಕುಮಾರಸ್ಯ ಚ ಧೂರ್ತತಾ ।
ಉಪನೀತೇಽಪ್ಯವಿದ್ಯತ್ವಂ ♦ ಅನುದ್ವಾಹೇ ಚ ಪಂಡಿತೇ ॥ "

" ಯೂನ ಶ್ಚ ಪರದಾರಾದಿ ♦ ದಾರಿದ್ರ್ಯಂಚ ಕುಟುಂಬಿನಃ ।
ಪುತ್ರದುಃಖಸ್ಯ ನಾಸ್ತ್ಯಂತೋ ♦ ಧನೀ ಚೇತ್ ಮ್ರಿಯತೇ ತದಾ ॥ "

ಎಂಬುವ ಯಾಜ್ಞವಲ್ಕ್ಯೋಪನಿಷತ್ತಿನಲ್ಲಿ ಹೇಳಿರುವ ವಾಕ್ಯಗಳಂತೆ, ಮಕ್ಕಳು ಹುಟ್ಟದಿದ್ದಾಗ 'ಮಕ್ಕಳಾಗಲಿಲ್ಲವೇ' ಎಂಬುವ ಚಿಂತೆಯೂ, ಗರ್ಭದಲ್ಲಿ ಪಿಂಡರೂಪವಾಗಿ ನೆಲೆಸಿದ್ದಾಗ 'ಗರ್ಭಪಾತವಾಗುತ್ತದೆ' ಎಂಬ ಚಿಂತೆಯೂ, ಪ್ರಸವವೇದನೆಯನ್ನುಂಟುಮಾಡುವುದೆಂಬ ಚಿಂತೆಯೂ; ಅನಂತರ ಹುಟ್ಟಿದ ಮಗುವಿಗೆ ಗ್ರಹ ಮತ್ತು ರೋಗಾದಿಗಳಿಂದುಂಟಾಗ ಬಹುದಾದ ದುಃಖವೂ, ಅಥವಾ ಸತ್ಪುತ್ರನಾಗದೆ ಧೂರ್ತನಾಗುವುದಾದರೆ ಅದರ ವೆಥೆಯೂ, ಅನಂತರ, ಉಪನಯನವಾದರೂ ವಿದ್ಯಾವಂತನಾಗ ಲಿಲ್ಲವೆಂಬ ಚಿಂತೆಯೂ, ಪಂಡಿತನಾದಮೇಲೆ ಮದುವೆಯಾಗಲಿಲ್ಲವೆಂಬ ಮನೋವ್ಯಥೆಯೂ ಒಂದಾದಮೇಲೊಂದು ಉಂಟಾಗುತ್ತದೆ. ಇದಾದ ಮೇಲೆ, ಯುವಕನಾದರೆ ಪರಸ್ತ್ರೀಗಾಮಿಯಾಗುವನೆಂಬ ಭಯವೂ, ಕುಟುಂಬಿಯಾದರೆ ದಾರಿದ್ರ್ಯವನ್ನನುಭವಿಸುವನೆಂಬ ಯೋಚನೆಯೂ, ಧನಿಕನಾದರೆ ಮರಣವನ್ನು ಹೊಂದುವನೆಂಬ ವೆಥೆಯೂ ಉಂಟಾಗುವು ವಾದುದರಿಂದ ಪುತ್ರನಿಂದುಂಟಾಗಬಹುದಾದ ದುಃಖಕ್ಕೆ ಕೊನೆಯೇ ಇಲ್ಲ. ಇಂತಹ ದುಃಖಹೇತುವಾದ ಪುತ್ರನಿಗಾಗಿ ಲೋಕದಲ್ಲಿ ಜನಗಳು ಹಗಲಿರುಳೂ ಅಂಗಲಾಚುವರು. ಅವರಿಗೆ ಇದೆಂತಹ ಮೌಢ್ಯ. ಇದೆಲ್ಲಾ ತಿಳಿಯ ದಂತೆ ಮಕ್ಕಳನ್ನು ಪಡೆಯುವುದಕ್ಕಾಗಿ ಜನಗಳು, ಪುಣ್ಯಕ್ಷೇತ್ರಗಮನ ಗಳು, ಪುಣ್ಯತೀರ್ಥಸ್ನಾನಗಳು, ದೇವಾಲಯಾದಿ ದರ್ಶನಗಳು, ದಾನ ಧರ್ಮಾಚರಣೆಗಳು, ವ್ರತೋಪವಾಸಾದಿಗಳು, ಪರ್ವತಾರೋಹಣಾದಿಗಳು, ವಾಪೀಕೂಪತಟಾಕಾದಿಗಳ ನಿರ್ಮಾಣಗಳು, ದೇವಾಲಯಗಳಲ್ಲಿಯೂ, ಶ್ರೀಶೈಲ, ತಿರುಪತಿ ಮುಂತಾದ ಯಾತ್ರಾಸ್ಥಳಗಳಲ್ಲಿಯೂ ಕೇಶಖಂಡನ, ಕರ್ಣವೇಧೆ, ದೀಪೋತ್ಸವ ಮೊದಲಾದುವುಗಳನ್ನು ಮಾಡುವೆವೆಂಬ ಹರಕೆಗಳೂ, ಇವೇ ಮೊದಲಾದ ಅನೇಕ ಕಾರ್ಯಗಳನ್ನು ಮಾಡುವರು. ಇಷ್ಟು ಧರ್ಮಕಾರ್ಯಗಳನ್ನು ಮಾಡಿ, ಮೇಲೆ ವಿವರಿಸಿದ ಪುತ್ರನಿಂ ದುಂಟಾಗಬಹುದಾದ ದುಃಖಪರಂಪರೆಗಳನ್ನು ಕೊಂಡುಕೊಳ್ಳುವ ಜನಗಳ ತಿಳಿಗೇಡಿತನವನ್ನು ವರ್ಣಿಸಬೇಕಾದುದಿಲ್ಲ. ಇಷ್ಟಾದರೂ ಹುಟ್ಟಿದ

ಮಗನು ಒಳ್ಳೆಯವನಾದರಂತೂ ಸ್ವಲ್ಪ ಮನಸ್ಸಿಗೆ ಸಂತೋಷ; ದುಷ್ಪುತ್ರನಾದರೆ ತಂದೆತಾಯಿಗಳ ಮನಸ್ಸಿಗೆ ಸಂತಾಪವನ್ನುಂಟುಮಾಡುವುದು ಮಾತ್ರವಲ್ಲದೆ, ತಾನು ಹುಟ್ಟಿದ ಕುಲಕ್ಕೇ ಬೆಂಕಿಯಿಡುತ್ತಾನೆ. ಇದಕ್ಕೆ ಪ್ರಮಾಣವೇನೆಂದರೆ:—

ಶ್ಲೋ ॥ ಕೋಟರಾಂತರ್ಭವೋ ವಹ್ನಿಃ ♦ ತರುಮೇಕಂ ದಹಿಷ್ಯತಿ ।
ಕುಪುತ್ರಸ್ತು ಕುಲೇ ಜಾತಃ ♦ ಸ್ವಕುಲಂ ನಾಶಯೇತ್ಪರಂ ॥

ಆರ್ಯ ॥ ಮರದಪೊಟರೆಯಲ್ಲುದಿಸಿದ ಬೆಂಕಿಯು ♦ ಗಿಡವೊಂದನ್ನೇ ದಹಿಸುವುದು ।
ದುರುಳಮಗನು ತಾನುದಿಸಿದ ವಂಶದ ♦ ಹಿಂದುಮುಂದೆಲ್ಲವ ನುರಿಸುವನು॥

ಅಂದರೆ ಒಂದು ಗಿಡದ ಪೊಟರೆಯಲ್ಲಿ ಹುಟ್ಟಿದ ಬೆಂಕಿಯು ಆ ಗಿಡವನ್ನು ಮಾತ್ರ ಸುಡುವುದು. ಆದರೆ ಒಂದು ವಂಶದಲ್ಲಿ ಹುಟ್ಟಿದ ದುಷ್ಪುತ್ರನು, ಆ ವಂಶದಲ್ಲಿ ಹಿಂದೆ ಹುಟ್ಟಿದವರನ್ನೂ ಮುಂದೆ ಹುಟ್ಟುವವರನ್ನೂ ದಹಿಸುವನು, ಅಂದರೆ ಆ ವಂಶಕ್ಕೇ ಕೆಟ್ಟ ಹೆಸರನ್ನು ತರುವನು. ಹೀಗಿರಲು "ಕೆಟ್ಟವರಾಗಲಿ ಒಳ್ಳೆಯವರಾಗಲಿ ಮಕ್ಕಳಾದರೆ ಸಾಕು" ಎನ್ನುವ ಜನಗಳಿಗೆ ದುರದೃಷ್ಟವಶಾತ್ ಮಕ್ಕಳು ದುರುಳರಾದಲ್ಲಿ ಅವರಿಗೆ ಅಪರಿಮಿತದುಃಖವನ್ನುಂಟುಮಾಡುವುದಲ್ಲದೆ ಆ ವಂಶಕ್ಕೇ ಕೆಟ್ಟ ಹೆಸರನ್ನು ತರುವನಲ್ಲಾ! ಇದೆಂತಹ ಅವರ ತಿಳಿಗೇಡಿತನ.

"ಸಂತತಿ ಶ್ಶುದ್ಧವಂಶ್ಯಾ ತು ಪರತ್ರೇಹ ಚ ಶರ್ಮಣೇ" ಎಂಬಂತೆ ಯೋಗ್ಯನಾದ ಮಗನು ಹುಟ್ಟಿದರೆ ಅವನಿಂದ ಇಹಪರಲೋಕಗಳ ಸೌಖ್ಯವನ್ನು ಹೊಂದಬಹುದು. ಇದೂ ಅಲ್ಲದೆ,

"ಏಕೋಽಪಿ ಗುಣವಾನ್ ಪುತ್ರಃ ♦ ನಿರ್ಗುಣೈಃ ಕಿಂ ಶತೇನ ತೈಃ ।
ಏಕಶ್ಚಂದ್ರೋ ಜಗಚ್ಚಕ್ಷುಃ ♦ ನಕ್ಷತ್ರೈಃ ಕಿಂ ಪ್ರಯೋಜನಂ ॥"

ಗುಣರಹಿತರಾದ ನೂರು ಜನ ಮಕ್ಕಳನ್ನು ಪಡೆಯುವುದಕ್ಕಿಂತಲೂ ಗುಣವಂತನಾದ ಒಬ್ಬ ಮಗನು ಸಾಕು. ಹೇಗೆಂದರೆ, ಅಂತರಿಕ್ಷದಲ್ಲಿ ಬೆಳಗುತ್ತಿರುವ ಅಸಂಖ್ಯಾತವಾದ ನಕ್ಷತ್ರಗಳಿಗಿಂತಲೂ ಪ್ರಕಾಶವಂತನಾದ ಒಬ್ಬ ಚಂದ್ರನು ಮೇಲಲ್ಲವೆ?

ಒಟ್ಟಿನಲ್ಲಿ ಪುತ್ರನನ್ನು ಪಡೆಯುವುದೇ ದುಃಖಕರ. ಶಿಶುವಾಗಿರುವಾಗ ಅದನ್ನು ಯಾವ ಬಾಧೆಗಳೂ ಉಂಟಾಗದಂತೆ ಬೆಳಸುವುದೊಂದು ಕಷ್ಟ; ಬಾಲಾರಿಷ್ಟಾದಿ ದೋಷಗಳೂ ರೋಗರುಜಿನಾದಿಗಳೂ ಇವುಗಳ ಪ್ರಾಪ್ತಿಯಾದರೆ ಅವುಗಳ ನಿವಾರಣೆಗಾಗಿ ಒಂದು ಕಷ್ಟ. ಬಾಲ್ಯದಲ್ಲಿ ಅವರಿಗೆ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿ ವಿದ್ಯಾವಂತರನ್ನಾಗಿ ಮಾಡಿಸುವುದು ಮತ್ತಷ್ಟು ಕಷ್ಟ. ಅನಂತರ ಉಪನಯನ ಮತ್ತು ವಿವಾಹಕ್ಕಾಗಿ ತಂದೆ ತಾಯಿಗಳು ಅನುಭವಿಸಬೇಕಾದುದು ಇನ್ನೊಂದು ಕಷ್ಟ. ಮುಖ್ಯವಾಗಿ ರಿಕ್ತದೆಸೆ ಇದ್ದದ್ದೇ ಆದರೆ, ಆರ್ಥಿಕ ಕಷ್ಟ ಹೇಳತೀರದು. ಮಗನು ದೊಡ್ಡವನಾಗಿ ವಿದ್ಯಾಬುದ್ಧಿಗಳು ಚನ್ನಾಗಿ ಉಂಟಾಗಿ ಹಣವನ್ನು ಸಂಪಾದಿಸುವ ಸ್ಥಿತಿಗೆ ಬಂದಮೇಲೆ ವೃದ್ಧರಾದ ತಂದೆತಾಯಿಗಳನ್ನು, ತನ್ನ ಅಭಿವೃದ್ಧಿಗಾಗಿ ಅವರು ಎಷ್ಟು ಕಷ್ಟಪಟ್ಟಿರುವರು ಎಂಬುದನ್ನು ಮರೆತು ಆಗತಾನೇ ಬಂದ ತನ್ನ ಹೆಂಡತಿಯಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿ, ಸರಿಯಾದ ಗೌರವದಿಂದ ಪೋಷಿಸಲಿಲ್ಲವಲ್ಲಾ ಎಂದು ದುಃಖಪಡುವರು. ಆ ಮಗನಾದರೋ ಸ್ತ್ರೀಲೋಲನಾಗಿಯೂ, ದುಷ್ಟನಾಗಿಯೂ, ಚೋರನಾಗಿಯೂ ಮತ್ತು ಇನ್ನೂ ಅನೇಕ ದುರ್ಮಾರ್ಗಗಳಲ್ಲಿ ನಡೆಯುವವನಾಗಿಯೂ ಆದಲ್ಲಿ, ತಂದೆತಾಯಿಗಳು ಭೂಲೋಕದಲ್ಲಿ ಅನುಭವಿಸುವ ಮನೋದುಃಖವೆಂಬ ನರಕಯಾತನೆಗೆ ಮಿತಿಯಿಲ್ಲದಂತಾಗುತ್ತದೆ. ಇದೇ ಮಕ್ಕಳಿಂದ ತಂದೆತಾಯಿಗಳಿಗೆ ಉಂಟಾಗುವ ಸುಖ. ಇಂತಹ ದೃಷ್ಟಾಂತಗಳನ್ನು ಪ್ರತಿನಿತ್ಯವೂ ಕಣ್ಣೆದುರಿಗೆ ನೋಡುತ್ತಿದ್ದರೂ, ತಾವು ಅಂತಹದನ್ನು ಅನುಭವಿಸಬೇಕಾದೀತು ಎಂಬ ವಿಷಯವನ್ನು ತಿಳಿದಿದ್ದರೂ ಮಕ್ಕಳನ್ನು ಪಡೆಯಬೇಕೆಂಬ ಭ್ರಾಂತಿ ಮಾತ್ರ ಜನಗಳಿಗೆ ಕಡಮೆಯಾಗದು.

ಚ ॥ ತನಯುರು ಪುಟ್ಟಲಿಲ್ಲವೆನೆ ♦ ಭೂರಿದಿನಂಗಳು ಚಿಂತೆ, ನಂದನರ್ ।
ಜನಿಸಿದೊ ಡಾಯುವುಂ ಬಲವು ♦ ಬುದ್ಧಿಯು, ವಿದ್ಯೆಯು ಕೂಡಲಿಲ್ಲವೆಂ ॥
ಬನುಪಮು ಚಿಂತೆ, ಕೂಡಿದರು ♦ ತನ್ನೊಳು ಸೇರದ ಚಿಂತೆ, ಪೆತ್ತವಂ ।
ಗನವರತಂ ಮನಂ ಸುಡುವ ♦ ಪುತ್ರರು ಶತ್ರುಗಳಲ್ಲದಾಪ್ತರೇ ? ॥ (ತೆಲುಗು)

ಹೀಗಿರಲು, ಪುತ್ರರು ಮಾಡುವ ಶ್ರಾದ್ಧಾದಿ ಕರ್ಮಗಳು, ದಾನ ಧರ್ಮಗಳು, ಅವರ ತಂದೆತಾಯಿಗಳಿಗೆ ಸೇರುವುವೆಂಬದಾಗಿ ಕರ್ಮಕಾಂಡ

ದಲ್ಲಿ ಹೇಳಲ್ಪಟ್ಟಿದೆ. ಆದುದರಿಂದಲೇ "ಅಪುತ್ರಸ್ಯ ಗತಿರ್ನಾಸ್ತಿ" ಎಂಬಂತೆ, ಪುತ್ರರಿಲ್ಲದವರಿಗೆ ಉತ್ತಮ ಗತಿಯೇ ಇಲ್ಲವು ಎಂದಿರುವುದರಿಂದ, ವಂಶಕ್ಕೆ ಮಗನು ಇದ್ದೇ ಇರಬೇಕು. ಆತನು ಆಚರಿಸುವ ಶ್ರಾದ್ಧಾದಿ ಪುಣ್ಯಕರ್ಮಗಳು ಪಿತೃಋಣವನ್ನು ತೀರಿಸಿ ತಾನು ಉತ್ತಮ ಲೋಕಗಳನ್ನು ಹೊಂದುವುದಕ್ಕಾಗಿಯೇ ಹೊರತು ಅದು ತಂದೆತಾಯಿಗಳಿಗೋಸ್ಕರವಲ್ಲವು.

ಒಬ್ಬ ಜೀವಿಯು, ಈ ಸ್ಥೂಲಶರೀರವನ್ನು ಬಿಟ್ಟ ತಕ್ಷಣವೇ ಆ ಜೀವಿಯು ಅಣುರೂಪದಿಂದ ಹೊರಟು, ಚಂದ್ರಲೋಕಕ್ಕೆ ಹೋಗಿ ಸೇರಿ ಅಲ್ಲಿಂದ ಮೇಘಗಳೊಡಗೂಡಿ ಜಲಸ್ವರೂಪವಾಗಿ ವರ್ಷಿಸುವುದರಿಂದಲೇ ಭೂಮಿಯ ಮೇಲಿರುವ ಸಸ್ಯಾದಿಗಳು ವರ್ಧಿಸಿ, ಧಾನ್ಯಾದಿಗಳಲ್ಲಿ ಸೇರಿ, ಆ ಧಾನ್ಯವು ಅನ್ನರೂಪವಾಗಿಯೂ, ಆ ಅನ್ನವು ರಸರೂಪವಾಗಿಯೂ, ಆ ರಸವು ರಕ್ತರೂಪವಾಗಿಯೂ, ಆ ರಕ್ತವು ಮಾಂಸ, ಮೇದಸ್ಸು, ಎಲುಬು ಮೊದಲಾದವುಗಳ ರೂಪವಾಗಿಯೂ ಪರಿಣಮಿಸಿ, ಅದರಿಂದ ಮುಂದೆ ವೀರ್ಯವಾಗಿಯೂ, ಆ ವೀರ್ಯವು ಶೋಣಿತದೊಡಗೂಡಿ ಅಂದರೆ ಶುಕ್ಲಶೋಣಿತ ಸಂಯೋಗದಿಂದ, ಸ್ತ್ರೀಗರ್ಭದಲ್ಲಿ ಶಿಶುರೂಪವನ್ನು ಹೊಂದಿ ಬೆಳೆಯುತ್ತದೆಯೆಂದೂ ಹೇಳುವರು. ಇದಕ್ಕೆ ಶ್ರುತಿಪ್ರಮಾಣವುಂಟು :—

ಶ್ರುತಿ ॥ ಆಕಾಶಾತ್ ವಾಯುಃ । ವಾಯೋರಗ್ನಿಃ ।
ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾಃ
ಓಷಧಯಃ । ಓಷಧೀಭ್ಯೋऽನ್ನಂ । ಅನ್ನಾತ್ಪುರು
ಷಃ । ಸ ಏಷ ಪುರುಷೋ ಅನ್ನರಸಮಯಃ ॥

ಇದೂ ಅಲ್ಲದೆ ಅಧ್ಯಾತ್ಮ ರಾಮಾಯಣ, ಕಿಷ್ಕಿಂಧಾಕಾಂಡ, 8ನೇ ಸರ್ಗ, 13ನೇ ಶ್ಲೋಕದಿಂದ 40 ನೇ ಶ್ಲೋಕದವರಿವಿಗೆ, ಪಿಂಡೋತ್ಪತ್ತಿ ಮತ್ತು ಶಿಶುಜನ್ಮ ಮೊದಲಾದುವುಗಳನ್ನು ಕುರಿತು ಹೀಗೆ ಹೇಳಿದೆ.

ಶ್ಲೋ ॥ ಶೃಣು ವತ್ಸ ! ವಚೋ ಮೇऽದ್ಯ ♦ ಕೃತ್ವಾ ಕುರು ಯಥೇಪ್ಸಿತಂ ।
ದೇಹಮೂಲ ಮಿದಂ ದುಃಖಂ ♦ ದೇಹಃ ಕರ್ಮ ಸಮುದ್ಭವಃ ॥
ಕರ್ಮ ಪ್ರವರ್ತತೇ ದೇಹೇ ♦ ಬುಧ್ಯಾ ಚ ಪುರುಷಸ್ಯ ಹಿ ।
ಅಹಂಕಾರ ಸ್ತ್ವನಾದಿ ಸ್ಸ್ಯಾ ♦ ದವಿದ್ಯಾಸಂಭವೋ ಜಡಃ ॥

ಚಿಚ್ಛಾಯಯಾ ಸಮಾಯುಕ್ತ ♦ ಸ್ತಪ್ತಾಯಃಪಿಂಡವ ತ್ಸದಾ ।
ತೇನ ದೇಹಸ್ಯ ತಾದಾತ್ಮ್ಯಾ ♦ ದ್ದೇಹ ಶ್ಚೇತನವಾ ನ್ಭವೇತ್ ॥

ದೇಹೋಽಹ ಮಿತಿ ಬುದ್ಧಿಸ್ಸ್ಯಾ ♦ ದಾತ್ಮನೋಽಹಂಕೃತೇ ರ್ಬಲಾತ್ ।
ತನ್ಮೂಲ ಏಷ ಸಂಸಾರಃ ♦ ಸುಖದುಃಖಾದಿಸಾಧಕಃ ॥

ಆತ್ಮನೋ ನಿರ್ವಿಕಾರಸ್ಯ ♦ ಮಿಥ್ಯಾ ತಾದಾತ್ಮ್ಯತ ಸ್ಸದಾ ।
ದೇಹೋಽಹಂ ಕರ್ಮಕರ್ತಾಽಹಂ ♦ ಇತಿ ಸಂಕಲ್ಪ್ಯ ಸರ್ವದಾ ॥

ಜೀವಃ ಕರೋತಿ ಕರ್ಮಾಣಿ ♦ ತತ್ಫಲೈ ರ್ಬಧ್ಯತೇಽವಶಃ ।
ಊರ್ಧ್ವಾಧೋ ಭ್ರಮತೇ ನಿತ್ಯಂ ♦ ಪಾಪಪುಣ್ಯಾತ್ಮಕ ಸ್ಸ್ವಯಂ ॥

ಕೃತಂ ಮಯಾಧಿಕಂ ಪುಣ್ಯಂ, ♦ ಯಜ್ಞದಾನಾದಿನಿಶ್ಚಿತಂ ।
ಸ್ವರ್ಗಂ ಗತ್ವಾ ಸುಖಂ ಭೋಕ್ಷ್ಯೇ ♦ ಇತಿ ಸಂಕಲ್ಪವಾ ಭವೇತ್ ॥

ತಥೈ ವಾಭ್ಯಾಸತ ಸ್ತತ್ರ ♦ ಚಿರಂ ಭುಕ್ತ್ವಾ ಸುಖಂ ಮಹತ್ ।
ಕ್ಷೀಣಪುಣ್ಯಃ ಪತತ್ಯರ್ವಾಕ್ ♦ ಅನಿಚ್ಛ ಕರ್ಮಚೋದಿತಃ ॥

ಪತಿತ್ವಾ ಮಂಡಲೇ ಚೇಂದೋಃ ♦ ತತೋ ನೀಹಾರಸಂಯುತಃ ।
ಭೂಮೌ ಪತಿತ್ವಾ ವ್ರೀಹ್ಯಾದೌ ♦ ತತ್ರ ಸ್ಥಿತ್ವಾ ಚಿರಂ ಪುನಃ ॥

ಭೂತ್ವಾ ಚತುರ್ವಿಧಂ ಭೋಜ್ಯಂ, ♦ ಪುರುಷೈ ರ್ಭುಜ್ಯತೇ ತತಃ ।
ರೇತೋ ಭೂತ್ವಾ ಪುನ ಸ್ತೇನ, ♦ ಋತೌ ಸ್ತ್ರೀಯೋನಿಸಿಂಚಿತಃ ॥

ಯೋನಿರಕ್ತೇನ ಸಮ್ಮಿಶ್ರಂ, ♦ ಜರಾಯುಪರಿವೇಷ್ಟಿತಂ ।
ದಿನೇನೈಕೇನ ಕಲಲಂ ಭೂತ್ವಾ ♦ ರೂಢತ್ವ ಮಾಪ್ನುಯಾತ್ ॥

ತತ್ಪುನಃ ಪಂಚರಾತ್ರೇಣ, ♦ ಬುದ್ಬುದಾಕಾರತಾ ಮಿಯಾತ್ ।
ಸಪ್ತರಾತ್ರೇಣ ತದಪಿ ♦ ಮಾಂಸ ಪೇಶಿತ್ವ ಮಾಪ್ನುಯಾತ್ ॥

ಗ್ರೀವಾ ಶಿರಶ್ಚ ಸ್ಕಂಧಶ್ಚ ♦ ಪೃಷ್ಠವಂಶ ಸ್ತಥೋದರಂ ।
ಪಂಚಧಾಂಗಾನಿ ಚೈಕೈಕಂ, ♦ ಜಾಯಂತೇ ಮಾಸತಃ ಕ್ರಮಾತ್ ॥

ಪಾಣಿಪಾದೌ ತಥಾಪಾರ್ಶ್ವೌ, ♦ ಕಟಿಜಾನೂ ತಥೈವ ಚ ।
ಮಾಸದ್ವಯಾ ತ್ಪ್ರಜಾಯಂತೇ, ♦ ಕ್ರಮೇಣೈವ ನ ಚಾನ್ಯಥಾ ॥

ತ್ರಿಭಿ ರ್ಮಾಸೈಃ ಪ್ರಜಾಯಂತೇ ♦ ಅಂಗಾನಾಂ ಸಂಧಯಃ ಕ್ರಮಾತ್ ।
ಸರ್ವಾಂಗುಲ್ಯಃ ಪ್ರಜಾಯಂತೇ ♦ ಕ್ರಮಾ ನ್ಮಾಸಚತುಷ್ಟಯೇ ॥

ನಾಸಾಕರ್ಣೌ ಚ ನೇತ್ರೇ ಚ ♦ ಜಾಯಂತೇ ಪಂಚಮಾಸತಃ ।
ದಂತಪಂಕ್ತಿ ರ್ನಖಾ ಗುಹ್ಯಂ ♦ ಪಂಚಮೇ ಜಾಯತೇ ತಥಾ ॥

ಅರ್ವಾ ಕ್ಷಣ್ಮಾಸತಃ ಛಿದ್ರಂ ♦ ಕರ್ಣಯೋ ರ್ಭವತಿ ಸ್ಫುಟಂ ।
ಪಾಯು ರ್ಮೇಢ್ರಂ ಹ್ಯುಪಸ್ಥಶ್ಚ ♦ ನಾಭಿ ಶ್ಚಾಪಿ ಭವೇ ನ್ನೃಣಾಂ ॥

ಸಪ್ತಮೇ ಮಾಸಿ ರೋಮಾಣಿ ♦ ಶಿರಃ ಕೇಶಾ ಸ್ತಥೈವ ಚ ।
ವಿಭಕ್ತಾವಯವತ್ವಂ ಚ ♦ ಸರ್ವಂ ಸಂಪಾದ್ಯತೇಽಷ್ಟಮೇ ॥

ಜಠರೇ ವರ್ಧತೇ ಗರ್ಭಃ ♦ ಸ್ತ್ರಿಯಾ ಏವಂ ವಿಹಂಗಮ ।
ಸಪ್ತಮೇ ಮಾಸಿ ಚೈತನ್ಯಂ ♦ ಜೀವಃ ಪ್ರಾಪ್ನೋತಿ ಸರ್ವಶಃ ॥

ನಾಭಿಸೂತ್ರಾಲ್ಪರಂಧ್ರೇಣ ♦ ಮಾತೃಭುಕ್ತಾನ್ನಸಾರತಃ ।
ವರ್ಧತೇ ಗರ್ಭಗಃ ಪಿಂಡೋ ♦ ನ ಮ್ರಿಯೇತ ಸ್ವಕರ್ಮತಃ ॥

ಸ್ಮೃತ್ವಾ ಸರ್ವಾಣಿ ಜನ್ಮಾನಿ, ♦ ಪೂರ್ವಕರ್ಮಾಣಿ ಸರ್ವಶಃ ।
ಜಠರಾನಲತಪ್ತೋಽಯಂ ♦ ಇದಂ ವಚನ ಮಬ್ರವೀತ್ ॥

“ ನಾನಾಯೋನಿಸಹಸ್ರೇಷು ♦ ಜಾಯಮಾನೋಽನುಭೂತವಾ ।
ಪುತ್ರದಾರಾದಿಸಂಬಂಧಂ ♦ ಕೋಟಿಶಃ ಪಶುಬಾಂಧವಾ ॥

ಕುಟುಂಬಾಭರಣಾಸಕ್ತ್ಯಾ ♦ ನ್ಯಾಯಾನ್ಯಾಯೈ ರ್ಧನಾರ್ಜನಂ ।
ಕೃತಂ ನಾಕರವಂ ವಿಷ್ಣು ♦ ಚಿಂತಾಂ ಸ್ವಪ್ನೇಽಪಿ ದುರ್ಭಗಃ ॥

ಇದಾನೀಂ ತತ್ಫಲಂ ಭುಂಜೇ ♦ ಗರ್ಭದುಃಖಂ ಮಹತ್ತರಂ ।
ಅಶಾಶ್ವತೇ ಶಾಶ್ವತವ ♦ ದ್ದೇಹೇ ತೃಷ್ಣಾಸಮನ್ವಿತಃ ॥

ಅಕಾರ್ಯಾಣ್ಯೇವ ಕೃತವಾ ♦ ನ ಕೃತಂ ಹಿತ ಮಾತ್ಮನಃ ।
ಇತ್ಯೇವಂ ಬಹುಧಾ ದುಃಖಂ ♦ ಅನುಭೂಯ ಸ್ವಕರ್ಮತಃ ॥

ಕದಾ ನಿಷ್ಕ್ರಮಣಂ ಮೇ ಸ್ಯಾ ♦ ದ್ಗರ್ಭಾ ನ್ನಿರಯ ಸನ್ನಿಭಾತ್ ।
ಇತ ಊರ್ಧ್ವಂ ನಿತ್ಯ ಮಹಂ ♦ ವಿಷ್ಣು ಮೇವಾನುಪೂಜಯೇ ॥

ಇತ್ಯಾದಿ ಚಿಂತಯ ಜೀವೋ ♦ ಯೋನಿಯಂತ್ರಪ್ರಪೀಡಿತಃ ।
ಜಾಯಮಾನೋಽತಿದುಃಖೇನ ♦ ನರಕಾ ತ್ಪಾತಕೀ ಯಥಾ ॥

ಚಂದ್ರಮಾ ಎಂಬ ಹೆಸರುಳ್ಳ ಋಷಿಯು ಸಂಪಾತಿಯನ್ನು ಕುರಿತು ಈ ವಿಷಯವನ್ನು ವಿಶದವಾಗಿ ತಿಳಿಯಹೇಳಿರುತ್ತಾನೆ. ಇದರ ರಹಸ್ಯವನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆಯು ಸಮಸ್ತ ಸ್ತ್ರೀಪುರುಷರನ್ನೂ ಹೊಂದಿರುವುದರಿಂದ ಅದರ ವಿಷಯವು ಇಲ್ಲಿ ವಿಸ್ತರಿಸಿದೆ.

"ಎಲೈ ವತ್ಸ! ಸಂಪಾತಿ! ಗಮನವಿಟ್ಟು ಕೇಳು. ಶರೀರವೇ ದುಃಖಕ್ಕೆ ಮೂಲ. ದೇಹವು ಪುಣ್ಯಪಾಪಕರ್ಮಗಳಿಂದ ಹುಟ್ಟಿದುದು. ಮನುಷ್ಯನಿಗೆ ಬುದ್ಧಿಯಿಂದ ಕರ್ಮಗಳು ಬರುತ್ತಲಿವೆ. ಅಹಂಕಾರವು ಅಜ್ಞಾನದಿಂದ ಹುಟ್ಟುವಂಥದು. ಇದು ಜಡ ಮತ್ತು ಅನಾದಿ. ಚಿತ್ತಿನ ನೆರಳಿನಿಂದ ಕೂಡಿ, ಸದಾ ಕೆಂಪಗೆ ಕಾದ ಉಕ್ಕಿನ ಗುಂಡಿನಂತೆ ಅಂದರೆ ಕಾದ ಉಕ್ಕಿನ ಗುಂಡು ಬೆಂಕಿಯಿಂದ ಕೂಡಿರುವುದಲ್ಲದೆ ಅದರಿಂದ ಪ್ರತ್ಯೇಕಿಸುವುದಕ್ಕೆ ಹೇಗೆ ಸಾಧ್ಯವಾಗಲಾರದೋ ಹಾಗೆಯೇ ಆ ಚಿತ್ತಾದ ಆತ್ಮವನ್ನು ಹೊಂದಿದ ಅಹಂಕಾರದಿಂದ ದೇಹವೇ ಆತ್ಮವೆಂದು ಭಾವಿಸುವ ಕಾರಣ ದೇಹವು ಚೇತನವನ್ನು ಹೊಂದುತ್ತದೆ. ಆತ್ಮನಿಗೆ ಅಹಂಕಾರದ ಸಂಬಂಧವಿದ್ದದ್ದೇ ಆದರೆ, ನಾನೇ ದೇಹವೆಂಬ ಬುದ್ಧಿಯುಂಟಾಗುತ್ತದೆ. ಇದರಿಂದಲೇ ಜೀವನಿಗೆ ಸುಖದುಃಖಗಳಿಗೆ ಮೂಲವಾದ ಸಂಸಾರಗಳು ಅಂದರೆ ಬೇರೆಬೇರೆ ಶರೀರಸಂಬಂಧಗಳು ದೊರಕುವುವು. ಜೀವನು ಅನೇಕವಿಧ ಕರ್ಮಗಳನ್ನು ಮಾಡುವನು ಮತ್ತು ಆ ಕರ್ಮಫಲಗಳಿಂದ ಬಂಧಿಸಲ್ಪಡುವನು. ಇದರಿಂದ ಪುಣ್ಯಪಾಪಕರ್ಮಫಲಕ್ಕೆ ತಕ್ಕಂತೆ ಮೇಲು ಕೀಳು ಜನ್ಮಗಳನ್ನು ಪಡೆಯುತ್ತಲೇ ಇರುವನು. ಹೆಚ್ಚಾಗಿ ಪುಣ್ಯಮಾಡಿದ್ದರಿಂದ ಸ್ವರ್ಗಾದಿಲೋಕಗಳನ್ನು ತಾನು ಅನುಭವಿಸುವನೆಂದು ಯೋಚಿಸಿ ಆ ಸುಖವನ್ನು ಕೆಲವುಕಾಲ ಅನುಭವಿಸಿ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬಂತೆ ಪುಣ್ಯಕರ್ಮಫಲ ತೀರಿದ ಮೇಲೆ ಎಂದಿನಂತೆ ಭೂಮಿಯ ಕಡೆ ಕೆಳಮೊಗವಾಗಿ ಬರುತ್ತಾನೆ. ಹೀಗೆ ಬರುವಾಗ ಚಂದ್ರಮಂಡಲದಲ್ಲಿ ಸೇರಿ, ಚಂದ್ರಕಿರಣಗಳಲ್ಲಿರುವ ಹಿಮರೂಪದಿಂದ ಕೂಡಿ ಭೂಮಿಯನ್ನು ಸೇರಿ ಭತ್ತವೇ ಮೊದಲಾದ ಧಾನ್ಯಗಳಲ್ಲಿ ಬಹುಕಾಲ ನೆಲೆಸಿ, ಆ ಧಾನ್ಯಾದಿಗಳಿಂದ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯವೆಂಬ ನಾಲ್ಕುಬಗೆಯ ತಿನ್ನುವ ಪದಾರ್ಥವಾಗಿ ಪರಿಣಮಿಸಿ ಆ ಬಳಿಕ ಅದು ಪುರುಷರಿಂದ ಭುಜಿಸಲ್ಪಡುವುದು. ತರುವಾಯ ಈ ಆಹಾರವೇ ಅವರಲ್ಲಿ ರೇತಸ್ಸಾಗಿದ್ದು, ಅದು, ಋತುಕಾಲದಲ್ಲಿ ಸಂಭೋಗ ಮಾಡಿದಾಗ ಸ್ತ್ರೀಯೋನಿಯಲ್ಲಿ ಪ್ರವೇಶಿಸಿ ಆ ಸ್ತ್ರೀಯ ಗರ್ಭದಗೂಡನ್ನು ಸೇರುತ್ತದೆ. ಈ ರೇತಸ್ಸು ಸ್ತ್ರೀಶೋಣಿತದಿಂದ ಮಿಶ್ರಿತವಾಗಿ ಒಂದು

ಸಣ್ಣ ಮಾಂಸದ ಬುದ್ಬುದವಾಗಿ ನಿಲ್ಲುವುದು. ಇದು ಏಳು ರಾತ್ರಿಗಳೊಳಗಾಗಿ ಒಂದು ಮಾಂಸದ ಸಣ್ಣ ಮುದ್ದೆಯಾಗುವುದು. ಇದು ಹದಿನೈದು ದಿನಗಳೊಳಗಾಗಿ ರಕ್ತದಿಂದ ತುಂಬಿಕೊಳ್ಳುತ್ತದೆ. ಇಪ್ಪತ್ತೈದು ದಿನಗಳಲ್ಲಿ ಇದು ಮುಂದೆ ಆಗುವ ದೇಹಕ್ಕೆ ಮೊಳಕೆಯಾಗಿ ಪರಿಣಮಿಸುತ್ತದೆ. ಒಂದು ತಿಂಗಳಿಗೆ ತಲೆ, ಭುಜ, ಬೆನ್ನೆಲುಬು, ಹೊಟ್ಟೆ ಹೀಗೆ ಒಂದೊಂದಾಗಿ ಅಂಗಗಳು ಉಂಟಾಗುವುವು. ಎರಡು ತಿಂಗಳಿಗೆ ಕೈ, ಕಾಲು, ನಡು, ಮೊಣಕಾಲು ಇವುಗಳು ಉತ್ಪನ್ನವಾಗುವುವು. ಮೂರು ತಿಂಗಳಿಗೆ ಅಂಗಗಳ ಕೀಲುಗಳು ಹುಟ್ಟುವುವು. ನಾಲ್ಕು ತಿಂಗಳಿಗೆ ಕೈಕಾಲುಬೆರಳುಗಳೆಲ್ಲಾ ಸಿದ್ಧವಾಗುವುವು. ಐದನೇ ತಿಂಗಳು ಪೂರೈಸುವುದರೊಳಗಾಗಿ ಕಣ್ಣು, ಕಿವಿ, ಮೂಗು, ಬಾಯಿ, ದಂತಪಂಕ್ತಿಗಳು ಅಂದರೆ ವಸಡುಗಳು, ಉಗುರುಗಳು ಮತ್ತು ಗುಹ್ಯಸ್ಥಾನ ಇವುಗಳುಂಟಾಗುವವು. ಆರನೇ ತಿಂಗಳಲ್ಲಿ ಕರ್ಣರಂಧ್ರ, ನಾಸಾಕುಹರ, ಗುದಸ್ಥಾನ, ಸ್ತ್ರೀಪುರುಷರ ಗುಹ್ಯಸ್ಥಾನಗಳು, ಹೊಕ್ಕಳು ಇವುಗಳು ಸ್ಪಷ್ಟವಾಗಿ ವಿಂಗಡವಾಗುವುವು. ಏಳನೇ ತಿಂಗಳಲ್ಲಿ ದೇಹರೋಮಗಳೂ, ತಲೆಯ ಕೂದಲುಗಳೂ, ಅಂಗಸೌಷ್ಟವಗಳೂ ಆಗುವುವು. ಎಂಟನೇ ತಿಂಗಳಲ್ಲಿ ದೇಹದಲ್ಲಿರಬೇಕಾದ ಸಮಸ್ತ ಅಂಗಗಳೂ ಕ್ರಮವಾಗಿ ಎಲ್ಲವೂ ವಿಂಗಡವಾಗುವುವು. ಹೀಗೆ ಗರ್ಭದಲ್ಲಿ ಬೆಳೆಯುತ್ತಿರುವಾಗ ಏಳನೇ ತಿಂಗಳಲ್ಲಿಯೇ ಈ ದೇಹಕ್ಕೆ ಚೈತನ್ಯವುಂಟಾಗುತ್ತದೆ. ಅಂದರೆ ಜೀವನು ಅದರೊಳಕ್ಕೆ ಪ್ರವೇಶಿಸುತ್ತಾನೆ. ತಾಯಿಯು ತಿನ್ನುವ ಅನ್ನದ ಸಾರದಿಂದ ಹೊಕ್ಕಳಿನ ಸಣ್ಣರಂಧ್ರದ ಮೂಲಕವಾಗಿ ಆಹಾರವನ್ನು ಪಡೆಯುತ್ತಾ, ಬಳೆಯುತ್ತಾ, ದೇಹದಿಂದೊಡಗೂಡಿದ ಆ ಜೀವನು ತಾನು ಮಾಡಿದ ಕರ್ಮದ ಬಲಿಯದಿಂದ ಸಾಯದೇ ಜೀವಿಸಿರುವನು. ಅಲ್ಲಿ ತನ್ನ ಪೂರ್ವಜನ್ಮ ಸ್ಮರಣೆಯನ್ನು ಚನ್ನಾಗಿ ಹೊಂದಿ ತಾನುಮಾಡಿದ ಕರ್ಮಗಳನ್ನು ನೆನೆಸಿಕೊಳ್ಳುತ್ತಾ, ಮಾತೃಗರ್ಭಜಠರಾಗ್ನಿಯಿಂದ ತಪ್ತನಾಗಿ ಈ ಮುಂದೆ ಹೇಳುವ ಮಾತನ್ನು ಹೇಳುವನು "ನಾನು ಇದುವರಿವಿಗೆ ಅನೇಕ ವಿಧವಾದ ಯೋನಿಗಳಲ್ಲಿ ಜನಿಸಿ, ಹೆಂಡತಿ ಮಕ್ಕಳ ಸಂಬಂಧವನ್ನು ಅತಿಶಯವಾಗಿ ಪಡೆದು, ಬಂಧು, ಮಿತ್ರ, ಪಶು, ಇವರ ಸಂಪರ್ಕವನ್ನನುಭವಿಸಿದೆನು. ಈ ವಿಧವಾದ ಕುಟುಂಬ ಪೋಷಣೆ

ಗಾಗಿ ನ್ಯಾಯದಿಂದಲೋ ಅನ್ಯಾಯದಿಂದಲೋ ಹಣವನ್ನು ಸಂಪಾದಿಸಿ ಅದರಲ್ಲಿಯೇ ನಿರತನಾಗಿ ಪುಣ್ಯಪಾಪಕರ್ಮಗಳನ್ನು ಮಾಡುತ್ತಾ ಕನಸಿನಲ್ಲಿಯೂ ಪರಮಾತ್ಮನನ್ನು ನೆನೆಯದೇ ಇದ್ದ ಫಲದಿಂದಲೇ ಈ ಮಾತೃಗರ್ಭದಲ್ಲಿ ದುಃಖವನ್ನನುಭವಿಸುತ್ತಿರುವೆನು. ನಶ್ವರವಾದ ಈ ದೇಹವೇ ನಾನೆಂದು ತಿಳಿದು ಅನೇಕ ಅಕೃತ್ಯಗಳನ್ನು ಮಾಡಿದೆನು. ಆದುದರಿಂದಲೇ ಬಹುದುಃಖವನ್ನನುಭವಿಸುತ್ತಿದ್ದೇನೆ. ಇದು ನರಕಯಾತನೆಗಿಂತಲೂ ಅತಿಶಯವಾದದ್ದು. ಈ ಗರ್ಭವಾಸದಿಂದ ಎಂದಿಗೆ ನನಗೆ ಬಿಡುಗಡೆಯಾದೀತು? ಅನಂತರ ನಾನು ಎಂದು ಪರಮಾತ್ಮಧ್ಯಾನದಲ್ಲಿಯೇ ನಿರತನಾಗಿರುವೆನು?'' ಎಂದು ಜೀವನು ಚಿಂತಿಸುತ್ತಾ, ನರಕದಿಂದ ಬಿಡುಗಡೆಯಾದ ಪಾಪಿಯಂತೆ, ಗರ್ಭದಿಂದ ಹೊರಬಿದ್ದು ಈ ಪ್ರಪಂಚದಲ್ಲಿ ಜನ್ಮವೆತ್ತುವನು.

ಈ ಮೇಲೆ ಹೇಳಿದುದೇ ಜನ್ಮರಹಸ್ಯ ಅಂದರೆ ಜೀವನಿಗೆ ಶರೀರಸಂಬಂಧವುಂಟಾಗುವ ರೀತಿ. ಈ ಜನ್ಮರಹಸ್ಯಗಳೆಲ್ಲವೂ ಮುಂದೆ ವಿವರಿಸುವ ಪಿಂಡೋತ್ಪತ್ತಿ ಪ್ರಕರಣದಲ್ಲಿ ವಿವರವಾಗಿ ತಿಳಿಯಪಡಿಸಿದೆ. ಹೀಗೆ ಜೀವಿಯು ತನ್ನ ಕರ್ಮಾನುಸಾರವಾಗಿ ಗರ್ಭಸ್ಥ ಶಿಶುದೇಹದಲ್ಲಿ ಪ್ರವೇಶಿಸಿ ಈ ಭೂಲೋಕದಲ್ಲಿ ಹುಟ್ಟಲು, ನಮ್ಮ ಪುತ್ರನೆಂಬ ಮೋಹವನ್ನಿಟ್ಟು ಭ್ರಾಂತಿಪಡುತ್ತಿದ್ದೇವೆ. ಹಿಂದೆ ವಿವರಿಸಿದಂತೆ ಈ ಮೋಹದಿಂದ ದುಃಖವೇ ಹೊರತು ಸುಖವಿಲ್ಲ. ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೂ ನಮಗೂ ರಕ್ತಸಂಬಂಧವೇ ಹೊರತು ಕರ್ಮಸಂಬಂಧವಿಲ್ಲವೆಂಬ ಈ ರಹಸ್ಯವನ್ನು ತಿಳಿದು ಪುತ್ರಮೋಹವನ್ನು ಬಿಡುವುದಕ್ಕೆ ಯತ್ನಿಸಬೇಕು.

ಮತ್ತೆ, ಪುಣ್ಯಕರ್ಮಗಳನ್ನು ಮಾಡಿದವನಾದರೋ, ತಾನು ಮಾಡಿದ ಸತ್ಕರ್ಮಫಲಕ್ಕೆ ತಕ್ಕಂತೆ ಸೂರ್ಯಕಿರಣಗಳಮೂಲಕ ಸೂರ್ಯಮಂಡಲವನ್ನು ಸೇರಿ, ಆ ಸ್ಥಳದಿಂದ ಬ್ರಹ್ಮಲೋಕವನ್ನೇರಿ, ಅಲ್ಲಿಂದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವನೆಂದೂ ಹೇಳುವರು. ಹಿಂದೆ ವಿವರಿಸಿದಂತೆ ಒಂದುದೇಹದಲ್ಲಿದ್ದ ಜೀವಾತ್ಮನು ಯಾವಳೋ ಒಬ್ಬಳ ಗರ್ಭದಲ್ಲಿ ಸಿದ್ಧವಾಗಿದ್ದ ಶಿಶುದೇಹದಲ್ಲಿ ಹೋಗಿ ಸೇರಬೇಕೆಂದಿರುವಾಗಲೇ ಅಂದರೆ ಕರ್ಮ

ಗಳಿಗೆ ತಕ್ಕಂತೆ ದೇಹವನ್ನು ಗುರಿಯಿಟ್ಟುಕೊಂಡೇ ಹಿಂದಿನ ದೇಹವನ್ನು ಬಿಡುವನೆಂದೂಹಿಸಬೇಕು. ಜನನಮರಣಗಳ ವಿಷಯದಲ್ಲಿ ವೇದಾಂತ ತತ್ವರಹಸ್ಯವೇನೆಂದರೆ :—

ಶ್ಲೋ ॥ ಜಾತಸ್ಯ ಹಿ ಧ್ರುವೋ ಮೃತ್ಯುಃ ♦ ಧ್ರುವೋ ಜನ್ಮ ಮೃತಸ್ಯ ಚ ।
ಅದ್ಯ ವಾಽಬ್ದಶತಾಂತೇ ವಾ ♦ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥

ಹುಟ್ಟಿದವನಿಗೆ ಸಾವು ಸಿದ್ಧವು. ಸತ್ತವನಿಗೆ ಪುನಃ ಜನನವೂ ಸಿದ್ಧ. ಈಗಲೇ ಆಗಲಿ ಅಥವಾ ನೂರುವರ್ಷಗಳ ಕೊನೆಯಲ್ಲಾಗಲಿ ಪ್ರಾಣಿಗಳಿಗೆ ಮರಣವು ನಿಶ್ಚಯವು. ಇದನ್ನು ತಿಳಿದು ಜನಗಳು ಬಹು ದುಸ್ತರವಾದ ಜನನಮರಣರೂಪವಾದ ಸಂಸಾರಸಾಗರವನ್ನು ದಾಟಲೆಣಿಸಿ, ಸದ್ಗತಿಯನ್ನು ಹೊಂದುವ ಪ್ರಯತ್ನವನ್ನು ಮಾಡಬೇಕು.

ಮಕ್ಕಳಿಲ್ಲದೇ ಸದ್ಗತಿಯುಂಟಾಗುವುದಿಲ್ಲ ಎಂದು ಮೇಲೆ ಹೇಳಿದೆಯಲ್ಲವೇ? ಆದರೂ, ಜ್ಞಾನಿಗಳಾದವರಿಗೆ ಇದು ಸಂಬಂಧಿಸಲಾರದು. ಜ್ಞಾನಿಗಳಾದ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ ಎಂಬ ನಾಲ್ವರು ಬ್ರಹ್ಮಮಾನಸಪುತ್ರರೂ, ಶುಕ, ನಾರದ, ಭೀಷ್ಮ ಮೊದಲಾದವರೂ ಮಕ್ಕಳಿಲ್ಲದೆಯೇ ಶ್ರೇಷ್ಠವಾದ ಗತಿಯನ್ನು ಹೊಂದಿರುತ್ತಾರೆ.

ಮ ॥ ತನುಜರ್ ಜನ್ಮಿಸರೆಂದು ಶೋಕಿಪರು ಮೂ ♦ ರ್ಖರ್ ಜೀವನ ಭ್ರಾಂತಿಯಿಂ ।
ತನಯುರ್ ಪುಟ್ಟರೆ ಕೌರವೇಂದ್ರುನಿ ಗನೇ ♦ ಕರ್ ದುಷ್ಟರಿಂದಾವುದುಂ ।
ಜನಿಸಿತ್ತೇ ಸುತರಿಲ್ಲ ದಾ ಶುಕಮುನಿಂ ♦ ಗಂಟೆಪ್ಪುದೇ ನಾರಕಂ ।
ಅನಪತ್ಯಂಗಿರದೇನು ಮುಕ್ತಿಪದಮುಂ ♦ ಶ್ರೀಕಾಳಹಸ್ತೀಶ್ವರಾ ॥ (ತೆಲುಗು)

"ಅಪುತ್ರಸ್ಯ ಗತಿರ್ನಾಸ್ತಿ" ಎಂಬುವ ವಚನಕ್ಕೆ 'ಪುತ್ರರಿಲ್ಲದವನಿಗೆ ಸದ್ಗತಿಯಿಲ್ಲ'ವೆಂದರ್ಥ. ಇದು ಸಾಮಾನ್ಯವಾದ ಅರ್ಥವು. ಜ್ಞಾನಿಗಳಿಗೆ ಇದರ ಅರ್ಥವೇ ಬೇರೆ. ಅದು ಯಾವುದೆಂದರೆ:—ನರಕವೆಂದರೆ ದುಃಖವು; ಸ್ವರ್ಗವೆಂದರೆ ಸಂತೋಷವು. ಒಬ್ಬ ಪುರುಷನಿಗೆ ಜೀವನದಲ್ಲಿ ವಿರಕ್ತಿಯುಂಟಾಗಿ ಈ ಪ್ರಾಣವನ್ನು ಬಿಡಬೇಕೆಂದಿರುವ ಸಮಯದಲ್ಲಿ, ಈ ಪ್ರಪಂಚವು ಸುಳ್ಳೆಂದೂ, ಸ್ವಪ್ನಸಮಾನವೆಂದೂ, ಪರಮಾತ್ಮನೊಬ್ಬನೇ ಸ್ಥಿರನೆಂದೂ, ಸತ್ಯಪದಾರ್ಥವೆಂದೂ, ಆ ಸತ್ಯವಾದ ಪದಾರ್ಥವೇ ತಾನೆಂದೂ

ಅಂದರೆ ತಾನು ಪರಮಾತ್ಮನ ಸ್ವರೂಪವೆಂದೂ, ಅಂತಹ ತನಗೆ ದುಃಖ ವೆಂದಿಗೂ ಇರದು ಎಂಬ ದಿವ್ಯಜ್ಞಾನವುಂಟಾಗುವುದು. ಆ ಜ್ಞಾನವುಂಟಾ ಒಡನೆಯೇ ಹಿಂದಿನ ದುಃಖವು ನಶಿಸುತ್ತದೆ. ಇಂತಹ ದಿವ್ಯಜ್ಞಾನೋತ್ಪತ್ತಿ ಯೇ ಪುತ್ರೋತ್ಪತ್ತಿಯು, ಎಂಬುದೇ ರಹಸ್ಯಾರ್ಥವು. ಇಂತಹ ಜ್ಞಾ ವೆಂಬ ಪುತ್ರನು ಹುಟ್ಟದಿದ್ದಲ್ಲಿ ಅಂದರೆ ಪರಮಾತ್ಮಜ್ಞಾನವುಂಟಾಗದಿದ್ದರೆ ಪುರುಷನು ಸದ್ಗತಿಯನ್ನು ಖಂಡಿತವಾಗಿಯೂ ಹೊಂದಲಾರನು ಎಂಬುದೆ "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ವಚನದ ಮುಖ್ಯ ಭಾವವು.

ಪರಮಾತ್ಮಜ್ಞಾನವನ್ನು ಶ್ರವಣ, ಮನನ, ನಿದಿಧ್ಯಾಸಗಳಿಂದ ವೃದ್ಧಿಹೊಂದಿಸುತ್ತ ಇದ್ದದ್ದೇ ಆದರೆ, ಅದರಿಂದ ಮಕ್ಕಳವಿಷಯದ ಚಿಂತೆಯು ತೊಲಗಿ, ಚಿತ್ತಶುದ್ಧಿಯುಂಟಾಗಿ, ಆತ್ಮನಿಷ್ಠೆಯನ್ನು ಹೊಂದಿ ತನ್ಮೂಲಕ, ಮೋಕ್ಷವನ್ನು ಪಡೆಯುವನು. ಹೀಗೆ ಹೇಳುವುದೇ ವೇದಾಂತ ಸಿದ್ಧಾಂತವು. ಮೋಕ್ಷಪ್ರಾಪ್ತಿಗೆ ಜ್ಞಾನವೈರಾಗ್ಯಾದಿಗಳೇ ಮುಖ್ಯವಾ ದವುಗಳು. ಇದಕ್ಕೆ ಶೃತಿ ಪ್ರಮಾಣವು:—

"ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇ ನೈಕೇನ
ಅಮೃತತ್ವ ಮಾನಸಃ"......."ಜ್ಞಾನಾ ದೇವ ತು ಕೈವಲ್ಯಂ" ಇತ್ಯಾದಿ.



# ಬೆಳ್ಳಿ ಭಂಗಾರ ಮೊದಲಾದುವುಗಳಲ್ಲಿ ಇಚ್ಛೆ.

---

ಶ್ಲೋ॥ ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ ।
ಸ ಪಂಡಿತಃ ಸ ಶ್ರುತವಾ೯ ಗುಣಜ್ಞಃ ॥
ಸ ಏವ ವಕ್ತಾ ಸ ಚ ದರ್ಶನೀಯಃ ।
ಸರ್ವೇ ಗುಣಾಃ ಕಾಂಚನ ಮಾಶ್ರಯಂತಿ ॥

(ಭರ್ತೃಹರಿ, ನೀತಿಶತಕ.)

"ದುಡ್ಡಿದ್ದವನೇ ದೊಡ್ಡಪ್ಪ" ಎಂಬ ನಾಣ್ಣುಡಿಯಂತೆ, ಹಣವಿದ್ದವನು ನೀಚಕುಲದಲ್ಲಿ ಜನ್ಮಿಸಿದವನಾದರೂ ಉತ್ತಮಕುಲದಲ್ಲಿ ಹುಟ್ಟಿದವನಂತೆಯೇ ಭಾವಿಸಲ್ಪಡುವನು. ಅವನು ಮೂಢನಾದರೂ ಪಂಡಿತನು, ಅಕೃತ್ಯಗಳನ್ನು ಮಾಡಿದ್ದರೂ ಮಹಾಯಶಸ್ವಿ; ಗುಣರಹಿತನಾದರೂ ಮಹಾಗುಣಶಾಲಿ, ಮಾತನಾಡುವದಕ್ಕೆ ತಿಳಿಯದಿದ್ದರೂ ವಾಚಾಳಿ, ಕುರೂಪಿಯಾದರೂ ಸ್ಫುರದ್ರೂಪಿ, ಹೀಗೆಂದು ಗಣಿಸಲ್ಪಡುತ್ತಾನೆ. ಈ ಗುಣಗಳೆಲ್ಲವೂ ಹಣದಿಂದ ಅವನಿಗೆ ಲಭಿಸುತ್ತವೆ. ಈ ಪ್ರಪಂಚದಲ್ಲಿ ಎಲ್ಲಾ ಗುಣಗಳೂ ಹಣವನ್ನೇ ಆಶ್ರಯಿಸುವುವೆಂಬುದು ಪ್ರಸಿದ್ಧ. ಮೇಲೆ ಹೇಳಿದ ಗುಣಗಳಿದ್ದಾಗ್ಯೂ, ಧನಿಕನಿಗೆ ಇರುವಷ್ಟು ಬಲಿಯುವು ಇತರರಿಗೆ ಇಲ್ಲವು ಎಂದು ದೊಡ್ಡವರು ಹೇಳಿದರೂ, ವೇದಾಂತವಿಚಾರಮಾಡುವ ಸಂದರ್ಭದಲ್ಲಿ ಧನವು ಪಾಪಹೇತುವೆಂದೂ ಅದನ್ನು ಮಣ್ಣುಹೆಂಟಿಗೆ ಸಮಾನವಾಗಿ ಎಣಿಸಬೇಕೆಂದೂ ಹೇಳಿರುತ್ತಾರೆ. ಕಾರಣವೇನೆಂದರೆ:—

ಶ್ಲೋ॥ ಅರ್ಥಾನಾ ಮಾರ್ಜನೇ ದುಃಖಂ, ♦ ಅರ್ಜಿತಾನಾಂ ಚ ರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಂ, ♦ ಧಿಗರ್ಥಂ ದುಃಖಭಾಜನಂ ॥

ಶ್ಲೋ॥ ದಾಯಾದಾಃ ಸ್ಪೃಹಯಂತಿ ತಸ್ಕರಗಣಾ ♦ ಮುಷ್ಣಂತಿ ಭೂಮಿಭುಜೋ ।
ದೂರೇಣ ಜ್ವಲ ಮಾಚರಂತಿ ಹುತಭುಕ್ ♦ ಭಸ್ಮೀಕರೋತಿ ಕ್ಷಣಾತ್ ॥

ಅಂಭಃ ಪ್ಲಾವಯತೇ ಕ್ಷಿತೌ ವಿನಿಹಿತಂ ♦ ಯಕ್ಷಾ ಹರಂತಿ ಧ್ರುವಂ ।
ದುರ್ವೃತ್ತಾ ಸ್ತನಯಾ ನಯಂತಿ ನಿಧನಂ ♦ ಧಿಕ್ ಧಿಕ್ ಧನಂ ತದ್ಬಹುಃ॥

ಹಣವು ಬಹಳ ದುಃಖಕ್ಕೆ ಕಾರಣ. ಅದನ್ನು ಸಂಪಾದಿಸುವುದ ಒಂದು ದುಃಖ, ಅದನ್ನು ಕಾಪಾಡುವುದು ಒಂದು ದುಃಖ, ನಾಶವಾದರು ದುಃಖ, ವ್ಯಯಮಾಡಿದರೂ ದುಃಖ, ಇಂತಹ ದುಃಖಕರವಾದ ಧನ ವಿಷಯದಲ್ಲಿ ಎಲ್ಲರೂ ಉಪೇಕ್ಷೆಮಾಡಬೇಕು.

ಇದೂ ಅಲ್ಲದೆ, ಯಾವನಾದರೂ ಒಬ್ಬನು ಧನಿಕನಾಗಿದ್ದರೆ, ಅವ ದಾಯಾದಿಗಳು ತಮಗೆ ಅವನ ಹಣವು ಬರಬೇಕೆಂದು ಆಶಿಸುತ್ತಾರೆ ಕಳ್ಳರ ಗುಂಪು ಅದನ್ನು ಕದಿಯುವುದಕ್ಕೆ ಯತ್ನಿಸುತ್ತದೆ. ರಾಜರ ತಮ್ಮ ವಶಪಡಿಸಿಕೊಳ್ಳಬೇಕೆಂದು ಸಮಯವನ್ನು ಕಾಯುತ್ತಾರೆ. ಬೆಂಕಿ ಸಿಕ್ಕಿದರೆ ಎಲ್ಲವೂ ಸುಟ್ಟು ಬೂದಿಯಾಗುತ್ತದೆ. ಪ್ರವಾಹಕ್ಕೆ ಸಿಕ್ಕಿದ ನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತದೆ. ಭೂಸ್ಥಾಪನೆಮಾಡಿದರೆ ಯಕ್ಷರ ಪಾಲಾಗುತ್ತದೆ. ದುಷ್ಟರಾದ ಪುತ್ರರು ಹುಟ್ಟಿದರೆ, ಅದನ್ನು ಅನ್ಯಾಯ ಮಾರ್ಗಗಳಲ್ಲಿ ಹಾಳುಮಾಡುತ್ತಾರೆ. ಕಷ್ಟದುಃಖಗಳಿಗೆ ಕಾರಣವಾದ ಧನವನ್ನು ಸುಡಬೇಕು ಎಂಬುದೇ ಮೇಲಿನ ಶ್ಲೋಕಗಳ ತಾತ್ಪರ್ಯ.

ಸಾಧಾರಣವಾಗಿ ಜನಗಳ ಸ್ವಭಾವವು ಹಣವನ್ನು ಗಳಿಸುವುದರಲ್ಲಿ ಆಸಕ್ತಿಯೇ ಹೊರತು ಮತ್ತಾವುದರಲ್ಲಿಯೂ ಅಷ್ಟಿಲ್ಲ. ಹಣಕ್ಕಾಗಿ ಎಲ್ಲಾ ಧರ್ಮಗಳನ್ನು ಬಿಡುವುದಕ್ಕೆ ಸಿದ್ಧರಾಗಿರುತ್ತಾರೆ. ಹೇಗೆಂದರೆ:—

ಶ್ಲೋ॥ ಜಾತಿ ರ್ಯಾತು ರಸಾತಲಂ ಗುಣಗಣಾ ♦ ಸ್ತತ್ರಾ ಪ್ಯಧೋ ಗಚ್ಛತಾಂ ।
ಶೀಲಂ ಶೈಲತಟಾ ತ್ಪತ ತ್ವಭಿಜನಃ ♦ ಸಂದಹ್ಯತಾಂ ವಹ್ನಿನಾ ॥
ಶೌರ್ಯೇ ವೈರಿಣಿ ವಜ್ರ ಮಾಶು ನಿಪತ ♦ ತ್ವರ್ಥೋಽಸ್ತು ನಃ ಕೇವಲಂ ।
ಯೇ ನೈಕೇನ ವಿನಾ ಗುಣಾ ಸ್ತೃಣಲವ ♦ ಪ್ರಾಯಾಃ ಸಮಸ್ತಾ ಇಮೇ ॥

(ಭರ್ತೃಹರಿ, ನೀತಿಶತಕ.)

“ಜಾತಿ ಹೋಗಲಿ, ಗುಣಗಳೆಲ್ಲವೂ ತೊಲಗಲಿ, ಶೀಲವೆಂಬುದು ಹಾಳಾಗಲಿ, ಬಂಧುಗಳೆಲ್ಲವೂ ಬೆಂಕಿಯಲ್ಲಿ ನಷ್ಟವಾಗಲಿ, ಶೂರನಾದ

ಶತ್ರುವು ನಾಶವಾಗಲಿ, ನಮಗೆ ಹಣವು ಬಂದರೆ ಸಾಕು'' ಎಂದು ಧನಾಕಾಂಕ್ಷಿಗಳು ಹೇಳುತ್ತಾರೆ. ಹಣವೊಂದಿಲ್ಲದಿದ್ದರೆ ಎಷ್ಟು ಒಳ್ಳೆಯ ಗುಣಗಳಿದ್ದರೂ ಪ್ರಯೋಜನಕ್ಕೆ ಬಾರವು.

ಶ್ಲೋ ॥ ದಾನಂ ಭೋಗೋ ನಾಶಃ ತಿಸ್ರೋ ♦ ಗತಯೋ ಭವಂತಿ ವಿತ್ತಸ್ಯ ।
ಯೋ ನ ದದಾತಿ ನ ಭುಂಕ್ತೇ ♦ ತಸ್ಯ ತೃತೀಯಾ ಗತಿ ರ್ಭವತಿ ॥

ಹಣಕ್ಕೆ, ದಾನ ಭೋಗ ನಾಶ ಎಂಬ ಮೂರು ಮಾರ್ಗಗಳು. ಯಾರು ದಾನಮಾಡುವುದಿಲ್ಲವೋ, ಇಲ್ಲವೇ ತಾವನುಭವಿಸುವುದಿಲ್ಲವೋ ಅಂತಹರ ಹಣವು ನಾಶವನ್ನೈದುವುದು ಖಂಡಿತ.

ಹಣಕ್ಕಾಗಿ ಪ್ರಪಂಚದಲ್ಲಿ ಒಬ್ಬರನ್ನೊಬ್ಬರು ಕೊಲ್ಲುವುದಕ್ಕೆ ಪ್ರಯತ್ನಿಸಿ ತಾವು ನಾಶಹೊಂದುವುದೂ ಉಂಟು. ಹಣಕ್ಕಾಗಿ ಪುತ್ರ-ಮಿತ್ರ-ಕಳತ್ರಾದಿಗಳನ್ನು ತೊರೆದು ಹಾಳಾಗುತ್ತಿರುವುದೂ ಉಂಟು. ಹೀಗೆ ಹಾಳಾದುದಕ್ಕೆ ಅನೇಕ ನಿದರ್ಶನಗಳುಂಟು. ದುರ್ಯೋಧನನು ಧನಾಶೆಯಿಂದ ತನ್ನ ಅಣ್ಣತಮ್ಮಂದಿರಾದ ಪಾಂಡವರನ್ನು ಕೊಲ್ಲಲು ಯತ್ನಿಸಿ ತಾನೇ ಹಾಳಾದನು. ಧನಾಶೆಯುಳ್ಳವರಿಗೆ ಇಹಲೋಕದಲ್ಲಿ ಸುಖವಿಲ್ಲ, ಪರಲೋಕದಲ್ಲಿ ಉತ್ತಮಗತಿಯಿಲ್ಲ. ಹೀಗಿರಲು, ಜನಗಳು ಧನಾಶೆಯನ್ನು ಬಿಟ್ಟು ಜ್ಞಾನಧನವನ್ನು ಸಂಪಾದಿಸಿ ಇಹಪರಲೋಕಗಳ ಸೌಖ್ಯವನ್ನು ಹೊಂದಲೆತ್ನಿಸಬೇಕು.

ಸೀ ॥ ಕಡಲು ಸುತ್ತಿದ ಪೊಡವಿ ♦ ಯೆಲ್ಲವಾಳಿದ ದೊರೆಗ ಳೊಳಗೊಬ್ಬ
ತುಸುನೆಲವ ♦ ಕೊಂಡುಪೋಗ ;

ಬೆಟ್ಟಕೆಣೆ ಹಣರಾಸಿ ♦ ಯಂ ಪೊಂದಿ ಮೆರೆದರುಂ, ತಾನೊಂದು ಕಾ
ಸನುಂ ♦ ಕೊಂಡುಪೋಗ ;

ಬಹುಧಾನ್ಯ ರಾಸಿಗಳಿ ♦ ಗಧಿಪತಿಯು ತಾನಾದೊಡಂ ಕಾಳ
ನೊಂದನುಂ ♦ ಕೊಂಡು ಪೋಗ ;

ಬಹು ಮೂಲ್ಯ ವಸ್ತ್ರ ಸಂ ♦ ಪಾದಕನು ತಾನಾಗೆ, ಚಿಂದಿ ಬಟ್ಟೆ
ಯ ಕೂಡ ♦ ಕೊಂಡುಪೋಗ ;

ಇಷ್ಟನುಂ ತಿಳಿದು ದುರ್ಮಾರ್ಗ ♦ ನೇತಕಾಗಿ
ತ್ಯಾಗ ಭೋಗಂಗಳುಳಿದು ತಾ ♦ ಲೋಭಿಯಹನು ?
ಅವನ ಜನ್ಮವು ಜನ್ಮವೇ ♦ ಭೂಮಿಯಲ್ಲಿ,
ರಾಮಲಿಂಗೇಶ! ರಾಮುಚಂ ♦ ದ್ರ ಪುರವಾಸ ॥ (ತೆಲುಗು.)

ಎಷ್ಟು ಸಂಪಾದಿಸಿದರೂ ಧನ, ಧಾನ್ಯ, ವಸ್ತ್ರಾಭರಣ, ಮನೆ, ಮಠ, ಇವುಗಳಲ್ಲಿ ಒಂದನ್ನೂ ತಾನು ಇಹಲೋಕವನ್ನು ಬಿಡುವಾಗ ಮನುಷ್ಯನು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋಗಲು ಶಕ್ತನಾದಾನೇ? ಎಂದಿಗೂ ಇಲ್ಲ. ಇದರ ತತ್ವವನ್ನು ತಿಳಿದೂ ತಿಳಿದು ಲೋಭಗುಣವನ್ನಾಶ್ರಯಿಸಿದರೆ ಅವನಬಾಳು ಬಾಳೇ; ವ್ಯರ್ಥ. ಇದೂ ಅಲ್ಲದೆ,

ಶ್ಲೋ ॥ ಯದ್ಧಾತ್ರಾ ನಿಜಫಾಲಪಟ್ಟಲಿಖಿತಂ ♦ ಸ್ತೋಕಂ ಮಹದ್ವಾ ಧನಂ ।
ತತ್ಪ್ರಾಪ್ನೋತಿ ಮರುಸ್ಥಲೇಽಪಿ ನಿತರಾಂ ♦ ಮೇರೌ ಚ ನಾತೋಽಧಿಕಂ ॥
ತದ್ಧೀರೋ ಭವ ವಿತ್ತವತ್ಸು ಕೃಪಣಾಂ ♦ ವೃತ್ತಿಂ ವೃಥಾ ಮಾ ಕೃಥಾಃ ।
ಕೂಪೇ ಪಶ್ಯ ಪಯೋನಿಧಾವಪಿ ಘಟೋ ♦ ಗೃಹ್ಣಾತಿ ತುಲ್ಯಂ ಜಲಂ ॥
(ಭರ್ತೃಹರಿ, ನೀತಿಶತಕ.)

ಒಬ್ಬ ಮನುಷ್ಯನಿಗೆ ಬ್ರಹ್ಮನು ಆತನ ಹಣೆಯಲ್ಲಿ, ಎಷ್ಟು ಬರಬೇಕೆಂದು ಬರೆದಿರುತ್ತಾನೆಯೋ, ಹೆಚ್ಚಾಗಲಿ ಕಡಿಮೆಯಾಗಲಿ ಅಷ್ಟೇ ಉಂಟಾಗುತ್ತದೆ. ಮರುಭೂಮಿಯಲ್ಲಿದ್ದರೂ ಅಷ್ಟೇ; ಅಥವಾ ಭಂಗಾರದ ಬೆಟ್ಟವಾದ ಮೇರುಪರ್ವತದ ಮೇಲೆ ವಾಸಿಸಿದರೂ ಅಷ್ಟೇ. ಆದುದರಿಂದ ಜನಗಳಿರಾ! ಹಣದವಿಷಯದಲ್ಲಿ ಜಿಪುಣರಾಗಬೇಡಿರಿ. ಏತಕ್ಕೆಂದರೆ, ಒಂದು ಗಡಿಗೆಯನ್ನು ಭಾವಿಯಲ್ಲಿ ಬಿಟ್ಟರೂ ಸಮುದ್ರದಲ್ಲಿ ಬಿಟ್ಟರೂ ಗಡಿಗೆ ಹಿಡಿಸುವಷ್ಟು ನೀರು ಬಂದೀತೇ ಹೊರತು ಹೆಚ್ಚಾಗಿ ಬರಲಾರದು.

ಇವೆಲ್ಲಾ ತಿಳಿದೂ, ಸ್ತ್ರೀಪುರುಷರು, ತಮ್ಮ ಜನ್ಮರಾಹಿತ್ಯಕ್ಕೆ ಮಾರ್ಗವನ್ನು ಹುಡುಕದೆ, ಸದಾ ಈಷಣತ್ರಯವೆಂಬ ಮಹಾಂಧಕಾರದಲ್ಲಿ ಸಿಕ್ಕಿಬಿದ್ದು ಅಶಾಶ್ವತವಾದ ಧನಾರ್ಜನೆಯನ್ನು ಮಾಡುತ್ತ ಅದರಿಂದ ತಮ್ಮ ಹೆಂಡತಿಮಕ್ಕಳನ್ನು ಕಾಪಾಡುತ್ತಾ, ಎಲ್ಲಾ ಕಾಲ್ಲದಲ್ಲಿಯೂ ಈಷಣತ್ರಯವೆಂಬ ಆಶಾಪಾಶಗಳಲ್ಲಿ ಕಟ್ಟುಬಿದ್ದು ಮೃತಿಹೊಂದಿ ಪುನಃ ಅವರವರ ಕರ್ಮಾನುಸಾರವಾಗಿ ಜನನಮರಣಗಳನ್ನು ಪಡೆಯುತ್ತಿದ್ದಾರೆ.

ಈಷಣತ್ರಯಗಳನ್ನು ಕುರಿತು ಶ್ರೀ ಶಂಕರಾಚಾರ್ಯರು ಈರೀತಿಯಾಗಿ ಹೇಳಿರುತ್ತಾರೆ.

ಶ್ಲೋ ॥ ಮೂಢ ಜಹೀಹಿ ಧನಾಗಮತೃಷ್ಣಾಂ ।
ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ ॥
ಯಲ್ಲಭಸೇ ನಿಜಕರ್ಮೋಪಾತ್ತಂ ।
ವಿತ್ತಂ ತೇನ ವಿನೋದಯ ಚಿತ್ತಂ ॥

ಶ್ಲೋ ॥ ನಾರೀಸ್ತನಭರನಾಭೀದೇಶಂ ।
ದೃಷ್ಟ್ವಾ ಮಾಗಾ ಮೋಹಾವೇಶಂ ॥
ಏತ ನ್ಮಾಂಸವಸಾದಿ ವಿಕಾರಂ ।
ಮನಸಿ ವಿಚಿಂತಯ ವಾರಂ ವಾರಂ ॥

"ಎಲೈ ಮೂಢ! ಧನಾರ್ಜನೆಯಲ್ಲಿ ಆಸಕ್ತಿಯನ್ನು ತೊಲಗಿಸು. ಬುದ್ಧಿಯಲ್ಲಿ ಆಸೆಗೆ ಎಡೆಗೊಡಬೇಡ. ಕಷ್ಟಪಟ್ಟು ಸಂಪಾದಿಸಿದ್ದರಿಂದ ಬಂದ ಹಣದಿಂದ ತೃಪ್ತಿಹೊಂದುವುದಕ್ಕೆ ಪ್ರಯತ್ನಿಸು. ಇಷ್ಟೇ ಅಲ್ಲದೆ, ಸ್ತ್ರೀಯರ ಸ್ತನಪ್ರದೇಶವನ್ನು ನೋಡಿ ಮೋಹಪಡಬೇಡ, ಅದು ಮಾಂಸ ಮೇದಸ್ಸಿನ ಒಂದು ವಿಕಾರವೇ ಹೊರತು ಅದರಿಂದ ನಿಜವಾದ ಸುಖವನ್ನು ನೀನು ಹೊಂದಲಾರೆ. ಇಂತಹ ಭ್ರಾಂತಿಗೆ ಅವಕಾಶಕೊಡದೆ ಸದಾ ಮೋಕ್ಷದಾಯಕನಾದ ಪರಮಾತ್ಮನನ್ನೇ ಸ್ಮರಿಸುತ್ತಿರು".

ಶ್ರುತಿ ॥ ಯಃ ಸ್ತನಃ ಪೂರ್ವಪೀತ ಸ್ತಂ ♦ ನಿಷ್ಪೀಡ್ಯ ಮುದ ಮಶ್ನುತೇ ।
ಯಸ್ಮಾತ್ ಜಾತೋ ಭಗಾತ್ ಪೂರ್ವಂ ♦ ತಸ್ಮಿ ನ್ನೇವ ಭಗೇ ರಮ್ರ್ ॥

ಎಂಬ ಯೋಗತತ್ವೋಪನಿಷದ್ವಾಕ್ಯರೀತಿಯಾಗಿ, ಯಾವಾತನು ಪೂರ್ವದಲ್ಲಿ ಅಂದರೆ ಶಿಶುವಾಗಿರುವಾಗ ಯಾವ ಸ್ತನವನ್ನು ಪಾನಮಾಡಿದ್ದನೋ, ಯುವಕನಾದಾಗ ಅದೇ ಸ್ತನವನ್ನು ಮರ್ದಿಸಿ ಸುಖವನ್ನು ಹೊಂದುತ್ತಾನೆ. ಮತ್ತು ಯಾವ ಗುಹ್ಯಸ್ಥಾನದಲ್ಲಿ ತಾನು ಹುಟ್ಟಿದ್ದನೋ, ಅದೇ ಸ್ಥಳದಲ್ಲಿ ರಮಿಸಿ ಸುಖವನ್ನು ಪಡೆಯಲಪೇಕ್ಷಿಸುತ್ತಾನೆ. ಅಂದರೆ ಮಾಯಾಂಧಕಾರದಲ್ಲಿ ಸಿಕ್ಕಿ ಭ್ರಾಂತಿಪಡುತ್ತಿದ್ದಾನೆ. ಇದರ ರಹಸ್ಯವನ್ನು ಗ್ರಹಿಸಿದ್ದೇ ಆದರೆ, ಮೇಲೆ ಹೇಳಿದ ಸ್ತ್ರೀ ಮತ್ತು ಧನ ಇವುಗಳಲ್ಲಿ ಆಸೆಯನ್ನಿಡಲಾರ. ಆದುದರಿಂದ ಮುಮುಕ್ಷುವು ವಿರಕ್ತಿ ಮಾರ್ಗವನ್ನು ಹಿಡಿದು ಮುಕ್ತಿಯನ್ನು ಸಾಧಿಸಬೇಕು.

ಶ್ರುತಿ ॥ ಯಾ ಮಾತಾ ಸಾ ಪುನ ರ್ಭಾರ್ಯಾ ♦ ಯಾ ಭಾರ್ಯಾ ಮಾತರೇವ ಹಿ ।
ಯಃ ಪಿತಾ ಸ ಪುನಃ ಪುತ್ರೋ ♦ ಯಃ ಪುತ್ರ ಸ್ಸ ಪುನಃ ಪಿತಾ ॥

ಒಂದು ಜನ್ಮದಲ್ಲಿ ತಾಯಿಯಾದವಳು ಮತ್ತೊಂದರಲ್ಲಿ ಹೆಂಡ[ತಿ] ಯಾಗಬಹುದು, ಮತ್ತು ಒಂದು ಜನ್ಮದಲ್ಲಿ ಹೆಂಡತಿಯಾದವಳು ಇನ್ನೊಂದ[ು] ಜನ್ಮದಲ್ಲಿ ತಾಯಿಯಾಗಬಹುದು. ಹಾಗೆಯೇ, ತಂದೆಯಾದವನು ಮಗ[ನ] ನಾಗಿಯೂ ಮಗನಾದವನು ತಂದೆಯಾಗಿಯೂ ಜನಿಸುವುದುಂಟು

ಶ್ರುತಿ ॥ ಏವಂ ಸಂಸಾರಚಕ್ರೇಣ ♦ ಕೂಪಚಕ್ರಘಟಾ ಇವ ।
ಭ್ರಮಂತೋ ಯೋನಿಜನ್ಮಾನಿ ♦ ಶ್ರುತ್ವಾ ಲೋಕಾ ಸಮುಶ್ನುತೇ ॥

ಸೇದುವ ಬಾವಿಗೆ ಹಾಕಿದ ಚಕ್ರದ ಮೂಲಕ ಮೇಲಕ್ಕೂ ಕೆಳಕ್ಕೂ ಓಡಾಡುತ್ತಿರುವ ಘಟದಂತೆ, ಈ ಸಂಸಾರಚಕ್ರದಲ್ಲಿ ಜೀವಿಗಳು ಯೋನಿ ದ್ವಾರಗಳ ಮೂಲಕ ಅನೇಕವೇಳೆ ಹುಟ್ಟುತ್ತಲೂ ಪುನಃ ಸಾಯುತ್ತಲೂ ಇರುತ್ತಾರೆ. ಇದಕ್ಕೆ ಶ್ರೀ ಭಗವದ್ಗೀತೆ ಅಧ್ಯಾಯ 3 ಶ್ಲೋಕ 14-15 ಪ್ರಮಾಣವು.

ಶ್ಲೋ ॥ ಅನ್ನಾ ದ್ಭವಂತಿ ಭೂತಾನಿ ♦ ಪರ್ಜನ್ಯಾ ದನ್ನಸಂಭವಃ ।
ಯಜ್ಞಾ ದ್ಭವತಿ ಪರ್ಜನ್ಯೋ ♦ ಯಜ್ಞಃ ಕರ್ಮಸಮುದ್ಭವಃ ॥

ಶ್ಲೋ ॥ ಕರ್ಮ ಬ್ರಹ್ಮೋದ್ಭವಂ ವಿದ್ಧಿ ♦ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾ ತ್ಸರ್ವಗತಂ ಬ್ರಹ್ಮ ♦ ನಿತ್ಯಂ ಯಜ್ಞೇ ಸಮುದ್ಭವಂ ॥

ಅನ್ನದಿಂದ ದೇಹೋತ್ಪತ್ತಿಯಾಗುವುದು. ಈ ಅನ್ನವು ಜಲವೃಷ್ಟಿ ಯಿಂದಾಗುವುದು. ಆ ಜಲವೃಷ್ಟಿಯು ಯಜ್ಞದಿಂದುತ್ಪನ್ನವಾದ ಅಪೂರ್ವ ವೆನಿಸುವ ಧರ್ಮದಿಂದ ಹುಟ್ಟುವುದು. ಆ ಅಪೂರ್ವವಾದ ಧರ್ಮವು ಕರ್ಮ ದಿಂದ ಹುಟ್ಟುವುದು. ಈ ಅಗ್ನಿಹೋತ್ರಾದಿ ಕರ್ಮಗಳಿಗೆ ಕಾರಣವಾದ ಕರ್ಮಕ್ಕೆ ಮೂಲಸ್ಥಾನ ವೇದವು. ಈ ವೇದವು ಪರಮಾತ್ಮನಿಂದ ಹುಟ್ಟಿ ದುದು. ಆದುದರಿಂದ ಸರ್ವಪ್ರಕಾಶಕವಾದ ಮತ್ತು ನಾಶವಿಲ್ಲದಿರುವ ವೇದವು ಯಜ್ಞದಲ್ಲಿಯೇ ತಾತ್ಪರ್ಯವುಳ್ಳದಾಗಿರುವುದರಿಂದ ಅದನ್ನು ಯಜ್ಞದಲ್ಲಿಯೇ ಇರತಕ್ಕದೆಂದು ಭಾವಿಸಬೇಕು.

ಆದುದರಿಂದ ಚಕ್ರದಂತೆ ಎಡಬಿಡದೆ ತಿರುಗುತ್ತಿರುವ ಈ ಸಂಸಾರ ಚಕ್ರದಲ್ಲಿ, ಯಾವನು ಇದರ ತತ್ವವನ್ನು ತಿಳಿಯದೆ ಇಂದ್ರಿಯಗಳನ್ನು ವಿಷಯಸುಖಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತಾನೆಯೋ, ಅವನು ಪಾಪಾತ್ಮನಾಗುತ್ತಾನೆ. ಅಂತಹನು ಜೀವಿಸಿದ್ದರೂ ವ್ಯರ್ಥವೇ ಸರಿ.

ಪದ್ಯ ॥ ಬೀಜ ವೃಕ್ಷದೊಳಾಯ್ತು ವೃಕ್ಷಕೆ ।
ಬೀಜ ವಾರಿಂದಾಯ್ತು ಲೋಕದಿ ।
ಬೀಜವೃಕ್ಷನ್ಯಾಯವಿದ ಭೇದಿಸುವ ರಾರಿನ್ನು ? ॥

ಎಂಬ ಕನಕದಾಸರ ಮಾತಿನಂತೆ, ಬೀಜವು ಮುಂದೋ ಅಥವಾ ವೃಕ್ಷವು ಮುಂದೋ ಅಂದರೆ ವೃಕ್ಷವು ಬೀಜದಿಂದ ಹುಟ್ಟಿದುದೋ ಇಲ್ಲವೇ ಬೀಜವು ವೃಕ್ಷದಿಂದಾದುದೋ ಹೇಳಲು ಸಾಧ್ಯವಿಲ್ಲ. ಹಾಗೆಯೇ ಸಂಸಾರಕ್ಕೆ ಕರ್ಮವು ಮೊದಲೋ ಕರ್ಮಕ್ಕೆ ಸಂಸಾರವು ಮೊದಲೋ ಎಂಬುದು ತಿಳಿಯಲು ಸಾಧ್ಯವಿಲ್ಲ. ಸಂಸಾರಕ್ಕೆ ತುದಿಮೊದಲುಗಳು ಇಲ್ಲ. ಇದಕ್ಕೆ ಒಂದು ದೃಷ್ಟಾಂತವುಂಟು. ಒಂದು ಹುಳುವು ಒಂದು ಚಕ್ರದ ಯಾವುದಾದರೊಂದು ಸ್ಥಳದಿಂದ ಹೊರಟು ಮುಂದುಮುಂದಕ್ಕೆ ಸರಿಯುತ್ತ ಮೊದಲು ಹೊರಟ ಸ್ಥಳಕ್ಕೆ ಬಂದು ಸೇರಿದರೂ, ಅದು ತಾನು ಹೊರಟ ಸ್ಥಳವೆಂದು ಯಾವ ರೀತಿಯಲ್ಲಿ ತಿಳಿಯದೇ ಹೊಸ ಸ್ಥಳವೆಂದು ಭಾವಿಸಿ ಹೇಗೆ ಪುನಃ ಪುನಃ ಸುತ್ತುತ್ತಿರುತ್ತದೆಯೋ ಹಾಗೆಯೇ ಪಾಮರನಾದ ಮನುಷ್ಯನೂ ಕೂಡ ಈದಿವಸ ಮಾಡಿದ ಕೆಲಸವನ್ನೇ ಮರುದಿವಸವೂ ಮಾಡುತ್ತಲಿದ್ದರೂ ಅದನ್ನು ಗ್ರಹಿಸದೆ, ತಾನು ಹೊಸಹೊಸದಾಗಿ ಮಾಡುತ್ತಿದ್ದಾನೆಂಬದಾಗಿಯೇ ತಿಳಿದು ಭ್ರಾಂತಿಗೊಳ್ಳುತ್ತಾನೆ. ಈ ಭ್ರಾಂತಿಯಿಂದ ಬಿಡುಗಡೆಯೇ ಇಲ್ಲ. ಆದುದರಿಂದಲೇ ಈ ಭ್ರಾಂತಿಗೆ ಮೂಲಕಾರಣವಾದ ಕಾಮಕ್ರೋಧಾದಿಗಳನ್ನೂ ಈಷಣತ್ರಯಗಳನ್ನೂ ದೂರಮಾಡಿದ್ದೇ ಆದರೆ ಆತ್ಮಸಂದರ್ಶನವು ದೊರಕುತ್ತದೆ. ಇಂತಹ ಸಿದ್ಧಿಗೆ ಮೋಕ್ಷವೆಂದು ಹೆಸರು. ಈ ಮೋಕ್ಷವು ಲಭಿಸದಂತೆ ಅಡ್ಡಿ ಬರುವುದೇ ಕಾಮವು. ಈ ಕಾಮ ಸ್ವರೂಪವು ಈ ಮುಂದೆ ವಿಸ್ತಾರವಾಗಿ ತಿಳಿಸಿದೆ.



# ಮನ್ಮಥನು ಪ್ರಪಂಚವನ್ನು ಭ್ರಮೆಗೊಳ್ಳುವಂತೆ ಮಾಡುವಿಕೆ.

---

ಶ್ಲೋ ॥ ಕಾಮೋ ನಾಮ ಮಹಾನ್ ಜಗತ್ ಭ್ರಮಯಿತಾ ♦ ಸ್ಥಿತ್ವಾಂತರಂಗೇ ಸ್ವಯಂ
ಸ್ತ್ರೀ ಪುಂಸಾ ವಿತರೇzತರಾಂಗಕರುಣೈ ♦ ರಾವೇಶ್ಯ ಭಾವೈಃ ಸ್ಫುಟಂ ॥
ಅನ್ಯೋನ್ಯಂ ಪರಿಮೋಹ್ಯ ನೈಜತಮಸಾ ♦ ಪ್ರೇಮಾನುಬಂಧೇನ ತೌ ।
ಬಧ್ವಾ ಬ್ರಾಹ್ಮಯತಿ ಪ್ರಪಂಚರಚನಾಂ ♦ ಸಂವರ್ಧಯ ನ್ಬ್ರಹ್ಮಹಾ ॥
(ವೈರಾಗ್ಯದೀಪಿಕೆ)

ಮನ್ಮಥನೆಂಬ ಆ ಮಹಾ ಶೂರನು ಸ್ತ್ರೀಪುರುಷರ ಅಂತರಂಗವನ್ನಾವರಿಸಿ, ಮಾಯೆಯನ್ನು ಬೀಸಿ ಒಬ್ಬರ ಮೇಲೊಬ್ಬರಿಗೆ ಪ್ರೇಮವೆಂಬ ಬಂಧವನ್ನು ಕಲ್ಪಿಸಿ ಅವರನ್ನು ಅದರಿಂದ ಬಿಗಿಸಿ ಸೃಷ್ಟಿಕರ್ತನ ಪ್ರಜಾಭಿವೃದ್ಧಿವ್ಯಾಪಾರವನ್ನು ಹೆಚ್ಚಿಸುತ್ತಾ ಬರುತ್ತಾನೆ. ಆ ಮನ್ಮಥನೇ ಸ್ತ್ರೀಪುರುಷರನ್ನು ಈ ಪ್ರಪಂಚಕ್ಕೆ ಬಂಧಿಸಿ ಪರಮಾತ್ಮಸ್ವರೂಪವನ್ನು ಜನಗಳು ತಿಳಿಯುವುದಕ್ಕೆ ಪ್ರತಿಬಂಧಕನಾಗಿರುತ್ತಾನೆ. ಈ ಕಾರಣದಿಂದಲೇ ಪ್ರತಿ ಜೀವಿಗೂ ಕಾಮವು ದಿನೇ ದಿನೇ ಅಭಿವೃದ್ಧಿಯಾಗುತ್ತಿರುತ್ತದೆ. ಮುದಿಯಾದರೂ ಕಾಮಾಕಾಂಕ್ಷೆ ಮಟ್ಟಿಗೆ ತಗ್ಗದೇ ಇರುತ್ತದೆ.

ಹೇಗೆಂದರೆ :—ತಾಯಿಯ ಗರ್ಭಕೋಶದಿಂದ ಹೊರಹೊರಟ ಒಬ್ಬ ಬಾಲನಿಗೆ ಪ್ರತಿವರ್ಷವೂ ವಯಸ್ಸು ಹೆಚ್ಚಿದಂತೆಲ್ಲಾ, ದೇಹವು, ಮನಸ್ಸು, ಗುಣಗಳು ಮೊದಲಾದುವುಗಳು ಬೇರೆಬೇರೆಯಾಗಿ ಬದಲಾಯಿಸುತ್ತ, ಯೌವನದೆಶೆ ಪ್ರಾಪ್ತವಾದಾಗ ಸಮಸ್ತ ಭೋಗಭಾಗ್ಯಗಳನ್ನೂ ಅನುಭವಿಸಿ, ಕಡೆಯಲ್ಲಿ ಶರೀರಬಲವು ಕುಗ್ಗುತ್ತ ಬರಲು, ಕೂದಲುಗಳು ನರೆತು, ಹಲ್ಲುಗಳು ಬಿದ್ದು ದೇಹದ ಮೇಲಿನ ಚರ್ಮವು ಸುಕ್ಕು ಸುಕ್ಕಾಗಿ, ಕಣ್ಣು ಕಾಣದೆ, ಕಿವಿ ಕೇಳದೆ, ಗಡಗಡನೆ ನಡಗುತ್ತ, ನಡೆಯುವುದಕ್ಕೆ ಕೂಡ ಶಕ್ತಿಸಾಲದೆ, ಕೋಲಿನ ಸಹಾಯದಿಂದ ನಡೆಯುವ ಸ್ಥಿತಿ

ಬಂದರೂ, ಆ ಮುದುಕನಿಗೆ ನೂರುವರ್ಷ ತುಂಬುತ್ತ ಬಂದಿದ್ದರೂ ಇಪ್ಪತ್ತೈದು ವರ್ಷದವನಿಗಿರುವಂತೆ ಕಾಮವ್ಯಾಪಾರವು ನಡೆಯುತ್ತಲೇ ಇರುವುದು. ಅಂದರೆ ದೇಹಕ್ಕೆ ಮುಪ್ಪೇ ಹೊರತು, ಕಾಮಕ್ಕೆ ಮುಪ್ಪಿಲ್ಲ.

ಒಬ್ಬಾನೊಬ್ಬ ಮುಪ್ಪಿನ ಮುದುಕನನ್ನು ಕುರಿತು, ಕೆಲವು ಹೆಣ್ಣು ಮಕ್ಕಳು ವಿನೋದಕ್ಕಾಗಿ "ತಾತಾ, ಮದುವೆಮಾಡಿಕೊಳ್ಳುವಿರಾ?" ಎಂದು ಕೇಳಲು, ಆತನು ಆ ಸಮಯದಲ್ಲಿ ಏನುಮಾಡಲೂ ತನಗೆ ಶಕ್ತಿಯಿಲ್ಲದಿದ್ದರೂ, ತನ್ನ ಹಲ್ಲಿಲ್ಲದ ಬೋಸಿ ಬಾಯಿಯನ್ನು ತೆರೆದು ನಗುತ್ತಾ, "ಯಾರಮ್ಮ, ನನಗೆ ಹೆಣ್ಣು ಕೊಡುವವರು?" ಎಂದು ಹೇಳುವನೇ ಹೊರತು ವಿವಾಹದಲ್ಲಿ ತನಗಿರುವ ಅನಾಸಕ್ತಿಯನ್ನು ತೋರಿಸುವುದಿಲ್ಲ. ಅಂದರೆ ತಾನೇನೋ ಮದುವೆಗೆ ಸಿದ್ಧ, ಆದರೆ ಹೆಣ್ಣುಕೊಡುವವರಿಲ್ಲ ಎಂದರ್ಥ. ಎಂದಿಗೂ ತೀರದ ಇಂತಹ ಆಸೆಯಿರುವುದಕ್ಕೆ ಕಾರಣ ವೇನೆಂದರೆ, ಹಿಂದೆ ಅನೇಕ ಜನ್ಮಗಳಿಂದ ತನ್ನ ಬೆನ್ನಂಟಿ ಬರುತ್ತಿದ್ದ ಆ ಕಾಮವು, ಆ ಮುದುಕನನ್ನು ಹೀಗೆ ಮಾಡುತ್ತದೆಯೇ ಹೊರತು ಈ ಜನ್ಮದಲ್ಲಿ ಹೊಸದಾಗಿ ಬಂದಂಥ ಕಾಮವು ಮಾಡಿದುದಲ್ಲ. ಈರೀತಿಯಾಗಿ ಕಾಮದೊಡಗೂಡಿದ ಜೀರ್ಣದೇಹವನ್ನು ಬಿಟ್ಟಮೇಲೆ ಆ ಶರೀರವು ಮಾತ್ರ ನಾಶಹೊಂದುತ್ತದೆ; ಆದರೆ ಆ ಜೀವನೂ, ಮತ್ತು ಆ ಜೀವನನ್ನು ಅಂಟಿಬಂದಿರುವ ಕಾಮವೂ ಬೇರೆ ತಾಯಿಯ ಗರ್ಭದಲ್ಲಿ ರೂಪುಗೊಂಡ ಶಿಶುವಿನ ಹೃದಯಕಮಲವನ್ನು ಪ್ರವೇಶಿಸಿ, ಮಗುವು ಹುಟ್ಟಿದ ಮೊದಲು ಹದಿನಾಲ್ಕು ವರ್ಷ ವಯಸ್ಸಾಗುವವರಿಗೂ ಆ ಕಾಮವು ಶೈಶವದೊಡನೇ ಅಡಗಿದ್ದು, ಬಾಲ್ಯವು ಕಳೆದು ಆ ಶಿಶುವು ಯುವಕನಾದೊಡನೆಯೇ, ಪೂರ್ವಜನ್ಮದಲ್ಲಿ ಮುದುಕನಾಗಿದ್ದಾಗ ಇದ್ದ ಕಾಮಕ್ಕೆ ಈಗ ಯೌವನವು ಬಂದು ಸ್ತ್ರೀಯರಮೇಲೆ ಅಧಿಕವಾದ ಮೋಹವನ್ನಿಡುವಂತೆ ಮಾಡುತ್ತದೆ. ಈ ಕಾಮವು ಇದೇ ರೀತಿಯಲ್ಲಿಯೇ ಜನ್ಮಜನ್ಮಕ್ಕೂ ಜೀವಿಗಳನ್ನು ಹಿಂಬಾಲಿಸುತ್ತ ಬರುವುದರಿಂದಲೇ ಈ ಕಾಮಕ್ಕೆ ಆಸೆಯೆಂಬ ಬೇರು ಪಾತಾಳಲೋಕದವರಿವಿಗೂ ಹಬ್ಬಿದೆ. ಹೀಗೆಯೇ ಉಳಿದ ವಿಷಯಗಳೂ ಜೀವಿಯನ್ನು ಹಿಂಬಾಲಿಸುತ್ತವೆಯೆಂದು ತಿಳಿಯಬೇಕು. ಸರ್ವಥಾ ಇಂತಹ ಕಾಮವು ಈ ಜನ್ಮದಲ್ಲಿ ಹೊಸದಾಗಿ ಹುಟ್ಟಿದುದಲ್ಲ.

ಈ ಕಾಮವನ್ನು ಜಯಿಸಬೇಕೆಂದಿಚ್ಛಿಸಿದರೆ, ಮನಸ್ಸಿನಲ್ಲಿ ಯಾವ ವಿಧವಾದ ಕೋರಿಕೆಗಳೂ ಹುಟ್ಟದಂತೆ ಮಾಡಬೇಕು. ಹೀಗೆ ಕೋರಿಕೆಗಳನ್ನು ತ್ಯಜಿಸಿದರೇ ಕಾಮವನ್ನು ಜಯಿಸುವುದಕ್ಕೆ ಸಾಧ್ಯ. ಇದಕ್ಕೆ ಭಗವದ್ಗೀತೆ 3ನೇ ಅಧ್ಯಾಯ 40ನೇ ಶ್ಲೋಕವು ಪ್ರಮಾಣವು:—

ಶ್ಲೋ ॥ ಇಂದ್ರಿಯಾಣಿ ಮನೋ ಬುದ್ಧಿ ♦ ರಸ್ಯಾಧಿಷ್ಠಾನ ಮುಚ್ಯತೇ ॥
ಏತೈ ರ್ವಿಮೋಹಯ ತ್ಯೇಷ ♦ ಜ್ಞಾನ ಮಾವೃತ್ಯ ದೇಹಿನಂ ॥

ಈ ಕಾಮಕ್ಕೆ ಇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ, ಆಶ್ರಯಸ್ಥಾನಗಳೆಂಬದಾಗಿ ಜ್ಞಾನಿಗಳಿಂದ ಹೇಳಲ್ಪಟ್ಟದೆ. ಪೂರ್ವೋಕ್ತವಾದ ಇಂದ್ರಿಯಾದಿಗಳಿಂದ ಈ ಕಾಮವು ಜ್ಞಾನವನ್ನು ಆವರಿಸಿ, ದೇಹಿಯಾದ ಆತ್ಮನನ್ನು ಮೋಹಗೊಳಿಸುವುದು.

ಶ್ರೀಕೃಷ್ಣ :—ಪಾರ್ಥ! ಪ್ರಪಂಚದಲ್ಲಿ ಪ್ರತಿ ಪುರುಷನಿಗೂ ಇಚ್ಛೆಯೆಂಬುದು ಇದೆಯಲ್ಲವೇ? ಆ ಇಚ್ಛೆಯು ಎಲ್ಲಿ ಹುಟ್ಟುತ್ತದೆಯೆಂಬುದು ನಿನಗೆ ಗೊತ್ತೋ?

ಅರ್ಜುನ:—ಸ್ವಾಮಿ! ಅದು ನನಗೆ ತಿಳಿಯದು, ದಯವಿಟ್ಟು ತಿಳಿಸಬೇಕು.

ಕೃಷ್ಣ :—ಹಾಗಾದರೆ ಆ ವಿಷಯವನ್ನು ತಿಳಿಸುವೆನು. ಗಮನವಿಟ್ಟು ಕೇಳು. ಇಚ್ಛೆಯು ಬುದ್ಧಿಯಲ್ಲಿ ಜನಿಸುತ್ತದೆ. ಈ ಇಚ್ಛೆಯನ್ನು ಅಭಿವೃದ್ಧಿಮಾಡುವುದಕ್ಕೆ ಮನಸ್ಸೇ ಕಾರಣವು. ವಿಷಯೇಚ್ಛೆಯುಂಟಾಗುವಂತೆ ಮಾಡುವವುಗಳು ಇಂದ್ರಿಯಗಳು. ಆದುದರಿಂದ ಇಚ್ಛೆಗೆ ಸ್ಥಾನಗಳು ಇಂದ್ರಿಯಗಳೂ, ಮನಸ್ಸು ಮತ್ತು ಬುದ್ಧಿ ಎಂದು ತಿಳಿಯಬೇಕು. ಜ್ಞಾನವನ್ನು ಬೆಳಗದಂತೆ ಮಾಡುವುದೂ ಕಾಮವೇ. ಇಂದ್ರಿಯ ವ್ಯಾಪಾರಗಳಿಲ್ಲದೆ ಕಾಮವು ಜನಿಸದು. ಅಂದರೆ ಒಂದು ವಸ್ತುವನ್ನು ನೋಡಿದಾಗಲ್ಲವೇ ಅದರಲ್ಲಿ ಇಚ್ಛೆಯುಂಟಾಗುವುದು. ಆ ವಸ್ತುಗಳನ್ನು ನೋಡದಂತೆ ಮಾಡುವುದಕ್ಕಾಗಿ ನೇತ್ರೇಂದ್ರಿಯವು ಇಲ್ಲದಿದ್ದರೆ ಆ ವಸ್ತುವು ಕಾಣುವುದಿಲ್ಲ. ಆಗ ಅದರಮೇಲೆ ಇಚ್ಛೆಯುಂಟಾಗದು. ಅಂತಹ ಇಚ್ಛೆಯು ಯಾವುದರಿಂದ ಹುಟ್ಟುತ್ತದೆ?

ಅರ್ಜುನ:—ಸಂಕಲ್ಪದಿಂದ ಹುಟ್ಟುತ್ತದೆ.

ಕೃಷ್ಣ:—ಹಾಗಾದರೆ, ಸಂಕಲ್ಪಕ್ಕೆ ಸ್ಥಾನವು ಕಾಮವೇ ಅಲ್ಲವೇ?

ಅರ್ಜುನ:—ಹೌದು.

ಕೃಷ್ಣ:—ಆದರೆ, ಒಂದು ವಸ್ತುವಿನಲ್ಲಿ ಇಚ್ಛೆ ಹುಟ್ಟಿದ ಮಾತ್ರ ದಲ್ಲಿಯೇ ಅದನ್ನನುಭವಿಸುವುದು ಯಾವುದು?

ಅರ್ಜುನ:—ಬುದ್ಧಿ.

ಕೃಷ್ಣ:—ಆಗ, ಬುದ್ಧಿಯು ಕಾಮವನ್ನು ಆಶ್ರಯಿಸಿದೆಯಲ್ಲವೇ?

ಅರ್ಜುನ:—ಹೌದು.

ಕೃಷ್ಣ:—ಒಬ್ಬನು ಒಂದು ವಸ್ತುವನ್ನು ಕೋರುತ್ತಾನೆ. ಆ ಕೋರಿದ ವಸ್ತುವು ಸಂಭವಿಸದಿರುವಂತೆ ಮಾಡಿದರೆ ಏನಾಗುತ್ತದೆ?

ಅರ್ಜುನ:—ಆ ವಸ್ತುವು ದೊರಕದಂತೆ ಮಾಡಿದರೆ ಹಾಗೆ ಮಾಡಿ ದಾತನಮೇಲೆ ಕೋಪ ಬರುವುದು.

ಕೃಷ್ಣ:—ಆ ಕೋಪವೇ ಕ್ರೋಧವೆನ್ನಿಸುತ್ತದೆ. ಮನಸ್ಸು, ಬುದ್ಧಿ, ಕಣ್ಣುಗಳು, ಕಿವಿಗಳು, ನಾಲಗೆ, ಮೂಗು, ದೇಹವನ್ನು ಮುಚ್ಚಿರುವ ಚರ್ಮ, ಈ ಐದು ಇಂದ್ರಿಯಗಳೇ ಇಚ್ಛೆಗೆ ಮುಖ್ಯಸ್ಥಾನಗಳೆಂದು ನಿನಗೆ ಈಗ ತಿಳಿಯಿತಲ್ಲವೇ?

ಅರ್ಜುನ:—ಹೌದು, ತಿಳಿಯಿತು.

ಕೃಷ್ಣ:—ಹಾಗಾದರೆ, ಒಂದು ವಸ್ತುವನ್ನು ನೋಡದಿದ್ದಲ್ಲಿ ಅದರ ಮೇಲೆ ಇಚ್ಛೆಯುಂಟಾಗುವುದೋ?

ಅರ್ಜುನ:—ಉಂಟಾಗದು.

ಕೃಷ್ಣ:—ಇಚ್ಛೆಯುಂಟಾಗದಿದ್ದಲ್ಲಿ, ಆ ವಸ್ತುವನ್ನು ಅನುಭವಿಸ ಬೇಕೆಂಬ ಕೋರಿಕೆಯುಂಟಾಗದಲ್ಲವೇ?

ಅರ್ಜುನ :—ಹೌದು, ಉಂಟಾಗದು.

ಕೃಷ್ಣ :—ಮತ್ತು ಅಧ್ಯಾಯ 3, ಶ್ಲೋಕ 41ರ ತಾತ್ಪರ್ಯವನ್ನು ವಿವರಿಸುತ್ತೇನೆ ಕೇಳು.

ಶ್ಲೋ ॥ ತಸ್ಮಾ ತ್ತ್ವ ಮಿಂದ್ರಿಯಾ ಣ್ಯಾದೌ ♦ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ♦ ಜ್ಞಾನವಿಜ್ಞಾನನಾಶನಂ ॥

ಎಲೈ ಭರತಶ್ರೇಷ್ಠನೇ! ಆ ಕಾರಣದಿಂದಲೇ ನೀನು ಇಂದ್ರಿಯಗಳನ್ನು ಮೊದಲು ನಿಗ್ರಹಿಸಿ, ಜ್ಞಾನವಿಜ್ಞಾನಗಳನ್ನು ನಾಶಮಾಡುವಂತಹ ಪಾಪಿಯಾದ ಈ ಕಾಮವನ್ನು ನಾಶಮಾಡು. ಹೀಗೆ ಕಾಮವನ್ನಣಗಿಸುವುದಕ್ಕೆ ನೀನು ಮೊದಲು ಪಂಚೇಂದ್ರಿಯಗಳನ್ನು ಅವುಗಳ ಇಷ್ಟಾನುಸಾರ ಬಿಡದಂತೆ ಮಾಡಬೇಕು. ಹಾಗೆ ಮಾಡಿದ್ದೇ ಆದರೆ ಆ ಇಂದ್ರಿಯಗಳು ದುರ್ವಿಷಯಗಳಲ್ಲಿ ಪ್ರವೇಶಿಸದೆ ನಿಂತುಹೋಗುತ್ತವೆ. ಇಂದ್ರಿಯಗಳು ಹೀಗೆ ನಿಂತಿದ್ದೇ ಆದರೆ ಇಚ್ಛೆಯು ಹುಟ್ಟಲಾರದು. ಇಚ್ಛೆಯು ಹುಟ್ಟದಿದ್ದಲ್ಲಿ ಕೋಪವು ಕೂಡ ತಾನೇ ನಶಿಸಿ ಹೋಗುತ್ತದೆ. ಆದುದರಿಂದ ನೀನು ವಿಷಯಗಳಲ್ಲಿ ಇಂದ್ರಿಯಗಳನ್ನು ಹೋಗಲೀಯದೆ, ಹಿಂದಿರುಗಿಸುತ್ತಿದ್ದರೆ ಆಗ ಇಚ್ಛೆಯನ್ನು ನಿರ್ಮೂಲವನ್ನಾಗಿ ಮಾಡುವವನಾಗುತ್ತಿ.

ಅರ್ಜುನ :—ಓ ಸ್ವಾಮಿ! "ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ" ಎಂಬಂತೆ, "ಇಂದ್ರಿಯಗಳು ಬಹಳ ಬಲಾಢ್ಯವಾದವುಗಳು, ಅವುಗಳು ಬಲಾತ್ಕಾರವಾಗಿ ಮನೋವಿಕಾರವನ್ನುಂಟುಮಾಡುತ್ತವೆ" ಎಂದು ಭಗವದ್ಗೀತೆ 2ನೇ ಅಧ್ಯಾಯ 60ನೇ ಶ್ಲೋಕದಲ್ಲಿ ಹಿಂದೆಯೇ ಹೇಳಿದ್ದೀರಲ್ಲವೇ? "ಅಂತಹ ಇಂದ್ರಿಯಗಳನ್ನು ವಿಷಯಾಸಕ್ತಿಯಲ್ಲಿ ಹೋಗಲೀಯದೆ ಹಿಂದಿರುಗಿಸಿದ್ದೇ ಆದರೆ ಇಚ್ಛೆಯನ್ನು ಜಯಿಸಬಹುದು" ಎಂದು ಈಗ ಹೇಳುತ್ತೀರಿ. ಅಂತಹ ಬಲಿಷ್ಠವಾದ ಇಂದ್ರಿಯಗಳನ್ನು ತಿರುಗಿಸಿಕೊಳ್ಳುವುದಕ್ಕೆ ಉಪಾಯವಾವುದು?

(ಇದರ ಮುಂದಿನ ವಿಷಯಗಳನ್ನು ಈ ಗ್ರಂಥಕರ್ತರಿಂದ ರಚಿತವಾದ ಶ್ರೀ ಭಗವದ್ಗೀತೆಯನ್ನು ನೋಡಿರಿ.)

ಹೀಗೆ ಜನನಮರಣಗಳೂ, ಪುನರ್ಜನ್ಮಗಳೂ ಜೀವಿಗೆ ಕರ್ಮ ವಾಸನೆಯಿಂದುಂಟಾಗುತ್ತವೆ. ಕರ್ಮಗಳೆಲ್ಲಕ್ಕೂ ಕಾಮನೇ ಮುಖ್ಯ. ಆ ಮನ್ಮಥನೇ ಕಣ್ಣಿಗೆ ಕಾಣ್ಬರುವ ಈ ಮಿಥ್ಯಾಪ್ರಪಂಚದ ಸೃಷ್ಟಿಕರ್ತ ನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ವಿಷಯವನ್ನು ಈ ಪ್ರಕರಣದ ಆದಿಯಲ್ಲಿರುವ ಶ್ಲೋಕದಲ್ಲಿ ವಿಶದಪಡಿಸಿದೆ. ಇದು ಕಾಮ ಪ್ರಪಂಚ. ಆ ಕಾಮನ ಉತ್ಪತ್ತಿಸ್ಥಾನವು ಸ್ತ್ರೀಪುರುಷರ ಮನಸ್ಸು. ದುಃಖಕರವಾದ ಮತ್ತು ಜನನ ಮರಣ ರೂಪವಾದ ಈ ಸಂಸಾರಕ್ಕೆ ಕಾಮನೇ ಮೂಲಕಾರಣನು. ಆದುದರಿಂದ ಅಂತಹ ಕಾಮನಿಗೆ ಮನಸ್ಸಿ ನಲ್ಲಿ ಎಡೆಗುಡದಿದ್ದಲ್ಲಿ, ಮನಸ್ಸು ಪರಬ್ರಹ್ಮಸ್ವರೂಪದಲ್ಲಿಯೇ ನಿಂತು ಹೋಗಿ, ಇತರ ವಿಧವಾದ ಕರ್ಮಗಳಿಗೆ ಅವಕಾಶವಿಲ್ಲದುದರಿಂದಲೇ, ಜನನ ಮರಣಾದಿಗಳ ದುಃಖವಿಲ್ಲದಂತೆ ಶಾಶ್ವತವಾದ ಸುಖವನ್ನು ಪಡೆಯ ಬಹುದು. ಸ್ತ್ರೀಪುರುಷರು ಮೇಲೆ ವಿವರಿಸಿದ ಕಾಮನಿಂದಾಗುವ ವಿಪತ್ತು ಗಳನ್ನು ಪರ್ಯಾಲೋಚಿಸಿ, ತಮ್ಮ ಮನಸ್ಸಿನಲ್ಲಿ ಅಂತಹ ಕಾಮನಿಗೆ ಸ್ಥಳವನ್ನು ಕೊಡದೆ, ಶಾಂತಚಿತ್ತರಾಗಿ ಆತ್ಮಧ್ಯಾನ ತತ್ಪರರಾದರೆ ಮೋಕ್ಷ ಸಾಮ್ರಾಜ್ಯವನ್ನು ಸುಲಭೋಪಾಯದಿಂದ ಪಡೆಯಬಹುದೆಂಬುದೇ ಈ ಪ್ರಕರಣದ ಉದ್ದೇಶ.



# ಪುನರ್ಜನ್ಮ ಮತ್ತು ಪೂರ್ವಜನ್ಮ ಸಂಸ್ಕಾರ.

ಅನೇಕ ಜನ್ಮಗಳಿಂದಲೂ ತಮ್ಮ ಜೊತೆಯಲ್ಲಿ ಹಿಂಬಾಲಿಸಿ ಬರು ತ್ತಿರುವ ಕಾಮಕ್ರೋಧಾದಿಗಳೆಂಬ ಇಚ್ಛೆಯನ್ನು ಮನಸ್ಸಿನಿಂದ ತೊಲ ಗಿಸುವುದು ಬಹು ದುರ್ಲಭವಾದದ್ದು. ಏಕೆಂದರೆ ಬ್ರಹ್ಮದೇವನು ನಮ್ಮ ನ್ನು ಸೃಷ್ಟಿಮಾಡಿದ ಮೊದಲು ಈ ಜನ್ಮದವರಿವಿಗೂ ನಾವು ಅನೇಕ ಕೋಟಿ ಜನ್ಮಗಳನ್ನೆತ್ತುತ್ತ, ದೇಹವನ್ನು ಮಾತ್ರವೇ ಬಿಟ್ಟುಬಿಟ್ಟು

ಪುನಃ ಪುನಃ ಹೊಸದೇಹಗಳನ್ನು ಪಡೆಯುತ್ತಿರುತ್ತೇವೆ. ಹೆಂಡತಿ ಮಕ್ಕಳು, ಧನಧಾನ್ಯ ವಸ್ತುವಾಹನಾದಿಗಳು, ಮನೆಗಳು, ಉದ್ಯಾನಗಳು, ಹೊಲಗಳು, ವನಗಳು ಮೊದಲಾದುವುಗಳೆಲ್ಲವೂ ನಮ್ಮ ನಮ್ಮ ಕರ್ಮಕ್ಕೆ ತಕ್ಕಂತೆ ಆಯಾಯಾ ಜನ್ಮಗಳಲ್ಲಿ ಬರುತ್ತಲೇ ಇರುತ್ತವೆ.

ಮೇಲೆ ಹೇಳಿದವುಗಳ ಮೇಲಿರುವ ಆಸೆಯೆಲ್ಲವೂ ಈ ಜನ್ಮದಲ್ಲಿ ಹೊಸದಾಗಿ ಸಂಭವಿಸಿದವುಗಳಲ್ಲವು. ಬಹು ಜನ್ಮಗಳಿಂದ ಜೀವಿಯನ್ನು ಅನುಸರಿಸಿಕೊಂಡು ಬಂದಂಥವುಗಳು. ಈ ಜನ್ಮದಲ್ಲಿ ದೊರಕಿದ ಭಾರ್ಯಾ ಪುತ್ರರಂತೆಯೇ ಹಿಂದೆ ಅನೇಕ ಕೋಟಿ ಜನ್ಮಗಳಿಂದಲೂ ನಮಗೆ ಹೆಂಡತಿಮಕ್ಕಳು ಉಂಟಾಗುತ್ತಲೇ ಇದ್ದಾರೆ. ಆಯಾ ಜನ್ಮಗಳಲ್ಲಿ ಸಂಭವಿಸಿದ ಹೆಂಡತಿಮಕ್ಕಳನ್ನು ತೊರೆದು ಮರಣವನ್ನು ಹೊಂದುತ್ತಾ ಬರುತ್ತಿರಲು, ಪೂರ್ವಜನ್ಮದಲ್ಲಿ ಅವರಮೇಲೆ ಇದ್ದ ಪ್ರೇಮ ಬಂಧವೆಲ್ಲವೂ, ಮರಣಸಮಯದಲ್ಲಿ ಜೀವಿಯೊಡಗೂಡಿ ಹೊರಟು ಬೇರೊಬ್ಬ ತಾಯಿಯ ಗರ್ಭಸ್ಥವಾದ ಶಿಶುದೇಹದೊಳಕ್ಕೆ ಹೋಗಿಸೇರಿ, ಮತ್ತೆ ಆ ಶಿಶುವು ಭೂಮಿಯಮೇಲೆ ಹುಟ್ಟಿದ ಕೂಡಲೇ, ಪೂರ್ವಜನ್ಮದಲ್ಲಿ ತನ್ನನ್ನು ಹೊಂದಿದ್ದ ಆಶಾಪಾಶಗಳೆಲ್ಲವೂ ಆ ಶಿಶುವಿನ ಜೊತೆಯಲ್ಲಿಯೇ ಅಣಗಿದ್ದು ಆ ಶಿಶುವು ಬೆಳೆದ ಹಾಗೆಲ್ಲಾ ಈ ಆಶಾಪಾಶವೂ ಬೆಳೆಯುತ್ತಾ, ಆ ಶಿಶುವಿಗೆ ಯೌವನದೆಸೆ ಬಂದಾಗ, ಶಿಶುವಿನಲ್ಲಿ ಅಡಗಿದ್ದ ಆ ಆಶಾಪಾಶಕ್ಕೂ ಯೌವನವುಂಟಾಗಿ, ಈ ಜನ್ಮದಲ್ಲಿ ತನಗೊದಗಿದ ಹೆಂಡತಿಮಕ್ಕಳಲ್ಲಿಯೂ ಮನೆಮಠಗಳಲ್ಲಿಯೂ ಪ್ರೇಮವು ಜೀರೂರುವುದಕ್ಕೆ ಕಾರಣವಾಗುತ್ತವೆ. ಈ ವಿಷಯವನ್ನು ಮುಂದೆ ವಿವರಿಸಿದೆ.

ಮೇಲೆ ಹೇಳಿದುದಕ್ಕೆ ಒಂದು ದೃಷ್ಟಾಂತವುಂಟು. ಏನೂ ಅರಿಯದ ಕೇವಲ ಪರಬ್ರಹ್ಮಸ್ವರೂಪವಾಗಿ ಉಳ್ಳ ಒಂದು ವರ್ಷ ವಯಸ್ಸುಳ್ಳ ಒಂದು ಮಗುವಿನ ಕೈಯಲ್ಲಿ ಒಂದು ರೂಪಾಯಿಯನ್ನು ಕೊಟ್ಟದ್ದೇ ಆದರೆ ಬಹು ಆತುರದಿಂದ ಆ ಶಿಶುವು ಅದನ್ನು ತೆಗೆದುಕೊಳ್ಳುತ್ತದೆ. ಪುನಃ ಅದನ್ನು ಕೊಡೆಂಬದಾಗಿ ಯಾರು ಕೇಳಿದರೂ ಅದಕ್ಕೆ ಕೊಡಲಿಚ್ಛೆಯಿಲ್ಲದೆ, ಗಟ್ಟಿಯಾಗಿ ಮುಚ್ಚಿಟ್ಟುಕೊಳ್ಳುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅದಕ್ಕೆ ಕಾರಣವೇನಂದರೆ, ಶಿಶುವಾಗಿರುವ ಆ ಜೀವಿಯು,

ಹಿಂದಿನ ಜನ್ಮದಲ್ಲಿ ಧನಾರ್ಜನೆಯನ್ನು ಮಾಡಿ ಅದನ್ನು ಅನುಭವಿಸುತ್ತ ಬರುತ್ತಿದ್ದುದರಿಂದ, ಆ ಧನಾಶೆಯೆಂಬುದು, ಮೃತಿಹೊಂದಿದಾಗ, ಸೂಕ್ಷ್ಮ ಶರೀರದಿಂದಲೇ ಜೀವನನ್ನು ಹಿಂಬಾಲಿಸಿ ಬರುತ್ತಿರುತ್ತದೆ. ಇಂತಹ ಆಶಾಪಾಶದ ಜೊತೆಯಲ್ಲಿ, ಆತ್ಮನು ಪ್ರತಿ ಶರೀರವನ್ನೂ ಪ್ರವೇಶಿಸಿ ಜೀವಿಗಳು ಮಾಡುವ ಕರ್ಮಗಳೆಲ್ಲಕ್ಕೂ ಸಾಕ್ಷಿಭೂತನಾಗಿದ್ದು, ಆಯಾ ಕರ್ಮಗಳಿಗೆ ತಕ್ಕಂತೆ ಸುಖದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಈ ಆತ್ಮನು, ಪರಮಾತ್ಮನಲ್ಲಿ ಅಣುಸ್ವರೂಪನಾಗಿ ಸಕಲ ಜೀವಿಗಳಲ್ಲಿಯೂ ತುಂಬಿ, ಹಿಂದಿನ ಜನ್ಮದಲ್ಲಿ ಮಾಡುತ್ತ ಬರುತ್ತಿರುವ ಕರ್ಮಗಳನ್ನೇ ಮರುಜನ್ಮದಲ್ಲಿಯೂ ಕೂಡ ಮಾಡಿಸುತ್ತ ಬರುತ್ತಾನೆ. ಇದಕ್ಕೆ ಒಂದು ದೃಷ್ಟಾಂತವನ್ನು ಈ ಕೆಳಗೆ ಕೊಟ್ಟಿದೆ.

ಒಬ್ಬ ಮನುಷ್ಯನಿಗೆ ಇಬ್ಬರು ಗಂಡುಮಕ್ಕಳು ಅವರಲ್ಲಿ ದೊಡ್ಡವನು ಬಹುಶ್ರದ್ಧೆಯಿಂದ ತನ್ನ ಪಾಠಗಳನ್ನು ಹಗಲೂ ಇರುಳೂ ಓದುತ್ತಾ, ಆಟಪಾಟಗಳಲ್ಲಿ ಬುದ್ಧಿಯನ್ನು ಹೋಗಲೀಯದೆ ವಿದ್ಯಾವ್ಯಾಸಂಗದಲ್ಲಿಯೇ ಹೆಚ್ಚು ಆಸಕ್ತಿಯನ್ನಿಟ್ಟಿದ್ದನು. ಚಿಕ್ಕವನಾದರೋ, ವಿದ್ಯಾಭ್ಯಾಸದಲ್ಲಿ ಆಸಕ್ತಿಯಿಲ್ಲದೆ ಮನಸ್ಸುಬಂದಾಗ ಸ್ವಲ್ಪ ಹೊತ್ತು ಓದುತ್ತಾ ಉಳಿದ ಕಾಲವನ್ನು ಆಟವಾಡುವುದರಲ್ಲೇ ಕಳೆಯುತ್ತಿದ್ದನು. ಪರೀಕ್ಷೆಯ ಸಮಯವು ಒದಗಿದಾಗ, ಹಗಲೂ ರಾತ್ರಿಯೂ ಓದುತ್ತಿದ್ದ ದೊಡ್ಡವನು ಪರೀಕ್ಷೆಯಲ್ಲಿ ಕೊಟ್ಟ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆಯುವುದಕ್ಕೆ ತೋಚದೆ ಅದರಲ್ಲಿ ತೇರ್ಗಡೆಯಾಗದೆ ಹೋದನು. ಎರಡನೆಯವನಾದರೋ ತಾನು ಸ್ವಲ್ಪವಾಗಿ ವ್ಯಾಸಂಗಮಾಡಿದ್ದರೂ ಮಾಡಿದ್ದನ್ನು ತನ್ನ ಸೂಕ್ಷ್ಮಬುದ್ಧಿಯಿಂದ ಗ್ರಹಿಸಿದ್ದನಾದುದರಿಂದಲೇ ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಸದುತ್ತರಗಳನ್ನು ಬರೆದು ತೇರ್ಗಡೆಯನ್ನು ಹೊಂದಿದನು.

ಮೇಲೆ ಹೇಳಿದ ವೈಪರೀತ್ಯಕ್ಕೆ ಕಾರಣವೇನೆಂದು ಕೇಳಿದರೆ, ಜ್ಯೇಷ್ಠನಿಗೆ ಹಿಂದಿನ ಜನ್ಮದಲ್ಲಿನ ವಿದ್ಯಾಸಂಸ್ಕಾರವು ಕಡಮೆಯಾಗಿದ್ದಿತು. ಆದುದರಿಂದ ಎಷ್ಟು ವ್ಯಾಸಂಗಮಾಡಿದರೂ ಬುದ್ಧಿಗೆ ಹತ್ತಲಿಲ್ಲ. ಈ ಜನ್ಮದಲ್ಲಿ ವಿದ್ಯಾಭ್ಯಾಸಕ್ಕೆ ಬಹಳ ಪ್ರಯತ್ನವು ನಡೆಯಿತು. ಇದರ ಫಲವು ಮುಂದಿನ ಜನ್ಮದಲ್ಲಿ ಅವನಿಗೆ ಲಭಿಸುತ್ತದೆ. ಈ ಜನ್ಮದಲ್ಲಿ ಚುರು

ಕಾಗಿ ವಿದ್ಯೆಯು ಬುದ್ಧಿಗೆ ಹತ್ತದಿರಲು ಪೂರ್ವಜನ್ಮದಲ್ಲಿ ವಿದ್ಯಾಸಕ್ತಿಯು ಹೆಚ್ಚಾಗಿರದಿರುವುದೇ ಕಾರಣವೆಂದು ತಿಳಿಯಬೇಕು. ಕನಿಷ್ಠನಿಗಾದರೋ, ತಾನು ಹಿಂದಿನ ಜನ್ಮದಲ್ಲಿ ಒಳ್ಳೆಯ ವಿದ್ಯಾವಂತನಾಗಿದ್ದುದರಿಂದಲೇ, ಆ ಪೂರ್ವಜನ್ಮದ ವಾಸನಾಬಲಿಯದಿಂದ, ಈ ಜನ್ಮದಲ್ಲಿ ವ್ಯಾಸಂಗವು ಅಲ್ಪವಾಗಿದ್ದರೂ ವಿದ್ಯೆಯು ಬುದ್ಧಿಗೆ ಚನ್ನಾಗಿ ಹತ್ತಿ ಪರೀಕ್ಷೆಯಲ್ಲಿ ತೇರ್ಗಡೆಯಾಗುವಂತೆ ಮಾಡಿತು. ಹೀಗೆಯೇ ನಮ್ಮ ಅವಗಾಹನೆಗೆ ಬಂದಂಥ ದೃಷ್ಟಾಂತಗಳು ಅನೇಕವಿವೆ. ಕೆಲವು ಮಕ್ಕಳು ಬಾಲ್ಯದಲ್ಲಿಯೇ ತಮ್ಮ ಅದ್ಭುತಶಕ್ತಿಯನ್ನು ತೋರಿಸಿವೆ. ಕೆಲವರು ಸಂಗೀತದಲ್ಲಿಯೂ, ಕೆಲವರು ಗಣಿತಶಾಸ್ತ್ರದಲ್ಲಿಯೂ, ಕೆಲವರು ಚಿತ್ರಲೇಖನ ಮೊದಲಾದ ಕಲೆಗಳಲ್ಲಿಯೂ ನೈಪುಣ್ಯವನ್ನು ಹೊಂದಿರುತ್ತಾರೆ. ಮತ್ತೆ ಕೆಲವರು, ಬಾಲ್ಯದಿಂದಲೂ ಒಂದೇ ಸಮನಾಗಿ ಯಾವುದಾದರೊಂದು ವಿದ್ಯೆಯನ್ನು ಅಭ್ಯಸಿಸಿದರೂ ಅವರ ಮೆದುಳಿಗೆ ಅದು ನಾಟದೆ ಹಾಳಾಗುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇದಕ್ಕೆ ಪೂರ್ವಜನ್ಮಸಂಸ್ಕಾರವೆಂದು ಹೇಳಬೇಕೇ ಹೊರತು ಮತ್ತೆ ಬೇರಿಲ್ಲ. ಕೆಲವರು ಬಾಲ್ಯದಿಂದಲೇ ಅಂದರೆ ತಾವು ಈ ಜನ್ಮದಲ್ಲಿ ಹೆಚ್ಚಾಗಿ ವಿದ್ಯಾಪರಿಶ್ರಮವನ್ನು ಹೊಂದುವುದಕ್ಕೆ ಮುಂಚೆಯೇ ನಿರರ್ಗಳವಾದ ಕವಿತಾಪ್ರೌಢಿಮೆಯನ್ನು ತೋರಿಸಿರುತ್ತಾರೆ. ಪೂರ್ವಜನ್ಮದ ಸಂಸ್ಕಾರಬಲಿಯವಿಲ್ಲದಿದ್ದರೆ ಇವೆಲ್ಲವೂ ಹೇಗೆ ಸಾಧ್ಯವಾದೀತು? ಷೇಕ್ಸ್‌ಪಿಯರ್, ಮಿಲ್ಟನ್, ಕೀಟ್ಸ್, ಷೆಲ್ಲಿ ಮೊದಲಾದ ಪಾಶ್ಚಾತ್ಯಕವಿಗಳೂ, ಕಾಳಿದಾಸ, ಭವಭೂತಿ, ಶಂಕರಾಚಾರ್ಯ ಮೊದಲಾದ ಹಿಂದೂದೇಶದ ಪ್ರಾಚೀನ ಕವಿಗಳೂ ಚಿಕ್ಕವಯಸ್ಸಿನಲ್ಲಿಯೇ ಕವಿವರ್ಯರೆನಿಸಿಕೊಂಡರು. ಇದಕ್ಕೆ ಕಾರಣವೇನು? ಇದು ಅವರು ಪೂರ್ವಜನ್ಮದಲ್ಲಿ ಮಾಡಿದ್ದ ಸತ್ಕರ್ಮಗಳ ಫಲ ಅಂದರೆ ಪೂರ್ವಜನ್ಮ ವಾಸನಾ ಬಲಿಯ.

## 'ಶಾಂತಿದೇವಿ'ಯ ಕಥೆ.

ಕೆಲವು ದಿನಗಳ ಹಿಂದೆ ಉತ್ತರ ಹಿಂದೂಸ್ಥಾನದ ಡೆಲ್ಲಿ ನಗರದಲ್ಲಿ ಒಂಭತ್ತು ವರ್ಷ ವಯಸ್ಸಿನ 'ಶಾಂತಿದೇವಿ' ಯೆಂಬ ಹೆಸರಿನ ಒಬ್ಬ

ಚಿಕ್ಕ ಹುಡುಗಿಯು ಸಾಧಾರಣವಾಗಿ ಮಾನವರಿಗೆ ದುರ್ಲಭವೆನಿಸಿದ ತನ್ನ ಪೂರ್ವಜನ್ಮದ ಸಂಪೂರ್ಣಜ್ಞಾನವನ್ನು ಪಡೆದು, ತಾನು ಆ ಜನ್ಮದಲ್ಲಿ ಅನುಭವಿಸಿದವುಗಳೆಲ್ಲವನ್ನೂ ಕಣ್ಣೆದುರಿಗೆ ನಡೆದಂತೆ ತಿಳಿದವಳಾಗಿ ಪ್ರತಿಯೊಂದು ವಿಷಯವನ್ನೂ ಉಪನ್ಯಾಸಪೂರ್ವಕವಾಗಿ ಅನೇಕ ಸಭೆಗಳಲ್ಲಿ ತಿಳಿಸಿರುತ್ತಾಳೆ. ಈಕೆಯು ಹೇಳಿದ ತನ್ನ ಪೂರ್ವಜನ್ಮದ ಅನುಭವಗಳ ವಿಷಯಗಳೆಲ್ಲವನ್ನೂ ಪರೀಕ್ಷಿಸಿದ ಮಹಾತ್ಮರು ಅವೆಲ್ಲವೂ ನಿಜವೆಂದು ನಿರ್ಧರಿಸಿ, "ಪೂರ್ವಜನ್ಮವುಂಟು, ಆ ಜನ್ಮದ ವಾಸನೆಯು ಪ್ರತಿ ಜೀವಿಗೂ ಹೆಚ್ಚೋ ಕಡಿಮೆಯೋ ಇದ್ದೇ ಇರುತ್ತದೆ" ಎಂದು ನಿರ್ಧರಿಸಿರುತ್ತಾರೆ. ಮೇಲೆ ಹೇಳಿದ ಶಾಂತಿದೇವಿಯ ಚಿತ್ರಪಠವನ್ನು ಇಗೋ ☞ ಈ ಮುಂಭಾಗದಲ್ಲಿ ಕಾಣಿಸಿದೆ.



ಸಂಪೂರ್ಣವಾಗಿ
ಪೂರ್ವಜನ್ಮ ಸ್ಮರಣೆಯುಳ್ಳ
'ಶಾಂತಿದೇವಿ' ಎಂಬ
9–ವರ್ಷದ ವಯಸ್ಸಿನ ಬಾಲೆ.

'ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ' ವೆಂಬ ಈ ಗ್ರಂಥದಲ್ಲಿ ಶ್ರೀ ಪರಮಹಂಸಸಚ್ಚಿದಾನಂದ ಯೋಗೀಶ್ವರರು ಮೊದಲೇ ತೆಲುಗಿನಲ್ಲಿ ಸ್ಪಷ್ಟಪಡಿಸಿರುವ ಜನ್ಮರಹಸ್ಯದ ವಿಷಯವನ್ನು ಕನ್ನಡಭಾಷೆಯಲ್ಲಿ ಮುದ್ರಣಮಾಡುವ ಸಮಯಕ್ಕೆ ಸರಿಯಾಗಿ, ಮೇಲೆ ಹೇಳಿದ 'ಶಾಂತಿದೇವಿಯ' ಸಮಾಚಾರವನ್ನು ಕುರಿತು ಬೇರೆಬೇರೆ ವೃತ್ತಪತ್ರಿಕೆಗಳು ತಮ್ಮತಮ್ಮ

ಅಭಿಪ್ರಾಯಗಳನ್ನು ಪ್ರಕಟಿಸಿದವು. ಅವೆಲ್ಲವನ್ನೂ ದೃಷ್ಟಾಂತಕ್ಕಾಗಿ ಆಧಾರಗಳೊಡನೆ ಈ ಕೆಳಗೆ ಎತ್ತಿ ಬರೆದಿದೆ. ಮೇಲೆಹೇಳಿದ ಶಾಂತಿದೇವಿಯ ಚಿತ್ರಪಠಗಳನ್ನೂ ವೃತ್ತಪತ್ರಿಕೆಗಳಿಂದಲೇ ತೆಗೆದು ಇಲ್ಲಿ ಮುದ್ರಿಸಿದೆ.

---

## "Extracts from Newspapers".

*The Indian Express, Wednesday 20th Nov. 1935.*

---

# Eight-year old Girl Recalls past Life.

### 'Husband' Identified! Delhi Senstation.

The strange case of an eight-year-old girl remembering the incidents of her former existance has been brought to light here. The girl in question **"Santa,"** is the daughter of one **"Lala Jung Bahadur of Chira Khana."**

It appears that, ever since she could talk, she used to say that, in her former existance, she was married to a man at Muttra, whose address she gave. Recently her people communicated this fact to her alleged husband in her past life in Muttra and he sent his younger brother whom she identified as soon as she saw him. To-day her **'husband'** came from Muttra and she recognised him also and told him facts which were known only either to him or to his former wife. Incidentally, she also told him that she had

buried Rs. 100 at a certain place in their house for the purpose of offering it to a Goddess should the child, on whose birth she died, survived. That child is now eleven years old.

The girl explains that, before being born in Delhi, she was born at another place and died when she was 2½ years old.

The 'husband' has gone back to Muttra to look for the buried treasure. U. P.

---

ಮೇಲ್ಕಂಡ ಇಂಗ್ಲಿಷ್ ಲೇಖನದ, ದಕ್ಷಿಣ ಇಂಡಿಯಾದಲ್ಲಿರುವ ಮೈಸೂರು ಶ್ರೀಮನ್ಮ ಮಹಾರಾಜರವರ ದೇಶಕ್ಕೆ ಸೇರಿದ, ಬೆಂಗಳೂರು ಪಟ್ಟಣದಲ್ಲಿರುವ, "**ನವಜೀವನ**" ಎಂಬ ಪತ್ರಿಕೆಯಲ್ಲಿ, 1935 ನೇ ವರ್ಷ, ನವಂಬರು 21 ನೇ ತಾರೀಖಿನಲ್ಲಿ ಪ್ರಕಟವಾಗಿದೆ.

---

## ಪೂರ್ವಜನ್ಮ ಸ್ಮರಣ ವೈಚಿತ್ರ್ಯ.

---

### ಎಂಟು ವರ್ಷದ ಹುಡುಗಿಯು ಪೂರ್ವಜನ್ಮದ ಗಂಡನನ್ನು ಗುರ್ತಿಸಿದಳು.

1935ನೇ ವರ್ಷ, ನವಂಬರ್ 19ನೇ ತಾರೀಖಿನಲ್ಲಿ, ನವದೆಹಲಿ, ಯುನೈಟೆಡ್ ಪ್ರೆಸ್ಸಿನಲ್ಲಿ, ಮುದ್ರಿತವಾಗಿದೆ.

ಅತಿವಿಚಿತ್ರವಾದ ಒಂದು ಸಂಗತಿ ನಡೆಯಿತು. ಎಂಟುವರ್ಷದ ಹುಡುಗಿಯೊಬ್ಬಳು ತನ್ನ ಪೂರ್ವಜನ್ಮದ ವೃತ್ತಾಂತವನ್ನೆಲ್ಲಾ ವಿಶದವಾಗಿ

ತಿಳಿಸಿದಳು. ಅವಳಿಗೆ ಆಗ್ಗೆ ಸಂಬಂಧಪಟ್ಟ ಕುಟುಂಬಗಳೆಲ್ಲರೂ ಪ್ರತ್ಯಕ್ಷ ದಲ್ಲಿ ಬಂದು ಈ ಅತಿಶಯಗಳಲ್ಲಿ ಭಾಗಿಗಳಾದರು.

ಈ ಹುಡುಗಿಯು ಚಿತ್ರಖಾನದಲ್ಲಿ **ಲಾಲಾಜಂಗ್ ಬಹದ್ದೂರ್ ಎಂಬಾತನ ಮಗಳು.** ತನ್ನ ಪೂರ್ವಜನ್ಮದ ವೃತ್ತಾಂತವನ್ನೆಲ್ಲಾ ಮಾತಾಡುವಳು. ಹುಡುಗಿಯ ಹೆಸರು **ಶಾಂತಾ.** ಹಿಂದೆ ಅವಳು ಮಥುರಾದಲ್ಲಿ ಒಬ್ಬನನ್ನು ಮದುವೆಯಾಗಿದ್ದಳಂತೆ. ಅವನ ಅಡ್ರೆಸ್ಸನ್ನು ಕೊಟ್ಟಳು. ಈಚೆಗೆ, ಅವಳ ಮನೆಯವರು, ಅವಳ ಪೂರ್ವ ಸಂಬಂಧಿಗಳಿಗೆ ಈ ವಿಚಾರವನ್ನು ತಿಳಿಸಿದರು. ಮಥುರಾದಿಂದ ಅವಳ ಹಿಂದಿನ ಗಂಡನು ತನ್ನ ತಮ್ಮನನ್ನು ಹುಡುಗಿಯಲ್ಲಿಗೆ ಕಳುಹಿಸಿದನು. ಅವನು ಬಂದ ಕೂಡಲೇ ಅವನನ್ನು ಹುಡುಗಿಯು ಗುರುತಿಸಿದಳು. ಈ ದಿನ ಅವಳ 'ಗಂಡ' ನು ಬರುತ್ತಲೇ ಅವನನ್ನೂ ಗುರುತಿಸಿದಳು; ಮತ್ತು ಅವನಿಗೂ ಮತ್ತೆ ಅವನ ಹೆಂಡತಿಗೂ ತಿಳಿದಿದ್ದ ಅನೇಕ ವಿಷಯಗಳನ್ನು ಹೇಳಿದಳು. ಅವಳು ಒಂದು ಮಗುವನ್ನು ಹಡೆದು ಸತ್ತುಹೋಗಿದ್ದಳು. ಅದು ಬದುಕಿಕೊಂಡರೆ ಒಂದುನೂರು ರೂಪಾಯಿಗಳನ್ನು ತಮ್ಮ ಕುಲದೇವತೆಗೆ ಕಾಣಿಕೆ ಸಲ್ಲಿಸುವುದಾಗಿ ಹರಕೆ ಹೊತ್ತು ಆ ಮುಡುಪನ್ನು ಭೂಮಿಯಲ್ಲಿ ಹುದುಗಿಟ್ಟಿದ್ದಳು. ಆ ಮಗುವಿಗೆ ಈಗ ಹನ್ನೊಂದು ವರ್ಷ ವಯಸ್ಸು.

'ಗಂಡ' ನು ಈಗ ಮಥುರಾದಲ್ಲಿ ತನ್ನ ಮನೆಯಲ್ಲಿ ಹುದುಗಿಟ್ಟಿದ್ದ ಹಣವನ್ನು (100 ರೂಪಾಯಿ) ಪತ್ತೆಮಾಡಲು ಹೋಗಿರುವನು.

ಇಲ್ಲಿ ಹುಟ್ಟುವುದಕ್ಕೆ ಮುಂಚೆ ಮತ್ತೊಂದು ಕಡೆ ಹುಟ್ಟಿದ್ದಳೆಂದೂ ೨॥ ವರ್ಷದವರೆಗಿದ್ದು ಅಲ್ಲಿ ಸತ್ತುಹೋದಳೆಂದೂ ಹೇಳುತ್ತಾಳೆ.

ಶಾಂತಿದೇವಿಯು ತನ್ನ ಪೂರ್ವಜನ್ಮದ ಪತಿಯೊಡನೆ ಕೂಡಿ ತೆಗೆದ ಛಾಯಾಚಿತ್ರವನ್ನು ಇಗೋ ☞ ಈ ಮುಂಭಾಗದಲ್ಲಿ ಕಾಣಿಸಿದೆ.



**ಶಾಂತಿದೇವಿ ಮತ್ತು ಆಕೆಯ ಪೂರ್ವಜನ್ಮದ ಪತಿ.**

*(From the Hindu of 27th Nov. 1935).*

*The Hindu, 30th Nov. 1935.*

# Delhi girl prodigy. Public Meeting.

(ASSOCIATED PRESS OF INDIA).

*New Delhi, 29th Nov. 1935.*

In order to enable the public to see 'Santi devi' the nine-year-old daughter of **Rangabahadur Mathur,** who has been recalling her past life, and be acquainted with the account she has been giving and which was verified by taking her to Muttra on November 24, where, she said, she was born, married and died in her previous life. A public meeting was convened at Queen's Gardens, where about 15,000 people had turned up, including a record number of women. Captain Mulsingh presided.

Mr. Nakiram Sharma, Desabandhu Gupta, Mr. Tarachand and Mr. Mathar addressed the gathering, relating the facts and explaining that the case was genuine.

A photo of the above girl **Santi Davi** with that of **Mr. Pandit Kedarnath Chabe,** her husband of her former birth, has appeared in the Hindu of 27-11-35 with the following statement—

"Santi Devi, the 9-year-old New Delhi girl, who is able to recall her past life. With her, is Pandit Kedarnath Chabe of Muttra, who, the girl claims, was her husband in her past birth"—K. R.



**"ವಿಶ್ವಕರ್ಣಾಟಕ" ಡಿಶಂಬರ್ 15, 1935.**

# ಪೂರ್ವಜನ್ಮದ ಜ್ಞಾನವಿರುವುದು ನಿಜ.

---

ದೆಹಲಿಯಲ್ಲಿ 'ಶಾಂತಾ' ಎಂಬ ಹುಡುಗಿಗೆ ಪೂರ್ವಜನ್ಮ ಜ್ಞಾನವಿದೆಯೆಂದು ತಿಳಿಸಿತ್ತಷ್ಟೆ. ಆ ವಿಚಾರವಾಗಿ ಮತ್ತಷ್ಟು ಸ್ವಾರಸ್ಯವಾದ, ವಿಸ್ಮಯಕರವಾದ ಸುದ್ದಿಗಳು ಬರುತ್ತಿವೆ.

ಆಕೆಯ ಪೂರ್ವಜನ್ಮದ ಗಂಡನು ದೆಹಲಿಗೆ ಬಂದು ಹೋದಮೇಲೆ, 'ತೇಜ್' ಪತ್ರಿಕೆಯ ವ್ಯವಸ್ಥಾಪಕರು ಆ ಹುಡುಗಿಯನ್ನೇ ಮುತ್ರಾಕ್ಕೆ ಕರೆದುಕೊಂಡು ಹೋದರು. ಈ ಜನ್ಮದಲ್ಲಿ ಆ ಹುಡುಗಿಯು ಮುತ್ರಾವನ್ನು ಕಂಡೇ ಇರಲಿಲ್ಲ. ಆದರೂ ಮುತ್ರಾವನ್ನು ಪ್ರವೇಶಮಾಡಿದೊಡನೆಯೇ ಆ ನಗರದಲ್ಲಾದ ವ್ಯತ್ಯಾಸಗಳನ್ನೆಲ್ಲಾ ಇಷ್ಟೂ ಸುಳ್ಳಿಲ್ಲದೆ ಹೇಳಿಬಿಟ್ಟಳು. ಇದನ್ನು ಕಂಡು ನೆರೆದ ಜನರು ಮುಗ್ಧರಾಗಿದ್ದಾಗ, ಶಾಂತಳು ಆ ಗುಂಪಿನಲ್ಲಿದ್ದ ತನ್ನ ಪೂರ್ವಜನ್ಮದ ಭಾವಂದಿರನ್ನೂ, ಭಾವಮೈದಂದಿರನ್ನೂ, ಮಾವಂದಿರನ್ನೂ ಅರೆಕ್ಷಣದಲ್ಲಿ ಗುರುತು ಹಿಡಿದಳು.

ಕಡೆಗೆ ಅವಳು ಮನೆಯನ್ನು ಹೊಕ್ಕಳು. ಆ ಮನೆಯ ಯಾಜಮಾನ್ಯವನ್ನು ನಡೆಸುವವರಿಗಿಂತಲೂ ಹೆಚ್ಚಾಗಿ ಎಲ್ಲಾ ಸಂದಿಗೊಂದಿಗಳ ವಿಷಯವನ್ನು ತಿಳಿಸುತ್ತ ಬಂದಳು. ಆಕೆಯಿದ್ದಾಗ, ಒಂದುಕಡೆ ಭಾವಿಯಿತ್ತೆಂದು ತೋರಿಸಿದಳು. ಇದು ವಾಸ್ತವ. ಈಗ ಅದನ್ನು ಮುಚ್ಚಿಬಿಟ್ಟಿದ್ದಾರೆ. ಅನಂತರ ಸುಖಪ್ರಸವವಾದರೆ ಮಹಾಮಾತೆಗೆಂದು ನೂರು ರೂಪಾಯಿಗಳ ಮುಡುಪನ್ನು ಬೈಚಿಟ್ಟಿದ್ದ ಸ್ಥಳವನ್ನು ಗುರುತಿಸಿದಳು. ಅಲ್ಲಿ ಅಗೆದು ನೋಡುವಲ್ಲಿ ಹಣ ಬೈಚಿಟ್ಟಿದ್ದ ಚಿಹ್ನೆಗಳೂ, ಅದನ್ನು ಯಾರೋ ತೆಗೆದುಕೊಂಡಿರುವುದೂ ಗೊತ್ತಾಯಿತು. ಶಾಂತಳು ಮುತ್ರಾವನ್ನು ಬಿಡುವವರಿವಿಗೂ ತನ್ನ ಹಿಂದಿನ ಜನ್ಮದ ಮಗನನ್ನು ಒಂದು ಗಳಿಗೆಯೂ ಬಿಟ್ಟಿರುತ್ತಿರಲಿಲ್ಲ.

ಆಕೆಗೆ ಪೂರ್ವಜನ್ಮ ಜ್ಞಾನವಿರುವುದು ಸಪ್ರಮಾಣವಾಗಿ ನಿಜವೆಂದು ಅದನ್ನು ಕಂಡ ಪುರಪ್ರಮುಖರು ಒಂದು ಹೇಳಿಕೆಯನ್ನು ಪ್ರಕಟಿಸಿರುತ್ತಾರೆ.

---

ಮೇಲೆಹೇಳಿದ ಶಾಂತಿದೇವಿಯ ವೃತ್ತಾಂತದ ಜೊತೆಗೆ ಮತ್ತೊಂದು ಹುಡುಗಿಯೂ, ತನಗೆ ನಾಲಕ್ಕು ವರ್ಷ ಕೂಡ ತುಂಬದಿದ್ದರೂ, ತನ್ನ ಪೂರ್ವಜನ್ಮ ವೃತ್ತಾಂತವನ್ನು ಘಂಟಾಘೋಷವಾಗಿ ಹೇಳಿರುತ್ತಾಳೆ. ಆಕೆಯ ಭಾವಚಿತ್ರವು ದೊರಕದಿದ್ದರೂ ಆಕೆಯ ವಿಷಯವಾಗಿ ವೃತ್ತಪತ್ರಿಕೆಯೊಳಗಿನ ಅಭಿಪ್ರಾಯವನ್ನು ಈ ಕೆಳಗೆ ಎತ್ತಿ ಬರೆದಿದೆ.

---

**ತಾಯಿನಾಡು 28 ಮಾರ್ಚಿ 1936.**

## ಪೂರ್ವಜನ್ಮ ಸ್ಮರಣೆಯ ಮತ್ತೊಂದು ಹುಡುಗಿ.

---

ಒಂಭತ್ತು ವರ್ಷ ವಯಸ್ಸಿನ ಶಾಂತಿದೇವಿಯೆಂಬ ಡೆಲ್ಲಿನಗರದ ಕುಮಾರಿಯು ತನ್ನ ಪೂರ್ವಜನ್ಮದ ವೃತ್ತಾಂತಗಳನ್ನೆಲ್ಲಾ ಹೇಳುವುದರಲ್ಲಿ ಜಗದ್ವಿಖ್ಯಾತಳಾಗಿರುವಳು. ಈಗ ಮತ್ತೊಂದು ಹುಡುಗಿಯ ಕಥೆಯು ತಿಳಿಯಬಂದಿದೆ. ಆಕೆಗೆ ನಾಲಕ್ಕೇ ವರ್ಷ ವಯಸ್ಸು. ಆಕೆಯ ತಂದೆಯು 'ಭಗವತಿ' ಎಂದು ಆಕೆಗೆ ಹೆಸರಿಟ್ಟನು. ಆ ಹೆಸರು ಬೇಡವೆಂದೂ ತನ್ನ ಹೆಸರು 'ಶಾಂತಿದೇವಿ' ಎಂದೂ ಹೇಳಿದಳು. ಮತ್ತು ತನ್ನ ಪೂರ್ವಜನ್ಮದ ವಿಷಯವಾಗಿ ಈ ಕೆಳಗೆ ಕಂಡ ಅಂಶವನ್ನೂ ತಿಳಿಸಿದಳು:— ಪಾತೇಫುಡದ ಸಮೀಪದಲ್ಲಿ ಭೋಲ್‌ಪುರ ಗ್ರಾಮದಲ್ಲಿ ಆಕೆಗೆ ಮದುವೆಯಾಗಿತ್ತು. ಮೂರು ಮಕ್ಕಳಿದ್ದವು. ಅನಂತರ ಸತ್ತುಹೋದಳು. ಈ ಹುಡುಗಿಯನ್ನು ಮೇಲ್ಕಂಡ ಗ್ರಾಮಕ್ಕೆ ಕರೆದುಕೊಂಡು ಹೋಗಲು ತನ್ನ ಹಳೆಯ ಮನೆಯನ್ನು ಗುರ್ತಿಸಿ ಸಂತೋಷದಿಂದ ಒಳಕ್ಕೆ ಹೋದಳು. ಆ ಊರಿನ ಬಾಲಿಕಾಶಾಲೆಯಲ್ಲಿ ಈಗ ಉಪಾಧ್ಯಾಯಿನಿಯಾಗಿರುವ 'ಗಂಗಾ

ದೇವಿ' ಎಂಬ ತನ್ನ ಮಗಳನ್ನು ಕರೆದಳು. ಪೋಸ್ಟ್ ಆಫೀಸಿನಲ್ಲಿ ನೌಕರನಾಗಿರುವ 33 ವರ್ಷ ವಯಸ್ಸಿನ 'ರಾಮಕೃಷ್ಣ' ಮತ್ತು ರೈಲ್ವೇಯಲ್ಲಿರುವ 'ಪಟ್ಟೂಲಾಲ್' ಎಂಬುವ ತನ್ನ ಮಕ್ಕಳನ್ನೂ ಕರೆದಳು. ಎಲ್ಲರೂ ಆಶ್ಚರ್ಯಪಟ್ಟರು. ಆಕೆಯನ್ನು ಪರೀಕ್ಷಿಸಲು ಹಾಕಿದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟಳು. ಬಂಧುಬಾಂಧವರನ್ನೆಲ್ಲಾ ಗುರುತಿಸಿದಳು. ಈಗಿನ ತಂದೆತಾಯಿಗಳೊಡನೆ ಇರಲು ಇಷ್ಟಪಡುವುದಿಲ್ಲ. ಬಹಳವಾಗಿ ಅಳುತ್ತಾಳೆ. ಏಕೆಂದರೆ ಅವರು ಕೀಳು ಜಾತಿಯವರೆಂದು ತಿಳಿದುಕೊಂಡಿರುತ್ತಾಳೆ. ತನ್ನ ಮಕ್ಕಳನ್ನು ನೋಡಲು ಭೋಲ್‌ಪುರಕ್ಕೆ ಇದ್ದಕ್ಕಿದ್ದ ಹಾಗೆಯೇ ಓಡಿ ಹೋಗುತ್ತಾಳೆ. 60 ವರ್ಷ ವಯಸ್ಸಾಗಿದ್ದಾಗ ಆಕೆಯು ಮೃತಪಟ್ಟಳು. ಅವಳು ಸತ್ತು ಈಗ 4½ ವರ್ಷಗಳಾದವು. ಈಗ ಆಕೆಯು ಹುಟ್ಟಿ 3 ವರ್ಷ 8 ತಿಂಗಳಾದವು. ಈ ಹತ್ತು ತಿಂಗಳೂ ಆಕೆ ಎಲ್ಲಿದ್ದಳೆಂಬುದೇ ಪ್ರಶ್ನೆ. (ಸಾಧ್ವಿ.)

---

ಇದೂ ಅಲ್ಲದೆ ಈಗ್ಗೆ ಸುಮಾರು 6 ವರ್ಷಗಳ ಹಿಂದೆ ಮೇಲೆ ಹೇಳಿದ 'ಶಾಂತಿದೇವಿ' ಮತ್ತು 'ಭಗವತಿ' ಎಂಬ ಬಾಲೆಯರಂತೆ ಪೂರ್ವಜನ್ಮ ಸ್ಮರಣೆಯುಳ್ಳ 14 ವರ್ಷದ ಬಾಲಕನೊಬ್ಬನು ಅಲಹಾಬಾದ್ ಪಟ್ಟಣದಲ್ಲಿ ತಾನು ಹುಟ್ಟಿ, ಮಾತನಾಡುವುದಕ್ಕೆ ಮೊದಲುಮಾಡಿದಂದಿನಿಂದ ತಾನು ಪಂಜಾಬ್‌ದೇಶದಲ್ಲಿ ಯಾವುದೋ ಒಂದು ಹಳ್ಳಿಯಲ್ಲಿ ಹುಟ್ಟಿದ್ದನೆಂದು ಹೇಳುತ್ತಿದ್ದನು. ಇದನ್ನು ಪರೀಕ್ಷಿಸಲು ಒಬ್ಬ ಬ್ಯಾರೆಸ್ಟರ್ ಆ ಬಾಲಕನನ್ನು ತನ್ನ ಜೊತೆಯಲ್ಲಿ ರೈಲಿನಲ್ಲಿ ಕರೆದುಕೊಂಡು ಹೋಗಿ ಅವನಿಂದ ನಿರ್ದೇಶಿಸಲ್ಪಟ್ಟ ಒಂದು ಸ್ಟೇಷನ್ನಲ್ಲಿಳಿದು ಅವನು ತೋರಿಸಿದ ಯಾವುದೋ ಒಂದು ಕಾಲುಹಾದಿಯನ್ನು ಹಿಡಿದು ಒಂದುಹಳ್ಳಿಗೆ ಹೋದರು. ಅಲ್ಲಿ ತಾನು ಹಿಂದಿನ ಜನ್ಮದಲ್ಲಿ ವಾಸಮಾಡುತ್ತಿದ್ದ ಮನೆ, ತನ್ನ ಹೊಲ ಮೊದಲಾದುವುಗಳನ್ನೆಲ್ಲಾ ಆ ಹುಡುಗನು ಗುರ್ತಿಸಿದನು. ಜೊತೆಯಲ್ಲಿದ್ದ ಬ್ಯಾರಿಸ್ಟರ್ ಅಲ್ಲಿ ವಾಸವಾಗಿದ್ದ ಇತರರನ್ನು ವಿಚಾರಿಸಲು, ಸ್ವಲ್ಪವೂ ವ್ಯತ್ಯಾಸವಿಲ್ಲದೆ ಹೇಳಿದ್ದೆಲ್ಲವೂ ನಿಜವಾಗಿದ್ದುದನ್ನು ಪ್ರಮಾಣಪುರಸ್ಸರವಾಗಿ ನಿರ್ಧರಿಸಿ 'ಹಿಂದೂ' (Hindu) ಆಂಗ್ಲೇಯ

ಪತ್ರಿಕೆಯಲ್ಲಿ ಈ ಆಶ್ಚರ್ಯವನ್ನು ಹೊರಹೊರಡಿಸಿದ್ದನು. ಇದೇ ರೀತಿಯಲ್ಲಿ ಅನೇಕ ಪ್ರತ್ಯಕ್ಷ ಪ್ರಮಾಣ ದೃಷ್ಟಾಂತಗಳು ಎಷ್ಟೋ ನಮ್ಮ ಅವಗಾಹನೆಗೆ ಬಂದಿವೆ.

ಅವುಗಳಲ್ಲಿ ಇನ್ನು ಕೆಲವನ್ನು ಈ ಕೆಳಗೆ ಕೊಟ್ಟಿದೆ. ಮೇಲೆ ವಿವರಿಸಿದ ವೈಚಿತ್ರ್ಯಗಳ ಜೊತೆಗೆ ಮತ್ತೊಂದು ವಿಚಿತ್ರವಾದ ಸಂಗತಿಯು ಬಂದಿದೆ. ಇದು ಪಾಶ್ಚಾತ್ಯದೇಶದಲ್ಲಿ ನಡೆದುದು. ಈ ವಿಷಯವನ್ನು ಕನ್ನಡಮಕ್ಕಳ ಪುಸ್ತಕದಿಂದ ಎತ್ತಿ ಇಲ್ಲಿ ಬರೆದಿದೆ.

---

## ಪೂರ್ವಜನ್ಮದ ಕಥೆ.

---

" ಇದರಂತೆಯೇ (ಮೇಲೆ ಹೇಳಿದವುಗಳ ಜೊತೆಗೆ) ವಿಚಿತ್ರವಾದ ಇನ್ನೊಂದು ವೃತ್ತಾಂತ ಬಂದಿದೆ. ಅದು ಬಂದಿರುವುದು ಯೂರೋಪಿನಲ್ಲಿರುವ ಬುಡಾಪೆಸ್ಟಿನಿಂದ. ಅಲ್ಲಿ ಒಬ್ಬ ಎಂಜಿನಿಯರು. ಅವರಿಗೆ **"ಇರಿಸ್‌ಫರ್ಕ್ ಜಾಡಿ"** ಎಂಬ 15 ವರ್ಷದ ಒಬ್ಬ ಮಗಳು. ಅವಳಿಗೆ ಇನ್‌ಫ್ಲೂಯೆನ್ಜಾ ಜ್ವರವು ಬಂದಿತು. ಡಾಕ್ಟರುಗಳು ಎಷ್ಟು ಚಿಕಿತ್ಸೆಮಾಡಿದರೂ ವಾಸಿಯಾಗುವ ಗುರುತು ತೋರಲಿಲ್ಲ. ಒಂದು ದಿನ ರೋಗವು ತೀವ್ರವಾಗಿ 'ಅವಳು ಸತ್ತೇ ಹೋದಳು,' ಎಂದು ಎಲ್ಲರೂ ಭಾವಿಸಿದರು. ಇದ್ದಕ್ಕಿದ್ದ ಹಾಗೆಯೇ ಅವಳು ಎದ್ದು ಕುಳಿತಳು. ಆದರೆ ಅವಳು ಮೊದಲಿನ ಹುಡುಗಿಯಲ್ಲ, ಬದಲಾವಣೆಯಾಗಿ ಹೋಗಿದ್ದಿತು. ಅವಳಿಗೆ ತಂದೆತಾಯಿಗಳ ಗುರುತೂ ಸಿಕ್ಕಲಿಲ್ಲ. ಅವಳಿಗೆ 'ಹಂಗೇರಿಯನ್' ಭಾಷೆಯೇ ಬರದು. ಅವಳಾಡಿದ ಭಾಷೆ 'ಸ್ಪ್ಯಾನಿಷ್,' ಅವಳು 'ನನ್ನ ಹೆಸರು **ಲೂಸಿಯಾ ಆಲ್ವರೆಸ್ ಡಿಸಾಲ್ವಿಯೋ.** ನನ್ನ ಗಂಡನು ಮಾಡ್ರಿಡ್ ಪಟ್ಟಣದಲ್ಲಿದ್ದಾನೆ. ನನಗೆ ಹದಿನಾಲ್ಕುಜನ ಮಕ್ಕಳಿದ್ದಾರೆ. ನನಗೆ 40 ವರ್ಷ ವಯಸ್ಸು. ಕೆಲವು ದಿನಗಳ ಹಿಂದೆ ನನಗೆ ಸಾಯುವಂತೆ ಆಯಿತು. ಏನಾಯಿತೋ ಏನೋ ಇಲ್ಲಿಗೆ ಬಂದಿದ್ದೇನೆ. ಹೇಗೆ ಬಂದೆನೋ ನನಗೆ ತಿಳಿಯದು' ಎಂದು ಹೇಳುತ್ತಾಳೆ. ಈ ವೈಚಿತ್ರ್ಯವು

ನಡೆದುದು 1933ನೇ ಇಸವಿಯಲ್ಲಿ. ಆ ಹುಡುಗಿಯೂ ಈಗ ಸ್ಪ್ಯಾನಿಷ್ ಭಾಷೆಯನ್ನಾಡುತ್ತಿದ್ದಾಳೆ. ಆ ಹುಡುಗಿಯ ತಾಯಿತಂದೆಗಳು ಮೊದಲು ಸ್ಪ್ಯಾನಿಷ್ ಭಾಷೆಯನ್ನು ಕಲಿತು ಅನಂತರ ಅವಳಿಗೆ ಹಂಗೇರಿಯನ್ ಭಾಷೆಯನ್ನು ಕಲಿಸಬೇಕಾಗಿ ಬಂದಿತು. ಅವಳು ಸ್ಪ್ಯಾನಿಷ್ ಹಾಡುಗಳನ್ನು ಹಾಡುತ್ತಾಳೆ. ಖಾಯಿಲೆಗೆ ಮುಂಚೆ ಅವಳಿಗೆ ಸ್ಪ್ಯಾನಿಷ್ ಗಂಧವೂ ಇರಲಿಲ್ಲವಂತೆ."

ಮೇಲೆ ಹೇಳಿದ ಹುಡುಗಿಯ ದೃಷ್ಟಾಂತವಾದರೋ ಬಹಳ ಅದ್ಭುತವಾದದ್ದು. ಇದು, 'ಪುನರ್ಜನ್ಮವುಂಟು, ಪೂರ್ವಜನ್ಮದ ಕರ್ಮವಾಸನೆಯು ಪ್ರತಿಜೀವಿಯನ್ನೂ ಹಿಂಬಾಲಿಸಿಯೇ ಬರುತ್ತದೆ' ಎಂಬುದರ ಜೊತೆಗೆ, 'ಪರಕಾಯ ಪ್ರವೇಶವೆಂಬುದು ಜೀವಿಗುಂಟು ಅಂದರೆ ಜೀವಿಯು ಒಂದು ದೇಹವನ್ನು ಬಿಟ್ಟು ತನ್ನ ಪೂರ್ವಜನ್ಮದ ಕರ್ಮವಾಸನೆಯೊಂದಿಗೆ ಜೀವಿಯಿಂದ ಬಿಡಲ್ಪಟ್ಟ ಮತ್ತೊಂದು ದೇಹದೊಳಕ್ಕೆ ಪ್ರವೇಶಿಸಬಲ್ಲನು' ಎಂಬುದನ್ನೂ ಪ್ರಪಂಚಕ್ಕೆ ಎತ್ತಿ ಹೇಳುತ್ತದೆ. ಈ ಪರಕಾಯಪ್ರವೇಶದ ವಿಷಯವನ್ನು ಇನ್ನು ಮುಂದೆ ಈ ಗ್ರಂಥದಲ್ಲಿ 'ಪ್ರಾಣಾಯಾಮ' ವೆಂಬ ವಿಷಯಸೂಚಿಕೆಯಲ್ಲಿ ವಿಶದವಾಗಿ ಹೇಳಿದೆ.

ಇದೂ ಅಲ್ಲದೆ ಇನ್ನೊಂದು ದೃಷ್ಟಾಂತವೂ ಉಂಟು. ದಕ್ಷಿಣ ಹಿಂದೂಸ್ಥಾನದಲ್ಲಿ ಚಂಗಲ್ಪಟ್ಟು ಜಿಲ್ಲೆಯಲ್ಲಿನ 'ಕಂಚಿ' ನಗರವು ಒಂದು ಯಾತ್ರಾಸ್ಥಳ. ಇಲ್ಲಿ ಕಾಮಾಕ್ಷಿದೇವಿಯ ಪ್ರಸಿದ್ಧಿಪಡೆದ ಒಂದು ದೇವಸ್ಥಾನ. ಈ ದೇವಿಗೆ ಅನೇಕರು ಭಕ್ತರು. ಅವರಲ್ಲಿ ಮೂಕನೂ ಒಬ್ಬನು. ಈತನು ಪ್ರತಿದಿವಸವೂ ದೇವಸ್ಥಾನಕ್ಕೆ ಹೋಗಿ ದೇವಿಯ ಸೇವೆಯನ್ನು ಮಾಡುತ್ತಿದ್ದನು. ಹೀಗಿರಲು ಒಂದಾನೊಂದು ದಿನ 'ದೇವಿಯನ್ನು ಕುರಿತು ಸ್ತೋತ್ರಮಾಡಲು ತನಗೆ ಮಾತಿಲ್ಲವಲ್ಲಾ' ಎಂದು ದುಃಖಿಸುತ್ತ ದೇವತೆಯ ಮುಂಭಾಗದಲ್ಲಿ ನಿಂತಿರುವಾಗ ಇದ್ದಕ್ಕಿದ್ದ ಹಾಗೆಯೇ ಕವಿತ್ವವು ಲಭಿಸಿತು. ನಿಂತಂತೆಯೇ 'ಸ್ತುತಿಶತಕ' ವೆಂಬ ಹೆಸರುಳ್ಳ ನೂರು ಶ್ಲೋಕಗಳ ಒಂದು ಪದ್ಯಮಾಲಿಕೆಯನ್ನು ದೇವತೆಗೆ ಅರ್ಪಿಸಿದನು. ಪಾಠಕರ ಅವಗಾಹನೆಗೆ ಆ ಶ್ಲೋಕಗಳಲ್ಲಿ ಒಂದೆರಡನ್ನು ಮಟ್ಟಿಗೆ ತಾತ್ಪರ್ಯದೊಡನೆ ಈ ಕೆಳಗೆ ಕೊಟ್ಟಿದೆ.

ಶ್ಲೋ॥ ಪಾಂಡಿತ್ಯಂ ಪರಮೇಶ್ವರಿ! ಸ್ತುತಿವಿಧೌ ♦ ನೈವಾಶ್ರಯಂತೇ ಗಿರಾಂ
ವೈರಂ ಚಾನ್ಯಪಿ ಗುಂಫನಾನಿ ವಿಗಳತ್ ♦ ಗರ್ವಾಣಿ! ಶರ್ವಾಣಿ! ತೇ॥
ಸ್ತೋತುಂ ತ್ವಾಂ ಪರಿಫುಲ್ಲನೀಲನಲಿನ ♦ ಶ್ಯಾಮಾಕ್ಷಿ! ಕಾಮಾಕ್ಷಿ! ಮಾಂ।
ವಾಚಾಲೀಕುರುತೇ ತಥಾಪಿ ನಿತರಾಂ ♦ ತ್ವತ್ಪಾದಸೇವಾದರಃ॥

ಶ್ಲೋ॥ ತಾಪಿಂಛಸ್ತಬಕತ್ವಿಷೇ ತನುಭೃತಾಂ ♦ ದಾರಿದ್ರ್ಯಮುದ್ರಾದ್ವಿಷೇ।
ಸಂಸಾರಾಖ್ಯತಮೋಮುಷೇ ಪುರರಿಪೋಃ ♦ ವಾಮಾಂಕಸೀಮಾಜುಷೇ॥
ಕಂಪಾತೀರಮುಪೇಯುಷೇ ಕವಯತಾಂ ♦ ಜಿಹ್ವಾಕುಟೀಂ ಜಗ್ಮುಷೇ।
ವಿಶ್ವತ್ರಾಣಪುಷೇ ನಮೋಽಸ್ತು ಸತತಂ ♦ ತಸ್ಮೈ ಪರಂ ಜ್ಯೋತಿಷೇ॥

ಓ ದೇವಿಯೇ! ನಿನ್ನನ್ನು ಸ್ತೋತ್ರಮಾಡುವುದಕ್ಕೆ ನನಗೆ ಶ್ಲಾಘ್ಯವಾದ ವಾಕ್ಪಾಂಡಿತ್ಯವನ್ನು ಪಡೆಯಬೇಕೆಂಬುದು ನನ್ನ ಆಶಯವಲ್ಲ; ಆದರೆ ಸಮಸ್ತರ ಮೋಹಾಂಧಕಾರವನ್ನು ತೊಲಗಿಸಿ ಜ್ಞಾನೋದಯವನ್ನು ಭಕ್ತರಿಗೆ ಕರುಣಿಸುವ ನಿನ್ನ ಪಾದಾರವಿಂದವನ್ನು ಸ್ತುತಿಸಬೇಕೆಂಬ ಆಸೆಮಟ್ಟಿಗೆ ನನಗಿದೆ. ನಿನ್ನಲ್ಲಿರುವ ನನ್ನ ಅಪರಿಮಿತವಾದ ಭಕ್ತಿಯನ್ನರಿತೇ ನನ್ನಮೇಲೆ ದಯೆಯಿಟ್ಟು ಮೂಕನಾದ ನನಗೆ ಈ ವಾಚಾಳತ್ವ (ಸರಾಗವಾಗಿ ಕವಿತ್ವಮಾಡಿ ಗಟ್ಟಿಯಾಗಿ ನಿನ್ನನ್ನು ಹೊಗಳುವುದಕ್ಕೆ ಅವಕಾಶ) ವನ್ನು ಕೊಟ್ಟಿರುತ್ತಿ ಮತ್ತು ಅಜ್ಞಾನವನ್ನು ಕಳೆದು ಜ್ಞಾನೋದಯವನ್ನುಂಟುಮಾಡಿ ಮೋಕ್ಷವನ್ನು ಪಡೆಯುವುದಕ್ಕೆ ನನಗೆ ದಾರಿ ತೋರಿಸಿದೆಯಾದುದರಿಂದ ನಿನಗೆ ಪುನಃಪುನಃ ನಮಸ್ಕಾರವು.

ದೇವಿ! ನನ್ನ ಕಣ್ಣೆದುರಿಗೆ ಕಾಣ್ಬರುವ ನಿನ್ನ ಈ ಶರೀರದ ಬಣ್ಣವು ನೀಲಬಣ್ಣದ ಹೊಂಗೇ ಹೂವಿನ ಗೊಂಚಲಿನಂತಿರುವುದು. ನೀನು ಭಕ್ತರ ಬಡತನವನ್ನು ಕಳೆಯುವವಳೂ, ಸಂಸಾರವೆಂಬ ಕತ್ತಲನ್ನು ಹೋಗಲಾಡಿಸುವವಳೂ ಅಂದರೆ ಸಂಸಾರಬಂಧವನ್ನು ಬಿಡಿಸುವವಳೂ, ಸ್ಥೂಲ ಸೂಕ್ಷ್ಮ ಕಾರಣಗಳೆಂಬ ತ್ರಿಪುರಗಳನ್ನೂ ನಾಶಮಾಡುವವಳೂ, ಜ್ಞಾನೋದಯವನ್ನುಂಟುಮಾಡುವಂಥ ಪರಮೇಶ್ವರನ ಎಡತೊಡೆಯಮೇಲೆ ಕುಳ್ಳಿರುವವಳೂ, ಕಂಪಾನದಿಯ ದಡದಲ್ಲಿರುವ ದೇವಾಲಯದಲ್ಲಿ ಪ್ರತಿಷ್ಠಿತಳಾಗಿರುವವಳೂ, ಕವಿಗಳ ವಾಗ್ದ್ವಾರದಲ್ಲಿ ಕುಣಿದಾಡುತ್ತಲಿರುವವಳೂ

ಮತ್ತು ಪ್ರಪಂಚದ ಜೀವಿಕೋಟಿಗಳನ್ನು ಕಾಪಾಡಲು ಶಕ್ತಿಯುಳ್ಳವಳೂ ಆಗಿ, ಪರಂಜ್ಯೋತಿಸ್ವರೂಪವೆನಿಸಿರುವ ನಿನಗೆ ಪದೇಪದೇ ನಮಸ್ಕಾರವು.

ಮೇಲೆ ಹೇಳಿದ ಅರ್ಥಗರ್ಭಿತವಾದ ಮಹಾ ಪ್ರತಿಭೆಯಿಂದ ಕೂಡಿದ ಶ್ಲೋಕಗಳಂತೆ ಐದುನೂರು ಶ್ಲೋಕಗಳನ್ನು ಬರೆದು, 'ಮೂಕ ಮಹಾ ಕವಿ' ಯೆಂಬ ಬಿರುದನ್ನು ಪಡೆದನು. ಎಲ್ಲರೂ ಈತನ ಪಾಂಡಿತ್ಯಕ್ಕೆ ತಲೆದೂಗಿದರು. ಸ್ತುತಿಶತಕ, ಪಾದಾರವಿಂದಶತಕ ಮೊದಲಾದ ಐದು ಶತಕಗಳಲ್ಲಿಯೂ ವೇದಾಂತರಹಸ್ಯ ಮತ್ತು ಭಕ್ತಿರಸ ಇವುಗಳು ತುಂಬಿತುಳು ಕಾಡುತ್ತಿವೆ. ಇವೆಲ್ಲವೂ ಆತನ 20-22ನೇ ವಯಸ್ಸಿನಲ್ಲಿಯೇ ನಡೆದಿವೆ. ಹುಟ್ಟಿದಂದಿನಿಂದ ಮಾತನಾಡುವುದನ್ನು ತಿಳಿಯದ ಈ ಮನುಷ್ಯನಿಗೆ, ದೇವೀಪ್ರಸಾದದಿಂದ ಗಂಗಾನದೀ ಪ್ರವಾಹದಂತೆ ನಿರರ್ಗಳವಾದ ಕವಿತಾ ಸರಣಿಯು ಉಂಟಾಯಿತೇ ಅಥವಾ ಪೂರ್ವಜನ್ಮದ ಸಂಸ್ಕಾರ ಬಲಿಯು ದಿಂದ ಈ ಅದ್ಭುತವಾದ ಪ್ರಜ್ಞೆ ಇವಗೆ ದೊರಕಿತೇ ಎಂಬುದೇ ಪ್ರಶ್ನೆ. ಇಂತಹ ಪ್ರಶ್ನೆಗಳಿಗೆ ಸದುತ್ತರವು ಈ ಮುಂದೆ ವಿವರಿಸಿದೆ. ಅಂತೂ ಪ್ರಪಂಚದ ನೋಟದಲ್ಲಿ ಇದೊಂದು ವಿಚಿತ್ರವಾದ ವಿಷಯು.

ಈ ರೀತಿಯಾದ ವಿಚಿತ್ರವಿಷಯುಗಳು ದಿನೇದಿನೇ ಹೊರಬೀಳುತ್ತಿವೆ. ಇವುಗಳ ವಿವರಣೆಯೇನು? ಎಂದು ಪ್ರಶ್ನೆಮಾಡಿದ್ದೇ ಆದರೆ 'ಪುನರ್ಜನ್ಮ ವಿಲ್ಲ, ಪೂರ್ವಜನ್ಮವಿಲ್ಲ' ಎಂಬುವವರಿಂದ ಇದಕ್ಕೆ ಉತ್ತರವೇ ಇಲ್ಲ. ಆದರೆ ವೇದಗಳೂ ಮತ್ತು ವೇದಜ್ಞರೂ ಇದಕ್ಕೆ ಉತ್ತರವನ್ನು ಸುಲಭೋಪಾಯದಿಂದ ಕೊಡಬಲ್ಲರು. ಈ ವಿಷಯುದಲ್ಲಿ ಈ ಗ್ರಂಥ ಕರ್ತರಾದ ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರ ಅಭಿಪ್ರಾಯ ವೇನೆಂದರೆ :—

'ಮೇಲೆ ಹೇಳಿದ ಮೂಕಕವಿಯು ಪೂರ್ವಜನ್ಮದಲ್ಲಿ ಒಬ್ಬ ದೊಡ್ಡ ಕವಿಯಾಗಿರಬೇಕು. ಆ ಜನ್ಮದಲ್ಲಿ ತಾನು ಎಲ್ಲೋ ಸ್ವಲ್ಪ ಪಾಪವನ್ನು ಮಾಡಿದ್ದರ ಸಲುವಾಗಿಯೇ ಆ ಪಾಪಕರ್ಮಫಲವನ್ನು ಅನುಭವಿಸುವುದ ಕ್ಕಾಗಿ ಈ ಜನ್ಮದಲ್ಲಿ ಇಪ್ಪತ್ತು ವರ್ಷಗಳವರಿವಿಗೂ ಮೂಕತ್ವವನ್ನನು ಭವಿಸಿ ಇದಾದಮೇಲೆ ಇಪ್ಪತ್ತೊಂದನೆಯ ಸಂವತ್ಸರದ ಮೊದಲು ಆ

ಪೂರ್ವಜನ್ಮವಾಸನೆಯಿಂದ ಪುನಃ ಕವೀಶ್ವರತ್ವವನ್ನು ಅವನು ಪಡೆಯ ಬೇಕೆಂದು ಕರ್ಮವು ಏರ್ಪಡಿಸಿರುವುದರಿಂದಲೇ ಆ ಮೂಕನು ಗೊತ್ತಾದ ದಿನಕ್ಕೆ ಸರಿಯಾಗಿ ಕಾಮಾಕ್ಷೀ ದೇವಸ್ಥಾನದ ಬಳಿಗೆ ಹೋಗಿ ತನ್ನ ಕರ್ಮ ಫಲದಿಂದಲೇ ಭಕ್ತಿಯನ್ನು ತೋರಿಸುತ್ತಿರುವಾಗ ವಾಚಾಳತ್ವದ ಜೊತೆಗೆ ಕವಿತ್ವವೂ ತಾನಾಗಿಯೇ ಬಂದಿತು ' ಎಂಬುದೇ.

ಇದರಿಂದ ತಿಳಿಯಬರುವುದೇನೆಂದರೆ, ಮೃತಿಯುಂಟಾದಾಗ ಶರೀರ ಮಾತ್ರ ನಾಶವಾಗುತ್ತದೆಯೇ ಹೊರತು ಶರೀರದೊಳಗೆ ಹುದುಗಿರುವ ಒಳ್ಳೆಯ ಮತ್ತು ಕೆಟ್ಟ ಗುಣಗಳೂ, ಪಾಂಡಿತ್ಯ ಮೊದಲಾದುವುಗಳೂ, ಜೀವಿಯು ಹಿಂದಿನ ಶರೀರವನ್ನು ಬಿಟ್ಟೊಡನೆಯೇ, ಆ ಜೀವನೊಡನೆ ಬೆರೆತು ಅವನಿಗೆ ದೊರಕುವ ಬೇರೆ ತಾಯಿಯ ಗರ್ಭದಲ್ಲಿರುವ ಶಿಶುವಿನೊಳಗೆ ಹುದುಗಿದ್ದು, ಶಿಶುವು ಬೆಳೆದಮೇಲೆ ಪೂರ್ವಜನ್ಮದಲ್ಲಿ ಜೀವನು ಯಾವ ಯಾವ ಗುಣಗಳಿಂದ ಕೂಡಿದ್ದನೋ ಅದೇ ಗುಣಗಳಿಂದ ಇರುವಂತೆಮಾಡಿ, ಪುನಃ ಆ ಕಾರ್ಯವನ್ನೇ ಮಾಡುತ್ತ ಬರುತ್ತಾನೆ. ಪೂರ್ವಜನ್ಮದಲ್ಲಿ ಜೀವಿಯು ಮಾಡುತ್ತ ಬಂದ ಕರ್ಮಫಲಗಳನ್ನೆಲ್ಲಾ ಮುಂದಿನ ಜನ್ಮಗಳಲ್ಲಿ ಅನುಭವಿಸಬೇಕಾದಕಾರಣ ಇದಕ್ಕೆ ' ಪೂರ್ವಜನ್ಮ ಕರ್ಮವಾಸನಾ ' ಎಂದು ಹೆಸರು. ಇಂತಹ ಶ್ರೇಷ್ಠವಾದ ರಹಸ್ಯಗಳನ್ನೆಲ್ಲಾ ಅನೇಕಸಾರಿ ಈ ಗ್ರಂಥದಲ್ಲಿ ಹೇಳಿವೆಯಾದುದರಿಂದ ಈ ಗ್ರಂಥವನ್ನು ಪಠಿಸು ವವರೆಲ್ಲರೂ ಇನ್ನುಮೇಲೆ ಸ್ವಲ್ಪವೂ ಸುಳ್ಳಾಡದೆ, ಪರರೊಡವೆಯಲ್ಲಿ ಆಸೆಯನ್ನಿಡದೆ, ಸತ್ಯದ ಹಾದಿಯನ್ನು ಹಿಡಿದು, ತನ್ನ ಶಕ್ತಿಗೆ ತಕ್ಕಂತೆ ದಾನಧರ್ಮಾದಿ ಸತ್ಕರ್ಮಗಳಲ್ಲಿಯೇ ನಿರತರಾಗಿದ್ದರೆ ಅದಕ್ಕೆ ತಕ್ಕ ಪುಣ್ಯ ಫಲಕ್ಕಾಗಿ ಮುಂದೆ ಬರುವ ಜನ್ಮಗಳಲ್ಲಿ ಉತ್ತಮಪದವಿಯನ್ನು ತಪ್ಪದೆ ಪಡೆಯುತ್ತಾರೆ. ಈ ಮಾತು ಸತ್ಯವೆಂದು ತಿಳಿದು ಅದಕ್ಕೆ ಸರಿಯಾಗಿ ಸ್ತ್ರೀಪುರುಷರು ನಡೆದುಕೊಳ್ಳಲು ಪ್ರಯತ್ನಿಸಬೇಕು.

ಮುಖ್ಯವಾಗಿ ಪ್ರತಿಯೊಂದು ಜೀವಿಗೂ ' ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀಜಠರೇ ಶಯನಂ ' ಎಂಬ ಶಂಕರಾ ಚಾರ್ಯರ ವಾಕ್ಯವನ್ನು ದೃಷ್ಟಾಂತಪೂರ್ವಕವಾಗಿ ಸ್ಥಿರೀಕರಿಸುವುದಕ್ಕೂ,

ಮತ್ತು ಪುನರ್ಜನ್ಮವಿಲ್ಲವೆಂದು ಸಾರಿಹೇಳುತ್ತಿರುವ ಜನಾಂಗಗಳ ಅಭಿಪ್ರಾಯವು ಸರಿಯಾದುದಲ್ಲವೆಂದು ಸ್ಪಷ್ಟಪಡಿಸುವುದಕ್ಕೂ, ಕೆಲವುಗಳನ್ನು ಮಟ್ಟಿಗೆ ಮೇಲೆ ಉದಹರಿಸಿದೆ. ಕೆಲವರು ಇತರ ಜಾತೀಯರು ಜನ್ಮವೇ ಇಲ್ಲವೆಂದು ಅನೇಕ ಹಿಂದುಗಳೊಡನೆ ಈ ದಿನದವರಿವಿಗೂ ವಾದಿಸುತ್ತಿರುತ್ತಾರೆ. ಆದರೆ ಅವರು ಜನ್ಮವಿಲ್ಲವೆಂದು ವೇದಪ್ರಮಾಣವಾವುದನ್ನಾದರೂ ತೋರಿಸಬಲ್ಲರೇ ? ಎಂದಿಗೂ ತೋರಿಸಲಾರರು. ಹಾಗೆ ಜನ್ಮವಿಲ್ಲವೆಂದು ಪ್ರಮಾಣಪುರಸ್ಸರವಾಗಿ ನಿರ್ಧರಿಸಿದ್ದೇ ಆದರೆ ಅದನ್ನು ಒಪ್ಪಬಹುದು. ವೇದಪ್ರಮಾಣವೆಂತಹದೆಂಬುದನ್ನು ಮುಂದೆ ವಿಶದಪಡಿಸಲಾಗಿದೆ.

'ದಿಕ್ಕಾಲಾದ್ಯನವಚ್ಛಿನ್ನಾನಂತಚಿನ್ಮಾತ್ರಮೂರ್ತಯೇ' ಎಂಬಂತೆ ಸರ್ವದಾ ಸರ್ವಸ್ಥಾನದಲ್ಲಿಯೂ ಪರಿಪೂರ್ಣನಾಗಿರುವ, ಪರಬ್ರಹ್ಮನೆಂಬ ಹೆಸರಿನಿಂದ ಆಕಾಶಸ್ವರೂಪನಾಗಿರುವ ಆ ಸರ್ವಸ್ವಾಮಿಯು ಯಾರೊಡನೆಯೂ ಮಾತಾಡನು. ಮಾತಾಡುವುದಕ್ಕೆ ಶರೀರವು ಆವಶ್ಯಕವಾದುದರಿಂದ ಆ ಪರಬ್ರಹ್ಮನು, ಪೃಥಿವಿ-ಅಪ್ಪು-ತೇಜಸ್ಸು-ವಾಯು-ಆಕಾಶಗಳೆಂಬ ಪಂಚಭೂತಗಳಿಂದ 'ಈಶ್ವರ' ಎಂಬ ಹೆಸರಿನಿಂದ ತನಗೆ ತಾನೇ ಒಂದು ಶರೀರವನ್ನು ನಿರ್ಮಿಸಿಕೊಂಡನು. ಮತ್ತು ಆತನೇ ಮಾನವವರ್ಗವನ್ನು ಕಡೆಹಾಯಿಸುವುದಕ್ಕಾಗಿ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನು ಸೃಷ್ಟಿಸಿ ಅವುಗಳಲ್ಲಿ ಅನೇಕ ಉಪನಿಷತ್ತುಗಳು, ಶ್ರುತಿಗಳು, ಸ್ಮೃತಿಗಳು ಮೊದಲಾದವುಗಳನ್ನು ಸೃಷ್ಟಿಮಾಡಿದನು. ಇದರಮೇಲೆ ಆ ಯುಗಗಳಲ್ಲಿದ್ದ ಋಷಿಗಳು ಉಪನಿಷತ್ತುಗಳಿಗೆಲ್ಲಾ ಸರಿಯಾದ ತಾತ್ಪರ್ಯಗಳನ್ನು ಬರೆದಿಟ್ಟರು. ದ್ವಾಪರಯುಗದಲ್ಲಿ ಶ್ರೀಕೃಷ್ಣನು ಅವತರಿಸಿ ಭಗವದ್ಗೀತೆಯೆಂಬ ಹೆಸರಿನಿಂದ ಹೇಳಿದ ಆರನೂರ ತೊಂಭತ್ತು ಶ್ಲೋಕಗಳೂ ವೇದಗಳಲ್ಲಿರುವವುಗಳೇ ಹೊರತು ಶ್ರೀ ಕೃಷ್ಣನು ತಾನೇ ಬೇರೆ ಎತ್ತಿಹೇಳಿದ ಶ್ಲೋಕಗಳಲ್ಲವು. ಭಗವಂತನಾದ ಶ್ರೀ ಕೃಷ್ಣನು ಹೇಳಿದ ಗೀತೆಯಾದುದರಿಂದ ಇದಕ್ಕೆ 'ಭಗವದ್ಗೀತಾ' ಎಂದು ಹೆಸರಾಯಿತು. ಈಶ್ವರನಿಂದ ನಿರ್ಮಿಸಲ್ಪಟ್ಟ 'ತೈತ್ತಿರೀಯೋಪನಿಷತ್ತು, ಗರ್ಭೋಪನಿಷತ್ತು' ಮೊದಲಾದ ದೊಡ್ಡ ದೊಡ್ಡ ಉಪನಿಷತ್ತುಗಳ ದೃಷ್ಟಾಂತಗಳನ್ನು ಹೇಳದೆ ಈ ಕಲಿಯುಗದಲ್ಲಿ ಹುಟ್ಟಿ, ಮೇಲೆ ಹೇಳಿದ

ಇತರ ಮತಸ್ಥಾಪಕರು 'ಜನ್ಮವು ಇಲ್ಲವು' ಎಂದು ತಮ್ಮ ಮನಸ್ಸಿಗೆ ಬಂದಂತೆ ಬರೆದಿಟ್ಟುದನ್ನು 'ಇದೇ ನಮ್ಮ ವೇದವು, ನಮ್ಮ ವೇದಗಳಲ್ಲಿ ಪುನರ್ಜನ್ಮವೆಂಬುದು ಇಲ್ಲ' ವೆಂದು ಹಿಂದೂಗಳೊಡನೆ ಕುತರ್ಕವನ್ನು ಮಾಡುತ್ತಿದ್ದಾರೆ. ಈ ಮತಸ್ಥರು ಹೇಳುವುದು ಹೇಗಿದೆಯೆಂದರೆ:—

ಒಬ್ಬ ಧನಿಕನ ಸಮೀಪದಲ್ಲಿದ್ದ ಒಬ್ಬ ಸೇವಕನು ತನ್ನ ಯಜಮಾನನ ಸಮೀಪಕ್ಕೆ ಬಂದು, "ಸ್ವಾಮಿ! ನಮ್ಮ ಎತ್ತು ಹೆಣ್ಣು ಕರುವನ್ನು ಈದಿದೆ" ಎಂದು ಹೇಳಿದನು. "ಏನೋ! ಎತ್ತು ಈಯುವುದುಂಟೇ? ಛೀ! ಛೀ! ಹೊರಡು" ಎಂದು ಹೇಳುವುದಕ್ಕೆ ಪ್ರತಿಯಾಗಿ "ಈಯಿತೇ? ಹಾಗಾದರೆ ಸರಿ, ಕೊಟ್ಟಿಗೆಯಲ್ಲಿ ಕಟ್ಟಿ ಅದಕ್ಕೆ ಒಳ್ಳೆಯ ಮೇವು ಹಾಕು" ಎಂದು ಹೇಳುವ ರೀತಿಗೆ ಸರಿಯಾಗಿ ಇತರ ಮತಸ್ಥರು 'ಜನ್ಮವಿಲ್ಲ' ವೆಂದು ಮನಸ್ಸಿಗೆ ತೋರಿದ್ದನ್ನು ಮೇಲೆ ಹೇಳಿದ ಧನಿಕನಂತೆ ಮೂಢಬುದ್ಧಿಯಿಂದ ಹೇಳುತ್ತಿದ್ದಾರೆ.

'ಜನ್ಮವುಂಟು' ಎಂದು ನಿಶ್ಚೈಸಿ ಹೇಳುವುದಕ್ಕೆ ಕೆಲವು ದೃಷ್ಟಾಂತಗಳನ್ನು ಈಮುಂದೆ ಹೇಳಿದೆ. ಪೂರ್ವಜನ್ಮದಲ್ಲಿ ಜನಗಳು ಅವರವರು ಮಾಡಿದ ಕರ್ಮಕ್ಕನುಗುಣವಾಗಿ, ಕುರುಡು, ಕುಂಟು, ಮೂಗು, ಕಿವುಡು, ಗೂನು ಮೊದಲಾದ ಅಂಗಹೀನತೆಯಿಂದ ಹುಟ್ಟುತ್ತಿರುವುದನ್ನು ನಾವು ಪ್ರತ್ಯಕ್ಷಪ್ರಮಾಣವಾಗಿ ನೋಡುತ್ತಿದ್ದೇವೆ. ಹೀಗೆ ಅಂಗಹೀನರಾಗಿ ಹುಟ್ಟಿದವರ ಮೇಲೆ ದೇವರಿಗೆ ಏನಾದರೂ ದ್ವೇಷವಿದೆಯೇ? ಎಂದಿಗೂ ಇಲ್ಲ. ಆ ಸ್ವಾಮಿಯು ಎಲ್ಲರನ್ನೂ ಒಂದೇ ವಿಧವಾಗಿ ನೋಡುತ್ತಿದ್ದಾನೆ. ಆದರೆ ಅವರವರ ಪುಣ್ಯಪಾಪಗಳಿಗೆ ತಕ್ಕಂತೆ ಆಯಾ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಿದ್ದಾನೆಯೇ ಹೊರತು ಈಶ್ವರನ ಮೇಲೆ ಯಾವ ದೋಷವೂ ಇಲ್ಲ.

'ಜನ್ಮವಿಲ್ಲ' ವೆಂದು ಬಹುಕಾಲದಿಂದಲೂ ಹಿಂದುಗಳೊಡನೆ ವಾದಿಸುತ್ತಿರುವವರ ಬಾಯನ್ನು ಮುಚ್ಚುವುದಕ್ಕಾಗಿಯೇ ಈ ಕಲಿಯುಗದಲ್ಲಿ ಅನೇಕ ಸ್ಥಳಗಳಲ್ಲಿ ಅನೇಕ ಬಾಲಕ ಬಾಲಕಿಯರ ಹೃದಯಕಮಲದಲ್ಲಿ

ಆತ್ಮನೆಂಬ ಹೆಸರಿನಿಂದ ವಾಸಮಾಡುತ್ತಿರುವ ಈಶ್ವರನು ಏನು ಮಾಡಿದ್ದಾನೆಂದರೆ:—

ಆ ಬಾಲಕಬಾಲಿಕೆಯರು ಪೂರ್ವಜನ್ಮದಲ್ಲಿ ಯಾವಯಾವುದನ್ನು ಮಾಡಿದ್ದರೋ ಅವೆಲ್ಲವೂ ಅವರಿಗೆ ಜ್ಞಾಪಕ ಬರುವಂತೆ ಅವರ ಮನಸ್ಸಿಗೆ ತಾಳೆ ಹಾಕಿಕೊಟ್ಟು, ಆತ್ಮನೆಂಬ ಈಶ್ವರನು ಮನಸ್ಸನ್ನು ತಿರುಗಿಸಿದನು. ಆದುದರಿಂದಲೇ ಆ ಬಾಲಕಬಾಲಿಕೆಯರು ತಮ್ಮ ಪೂರ್ವಜನ್ಮ ವೃತ್ತಾಂತವನ್ನು ಹೇಳುವವರಾಗಿದ್ದಾರೆ. ಹೀಗೆ ಹೇಳಿರುವವರಲ್ಲಿ ಶಾಂತಿದೇವಿಯೇ ಮೊದಲಾದವರನ್ನು ಈ ಗ್ರಂಥದಲ್ಲಿ ದೃಷ್ಟಾಂತವಾಗಿ ತೋರಿಸಿದೆ. ಇವೆಲ್ಲವನ್ನೂ ಚನ್ನಾಗಿ ಪರ್ಯಾಲೋಚಿಸಿ, ಇದುವರಿವಿಗೂ 'ಪುನರ್ಜನ್ಮವೂ ಇಲ್ಲ; ಮತ್ತು ಪೂರ್ವಜನ್ಮದ ವಾಸನೆಯೆಂಬುದೂ ಇಲ್ಲ' ಎಂದು ವಾದಿಸುವ ನಮ್ಮ ಸಹೋದರರೆಲ್ಲರೂ ಮೇಲೆ ಹೇಳಿದ ದೃಷ್ಟಾಂತಗಳ ಸಹಾಯದಿಂದಲಾದರೂ "ಪುನರ್ಜನ್ಮವುಂಟು, ಪೂರ್ವಜನ್ಮದ ಸಂಸ್ಕಾರವು ಪ್ರತಿ ಜೀವಿಗೂ ಇದ್ದೇ ಇರುತ್ತದೆ" ಎಂದು ಇನ್ನಾದರೂ ತಿಳಿದುಕೊಳ್ಳುವರೆಂದು ದೃಢವಾಗಿ ನಂಬಿದ್ದೇವೆ.

ಇದುವರಿವಿಗೂ ಹೇಳಿದ 'ಶಾಂತಿದೇವಿ' ಯು ಪೂರ್ವಜನ್ಮದಲ್ಲಿ ಯಾವ ಕಂಠಧ್ವನಿಯಿಂದ ಮಾತನಾಡುತ್ತಿದ್ದಳೋ ಅದೇ ಕಂಠಧ್ವನಿಯಿಂದಲೇ ಈ ಜನ್ಮದಲ್ಲಿಯೂ ಮಾತನಾಡುತ್ತಾಳೆಯೇ ಹೊರತು ಬೇರೆ ಪರಿಯಿಂದಲ್ಲ. ಇದು ಏತಕ್ಕೆಂದರೆ, ಪೂರ್ವಜನ್ಮದಲ್ಲಿ ತನಗೆ ಲಭಿಸಿದ್ದ ಶರೀರವು ಮಾತ್ರ ಕಳೆದುಹೋಗಿದೆಯೇ ಹೊರತು ಆ ಶರೀರದಲ್ಲಿದ್ದು ಮಾತಾಡುತ್ತಿದ್ದ ಕಂಠಧ್ವನಿಯು ವ್ಯತ್ಯಾಸವನ್ನು ಹೊಂದದೆ ಜೀವನನ್ನು ಹಿಂಬಾಲಿಸಿ ಬಂದು, ಬೇರೊಬ್ಬ ತಾಯಿಯ ಗರ್ಭದಲ್ಲಿ ಸೃಷ್ಟಿಸಲ್ಪಟ್ಟಿರುವ ಶಿಶುವಿನ ಶರೀರದಲ್ಲಿ ಹೋಗಿ ಸೇರುವುದು. ಇದಕ್ಕೆ ಪ್ರತ್ಯಕ್ಷ ದೃಷಾಂತವಾಗಿ ಭಗವದ್ಗೀತ ಅಧ್ಯಾಯ 15 ಶ್ಲೋಕ 8. "ಶರೀರಂ ಯದವಾಪ್ನೋತಿ। ಯಚ್ಚಾಪ್ಯುತ್ಕ್ರಾಮತೀಶ್ವರಃ" ಎಂಬ ಶ್ಲೋಕವನ್ನು ಈ ಗ್ರಂಥದ 185ನೇ ಪುಟದಲ್ಲಿ ಹೇಳಿದೆ. ಅದನ್ನೂ ಅದರ ತಾತ್ಪರ್ಯವನ್ನೂ ಈ ಸಂದರ್ಭದಲ್ಲಿ ಓದಿ ನೋಡಿ. ಶಾಂತಿದೇವಿಗೆ ಪೂರ್ವಜನ್ಮದಲ್ಲಿ ಪತಿ

ಯಾಗಿದ್ದ ಆತನೂ ಮತ್ತು ಆತನ ಬಂಧುಗಳೂ ಶಾಂತಿದೇವಿಯು ಈಗ ಮಾತಾಡುತ್ತಿರುವ ಕಂಠಧ್ವನಿಯು ಪೂರ್ವಜನ್ಮದಲ್ಲಿ ಆಕೆಗಿದ್ದ ಕಂಠ ಧ್ವನಿಯಂತೆಯೇ ಇದೆಯೆಂದು ಅವರು ಯೋಚಿಸದೆಯೇ ಇರಬಹುದು. ಈಗಲೂ ಆ ಕನ್ಯೆಯ ಕಂಠಧ್ವನಿಯು ಪೂರ್ವಜನ್ಮದ ಕಂಠಧ್ವನಿ ಯಂತೆಯೇ ಇದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡಿದಲ್ಲಿ, ಈ ಗ್ರಂಥಕರ್ತನು ಹೇಳಿರುವುದು ನಿಜವೋ ಇಲ್ಲವೇ ಸುಳ್ಳೋ ಎಂಬು ದನ್ನೇ ಚನ್ನಾಗಿ ತಿಳಿದುಕೊಳ್ಳಬಹುದು. ಈಗ ಒಂದುವೇಳೆ ವಯೋ ವ್ಯತ್ಯಾಸದಿಂದ ಅದೇ ಕಂಠಧ್ವನಿಯಿಲ್ಲದಿದ್ದರೂ, ಆಕೆಗೆ ಇನ್ನೂ ಕೆಲವು ವರ್ಷಗಳು ಕಳೆದ ಬಳಿಕ ಅಂದರೆ ಪ್ರಾಪ್ತವಯಸ್ಕಳಾದಾಗ ಪೂರ್ವಜನ್ಮ ಕಂಠಧ್ವನಿಯಂತೆಯೇ ಇರುತ್ತದೆ. ಹೀಗಾಗುವುದಕ್ಕೆ ಕಾರಣವೇನೆಂದರೆ, ಶಾಂತಿದೇವಿಯು ಈಗ ಚಿಕ್ಕ ಹುಡುಗಿಯಾಗಿರುವುದರಿಂದ ಆ ಬಾಲಿಕೆಯ ಕಂಠಧ್ವನಿಯೂ ವಯಸ್ಸಿಗನುಗುಣವಾಗಿಯೇ ಇರಬೇಕು. ಅಲ್ಲದೆ ಆಕೆಗೆ ಸರಿಯಾದ ವಯಸ್ಸು ಬಂದಮೇಲೆ, ಪೂರ್ವಜನ್ಮದ ಕಂಠಧ್ವನಿಗೂ ಸರಿಯಾದ ವಯಸ್ಸು ಒದಗಿಬಂದು ಪೂರ್ವಜನ್ಮದಲ್ಲಿ ಆಕೆಯು ಮಾತ ನಾಡುತ್ತಿದ್ದ ಕಂಠಧ್ವನಿಯನ್ನೇ ಹೊಂದುತ್ತಾಳೆ. **"ಜೀವನು ಶರೀರ ವನ್ನು ಬಿಟ್ಟು ಹೊರಡುವಾಗ, ಆ ಜೀವನನ್ನು ಅಂಟಿಬಂದಿರುವ ಆಸೆಗಳು ಜೀವನನ್ನು ಹಿಂಬಾಲಿಸಿಯೇ ಹೊರಡುತ್ತವೆ."** ಎಂಬ ವಿಷಯುಸೂಚಿಕೆಯಲ್ಲಿ ಈ ಶ್ರೇಷ್ಠವಾದ ರಹಸ್ಯಗಳನ್ನೆಲ್ಲಾ ಇನ್ನು ಮುಂದೆ ವಿವರಿಸಲಾಗುತ್ತದೆ. ಆದುದರಿಂದ ಅದನ್ನು ನೋಡಿ ಎಲ್ಲಾ ವಿಷಯ ಗಳನ್ನೂ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಹೀಗೆ ಪ್ರತಿಯೊಂದು ಮನೆಯಲ್ಲಿಯೂ ಹುಟ್ಟುತ್ತಿರುವ ಬಾಲಕ ಬಾಲಕಿಯರನ್ನು 'ಇವರು ಎಳೇ ಮಕ್ಕಳೆ'ಂದು ಮನಸ್ಸಿನಲ್ಲಿ ಎಣಿಸ ಬಾರದು. ಈ ಬಾಲಕಬಾಲಕಿಯರೇ ಯಾವುದೋ ಒಂದು ಕುಟುಂಬಕ್ಕೆ ಪೂರ್ವಜನ್ಮದಲ್ಲಿ ಹಿರಿಯರಾಗಿದ್ದವರು. ಆಗ ಆ ಕುಟುಂಬದಲ್ಲಿರುವವ ರೆಲ್ಲರೂ ಇವರುಗಳ ಆಜ್ಞಾನುಸಾರವಾಗಿ ನಡೆಯುತ್ತಿದ್ದರು. ಆಮೇಲೆ

ಆ ಹಿರಿಯರು ಆ ಕುಟುಂಬದಲ್ಲಿ ಮರಣಹೊಂದಿ ಬೇರೇ ಮನೆಗೆ ಹೋಗಿ ಮಕ್ಕಳಾಗಿ ಹುಟ್ಟುತ್ತಿದ್ದಾರೆ. ಹೀಗೆ ಅವರು ಅನೇಕ ಕೋಟಿಬಾರಿ ಮಕ್ಕಳಾಗಿ ಹುಟ್ಟಿ ಬೆಳೆದು ದೊಡ್ಡವರಾಗಿ ಪ್ರತಿಯೊಂದು ಜನ್ಮದಲ್ಲಿಯೂ ಎಲ್ಲಾ ಕಾರ್ಯಗಳನ್ನೂ ಮಾಡುತ್ತ ಬಂದು ಪುನಃ ಮೃತಿಹೊಂದುತ್ತಿರುತ್ತಾರೆ. ಹೀಗೆ ಆಗಾಗ ಶಿಶುಗಳಾಗಿ ಹುಟ್ಟಿ ಬೆಳೆದು ಮರಣಹೊಂದಿದವರಿಗೋಸ್ಕರ ನೀವು ಏತಕ್ಕೆ ದುಃಖಪಡಬೇಕು? ಈ ಜೀವಿಗಳ ರಹಸ್ಯಾರ್ಥವನ್ನು ನೀವು ತಿಳಿದುಕೊಳ್ಳದೆ ಇರುವುದರಿಂದಲೇ ನೀವು ದುಃಖಪಡುತ್ತಿರುವುದು. ಈ ರಹಸ್ಯವನ್ನು ನೀವು ತಿಳಿದುಕೊಂಡಿದ್ದೇ ಆದರೆ ಸತ್ತವರಿಗಾಗಿ ನೀವು ಎಂದಿಗೂ ದುಃಖಪಡುವುದಿಲ್ಲ. ಶರೀರಗಳೂ, ಸುಖದುಃಖಗಳೂ, ಸಂಪತ್ತುಗಳೂ ಒಂದೇ ಸ್ಥಳದಲ್ಲಿ ಸ್ಥಿರವಾಗಿ ನಿಲ್ಲುವವುಗಳಲ್ಲವು. ಇವೆಲ್ಲವೂ ಕಾಲಕ್ರಮದಿಂದ ಆಗಾಗ್ಗೆ ವ್ಯತ್ಯಾಸಹೊಂದುತ್ತಲೇ ಇರುತ್ತವೆ. ಈ ಗ್ರಂಥಕರ್ತರು ಮೇಲೆ ಹೇಳಿದ ವಿಷಯಗಳು 'ಸರಿಯಾದವೇ? ಅಥವಾ ಸರಿಯಲ್ಲವೇ?' ಎಂದು ನೀವು ಸ್ವಲ್ಪ ಯೋಚಿಸಿ ನೋಡಿರಿ. ಹಾಗೆ ಆಲೋಚಿಸಿ ವಸ್ತುಗಳ ನಿಜಸ್ವರೂಪವನ್ನು ತಿಳಿದಿದ್ದೇ ಆದರೆ ಆಗ ನಿಮ್ಮನ್ನು ಮುಚ್ಚಿರುವ ಮಾಯೆಯೆಂಬುದು ಸ್ವಲ್ಪಮಟ್ಟಿಗೆ ಕಳೆದುಹೋಗುತ್ತದೆ.



# ದೇವತಾರಾಧನೆಯ ಕ್ರಮ.

---

ಶ್ಲೋ॥ ಯಂ ಶೈವಾಃ ಸಮುಪಾಸತೇ ಶಿವ ಇತಿ ♦ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ♦ ಕರ್ತೇತಿ ನಯ್ಯಾಯಿಕಾಃ ॥
ಅರ್ಹನ್ನಿತ್ಯಥ ಜೈನಶಾಸನರತಾಃ ♦ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ವೋ ವಿದಧಾತಿ ವಾಂಛಿತಪದಂ ♦ ತ್ರೈಲೋಕ್ಯನಾಥೋ ಹರಿಃ ॥
(ಸುಭಾಷಿತ ಭಾಂಡಾಗಾರ)

ಯಾವ ಪರಮಾತ್ಮನನ್ನು ಶೈವರೆಲ್ಲರೂ ಶಿವನೆಂಬುದಾಗಿಯೂ, ವೇದಾಂತಿಗಳೆಲ್ಲರೂ ಪರಬ್ರಹ್ಮನೆಂದೂ, ಬೌದ್ಧರು ಬುದ್ಧದೇವನೆಂಬ ದಾಗಿಯೂ, ನಯ್ಯಾಯಿಕರು ಕರ್ತನೆಂದೂ, ಜೈನರೂ ಮತ್ತು ಮೀಮಾಂಸ ಕರೂ ಕರ್ಮವೆಂದೂ ಪೂಜಿಸುತ್ತಾರೆಯೋ, ಅಂತಹ ತ್ರೈಲೋಕ್ಯನಾಥ ನಾದ ಮತ್ತು ಅದ್ವಿತೀಯನಾದ ಆ ಪರಮಾತ್ಮನಿಗೆ ನಮಸ್ಕಾರವು.

ಶ್ಲೋ॥ ದಿಕ್ಕಾಲಾದ್ಯನವಚ್ಛಿನ್ನಾ ♦ ನಂತಚಿನ್ಮಾತ್ರಮೂರ್ತಯೇ ।
ಸ್ವಾನುಭೂತ್ಯೇಕಮಾನಾಯ ♦ ನಮಃ ಶ್ಯಾಂತಾಯ ತೇಜಸೇ ॥
(ಭರ್ತೃಹರಿ)

ಜನಗಳು ತಮಗೆ ತೋರಿದ ಹೆಸರಿನಲ್ಲಿ ಕರೆಯುವಂತಹ ಪರ ಮಾತ್ಮನು, ಸರ್ವವ್ಯಾಪಿ, ದಶದಿಕ್ಕುಗಳಲ್ಲಿಯೂ, ಅಂದರೆ ಎಲ್ಲೆಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಎಡೆಬಿಡದೆ ತುಂಬಿರುವವನು. ಈತನಿಗೆ ಆದಿಮಧ್ಯಾಂತಗಳಿಲ್ಲ. ಈತನು ಚಿತ್ಸ್ವರೂಪನು, ಶಾಂತಿಸ್ವರೂಪವಾದ ಒಂದು ತೇಜೋವ್ಯಕ್ತಿ ಮತ್ತು ತನ್ನ ಸ್ವರೂಪವು ಇಂತಹದು ಮತ್ತು ಇದರ ಪ್ರಮಾಣವು ಇಷ್ಟೇ ಎಂಬುದನ್ನು ತಿಳಿಯುವುದಕ್ಕೆ ಸ್ವಾನುಭವ ವೆಂಬ ಒಂದು ಅಳತೆಯ ಕೋಲು. ಆತನ ಸ್ವರೂಪವನ್ನು ಶಂಕರಾ ಚಾರ್ಯರು ಹೀಗೆಂದು ವರ್ಣಿಸಿದ್ದಾರೆ.

ಶ್ಲೋ॥ ಜನ್ಮಮೃತ್ಯುಘೋರದುಃಖ ♦ ನಾಶಿನೇ ನಮಶ್ಶಿವಾಯ ।
ಚಿನ್ಮಯೈಕ ರೂಪದೇಹ ♦ ಧಾರಿಣೇ ನಮಶ್ಶಿವಾಯ ॥

ಮನ್ಮನೋರಥಾವಪೂರ್ತಿ ♦ ಕಾರಿಣೇ ನಮಶ್ಶಿವಾಯ ।
ಮನ್ಮನೋಗತಾಯ ಕಾಮ ♦ ವೈರಿಣೇ ನಮಶ್ಶಿವಾಯ ॥

"ಶಿವನೆಂಬ ಹೆಸರಿನಿಂದ ಲೋಕಕ್ಕೆ ಸದಾ ಮಂಗಳವನ್ನುಂಟು ಮಾಡುತ್ತಿರುವ ಆ ಪರಮಾತ್ಮನು, ತನ್ನನ್ನು ಭಕ್ತಿಯಿಂದ ಧ್ಯಾನಿಸುವ ಜೀವಿಗಳಿಗೆ ಹುಟ್ಟುಸಾವುಗಳೆಂಬ ಭಯಂಕರವಾದ ಸಂಸಾರದುಃಖವನ್ನು ಹೋಗಲಾಡಿಸುವವನು. ಯಾವಾಗಲೂ ಸಚ್ಚಿದಾನಂದ ಸ್ವರೂಪ ಮುದ್ರೆಯನ್ನು ಧರಿಸಿರುವವನು. ಸದಾ ಭಕ್ತರ ಇಷ್ಟಾರ್ಥವನ್ನು ನೆರವೇರಿಸುವವನು. ಜೀವಿಗಳ ಹೃದಯಕಮಲದಲ್ಲಿಯೇ ನೆಲಸಿ ಅವರಿಗೆ ದುಃಖವನ್ನು ತರುವುದಕ್ಕೆ ಪ್ರಯತ್ನಿಸುತ್ತಲಿರುವ ಕಾಮನಿಗೆ ಮನಸ್ಸಿನಲ್ಲಿ ಹುಟ್ಟಲು ಎಡೆಗೊಡದೆ ಆತನನ್ನು ಧ್ವಂಸಮಾಡಿ ಜ್ಞಾನೋತ್ಪತ್ತಿಗೆ ಅವಕಾಶವನ್ನುಂಟುಮಾಡುವವನು. ಇಂತಹ ಪರಮಾತ್ಮನಿಗೆ ಪುನಃ ಪುನಃ ನಮಸ್ಕಾರವು."

ಪರಮಾತ್ಮನ ಸ್ವರೂಪವು ಕಣ್ಣಿಗೆ ಕಾಣದುದಾದರೂ ಆತನ ಸಗುಣಾರಾಧನೆಯನ್ನು ಮಾಡುವ ಕ್ರಮವನ್ನು ಈ ಕೆಳಗೆ ವಿವರಿಸಿದೆ:—

ಯಾರು ಯಾರಿಗೆ ಯಾವಯಾವ ದೇವತೆಗಳ ಮೇಲೆ ಇಷ್ಟವೋ ಆಯಾ ದೇವತೆಗಳನ್ನೇ ಉಪಾಸನಾಮೂರ್ತಿಗಳಾಗಿ ತಿಳಿದು ಪೂಜಿಸುತ್ತಿದ್ದಾರೆ. ಇಂತಹ ಉಪಾಸನಾಮೂರ್ತಿಯಾಗಿ ಮೋಕ್ಷಕ್ಕೆ ದಾರಿ ತೋರಿಸುವವನು ಭಗವಂತನು. ತಮ್ಮ ಇಷ್ಟಕ್ಕನುಸಾರವಾದ ದೇವತೆಯ ವಿಗ್ರಹವನ್ನೋ ಅಥವಾ ಒಂದು ಚಿತ್ರಪಟವನ್ನೋ ಇಟ್ಟು ಮಂತ್ರಪುಷ್ಪಾದಿಗಳಿಂದ ಜನಗಳು ಪೂಜಿಸುತ್ತಿರುತ್ತಾರೆ. ಹಾಗೆ ಪೂಜಿಸುವಾಗ ಮನಸ್ಸನ್ನು ದೇವತಾರಾಧನೆಯಲ್ಲಿ ನಿಲ್ಲಿಸದೆ, ಉದ್ಯೋಗ ವ್ಯವಹಾರಾದಿಗಳಲ್ಲಿಟ್ಟು ಯಾವುದೋ ಒಂದನ್ನು ಯೋಚಿಸುತ್ತಾ ಇರುತ್ತಾರೆ. ಈರೀತಿಯಾಗಿ ಮಾಡುವ ಈಶ್ವರಪೂಜೆಯನ್ನು ಎಷ್ಟು ಜನ್ಮಗಳು ನಡೆಸಿಕೊಂಡು ಬಂದರೂ ಅವರಿಗೆ ಮುಕ್ತಿಭವನವನ್ನು ಪ್ರವೇಶಿಸಲು ಎಂದಿಗೂ ಸಾಧ್ಯವಾಗಲಾರದು. ಈಶ್ವರಭಕ್ತಿಯನ್ನು ನಡೆಸುವ ಕ್ರಮವು ಭಗವದ್ಗೀತೆಯಲ್ಲಿ 9ನೇ ಅಧ್ಯಾಯ 26ನೇ ಶ್ಲೋಕದಲ್ಲಿ ಈ ಕೆಳಗೆ ಹೇಳಿದಂತೆ ಪ್ರತಿಪಾದಿತವಾಗಿದೆ.

ಶ್ಲೋ ॥ ಪತ್ರಂ ಪುಷ್ಪಂ ಫಲಂ ತೋಯಂ ♦ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ ♦ ಅಶ್ನಾಮಿ ಪ್ರಯತಾತ್ಮನಃ ॥

"ಯಾವನು ಎಲೆ, ಹೂ, ಹಣ್ಣು, ನೀರು, ಇವುಗಳನ್ನು ನನ್ನಲ್ಲಿನ ಭಕ್ತಿಯಿಂದಲೂ ಶ್ರದ್ಧೆಯಿಂದಲೂ, ನಿಷ್ಕಲ್ಮಷವಾದ ಮನಸ್ಸಿನಿಂದ ನನಗೆ ಅರ್ಪಿಸುತ್ತಾನೆಯೋ ಆತನ ಈ ರೀತಿಯಾದ ಪೂಜಾದ್ರವ್ಯಗಳು ನನ್ನನ್ನು ನಿಜವಾಗಿಯೂ ಸೇರುವುವು. ಅಂದರೆ ಭಕ್ತಿಶ್ರದ್ಧೆಗಳಿಂದ ಅರ್ಪಿಸಿದಂಥ ಇವುಗಳನ್ನು ನಾನು ಬಹಳ ಪ್ರೀತಿಯಿಂದ ಸ್ವೀಕರಿಸುವೆನು. ಭಕ್ತಿ ಶ್ರದ್ಧೆಗಳಿಲ್ಲದೆ ಮಾಡಿದ ಪೂಜೆಯು ಎಷ್ಟೇ ವೈಭವದಿಂದ ನಡೆಸಿದರೂ ಅದು ಎಂದಿಗೂ ನನ್ನನ್ನು ಸೇರದು." ಎಂದು ಕೃಷ್ಣಪರಮಾತ್ಮನು ಅರ್ಜುನನನ್ನು ಕುರಿತು ಹೇಳುತ್ತಾನೆ. ವಶಿಷ್ಠ, ವಿಶ್ವಾಮಿತ್ರ, ನಾರದಾದಿ ಋಷಿಗಳು ನಮ್ಮ ಮನೆಗಳಿಗೆ ಅತಿಥಿಗಳಾಗಿ ಬಂದ ಪಕ್ಷದಲ್ಲಿ ಅವರಿಗೆ ಶ್ರದ್ಧೆ ಮತ್ತು ಭಕ್ತಿಗಳಿಂದ ಅತಿಥಿಪೂಜೆಯನ್ನು ಯಾವ ರೀತಿಯಲ್ಲಿ ನಡೆಸುತ್ತೇವೆಯೋ ಅದರಂತೆಯೇ ಪರಮಾತ್ಮನೆಂಬ ಭಾವನೆಯಿಂದ ನಾವು ಪೂಜೆಮಾಡುವ ಪ್ರತಿಮೆ ಅಥವಾ ಚಿತ್ರಪಠ ಇವುಗಳನ್ನು ಪ್ರತ್ಯೇಕ ವಾದ ಒಂದು ಕೊಠಡಿಯಲ್ಲಿಟ್ಟು, ಸ್ತ್ರೀಪುರುಷರು, ಸ್ನಾನಮಾಡಿ, ಶುಚಿ ಯಾದ ಮಡಿಬಟ್ಟೆಯನ್ನುಟ್ಟುಕೊಂಡು ಪ್ರತಿನಿತ್ಯವೂ ಅಭಿಷೇಕಾದಿ ಷೋಡಶೋಪಚಾರಪೂಜೆಯನ್ನು ಆ ದೇವತಾ ಪ್ರತಿಮೆಗೆ ಸಲ್ಲಿಸಿ, ಪರಿ ಶುದ್ಧವಾದ ಮನಸ್ಸಿನಿಂದ ಫಲ ಮತ್ತು ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯ ಮೊದಲಾದ ಚತುರ್ವಿಧ ಅನ್ನಗಳನ್ನು ನಿವೇದನಮಾಡಿ, ಧೂಪ ದೀಪ ಗಳಿಂದ ಅರ್ಪಿಸಿ, ಮಂತ್ರಪುಷ್ಪ, ಪ್ರದಕ್ಷಿಣ ನಮಸ್ಕಾರ ಮೊದಲಾದವು ಗಳನ್ನು ಪ್ರತಿಮೆ ಮತ್ತು ಚಿತ್ರಪಠಗಳನ್ನು ಲಕ್ಷ್ಯದಲ್ಲಿಟ್ಟು ಪರಮಾತ್ಮ ನನ್ನು ತೃಪ್ತಿಗೊಳಿಸಬೇಕು.

ಮೇಲೆ ಹೇಳಿದ ಪದಾರ್ಥಗಳ ನಿವೇದನೆಯ ಕ್ರಮವು ಹೇಗೆಂದರೆ, ನಾವು ಭಕ್ತಿಶ್ರದ್ಧೆಗಳಿಂದ ಮಾಡಿದ ಮಧುರ ಪದಾರ್ಥಗಳನ್ನು ಪ್ರತಿಮೆಯ ಅಥವಾ ಚಿತ್ರಪಠದ ಮುಂಭಾಗದಲ್ಲಿರಿಸಿ,

ಶ್ರುತಿ ॥ ಓಂ ಭೂರ್ಭುವಸ್ಸುವಃ ।
ಓಂ ತತ್ಸವಿತುರ್ವರೇಣ್ಯಂ ।

ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥

ಎಂಬ ಚತುರ್ವಿಂಶತ್ಯಕ್ಷರಗಳಿಂದ ಕೂಡಿದ ಗಾಯತ್ರೀಮಂತ್ರವನ್ನುಚ್ಚರಿಸುತ್ತ, ಪದಾರ್ಥಗಳ ಮೇಲೆ ನೀರಿನಿಂದ ಪ್ರೋಕ್ಷಿಸಿ, "ದೇವ ಸವಿತುಃ ಪ್ರಸವಾ" ಎಂಬ ಮಂತ್ರವನ್ನು ಹೇಳಿ, "ಸತ್ಯಂತ್ವರ್ತೇನ ಪರಿಷಿಂಚಯಾಮಿ" ಎಂಬ ವೇದ ಮಂತ್ರವನ್ನುಚ್ಚರಿಸುತ್ತಾ ಪದಾರ್ಥಗಳ ಸುತ್ತಲೂ ನೀರಿನಿಂದ ಸುತ್ತುಗಟ್ಟಬೇಕು. ಇದಾದಮೇಲೆ

"ಓಂ ಪ್ರಾಣಾಯ ಸ್ವಾಹಾ ।
ಓಂ ಅಪಾನಾಯ ಸ್ವಾಹಾ ।
ಓಂ ವ್ಯಾನಾಯ ಸ್ವಾಹಾ ।
ಓಂ ಉದಾನಾಯ ಸ್ವಾಹಾ ।
ಓಂ ಸಮಾನಾಯ ಸ್ವಾಹಾ ।
ಓಂ ಬ್ರಹ್ಮಣೇ ಸ್ವಾಹಾ ।"

ಎಂಬುದಾಗಿ ಸ್ವಾಹಾ ಮಂತ್ರದೊಡಗೂಡಿದ ಪಂಚವಾಯುಗಳ ಹೆಸರುಗಳನ್ನು ಉಚ್ಚಸ್ವರದಿಂದ ಉಚ್ಚರಿಸುತ್ತಾ ಎರಡು ಕೈಗಳಿಂದ ದೇವತೆಗೆ ತಾವು ನಿವೇದನಕ್ಕಾಗಿ ಇಟ್ಟಿರುವ ಪದಾರ್ಥಗಳನ್ನು ದೇವತೆಯ ಕಡೆಗೆ ತೋರಿಸಬೇಕು. ಇದಾದಮೇಲೆ ಅರ್ಘ್ಯಪಾದ್ಯಾಚಮನೀಯಗಳನ್ನು ಉದ್ಧರಣೆಗಳಲ್ಲಿ ನೀರು ತುಂಬಿ ಮೂರುಬಾರಿ ಅರ್ಘ್ಯಪಾತ್ರೆಯಲ್ಲಿ ಎರೆಯಬೇಕು. ಮತ್ತು ಶುದ್ಧಾಚಮನೀಯವನ್ನು ಮೂರಾವರ್ತಿ ಮಾಡಿ ಮುಗಿಸಬೇಕು.

ಈರೀತಿಯಲ್ಲಿ ಭಗವದಾರಾಧನೆಯನ್ನು ಮಾಡಿ ಮುಗಿಸಿದಮೇಲೆ ಮನೆಯಲ್ಲಿರುವ ಆಬಾಲವೃದ್ಧರೂ ಒಟ್ಟಿಗೆ ಕುಳಿತು, ಭಗವನ್ನಿವೇದನವಾದ ಪದಾರ್ಥವನ್ನು ಪರಮಾತ್ಮಸ್ವರೂಪವೆಂದೆಣಿಸಿ ಪರಿಶುದ್ಧವಾದ ಮನಸ್ಸಿನಿಂದ ಸಾವಧಾನವಾಗಿ ಭುಜಿಸಬೇಕು. ಈ ಪದ್ಧತಿಯನ್ನು ಉತ್ತರದೇಶವಾಸಿಗಳಾದ ಬ್ರಾಹ್ಮಣರು ಮಾತ್ರವೇ ಪ್ರತಿದಿನವೂ ಕ್ರಮವಾಗಿ ಅನುಸರಿಸುತ್ತಿದ್ದಾರೆ. ಆ ಬ್ರಾಹ್ಮಣರಲ್ಲಿ ದೊಡ್ಡ ದೊಡ್ಡ ಹುದ್ದೆಯಲ್ಲಿರುವವರೂ ಮತ್ತು ಮಹಾ ಧನಿಕರೂ, ತಾವೇ ದೇವತಾರಾಧನೆಯನ್ನು

ಈರೀತಿಯಾಗಿ ನಡೆಸುವುದಕ್ಕೆ ಸಾಧ್ಯವಿಲ್ಲದಿದ್ದಲ್ಲಿ ಈತೆರನಾದ ದೇವತಾರಾಧನೆಯು ನಿರಾತಂಕವಾಗಿ ನಡೆಸಿಕೊಂಡು ಬರುವ ಸಲುವಾಗಿ ಒಬ್ಬೊಬ್ಬ ಬ್ರಾಹ್ಮಣನನ್ನು ತಮ್ಮ ಮನೆಯಲ್ಲಿ ಗೊತ್ತುಮಾಡಿಕೊಂಡಿರುತ್ತಾರೆ. ಕ್ಷತ್ರಿಯವೈಶ್ಯಶೂದ್ರಾದಿಗಳಾದರೋ, ಈ ಬಗೆಯಾದ ದೇವಪೂಜಾ ಕ್ರಮವನ್ನು ನಡೆಸಲಾರದೆ, ಕೃತ್ತಿಕಾನಕ್ಷತ್ರ, ಅಮಾವಾಸ್ಯೆ, ಹಬ್ಬ, ಹರಿದಿನ ಮೊದಲಾದ ದಿನಗಳಲ್ಲಿ ಮಟ್ಟಿಗೆ ತಕ್ಕಮಟ್ಟಿಗೆ ನಡೆಸುತ್ತಿದ್ದಾರೆ. ಮೇಲೆ ಹೇಳಿದ ಮೂರು ವರ್ಣದವರೂ, ಈಗ ಹೇಳಿದ ದಿನಗಳಲ್ಲದೆ, ಉಳಿದ ದಿನಗಳಲ್ಲಿಯೂ ತಪ್ಪದೆ ಭಗವಂತನನ್ನು ಭಕ್ತಿಯಿಂದಾರಾಧಿಸಿ, ಬ್ರಾಹ್ಮಣರಂತೆಯೇ ಪರಿಶುದ್ಧಮನಸ್ಕರಾಗಿ ಧೂಪದೀಪನೈವೇದ್ಯಾದಿಗಳಿಂದ ಪ್ರತಿದಿನವೂ ತಮಗೆ ಇಷ್ಟವಾದ ದೈವ ಪ್ರತಿಮೆಗಳನ್ನು ಭಕ್ತಿಶ್ರದ್ಧೆಗಳಿಂದ ತೃಪ್ತಿಗೊಳಿಸಿ, ನಿವೇದನೆಮಾಡಿದ ಶೇಷಾನ್ನವನ್ನು ಭುಜಿಸಲು ಯತ್ನಿಸಬೇಕು.

ನಾವು ಭುಜಿಸಬೇಕೆಂದಿರುವ ಪ್ರತಿ ಪದಾರ್ಥವನ್ನೂ ದೇವರಿಗೆ ಏತಕ್ಕೆ ಮೊದಲು ನಿವೇದಿಸಬೇಕೆಂದು ಕೇಳಿದರೆ ಈ ಮುಂದೆ ಹೇಳುವುದೇ ಅದಕ್ಕೆ ಉತ್ತರ. "ಅನ್ನಂ ಚ ಬ್ರಹ್ಮ" ಎಂಬುವ ಶ್ರುತಿಪ್ರಮಾಣದಂತೆ ಭೋಜನ ಪದಾರ್ಥವೆಲ್ಲವೂ ಬ್ರಹ್ಮಸ್ವರೂಪವು. ಅವುಗಳಲ್ಲಿ ಜೀವನಿದ್ದಾನೆ. ಪದಾರ್ಥಗಳ ಖಂಡನ, ಮತ್ತು ಪಚನ ಇವುಗಳಿಂದ ಅವುಗಳಿಗೆ ದೋಷವುಂಟಾಗುತ್ತದೆ. ಈ ಪದಾರ್ಥಗಳನ್ನು ದೇವತೆಗೆ ನಿವೇದನೆ ಮಾಡಿದರೆ ಅವುಗಳಲ್ಲಿನ ಮೇಲೆ ಹೇಳಿದ ದೋಷಗಳು ತೊಲಗಿ ಜೀವನು ಪುನಃ ಅದರಲ್ಲಿ ಆವಿರ್ಭವಿಸುತ್ತಾನೆ. ಇಂತಹ ಆಹಾರ ಪದಾರ್ಥಗಳೇ ನಮ್ಮ ಶರೀರಗಳನ್ನು ಬೆಳೆಸುವುದಕ್ಕೆ ಸಹಕಾರಿಗಳು. ಆದುದರಿಂದ ಸ್ತ್ರೀಪುರುಷರು ತಾವು ಭುಜಿಸುವುದಕ್ಕೆ ಮೊದಲು ಮೇಲೆ ಹೇಳಿದ ದೇವತಾ ನಿವೇದನೆಯ ಪದ್ಧತಿಯನ್ನನುಸರಿಸುವುದು ಬಹಳ ಉತ್ತಮವಾದದ್ದು. ಈ ವಿಷಯವನ್ನು ಕುರಿತು ಭಗವದ್ಗೀತೆ 3ನೇ ಅಧ್ಯಾಯ 13ನೇ ಶ್ಲೋಕದಲ್ಲಿ ಶ್ರೀ ಕೃಷ್ಣಪರಮಾತ್ಮನು ಅರ್ಜುನನನ್ನು ಕುರಿತು ಹೀಗೆಂದು ಹೇಳಿರುತ್ತಾನೆ.

ಶ್ಲೋ ॥ ಇಷ್ಟಾನ್ ಭೋಗಾನ್ ಹಿ ವೋ ದೇವಾ ♦ ದಾಸ್ಯಂತೇ ಯಜ್ಞ ಭಾವಿತಾಃ ।
ತೈ ರ್ದತ್ತಾ ನ ಪ್ರದಾಯೈಭ್ಯೋ ♦ ಯೋ ಭುಂಕ್ತೇ ಸ್ತೇನ ಏವ ಸಃ ॥

ಓ ಸ್ತ್ರೀಪುರುಷರಿರಾ ! ಯಜ್ಞದಿಂದ ಸಂತುಷ್ಟರಾದ ದೇವತೆಗಳು ನಿಮ್ಮ ಅಭೀಷ್ಟ ಭೋಗಗಳನ್ನು ಸಲ್ಲಿಸುತ್ತಾರೆ. ಹೀಗೆ ದೇವತೆಗಳಿಂದ ಕೊಡಲ್ಪಟ್ಟ ಐಶ್ವರ್ಯವನ್ನು ಪುನಃ ಯಜ್ಞರೂಪದಿಂದ ಆ ದೇವತೆಗಳನ್ನು ತೃಪ್ತಿಪಡಿಸಲು ಯಾವನು ಉಪಯೋಗಿಸುವುದಿಲ್ಲವೋ ಅವನು ಬಹಳ ಮೋಸಗಾರ ಮತ್ತು ಕಳ್ಳ. ಯಜ್ಞವೆಂದರೆ ದೇವತಾರಾಧನೆ. ದೇವತೆಗಳ ಅನುಗ್ರಹದಿಂದ ಪಡೆದ ಅಕ್ಕಿ, ರಾಗಿ, ಗೋಧಿ ಮೊದಲಾದ ಧಾನ್ಯಗಳಿಂದ ಆಹಾರಪದಾರ್ಥಗಳನ್ನು ಮಾಡಿ ತನ್ನ ಇಷ್ಟದೇವತೆಗೆ ಭಕ್ತಿಯಿಂದ ನಿವೇದನೆ ಮಾಡುವುದೇ ಯಜ್ಞ. ಹೀಗೆ ದೇವತೆಗಳಿಂದ ಕೊಡಲ್ಪಟ್ಟ ಪದಾರ್ಥವನ್ನು ಅವರಿಗೇ ವಂಚನೆಮಾಡಿ ನಿವೇದನೆಮಾಡದೆ ನಾವು ಭುಂಜಿಸಿದರೆ ಅದಕ್ಕಿಂತಲೂ ಮೋಸಕೃತ್ಯವು ಬೇರೊಂದುಂಟೇ ?

ಅರ್ಜುನ :—ಗೋಪಾಲದೇವಾ ! ಯಜ್ಞದಿಂದ ತೃಪ್ತರಾದ ದೇವತೆಗಳು ಜನಗಳ ಕೋರಿಕೆಗಳನ್ನು ಸಲ್ಲಿಸುತ್ತಾರೆಂದೂ, ನಾವು ಪಾಕಮಾಡಿ ಭುಜಿಸಬೇಕೆಂದಿರುವ ಪದಾರ್ಥಗಳನ್ನು ಮೊದಲು ಭಗವಂತನಿಗೆ ನಿವೇದನ ಮಾಡಿ ಅನಂತರ ಸೇವಿಸಬೇಕೆಂದೂ, ಹಾಗೆ ಮಾಡದಿದ್ದಲ್ಲಿ ಜನಗಳು ಚೋರರಿಗಿಂತಲೂ ಕಡೆಯಾಗುತ್ತಾರೆಂದೂ ಹೇಳುವುದಕ್ಕೆ ಕಾರಣವೇನು? ದೇವತೆಗಳು ಕೊಟ್ಟ ಪದಾರ್ಥಗಳನ್ನು ಪುನಃ ಅವರಿಗೆ ನಿವೇದಿಸಿದರೆ ಅವರಿಗೆ ಯಾವ ವಿಧವಾದ ಪ್ರೀತಿಯು ಅದರಿಂದುಂಟಾಗುತ್ತದೆ? ಹಾಗೆ ನಿವೇದಿಸದೆ ಭುಂಜಿಸಿದರೆ ಅಂತಹರು ಹೇಗೆ ಚೋರರೆಂದು ಪರಿಗಣಿಸಲ್ಪಡುತ್ತಾರೆ? ಈ ವಿಷಯವನ್ನು ನನಗೆ ವಿಪುಲವಾಗಿ ವಿಶದಪಡಿಸಬೇಕೆಂದು ಕೋರುತ್ತೇನೆ.

ಕೃಷ್ಣ :—ಅರ್ಜುನಾ ! ನೀನು ರಾಜ್ಯಪರಿಪಾಲನೆಯನ್ನು ಮಾಡುವ ರಾಜನಲ್ಲವೇ ! ಸಾವಿರಾರು ಜನರು ನಿನ್ನಲ್ಲಿ ಸಂಬಳಕ್ಕಿದ್ದು ನಿನ್ನನ್ನು ಸೇವಿಸುತ್ತಿರುವರಲ್ಲವೇ ! ಅವರು ಆ ರೀತಿಯಾಗಿ ನಿನ್ನ ಸೇವೆ ಮಾಡುತ್ತಿರುವುದಕ್ಕೆ ಕಾರಣವೇನು ?

ಅರ್ಜುನ:—ಅವರು ನನ್ನನ್ನು ಸೇವೆಮಾಡುವುದಕ್ಕಾಗಿಯೇ ನನ್ನಿಂದ ವೇತನವನ್ನು ಪಡೆದು ಜೀವಿಸುತ್ತಿರುವರು.

ಕೃಷ್ಣ:—ಹಾಗಾದರೆ, ಆ ಸಾವಿರಾರು ಜನಗಳಲ್ಲಿ ಕೆಲವರು ಶ್ರೇಷ್ಠವಾದ ವಸ್ತುಗಳನ್ನು ಆಗಾಗ್ಗೆ ನಿನಗೆ ಕಾಣಿಕೆಯರೂಪವಾಗಿ ಸಮರ್ಪಿಸುತ್ತಿದ್ದಾರೆ ಮತ್ತೆ ಕೆಲವರು ಹಾಗೆ ಮಾಡುತ್ತಿಲ್ಲ ಅಲ್ಲವೇ?

ಅರ್ಜುನ:—ಹೌದು, ಕೆಲವರು ಸಮರ್ಪಿಸುತ್ತಾರೆ ಮತ್ತೆ ಕೆಲವರು ಸಮರ್ಪಿಸುವುದಿಲ್ಲ.

ಕೃಷ್ಣ:—ಅವರೀರ್ವ ಪಂಗಡಗಳಲ್ಲಿ ಯಾರಲ್ಲಿ ನಿನಗೆ ಹೆಚ್ಚು ಪ್ರೀತಿಯಿದೆ, ಕಾಣಿಕೆಗಳನ್ನು ಕೊಟ್ಟವರಲ್ಲಿಯೋ ಇಲ್ಲವೇ ಕೊಡದವರಲ್ಲಿಯೋ?

ಅರ್ಜುನ:—ಕಾಣಿಕೆಗಳನ್ನು ಕೊಡುವವರ ಮೇಲೆಯೇ ಹೆಚ್ಚು ಪ್ರೀತಿಯಿರುವುದು ಸ್ವಭಾವ. ಏಕೆಂದರೆ ಅವರು ನನ್ನನ್ನು ಯಾವಾಗಲೂ ಸ್ಮರಿಸುತ್ತಲೂ ಮತ್ತೆ ಗೌರವಿಸುತ್ತಲೂ ಇರುವರು. ನನ್ನ ಪ್ರೀತಿಯು ಅವರಲ್ಲಿಯೇ ಅಧಿಕ.

ಕೃಷ್ಣ:—ನಿನಗೆ ಸಮರ್ಪಿಸಿದ ಕಾಣಿಕೆಗಳು ನೀನು, ಅವರಿಗೆ ವೇತನರೂಪವಾಗಿ ಕೊಟ್ಟ ಹಣದಲ್ಲಿಯೋ ಇಲ್ಲವೇ, ಅವರು ಬೇರೆ ಸಂಪಾದಿಸಿಕೊಂಡು ಬರುತ್ತಾರೆಯೋ?

ಅರ್ಜುನ:—ನಾನು ಕೊಟ್ಟ ಹಣದ ಭಾಗವೇ ಅದು. ನಾನು ಅವರಿಗೆ ಕೊಡದಿದ್ದಲ್ಲಿ ಅವರಿಗೆ ಹಣವು ಮತ್ತೆಲ್ಲಿಂದ ಬಂದೀತು?

ಕೃಷ್ಣ:—ಅವರು ಆರೀತಿಯಾಗಿ ನಿನಗೆ ಅರ್ಪಿಸುವ ಕಾಣಿಕೆಗಳಿಂದ ನಿನಗಾಗುವ ಪ್ರಯೋಜನವಾವುದು? ನಿನ್ನಲ್ಲಿಲ್ಲದ ಪದಾರ್ಥಗಳನ್ನೇನಾದರೂ ನಿನಗೆ ಅವರು ತಂದು ಕೊಡುತ್ತಿದ್ದಾರೆಯೋ?

ಅರ್ಜುನ:—ಇಲ್ಲ.

ಕೃಷ್ಣ:—ಅವರು ಅವನ್ನು ನಿನಗೆ ಕೊಡದಿದ್ದರೆ, ನಿನಗೆ ಕೊರತೆಯೇನಾದರೂ ಇರುತ್ತಿತ್ತೇ?

ಅರ್ಜುನ :—ಸರ್ವಥಾ ಇಲ್ಲ.

ಕೃಷ್ಣ :—ಹಾಗಾದರೆ, ನಿನಗೆ ಅವರ ಮೇಲೆ ಅಭಿಮಾನವು ಹೆಚ್ಚು ವುದಕ್ಕೆ ಕಾರಣವೇನು ?

ಅರ್ಜುನ:—ಅವರಿಗೆ ನನ್ನಲ್ಲಿ ಹೆಚ್ಚಾಗಿ ಭಕ್ತಿಶ್ರದ್ಧೆಗಳೂ, ಗೌರವ ವಿಶ್ವಾಸಗಳೂ ಉಂಟಾಗಿವೆಯೆಂದು ತಿಳಿಯಬರುತ್ತದೆ. ಆದುದರಿಂದಲೇ ಅವರಮೇಲೆ ನನಗೆ ಪ್ರೀತಿ ಹೆಚ್ಚು.

ಕೃಷ್ಣ :—ಅವರುಗಳು ಕೊಟ್ಟ ಕಾಣಿಕೆಗಳಿಂದ ನಿನಗೆ ಪ್ರಯೋಜನ ವಿಲ್ಲದಿದ್ದರೂ, ನೀನು ಅವುಗಳನ್ನು ಸ್ವೀಕರಿಸಿದ ಸಲುವಾಗಿ ನಿನಗೆ ಅವ ರಲ್ಲುಂಟಾಗಿರುವ ಅಭಿಮಾನದಿಂದ ಅವರಿಗೆ ಯಾವುದಾದರೂ ಲಾಭ ವುಂಟೋ ?

ಅರ್ಜುನ :—ಉಂಟು. ಉತ್ತಮ ಉದ್ಯೋಗ, ಹೆಚ್ಚು ಸಂಬಳ ಇವುಗಳೆಲ್ಲವೂ, ಅವರು ನನ್ನ ವಿಷಯದಲ್ಲಿ ತೋರಿಸಿದ ಗೌರವಾದಿಗಳಿಂದ ನನಗುಂಟಾದ ಅಭಿಮಾನದ ಫಲವಾಗಿ, ದೊರಕುತ್ತವೆ. ಇದರಿಂದ ಅವರು ಅಭಿವೃದ್ಧಿಯನ್ನೈದುವರು.

ಕೃಷ್ಣ :—ನಿನಗೆ ಕಾಣಿಕೆಗಳನ್ನು ಸಮರ್ಪಿಸದಿರುವವರನ್ನು ನೀನು ಯಾವರೀತಿಯಿಂದ ಕಾಣುತ್ತಿ ?

ಅರ್ಜುನ :—ಅಂತಹರಿಗೆ ಅನ್ಯಾಯವಾದ ಕಷ್ಟವನ್ನು ಕೊಡು ತ್ತೇನೆ. ಮತ್ತು ಅವರನ್ನು ಅಭಿವೃದ್ಧಿಗೆ ತರುವ ಯೋಚನೆಯನ್ನೇ ಮಾಡೆನು.

ಕೃಷ್ಣ :—ಇದೇ ರೀತಿಯಲ್ಲಿ, ಇಂದ್ರಾದಿ ದೇವತೆಗಳೂ, ಜನಗಳ ಜೀವನಾರ್ಥವಾಗಿ ಮಳೆಯನ್ನು ಕರೆದು ಅದರಿಂದ ಸಸ್ಯಾದಿಗಳನ್ನು ಪೋಷಿಸುವರು. ಅದರಿಂದುಂಟಾದ ಧಾನ್ಯಾದಿಗಳನ್ನು ಪಾಕಮಾಡಿ ತಾವು ಭುಜಿಸುವುದಕ್ಕೆ ಮೊದಲು, ಇಂದ್ರಾದಿ ದೇವತೆಗಳಿಗೆ ನಿವೇದನ ಮಾಡಿದ್ದೇ ಆದರೆ, ಅವರಿಗೆ ಸಂತೋಷವುಂಟಾಗಿ ಅವರು ಪ್ರತಿ ಸಂವತ್ಸರವೂ ಸಕಾಲಕ್ಕೆ ವೃಷ್ಟಿಯನ್ನು ಸುರಿಸುವರು. ಅದರಿಂದ

ಪ್ರಪಂಚವೆಲ್ಲವೂ ದಾರಿದ್ರ್ಯದುಃಖವನ್ನು ಅನುಭವಿಸದೆ ಸುಖಸಂತೋಷ ದಿಂದಿರುವುದು. ಇದೇ ನಿನ್ನ ಪ್ರಶ್ನೆಗೆ ಉತ್ತರ, ತಿಳಿಯಿತೇ ಅರ್ಜುನಾ! ಇದೂ ಅಲ್ಲದೆ ಭಗವದ್ಗೀತ 9ನೇ ಅಧ್ಯಾಯ 27ನೇ ಶ್ಲೋಕದಲ್ಲಿ,

ಶ್ಲೋ॥ ಯತ್ಕರೋಷಿ ಯದಶ್ನಾಸಿ ♦ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ! ♦ ತತ್ಕುರುಷ್ವ ಮದರ್ಪಣಂ ॥

ಕೌಂತೇಯಾ! ಜೀವನೋಪಾಯಕ್ಕಾಗಿ ಯಾವ ಲೌಕಿಕ ಕರ್ಮ ಗಳನ್ನು ಮಾಡುತ್ತೀಯೋ, ದೇಹಧಾರಣೆಗಾಗಿ ಯಾವುದನ್ನು ಭುಜಿಸು ತ್ತೀಯೋ, ಪುಣ್ಯವನ್ನು ಗಳಿಸುವುದಕ್ಕಾಗಿ ಯಜ್ಞ, ದಾನ, ತಪಸ್ಸು ಮೊದಲಾದ ಯಾವ ಯಾವ ಸತ್ಕರ್ಮಗಳನ್ನು ನೀನು ಮಾಡುತ್ತೀಯೋ ಅವೆಲ್ಲವನ್ನೂ ನನಗೆ ಅರ್ಪಿಸಿಬಿಡು. ಅಂದರೆ ಬ್ರಹ್ಮಾರ್ಪಣವೆಂದು ಮಾಡು. 'ನಾನು, ನನ್ನದು' ಎಂಬುವ ಅಹಂಕಾರಮಮಕಾರಗಳನ್ನು ಬಿಟ್ಟು, ಪ್ರತಿ ವಸ್ತುವನ್ನೂ ಬ್ರಹ್ಮಾರ್ಪಣವೆಂದು ಮಾಡಿದ್ದೇ ಆದರೆ, ಅದೇ ನೀವು ನನಗೆ ಮಾಡುವ ಪೂಜೆ. ಈ ರೀತಿಯಾಗಿ ನಡೆಸುತ್ತಿರುವ ಕರ್ಮಯೋಗಿಯು, ಸಂಸಾರ ಕರ್ಮದಿಂದ ಜಾಗ್ರತೆಯಾಗಿ ತಪ್ಪಿಸಿಕೊಂಡು, ಆತ್ಮಜ್ಞಾನವನ್ನು ಸಂಪಾದಿಸಿದಮೇಲೆ ಪರಮಾತ್ಮಸ್ವರೂಪನಾದ ನನ್ನಲ್ಲಿ ಐಕ್ಯನಾಗುತ್ತಾನೆಂದು ತಿಳಿಯಬೇಕು. ಆದುದರಿಂದ ಪಾಠಕರೇ! ಯಾವು ದನ್ನಾದರೂ ಭುಜಿಸುವುದಕ್ಕೆ ಮುಂಚೆ ಅದನ್ನು ನಾವು ಮಂತ್ರದಿಂದ ಶುದ್ಧಿಮಾಡಬೇಕು.

ಯಜ್ಞಗಳನ್ನು ಮಾಡಿ "ಅಮೃತ" ವೆಂದು ಕರೆಯಲ್ಪಡುವ ಯಜ್ಞಶೇಷವನ್ನು ಭುಜಿಸುವವನು ಸರ್ವಪಾಪಗಳಿಂದಲೂ ಮುಕ್ತನಾಗು ತ್ತಾನೆ. ಇಷ್ಟೇ ಅಲ್ಲದೆ, ಯಜ್ಞಗಳಲ್ಲಿ ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ ಮತ್ತು ಮನುಷ್ಯಯಜ್ಞ ಎಂದು ಐದು ಬಗೆ. ಅವುಗಳನ್ನು ಈ ಕೆಳಗೆ ವಿವರಿಸಿದೆ.

ಶ್ಲೋ॥ "ಅಧ್ಯಾಪನಂ ಬ್ರಹ್ಮಯಜ್ಞಃ ♦ ಪಿತೃಯಜ್ಞಸ್ತು ತರ್ಪಣಂ ।
ಹೋಮೋ ದೈವೋ ಬಲಿ ರ್ಭೌತೋ ♦ ನೃಯಜ್ಞೋಽತಿಥಿಪೂಜನಂ ॥"
"ಪಂಚೈತಾನ್ಯೋ ಮಹಾಯಜ್ಞಾ ♦ ನಾಹಾಪಯತಿ ಶಕ್ತಿತಃ ।
ಸ ಗೃಹೇಽಪಿ ವಸನ್ನಿತ್ಯಂ ♦ ಸೂನಾ ದೋಷೈ ರ್ನ ಲಿಪ್ಯತೇ ॥ (ಸ್ಮೃತಿ)

ವೇದಪಠನೆಯೇ ಬ್ರಹ್ಮಯಜ್ಞವು. ಪಿತೃದೇವತೆಗಳಿಗೆ ತಿಲೋದಕವನ್ನು ಕೊಡುವುದೇ ಪಿತೃತರ್ಪಣವು. ಇಂದ್ರಾದಿದೇವತೆಗಳನ್ನು ಕುರಿತು ಹವಿರ್ಭಾಗವನ್ನು ಅಗ್ನಿಮುಖೇನ ಅರ್ಪಿಸುವುದೇ ದೈವಯಜ್ಞವು. ಕ್ಷುದ್ರ ದೇವತೆಗಳಾದ ಭೂತಾದಿಗಳಿಗೆ ಬಲಿಯನ್ನು ಕೊಡುವುದೇ ಭೂತಯಜ್ಞವು. ಅತಿಥಿ ಅಭ್ಯಾಗತರ ಸತ್ಕಾರವೇ ನರಯಜ್ಞವು. ಮೇಲೆಹೇಳಿದುವುಗಳಲ್ಲಿ ಭೂತಯಜ್ಞವು ಕರುಣವೆಂಬುದೇ ಇಲ್ಲದ ಪಾಪಾತ್ಮರು ತಮ್ಮ ಕ್ಷುದ್ರ ಕೋರಿಕೆಗಳನ್ನು ಸಲ್ಲಿಸುವುದಕ್ಕಾಗಿ ಮಾಡುವಂಥದು. ಈ ಪಂಚಯಜ್ಞಗಳನ್ನು ಪ್ರತಿದಿನವೂ ಯಾವಯಾವಾತನು ಮಾಡುತ್ತಾನೆಯೋ ಆತನು ಗೃಹಸ್ಥನಾದರೂ ಪಂಚಮಹಾಪಾತಕಗಳಿಂದ ಬಿಡುಗಡೆಯಾಗುತ್ತಾನೆ ಮತ್ತು ಪಂಚಸೂನಾ ದೋಷಗಳು ಎಂದಿಗೂ ಆತನನ್ನು ಮುಟ್ಟವು. ಒರಳು, ಒನಕೆ, ಅರೆಯುವಬಂಡೆ, ರುಬ್ಬುವಗುಂಡು, ಒಲೆ, ಜಲಪಾತ್ರೆಗಳು ಇವೇ ಮೊದಲಾದುವುಗಳು ಸಂಸಾರಕ್ಕೆ ಅತಿ ಮುಖ್ಯವಾದವುಗಳು. ಅವಿಲ್ಲದಿದ್ದರೆ ಕೆಲಸಗಳು ನಡೆಯುವುದು ಕಷ್ಟ. ಕೆಲಸಗಳು ಮಾಡುವಾಗ, ಮೇಲೆ ಹೇಳಿದ ಸ್ಥಳಗಳಲ್ಲಿರುವ ಕಣ್ಣಿಗೆ ಕಾಣಿಸದಷ್ಟು ಸಣ್ಣ ಕ್ರಿಮಿಗಳು ಅನೇಕವಾಗಿ ನಾಶಹೊಂದುತ್ತಿರುವುದು ಸಹಜವು. ಈರೀತಿಯಾಗಿ ಅವುಗಳ ನಾಶದಿಂದುಂಟಾದ ದೋಷಗಳೇ ಪಂಚಸೂನಾದೋಷಗಳೆಂದು ದೊಡ್ಡವರು ಹೇಳುತ್ತಾರೆ. ಮತ್ತು ಭಾರತದಲ್ಲಿ ಇದನ್ನು ಪ್ರಮಾಣಿಸಿ ಈರೀತಿಯಾಗಿ ಬರೆದಿದೆ.

ಚ ॥ ಜಲವು ಧರಿತ್ರಿ ಯಂಬರವು ♦ ಸರ್ವವು ಜೀವಿಗಳಿಂದ ತುಂಬಿರಲ್, ।
ಬಲಿವು ದವಶ್ಯದಿಂ ಸಕಲ ♦ ಕರ್ಮಗಳಲ್ಲಿಯು ಹಿಂಸೆ, ಹಿಂಸೆಯಂ ॥
ತೊಲಗಿಸೆ ದೇಹಯಾತ್ರೆ ಬಹು ♦ ದುರ್ಘಟ ವಪ್ಪುದು ಸತ್ಯ, ವಿಷ್ಟನುಂ ।
ತಿಳಿಯದೆ ಹಿಂಸೆಗ್ಯೆಯದಿರಿ ♦ ರೆಂಬುದ ಪೇಳ್ವರು ಭೂಮಿಯೋಳ್ಕೆಲರ್ ॥

(ತೆಲುಗು.)

ಮನೆಗಳಲ್ಲಿ ಇಂತಹ ದೋಷಗಳು ಉಂಟಾಗುವುದರಿಂದಲೇ ಗೃಹಸ್ಥರಿಗೆ ಸ್ವರ್ಗಪ್ರಾಪ್ತಿಯು ಕಷ್ಟಸಾಧ್ಯವು. ಸ್ವರ್ಗವೇ ಲಭಿಸದಿರುವಾಗ ಮೋಕ್ಷವನ್ನೆಂದಿಗೂ ಪಡೆಯಲಾರರು. ಮೇಲೆ ಹೇಳಿದ ಪಂಚಯಜ್ಞಗಳನ್ನು ಕ್ರಮವಾಗಿ ಪ್ರತಿದಿನವೂ ನಡೆಸುತ್ತಾ ಬಂದಲ್ಲಿ ಈ ಪಂಚ

ಸೂನಾದೋಷಗಳು ಅಂಟುವುದಿಲ್ಲ. ಆಗ ಮೋಕ್ಷವನ್ನು ಸುಲಭವಾಗಿ ಪಡೆಯುಬಹುದು. ಹೀಗೆ ಮಾಡದವರು ತಾವು ಮಾಡಿದ ಪಾಪಕರ್ಮಗಳ ಫಲವನ್ನು ಅನುಭವಿಸದೆ ತೀರದು. ಯಜ್ಞಗಳೆಂದರೆ ಅಗ್ನಿಷ್ಟೋಮಾದಿ ಯಜ್ಞಗಳೇ ಅಲ್ಲ. ಪ್ರತಿಮಾನವನೂ ತನ್ನ ಇಷ್ಟದೇವತೆಯನ್ನು ಉಪಾಸನಾಮೂರ್ತಿಯಾಗಿ ಭಾವಿಸಿಕೊಂಡು ಅದನ್ನು ಪ್ರತಿದಿನವೂ ಪೂಜೆ ಮಾಡಿ ಧೂಪದೀಪನೈವೇದ್ಯಾದಿಗಳಿಂದ ತೃಪ್ತಿಪಡಿಸಿ, ನಿವೇದನಮಾಡಿದ ಶೇಷವನ್ನು ''ದೈವಂ ಮಾನುಷರೂಪೇಣ'' ಎಂಬಂತೆ ಕಾಲಕ್ಕೆ ಸರಿಯಾಗಿ ತಾನು ಮನೆಗೆ ಬಂದಂಥ ಅತಿಥಿಗಳನ್ನು ಸತ್ಕರಿಸಿ ಬಳಿಕ ತಾನು ಭುಜಿಸಬೇಕು. ಈರೀತಿಯಾದ ಅತಿಥಿಪೂಜೆಯೂ ದೈವಪ್ರೀತಿಗಾಗಿ ನಾವು ಮಾಡುವ ಯಜ್ಞಗಳಲ್ಲೊಂದು ಎಂದು ಭಾವಿಸಬೇಕು. ಸಮಸ್ತ ಭೂತಗಳೂ ಭಗವತ್ಸ್ವರೂಪಗಳೇ ಎಂದು ತಿಳಿಯಬೇಕು. ಇರುವೆಯಿಂದ ಬ್ರಹ್ಮನವರಿವಿಗೂ ಇರುವ ಸಮಸ್ತ ಜೀವಿಗಳ ಹೃದಯಕಮಲದಲ್ಲಿ ಆ ಪರಬ್ರಹ್ಮವೇ ಆತ್ಮಸ್ವರೂಪನಾಗಿಯೂ ಸಾಕ್ಷಿಮಾತ್ರನಾಗಿಯೂ ತುಂಬಿರುವುದರಿಂದ ನಮ್ಮ ಮನೆಗಳನ್ನು ಆಶ್ರಯಿಸಿಕೊಂಡಿರುವ ನಾಯಿ, ಬೆಕ್ಕು ಮೊದಲಾದ ಪ್ರಾಣಿಗಳಿಗೆ ಅನ್ನಹಾಕಿ ಸಾಕುವುದೂ ಕೂಡ ದೈವಪ್ರೀತಿಗಾಗಿ ಆಚರಿಸುವ ಯಜ್ಞಗಳಲ್ಲೊಂದಾಗಿರುತ್ತದೆ. ಇದೂ ಅಲ್ಲದೆ ತಿಂಗಳು ತಿಂಗಳಿಗೂ ಬರುತ್ತಿರುವ ಅಮಾವಾಸ್ಯೆದಿನಗಳಲ್ಲಿ ಪಿತೃತರ್ಪಣವೆಂಬ ಕರ್ಮವನ್ನು ಪಿತೃದೇವತೆಗಳ ತೃಪ್ತಿಗಾಗಿ ನಡೆಸುತ್ತ ಬರಬೇಕು. ಈ ತರ್ಪಣಾದಿಕರ್ಮಗಳನ್ನು ನಡೆಸುವ ವಿಧಾನವನ್ನು ಈ ಮುಂದಿನ ಪ್ರಕರಣದಲ್ಲಿ ವಿವರಿಸಿದೆ.



# ಅಮಾವಾಸ್ಯೆ ದಿನಗಳಲ್ಲಿ ಪಿತೃತರ್ಪಣವನ್ನು ಮಾಡುವ ಕ್ರಮ.

ಓ ಭ್ರಾತೃ ಭಗಿನಿಯರೇ! ನೀವುಗಳು ಪ್ರತಿ ತಿಂಗಳಲ್ಲಿಯೂ ಬರುತ್ತಿರುವ ಅಮಾವಾಸ್ಯೆ ಮೊದಲಾದ ಪಿತೃದಿನಗಳಲ್ಲಿ ಎಳ್ಳನ್ನು ನೀರಿನಲ್ಲಿ ಸೇರಿಸಿ ಪಿತೃತರ್ಪಣವನ್ನು ಮಾಡಬೇಕಾದ ವಿಧಿಗಳನ್ನು ಈ ಕೆಳಗೆ ವಿಶದಪಡಿಸಿದೆ. ಆದುದರಿಂದ ತರ್ಪಣಮಾಡುವುದಕ್ಕೆ ಅರ್ಹರಾದವರೆಲ್ಲರೂ ಅಮಾವಾಸ್ಯೆ, ಸಂಕ್ರಮಣ ಮತ್ತು ಪರ್ವಕಾಲಗಳು, ಈ ವೇಳೆಗಳಲ್ಲಿ ಸ್ನಾನಮಾಡಿ ಶುಭ್ರವಸ್ತ್ರವನ್ನುಟ್ಟು ಕ್ರಮವಾಗಿ ಪಿತೃತರ್ಪಣವನ್ನು ನಡೆಸುತ್ತಾ ಬರಬೇಕು.

ಅಮಾವಾಸ್ಯೆದಿನ ಬೆಳಗ್ಗೆ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಸ್ನಾನಮಾಡಿ ಮಡಿಬಟ್ಟೆಯನ್ನುಟ್ಟು ಮೂರು ಎಸಳು ದರ್ಭೆಗಳನ್ನು ತೆಗೆದುಕೊಂಡು ಜೊತೆಸೇರಿಸಿ ಮಡಿಸಿ ಪವಿತ್ರವನ್ನು ಕಟ್ಟಿ ಅದನ್ನು ಒಂದು ಚೋಟುದ್ದ ಇರುವಂತೆ ಸರಿಪಡಿಸಿಕೊಂಡು ಇಟ್ಟುಕೊಳ್ಳಬೇಕು. ಇದಾದಮೇಲೆ ನಾಲ್ಕಂಗುಲ ಉದ್ದವುಳ್ಳ ಕೆಲವು ದರ್ಭೆಗಳನ್ನೂ ಕತ್ತರಿಸಿ ಇಟ್ಟುಕೊಳ್ಳಬೇಕು. ಮತ್ತು ಇವಕ್ಕಿಂತಲೂ ಉದ್ದವಾದ ಕೆಲವು ದರ್ಭೆಗಳನ್ನೂ ಕರೀ ಎಳ್ಳುಕಾಳುಗಳನ್ನೂ ಒಂದು ಹಚ್ಚಿದೆಲೆಯಮೇಲೆ ಇಟ್ಟುಕೊಳ್ಳಬೇಕು. ಹೀಗೆ ತರ್ಪಣಕ್ಕೆ ಬೇಕಾದ ಎಳ್ಳು ಮತ್ತು ದರ್ಭೆಗಳನ್ನು ಸಿದ್ಧಪಡಿಸಿಕೊಂಡಮೇಲೆ ಒಂದು ಮಣೆಯಮೇಲೆ, ತರ್ಪಣಮಾಡುವವನು, ಪೂರ್ವಾಭಿಮುಖವಾಗಿ ಕುಳಿತು ಮೇಲೆ ಹೇಳಿದ ಎಳ್ಳು ಮತ್ತು ದರ್ಭೆಗಳನ್ನುಳ್ಳ ಎಲೆಯನ್ನು ತನ್ನ ಬಲಗೈ ಕಡೆ ಇರಿಸಿಕೊಳ್ಳಬೇಕು. ಇದಾದಮೇಲೆ, ತಲೆ, ಮುಖ, ಎದೆ, ನಾಭಿಸ್ಥಾನ, ಭುಜಗಳು, ನಡುಗೈ (ತೋಳು) ಕೈಯ ಮಣಿಕಟ್ಟುಗಳು, ಮೊಣಕೈಮೊಣಕಾಲು ಚಿಪ್ಪುಗಳು, ಎರಡು ಕಡೆಯ ಪಕ್ಕೆಲುಬುಗಳಿರುವ ಸ್ಥಳಗಳು, ಕುತ್ತಿಗೆಯ

ಸುತ್ತ ಮೊದಲಾದ ಸ್ಥಳಗಳಲ್ಲಿ "ಶಿವರಾಜಯೋಗ ಸಮಾಧಿ, ಇದನ್ನು ಜಪಿಸಬೇಕು" ಎಂದು ಶೀರ್ಷಿಕದಲ್ಲಿ ಹೇಳಿರುವ ರೀತಿಯಲ್ಲಿ ವಿಭೂತಿ ಧರಿಸುವಂತಹ ಮಂತ್ರಗಳನ್ನೋ ಇಲ್ಲವೇ, ಶ್ರೀಚೂರ್ಣವನ್ನು ಧರಿಸುವ ಮಂತ್ರಗಳನ್ನೋ ಪಠನೆಮಾಡಿ ಆ ಮಂತ್ರಗಳಿಂದ ವಿಭೂತಿ ಇಲ್ಲವೇ ಶ್ರೀಚೂರ್ಣವನ್ನು ತಮ್ಮ ತಮ್ಮ ಕುಲಾಚಾರ ಪದ್ಧತಿಗನುಗುಣವಾಗಿ ಧರಿಸಬೇಕು. ಇದಾದಮೇಲೆ ನೀರಿನ ತಂಬಿಗೆಯನ್ನೂ ಉದ್ಧರಣೆಯಿಂದ ಕೂಡಿದ ನೀರಿನ ಪಂಚಪಾತ್ರೆಯನ್ನೂ ತನ್ನ ಸಮೀಪದಲ್ಲಿಟ್ಟುಕೊಳ್ಳಬೇಕು.

ತರುವಾಯ ಗಣಪತಿ ಪೂಜೆಯನ್ನು ಕ್ರಮವಾಗಿ ನೆರವೇರಿಸಿ ಪಿತೃ ತರ್ಪಣವನ್ನು ಪ್ರಾರಂಭಿಸಬೇಕು. ಇದಕ್ಕಾಗಿ ಈ ಕೆಳಗೆ ಹೇಳುವ ಮಂತ್ರಗಳನ್ನು ಚನ್ನಾಗಿ ಪಠಿಸಿಟ್ಟುಕೊಂಡಿದ್ದೀ ಆದರೆ, ಬ್ರಾಹ್ಮಣರ ಸಹಾಯವಿಲ್ಲದೆಯೇ ಅಮಾವಾಸ್ಯೆ ಮೊದಲಾದ ಪಿತೃದಿನಗಳಲ್ಲಿ ಮಾಡಬೇಕಾದ ಮೇಲೆ ಹೇಳಿದ ಪಿತೃತರ್ಪಣವನ್ನು ಮಾಡಬಹುದು.

ಇದನ್ನು ಮಾಡುವ ಕ್ರಮ ಹೇಗೆಂದರೆ:—ಮೊದಲು ಎರಡು ಸಣ್ಣ ದರ್ಭೆಯ ತುಂಡುಗಳನ್ನು ತಾನು ಕುಳಿತ ಆಸನದ ಕೆಳಭಾಗದಲ್ಲಿ ಹಾಕಿ ವಿಷ್ಟರಾಸನವನ್ನು ಕಲ್ಪಿಸಿಕೊಳ್ಳಬೇಕು. ಇದಾದಮೇಲೆ ಕೆಳಗೆ ಹೇಳಿರುವ ಧ್ಯಾನಮಂತ್ರವನ್ನು ಪಠಿಸಬೇಕು.

ಶ್ಲೋ॥ ಶುಕ್ಲಾಂಬರಧರಂ ವಿಷ್ಣುಂ ♦ ಶಶಿವರ್ಣಂ ಚತುರ್ಭುಜಂ।
ಪ್ರಸನ್ನವದನಂ ಧ್ಯಾಯೇತ್ ♦ ಸರ್ವವಿಘ್ನೋಪಶಾಂತಯೇ॥

ಅಂದರೆ ಬಿಳಿಯ ಬಟ್ಟೆಯನ್ನುಟ್ಟು ಚಂದ್ರನಂತೆ ದೇಹಕಾಂತಿಯನ್ನುಳ್ಳ, ಸರ್ವವ್ಯಾಪಿಯಾದ, ನಾಲ್ಕು ಭುಜಗಳನ್ನುಳ್ಳ, ಅನುಗ್ರಹವನ್ನು ಸೂಚಿಸುವ ಮುಖಕಾಂತಿಯನ್ನುಳ್ಳ ಪರಮಾತ್ಮನನ್ನು ಮುಂದೆ ಮಾಡುವ ಪಿತೃತರ್ಪಣವೆಂಬ ಕರ್ಮಕ್ಕೆ ವಿಘ್ನವುಂಟಾಗದಿರುವುದಕ್ಕಾಗಿ ಭಕ್ತಿಶ್ರದ್ಧೆಗಳಿಂದ ಧ್ಯಾನಿಸಬೇಕು.

ಎಂಬ ಮೇಲೆ ಹೇಳಿದ ಮಂತ್ರವನ್ನು ಪಠಿಸಿ ಎರಡು ಕೈಗಳನ್ನೂ ಜೋಡಿಸಿ ನಮಸ್ಕರಿಸಬೇಕು. ಇದಾದನಂತರ, ಎರಡು ಸಣ್ಣ ದರ್ಭೆ

ಗಳನ್ನು ಬಲಗೈಯ ಮಧ್ಯಮಾ (ನಡುಬೆರಳು) ಕನಿಷ್ಠಿಕಾ (ಕಿರುಬೆರಳು) ಇವುಗಳ ನಡುವೆ ಇರುವ ಅನಾಮಿಕಾ (ಉಂಗುರದ ಬೆರಳು) ಕ್ಕೆ ಅಂಟಿಕೊಂಡಿರುವಂತೆ ಕೊನೆಗಳು ಮೇಗೈ ಕಡೆಗೆ ಬರುವಂತೆ ಒತ್ತಿ ಹಿಡಿದು, ಎಡದಂಗೈಯನ್ನು ದರ್ಭೆಸಹಿತವಾದ ಬಲದಂಗೈಯಿಂದ ಮುಚ್ಚಿಕೊಂಡು, ಎಡಗೈ ಕೆಳಭಾಗವನ್ನು ಬಲದ ಮೊಣಕಾಲಿನ ಮೇಲಿಟ್ಟು ಈ ಕೆಳಗೆ ಹೇಳುವ ಮಂತ್ರಗಳನ್ನು ಪಠಿಸಬೇಕು. ಈ ಮಂತ್ರಗಳನ್ನು ಹೃದ್ಪಾಟ ಮಾಡಿಕೊಳ್ಳುವುದು ಅವಶ್ಯಕ.

"ಶಿವಾಭ್ಯಾಂ, ಶಿವಶಿವ, ಶಂಭುರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ, ದ್ವಿತೀಯಪ್ರಹರಾರ್ಧೇ, ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ಭರತವರ್ಷೇ, ಭರತಖಂಡೇ, ಮೇರೋಃ ದಕ್ಷಿಣದಿಗ್ಭಾಗೇ, ಶ್ರೀಶೈಲಸ್ಯ ಈಶಾನ್ಯಪ್ರದೇಶೇ, ಕೃಷ್ಣಾ ಗೋದಾವರ್ಯೋರ್ಮಧ್ಯದೇಶೇ, ಭಗವತ್ಸನ್ನಿಧೌ, ವರ್ತಮಾನವ್ಯಾವಹಾರಿಕೇ, ಚಾಂದ್ರಮಾನೇ, ಪ್ರಭವಾದಿ ಷಷ್ಠಿಸಂವತ್ಸರಾಣಾಂ ಮಧ್ಯೇ........ಸಂವತ್ಸರೇ........ಅಯನೇ........ಋತೌ ಕೃಷ್ಣಪಕ್ಷೇ ಅಮಾವಾಸ್ಯಾಯಾಂ ವಾಸರಃ........ವಾಸರಯುಕ್ತಾಯಾಂ ವಿಷ್ಣುನಕ್ಷತ್ರ, ವಿಷ್ಣುಯೋಗ, ವಿಷ್ಣುಕರಣ, ಏವಂಗುಣ, ವಿಶೇಷಣ, ವಿಶಿಷ್ಟಾಯಾಂ, ಪುಣ್ಯತಿಥೌ, ಅಮಾವಾಸ್ಯದರ್ಶಪ್ರಯುಕ್ತ, ಪುಣ್ಯಕಾಲೇ ಅಸ್ಮತ್ಪಿತೄನ್, ಉದ್ದಿಶ್ಯ, ಅಸ್ಮತ್ಪಿತೃಪ್ರೀತ್ಯರ್ಥಂ ಅಸ್ಮತ್ಪಿತೃತರ್ಪಣಮಹಂ ಕರಿಷ್ಯೇ ||"

ಈ ಮೇಲೆ ಹೇಳಿದ ಮಂತ್ರಗಳನ್ನು ಪಠಿಸಿ ಬೆರಳುಗಳ ಮಧ್ಯದಲ್ಲಿನ ದರ್ಭೆಗಳನ್ನು ತೆಗೆದುಹಾಕಿ, ಉದಕವನ್ನು ಸ್ಪರ್ಶಿಸಬೇಕು. ಇದಾದ ಮೇಲೆ ದಕ್ಷಿಣಾಭಿಮುಖವಾಗಿ ತಿರುಗಿ ಎಡದ ಮೊಣಕಾಲು ಮತ್ತು ಎಡದಂಗೈ ಇವೆರಡನ್ನೂ ನೆಲದ ಮೇಲೆ ಊರಿ ಕುಳಿತು, ಮೊದಲೇ ಸಿದ್ಧಪಡಿಸಿಕೊಂಡಿದ್ದ ನಾಲ್ಕಂಗುಲಗಳ ದರ್ಭೆಗಳಲ್ಲಿ ಆರನ್ನೆತ್ತಿ ಭೂಮಿಯ ಮೇಲೆ ಊರಿರುವ ಎಡಗೈ ಎಡಗಾಲು ಸಂದಿನಲ್ಲಿ ಇವುಗಳನ್ನು ತೆಗೆದುಕೊಂಡು ಹೋಗಿ ತನ್ನ ಮುಂಭಾಗದಲ್ಲಿ ಪೂರ್ವಾಗ್ರವಾಗಿ ಒಂದು ಗೇಣುದ್ದ

ದೊಳಗಾಗಿ ಎರಡೆರಡು ದರ್ಭೆಗಳನ್ನು ಒಟ್ಟು ಸೇರಿಸಿ ತಟ್ಟೆಯಲ್ಲಿ ಮೂರು ಸ್ಥಳಗಳಲ್ಲಿಡಬೇಕು. ಹೀಗಿಟ್ಟಮೇಲೆ ಮೊದಲು ಕುಳಿತಂತೆಯೇ ಮೊಣಕೈ ಮೊಣಕಾಲು ಸಂದಿನಲ್ಲಿ ಮೂರು ದರ್ಭೆಗಳನ್ನು ತೆಗೆದುಕೊಂಡು ದಕ್ಷಿಣಾಗ್ರವಾಗಿ ಹಿಂದೆ ತಟ್ಟೆಯೊಳಗಿಟ್ಟ ದರ್ಭೆಗಳ ಮೇಲೆ ಇಡಬೇಕು. ಹೀಗಿಟ್ಟ ಮೇಲೆ, ಮೊಣಕೈ ಮೊಣಕಾಲು ಸಂದಿನ ಮೂಲಕ ಬಲಗೈಯಿಂದ ಎಳ್ಳನ್ನು ತೆಗೆದುಕೊಂಡು ಹೋಗಿ ಆ ಮೂರು ಮಂತ್ರಗಳನ್ನು ಪಠಿಸುತ್ತಾ, ಆ ಎಳ್ಳನ್ನು ದರ್ಭೆಯ ಅಗ್ರಭಾಗದಲ್ಲಿಯೂ, ಮಧ್ಯಭಾಗದಲ್ಲಿಯೂ ಮತ್ತು ಬುಡದ ಭಾಗದಲ್ಲಿಯೂ ಸ್ವಲ್ಪಸ್ವಲ್ಪವಾಗಿಡಬೇಕು. ಎಳ್ಳನ್ನು ಈರೀತಿಯಾಗಿಡುವಾಗ ಪಠಿಸುವ ಮಂತ್ರಗಳಾವುವೆಂದರೆ :—

ಶಿವಗೋತ್ರ ಸ್ವರೂಪಸಾದ:—"(ತಂದೆ) ಅಸ್ಮತ್ಪಿತಾ........ ಗೋತ್ರಾಣಾಂ............(ಹೆಸರು) ಪ್ರಥಮರೂಪಾಣಾಂ, ಆವಾಹನಂ ನಮಃ" ಎಂಬ ಮಂತ್ರವನ್ನು ಪಠಿಸಿ ದರ್ಭೆಯ ಅಗ್ರಭಾಗದಲ್ಲಿ ತಿಲವನ್ನು ಹಾಕಬೇಕು. ಇದಾದಮೇಲೆ, (ತಾತ) ಪಿತಾಮಹಃ.......ಗೋತ್ರಾಣಾಂ..... (ಹೆಸರು) ದ್ವಿತೀಯ ರೂಪಾಣಾಂ ಆವಾಹನಂ ನಮಃ" ಎಂಬ ಮಂತ್ರವನ್ನು ಉಚ್ಚರಿಸಿ ದರ್ಭೆಯ ಮಧ್ಯಸ್ಥಾನದಲ್ಲಿ ಎಳ್ಳುಕಾಳುಗಳನ್ನು ಹಾಕಬೇಕು. ಅನಂತರ, (ಮುತ್ತಾತ) "ಪ್ರಪಿತಾಮಹಃ........... ಗೋತ್ರಾಣಾಂ....(ಹೆಸರು)....ತೃತೀಯ ರೂಪಾಣಾಂ ಆವಾಹನಂ ನಮಃ" ಎಂಬ ಮಂತ್ರವನ್ನು ಹೇಳಿ ಮೇಲೆ ಹೇಳಿದಂತೆ ಎಳ್ಳು ಕಾಳುಗಳನ್ನು ದರ್ಭೆಯ ಬುಡದ ಭಾಗದಲ್ಲಿ ಹಾಕಬೇಕು.

ಇದಾದ ತರುವಾಯ, ತಾಯಿ "ಅಸ್ಮತ್ ಮಾತಾ........ಗೋತ್ರಾಣಾಂ........(ಹೆಸರು)........ಪ್ರಥಮ ರೂಪಾಣಾಂ ಆವಾಹನಂ ನಮಃ" ಎಂಬ ಮಂತ್ರದಿಂದ ತಂದೆಗಾಗಿ ಅರ್ಪಿಸಿದ ಸ್ಥಳದಲ್ಲಿಯೇ ಪುನಃ ಎಳ್ಳನ್ನು ಹಾಕಬೇಕು. ಅನಂತರ "(ತಂದೆಯತಾಯಿ)" ಪಿತಾಮಹೀ........... ಗೋತ್ರಾಣಾಂ.....(ಹೆಸರು) ದ್ವಿತೀಯ ರೂಪಾಣಾಂ ಆವಾಹನಂ ನಮಃ" ಎಂಬ ಮಂತ್ರದಿಂದ ಪಿತಾಮಹನಿಗೆ ಇಟ್ಟ ಸ್ಥಳದಲ್ಲಿಯೇ ಪುನಃ ಎಳ್ಳನ್ನು ಹಾಕಬೇಕು. ಹೀಗೆಯೇ ಮುತ್ತಾತನ ಹೆಂಡತಿಗೆ "ಪ್ರಪಿತಾಮಹೀ........

ಗೋತ್ರಾಣಾಂ.........(ಹೆಸರು).........ತೃತೀಯರೂಪಾಣಾಂ ಆವಾಹನಂ ನಮಃ" ಎಂಬ ಮಂತ್ರಪಠನೆಯಿಂದ ಮುತ್ತಾತನಿಗೆ ಏರ್ಪಡಿಸಿದ ಸ್ಥಳದ ಮೇಲೆಯೇ ಪುನಃ ಎಳ್ಳು ಕಾಳುಗಳನ್ನು ಹಾಕಬೇಕು. ಇದೇ ರೀತಿಯಲ್ಲಿಯೇ ಮುಡಿಹಾಕಿದ ದರ್ಭೆಗಳ ಮೇಲೆಯೂ ಮೇಲೆ ಹೇಳಿದ ಮಂತ್ರಗಳನ್ನು ಪಠಿಸಿಕೊಂಡೇ ಮೂರು ಸ್ಥಳಗಳಲ್ಲಿಯೂ ಎಳ್ಳನ್ನು ಹಾಕಬೇಕು.

ಮೇಲೆ ಹೇಳಿದುದನ್ನೆಲ್ಲಾ ಕ್ರಮವಾಗಿ ನಡೆಸಿದನಂತರ, ಒಂದು ಉದ್ದವಾದ ದರ್ಭೆಯನ್ನು ನೀರಿನ ಕಲಶದ ಸುತ್ತ ಸುತ್ತಿ, ಅದರಲ್ಲಿರುವ ನೀರಿನೊಳಕ್ಕೆ ಒಂದು ದರ್ಭೆಯನ್ನು ಹಾಕಿ ಬಲಗೈಯಲ್ಲಿ ಎಳ್ಳನ್ನು ತೆಗೆದುಕೊಂಡು ಮೇಲೆ ಹೇಳಿದ ಕಲಶವನ್ನು ಎಡಗೈಲಿ ಹಿಡಿದುಕೊಂಡು ಅದರಲ್ಲಿರುವ ಜಲವನ್ನು ಆ ಕಲಶದಲ್ಲಿ ಹಾಕಿರುವ ದರ್ಭೆಯ ಮೂಲಕ ಬಲದಂಗೈಯ್ಯೊಳಗಿರುವ ಎಳ್ಳಿನೊಳಕ್ಕೆ ಈ ಕೆಳಗೆ ಹೇಳಿರುವವರ ಹೆಸರುಗಳನ್ನು ಒಂದೊಂದಾಗಿ ಹೇಳುತ್ತಾ ಜಲದಿಂದ ಕೂಡಿದ ತಿಲತರ್ಪಣವನ್ನು ಮಾಡುತ್ತ ಬರಬೇಕು.

ಪಿತಾ (ತಂದೆ)..........ಗೋತ್ರಂ..........ಹೆಸರು..........ಪ್ರಥಮರೂಪಾಣಾಂ........ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ ಎಂಬದಾಗಿ ಹೇಳಿ ಮೂರು ಸಾರಿ ತರ್ಪಣವನ್ನು ಮಾಡಬೇಕು. ಪಿತಾಮಹಃ (ತಾತ)........ಗೋತ್ರಂ........ಹೆಸರು........ದ್ವಿತೀಯರೂಪಾಣಾಂ ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ. ಪ್ರಪಿತಾಮಹಃ (ಮುತ್ತಾತ)........ಗೋತ್ರಂ........ಹೆಸರು........ತೃತೀಯರೂಪಾಣಾಂ ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ ಅನಂತರ (ತಾಯಿ) ಮಾತಾ........ಗೋತ್ರಂ..........ಹೆಸರು........ಪ್ರಥಮರೂಪಾಣಾಂ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ಇದಾದನಂತರ ಪಿತಾಮಹೀ (ತಂದೆಯ ತಾಯಿ)...........ಗೋತ್ರಂ..........ಹೆಸರು...........ದ್ವಿತೀಯರೂಪಾಣಾಂ ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ಕಡೆಯಲ್ಲಿ (ಮುತ್ತಾತನ ಹೆಂಡತಿ) ಪ್ರಪಿತಾಮಹೀ........ಗೋತ್ರಂ........ಹೆಸರು......

ತೃತೀಯರೂಪಾಣಾಂ ತಿಲತರ್ಪಣಂ ನಮಃ, ತಿಲತರ್ಪಣಂ ನಮಃ, ತಿಲತರ್ಪಣಂ ನಮಃ. ಹೀಗೆಂಬ ಮಂತ್ರದಿಂದ ಪ್ರತಿಯೊಬ್ಬರಿಗೂ ಸಾಂಗವಾಗಿ ಮೂರು ಮೂರು ವೇಳೆ ಉಚ್ಚರಿಸಿ ತಿಲತರ್ಪಣವನ್ನು ಕೊಡಬೇಕು.

ಹೀಗೆ ಎಳ್ಳನ್ನು ನೀರಿನಲ್ಲಿ ಕಲೆಸಿ ತರ್ಪಣವನ್ನು ಮಾಡಿದಮೇಲೆ ಸರಿಯಾಗಿ ಕುಳಿತುಕೊಂಡು "ಸರ್ವೇಷಾಂ - ಕಾರುಣ್ಯಾನಾಂ, - ಪುಣ್ಯಲೋಕ ಫಲಾವಾಪ್ತ್ಯರ್ಥಂ" ಅಂದರೆ ದಯಾಶಾಲಿಗಳಾದ ಸಮಸ್ತ ಪಿತೃದೇವತೆಗಳಿಗೂ ಪಿತೃಲೋಕವುಂಟಾಗುವುದಕ್ಕಾಗಿ, ತಿಳಿದು, ತಿಳಿಯದೇ ಇರುವ ಮೂರು ಏಳಲ ಇಪ್ಪತ್ತೊಂದು ವಂಶಸ್ಥರಿಗೂ "ಧರ್ಮತರ್ಪಣಂ ನಮಃ ಧರ್ಮತರ್ಪಣಂ ನಮಃ" ಎಂದು ಹೇಳಿ ತರ್ಪಣವನ್ನು ನಡೆಸಬೇಕು. ಇದಾದನಂತರ,

ಶ್ಲೋ ‖ ಅಯೋಧ್ಯಾ, ಮಧುರಾ, ಮಾಯಾ, ♦ ಕಾಶೀ, ಕಾಂಚೀ, ಅವಂತಿಕಾ ।
ಪುರೀ ದ್ವಾರವತೀ ಚೈವ ♦ ಸಪ್ತೈತೇ ಮೋಕ್ಷದಾಯಕಾಃ ‖

ಶ್ಲೋ ‖ ಅಹಂ ಕಾಶೀಂ ಗಮಿಷ್ಯಾಮಿ ♦ ತತ್ರೈವ ನಿವಸಾ ಮ್ಯಹಂ ।
ಇತಿ ಬ್ರುವಾಣ ಸ್ಸತತಂ ♦ ಕಾಶೀವಾಸಫಲಂ ಲಭೇತ್ ‖

ಕಾಶೀ ವಿಶ್ವೇಶ್ವರಾಯನಮಃ ಎಂಬ ಶ್ಲೋಕಗಳನ್ನು ಪಠಿಸಿ, 'ಕಾಶೀ ಕಾಶೀ ಕಾಶೀ' ಎಂಬದಾಗಿ ಮೂರುವೇಳೆ ಹೇಳಿ ಮುಗಿಸಿ, ಎದ್ದು ನಿಂತು, ಎರಡು ಕೈಗಳನ್ನೂ ಜೋಡಿಸಿ, ತರ್ಪಣಮಾಡಿದ ಅರ್ಘ್ಯಪಾತ್ರೆಗೆ ಮೂರುಸಾರಿ ಪ್ರದಕ್ಷಿಣೆಯನ್ನು ಮಾಡಿ, ಪುನಃ ಮಣೆಯಮೇಲೆ ಕುಳಿತುಕೊಂಡು, ಬಟ್ಟೆಯ ಸೆರಗನ್ನು ಅರ್ಘ್ಯಪಾತ್ರೆಯೊಳಗಿನ ನೀರಿನಲ್ಲಿ ನೆನೆಸಿ ಹಿಂಡಿ ಕಣ್ಣಿಗೆ ಅದನ್ನು ಒತ್ತಿಕೊಳ್ಳಬೇಕು.

ತರುವಾಯ, ಉಳಿದ ಎಳ್ಳುಕಾಳುಗಳನ್ನು ಬಲಗೈಯಲ್ಲಿ ತೆಗೆದುಕೊಂಡು, "ಅಸ್ಮತ್ಪಿತೄನ್ ಯಥಾಸ್ಥಾನಂ ಪ್ರತಿಷ್ಠಾಪಯಾಮಿ" ಎಂದು ಹೇಳಿ ಆ ಎಳ್ಳನ್ನು ತಟ್ಟೆಯೊಳಗಿನ ದರ್ಭೆಯಮೇಲೆ ಹಾಕಿ ಮೂರು ದರ್ಭೆಯಿಂದ ಕೂಡಿದ ಪವಿತ್ರದ ಮುಡಿಯನ್ನು ಬಿಚ್ಚಿಬಿಟ್ಟು, ಆ ಎಳ್ಳು ಮತ್ತು ತರ್ಪಣದ ನೀರು ಮೊದಲಾದುವುಗಳನ್ನು ಭಾವಿಯಲ್ಲಾಗಲಿ, ಅಥವ ಹೂವಿನ ಗಿಡಗಳ ಮೇಲಾಗಲಿ ಯಾರೂ ತುಳಿಯದ ಸ್ಥಳದಲ್ಲಿ ಹಾಕ

ಬೇಕು. ತರ್ಪಣಕ್ಕಾಗಿ ಉಪಯೋಗಿಸಿದ ಎಳ್ಳು ನೆಲದಲ್ಲಿ ಬಿದ್ದು ಮೊಳಕೆ ಯಾಗಬಾರದು. ಹಾಗೆ ಹುಟ್ಟಿದ್ದೇ ಆದರೆ ಆ ತರ್ಪಣವು ಆಯಾ ಪಿತೃ ದೇವತೆಗಳಿಗೆ ಸಲ್ಲುವುದಿಲ್ಲ. ಮೇಲೆ ಹೇಳಿದಂತೆ ಅಮಾವಾಸ್ಯೆ ದಿನದಲ್ಲಿ ಪಿತೃತರ್ಪಣ ಕಾರ್ಯವನ್ನು ತಪ್ಪದೆ ಕ್ರಮವಾಗಿ ನೀವು ನಡೆಸುತ್ತಾ ಬಂದರೆ, ಮುಂದಿನ ಜನ್ಮದಲ್ಲಿ, ಇಂತಹ ಕರ್ಮಗಳನ್ನು ಬಿಟ್ಟು ಮುಂದಿನ ಮೆಟ್ಟಲನ್ನೇರುವಿರಿ.

ಹನ್ನೆರಡು ತಿಂಗಳುಗಳು, ವಾರಗಳು, ನಕ್ಷತ್ರಗಳು ಇವುಗಳ ಹೆಸರನ್ನು ಈ ಕೆಳಗೆ ವಿವರಿಸಿದೆ. ಆಯಾಯಾ ತಿಂಗಳಲ್ಲಿ ಬರುತ್ತಿರುವ ಅಮಾವಾಸ್ಯೆಯ ದಿನಗಳು, ನಕ್ಷತ್ರಗಳು, ವಾರಗಳು ಮತ್ತು ಅವುಗಳ ಪ್ರತಿ ನಾಮಗಳು ಇವುಗಳನ್ನು ಹೇಳಿವೆಯಾದುದರಿಂದ ಅದನ್ನನುಸರಿಸಿ, ತರ್ಪಣವನ್ನು ಮಾಡಬೇಕು.



# ತಿಂಗಳುಗಳು ೧೨.



ಚೈತ್ರವು (ಮೇಷಮಾಸೇ), ವೈಶಾಖವು (ವೃಷಭಮಾಸೇ), ಜ್ಯೇಷ್ಠವು (ಮಿಥುನಮಾಸೇ), ಆಷಾಢವು (ಕರ್ಕಾಟಕಮಾಸೇ), ಶ್ರಾವಣವು (ಸಿಂಹಮಾಸೇ), ಭಾದ್ರಪದವು (ಕನ್ಯಾಮಾಸೇ), ಆಶ್ವಯುಜವು (ತುಲಾಮಾಸೇ), ಕಾರ್ತೀಕವು (ವೃಶ್ಚಿಕಮಾಸೇ), ಮಾರ್ಗಶೀರ್ಷವು (ಧನುರ್ಮಾಸೇ), ಪುಷ್ಯವು (ಮಕರಮಾಸೇ), ಮಾಘವು (ಕುಂಭಮಾಸೇ), ಫಾಲ್ಗುಣವು (ಮೀನಮಾಸೇ).



# ಋತುಗಳು ೬.

| ಮಾಸಗಳು. | ಋತುನಾಮಗಳು. |
|---|---|
| ಚೈತ್ರ ಮತ್ತು ವೈಶಾಖ | ವಸಂತಋತೌ |
| ಜ್ಯೇಷ್ಠ ಮತ್ತು ಆಷಾಢ | ಗ್ರೀಷ್ಮಋತೌ |
| ಶ್ರಾವಣ ಮತ್ತು ಭಾದ್ರಪದ | ವರ್ಷಋತೌ |
| ಆಶ್ವಯುಜ ಮತ್ತು ಕಾರ್ತೀಕ | ಶರದೃತೌ |
| ಮಾರ್ಗಶಿರ ಮತ್ತು ಪುಷ್ಯ | ಹೇಮಂತಋತೌ |
| ಮಾಘ ಮತ್ತು ಫಾಲ್ಗುಣ. | ಶಿಶಿರಋತೌ |

ಎಂದು ಹೇಳಬೇಕು.

# ವಾರಗಳು ೭.

| ನಾಮಗಳು. | ಪ್ರತಿನಾಮಗಳು. |
|---|---|
| 1. ಆದಿವಾರವು | (ಭಾನುವಾಸರ ಯುಕ್ತಾಯಾಂ) |
| 2. ಸೋಮವಾರವು | (ಇಂದುವಾಸರ ಯುಕ್ತಾಯಾಂ) |
| 3. ಮಂಗಳವಾರವು | (ಭೌಮವಾಸರ ಯುಕ್ತಾಯಾಂ) |
| 4. ಬುಧವಾರವು | (ಸೌಮ್ಯವಾಸರ ಯುಕ್ತಾಯಾಂ) |
| 5. ಬೃಹಸ್ಪತಿವಾರವು | (ಗುರುವಾಸರ ಯುಕ್ತಾಯಾಂ) |
| 6. ಶುಕ್ರವಾರವು | (ಭಾರ್ಗವವಾಸರ ಯುಕ್ತಾಯಾಂ) |
| 7. ಶನಿವಾರವು | (ಸ್ಥಿರವಾಸರ ಯುಕ್ತಾಯಾಂ) |

ಎಂದು ಹೇಳಬೇಕು.

# ನಕ್ಷತ್ರಗಳು ೨೭.

1. ಅಶ್ವಿನೀ, 2. ಭರಣೀ, 3. ಕೃತ್ತಿಕಾ, 4. ರೋಹಿಣೀ, 5. ಮೃಗಶಿರಾ, 6. ಆರಿದ್ರಾ, 7. ಪುನರ್ವಸುಃ, 8. ಪುಷ್ಯಮಿ, 9. ಆಶ್ಲೇಷಾ, 10. ಮಖಾ, 11. ಪುಬ್ಬಾ, 12. ಉತ್ತರಾ, 13. ಹಸ್ತಾ, 14. ಚಿತ್ತಾ, 15. ಸ್ವಾತೀ, 16. ವಿಶಾಖಾ, 17. ಅನೂರಾಧಾ, 18. ಜ್ಯೇಷ್ಠಾ, 19. ಮೂಲಾ, 20. ಪೂರ್ವಾಷಾಢಾ, 21. ಉತ್ತರಾಷಾಢಾ, 22. ಶ್ರವಣಾ, 23. ಧನಿಷ್ಠಾ, 24, ಶತಭಿಷಾ, 25. ಪೂರ್ವಾಭಾದ್ರಾ, 26. ಉತ್ತರಾಭಾದ್ರಾ, 27. ರೇವತೀ.

ತರ್ಪಣಕ್ಕೆ ಅರ್ಹನಾದ ಪ್ರತಿಯೊಬ್ಬ ಮನುಷ್ಯನೂ ಹಿಂದೆ ಹೇಳಿದ ರೀತಿಯಲ್ಲಿಯೇ ಪಿತೃತರ್ಪಣವನ್ನು ಮಾಡುತ್ತ ಬರಬೇಕು. ಇಷ್ಟೇ ಅಲ್ಲದೆ, ಪ್ರತಿ ದಿನವೂ ಭುಜಿಸುವ ಆಹಾರವನ್ನು ಮಂತ್ರಗಳಿಂದ ಶುದ್ಧಿ ಮಾಡಿ ಅನಂತರ ಭೋಜನವನ್ನು ಮಾಡಬೇಕು. ಈರೀತಿಯಾಗಿ ಆಹಾರವನ್ನು ಪರಿಶುದ್ಧಿಮಾಡುವ ಕ್ರಮವು ಈ ಕೆಳಗೆ ವಿವರಿಸಿದೆ.

# ಆಹಾರಪದಾರ್ಥಗಳನ್ನು ಶುದ್ಧಿಮಾಡಿ ಭುಜಿಸುವ ಕ್ರಮ.

ಭೋಜನ ಮಾಡುವುದಕ್ಕೆ ಯೋಗ್ಯವಾದ ಹಚ್ಚಿದೆಲೆ, ಬಾಳೆಲೆ ಮೊದಲಾದ ಭೋಜನ ಪಾತ್ರೆಗಳ ಮುಂದೆ ಕುಳಿತು, ಅವುಗಳಲ್ಲಿ ಅನ್ನವೇ ಮೊದಲಾದ ಪಕ್ವಪದಾರ್ಥಗಳನ್ನು ಬಡಿಸಿದ ನಂತರ, ಅವುಗಳನ್ನು ತುಪ್ಪದಿಂದ ಮೊದಲು ಅಭಿಕರಿಸಬೇಕು. ಆಮೇಲೆ ದಕ್ಷಿಣಹಸ್ತದಲ್ಲಿ (ಬಲಗೈಯಲ್ಲಿ) ಸ್ವಲ್ಪ ಉದಕವನ್ನು ತೆಗೆದುಕೊಂಡು,

" ಓಂ ಭೂ ರ್ಭುವ ಸ್ಸುವಃ ।
ಓಂ ತತ್ಸವಿತು ರ್ವರೇಣ್ಯಂ ।
ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ " ॥

ಎಂಬ ಚತುರ್ವಿಂಶತಿ (ಇಪ್ಪತ್ತನಾಲ್ಕು) ಅಕ್ಷರಗಳೂ, ತ್ರಿಪದಗಳೂ ಷಟ್ಕುಕ್ಷಿಗಳೂ ಉಳ್ಳ ಈ ಗಾಯತ್ರೀ ಮಂತ್ರದಿಂದ ಆ ಆಹಾರ ಪದಾರ್ಥಗಳ ಮೇಲೆ ಪ್ರೋಕ್ಷಿಸಬೇಕು. ಇದರಿಂದ ಪಾಕಾದಿ ದೋಷಗಳು ಹೋಗಿ ಆಹಾರಪದಾರ್ಥಗಳು ಶುದ್ಧಿಯನ್ನು ಹೊಂದುತ್ತವೆ. ಅನಂತರ ಮತ್ತಷ್ಟು ಜಲವನ್ನು ತೆಗೆದುಕೊಂಡು "ಸತ್ಯಂ ತ್ವರ್ತೇನ ಪರಿಷಿಂಚಯಾಮಿ" ಎಂಬ ಮಂತ್ರದಿಂದ ಆ ಭೋಜನ ಪಾತ್ರೆಯ ಸುತ್ತಲೂ ನೀರನ್ನು ಬಿಡಬೇಕು. 'ಇರುವೆ ಮೊದಲಾದ ಪ್ರಾಣಿಗಳಾಗಲಿ ಅಥವ ಅನ್ನವನ್ನು ಮಲಿನಮಾಡತಕ್ಕ ಉಳಿದ ಯಾವುವೇ ಆಗಲಿ ಆಹಾರ ಪದಾರ್ಥಗಳ ಸಮೀಪಕ್ಕೆ ಬರದಿರಲಿ' ಎಂಬುದೇ ಇದರ ಮುಖ್ಯ ಉದ್ದೇಶ. ಇದಾದ ತರುವಾಯ ಎಡಗೈಯ ನಡು ಬೆರಳನ್ನು ಎಲೆಯಮೇಲೆ ಊರಿ ಸಂಕುಚಿತವಾದ ಬಲದಂಗೈಯೊಳಕ್ಕೆ ಗೃಹಿಣಿಯ ಕೈಯಿಂದಾಗಲಿ, ಗೃಹಿಣಿಯಿಲ್ಲದಿದ್ದಲ್ಲಿ ಯೋಗ್ಯರಾದ ಉಳಿದ ಯಾರಿಂದಾಗಲಿ ಆಪೋಶನಾ ಜಲವನ್ನು ಹಾಕಿಸಿಕೊಂಡು, "ಅಮೃತಮಸ್ತು, ಅಮೃತೋಪಸ್ತರಣಮಸೀ ಸ್ವಾಹಾ" ಎಂಬ ಮಂತ್ರೋಚ್ಚಾರಣೆಯಿಂದ ಆ ಉದಕವನ್ನು ಶಬ್ದಮಾಡದ ರೀತಿಯಲ್ಲಿ, ತುಟಿಯ ಮೂಲಕ ಬಾಯಿಯೊಳಕ್ಕೆ ತೆಗೆದುಕೊಳ್ಳಬೇಕು. ಇದಾದ ತರುವಾಯ ಪುನಃ ಅನ್ನದಮೇಲೆ ತುಪ್ಪವನ್ನು ಹಾಕಿಕೊಂಡು ಅಂಗುಷ್ಠಾ, ತರ್ಜನೀ, ಮಧ್ಯಮಾ (ಹೆಬ್ಬೆಟ್ಟು, ತೋರುಬೆರಳು ಮತ್ತು ನಡುಬೆರಳು) ಈ ಮೂರು ಬೆರಳುಗಳ ಸಹಾಯದಿಂದ ಸ್ವಲ್ಪಸ್ವಲ್ಪವಾಗಿ ಅನ್ನವನ್ನು ತೆಗೆದುಕೊಂಡು,

" ಓಂ ಪ್ರಾಣಾಯ ಸ್ವಾಹಾ ।
ಓಂ ಅಪಾನಾಯ ಸ್ವಾಹಾ ।
ಓಂ ವ್ಯಾನಾಯ ಸ್ವಾಹಾ ।
ಓಂ ಉದಾನಾಯ ಸ್ವಾಹಾ ।

ಓಂ ಸಮಾನಾಯ ಸ್ವಾಹಾ।
ಓಂ ಬ್ರಹ್ಮಣೇ ಸ್ವಾಹಾ।"

ಎಂಬ ಈ ಐದು ಪ್ರಾಣಾಯಾಮ ಮಂತ್ರಗಳನ್ನು ಬಾಯಲ್ಲಿ ಉಚ್ಚರಿಸುತ್ತ ಐದುವೇಳೆ ಹಲ್ಲಿಗೆ ತಗಲದಂತೆ ಬಾಯಿಯಲ್ಲಿ ಹಾಕಿಕೊಂಡು ಅಗಿಯದೆ ನುಂಗಬೇಕು. ಇದಕ್ಕೆ "ಪ್ರಾಣಾಹುತಿ" ಎಂದು ಹೆಸರು. ಅಂದರೆ ಶರೀರದಲ್ಲಿ "ಪ್ರಾಣೋಪಾನವ್ಯಾನೋದಾನಸಮಾನ" ಗಳೆಂಬ ಐದು ವಾಯುಗಳು ನೆಲಸಿರುವುವಾದಕಾರಣ ಅವುಗಳ ತೃಪ್ತ್ಯರ್ಥವಾಗಿ ಆಹಾರವನ್ನು ಭುಜಿಸುವುದಕ್ಕೆ ಮೊದಲು ಆಹುತಿಯನ್ನು ಕೊಡಬೇಕು.

ಈರೀತಿಯಾಗಿ ಮೇಲೆ ಹೇಳಿದ ರೀತಿಯಲ್ಲಿ ಆಯಾಯಾ ವಾಯುಗಳಿಗೆ ಆಯಾಯಾ ಮಂತ್ರೋಚ್ಚಾರಣೆಯಿಂದ ಆಹುತಿಯನ್ನು ಕೊಟ್ಟ ಬಳಿಕ, ಇದುವರಿವಿಗೂ ಎಲೆಯಮೇಲೆ ಊರಿದ ಎಡಗೈಯ ಮಧ್ಯಮಬೆರಳನ್ನು ಎತ್ತಿ ಅದನ್ನು ಎಲೆಗೆ ಸಮೀಪದಲ್ಲಿ ಭೂಮಿಯ ಮೇಲೆ ನೀರನ್ನು ಹಾಕಿಸಿಕೊಂಡು ಅದರಲ್ಲಿ ನೆನಸಿ, ಆ ಒದ್ದೆಯಾದ ಬೆರಳಿನಿಂದ ಚಕ್ಷುರಿಂದ್ರಿಯವನ್ನು (ಕಣ್ಣನ್ನು) ಸ್ಪರ್ಶಿಸಬೇಕು. ಮತ್ತು "ಬ್ರಹ್ಮಣಿ ಮಾತ್ಮಾ ಅಮೃತತ್ವಾಯ" ಎಂಬ ಮಂತ್ರವನ್ನು ಮನಸ್ಸಿನಲ್ಲಿ ಜಪಿಸುತ್ತಾ ತನ್ನ ಎದೆಯಭಾಗವನ್ನು ಆ ಬೆರಳಿನಿಂದ ಸವರಬೇಕು. ಭೋಜನ ಮಾಡುವುದಕ್ಕೆ ಮೊದಲು ನಡೆಸುವ ಕ್ರಮವು ಇದೇ. ಅನಂತರ ತಮಗೆ ಇಷ್ಟಬಂದ ಪದಾರ್ಥಗಳನ್ನು ವ್ಯಂಜನಾದಿಗಳೊಡನೆ ಕಲಿಸಿ ಭೋಜನ ಮಾಡಬೇಕು.

ಭೋಜನದಲ್ಲಿ ಅತಿಪಕ್ವ ಅಪಕ್ವವಾದವುಗಳನ್ನು ತಿನ್ನಬಾರದು. ಸಾತ್ವಿಕ ಆಹಾರವನ್ನೇ ಭುಜಿಸಬೇಕು. ಮಿತವಾಗಿ ಅಂದರೆ ಪ್ರಾಣಯಾಪನೆಗೆ ತಕ್ಕಷ್ಟು ತೆಗೆದುಕೊಳ್ಳಬೇಕು. ಹೀಗೆ ಮಾಡಿದರೆ ಆರೋಗ್ಯ ಭಾಗ್ಯವನ್ನು ಕಾಪಾಡಿಕೊಳ್ಳುವುದಲ್ಲದೆ ಮನಸ್ಸನ್ನು ಅತ್ತಿತ್ತ ತಿರುಗದಂತೆ ಸರಿಯಾದ ರೀತಿಯಲ್ಲಿ ಹದಗೊಳಿಸಬಹುದು. ಹಾಗಲ್ಲದೆ, ಅತಿಯಾಗಿ (ಮಿತವಿಲ್ಲದೆ) ತಾಮಸಾಹಾರವನ್ನು ಭುಜಿಸಲು ಯತ್ನಿಸಿದ್ದೇ ಆದರೆ, ಜೀರ್ಣಿಸದೆ ಮನಸ್ಸು ಮತ್ತು ಬುದ್ಧಿ ಇವು ಸ್ವಾಧೀನಕ್ಕೆ ಬರದೆ ನಡವಳಿಕೆ

ಗಳು ವ್ಯತ್ಯಸ್ತವಾಗುವುದಕ್ಕೆ ಅವಕಾಶವಾಗುತ್ತದೆ. ದಿವಾಸ್ವಪ್ನ, ದುಸ್ವಪ್ನ ಮೊದಲಾದುವುಗಳೆಲ್ಲವೂ ಈ ಮಿತವಿಲ್ಲದ ತಾಮಸಾಹಾರದ ಫಲ. ಯಾವುದಾದರೊಂದಲ್ಲಿ ಅತಿಯಾಸೆಯನ್ನಿಟ್ಟಿದ್ದೇ ಆದರೆ ಮಿತಿ ಮೀರಿದ ಆಹಾರಸೇವನೆಯ ಪರಿಣಾಮಗಳು ಅದರ ಬೆನ್ನಂಟಿಬರುತ್ತವೆ. ಆದುದರಿಂದ ದುಷ್ಪರಿಣಾಮಗಳಿಗೆ ಎಡೆಗೊಡದಿರುವುದಕ್ಕಾಗಿ ಸಾತ್ವಿಕಾಹಾರದ ಅಂದರೆ ಷಡ್ರಸಗಳಲ್ಲಿ ಯಾವುದರಲ್ಲಿಯೂ ಹೆಚ್ಚಾಗದಿರುವಂತಿರುವ ಪದಾರ್ಥಗಳನ್ನು ಜೀರ್ಣವಾಗುವ ರೀತಿಯಲ್ಲಿ ಹದವಾಗಿ ಪಕ್ವಮಾಡಿ ಮೇಲ್ಕಂಡಂತೆ ಮಂತ್ರದಿಂದ ಶುದ್ಧಿಮಾಡಿ ಶರೀರಧಾರಣೆಗೆ ಮುಖ್ಯವಾದ ಪ್ರಾಣವಾಯುಗಳಿಗೆ ಆಹುತಿಕೊಟ್ಟು ಇಷ್ಟ ಬಂಧುಜನಗಳೊಡನೆ ಕುಳಿತು, ಮಿತವಾಗಿ ಭುಜಿಸಬೇಕು. ಭೋಜನವು ಮುಗಿದನಂತರ ಮತ್ತೆ ಬಲದ ಅಂಗೈಯನ್ನು ಸಂಕುಚಿಸಿಕೊಂಡು ಆ ಅಂಗೈ ಗುಳಿಯಲ್ಲಿ ಗೃಹಿಣಿಯಿಂದಾಗಲಿ ಅಥವಾ ಉಳಿದ ಯೋಗ್ಯರಾದ ಇತರರಿಂದಾಗಲಿ ಶುದ್ಧ ಜಲವನ್ನು ಹಾಕಿಸಿಕೊಂಡು "ಅಮೃತಾಪಿ ಧಾನಮಸಿ" ಎಂಬ ಮಂತ್ರವನ್ನುಚ್ಚರಿಸಿ ಶಬ್ದಮಾಡದಂತೆ ಉತ್ತರಾಪೋಶನವನ್ನು ಸ್ವೀಕರಿಸಬೇಕು. ಇದಾದನಂತರ ಕೈಯಲ್ಲಿರುವ ಜಲಬಿಂದುಗಳನ್ನು ಊಟದೆಲೆಯ ಬಲ ಭಾಗದಲ್ಲಿಬಿಟ್ಟು

ಶ್ರುತಿ ॥ " ರೌರವೇ z ಪುಣ್ಯನಿಲಯೇ ♦ ಪದ್ಮಾರ್ಬುದನಿವಾಸಿನಾಂ ।
ಅರ್ಥಿನಾ ಮುದಕಂ ದತ್ತಂ ♦ ಅಕ್ಷಯ್ಯ ಮುಪತಿಷ್ಠತು ॥"

ಎಂಬ ಮಂತ್ರದಿಂದ ಊಟಮಾಡಿದ ದಕ್ಷಿಣ ಹಸ್ತವನ್ನು ನೆಲದ ಮೇಲೆ ಒತ್ತಿ "ಅನ್ನದಾತಾ ಸುಖೀ ಭವ" ಅಂದರೆ 'ಭೋಜನವನ್ನು ಒದಗಿಸಿದ ಉದಾರಿಯೇ! ರೋಗರುಜಿನಾದಿಗಳಿಲ್ಲದೆ ಬಹುಕಾಲ ಸುಖದಿಂದ ಬಾಳು' ಎಂದು ಅನ್ನದಾತನನ್ನು ಹರಸಿ, ಊಟದೆಲೆಯನ್ನು ಬಿಟ್ಟು ಏಳಬೇಕು. ಇದಾದನಂತರ ಕೈಯನ್ನು ತೊಳೆದು ಅನಂತರ ಮೊಣಕಾಲಿನವರಿವಿಗೂ ಪಾದಪ್ರಕ್ಷಾಳನೆ ಮಾಡಿಕೊಂಡು ಬಂದು, ಶುಭ್ರಜಲವನ್ನು ತೆಗೆದುಕೊಂಡು ಸಾಂಗವಾಗಿ ತಾನು ಆಹಾರಪದಾರ್ಥಗಳಿಂದ ಆತ್ಮತೃಪ್ತಿಯನ್ನು ಮಾಡಿದುದಕ್ಕಾಗಿ,

"ಕೇಶವಾಯ ಸ್ವಾಹಾ।
ನಾರಾಯಣಾಯ ಸ್ವಾಹಾ।
ಮಾಧವಾಯ ಸ್ವಾಹಾ।"

ಎಂಬ ಮಂತ್ರೋಚ್ಚಾರಣೆಯಿಂದ ಜಲಾಚಮನವನ್ನು ಮಾಡಬೇಕು. ಮೇಲೆ ಹೇಳಿದಂತೆ ಮಾಡುವುದೇ ಭೋಜನಕ್ರಮ. ಭೋಜನ ಮಾಡುವಾಗ ಅನೇಕರು ಎಲೆಗಳಲ್ಲಿ ಸುತ್ತಲೂ ಆಹಾರದ ಕಣಗಳನ್ನು ಉದ್ದಿಶ್ಯವಾಗಿ ಚಲ್ಲುವರು. ಇದು ಭೂತತೃಪ್ತ್ಯರ್ಥವಾಗಿಯೇ ಹೊರತು ಮತ್ತೆ ಬೇರೆಯಲ್ಲ. ಇದೂ ಅಲ್ಲದೆ ತುಪ್ಪದಿಂದ ಅಭಿಕರಿಸಿದ ಅನ್ನವನ್ನು ಪ್ರಾಣಾಹುತಿ ಕೊಡುವುದಕ್ಕೆ ಮೊದಲು ಊಟದೆಲೆಯ ಬಲಭಾಗದಲ್ಲಿ ತುಪ್ಪದನ್ನವನ್ನು,

"ಚಿತ್ರಾಯ ನಮಃ।
ಚಿತ್ರಗುಪ್ತಾಯ ನಮಃ।
ಯಮಾಯ ನಮಃ।
ಸರ್ವಭೂತೇಭ್ಯೋ ನಮಃ।"

ಎಂಬ ಮಂತ್ರಗಳಿಂದ ಚಿತ್ರ, ಚಿತ್ರಗುಪ್ತ, ಯಮ ಮತ್ತು ಸಮಸ್ತ ಭೂತಗಳು ಇವುಗಳನ್ನು ತೃಪ್ತಿಪಡಿಸುವ ಸಲುವಾಗಿ ಸ್ವಲ್ಪಸ್ವಲ್ಪವಾಗಿ ನಾಲ್ಕು ಗುಡ್ಡೆಗಳನ್ನಿಡುವ ಪದ್ಧತಿಯೂ ಉಂಟು. ಆತ್ಮತೃಪ್ತಿಯಾಗುವುದಕ್ಕೆ ನಮ್ಮ ಶರೀರದ ಒಳಕ್ಕೆ ಆಹಾರವನ್ನು ಯಾವರೀತಿ ಸೇರಿಸುತ್ತೇವೆಯೋ ಹಾಗೆಯೇ ಮೇಲೆ ಹೇಳಿದ ದೇವತೆಗಳಿಗೂ ಮತ್ತು ಸಮಸ್ತ ಭೂತಗಳಿಗೂ ತೃಪ್ತಿಯಾಗಲೆಂಬುದೇ ಈ ಪದ್ಧತಿಯ ಮುಖ್ಯ ತತ್ವ. ಇದಕ್ಕೆ "ಚಿತ್ರಾವತಿ" ಯೆಂದು ಹೆಸರು.

ಇದೇ ರೀತಿಯಲ್ಲಿ ಪ್ರತಿದಿನವೂ ಹಗಲಿರುಳೂ ಭೋಜನ ಕ್ರಮವನ್ನು ನಡೆಸಬೇಕು. ಭೋಜನದ ಪಾತ್ರೆಗೆ ಪರಿಷಿಂಚನೆಯನ್ನು ಮಾಡುವಾಗ ಅಂದರೆ ಸುತ್ತುಕಟ್ಟುವಾಗ ಹಗಲು ವೇಳೆ, "ಸತ್ಯಂ ತ್ವರ್ತೇನ ಪರಿಷಿಂಚಯಾಮಿ" ಮತ್ತು ರಾತ್ರಿಯವೇಳೆ "ಋತಂತ್ವಾ ಸತ್ಯೇನ ಪರಿಷಿಂಚಯಾಮಿ" ಎಂಬ ಮಂತ್ರಗಳನ್ನು ಕ್ರಮವಾಗಿ ಉಚ್ಚರಿಸ

ಬೇಕು. ಈರೀತಿಯಾಗಿ ಮಂತ್ರಶುದ್ಧಿಯಿಂದ ಭುಜಿಸಲ್ಪಟ್ಟ ಅನ್ನವು ಅಮೃತವಾಗಿ ಪರಿಣಮಿಸುತ್ತದೆ ಎಂಬುದನ್ನು ಶೃತಿಯು ಸಾರಿ ಹೇಳುತ್ತದೆ.

ಮೇಲೆ ಹೇಳಿದ ಮಂತ್ರಗಳ ಅರ್ಥವನ್ನು ತಿಳಿದು ಭೋಜನ ಕ್ರಮವನ್ನು ಪ್ರತಿದಿನವೂ ನಡೆಸುವಾತನಿಗೆ ಉಂಟಾಗುವ ಪ್ರಯೋಜನವೇನೆಂದರೆ:—ದುರ್ಮಾರ್ಗತನದಿಂದ ದ್ರವ್ಯವನ್ನು ಸಂಪಾದಿಸುವ ಬುದ್ಧಿಯು ಎಂದಿಗೂ ಆತನಿಗೆ ಉಂಟಾಗದು, ಮತ್ತು ನ್ಯಾಯವಾದ ದ್ರವ್ಯಾರ್ಜನೆಯಲ್ಲಿ ಆಸಕ್ತನಾಗುತ್ತಾನೆ. ಏತಕ್ಕೆಂದರೆ:—ಆ ಮನುಷ್ಯನು ಭುಜಿಸುವಾಗಲೆಲ್ಲವೂ, "ನಾನು ನ್ಯಾಯ ಮಾರ್ಗದಲ್ಲಿ ಸಂಪಾದಿಸಿದ ಹಣದಿಂದ ಆಹಾರ ಪದಾರ್ಥಗಳನ್ನು ಕೊಂಡು ತಂದು ಪಕ್ವಮಾಡಿ ದೇವರಿಗೆ ನಿವೇದನೆ ಮಾಡಿ ಆ ಶೇಷವನ್ನು ನಾನು ಭುಜಿಸಿರುತ್ತೇನೆ. ಇದರಿಂದ ಪರಮಾತ್ಮನ ಪ್ರೀತಿಗೆ ನಾನು ಪಾತ್ರನಾಗಿರುವುದಲ್ಲದೆ, ನನ್ನ ಮನಸ್ಸಿಗೂ ಕಳಂಕವಿಲ್ಲದೆ ಮನೋಸುಖವು ನನಗೆ ಉಂಟಾಗಿದೆ. ಇದರ ಫಲದಿಂದ ನನಗೆ ಮುಂದೆ ಉತ್ತಮಪದವಿಯುಂಟಾಗುವುದಲ್ಲದೆ, ಮುಂದೆ ನನ್ನ ಮನಸ್ಸು ಅನ್ಯಾಯ ಮಾರ್ಗದಿಂದ ಹಣಸಂಪಾದಿಸುವ ವಿಷಯಕ್ಕೆ ಒಳಗಾಗದು. ಇದರಿಂದ ನನಗೆ ಪಾಪದ ಸೋಂಕು ಕಡಿಮೆಯಾಗುತ್ತ ಬಂದು ಪುಣ್ಯವು ಹೆಚ್ಚಿ ಕಡೆಗೆ ಶಾಶ್ವತವಾದ ಮೋಕ್ಷಭವನವನ್ನು ಪ್ರವೇಶಿಸುವುದಕ್ಕೆ ನನಗೆ ಅನುಕೂಲವುಂಟಾಗುತ್ತದೆ. ಹೀಗೆ ಮಾಡುತ್ತಿರುವ ನಾನೇ ಧನ್ಯ." ಎಂದು ತಾನು ಚಿಂತಿಸುತ್ತ ಮನಸ್ಸಿನಲ್ಲಿ ಆನಂದವನ್ನನುಭವಿಸುತ್ತಿರುವನು. 'ಸನ್ಮಾರ್ಗಪ್ರವರ್ತನೆಯೇ ಮೋಕ್ಷಕ್ಕೆ ತಳಹದಿ' ಎಂದು ಇದರಿಂದ ತಿಳಿದಿದ್ದಾಯಿತು. ನಿತ್ಯಾನಂದ ಸುಖವನ್ನು ಯಾವ ಯಾವ ತೆರದಲ್ಲಿ ಪಡೆಯಬಹುದು ಎಂಬುದನ್ನು ತಿಳಿಯಪಡಿಸುವುದೇ ಈ ಗ್ರಂಥದ ಮುಖ್ಯ ಉದ್ದೇಶವಾದುದರಿಂದ, ಮೇಲೆ ಹೇಳಿದ ಭೋಜನಕ್ರಮವನ್ನೂ ಆದರಿಂದುಂಟಾಗುವ ಸತ್ಫಲವನ್ನೂ ವಿವರಿಸಿದ್ದಾಯಿತು. ಹೀಗಿರಲು, ಬ್ರಹ್ಮಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣಗಳಿಗೆ ಸೇರಿದ ವಿವೇಕಿಗಳು ಈರೀತಿಯಾದ ಭೋಜನಕ್ರಮವನ್ನು ಅನುಸರಿಸಿದ್ದೇ ಆದರೆ ಅದರಿಂದ ಅವರಿಗೆ ಮರುಜನ್ಮದಲ್ಲಿ ಸಂಭವಿಸುವ ಫಲಗಳನ್ನು ಕುರಿತು

ಭಗವದ್ಗೀತೆಯಲ್ಲಿ 6ನೇ ಅಧ್ಯಾಯ 41-42-44ನೇ ಶ್ಲೋಕಗಳಲ್ಲಿ ಈರೀತಿಯಾಗಿ ಹೇಳಿರುತ್ತದೆ.

ಶ್ಲೋ ॥ ಪ್ರಾಪ್ಯ ಪುಣ್ಯಕೃತಾಂ ಲೋಕಾಂ ♦ ಉಷಿತ್ವಾ ಶಾಶ್ವತೀಃ ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ ♦ ಯೋಗಭ್ರಷ್ಟೋಽಭಿಜಾಯತೇ ॥

ಶ್ಲೋ ॥ ಅಥವಾ ಯೋಗಿನಾ ಮೇವ ♦ ಕುಲೇ ಭವತಿ ಧೀಮತಾಂ ।
ಏತದ್ಧಿ ದುರ್ಲಭತರಂ ♦ ಲೋಕೇ ಜನ್ಮ ಯದೀದೃಶಂ ॥

ಶ್ಲೋ ॥ ಪೂರ್ವಾಭ್ಯಾಸೇನ ತೇನೈವ ♦ ಹ್ರಿಯತೇ ಹ್ಯವಶೋಽಪಿ ಸಃ ।
ಜಿಜ್ಞಾಸು ರಪಿ ಯೋಗಸ್ಯ ♦ ಶಬ್ದಬ್ರಹ್ಮಾತಿವರ್ತತೇ ॥

ಅರ್ಜುನಾ! ಶುದ್ಧಾಂತಃಕರಣವುಳ್ಳವನಾಗಿ ಅತಿಶಯವಾದ ಭಗವದ್ಭಕ್ತಿಯಿಂದ ಕೂಡಿದ ಮನುಷ್ಯನು ಯೋಗಭ್ರಷ್ಟನಾದರೂ, ಮರಣಾನಂತರದಲ್ಲಿ ಅಶ್ವಮೇಧಾದಿ ಯಾಗಗಳನ್ನು ಮಾಡಿದವರು ಹೊಂದಲು ಯೋಗ್ಯವಾದ ಮತ್ತು ಉತ್ತಮವಾದ ಲೋಕವನ್ನು ಸೇರಿ, ಅಲ್ಲಿ ಬಹುಕಾಲದವರಿವಿಗೂ ಇದ್ದು, ಅನಂತರ ಸದಾಚಾರಸಂಪನ್ನರಾದ ಶ್ರೀಮಂತರ ಮನೆಯಲ್ಲಿ ಹುಟ್ಟುವನು.

ಅಥವಾ ಆತನು ಯೋಗಸಿದ್ಧಿಯನ್ನು ಪಡೆಯಲು ಪ್ರಯತ್ನಿಸಿ ಮೇಲೆ ಹೇಳಿದ ಉತ್ತಮಲೋಕವನ್ನು ಸೇರದೆಯೇ ಮಹಾಪ್ರಾಜ್ಞರಾದ ಯೋಗಿಗಳ ವಂಶದಲ್ಲೇ ಹುಟ್ಟುವನು. ಈ ಲೋಕದಲ್ಲಿ ಈರೀತಿಯಾಗಿ ಯೋಗಭ್ರಷ್ಟನಿಗೆ ಉಂಟಾಗುವ ಜನ್ಮವು ಶುಕಾದಿಗಳ ಹಾಗೆ ಅತಿ ದುರ್ಲಭವಾದದ್ದು.

ಆ ಯೋಗಭ್ರಷ್ಟನು ಪ್ರಯತ್ನವನ್ನು ಮಾಡದಿದ್ದರೂ ಹಿಂದಿನ ಅಭ್ಯಾಸವೇ ಅವನಿಗೆ ಪ್ರವೃತ್ತಿಯನ್ನುಂಟುಮಾಡುತ್ತದೆ. ಆ ಕಾರಣದಿಂದ ಅವನು "ಜೀವ ಬ್ರಹ್ಮೈಕ್ಯ" ವಿಷಯದಲ್ಲಿ ಜಿಜ್ಞಾಸುವಾಗಿದ್ದರೂ ವಿಧಿನಿಷೇಧ ಶಾಸ್ತ್ರಗಳನ್ನು ಉಲ್ಲಂಘಿಸದವನಾಗುವನು. ಮೇಲೆ ಹೇಳಿದಂತೆ ಯೋಗಿಗಳ ವಂಶದಲ್ಲಿ ಹುಟ್ಟಿ, ಅವರ ಮನೆಯಲ್ಲಿ ಹಣವಿಲ್ಲದಿರುವುದರಿಂದ ಆ ಹಣದ ಕಡೆಗೆ ಮನಸ್ಸು ಎಳೆಯದೆ ಯೋಗವನ್ನು ಅಭ್ಯಾಸ

ಮಾಡುವುದರಲ್ಲಿಯೇ ಬುದ್ಧಿ ಹುಟ್ಟುತ್ತದೆ. ಅದರಿಂದ ಯೋಗವನ್ನು ಅಭ್ಯಸಿಸಿ ಮೋಕ್ಷವನ್ನು ಪಡೆಯಬಹುದು. ವೈದಿಕಕರ್ಮಾನುಷ್ಠಾನದಿಂದ ಉಂಟಾಗುವ ಸ್ವರ್ಗಾದಿಭೋಗಗಳಿಗಿಂತಲೂ ಯೋಗಾಭ್ಯಾಸದಿಂದ ಶ್ರೇಷ್ಠವಾದ ಫಲವನ್ನು ಹೊಂದಬಹುದು. ಇದಕ್ಕೆ ವಿಷ್ಣುಪುರಾಣ ವಾಕ್ಯವು ಪ್ರಮಾಣವು.

ಶ್ಲೋ ॥ " ಅನಿಷ್ಪನ್ನಸಮಾಧಿಸ್ತು ♦ ಪರಬ್ರಹ್ಮೋಪಲಬ್ಧಿರ್ಮಾ ।
ಅತ್ಯಂತರಾಯದೋಷೇಣ ♦ ದುಷ್ಯತೇ ಸ್ವಯ ಮಾನಸೇ " ॥
" ಜನ್ಮಾಂತರೈರಪ್ಯಸತೋ ♦ ಮುಕ್ತಿಃ ಪೂರ್ವಸ್ವಜಾಯತೇ "
ವಿನಿಷ್ಪನ್ನಸಮಾಧಿಸ್ತು ♦ ಮುಕ್ತಿ ಮತ್ರೈವ ಜನ್ಮನಿ ।
ಪ್ರಾಪ್ನೋತಿ ಯೋಗೀ ಯೋಗಾಗ್ನಿ ♦ ದಗ್ಧಕರ್ಮ ಸ್ಸ ಯೋ ಚಿರಾತ್ ॥

ತನಗೆ ಒಂದು ಜನ್ಮದಲ್ಲಿಯೇ ಬ್ರಹ್ಮಸಾಕ್ಷಾತ್ಕಾರವು ದೊರಕುವುದೆಂಬ ಆಸೆಯಿಂದ ಯೋಗವನ್ನು ಅಭ್ಯಾಸಮಾಡುವ ಪುರುಷನು, ಪ್ರಾರಬ್ಧವಶದಿಂದ ಆ ಜನ್ಮದಲ್ಲಿ ಅದು ಅವನಿಗೆ ಸಿದ್ಧಿಸದಿದ್ದರೂ, ಯೋಗ ಮಹಿಮೆಯಿಂದ ಮರುಜನ್ಮದಲ್ಲಿ ಯೋಗಸಿದ್ಧಿಯನ್ನು ಹೊಂದಿ ಮುಕ್ತನಾಗುತ್ತಾನೆ. ಪ್ರಾಣಾಯಾಮಾಭ್ಯಾಸದ ಕ್ರಮವೆಲ್ಲವನ್ನೂ ಈ ಮುಂದೆ ವಿಪುಲವಾಗಿ ವಿವರಿಸಲಾಗುತ್ತದೆ. ಆದುದರಿಂದ ಅದನ್ನು ಗಮನವಿಟ್ಟು ಪಠಿಸಿ ಅದರಂತೆ ಪ್ರಾಣಾಯಾಮವನ್ನು ಅಭ್ಯಾಸಮಾಡಿದ್ದೇ ಆದರೆ, ಅದಕ್ಕೆ ತಕ್ಕ ಫಲವು ಲಭಿಸುವುದೇ ಹೊರತು ಎಂದಿಗೂ ವ್ಯರ್ಥವಾಗದು. ಇದಕ್ಕೆ ಶ್ರೀಮದ್ಭಗವದ್ಗೀತೆ ಅಧ್ಯಾಯ 2 ಶ್ಲೋಕ 40 ಪ್ರಮಾಣವು.

ಶ್ಲೋ ॥ ನೇಹಾಭಿಕ್ರಮನಾಶೋಽಸ್ತಿ ♦ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪ ಮಪ್ಯಸ್ಯ ಧರ್ಮಸ್ಯ ♦ ತ್ರಾಯತೇ ಮಹತೋ ಭಯಾತ್ ॥

ಯೋಗ ಮಹತ್ವವೆಂತಹುದೆಂಬುದೋ ಅದನ್ನು ಈ ಕೆಳಗೆ ವಿವರಿಸಿದೆ. ಈ ಕರ್ಮಯೋಗವನ್ನು ಆರಂಭಿಸಿ ಮುಗಿಸದೆ ಹೋದರೂ ಮಾಡಿದ್ದಷ್ಟಕ್ಕೆ ತಕ್ಕಂತೆ ಫಲವು ಲಭಿಸುವುದೇ ಹೊರತು ನಿಷ್ಫಲವಾಗದು. ಮತ್ತು ಈ ಯೋಗವನ್ನು ಸ್ವಲ್ಪವಾಗಿ ಅಭ್ಯಸಿಸಿದರೂ ಅದು ಸಂಸಾರ ಬಂಧ ವಿಮೋಚನೆಗೆ ಹೆಚ್ಚಾದ ಸಹಾಯಕಾರಿಯಾಗುತ್ತದೆ.

ಯೋಗವು ಲೌಕಿಕ ವೈದಿಕ ಕರ್ಮಗಳಂತಲ್ಲವು. ಇದು ನಿರ್ಮಲ ಹೃದಯದಿಂದ ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣವಾಗಿ ಮಾಡುವಂಥದು. ಈಶ್ವರಾರ್ಪಣವಾಗಿ ಮಾಡುವ ಕಾರ್ಯಗಳು ಬಹಳ ಶ್ರೇಷ್ಠವಾದವುಗಳು. ಯೋಗವನ್ನು ಸ್ವಲ್ಪವಾಗಿ ಆಚರಿಸಿದರೂ, ಅದು ಕಾಲಕ್ರಮದಿಂದ ಸಂಸಾರವಿಮೋಚನೆಗೆ ಹೆಚ್ಚಾದ ಸಹಕಾರಿ. ವ್ಯವಸಾಯ ಮಾಡುವ ರೈತನು ಭೂಮಿಯನ್ನು ಸರಿಯಾಗಿ ಉತ್ತು ಬೇಸಾಯಮಾಡಿ ಬೆಳೆಯನ್ನು ಪಡೆಯುವುದಕ್ಕಾಗಿ ಧಾನ್ಯವನ್ನು ಬಿತ್ತುವಾಗ ಸಕಾಲಕ್ಕೆ ಮಳೆ ಬರುತ್ತದೆಯೋ ಇಲ್ಲವೋ ಎಂದು ಸಂಶಯಪಡಬಹುದು. ಆದರೆ ಈ ಯೋಗಾಭ್ಯಾಸವನ್ನು ಮಾಡುವಾಗ ಅಂತಹ ಸಂದೇಹಕ್ಕೆ ಅವಕಾಶವೇ ಇಲ್ಲವು. ಇದು ತಪ್ಪದೇ ಫಲವನ್ನು ಕೊಡುವುದೆಂದು ಶಾಸ್ತ್ರಗಳು ಒತ್ತಿ ಹೇಳುತ್ತಿವೆ. ಆದುದರಿಂದ ಇದರಲ್ಲಿ ಇನ್ನುಮುಂದೆ ವಿವರಿಸಲ್ಪಡುವ ಪ್ರಾಣಾಯಾಮದ ಕ್ರಮವು ಬಹು ಕಷ್ಟವೆಂದು ತಿಳಿಯದೆ, ಪ್ರತಿದಿನವೂ ತಪ್ಪದೆ ಅಭ್ಯಾಸಮಾಡುತ್ತ ಬಂದರೆ ಆ ಅಭ್ಯಾಸಕ್ಕೆ ಸರಿಯಾದ ಫಲವನ್ನು ತಪ್ಪದೆ ಹೊಂದಬಹುದು.

ಶ್ಲೋ ॥ ಸರ್ವಪಾಪಪ್ರಸಕ್ತೋಽಪಿ ♦ ಧ್ಯಾಯ ನ್ನಿಮಿಷ ಮಚ್ಯುತಂ ।
ಭೂಯ ಸ್ತಪಸ್ವೀ ಭವತಿ ♦ ಪಂಕ್ತಿಪಾವನಭಾವನಃ ॥

ವಿಶೇಷವಾಗಿ ಪಾಪಕರ್ಮಗಳನ್ನು ಮಾಡಿದವನಾದಾಗ್ಯೂ ಮನುಷ್ಯನು ಒಂದು ಕ್ಷಣಕಾಲವಾದರೂ ಈಶ್ವರಧ್ಯಾನವೆಂಬುವ ಪ್ರಾಣಾಯಾಮವನ್ನು ಮಾಡಿ ಯೋಗಸಮಾಧಿಯಲ್ಲಿ ನಿಂತಿದ್ದೇ ಆದರೆ ಆತನನ್ನು ಯೋಗನಿಷ್ಠಾಗರಿಷ್ಠನಾದ ಯೋಗಿಯೆಂದೇ ಕರೆಯಬಹುದು. ಇಂತಹ ಯೋಗಿಯು ಇತರರೊಡನೆ ಸೇರಿ ಭುಜಿಸಲು ಇಚ್ಛಿಸಲಾರನು. ಒಂದು ವೇಳೆ ತಾನು ಹಾಗೆ ಭುಜಿಸಿದ್ದೇ ಆದರೆ ಆತನೊಡನೆ ಭೋಜನ ಮಾಡಿದವರೆಲ್ಲರೂ ಪರಿಶುದ್ಧರೇ ಆಗುತ್ತಾರೆ. ಆದುದರಿಂದಲೇ ಯೋಗಿಗೆ 'ಪಂಕ್ತಿಪಾವನನು' ಎಂಬ ಹೆಸರು ಶ್ರುತಿಪ್ರಮಾಣವು.



# ಪರಮಶಿವನು ಕೇವಲ ಮನುಷ್ಯವೇಷದಿಂದ ಬಂದು ರಾಜನಿಗೆ ಉಪದೇಶಿಸುವಿಕೆ.

---

ಈ ಲೋಕದಲ್ಲಿರುವ ಸ್ತ್ರೀಪುರುಷರಿಗೆ ಅನೇಕ ಜನ್ಮಗಳಿಂದ ತಾವು ಮಾಡುತ್ತ ಬಂದ ಸತ್ಕರ್ಮಾನುಷ್ಠಾನಪುಣ್ಯವಿಶೇಷದಿಂದ ಈಶ್ವರ ಭಕ್ತಿಯುಂಟಾಗುತ್ತದೆ. ಆ ಈಶ್ವರಭಕ್ತಿಯಿಂದ ಯೋಗವು ಸಿದ್ಧಿಸುತ್ತದೆ. ಆ ಯೋಗದಿಂದ ಜ್ಞಾನವನ್ನೂ ಅದರಿಂದ ಮೋಕ್ಷವನ್ನೂ ಪಡೆಯಬಹುದು. ಮೋಕ್ಷಕ್ಕೆ ನಾಲ್ಕು ಬಗೆ ಮೆಟ್ಟಿಲುಗಳಿವೆ. ಇವುಗಳನ್ನು ಹೊಂದುವುದಕ್ಕಾಗಿ ಬೇಕಾದ ಪುಣ್ಯಗಳೂ ಹಾಗೆಯೇ ನಾಲ್ಕು ಮೆಟ್ಟಿಲುಗಳನ್ನುಳ್ಳದ್ದಾಗಿವೆ. ಆ ಪುಣ್ಯಗಳೆಂಥವೆಂಬುದನ್ನು ಈ ಕೆಳಗೆ ತಿಳಿಯಹೇಳಿದೆ.

ಸತ್ರಗಳೂ, ತಲಪರಿಗೆಗಳೂ, ಚಿಲುಮೆಗಳೂ, ದೇವಾಲಯಗಳೂ ಇವೇ ಮೊದಲಾದವುಗಳನ್ನು ಕಟ್ಟಿಸಿ, ಅನ್ನದಾನ, ವಸ್ತ್ರದಾನ, ಗೋದಾನ, ಭೂದಾನಾದಿ ಅನೇಕ ವಿಧ ದಾನಗಳನ್ನು ಮಾಡಿ, ‘ಇವೆಲ್ಲವನ್ನೂ ನಾನು ಮಾಡಿಸಿದ್ದೇನೆ’ ಎಂದಾಗಲಿ, ಇಲ್ಲವೇ, ‘ನಾನು ಮಾಡುತ್ತಿದ್ದೇನೆ’ ಎಂದಾಗಲಿ ಮನಸ್ಸಿನಲ್ಲಿ ನೆನೆಸಿದ್ದೇ ಆದರೆ ತಾನು ಮಾಡಿದ ಪುಣ್ಯ ಕಾರ್ಯಕ್ಕಾಗಿ ಇನ್ನು ಮುಂದೆ ತನಗೆ ದೊರಕುವ ಜನ್ಮದಲ್ಲಿ ಈಗಿರುವ ಐಶ್ವರ್ಯಕ್ಕಿಂತಲೂ ಮತ್ತಷ್ಟು ಹೆಚ್ಚು ಧನವು ದೊರಕಿ ಆ ಜನ್ಮದಲ್ಲಿಯೂ ಮತ್ತಷ್ಟು ಪುಣ್ಯವನ್ನು ಮಾಡುತ್ತಲೇ ಬರುತ್ತಾನೆ. ಇದನ್ನೇ ಕಾಮ್ಯಪುಣ್ಯವೆಂದು ಹೇಳುವುದು. ಇಂತಹ ಕಾಮ್ಯಪುಣ್ಯಗಳೆಲ್ಲವೂ ಜನ್ಮಗಳೆತ್ತಿದಂತೆಲ್ಲಾ ಹೆಚ್ಚಾದ ಧನವನ್ನು ಕೊಡುತ್ತ ಬರುತ್ತವೆಯೇ

ಹೊರತು ಈಶ್ವರಭಕ್ತಿಯಲ್ಲಿ ಕರೆದೊಯ್ದು ನಿಲ್ಲಿಸಲಾರದು. ಅಂದರೆ ಇಂತಹ ಪುಣ್ಯಗಳು ಕೋಟ್ಯಂತರವಾಗಿ ಮಾಡಿದರೂ ಈಶ್ವರಭಕ್ತಿಗೆ ಪ್ರಯೋಜನಕಾರಿಯಾಗಲಾರವೆಂಬುದೇ ಭಾವ. ಆದರೆ ಈಶ್ವರಭಕ್ತಿಗೆ ಎಂತಹ ಪುಣ್ಯಗಳಿರಬೇಕೆಂಬುದನ್ನು ಈ ಕೆಳಗೆ ವಿಶದಪಡಿಸಿದೆ.

ತಾನು ನಡೆಸುವ ಸಮಸ್ತ ಪುಣ್ಯಕರ್ಮಗಳಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂದು ಮನಸ್ಸಿನಲ್ಲಿ ತಿಳಿದು, ಸಮಸ್ತ ಕರ್ಮಗಳನ್ನೂ ಈಶ್ವರಪ್ರೀತ್ಯರ್ಥವಾಗಿ ಮಾಡುತ್ತ ಬರಬೇಕು. ಈ ಬಗೆಯಾದ ಈಶ್ವರಪ್ರೀತ್ಯರ್ಥದಿಂದ ಉಂಟಾಗುವ ಪುಣ್ಯವು ನಮ್ಮನ್ನು ಈಶ್ವರಭಕ್ತಿಯಲ್ಲಿ ಒಯ್ದು ಬಿಡುತ್ತದೆ. ಈರೀತಿಯಾಗಿ ಈಶ್ವರಾರ್ಪಣದಿಂದ ನಡೆಸಿದ ಪುಣ್ಯಕ್ಕೆ 'ನಿಷ್ಕಾಮ್ಯ' ವೆಂದು ಹೆಸರು. ಇಂತಹ ನಿಷ್ಕಾಮ್ಯ ಪುಣ್ಯಗಳನ್ನು ಜನ್ಮಜನ್ಮಗಳಲ್ಲಿಯೂ ಗಳಿಸುತ್ತ ಬಂದಂತೆಲ್ಲ ಪ್ರತಿಜನ್ಮದಲ್ಲಿಯೂ ಈಶ್ವರಭಕ್ತಿಯು ಹೆಚ್ಚುತ್ತ ಹೆಚ್ಚುತ್ತ ಕಡೆಗೆ ಅದು ಪಕ್ವಸ್ಥಿತಿಗೆ ಬರುತ್ತದೆ. ಹೀಗೆ ಪಕ್ವವಾದಮೇಲೆ ಈಶ್ವರಭಕ್ತಿಯ ವಿಷಯದಲ್ಲಿ ತೃಣಮಾತ್ರವೂ ಇಚ್ಛೆ ಹುಟ್ಟದಿರುವಂತೆ ಮಾಡಿ ಅದಕ್ಕಿಂತ ಮೇಲ್ಮಟ್ಟಲಾದ ಧ್ಯಾನನಿಷ್ಠೆಯಲ್ಲಿ ಕರೆದುಕೊಂಡು ಹೋಗಿ ಬಿಡುವುದು. ಹೀಗೆ ಧ್ಯಾನನಿಷ್ಠೆಯಲ್ಲಿ ನೆಲಸಿದ ಬಳಿಕ ಪುನಃ ಆಚರಿಸುತ್ತ ಬರುತ್ತಿರುವ ನಿಷ್ಕಾಮ್ಯ ಪುಣ್ಯದಿಂದ ಧ್ಯಾನನಿಷ್ಠೆಯೂ ಪೂರ್ಣವಾಗಿ ಪಕ್ವಸ್ಥಿತಿಗೆ ಬರುತ್ತದೆ. ಹೀಗೆ ಪಕ್ವವಾದಮೇಲೆ ಈ ಧ್ಯಾನನಿಷ್ಠೆಯಲ್ಲಿ ತೃಣಮಾತ್ರವೂ ಇಚ್ಛೆಯಿಲ್ಲದಂತೆ ಮಾಡಿ ಅದಕ್ಕಿಂತ ಮೇಲ್ಮಟ್ಟಲಾದ ಯೋಗದಲ್ಲಿ ಕರೆದುಕೊಂಡು ಹೋಗಿಬಿಡುತ್ತದೆ. ಆ ಯೋಗದಲ್ಲಿ ನೆಲಸಿದ ಮೇಲೆ ಪುನಃ ಮಾಡುತ್ತ ಬರುತ್ತಿರುವ ನಿಷ್ಕಾಮ್ಯ ಪುಣ್ಯಗಳ ಫಲವಾಗಿ ಜ್ಞಾನವನ್ನು ಪಡೆಯಬಹುದು. ಈ ಜ್ಞಾನದಿಂದಲೇ ಮೋಕ್ಷವು ಲಭಿಸುವುದು ಎಂಬುದೇ ಇದರ ಭಾವವು.

ಅಯ್ಯಾ! ಯೋಗವು ಸಿದ್ಧಿಸಿ ಮೋಕ್ಷವನ್ನು ಹೊಂದುವ ಸಮಯದಲ್ಲಿ ಆ ಯೋಗಿಗೆ ಕರ್ಮಶೇಷವು ಏನಾದರೂ ಉಳಿದಿದ್ದರೆ ಆ ಕರ್ಮಫಲವನ್ನನುಭವಿಸಲೋಸುಗ ಆ ಕರ್ಮಕ್ಕೆ ತಕ್ಕಂತೆ ಮತ್ತೊಂದು ಶರೀರವನ್ನು ಪಡೆಯಬೇಕಾಗುತ್ತದೆ. ಯೋಗಿಯಾಗಿದ್ದು ಮೃತಿಹೊಂದಿದ ಮೇಲೆ ಪುರುಜನ್ಮದಲ್ಲಿ ರಾಜನಮನೆಯಲ್ಲಿ ಜನಿಸಿ ರಾಜ್ಯಪರಿಪಾಲನೆಯನ್ನು ಮಾಡಿದ ಒಬ್ಬ ರಾಜನನ್ನು ಇದಕ್ಕೆ ದೃಷ್ಟಾಂತವಾಗಿ ಈ ಕೆಳಗೆ ಹೇಳಿರುತ್ತದೆಯಾಗಿ ಇದನ್ನು ವಾಚಕರೆಲ್ಲರೂ ಗಮನಿಸಬೇಕು.

ಯೋಗವನ್ನು ಅಭ್ಯಾಸಮಾಡುತ್ತ ಬರುತ್ತಿದ್ದ ಒಬ್ಬ ಮಹಾಪುರುಷನಿದ್ದನು. ಜನಕಮಹಾರಾಜನಿಗೆ ಕರ್ಮಶೇಷವಿದ್ದಂತೆಯೇ ಈ ಯೋಗಿಗೂ ಕರ್ಮಶೇಷವಿದ್ದಿತು. ಈ ಯೋಗಿಯು ಆ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಆ ಯೋಗಶರೀರವನ್ನು ಬಿಟ್ಟು ರಾಜನ ಮನೆಯಲ್ಲಿ ಹುಟ್ಟಿ ಹತ್ತುವರ್ಷಗಳ ಕಾಲ ರಾಜ್ಯಪರಿಪಾಲನೆಯನ್ನು ಮಾಡಿದ ಬಳಿಕ, ಮಹೇಶ್ವರನೇ ಮನುಷ್ಯರೂಪದಿಂದ ಬಂದು ಆ ರಾಜನಿಗೆ ಉಪದೇಶಮಾಡಬೇಕೆಂಬುದು ಪ್ರಾರಬ್ಧ ಕರ್ಮದಿಂದ ವಿಧಿಸಲ್ಪಟ್ಟಿತ್ತು. ತನಗೆ ಪಟ್ಟಾಭಿಷೇಕವಾದ ಮೇಲೆ ಒಂಭತ್ತೂವರೆ ವರ್ಷಗಳವರಿವಿಗೂ ರಾಜ್ಯಪರಿಪಾಲನೆಯನ್ನು ಮಾಡಿದನು. ಇದಾದ ಆರು ತಿಂಗಳೊಳಗಾಗಿ ಆ ರಾಜನಿಗೆ ಉಪದೇಶವಾಗಬೇಕಾಗಿದ್ದುದರಿಂದ ಆ ರಾಜನ ಹೃದಯಕಮಲದಲ್ಲಿ ಅಂತರ್ಯಾಮಿಯಾಗಿಯೂ ಮತ್ತು ಸಾಕ್ಷಿಭೂತನಾಗಿಯೂ ಇದ್ದಂಥ ಆತ್ಮನು ಆ ರಾಜನ ಮನಸ್ಸನ್ನು ಈ ಕೆಳಗೆ ಹೇಳಿರುವಂತೆ ತಿರುಗಿಸಿ, ಯೋಚನೆಗಳಿಗೆ ಅವಕಾಶ ಕೊಡುವಂತೆ ಬುದ್ಧಿಯನ್ನು ಹುಟ್ಟಿಸಿ, ಆ ಕಾರ್ಯಗಳನ್ನು ಬುದ್ಧಿಗನುಗುಣವಾಗಿ ಮಾಡಿಸಿ, ಆಮೇಲೆ ಅವನ ಪೂರ್ವಜನ್ಮಕರ್ಮಾನುಸಾರವಾಗಿ ಈಶ್ವರನೇ ಬಂದು ಈ ಕೆಳಗೆ ಹೇಳುವ ರೀತಿಯಲ್ಲಿ ರಾಜನು ಆಲೋಚಿಸುವಂತೆ ಆತ್ಮನು ಮಾಡುತ್ತಾನೆ. ಈ ಆಲೋಚನೆಯ ಬಗೆಯು ಈ ಕೆಳಗೆ ವರ್ಣಿತವಾಗಿದೆ.

"ನಾನು ಒಂಭತ್ತು ಅಥವಾ ಹತ್ತು ವರ್ಷಗಳ ಪರ್ಯಂತ ಈ ರಾಜ್ಯವನ್ನು ಪರಿಪಾಲನೆ ಮಾಡುತ್ತ ಬರುತ್ತಿದ್ದೇನಲ್ಲವೇ? ಈ ನನ್ನ ರಾಜ್ಯಪರಿಪಾಲನೆಯ ವಿಷಯವನ್ನು ಯೋಚಿಸಿ ನೋಡಿದ್ದೇ ಆದರೆ, ಪ್ರತಿ ನಿತ್ಯವೂ ಮಾಡುತ್ತ ಬರುತ್ತಿರುವ ಕೆಲಸವಾಗಿದೆಯೇ ಹೊರತು, ಯಾವ ದೊಂದೂ ಹೊಸದಾಗಿರುವಂತೆ ನನಗೇನೋ ತೋರಲಿಲ್ಲ. ನಿತ್ಯವೂ ಮಾಡುತ್ತಬರುವ ಕೆಲಸಗಳನ್ನೇ ಮಾಡುತ್ತ ಬಂದಲ್ಲಿ ನನಗೆ ಜನ್ಮರಾಹಿತ್ಯ ವುಂಟಾಗುವ ಬಗೆ ಹೇಗೆ? ನನ್ನ ತಂದೆ, ಆತನ ತಂದೆಯಾದ ನನ್ನ ತಾತ, ಆತನ ತಂದೆಯಾದ ನನ್ನ ಮುತ್ತಾತ ಮತ್ತು ಆತನ ತಂದೆಯಾದ ನಮ್ಮ ಮೂರನೆಯ ತಾತ ಹೀಗೆ ಎಷ್ಟೋ ಜನ ಲೆಕ್ಕವಿಲ್ಲದಷ್ಟು ನನ್ನ ತಾತಂದಿರು ಈ ಸಿಹ್ಮಾಸನವನ್ನು ಹತ್ತಿ ರಾಜ್ಯಪರಿಪಾಲನೆಯನ್ನು ಕೆಲಕಾಲ ನಡೆಸಿ ಆಮೇಲೆ ತಮಗೆ ಲಭಿಸಿದ್ದ ರಾಜಶರೀರವನ್ನು ಬಿಟ್ಟು ಮೃತಿ ಹೊಂದಿದ ಮೇಲೆ ಅವರು ಎಲ್ಲಿ ಹುಟ್ಟಿರುತ್ತಾರೆ? ಮತ್ತು ಈಗ ಹೇಗಿರುತ್ತಾರೆ? ಎಂಬುದು ನನಗೂ ಉಳಿದವರಿಗೂ ತಿಳಿಯದಿರುವ ವಿಷಯವಲ್ಲವೇ? ಈಗ ಅಂತಹ ಗತಿಯು ನನಗೂ ಸಂಭವಿಸುವ ಕಾಲವು ಬಂದೊದಗಿದೆ. 'ಛೀ! ಛೀ!' ಈ ರಾಜ್ಯದಿಂದ ನನಗೇನೂ ಪ್ರಯೋಜನವಿಲ್ಲವು. ಯಾರಾದರೂ ಒಬ್ಬ ಯೋಗ್ಯನಾದ ಗುರುವನ್ನು ಹುಡುಕಿ ಆತನಿಂದ ಉಪದೇಶವನ್ನು ಪಡೆದು ಅವರ ಅಪ್ಪಣೆಯಂತೆ ನಡೆದುಕೊಳ್ಳಬೇಕು." ಎಂದು ರಾಜನು ಆಲೋಚಿಸುವಂತೆ ತನ್ನಲ್ಲಿರುವ ಆತ್ಮನು ಆತನನ್ನು ಪ್ರೇರಿಸಿದನು. ಇಷ್ಟೇ ಅಲ್ಲದೆ ಪುನಃ ಇಂತಹ ಆಲೋಚನೆಗಳನ್ನು ಆತ್ಮನು ಇನ್ನೂ ಹುಟ್ಟಿ ಸುತ್ತಿದ್ದನಾದುದರಿಂದ ಆ ರಾಜನು ಈ ಕೆಳಗೆ ಹೇಳಿರುವಂತೆ ಯೋಚಿ ಸುತ್ತಿದ್ದಾನೆ.

"ನನಗೆ ಉಪದೇಶಮಾಡುವಂತಹ ಗುರುಗಳು ಇಂತಹ ಸ್ಥಳ ದಲ್ಲಿದ್ದಾರೆಂಬುದು ನನಗೆ ತಿಳಿಯದಾಗಿದೆ. ಆದುದರಿಂದ ದೇಶದೇಶಕ್ಕೂ ಈ ಕೆಳಗೆ ಹೇಳಿರುವ ರೀತಿಯಲ್ಲಿ ಪತ್ರ ಬರೆದು ಕಳುಹಿಸಿಕೊಡಬೇಕಾಗಿದೆ.

ಆಗ ನನಗೆ ತಕ್ಕ ಗುರುಗಳು ಬರುತ್ತಾರೆ.'' ಎಂದು ತನ್ನಲ್ಲಿ ತಾನೇ ಯೋಚಿಸಿಕೊಂಡು ರಾಜನು ಹೀಗೆ ಪತ್ರ ಬರೆಯುತ್ತಿದ್ದಾನೆ.

"ಅಂಗ, ವಂಗ, ಕಳಿಂಗ, ಕಾಶ್ಮೀರ, ಬರ್ಬರ, ಅಯೋಧ್ಯೆ ಮೊದಲಾದ ದೇಶಗಳಲ್ಲಿರುವ ಸದ್ಗುರುಸ್ವಾಮಿಗಳವರ ಸಮಕ್ಷಮಕ್ಕೆ. ಕೇರಳ ದೇಶಾಧಿಪತಿಯಾದ ವಿಶ್ವೇಶ್ವರನು ಸಾಷ್ಟಾಂಗಪ್ರಣಾಮಪೂರ್ವಕವಾಗಿ ವಿಜ್ಞಾಪಿಸಿಕೊಳ್ಳುವುದೇನೆಂದರೆ—ಯಾವ ಜಾತಿಯೇ ಆಗಲಿ, ಯಾವ ಕುಲವೇ ಆಗಲಿ, ಬಡವನಾಗಲಿ, ಅವಧೂತನಾಗಲಿ, ದಿಗಂಬರನಾಗಲಿ, ರೋಗಿಯಾಗಿರಲಿ ಯಾರಾದರೂ ನನಗೆ ಗುರುವಾಗಿ ಬಂದು ಸರಿಯಾದ ಉಪದೇಶವನ್ನು ಮಾಡಿದ್ದೇ ಆದರೆ ಅಂಥವನಿಗೆ ನನ್ನ ರಾಜ್ಯದಲ್ಲಿ ಅರ್ಧವನ್ನು ಕೊಟ್ಟುಬಿಡುತ್ತೇನೆ. ನನಗೆ ತಕ್ಕ ಉಪದೇಶವನ್ನು ಮಾಡದಿದ್ದಲ್ಲಿ ಆತನಿಗೆ ಶಿಕ್ಷೆಮಾಡುತ್ತೇನೆ.'' ಎಂಬ ಬರಹವನ್ನು ಬರೆದು ದೇಶದೇಶಗಳಿಗೂ ಕಳುಹಿಸಿದನು. ಈರೀತಿಯಾಗಿ ಪತ್ರ ಬರೆದು ಎಲ್ಲಾ ದೇಶಗಳಿಗೂ ಕಳುಹಿಸಲು, ಆಯಾ ದೇಶಗಳಲ್ಲಿದ್ದ ಪಂಡಿತರೂ, ವಿದ್ವಾಂಸರೂ ಮತ್ತು ಇನ್ನೂ ಅನೇಕರಿಗೆ ಗುರುಗಳಾಗಿದ್ದವರೂ ರಾಜನಿಗೆ ಉಪದೇಶ ಮಾಡಬೇಕೆಂಬುವ ಇಚ್ಛೆಯಿಂದ ಈ ಕೆಳಗೆ ಹೇಳಿರುವಂತೆ ಮಾತನಾಡಿಕೊಳ್ಳುತ್ತಿದ್ದಾರೆ.

"ಸುಬ್ಬಾ ಶಾಸ್ತ್ರಿಗಳೇ! ನಮ್ಮ ದೇಶಾಧಿಪತಿಗಳಾದ ವಿಶ್ವೇಶ್ವರ ಪ್ರಭುಗಳು ಬರೆದುಕಳುಹಿಸಿದ ಲಿಖಿತವನ್ನು ನೋಡಿದಿರಾ? ಇಗೋ ಈ ಪತ್ರವನ್ನು ಓದಿನೋಡಿರಿ. ಈ ರಾಜನ ವಿಷಯವನ್ನು ಯೋಚಿಸಿ ನೋಡಿದರೆ ಈತನು ಹುಚ್ಚು ದೊರೆಯೆಂಬುದಾಗಿ ತೋರುತ್ತದೆ. ತನಗೆ ಯಾರಾದರೂ ಉಪದೇಶಮಾಡಿದ ಮಾತ್ರದಿಂದಲೇ ತನ್ನ ರಾಜ್ಯದಲ್ಲಿ ಅರ್ಧವನ್ನು ಕೊಡುತ್ತೇನೆಂದೂ, ಹಾಗೆ ಸರಿಯಾದ ಉಪದೇಶ ಮಾಡದೆ ಹೋದರೆ ಅಂಥವರನ್ನು ಶಿಕ್ಷೆಮಾಡುವೆನೆಂದೂ ಬರೆದು, ಎಲ್ಲಾ ದೇಶ

ಗಳಿಗೂ ಕಳುಹಿಸಿರುತ್ತಾನೆ. ನನ್ನಲ್ಲಿ 'ತಾರಕ' ಮಂತ್ರವೆಂದು ಪ್ರಸಿದ್ಧಿಹೊಂದಿದ ಶ್ರೀರಾಮ ಮಂತ್ರವಿದೆ. ಈ ಮಹಾಮಂತ್ರವನ್ನು ಆತನಿಗೆ ಉಪದೇಶಮಾಡಿ ಅರ್ಧರಾಜ್ಯವನ್ನು ಪಡೆದುಕೊಂಡು ಬರುತ್ತೇನೆ," ಎಂದು ಹೇಳಿ ಅಲ್ಲಿಂದ ಪಯಣ ಬೆಳಸಿ ಆ ರಾಜನ ಪಟ್ಟಣವನ್ನು ತಲುಪಿದನು. ಮತ್ತೊಂದು ದೇಶದಿಂದ ಅನೇಕರಿಗೆ ಗುರುವಾಗಿದ್ದ ಒಬ್ಬಾತನು ಈ ರಾಜಲಿಖಿತವನ್ನು ನೋಡಿ ಮುಗುಳುನಗೆನಕ್ಕು, "ಇಂತಹ ಹುಚ್ಚು ದೊರೆಯು ಕೂಡ ಈ ಲೋಕದಲ್ಲಿದ್ದಾನೆಯೇ?" ಎಂದು ತನ್ನಲ್ಲಿ ತಾನೇ ಆಲೋಚಿಸಿ ತಲೆದೂಗಿ, "ನನ್ನಲ್ಲಿರುವ ರಾಜಯೋಗಮಂತ್ರವೆಂಬ 'ಸೋऽಹಂ' ಮಂತ್ರವನ್ನು ರಾಜನಿಗೆ ಉಪದೇಶಿಸಿ ಬರುವೆನೆ"ಂದು ಮನಸ್ಸಿನಲ್ಲಿ ನೆನೆಸಿ, ತನ್ನ ಶಿಷ್ಯವರ್ಗಸಹಿತ ಆ ರಾಜನ ಪಟ್ಟಣವನ್ನು ಕುರಿತು ಹೊರಟನು. ಇದೇ ರೀತಿಯಲ್ಲಿ ಅನೇಕ ದೇಶಗಳಿಂದ ಅನೇಕ ವಿಧವಾದ ಗುರುಗಳು ಹೊರಟು ರಾಜಧಾನಿಗೆ ಬಂದು ಸೇರಿದರು. ಆ ರಾಜನ ಸಮೀಪವನ್ನು ಸೇರಿ ಆತನ ಮೂಲಕ ಇವರೆಲ್ಲರೂ ಶಿಕ್ಷೆಯನ್ನನುಭವಿಸಬೇಕೆಂದು ಅವರೆಲ್ಲರಿಗೂ ಕರ್ಮವಿರುವುದರಿಂದ, ಆ ಕರ್ಮವೆಂಬುದು ಅವರನ್ನು ರಾಜನ ಸಮೀಪಕ್ಕೆ ಸೆಳೆದುಕೊಂಡು ಹೋಗಿ ನಿಲ್ಲಿಸುವುದಾಗಿದೆ. ಈ ರಾಜನು ಪೂರ್ವಜನ್ಮದಲ್ಲಿ ಯೋಗಿಯಾಗಿದ್ದವನು. ಪೂರ್ವಜನ್ಮ ಕರ್ಮಶೇಷವಿರೋಣದರಿಂದ ಯೋಗಭ್ರಷ್ಟನಾಗಿ ರಾಜನಾಗಿ ಹುಟ್ಟಬೇಕಾಗಿ ಬಂದಿತು. ಈ ದೊರೆಯು ಯೋಗಜನ್ಮವನ್ನು ಪಡೆಯುವುದಕ್ಕೆ ಮೊದಲೇ 'ಶ್ರೀರಾಮತಾರಕ ಮಂತ್ರ, ಸೋऽಹಂ ಮಂತ್ರ' ಮೊದಲಾದುವುಗಳನ್ನು ಜಪಿಸಿ ಆ ಜಪವು ಪರಿಪಕ್ವವಾದ ತರುವಾಯ ಅದಕ್ಕೆ ಮೇಲ್ಮೆಟ್ಟಲಾದ ಯೋಗದಲ್ಲಿ ಆತನು ಹೋಗಿ ನೆಲೆಸಿರುವುದರಿಂದಲೂ ಮತ್ತು ಈ ಮಂತ್ರಗಳೆಲ್ಲವೂ ಯೋಗಕ್ಕಿಂತಲೂ ಕೆಳಗಿನ ಮೆಟ್ಟಲಾಗಿರುವುದರಿಂದಲೂ, ತನಗೆ ಉಪದೇಶಮಾಡುವುದಕ್ಕೆ ಬಂದಿರುವವರನ್ನೆಲ್ಲಾ ಕ್ಷಣಮಾತ್ರದಲ್ಲೇ ಜಯಿಸಿ ಅವರಿಗೆ ಕಾರಾಗೃಹವಾಸವನ್ನು ವಿಧಿಸಿದನು. ಯೋಗಿಗಳಾದವರು ಮನಸ್ಸನ್ನು ಜಯಿಸಿದವ

ರಾಗಿರುವುದರಿಂದ, ಇಷ್ಟು ದೊಡ್ಡ ಮಹಿಮೆಯುನ್ನುಳ್ಳ ಮಂತ್ರವಾಗಿದ್ದಾಗ್ಯೂ ಯೋಗಿಗಳಿಗೆ ಅವುಗಳಿಂದ ಯಾವ ಪ್ರಯೋಜನವೂ ದೊರಕದು.

ಸಾವಿರಾರು ಅಂದರೆ ಲೆಕ್ಕವಿಲ್ಲದಷ್ಟು ಕೋರಿಕೆಗಳನ್ನು ನೆನೆಸುವ ಮನಸ್ಸನ್ನು ಒಂದು ಮಾರ್ಗದಲ್ಲಿ ತಂದು ನಿಲ್ಲಿಸುವುದಕ್ಕಾಗಿಯೇ ಹಿಂದೆ ಹೇಳಿದ, ಶ್ರೀರಾಮತಾರಕ ಮಂತ್ರವನ್ನಾಗಲಿ, ಸೋऽಹಂ ಮಂತ್ರವನ್ನಾಗಲಿ, ಪಂಚಾಕ್ಷರೀ ಮಂತ್ರವನ್ನಾಗಲಿ ಜಪ ಮಾಡಬೇಕು. ಈ ರೀತಿಯಾಗಿ ಜಪವನ್ನು ಮಾಡುತ್ತ ಬಂದದ್ದೇ ಆದರೆ ಮನಸ್ಸು ಅತ್ತಿತ್ತ ಕದಲದೆ ಒಂದೇ ಸ್ಥಳದಲ್ಲಿ ನಿಲ್ಲುತ್ತದೆ. ಆ ಬಳಿಕ ಆ ಒಂದು ಸ್ಥಾನವೂ ಇಲ್ಲದೆ ನಶಿಸಿ ಹೋಗುತ್ತದೆ. ಮನಸ್ಸನ್ನು ಒಂದು ಸ್ಥಾನದಲ್ಲಿ ನಿಲ್ಲಿಸುವುದಕ್ಕಾಗಿ ಹಿಂದೆ ಹೇಳಿದ ಮಂತ್ರವನ್ನು ಜಪಮಾಡುತ್ತ ಬರಬರಲು ಆ ಒಂದು ಸ್ಥಾನವೂ ಕಣ್ಮರೆಯಾಗುತ್ತದೆ. ಹಾಗೆ ಮಾಯವಾಗುವ ಸ್ಥಿತಿಯೇ ಶ್ರೇಷ್ಠವಾದ ಪದವಿ. ರಾಜನಾಗಿ ಅವತರಿಸಿದ ಯೋಗಿಗೆ, ಯೋಗಕ್ಕಿಂತಲೂ ಮೇಲ್ಮೆಟ್ಟಲಿನಲ್ಲಿರುವ ಜ್ಞಾನಿಯು ಬಂದು ಉಪದೇಶವನ್ನು ಮಾಡಬೇಕು. ಹಾಗಿಲ್ಲವಾದರೆ, ಸಾಕ್ಷಾತ್ ಈಶ್ವರನೇ ಗುರುರೂಪದಿಂದ ಬಂದು ಉಪದೇಶಿಸಬೇಕು. ಆದುದರಿಂದಲೇ ಈ ಮುಂದೆ ಈಶ್ವರನೇ ಗುರುವಾಗಿ ಬಂದು ರಾಜನಿಗೆ ಉಪದೇಶವನ್ನು ಮಾಡುವನು.

ರಾಜನಿಗೆ ಉಪದೇಶವನ್ನು ಮಾಡುವ ಇಚ್ಛೆಯಿಂದ ಬಂದ ವಿದ್ವಾಂಸರು, ಗುರುಗಳು ಮೊದಲಾದವರನ್ನು ರಾಜನು ಬಂದೀಖಾನೆಯಲ್ಲಿ ಬಿಗಿಸಿ ತನ್ನ ಅಂತಃಪುರವನ್ನು ಹೊಕ್ಕನು. ಮಾರನೆಯದಿನ ಬೆಳಿಗ್ಗೆ ಎಂಟು ಘಂಟೆ ಸಮಯದಲ್ಲಿ ವಿಕಾರರೂಪದಿಂದ ತನ್ನ ಬಳಿಗೆ ಬರುವಂಥ ಪರಮಶಿವನಿಂದ ಉಪದೇಶವನ್ನು ಪಡೆಯಬೇಕೆಂಬುವ ಕರ್ಮಫಲವಿದ್ದುದ್ದರಿಂದ ಸಲುವಾಗಿ ರಾಜನು ಆ ದಿನ ಪ್ರಾತಃಕಾಲದಲ್ಲಿ ಅಭ್ಯಂಜನಸ್ನಾನವನ್ನು

ಮಾಡಿ ಸಭಾಮಂಟಪಕ್ಕೆ ಬಂದು ಸೇರಿ ನವರತ್ನಸಿಹ್ಮಾಸನದಲ್ಲಿ ಬಂದು ಕುಳಿತುಕೊಂಡನು.

ಒಬ್ಬಾನೊಬ್ಬ ಮನುಷ್ಯನ ಅಂಗಿ, ಷರಾಯಿ ಮೊದಲಾದ ಉಡುಪುಗಳಿಗೆ ಅದು ಹೇಗೋ ಬೆಂಕಿ ತಗುಲಿ, ಅವನ ಶರೀರವೆಲ್ಲವನ್ನೂ ಸುಡುತ್ತಿರುವಾಗ ನೀರಿನಲ್ಲಿ ಹೋಗಿ ಧುಮ್ಮಿಕ್ಕುವುದಕ್ಕಾಗಿ, ಆ ಜೀವಿಯು ನೀರನ್ನು ಹುಡುಕುತ್ತ ಯಾವ ರೀತಿಯಾಗಿ ಓಡುವನೋ, ಅದೇ ಬಗೆಯಾಗಿ ಆ ರಾಜನೆಂಬ ಜೀವಿಯೂ ಕೂಡ, ಅನ್ನಪಾನಾದಿಗಳನ್ನು ತೊರೆದು, ಶರೀರವೆಲ್ಲವೂ ಬೇಗೆಯಿಂದ ಕೂಡಿ "ಇನ್ನೂ ನನಗೆ ತಕ್ಕ ಗುರುಗಳು ದೊರಕಲಿಲ್ಲವೇ ಹಾ!" ಎಂದು ಮೂರ್ಛೆಗೊಂಡು ಸಿಹ್ಮಾಸನದ ಮೇಲೆಯೇ ಸ್ವಲ್ಪ ಹೊತ್ತು ದೇಹವನ್ನೊರಗಿಸಿ ಮೈಮರೆತನು.

ಅರಮನೆಯ ಬಾಗಿಲನ್ನು ಕಾಯುವ ದ್ವಾರಪಾಲಕರಿಗೆ ದೊರೆಯು ಮೊದಲೇ ಹೀಗೆಂದು ಆಜ್ಞೆಮಾಡಿದ್ದನು. "ಸೇವಕರೇ! ಯಾವ ತೆರದ ದಿಗಂಬರಿಯಾದರೂ, ಕುಷ್ಠರೋಗದಿಂದ ಪೀಡಿತನಾಗಿ ಕೀವು ನೆತ್ತರು ಸೋರುತ್ತ ಆ ದುರ್ಗಂಧದಿಂದ ಕೂಡಿದವನಾದಾಗ್ಯೂ, ಬಿಕ್ಷುಕನಾದರೂ ಇಲ್ಲವೇ ಅವಧೂತನಾದರೂ ನನ್ನ ಬಳಿಗೆ ಬರುವವನನ್ನು ಧಿಕ್ಕರಿಸದೆ ಗೌರವಪುರಸ್ಸರವಾಗಿ ಒಳಕ್ಕೆ ಕರೆತಂದು ನನ್ನ ಸಮೀಪದಲ್ಲಿ ಬಿಡಬೇಕು" ಎಂದು ಆಜ್ಞಾಪಿಸಿದ್ದನು. ಅವರು ರಾಜಾಜ್ಞೆಯಂತೆ ಎಲ್ಲರನ್ನೂ ಒಳಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ ಬಹಳ ಜಾಗರೂಕರಾಗಿದ್ದರು. ಮೇಲೆ ಹೇಳಿದಂತೆ ಸಿಹ್ಮಾಸನದಲ್ಲಿ ಮೈಮರೆತಿದ್ದ ರಾಜನಿಗೆ ಸ್ವಲ್ಪ ತಿಳಿವು ಬಂದು ಆತನು ಎದ್ದು ಕುಳಿತನು. ಆಗ ಅಲ್ಲಿ ನೆರದಿದ್ದ ಸಭೆಯುವರೆಲ್ಲರೂ ನಿಶ್ಶಬ್ದರಾಗಿದ್ದರು. ರಾಜನು ಗುರೂಪದೇಶವನ್ನು ಹೊಂದಬೇಕಾದ ಕಾಲಕ್ಕೆ ಇನ್ನೂ ಐದುನಿಮಿಷಮಾತ್ರವೇ ಉಳಿದಿದ್ದಿತು. ಆಗ ರಾಜನು, "ಗುರೂಪದೇಶವನ್ನು ಪಡೆಯುವುದಕ್ಕೆ ಎಷ್ಟು ಕಾಲವಾಗು

ವುದೋ" ಎಂದು ಬಹಳವಾಗಿ ದುಃಖಿಸುತ್ತ ಇರುವಂತೆಯೇ ಆ ಐದು ನಿಮಿಷವೂ ಕಳೆಯಿತು. ಅಷ್ಟು ಹೊತ್ತಿಗೆ ಪರಮಶಿವನು ಬಹಳ ಕಪ್ಪಾದ ಮೈ ಬಣ್ಣದಿಂದ ಕೂಡಿ ಹಳೆಯ ಚಿಂದಿ ಬಟ್ಟೆಗಳಿಂದ ತಲೆಯನ್ನು ಸುತ್ತಿ, ಅರೆದೆರೆದ ಕೌಪೀನ ಪ್ರದೇಶವುಳ್ಳವನಾಗಿ ರಾಜನಿದ್ದ ಕಡೆಗೆ ಬರುತ್ತಿದ್ದನು.

ಆಗ ವಿಕಾರವೇಷದಿಂದ ಬರುತ್ತಿದ್ದ ಪರಮಶಿವನನ್ನು ಇದಿರುಗೊಂಡು ಕರೆದುಕೊಂಡು ಬರಬೇಕೆಂಬ ಒಂದು ಕೋರಿಕೆಯು ರಾಜನಿಗೆ ಹುಟ್ಟಿತು. ಈರೀತಿಯಾದ ಇಚ್ಛೆ ಆತನಿಗೆ ಹುಟ್ಟಿದ ತಕ್ಷಣವೇ ರಾಜನು ಸಿಹ್ಮಾಸನದಿಂದ ಕೆಳಕ್ಕೆ ಇಳಿದು ಹೊರಟನು. ಆಗ ವೇಷಧಾರಿಯಾದ ಪರಮಶಿವನು ತನ್ನ ಬಲಗೈಯನ್ನು ಮೇಲಕ್ಕೆತ್ತಿ ರಾಜನ ಕಡೆಗೆ ತೋರಿಸಿ, "ನಿಲ್ಲು" ಎಂಬ ಒಂದು ಶಬ್ದವನ್ನು ಗಟ್ಟಿಯಾಗಿ ಉಚ್ಚರಿಸಿ ತಕ್ಷಣದಲ್ಲಿಯೇ ಮಾಯವಾದನು. ಆ ಪರಮಶಿವನು ಬಿಕ್ಷು ವೇಷದಿಂದ ಬಂದು ತನ್ನ ಬಲಗೈ ಮೇಲೆತ್ತಿ "ನಿಲ್ಲು" ಎಂಬ ವಿಷಯವನ್ನು ಸೂಚಿಸುವುದನ್ನು, ☞ ಇಗೋ ಈ ಮುಂಭಾಗದಲ್ಲಿರುವ ಪಠದಲ್ಲಿ ತೋರಿಸಿದೆ ಅದನ್ನು ಸರಿಯಾಗಿ ಗಮನಿಸಬೇಕು.

"ನಿಲ್ಲು" ಎಂಬ ಈ ವಾಕ್ಯವು ರಾಜನ ಕಿವಿಗೆ ಬಿದ್ದೊಡನೆಯೇ "ಮನಸ್ಸನ್ನು ಅತ್ತಿತ್ತ ಕದಲದೆ ನಿಲ್ಲಿಸು" ಎಂಬ ಆ ಮಾತಿನ ಅಭಿಪ್ರಾಯವನ್ನು ತಿಳಿದು, ಅದೇ ತನಗೆ ಬೇಕಾದ ಸದ್ಗುರೂಪದೇಶವೆಂದು ನೆನಸಿ, ತನ್ನ ಮನಸ್ಸನ್ನೂ ನಿಲ್ಲಿಸಬೇಕೆಂದು ರಾಜನು ಯೋಚಿಸಿದನು. ಮತ್ತು ತಾನು ಕಣ್ಣನ್ನು ಮುಚ್ಚಿಕೊಂಡು ಆ ಕ್ಷಣದಲ್ಲಿಯೇ ಅಂದರೆ ರೆಪ್ಪೆ ಹೊಡೆಯುವುದರೊಳಗಾಗಿ ಮನಸ್ಸನ್ನು, ಪ್ರಪಂಚ ವ್ಯಾಪಾರದಲ್ಲಿ ಹೋಗಗೊಡದೆ ಸ್ತಬ್ಧವಾಗಿ ನಿಲ್ಲಿಸಿ, ಕಲ್ಲಿನ ಬೊಂಬೆಯಂತೆ ನಿಂತುಹೋದನು.



ಪರಮಶಿವನು ವಿಕಾರರೂಪದಿಂದ ಬಂದು "ನಿಲ್ಲು" ಎಂದು ರಾಜನಿಗೆ ಉಪದೇಶಿಸುವುದು.

ದೊರೆಯ ಸ್ಥಿತಿಯು ಹೀಗಾದಮೇಲೆ ಆ ರಾಜಸಭೆಯಲ್ಲಿ ನೆರೆದಿದ್ದ ಮಂತ್ರಿಗಳು, ಪ್ರಧಾನಿಗಳು ಮತ್ತು ಉಳಿದ ಸಭಿಕರು ಬೆಳಿಗ್ಗೆ ಎಂಟು ಘಂಟೆ ಮೊದಲು ಮಧ್ಯಾಹ್ನ ಹನ್ನೆರಡು ಘಂಟೆಯವರಿವಿಗೂ ಒಬ್ಬರಿಗೊಬ್ಬರು ಮಾತನಾಡದೆ ನಿಶ್ಶಬ್ದವಾಗಿ ಕುಳಿತುಕೊಂಡು, ರಾಜನು ಸ್ತಬ್ಧನಾಗಿ ನಿಂತಿರುವುದನ್ನೇ ನೋಡುತ್ತಿದ್ದರು. ಆಮೇಲೆ ಅವರು ಮಲಮೂತ್ರಾದಿದೇಹಬಾಧೆಗಳಿಗೂ, ಹಸಿವುಬಾಯಾರಿಕೆಗಳಿಗೂ ಸಹಿಸಲಾರದೆ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಸಾಯಂಕಾಲ ಮೂರುಘಂಟೆಯ ಹೊತ್ತಿಗೆ ರಾಜನ ದರ್ಬಾರು ಮಂಟಪವನ್ನು ಸೇರಿ ಪುನಃ ಸಭೆಕೂಡಿದರು. ಆದರೆ ರಾಜನು ಮಾತ್ರ ಪ್ರಾತಃಕಾಲದಿಂದ ಸಾಯಂಕಾಲದವರಿವಿಗೂ ಹಾಗೆಯೇ ಕದಲದೆ ನಿಂತಿದ್ದನು. ಸಭಿಕರೆಲ್ಲರೂ ಸಾಯಂಕಾಲ ಎಂಟು ಘಂಟೆಯವರಿವಿಗೂ ಕುಳಿತಿದ್ದರು. ಇಷ್ಟು ಹೊತ್ತಾದರೂ ರಾಜನು ಕಣ್ಣುಬಿಟ್ಟು ನೋಡಲಿಲ್ಲವಾದುದರಿಂದ ಅವರೆಲ್ಲರೂ ಹೊರಟುಹೋದರು. ಈ ಪ್ರಕಾರವಾಗಿ ಎಂಟು ದಿವಸಗಳವರಿವಿಗೂ ಕಾದು ನೋಡಿದರು. ಆದರೆ ರಾಜನು ಕಣ್ಣು ತೆರೆದು ನೋಡದಿರಲು ಮಂತ್ರಿಗಳು, ಪ್ರಧಾನಿಗಳು ಮೊದಲಾದವರೆಲ್ಲರೂ ಈ ಕೆಳಗೆ ಹೇಳುವಂತೆ ಮಂತ್ರಾಲೋಚನೆಯನ್ನು ಮಾಡಿ ತಾವೇ ರಾಜ್ಯಪರಿಪಾಲನೆಯನ್ನು ಮಾಡುವುದಕ್ಕೆ ಏರ್ಪಾಡು ಮಾಡಿದರು.

"ಈ ನಮ್ಮ ಪ್ರಭುಗಳು ಹೀಗಿಯೇ ನಿಂತು ಹೋದದ್ದೇ ಆದರೆ ರಾಜ್ಯಪರಿಪಾಲನೆಯನ್ನು ಮಾಡುವವರೇ ಇಲ್ಲವಾಗುತ್ತದೆ. ಆದುದರಿಂದ ಪ್ರಭುಗಳ ಕೈಲಿರುವ ಶಿಖಾ ಉಂಗುರವನ್ನು ತೆಗೆದುಕೊಂಡು ರಾಜ್ಯಪರಿಪಾಲನೆಯನ್ನು ಮಾಡುತ್ತ ಬರಬೇಕು," ಎಂದು ಮಂತ್ರಿಗಳೇ ಮೊದಲಾದವರು ತೀರ್ಮಾನಿಸಿ ಆ ದಿನದ ಮೊದಲು ಮಂತ್ರಿಗಳೇ ಹನ್ನೆರಡು ಸಂವತ್ಸರಗಳ ಕಾಲ ರಾಜ್ಯಭಾರವನ್ನು ಮಾಡುತ್ತ ಬಂದರು. ಇಷ್ಟಾದರೂ, ರಾಜನು ಮಾತ್ರ ಕಣ್ಣುಗಳನ್ನು ತೆರೆದು ನೋಡಲಿಲ್ಲ. ಆಮೇಲೆ ಅಂದರೆ ಹದಿಮೂರನೆಯ ವರ್ಷದಲ್ಲಿ ರಾಜನು ಕಣ್ಣುಗಳನ್ನು ತೆರೆದು ನೋಡಿ "ಗುರುವರ್ಯರೆಲ್ಲಿ?" ಎಂದು ಮಂತ್ರಿಗಳನ್ನು ಕೇಳಿದನು.

ಅದಕ್ಕೆ ಮಂತ್ರಿಗಳು, "ಗುರುಗಳು ನಿಮಗೇನೋ ಹೇಳಿ ತಕ್ಷಣವೇ ಮಾಯವಾದರು. ಪುನಃ ಅವರನ್ನು ನೋಡಲಿಲ್ಲ. ತಾವು ಕಣ್ಣುಗಳನ್ನು ಮುಚ್ಚಿ ಈ ಹೊತ್ತಿಗೆ ಹದಿಮೂರು ವರ್ಷಗಳಾದವು. ಈ ದಿನ ನೀವು ಕಣ್ಣನ್ನು ತೆರೆದಿರುತ್ತೀರಿ" ಎಂದು ಹೇಳಿದರು. ಅದಕ್ಕೆ ರಾಜನು ಈ ಪ್ರಕಾರ ಹೇಳುತ್ತಿದ್ದಾನೆ.

"ನಾನು ಇದೇ ತಾನೇ ಕಣ್ಣನ್ನು ಮುಚ್ಚಿ ತಕ್ಷಣವೇ ಕಣ್ಣು ತೆರೆದೆನಲ್ಲಾ. ಇಷ್ಟರೊಳಗಾಗಿ ಹದಿಮೂರು ಸಂವತ್ಸರಗಳು ಹೇಗೆ ಕಳೆದವು?" ಎಂದು ರಾಜನು ಮಂತ್ರಿಗಳನ್ನು ಕೇಳಿದನು. ಆಗ ರಾಜನ ಶಿಖಾ ಉಂಗುರದಿಂದ ಮುದ್ರೆಯೊತ್ತಿದ ಹದಿಮೂರು ಸಂವತ್ಸರಗಳಿಂದ ಬರೆಯುತ್ತ ಬಂದ ಕಾಗದ ಪತ್ರಗಳ ಕಡತದ ಮೊತ್ತವನ್ನು ಅವನ ಮುಂದಿಟ್ಟರು. ಆಗ ಆ ರಾಜನು ಆ ಲೆಕ್ಕಗಳನ್ನು ಪರಾಂಬರಿಸಿ ಮಂತ್ರಿಗಳ ಮಾತುಗಳನ್ನು ನಂಬಿ ಆಶ್ಚರ್ಯಪಡುತ್ತ, "ಮನಸ್ಸನ್ನು ಲಯ ಮಾಡಿ ಬ್ರಹ್ಮನಿಷ್ಠೆಯಲ್ಲಿ ರೆಪ್ಪೆ ಹೊಡೆಯುವಷ್ಟು ಕಾಲವಿದ್ದಮಾತ್ರಕ್ಕೇ ಹದಿಮೂರು ಸಂವತ್ಸರಗಳು ಕಳೆದವಲ್ಲವೇ? ಇಂತಹ ಮಹಾ ಸುಖವನ್ನನುಭವಿಸಿದಮೇಲೆ ಈ ರಾಜ್ಯದಲ್ಲಿರಬಾರದು" ಎಂದು ಮನಸ್ಸಿನಲ್ಲಿ ಎಣಿಸಿ, ಬಹಿರ್ದೇಶಕ್ಕೆ (ದೇಹಬಾಧೆಯನ್ನು ತೀರಿಸಿಕೊಳ್ಳುವ ಸಲುವಾಗಿ) ಹೋಗುವವನಂತೆ ಸಿಹಾಸನದಿಂದ ಕೆಳಗಿಳಿದು ಮೆಲ್ಲಗೆ ಹೊರ ಹೊರಡುತ್ತಿರಲು ತನ್ನನ್ನು ಹಿಂಬಾಲಿಸಿ ಬರುವವರೆಲ್ಲರನ್ನೂ ಹಿಂದಿರುಗಿಸಿ ತಾನೊಬ್ಬನೇ ಅಡವಿಗೆ ಹೋಗಿ ಯಾರಿಗೂ ತಿಳಿಯದಂತೆ ಒಂದಾನೊಂದು ಗುಹೆಯನ್ನು ಪ್ರವೇಶಿಸಿ ಸಮಾಧಿನಿಷ್ಠೆಯಲ್ಲಿ ಕುಳಿತುಕೊಂಡನು. ಯೋಗದ ಮಹಿಮೆಯೆಂಥದೆಂಬುದನ್ನು ನೋಡಿದಿರಾ! ಜನಕಮಹಾರಾಜನು ರಾಜ್ಯ ಪರಿಪಾಲನೆಯನ್ನು ಹೇಗೆ ಮಾಡುತ್ತಿದ್ದನೆಂಬುದನ್ನು ಈ ಮುಂದಿನ ಪ್ರಕರಣದಲ್ಲಿ ಹೇಳಿದೆ.



# ಜನಕಮಹಾರಾಜನ ರಾಜ್ಯಪರಿಪಾಲನೆಯ ಕ್ರಮ.

---

ತಾವರೆಯೆಲೆಯಲ್ಲಿ ಬಿದ್ದ ನೀರಿನ ಹನಿಯು, ಆ ತಾವರೆಯೆಲೆಯನ್ನು ಅಂಟದೇ ಇರುವಂತೆ, ಜನಕಮಹಾರಾಜನ ಮನಸ್ಸು ವಿಷಯಸುಖಗಳಲ್ಲಿ ಅಂಟಿ ಅಂಟದೆ ಆತನು ರಾಜ್ಯಪರಿಪಾಲನೆಯನ್ನು ಮಾಡುತ್ತಾ ಬಂದನು. ಈರೀತಿಯಲ್ಲಿಯೇ, ಲೋಕದಲ್ಲಿರುವ ಸ್ತ್ರೀಪುರುಷರೂ ಸಹ, ತಾವು ಆಶಾ ಪಾಶವೆಂಬ ಬಂಧಕದೊಳಗೆ ಸಿಕ್ಕಿಬಿದ್ದಿದ್ದರೂ, ಮೇಲೆ ಹೇಳಿದ ನಳಿನೀ ಪತ್ರದ ಮೇಲಿರುವ ಜಲಬಿಂದುವಿನಂತೆ, ಅಂಟಿ ಅಂಟದೆ ಇದ್ದು ಸಂಸಾರ ಬಂಧಕ್ಕೆ ಒಳಗಾಗದೆ ಸಮಸ್ತ ಕಾರ್ಯಗಳನ್ನೂ ಮಾಡುತ್ತಾ ಬರುವುದ ಕ್ಕಾಗಿಯೇ ಈ ಕೆಳಗಿನ ವಿಷಯಗಳನ್ನು ಒತ್ತಿ ಹೇಳಿರುತ್ತದೆ. ಆದುದ ರಿಂದ ಸಕಲ ಸ್ತ್ರೀಪುರುಷರೂ ಈ ಮುಂದೆ ಹೇಳುವವುಗಳೆಲ್ಲವನ್ನೂ ನೆನಪಿ ನಲ್ಲಿಟ್ಟು ತಮ್ಮ ತಮ್ಮ ಕಾರ್ಯಗಳನ್ನು ನಡೆಸಿಕೊಂಡು ಬರಬೇಕು.

ಜನಕಮಹಾರಾಜನು, ತನ್ನ ಸಭಾಮಂಟಪದಲ್ಲಿರುವ ನವರತ್ನ ಸಿಹ್ಮಾಸನದಲ್ಲಿ ಕುಳಿತು, ರಾಜ್ಯಪರಿಪಾಲನೆಯನ್ನು ಮಾಡುವ ಕಾಲದಲ್ಲಿ ಮಾತ್ರ, ಆಯಾ ಕಾರ್ಯಕ್ಕೆ ಬೇಕಾದ ರೀತಿಯಲ್ಲಿ ತನ್ನ ಮನಸ್ಸನ್ನು ಉಪಯೋಗಪಡಿಸಿಕೊಂಡು, ಎಲ್ಲಾ ಕಾರ್ಯಗಳನ್ನು ಮಾಡಿ ಮುಗಿಸಿದ ಮೇಲೆ, ಸಿಹ್ಮಾಸನದಿಂದಿಳಿದು ತನ್ನ ಅಂತಃಪುರದ ಕಡೆಗೆ ಹೋಗುವಾಗ, ಆತನು ತನ್ನ ಮನಸ್ಸನ್ನು ಯಾವ ವ್ಯವಹಾರದಲ್ಲಿಯೂ ಪ್ರವೇಶಿಸುವುದಕ್ಕೆ ಅವಕಾಶಕೊಡದೆ ನಿಲ್ಲಿಸಿ, ಆಕಾಶಸ್ವರೂಪನಾದ ಪರಮಾತ್ಮನಲ್ಲಿ ಅದನ್ನು ಐಕ್ಯಮಾಡಿ ತಾನೇ ತಾನಾಗಿ, ನಡೆಯುವ ಸ್ಥಳ, ಕುಳಿತ ಸ್ಥಳ, ನಿಂತ ಸ್ಥಳ, ಮಲಗುವ ಸ್ಥಳ ಹೀಗೆ ಎಲ್ಲಾ ಸ್ಥಳಗಳಲ್ಲಿಯೂ ಸಮಾಧಿವಿಷಯದಲ್ಲಿಯೇ ಇದ್ದು ಅಂದರೆ ಮನಸ್ಸಿನಲ್ಲಿ ಯಾವ ಕೋರಿಕೆಗಳು ಹುಟ್ಟುವುದಕ್ಕೂ ಅವಕಾಶಕೊಡದೆ, ಆಕಾಶಸ್ವರೂಪಿಯಾದ ಆ ಪರಮಾತ್ಮನಲ್ಲಿಯೇ

ಮನಸ್ಸನ್ನು ಐಕ್ಯಮಾಡಿ ನಿರಂತರವೂ ಬ್ರಹ್ಮಾನಂದವನ್ನೇ ಅನುಭವಿಸುತ್ತಿದ್ದನು. ಮತ್ತೆ, ಆತನ ಮನಸ್ಸು, ಲೋಕವ್ಯವಹಾರದಲ್ಲಿ ಸಂಕಲ್ಪಿಸಿದ್ದೇ ಆದರೆ ಸಮಾಧಿನಿಷ್ಠೆಯಿಂದ ಬಿಡುಗಡೆಯಾಗುತ್ತಿದ್ದಿತು. ಹೀಗೆ ಬಿಡುಗಡೆಯನ್ನು ಹೊಂದಿ ಪುನಃ ರಾಜ್ಯಪರಿಪಾಲನೆಯನ್ನು ಮಾಡುವಾಗ, ಆಯಾ ಕಾರ್ಯಗಳಿಗೆ ತಕ್ಕಂತೆ ತನ್ನ ಮನಸ್ಸನ್ನು ಉಪಯೋಗಮಾಡಿಕೊಂಡು ಎಲ್ಲಾ ಕಾರ್ಯಗಳನ್ನೂ ಮಾಡಿ ಮುಗಿಸಿದಮೇಲೆ ಪುನಃ ಹಿಂದೆ ಹೇಳಿದಂತೆ ನಿರಂತರವೂ ಸಮಾಧಿನಿಷ್ಠೆಯಲ್ಲಿಯೇ ಇರುತ್ತಿದ್ದನು. 'ಜನಕಮಹಾರಾಜನ ಮನಸ್ಸು ಬ್ರಹ್ಮನಲ್ಲಿ ಬೆರೆತಮೇಲೆ ಪುನಃ ಲೋಕವ್ಯವಹಾರಕ್ಕಾಗಿ ಬರಬೇಕಾದುದೇನು?' ಎಂದು ಕೆಲವರಿಗೆ ಸಂದೇಹವುಂಟಾಗಬಹುದು. ಅದಕ್ಕೆ ಕಾರಣವು ಈ ಮುಂದೆ ವಿಸ್ತರಿಸಿದೆ.

ಜನಕಮಹಾರಾಜನು ಹಿಂದಿನಜನ್ಮದಲ್ಲಿ ಮಾಡಿದ ಕರ್ಮವು ಪೂರ್ಣವಾಗಿ ನೆರವೇರದೆ ಸ್ವಲ್ಪ ಶೇಷವುಳಿದಿತ್ತಾದುದರಿಂದ ಆತನ ಕರ್ಮಗಳಲ್ಲಿ ಈರೀತಿಯಾದ ಅವಸ್ಥೆಯುಂಟಾಗುತ್ತಿತ್ತು. ಇದಕ್ಕೆ ದೃಷ್ಟಾಂತವೇನೆಂದರೆ, ಹಿಡಿಯಲ್ಲಿ ಹಿಡಿದಿದ್ದ ಇಂಗು ಖರ್ಚಾಗಿ (ವ್ಯಯವಾಗಿ) ಹೋಗಿದ್ದರೂ ಅದರ ವಾಸನೆಯು ಸದಾ ಆ ಹಿಡಿಯಲ್ಲಿದ್ದೇ ಇರುವುದು; ಆಮೇಲೆ ಆ ಕೈಯನ್ನು ಬೆಂಕಿಯ ಶಾಖಕ್ಕೆ ಹಿಡಿದು ಕಾಸಿದರೆ ಆ ವಾಸನೆಯು ಮಾಯವಾಗಿ ಹೊಸ ಹಿಡಿಯೋ ಎನ್ನುವಂತೆ ತೋರುವುದು. ಇದೇ ರೀತಿಯಲ್ಲಿಯೇ ಜೀವಿಗಳ ಸಂಚಿತಕರ್ಮಗಳೆಲ್ಲ ತೊಲಗಿಹೋದಮೇಲೆಯೂ, ಕಡೆಯಲ್ಲಿ ಕರ್ಮಶೇಷವು ಸ್ವಲ್ಪವಾಗಿ ಉಳಿದಿದ್ದರೂ ಮೇಲೆ ಹೇಳಿದ ಹಿಡಿಯಲ್ಲಿರುವ ಇಂಗಿನವಾಸನೆಯಂತೆ ನಿಂತೇ ಇರುತ್ತದೆ. ಹೀಗೆ ನಿಂತಿರುವ ಕರ್ಮಶೇಷಕ್ಕಾಗಿ ಕಡೆಯ ಜನ್ಮವನ್ನು ಹೊಂದಿ, ಹಿಂದೆ ಇಂಗಿನವಾಸನೆಯುಳ್ಳ ಹಿಡಿಯನ್ನು ಬೆಂಕಿಗೆ ಹಿಡಿದು ಕಾಯಿಸಿ ವಾಸನೆಯನ್ನು ಹೋಗಲಾಡಿಸಿದಂತೆ, ಆ ಜನ್ಮದಲ್ಲಿ ನಿಂತ ಕರ್ಮಶೇಷವನ್ನು ಭಸ್ಮವಾಗಿ ಮಾಡಿ, ಕರ್ಮಗಳೆಲ್ಲವೂ ನಾಶವಾದ ಬಳಿಕ ಮೋಕ್ಷವನ್ನು ಹೊಂದಬೇಕೇ ಹೊರತು, ಪೂರ್ವಜನ್ಮ ಕರ್ಮವುಳಿದಿರುವವರಿವಿಗೂ ಮೋಕ್ಷವೆಂಬ ಭವನವನ್ನು ಮಾನವರು ಹೊಂದಲಾರರು. ಮೋಕ್ಷವೆಂಬ ಪದದ ಸರಿಯಾದ ಅರ್ಥವಾವುದೆಂದರೆ, ಸಮಸ್ತ ಬಂಧಗಳಿಂದ ಬಿಡುಗಡೆ.

ಎಷ್ಟು ಕಡಿಮೆಯಾಗಿ ಆಶೆಯೆಂಬ ಬಂಧಕವಿದ್ದರೂ ಮೋಕ್ಷವನ್ನು ಪಡೆಯ ಲಾರರು. ಆದುದರಿಂದ ಇಂಗುಳ್ಳ ಹಿಡಿಯಲ್ಲಿನ ವಾಸನೆಯಂತೆ, ಜನಕ ಮಹಾರಾಜನಿಗೆ ಕರ್ಮಶೇಷವು ಸ್ವಲ್ಪ ಉಳಿದಿತ್ತಾದುದರಿಂದ ಆ ಕರ್ಮವು ನಶಿಸುವವರಿವಿಗೂ ಆತನ ಮನಸ್ಸು ಪರಬ್ರಹ್ಮನಲ್ಲಿ ಸ್ವಲ್ಪಕಾಲ ನಿಂತೂ ಸ್ವಲ್ಪಕಾಲ ನಿಲ್ಲದೆಯೂ ಇರುತ್ತಿತ್ತು. ಹೀಗೆ ಈರೀತಿಯಾದ ಅವಸ್ಥೆಯು ಕೆಲವುಕಾಲವಿದ್ದು, ಕರ್ಮಶೇಷವು ಮುಗಿದ ತಕ್ಷಣವೇ ಆ ರಾಜರ್ಷಿಯು ಶುದ್ಧಬ್ರಹ್ಮಸ್ವರೂಪಿಯಾದನು ಅಂದರೆ ಮೋಕ್ಷವನ್ನು ಪಡೆದನು.

ಈ ರಾಜರ್ಷಿಯು ಪೂರ್ವಜನ್ಮದಲ್ಲಿ ಯೋಗಿಯಾಗಿದ್ದು, ಆ ಜನ್ಮ ದಲ್ಲಿಯೇ ಜ್ಞಾನಸಿದ್ಧಿಯನ್ನು ಹೊಂದದೆ ಕರ್ಮಶೇಷವಿದ್ದುದರಿಂದ, ಯೋಗಶರೀರವನ್ನು ಬಿಟ್ಟು ಮತ್ತೆ ಬೇರೆ ಶರೀರವನ್ನು ಹೊಂದಿ ಜನಕ ನೆಂಬ ಹೆಸರನ್ನು ಹೊಂದಿ, ಕರ್ಮಶೇಷ ಮುಗಿಯುವವರಿವಿಗೂ ರಾಜ್ಯ ಪರಿಪಾಲನೆಯನ್ನು ಮಾಡುತ್ತ, ತಾನೇ ತಾನಾಗಿ ಅಂದರೆ, ಹಿಂದೆ ಹೇಳಿ ದಂತೆ ಆತನ ಮನಸ್ಸು ಕೆಲಕಾಲ ಬ್ರಹ್ಮನಲ್ಲಿ ಲಯಮಾಡುತ್ತಲೂ ಪುನಃ ಮನಸ್ಸನ್ನು ಅದರಿಂದ ಸೆಳೆದು ರಾಜ್ಯಪರಿಪಾಲನೆಯಲ್ಲಿ ನೆಡುತ್ತಲೂ ಬಂದ ಕರ್ಮಶೇಷವು ಪೂರ್ಣವಾಗಿ ನಶಿಸಿದಮೇಲೆ, ತಾನೇ ಬ್ರಹ್ಮ ಸ್ವರೂಪವನ್ನು ಪಡೆದನು. ಕಣ್ಣಿಗೆ ಕಾಣದ ಸಣ್ಣ ಕ್ರಿಮಿಗಳು ಮೊದಲು ಬ್ರಹ್ಮದೇವನವರಿವಿಗೂ ಸಮಸ್ತವನ್ನೂ ಮುಚ್ಚಿರುವ ಮಾಯೆಯೆಂಬ ಅಜ್ಞಾನದಿಂದ ಬೇರೆಬೇರೆ ಅನೇಕ ಶರೀರಗಳನ್ನು ಪಡೆದು, ಕಡೆಯಲ್ಲಿ ಈಶ್ವರಾರ್ಪಣವಾಗಿ ಮಾಡುತ್ತ ಬಂದ ಪುಣ್ಯ ವಿಶೇಷಗಳಿಂದಲೂ, ಯೋಗಾಭ್ಯಾಸದಿಂದಲೂ ಮೇಲೆ ಹೇಳಿದ ಮಾಯೆಯೆಂಬ ಅಜ್ಞಾನವು ಸ್ವಲ್ಪಸ್ವಲ್ಪವಾಗಿ ಕಡಿಮೆಯಾಗಿ ತರುವಾಯ ಮಾಯೆಯೂ, ಸಂಚಿತ ವೆಂಬ ಕರ್ಮಗಳೂ ನಾಶಹೊಂದಿ, ಇದರಮೇಲೆ ತಮ್ಮ ಆತ್ಮವು ಪರ ಬ್ರಹ್ಮನಲ್ಲಿ ಕಲೆತುಹೋಗುತ್ತದೆ. ಅಂದರೆ ಜೀವಾತ್ಮಪರಮಾತ್ಮಗಳು ಐಕ್ಯವನ್ನು ಹೊಂದುತ್ತವೆ. ಲೋಕದಲ್ಲಿರುವ ಸ್ತ್ರೀಪುರುಷರೆಲ್ಲರೂ ತಾವು ಜೀವಿಸಿರುವವರಿವಿಗೂ ಭಾರ್ಯಾಪುತ್ರಗೃಹವಸ್ತುವಾಹನಾದಿಗಳಲ್ಲಿ ಹೆಚ್ಚಾದ ಮೋಹವನ್ನಿಟ್ಟು ಕಡೆಯಲ್ಲಿ ಆ ಮೋಹದಿಂದಲೇ ಪ್ರಾಣವನ್ನು ಬಿಡುತ್ತಾರಾದುದರಿಂದ, ಅವರಿಗೆ ಆ ಮೋಹವೇ ಬೀಜವಾಗಿದ್ದು ಪುನಃ

ಆ ಮೋಹವನ್ನು ತೀರಿಸಿಕೊಳ್ಳುವುದಕ್ಕಾಗಿ ಶರೀರವನ್ನು ಪಡೆಯುತ್ತಿದ್ದಾರೆ. ಕರ್ಮವಿರುವವರಿವಿಗೂ ಮೇಲೆ ಹೇಳಿದ ಮೋಹವು ಅವರನ್ನು ಬಿಟ್ಟು ಕದಲದು. ಯಾವನಾದರೊಬ್ಬನು ತಾನು ಈಶ್ವರನಿಗೆ ಸಮಾನನಾಗಿದ್ದರೂ ಕರ್ಮಶೇಷವಿದ್ದಲ್ಲಿ ಅವನ ಕರ್ಮವು ನಾಶವಾಗುವವರಿವಿಗೂ ಹುಟ್ಟಿ ಹುಟ್ಟಿ ಸುಖದುಃಖಗಳನ್ನು ಅನುಭವಿಸುವವನು ಆಗೇ ಆಗುತ್ತಾನೆ.

ಆದುದರಿಂದ, ಓ ಸ್ತ್ರೀ ಪುರುಷರಿರಾ! ತಾವರೆಯ ಎಲೆಯಮೇಲಿರುವ ನೀರಿನ ಹನಿಯು ಆ ಎಲೆಯನ್ನು ಅಂಟದೇ ಇರುವಂತೆ ನೀವು ಎಲ್ಲಾ ವಿಷಯಗಳಲ್ಲಿ ಆಶೆಯುಳ್ಳವರಾಗಿದ್ದರೂ ಅವುಗಳಲ್ಲಿ ನಿಜವಾದ ಆಸಕ್ತಿಯಿಲ್ಲದೆ, ಮೇಲೆ ಹೇಳಿದ ತಾವರೆಯೆಲೆಯ ಮೇಲಿರುವ ಜಲಬಿಂದುವಿನಂತೆಯೂ, ಕುಂಬರ ಹುಳುವು ಬುರುದೆಯಲ್ಲಿದ್ದರೂ ಆ ಬುರುದೆಯು ಅದರ ಶರೀರಕ್ಕಂಟದೆ ಹೇಗಿರುತ್ತದೆಯೋ, ಹಾಗೂ ನೀವು ಸಂಸಾರವೆಂಬ ಬುರುದೆಯಲ್ಲಿ ಸಿಕ್ಕಿಬಿದ್ದಿದ್ದರೂ ಆ ಬುರುದೆಯು ನಿಮ್ಮನ್ನಂಟದಿರುವಂತೆ ಇರುವುದಕ್ಕಾಗಿ ಈ ಗ್ರಂಥದಲ್ಲಿ ಅನೇಕ ಉಪದೇಶಗಳನ್ನು ಮಾಡಿದೆ. ಆ ಉಪದೇಶಗಳಂತೆ ನಡೆಯುತ್ತ ಬಂದಲ್ಲಿ ಆಗ ನಿಮ್ಮ ಆಶೆಯೆಂಬ ಮೋಹವು ಸ್ವಲ್ಪಸ್ವಲ್ಪವಾಗಿ ತಗ್ಗುತ್ತ ಬಂದು ಕಡೆಯಲ್ಲಿ ಎಲ್ಲಾ ಆಶೆಯು ತೊಲಗಿಹೋಗುತ್ತದೆ. ಅವೆಲ್ಲವೂ ಕಳೆದ ತಕ್ಷಣವೇ ಶುದ್ಧಬ್ರಹ್ಮರಾಗುತ್ತೀರಿ. ಅಂದರೆ, ನೀವು ನಿಮ್ಮ ಅಂತರಂಗದಲ್ಲಿ ಯಾವ ಆಸೆಯನ್ನೂ ಇಡದೆ ಇದ್ದು ನೋಡುವವರಿಗೆ ಮಾತ್ರ ಹೆಚ್ಚಾದ ಆಸೆಯಿಂದ ಕೂಡಿದವರಂತೆ ಇರುವ ರೀತಿಯಲ್ಲಿ ನಟಿಸಿ ತೋರಿಸಬೇಕೇ ಹೊರತು ವಸ್ತುತಃ ಅಂತರಂಗದಲ್ಲಿ ಆಸೆಯನ್ನಿಡಬಾರದು. ಹೀಗಿದ್ದಲ್ಲಿ ಸಕಲ ಆಶಾಪಾಶಗಳೂ ಅವುಗಳಲ್ಲಿನ ದುಷ್ಫಲಗಳೂ ನಿಮ್ಮನ್ನು ಬಿಟ್ಟು ಕದಲುವುವು. ಇವೆಲ್ಲವನ್ನೂ ಬಿಟ್ಟಮೇಲೆಯೇ ಮೋಕ್ಷವು ಕರತಲಾಮಲಕವಾಗಿ ಸಿದ್ಧಿಸುವುದು. ಇದಕ್ಕೆ ಸಂಶಯವಿಲ್ಲ. ಜೀವಿಗಳಿಗಿರುವ ಹದಿನಾರವಸ್ಥೆಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಿದೆ.



# ಜೀವಿಗಳಿಗಿರುವ ಹದಿನಾರವಸ್ಥೆಗಳು.

---

ಶ್ರುತಿ ॥ "ಜಾಗ್ರತ್ಸ್ವಪ್ನಸುಷುಪ್ತಿತುರೀಯ ಮಿತಿ ಚತುರ್ವಿಧಾ ಅವಸ್ಥಾಃ। ಜ್ಞಾನೇಂದ್ರಿಯ ಕರ್ಮೇಂದ್ರಿ ಯಾಂತಃಕರಣಚತುಷ್ಟಯಂ ಚತುರ್ದಶ ಕರಣ ಯುಕ್ತಂ ಜಾಗ್ರತ್ । ಅಂತಃಕರಣಚತುಷ್ಟಯೈ ರೇವ ಸಂಯುಕ್ತಃ ಸ್ವಪ್ನಃ । ಚಿತ್ತೈಕಕರಣಾ ಸುಷುಪ್ತಿಃ । ಕೇವಲ ಜೀವಯುಕ್ತಮೇವ ತುರೀಯ ಮಿತಿ ।" (ಶಾರೀರಕೋಪನಿಷತ್ತು.)

ಜಾಗ್ರತ್ತು, ಸ್ವಪ್ನ, ಸುಷುಪ್ತಿ, ತುರೀಯವು ಎಂದು ಅವಸ್ಥೆಗಳು ನಾಲ್ಕು ವಿಧವಾಗಿವೆ. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ನಾಲ್ಕವಸ್ಥೆಗಳಿರುವುವು. ಈ ನಾಲಕ್ಕು ಅವಸ್ಥೆಗಳನ್ನು ಈ ಮುಂದೆ ವಿವರಿಸಿ ಹೇಳಲಾಗಿದೆ. ಜಾಗ್ರತ್ತಿನಲ್ಲಿ ಜಾಗ್ರತ್ತು, ಜಾಗ್ರತ್ತಿನಲ್ಲಿ ಸ್ವಪ್ನ, ಜಾಗ್ರತ್ತಿನಲ್ಲಿ ಸುಷುಪ್ತಿ ಮತ್ತು ಜಾಗ್ರತ್ತಿನಲ್ಲಿ ತುರೀಯವು ಎಂಬ ಈ ನಾಲಕ್ಕೂ ಇವೆ. ಇದೇ ರೀತಿಯಲ್ಲಿ ಸ್ವಪ್ನದಲ್ಲಿಯೂ, ಸುಷುಪ್ತಿಯಲ್ಲಿಯೂ ಮತ್ತು ತುರೀಯದಲ್ಲಿಯೂ ಒಂದೊಂದರಲ್ಲಿ ನಾಲ್ಕರಂತೆ ಅವಸ್ಥೆಗಳು ಇವೆ. ಅವುಗಳ ವಿವರಣೆ ಈ ಕೆಳಗೆ ಹೇಳಲಾಗಿದೆ.

1. ಒಂದು ವಿಷಯವನ್ನು ಕುರಿತು ಮಾತನಾಡುವಾಗ ಅದನ್ನು ಶ್ರದ್ಧೆಯಿಂದ ಕೇಳಿ ಅವುಗಳಲ್ಲಿ ಒಂದನ್ನೂ ಮರೆಯದೆ ಜ್ಞಾಪಕದಲ್ಲಿಟ್ಟುಕೊಳ್ಳುವುದೇ ಜಾಗ್ರತ್ತಿನಲ್ಲಿ ಜಾಗ್ರತ್ತು ಎಂದು ಹೇಳುವರು.

2. ಒಂದು ವಿಷಯವನ್ನು ಮಾತನಾಡುವಾಗ ಆ ವಿಷಯವನ್ನು ಮನಸ್ಸಿನಲ್ಲಿ ಸ್ವಲ್ಪ ಹೊತ್ತು ನಿಲ್ಲಿಸಿಯೂ ಸ್ವಲ್ಪ ಕಾಲ ನಿಲ್ಲಿಸದೆಯೂ ಇರುವುದರಿಂದ, ಆ ವಿಷಯಗಳಲ್ಲಿ ಕೆಲವು ತಿಳಿದೂ ಕೆಲವು ತಿಳಿಯದೆಯೂ ಇರುವ ಸ್ಥಿತಿಯೇ ಜಾಗ್ರತ್ತಿನಲ್ಲಿ ಸ್ವಪ್ನಾವಸ್ಥೆಯೆಂದು ತಿಳಿಯಬೇಕು.

3. ಒಂದು ವಿಷಯವನ್ನು ಕುರಿತು ಮಾತನಾಡುತ್ತಿರುವಾಗ ಅದನ್ನು ಗ್ರಹಿಸದೇ ಇರುವ ಸ್ಥಿತಿಯೇ ಜಾಗ್ರದವಸ್ಥೆಯಲ್ಲಿ ಸುಷುಪ್ತ್ಯವಸ್ಥೆ ಎಂದೆನ್ನಿಸುವುದು.

4. ಒಂದು ವಿಷಯವನ್ನು ಕುರಿತು ಮಾತನಾಡುವಾಗ ಅದನ್ನು ಶ್ರದ್ಧೆಯಿಂದ ಕೇಳಿ ಆಮೇಲೆ ಅದನ್ನೇ ಕುರಿತು ಪುನಃ ಯೋಚನೆ ಮಾಡುವುದೇ ಜಾಗ್ರತ್ತಿನಲ್ಲಿ ತುರೀಯಾವಸ್ಥೆ ಎಂದು ಕರೆಯಲ್ಪಡುವುದು.

5. ಕನಸ್ಸಿನಲ್ಲಿ ಕಂಡ ವಿಷಯಗಳನ್ನು ಎಚ್ಚರಿಕೆಯಾದನಂತರ ಜ್ಞಾಪಿಸಿಕೊಳ್ಳುವುದೇ ಸ್ವಪ್ನದಲ್ಲಿ ಜಾಗ್ರದವಸ್ಥೆ.

ಈ ಕನಸ್ಸಿನ ಸ್ವಾನುಭವವು ಹೀಗಿದೆ:—ಸ್ವಪ್ನದಲ್ಲಿ ಕಣ್ಣು, ಕಿವಿ, ಮೂಗು, ಬಾಯಿ, ದೇಹದ ಚರ್ಮಗಳೆಂಬ ಪಂಚೇಂದ್ರಿಯಗಳೊಡನೆ ಮನಸ್ಸು ಸೇರಿ, ಯಾವುದನ್ನು ನೋಡದಿದ್ದರೂ, ತಾನು ಸ್ವಪ್ನದಲ್ಲಿ ಕಂಡ ವಿಷಯಗಳೆಲ್ಲವನ್ನೂ ಬೆಳಿಗ್ಗೆ ಎಲ್ಲರೊಡನೆ ಹೇಳುವ ಶಕ್ತಿಯು ಮನಸ್ಸಿಗುಂಟಾಗುತ್ತದೆ. ಇದಕ್ಕೆ ಕಾರಣವನ್ನು ಈ ಮುಂದೆ ಹೇಳಿದೆ.

ಜೀವರಾಶಿಗಳ ಹೃದಯಕಮಲದಲ್ಲಿ ಅಂತರ್ಯಾಮಿಯಾಗಿಯೂ ಸಾಕ್ಷಿಭೂತನಾಗಿಯೂ ಇರುವ ಆತ್ಮನು, ಕನಸ್ಸಿನಲ್ಲಿ ಕಂಡ ವಿಷಯಗಳೆಲ್ಲವನ್ನೂ ನಿದ್ರೆಯಿಂದೆಚ್ಚತ್ತೊಡನೆಯೇ ಎಲ್ಲರೊಡನೆ ಹೇಳುವುದಕ್ಕೆ ಅಂದರೆ ಕನಸ್ಸಿನಲ್ಲಿ ಕಂಡುದನ್ನು ಮನಸ್ಸಿಗೆ ಗೋಚರವಾಗುವಂತೆ ಜ್ಞಾಪಕವನ್ನುಂಟುಮಾಡುತ್ತಿರುತ್ತಾನೆ. ಆತ್ಮನು ಸಾಕ್ಷಿಮಾತ್ರನೆಂದು ವೇದಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಜ್ಞಾನಿಗಳ ಮುಖದಿಂದಲೂ ಹೇಳಿರುವುದಕ್ಕೆ ಇದೇ ನಿದರ್ಶನವೆಂದು ತಿಳಿಯಬೇಕು. ಈ ಕನಸಿನ ವಿಷಯವು ಪ್ರತಿಯೊಬ್ಬರ ಅನುಭವದಲ್ಲಿರುವ ವಿಷಯವೇ ಆಗಿದೆ.

6. ರಾತ್ರಿಯಲ್ಲಿ ಅಂದರೆ ನಿದ್ರಿಸುವಾಗ ಸ್ವಪ್ನದಲ್ಲಿ ಕಂಡುಬಂದ ವಿಷಯಗಳನ್ನು, ಎಚ್ಚರಿಕೆಯಾದಬಳಿಕ ಕೆಲವು ಮಾತ್ರವೇ ಹೇಳಿ ಮತ್ತೆ

ಕೆಲವು ಹೇಳುವುದಕ್ಕೆ ಸಾಧ್ಯವಿಲ್ಲದಿರುವ ಅವಸ್ಥೆಗೆ ಸ್ವಪ್ನದಲ್ಲಿ ಸ್ವಪ್ನಾವಸ್ಥೆಯೆನ್ನಿಸುವುದು.

7. ಸ್ವಪ್ನದಲ್ಲಿ ಕಂಡುಬಂದ ವಿಷಯಗಳಲ್ಲಿ ಯಾವುದೂ ಜ್ಞಾಪಕಕ್ಕೆ ಬಾರದಿರುವುದೇ ಸ್ವಪ್ನದಲ್ಲಿ ಸುಷುಪ್ತ್ಯವಸ್ಥೆಯೆನ್ನಿಸುವುದು.

8. ಸ್ವಪ್ನದಲ್ಲಿ ನಡೆದ ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಅವುಗಳಿಂದುಂಟಾಗುವ ಫಲಗಳನ್ನು ತಿಳಿದುಕೊಂಡು ಸಂತೋಷವನ್ನಾಗಲಿ, ವ್ಯಸನವನ್ನಾಗಲಿ, ಇಲ್ಲವೇ ನಿಶ್ಚಲಮನಸ್ಕನಾಗಿ ತತ್ವವಿಚಾರವನ್ನಾಗಲಿ ಮಾಡುತ್ತಿರುವುದೇ ಸ್ವಪ್ನಾವಸ್ಥೆಯಲ್ಲಿ ತುರೀಯವೆಂದೆನಿಸುವುದು.

9. ನಿದ್ರೆಯಿಂದೆದ್ದು, ಅದರಿಂದುಂಟಾಗುವ ಶುಭಾಶುಭಗಳನ್ನು ಇತರರೊಡನೆ ಹೇಳಿಕೊಳ್ಳುವುದೇ ಸುಷುಪ್ತಿಯಲ್ಲಿ ಜಾಗ್ರದವಸ್ಥೆಯೆಂದೆನಿಸುವುದು.

10. ನಿದ್ರೆಯ ಸುಖವನ್ನು ತಿಳಿದೂ ತಿಳಿಯದೇ ಇರುವ ಸ್ಥಿತಿಗೇ ಸುಷುಪ್ತಿಯಲ್ಲಿ ಸ್ವಪ್ನಾವಸ್ಥೆಯು.

11. ನಿದ್ರೆಯಲ್ಲಿ ಏನೂ ತಿಳಿಯದೆ ಇರುವಿಕೆಯೇ ಸುಷುಪ್ತಿಯಲ್ಲಿ ಸುಷುಪ್ತಿ ಎಂಬ ಅವಸ್ಥೆಯು.

12. ಗಾಢನಿದ್ರೆಯನ್ನನುಭವಿಸಿ ಎಚ್ಚತ್ತಮೇಲೆ ಆ ನಿದ್ರೆಯು ಅಜ್ಞಾನ ವಿಷಯವೆಂದು ತಿಳಿದುಕೊಳ್ಳುವುದೇ ಸುಷುಪ್ತಿಯಲ್ಲಿ ತುರಿಯಾವಸ್ಥೆಯೆನಿಸುವುದು.

13. ಯೋಗನಿಷ್ಠೆಯಲ್ಲಿ ಹಸಿವು ಬಾಯಾರಿಕೆಗಳಿದ್ದರೂ ತನಗೆ ತೋರದೆಯಿರುವುದೇ ತುರೀಯದಲ್ಲಿ ಜಾಗ್ರದವಸ್ಥೆಯು.

14. ಯೋಗನಿಷ್ಠೆಯಲ್ಲಿ ಹಸಿವು ಬಾಯಾರಿಕೆಗಳೂ, ಪ್ರಪಂಚ ವಿಷಯಗಳೂ ಇವುಗಳು ತಿಳಿಯದಿರುವಿಕೆಯೇ ತುರೀಯದಲ್ಲಿ ಸ್ವಪ್ನಾವಸ್ಥೆಯು.

15. ಯೋಗನಿಷ್ಠೆಯಲ್ಲಿ ಯಾವ ಕೋರಿಕೆಗಳೂ ಉಂಟಾಗದೆ ಸುಮ್ಮನಿರುವುದೇ ತುರೀಯದಲ್ಲಿ ಸುಷುಪ್ತಿಯೆಂದೆನಿಸುವುದು.

16. ಮೇಲೆ ವಿವರಿಸಿದ ಹದಿನೈದು ಅವಸ್ಥೆಗಳಲ್ಲಿ ಯಾವುದೂ ಇಲ್ಲದೆ ಪರಮಾತ್ಮನೇ ತಾನೆಂದು ದೃಢಭಾವವನ್ನು ಹೊಂದಿ, ತದೇಕ ಧ್ಯಾನದಲ್ಲಿ ಮಗ್ನವಾಗಿರುವುದೇ ತುರೀಯಾವಸ್ಥೆಯಲ್ಲಿ ತುರಿಯಾವಸ್ಥೆಯೆಂದೆನಿಸುವುದು.

ಇಂತಹ ತುರೀಯಸ್ಥಿತಿಯಲ್ಲಿದ್ದೇ ಜನಕಮಹಾರಾಜನು ರಾಜ್ಯ ಪರಿಪಾಲನೆಯನ್ನು ಮಾಡುತ್ತಬಂದ ರಹಸ್ಯಾರ್ಥವನ್ನು ಹಿಂದಿನ ಪ್ರಕರಣ ದಲ್ಲಿ ವಿವರಿಸಿರುತ್ತೆಯಾಗಿ ಪ್ರಪಂಚದಲ್ಲಿನ ಮಾನವರೆಲ್ಲರೂ ಹಿಂದೆ ವರ್ಣಿಸಿರುವ ಜನಕರಾಜನ ರೀತಿಯಲ್ಲಿದ್ದು ಸಮಸ್ತ ಕಾರ್ಯಗಳನ್ನೂ ಮಾಡುತ್ತ ಬರಬೇಕು. ಈ ಮುಂದೆ ಪ್ರಪಂಚ ಸೃಷ್ಟಿಕ್ರಮವನ್ನು ತಿಳಿಸಲಾಗಿದೆ.

# ಪ್ರಪಂಚ ಸೃಷ್ಟಿ.

ಶ್ರುತಿ ॥ " ಸೃಷ್ಟೇಃ ಪುರಾ ನಾಮರೂಪವರ್ಜಿತಂ ಜಗತ್ ।
ಸದೇನ ಸೌಮ್ಯ ಇದ ಮಗ್ರ ಆಸೀತ್." । (ಛಾಂದಾಗ್ಯೋಪನಿಷತ್ತು)

'ಸೃಷ್ಟಿಗೆ ಪೂರ್ವದಲ್ಲಿ ಈ ಪ್ರಪಂಚವು ನಾಮರೂಪಗಳಿಲ್ಲದೆ ಶೂನ್ಯವಾಗಿ ಕೇವಲ ಪರಬ್ರಹ್ಮಸ್ವರೂಪವಾಗಿಯೇ ಇದ್ದಿತು.' ಎಂಬುದನ್ನು ಮೇಲಿನ ಶ್ರುತಿವಚನವು ಹೇಳುತ್ತದೆ.

ಶ್ರುತಿ ॥ ತಸ್ಮಿನ್ ಮರು ಶುಕ್ತಿಕಾ ಸ್ಥಾಣುಸ್ಫಟಿಕಾದೌ ಜಲರೌಪ್ಯ ಪುರುಷರೇ
ಖಾದಿವತ್ ಲೋಹಿತಶುಕ್ಲಕೃಷ್ಣಗುಣಮಯಿಾ ಗುಣಸಾಮ್ಯಾನಿರ್ವಾಚ್ಯಾ
ಮೂಲಪ್ರಕೃತಿ ರಾಸೀತ್ ॥ (ಪೈಂಗಳೋಪನಿಷತ್ತು.)

ಬಿಸಿಲ್ಗುದುರೆಯನ್ನು ನೋಡಿ ನೀರೆಂದೂ, ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿಯೆಂದೂ, ಸ್ಥಾಣುವು ಅಂದರೆ ನಿಂತಿರುವ ಒಂದು ಮೋಟು

ಮರವನ್ನು ನೋಡಿ ಪುರುಷನೆಂದೂ, ಸ್ಫಟಿಕಮಣಿಯಲ್ಲಿ ಬಣ್ಣಗಳು ಇಲ್ಲ ದಿದ್ದರೂ ಬೇರೆಬೇರೆ ವರ್ಣಗಳಿರುವಂತೆಯೂ ಭ್ರಮೆಯಿಂದ ಕಾಣಬರುತ್ತವೆ. ಅದೇ ರೀತಿಯಲ್ಲಿ ಶುದ್ಧ ನಿರ್ಗುಣ ನಿರಾಕಾರ ಪರಬ್ರಹ್ಮನೊಳಗಿನಿಂದ ಮೂಲಪ್ರಕೃತಿಯೆಂಬ ಮಾಯೆಯೊಂದು, ಕೆಂಪು, ಕಪ್ಪು, ಬಿಳುಪು ಎಂಬುವ ಈ ಮೂರು ಬಣ್ಣಗಳಿಂದ ಕೂಡಿ ಮೂರು ವಿಧವಾಗಿ ಹುಟ್ಟಿತು. ಲೋಹಿತವರ್ಣ (ಕೆಂಪು ಬಣ್ಣ) ವೇ ಅವಿದ್ಯಾಶಕ್ತಿ; ಶ್ವೇತವರ್ಣ (ಬಿಳಿಯಬಣ್ಣ) ವೇ ಮಾಯಾಶಕ್ತಿ; ಮತ್ತೆ ಕೃಷ್ಣವರ್ಣ (ಕಪ್ಪುಬಣ್ಣ) ವೇ ಆವರಣಶಕ್ತಿ ಅಥವಾ ಅಜ್ಞಾನ. ಅಂದರೆ ಅನೇಕ ವಿಧವಾದ ಆಶಾಪಾಶಗಳು ಆತ್ಮನನ್ನು ಕಪ್ಪುಬಣ್ಣದಿಂದ ಮುಚ್ಚಿರುತ್ತವೆ.

ಸತ್ವಗುಣ ಪ್ರಧಾನವಾಗಿರುವುದು ಮಾಯಾಶಕ್ತಿ. ಆ ಶಕ್ತಿಯಿಂದ ಉಂಟಾದ ಪರಬ್ರಹ್ಮವೆಂಬ ಪ್ರತಿಬಿಂಬವೇ ಈಶ್ವರನಾಗಿ ಪರಿಣಮಿಸಿತು. ಆ ಈಶ್ವರನು ಮಾಯಾಶಕ್ತಿಯನ್ನು ವಶಮಾಡಿಕೊಂಡು ಬ್ರಹ್ಮ ವಿಷ್ಣು, ಮಹೇಶ್ವರ ರೂಪವಾಗಿ ಬಂದು ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರ ಕಾರ್ಯಗಳನ್ನು ಮಾಡುತ್ತ ಬರುತ್ತಿದ್ದಾನೆ.

ಶ್ರುತಿ ॥ ಬ್ರಹ್ಮಣೋಃ ರವ್ಯಕ್ತಂ। ಅವ್ಯಕ್ತಾನ್ಮಹತ್। ಮಹತೋಽಹಂಕಾರಃ। ಅಹಂಕಾರಾತ್ ಪಂಚತನ್ಮಾತ್ರಾಣಿ। ಪಂಚತನ್ಮಾತ್ರೇಭ್ಯಃ ಪಂಚಮಹಾಭೂತಾನಿ। ಪಂಚಮಹಾಭೂತೇಭ್ಯಃ ಫಲಂ ಜಗತ್ ॥

(ತ್ರಿಶಿಖಿ ಬ್ರಾಹ್ಮಣೋಪನಿಷತ್ತು)

ಬ್ರಹ್ಮತತ್ವದಿಂದ ಅವ್ಯಕ್ತತತ್ವವೂ, ಅವ್ಯಕ್ತದ ದೆಸೆಯಿಂದ ಮಹತ್ತತ್ವವೂ, ಮಹತ್ತಿನಿಂದ ಅಹಂಕಾರವೂ, ಅಹಂಕಾರದ ದೆಸೆಯಿಂದ ಪಂಚತನ್ಮಾತ್ರಗಳೂ, ಪಂಚತನ್ಮಾತ್ರಗಳಿಂದ ಪಂಚಮಹಾಭೂತಗಳೂ, ಅಂದರೆ ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಇವುಗಳೂ, ಇಂತಹ ಪಂಚಮಹಾಭೂತಗಳ ದೆಸೆಯಿಂದ ಈ ಜಗತ್ತೂ ಹುಟ್ಟಿರುತ್ತವೆ.

ಮಾಯೆಯಿಂದ ಉತ್ಪತ್ತಿಯಾದ ಈ ಪ್ರಪಂಚವೂ, ಮಾಯಾಶಕ್ತಿಯು ನಾಶವಾಯಿತೆಂದರೆ ಅದೂ ನಾಶವಾಗುತ್ತದೆ. ಈ ಮಾಯಾ

ಶರೀರವು ನಶಿಸಿದಮೇಲೆ ಮಾಯಾಪ್ರಪಂಚವೂ ನಶಿಸುತ್ತದೆ. ಪುನಃ ಈ ಮಾಯಾಶರೀರವು ಉತ್ಪತ್ತಿಯಾಯಿತೆಂದರೆ ಮಾಯಾಪ್ರಪಂಚವೂ ಜೊತೆಯಲ್ಲಿಯೇ ಉತ್ಪತ್ತಿಯಾಗುತ್ತದೆ. ಈ ವಿಧವಾಗಿ ಈ ಮಾಯಾ ಶರೀರವು ಹುಟ್ಟುತ್ತ ಸಾಯುತ್ತ ಇರುತ್ತಿರಲು ಅದರೊಡನೆಯೇ ಈ ಮಾಯಾಪ್ರಪಂಚವೂ ಹುಟ್ಟುತ್ತ ನಾಶಹೊಂದುತ್ತಲಿರುತ್ತದೆ. ಈರೀತಿ ಯಾಗಿ ಜೀವಿಯು ಅನೇಕ ಕೋಟಿ ಸಂಖ್ಯೆಯಿಂದ ಜನ್ಮವನ್ನು ಪಡೆಯ ಬೇಕಾಗುತ್ತದೆ. ಇದೇ ದುಸ್ತರವಾದ ಸಂಸಾರ.

ಹುಟ್ಟುಸಾವುಗಳು ಪುನಃಪುನಃ ಆಗುತ್ತಿರುವುದೇ ಸಂಸಾರ. ಈ ಹುಟ್ಟುಸಾವುಗಳಿಗೆ ಮಿತಿಯಿಲ್ಲ. ಬಹು ದುಸ್ತರವಾದ ಇಂತಹ ಸಂಸಾರ ವನ್ನು ದಾಟುವುದೇ ಮುಕ್ತಿಯು ಅಥವಾ ಪರಮಪದವಿಯು. ಅಂದರೆ ಮಾಯಾ ಶರೀರಗಳನ್ನು ಪಡೆಯುವುದು ನಿಂತರೆ ಈ ಮಾಯಾಪ್ರಪಂಚವೂ ಮಾಯವಾಗುವುದು. ಜೀವಿಯು ಮೇಲೆ ಹೇಳಿದಂತೆ ಲೆಕ್ಕವಿಲ್ಲದಷ್ಟು ಜನ್ಮ ಗಳನ್ನು ಪಡೆದು ಕಡೆಗೆ ಪ್ರಳಯಕಾಲದಲ್ಲಿ ಪರಬ್ರಹ್ಮನಲ್ಲಿಯೇ ಅಂಟಿ ಕೊಂಡು ಇರುತ್ತಾನೆ. ಇದಕ್ಕೆ ಶ್ರುತಿಪ್ರಮಾಣವು ಈ ಕೆಳಗೆ ಹೇಳಿದೆ.

ಶ್ರುತಿ ॥ ಬ್ರಹ್ಮಾದ್ಯಂ ಸ್ಥಾವರಾಂತಂ ಚ ♦ ಪಶ್ಯಂತಿ ಜ್ಞಾನಚಕ್ಷುಷಃ ।
ತಮೇಕಮೇವ ಪಶ್ಯಂತಿ ♦ ಪರಿಶುಭ್ರಂ ವಿಭುಂ ದ್ವಿಜಾಃ ॥

ಯಸ್ಮಿನ್ ಸರ್ವ ಮಿದಂ ಪ್ರೋಕ್ತಂ ♦ ಬ್ರಹ್ಮ ಸ್ಥಾವರಜಂಗಮಂ ।
ತಸ್ಮಿನ್ ಮೇ ಪ್ರಲಯಂ ಯಾಂತಿ ♦ ಸ್ರವಂತ್ಯ ಸ್ಸಾಗರೇ ಯಥಾ ॥

ಯಸ್ಮಿನ್ ಭಾವಾಃ ಪ್ರಲೀಯಂತೇ ♦ ಲೀನಾ ಶ್ಚಾವ್ಯಕ್ತತಾಂ ಯಯುಃ ।
ಪಶ್ಯಂತಿ ವ್ಯಕ್ತತಾಂ ಭೂಯೋ ♦ ಜಾಯಂತೇ ಬುದ್ಬುದಾ ಇವ ॥
(ಮಾಂತ್ರಿಕೋಪನಿಷತ್ತು)

ಪ್ರವಾಹಗಳೆಲ್ಲವೂ ಸಮುದ್ರಕ್ಕೆಹೋಗಿ ಬಿದ್ದು, ಆ ಸಮುದ್ರಜಲ ದಲ್ಲಿ ಬೆರೆತು ಒಂದಾಗಿ ಸೇರುವಂತೆ, ಇರುವೆಯಿಂದ ಬ್ರಹ್ಮನವರಿವಿಗೂ ಇರುವ ಅನೇಕ ಕೋಟಿ ಜೀವರಾಶಿಗಳೂ, ಸ್ಥಾವರ ಜಂಗಮಗಳಾದ ಅಂದರೆ ಚರಾಚರಾತ್ಮಕವಾದ ಪ್ರಪಂಚವೂ ಯಾವ ಪರಬ್ರಹ್ಮನಿಂದ ಉತ್ಪತ್ತಿಯಾಗಿವೆಯೋ ಆ ಪರಬ್ರಹ್ಮನಲ್ಲಿಯೇ ಪುನಃ ಪ್ರಳಯಕಾಲದಲ್ಲಿ

ಸೇರಿಹೋಗುತ್ತವೆ. ಸಮುದ್ರದಿಂದ ತರಂಗಗಳೂ (ಅಲೆಗಳೂ) ಆ ತರಂಗಗಳಿಂದ ಬುದ್ಬುದ (ನೀರಿನ ಗುಳ್ಳೆ) ಗಳೂ, ಫೇನ (ನೊರೆ) ಗಳೂ, ತುಷಾರ (ನೀರಿನ ತುಂತುರು) ಗಳೂ ಉತ್ಪತ್ತಿಯಾಗುತ್ತ ಪುನಃ ಅವೆಲ್ಲವೂ ಅದರಲ್ಲಿಯೇ ಅಣಗಿಹೋಗುವಂತೆ, ಈ ಸಕಲ ಚರಾಚರ ಜಗತ್ತೂ ಆ ಪರಬ್ರಹ್ಮನಿಂದ ಉತ್ಪತ್ತಿಯಾಗುತ್ತ ಪುನಃ ಆ ಪರಬ್ರಹ್ಮನಲ್ಲಿಯೇ ಲೀನವಾಗಿ ಹೋಗುವುವು. ಇದಕ್ಕೆ ಒಂದು ನಿದರ್ಶನವುಂಟು. ಏನೆಂದರೆ ಒಬ್ಬ ಸುವರ್ಣಕಾರನು ಅಂದರೆ ಭಂಗಾರದಲ್ಲಿ ಕೆಲಸಮಾಡುವ ಅಕ್ಕಸಾಲೆಯು ಭಂಗಾರದ ಗಟ್ಟಿಯನ್ನು ಉಕ್ಕಿನ ಅರದಿಂದ ತಿಕ್ಕುವಾಗ ಅದರಿಂದ ರಜವಾಗಿ ಹಾರಿಹೋಗುವ ಭಂಗಾರದ ಹುಡಿಯನ್ನು ಮೇಣದ ಗಟ್ಟಿಯಿಂದ ಒತ್ತುವಾಗ ಆ ಭಂಗಾರದ ಕಣಗಳು ಮೇಣದ ಮುದ್ದೆಯಲ್ಲಿಯೇ ಅಂಟಿಕೊಳ್ಳುವಂತೆ ಮೋಕ್ಷವನ್ನು ಹೊಂದದಿರುವ ಜೀವಿಗಳೆಲ್ಲರೂ ಪ್ರಳಯಕಾಲದಲ್ಲಿ ಪರಬ್ರಹ್ಮನಲ್ಲಿಯೇ ಸೇರಿ ಹೋಗುವರು.

ಇದಕ್ಕೆ ಇನ್ನೊಂದು ದೃಷ್ಟಾಂತವುಂಟು. ಒಬ್ಬ ಚಿಲ್ಲರೇ ವರ್ತಕನು ಬೇರೆಬೇರೆ ಸರಕುಗಳನ್ನು ಬೇರೆಬೇರೆ ಗೂಡೆಗಳಲ್ಲಿ ಹಾಕಿ ಅಂಗಡಿಯ ಮುಂಭಾಗದಲ್ಲಿ ಚನ್ನಾಗಿ ಕಾಣುವಂತೆ ತೆರೆದಿಟ್ಟು ವ್ಯಾಪಾರಮಾಡುವ ಕಾಲದಲ್ಲೆಲ್ಲಾ ಆಯಾಯಾ ಗೂಡೆಗಳಲ್ಲಿರುವ ಸರಕನ್ನು ಬೇರೆಬೇರೆಯಾಗಿ ತಕ್ಕಷ್ಟು ಮಾರಿ ಅಂಗಡಿಯನ್ನು ಮುಚ್ಚುವಾಗ ಅಂದರೆ ರಾತ್ರಿ ಕಾಲದಲ್ಲಿ ಆ ಸರಕುಗಳ ಗೂಡೆಗಳನ್ನು ಮಳಿಗೆಯ ಒಳಭಾಗದಲ್ಲಿ ಒಂದರ ಮೇಲೊಂದರಂತೆ ಏರಿಸಿಟ್ಟು ಮನೆಗೆಹೋಗಿ, ಮಾರನೆಯದಿನ ಸೂರ್ಯೋದಯವಾದೊಡನೆಯೇ ಆಯಾ ಸರಕುಗಳಿಂದ ಗೂಡೆಗಳನ್ನು ಪುನಃ ಎಂದಿನಂತೆ ಅವವುಗಳ ಸ್ಥಳದಲ್ಲಿ ಇಡುತ್ತಾನೆ. ಇದು ಹೇಗೋ ಹಾಗೆಯೇ ಪ್ರಳಯಾಂತದಲ್ಲಿ ಪರಬ್ರಹ್ಮನು ತನ್ನನ್ನಂಟಿರುವ ಜೀವಿಗಳನ್ನೆಲ್ಲಾ ಎಲ್ಲೆಲ್ಲಿ ಸೃಷ್ಟಿಮಾಡಬೇಕೋ ಅಲ್ಲಲ್ಲಿ ಪುನಃ ಸೃಷ್ಟಿಮಾಡಿಡುತ್ತಾನೆಂದು ತಿಳಿಯಬೇಕು.



# ಪಂಚಭೂತಗಳು ಪಂಚೀಕರಣಗಳು.

---

ಶ್ಲೋ ॥ ಅಥಾಕಾಶಸ್ಯ ಭೂತಸ್ಯ ♦ ಸಾರ್ಧಂ ಜ್ಞಾತೇತಿ ಕಥ್ಯತೇ ।
ಶೇಷಾರ್ಧಂ ಚ ಚತುರ್ಭಾಗಾ ♦ ಕೃತ್ವಾ ಸಮ್ಮಿಶ್ರ ಮಾಚರೇತ್ ॥

ಪವನೇ ಮಿಳಿತಾಕಾಶಂ ♦ ಭಾಗಂ ಮಾನಸ ಉಚ್ಯತೇ ।
ಅನಲೇ ಮಿಳಿತಾಕಾಶಂ ♦ ಬುದ್ಧಿ ರಿತ್ಯ ಭಿಧೀಯತೇ ॥

ಜಲೇನ ಮಿಶ್ರಿತಾಕಾಶಂ ♦ ಚಿತ್ತ ಮಿತ್ಯಭಿಧೀಯತೇ ।
ಪೃಥಿವ್ಯಾಂ ಮಿಳಿತಾಕಾಶಂ ♦ ಅಹಂಕಾರ ಮಿತೀರಿತಂ ॥

(ವಿಷ್ಣುಯಾಮಳಂ)

ಪಂಚಭೂತಗಳು ಒಂದೊಂದೂ ಎರಡೆರಡು ಭಾಗಗಳಾದವು. ಮೊದಲು ಭಾಗದ ಪಂಚಭೂತಗಳು ಪ್ರಪಂಚವಾಗಿ ಪರಿಣಮಿಸಿತು. ಎರಡನೇ ಭಾಗದ ಪಂಚಭೂತಗಳು ಇಪ್ಪತ್ತೈದು ತತ್ವಗಳಾದವು. ಈ ಇಪ್ಪತ್ತೈದು ತತ್ವಗಳೂ ಸೇರಿ ಶರೀರರೂಪವಾಯಿತು. ಹೇಗೆಂದರೆ ಆಕಾಶಾದಿ ಪಂಚಭೂತಗಳು ಒಂದೊಂದೂ ವ್ಯಷ್ಟಿ, ಸಮಷ್ಟಿಯೆಂಬ ಎರಡು ಭಾಗಗಳಾದವು. ಸಮಷ್ಟಿಯೆಂದರೆ ಭಾಗವಾಗದೆ ಅಖಂಡವಾಗಿರುವಂಥದು. ವ್ಯಷ್ಟಿಯೆಂದರೆ ಖಂಡಖಂಡವಾಗಿ ಭಾಗವಾಗಿರುವಂಥದು. ಹೀಗೆ ಪಂಚಭೂತಗಳನ್ನು ವ್ಯಷ್ಟಿ ಸಮಷ್ಟಿ ಭಾಗಗಳಾಗಿ ವಿಂಗಡಿಸಿ ಒಂದು ಭೂತದೊಡನೆ ಮತ್ತೊಂದನ್ನು ಸೇರಿಸಿದ್ದೇ ಆದರೆ, ಇಪ್ಪತ್ತೈದು ತತ್ವಗಳಿಂದ ಕೂಡಿದ ಶರೀರರೂಪವನ್ನು ಹೊಂದುವಂತೆ ಮಾಡುತ್ತದೆ. ಈ ಪಂಚಭೂತಗಳು ಒಂದರಲ್ಲೊಂದನ್ನು ಸೇರಿಸಿ ಶಿಶುರೂಪವನ್ನುಂಟುಮಾಡುವುದಕ್ಕಾಗಿಯೂ, ತಾನು ಬ್ರಹ್ಮ ವಿಷ್ಣು ಮಹೇಶ್ವರ ರೂಪಗಳನ್ನು ಧರಿಸುವುದಕ್ಕಾಗಿಯೂ ಪರಮಾತ್ಮನೊಬ್ಬನೇ ಕಾರಣಭೂತನು. ಆತನು ಒಂದು ಭೂತವನ್ನು ಮತ್ತೊಂದು ಭೂತದೊಡನೆ ಯಾವ ರೀತಿಯಲ್ಲಿ ಸಂಯೋಗ ಮಾಡುತ್ತಾನೆಯೋ ಅದನ್ನು ಈ ಕೆಳಗೆ ವಿವರಿಸಿದೆ.

ಮೊದಲು ಆಕಾಶವನ್ನು ಎರಡು ಭಾಗವಾಗಿ ಮಾಡಿದನು. ಅದರಲ್ಲಿ ಮೊದಲಿನ ಭಾಗವು ಸಮಷ್ಟಿಯೆನಿಸುತ್ತದೆ. ಎರಡನೇ ಭಾಗವು ವ್ಯಷ್ಟಿಯೆಂದು ಕರೆಯಲ್ಪಡುತ್ತದೆ. ಮೊದಲನೇ ಅರ್ಧವಾದ ಸಮಷ್ಟಿಯಾಕಾಶವು 'ಜ್ಞಾತ' ವೆಂದಾಯಿತು. ಅಂದರೆ ಅಂತಃಕರಣವು ಮತ್ತು ಅದರಲ್ಲಿ ತೋರಿಬರುವ ಬ್ರಹ್ಮನ ಪ್ರತಿಬಿಂಬವು ಇವೆರಡೂ ಸೇರಿ 'ಜ್ಞಾತ' ವಾಯಿತು. ಈ ಜ್ಞಾತವೇ 'ಅಕ್ಷರ' ನೆಂದೂ, 'ಕ್ಷೇತ್ರಜ್ಞ' ನೆಂದೂ, 'ಪುರುಷನೆಂದೂ, 'ಜೀವ' ನೆಂದೂ ಕರೆಯಲ್ಪಡುವುದು. ಎರಡನೆಯ ಅರ್ಧಭಾಗವಾದ ವ್ಯಷ್ಟಿಯಾಕಾಶವನ್ನು ನಾಲಕ್ಕು ಭಾಗಗಳಾಗಿ ಮಾಡಿ ಅದರಲ್ಲಿ ಮೊದಲನೇ ಭಾಗವಾದ ವ್ಯಷ್ಟಿ ಆಕಾಶವನ್ನು ವಾಯುವಿನೊಡನೆ ಸೇರಿಸಿದಾಗ 'ಸಂಕಲ್ಪ' ವು (ಮನಸ್ಸು) ಎಂಬ ತತ್ವವು ಹುಟ್ಟಿತು. ವ್ಯಷ್ಟಿ ಆಕಾಶದ ಎರಡನೇ ಭಾಗವನ್ನು ಅಗ್ನಿಯೊಡನೆ ಸೇರಿಸಿದಾಗ 'ಬುದ್ಧಿ' ಯೆಂಬ ತತ್ವವು ಹುಟ್ಟಿತು. ವ್ಯಷ್ಟಿ ಆಕಾಶದ ಮೂರನೇ ಭಾಗವನ್ನು ಜಲದೊಡನೆ ಸೇರಿಸಿದಾಗ 'ಚಿತ್ತ' ಎಂಬ ತತ್ವವು ಹುಟ್ಟಿತು. ಈ ವ್ಯಷ್ಟಿಯ ನಾಲಕ್ಕನೇ ಭಾಗವನ್ನು ಪೃಥಿವಿಯೊಡನೆ ಸೇರಿಸಿದಾಗ 'ಅಹಂಕಾರ' ವೆಂಬ ತತ್ವವು ಹುಟ್ಟಿತು. ಮನಸ್ಸು, ಬುದ್ಧಿ, ಚಿತ್ತ, ಅಹಂಕಾರವೆಂಬ ಈ ನಾಲಕ್ಕೂ **ಅಂತಃಕರಣ ಚತುಷ್ಟಯ**ಗಳೆಂಬುದಾಗಿಯೂ, ಅಂತರಿಂದ್ರಿಯಗಳೆಂದೂ ಹೇಳಲ್ಪಡುತ್ತವೆ.

ಶ್ಲೋ ॥ ತಥಾ ಚ ವಾಯು ರರ್ಧಂ ಚ ♦ ತದ್ವ್ಯಾನ ಮಿತಿ ಕೀರ್ತಿತಂ ।
ಶೇಷಾರ್ದೇ ತ್ವೇಕಭಾಗಂ ತ ♦ ತ್ಸಮಾನಂ ವ್ಯೋಮಮಿಶ್ರಿತಂ ॥

ಅಗ್ನೌ ಸಂಮಿಶ್ರಿತಂ ಭಾಗಂ ♦ ಉದಾನ ಮಭಿಧೀಯತೇ ।
ಜಲೇಷು ಮಿಶ್ರಿತಂ ಭಾಗಂ ♦ ತತ್ಪ್ರಾಣ ಮಿತಿ ಕೀರ್ತಿತಂ ॥

ಪೃಥಿವ್ಯಾಂ ಮಿಶ್ರಿತಂ ಭಾಗಂ ♦ ಅಪಾನ ಮಿತಿ ಕೀರ್ತಿತಂ ।

(ವಿಷ್ಣುಯಾಮಳಂ)

ಇದುವರಿವಿಗೂ ಆಕಾಶವನ್ನು ಸಮಷ್ಟಿ ವ್ಯಷ್ಟಿಯಾಗಿ ಮಾಡಿ, ಅದರಲ್ಲಿ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳು ಹುಟ್ಟಿದ ವಿವರಗಳನ್ನು ತಿಳಿಸಿದ್ದಾಯಿತು. ಇನ್ನು ಮುಂದೆ ವಾಯುವನ್ನು ವ್ಯಷ್ಟಿ ಸಮಷ್ಟಿಯಾಗಿ

ಭಾಗಿಸಿ ಅವುಗಳ ಸಂಯೋಗದಿಂದ ಯಾವುದು ಉತ್ಪತ್ತಿಯಾಗುತ್ತದೆ ಯೆಂಬುದನ್ನು ಈ ಮುಂದೆ ಹೇಳಿದೆ.

ಪರಮಾತ್ಮನು ವಾಯುವನ್ನು ಎರಡು ಭಾಗಗಳಾಗಿ ಮಾಡಿದನು. ಅದರಲ್ಲಿ ಮೊದಲನೇ ಭಾಗವು ಸಮಷ್ಟಿಯೆಂದೂ ಮತ್ತೊಂದು ವ್ಯಷ್ಟಿ ಯೆಂದೂ ಕರೆಯಲ್ಪಡುತ್ತವೆ. ಸಮಷ್ಟಿ ವಾಯುವೇ 'ವ್ಯಾನ' ವಾಯು ವಾಯಿತು. ಎರಡನೇ ಅರ್ಧವಾದ ವ್ಯಷ್ಟಿವಾಯುವನ್ನು ನಾಲ್ಕು ಭಾಗ ಗಳಾಗಿ ವಿಂಗಡಿಸಿ ಅವುಗಳಲ್ಲೊಂದನ್ನು ಆಕಾಶದೊಡನೆ ಸೇರಿಸಲು 'ಸಮಾನ' ವಾಯುವು ಹುಟ್ಟಿತು. ಎರಡನೇ ಭಾಗವನ್ನು ಅಗ್ನಿಯೊಡನೆ ಸಂಯೋಗ ಮಾಡಲಿಕ್ಕಾಗಿ 'ಉದಾನ' ವಾಯುವು ಉತ್ಪತ್ತಿಯಾಯಿತು. ವ್ಯಷ್ಟಿಯ ಮೂರನೇ ಭಾಗವನ್ನು ಜಲದೊಡನೆ ಸೇರಿಸಲು 'ಪ್ರಾಣ' ವಾಯುವು ಉದ್ಭವಿಸಿತು. ಹೀಗೆಯೇ ವ್ಯಷ್ಟಿವಾಯುವಿನ ನಾಲ್ಕನೇ ಭಾಗವನ್ನು ಪೃಥಿವಿಯೊಡನೆ ಸೇರಿಸಲು 'ಅಪಾನ' ವಾಯುವು ಜನಿ ಸಿತು. ಈ ವ್ಯಾನ, ಸಮಾನ, ಉದಾನ, ಪ್ರಾಣ ಮತ್ತು ಅಪಾನವೆಂಬ ಐದು ವಾಯುವುಗಳೂ "**ಪಂಚಪ್ರಾಣ**" ಗಳೆಂದು ಕರೆಯಲ್ಪಡುತ್ತವೆ.

ಶ್ಲೋ ॥ ಅಗ್ನಿಮಧ್ಯೇಽಪಿ ಭಾಗಂ ತು ♦ ಚಕ್ಷು ರಿತ್ಯಭಿಧೀಯತೇ ।
ತಥಾ ವ್ಯೋಮಗತಂ ಭಾಗಂ ♦ ಶ್ರೋತ್ರ ಮಿತ್ಯಭಿಧೀಯತೇ ॥

ವಾಯುನಾ ಮಿಶ್ರಿತಂ ಭಾಗಂ ♦ ತ್ವಗಿಂದ್ರಿಯ ಮಿತೀರಿತಂ ।
ಜಲೇಷು ಮಿಶ್ರಿತಂ ಭಾಗಂ ♦ ಜಿಹ್ವಾ ಇತ್ಯಭಿಧೀಯತೆ ॥

ಪೃಥಿವ್ಯಾಂ ಮಿಶ್ರಿತಂ ಭಾಗಂ ♦ ಘ್ರಾಣೇಂದ್ರಿಯ ಮಿತಿ ಸ್ಮೃತಂ ।
(ವಿಷ್ಣುಯಾಮಳಂ)

ಅಗ್ನಿಯನ್ನು ಸಮಷ್ಟಿ ವ್ಯಷ್ಟಿಗಳೆಂದು ಎರಡು ಭಾಗಗಳಾಗಿ ಮಾಡಿ, ಅದರಲ್ಲಿ ಸಮಷ್ಟಿಭಾಗದ ಅಗ್ನಿಯನ್ನು 'ನೇತ್ರ' ವನ್ನಾಗಿ ಮಾಡಿದನು. ತರುವಾಯ ವ್ಯಷ್ಟಿಭಾಗದ ಅಗ್ನಿಯನ್ನು ನಾಲ್ಕು ಭಾಗಗಳಾಗಿ ಮಾಡಿ, ಅದರಲ್ಲಿ ಒಂದು ಭಾಗವನ್ನು ಆಕಾಶದೊಡನೆ ಸೇರಿಸಲು 'ಶ್ರೋತ್ರ' ವೂ ಎರಡನೇ ಭಾಗವನ್ನು ವಾಯುವಿನೊಡನೆ ಬೆರೆಸಲು 'ತ್ವಕ್ಕು' ಅಥವಾ

ದೇಹ ಚರ್ಮವೂ, ಮೂರನೆಯ ಭಾಗವನ್ನು ಜಲದೊಡನೆ ಸಂಯೋಗ ಮಾಡಲು 'ಜಿಹ್ವೆ' ಅಂದರೆ ನಾಲಗೆಯೂ ಮತ್ತು ನಾಲ್ಕನೆಯ ಭಾಗವನ್ನು ಪೃಥಿವಿಯೊಡನೆ ಸೇರಿಸಲು 'ಘ್ರಾಣ' ಅಂದರೆ ಮೂಗೂ ಎಂಬ ಈ ಐದೂ ಹುಟ್ಟಿದವು. ಈ ನೇತ್ರ, (ದೃಷ್ಟಿರಿಂದ್ರಿಯ ಅಥವಾ ಕಣ್ಣು), ಶ್ರೋತ್ರ (ಶ್ರವಣೇಂದ್ರಿಯ ಅಥವಾ ಕಿವಿ), ತ್ವಕ್ಕು (ಸ್ಪರ್ಶೇಂದ್ರಿಯ ಅಥವಾ ಚರ್ಮ), ಜಿಹ್ವೆ (ರಸನೇಂದ್ರಿಯ ಅಥವಾ ನಾಲಗೆ) ಮತ್ತು ಘ್ರಾಣ (ಘ್ರಾಣೇಂದ್ರಿಯ ಅಥವಾ ಮೂಗು) ಎಂಬ ಈ ಐದೂ "**ಜ್ಞಾನೇಂದ್ರಿಯ**" ಗಳೆಂದು ಕರೆಯಲ್ಪಡುತ್ತವೆ.

ಶ್ಲೋ ॥ ಜಲಸ್ಯಾರ್ಧಂ ರಸಂ ಜ್ಞೇಯಂ ♦ ಶಬ್ದಂ ವ್ಯೋಮೇ ಚ ಮಿಶ್ರಿತಂ ।
ವಾಯುನಾ ಮಿಶ್ರಿತಂ ಭಾಗಂ ♦ ಸ್ಪರ್ಶಂ ಭವತಿ ನಿಶ್ಚಯಂ ॥

ಅಗ್ನೌ ಸಂಮಿಶ್ರಿತಂ ಭಾಗಂ ♦ ರೂಪ ಮಿತ್ಯಭಿಧೀಯತೇ ।
ಪೃಥಿವ್ಯಾಂ ಮಿಳಿತಂ ಭಾಗಂ ♦ ಗಂಧ ಮಿತ್ಯಭಿಧೀಯತೇ ॥

(ವಿಷ್ಣುಯಾಮಳಂ)

ಜಲವನ್ನು ಸಮಷ್ಟಿ ವ್ಯಷ್ಟಿ ಯೆಂಬ ಎರಡು ಭಾಗಗಳಾಗಿ ಮಾಡಿ, ಸಮಷ್ಟಿ ಜಲಭಾಗವನ್ನು 'ರಸ' ತನ್ಮಾತ್ರವಾಗಿ ಮಾಡಿದನು. ಉಳಿದ ವ್ಯಷ್ಟಿಭಾಗದ ಜಲವನ್ನು ನಾಲ್ಕು ಭಾಗಗಳಾಗಿ ಮಾಡಿ, ಅದರಲ್ಲಿ ಮೊದಲನೇ ಭಾಗವನ್ನು ಆಕಾಶದೊಡನೆ ಸೇರಿಸಲು 'ಶಬ್ದ' ವು ಹುಟ್ಟಿತು. ಎರಡನೇ ಭಾಗದ ವ್ಯಷ್ಟಿಜಲವನ್ನು ವಾಯುವಿನೊಡನೆ ಕಲೆಸಲು 'ಸ್ಪರ್ಶ' ವುಂಟಾಯಿತು. ಮೂರನೇ ಭಾಗವನ್ನು ಅಗ್ನಿಯೊಡನೆ ಸಂಯೋಗ ಮಾಡಲು 'ರೂಪ' ವು ಜನಿಸಿತು. ಹಾಗೆಯೇ ಕಡೆಯ ಭಾಗವನ್ನು ಪೃಥಿವಿಯೊಡನೆ ಮಿಳಿತಮಾಡಲು 'ಗಂಧವು' (ವಾಸನೆಯು) ಹುಟ್ಟಿತು. ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಈ ಐದೂ "**ಪಂಚ ತನ್ಮಾತ್ರ**" ಗಳೆಂದು ಕರೆಯಲ್ಪಡುವುವು.

ಶ್ಲೋ ॥ ಪೃಥಿವ್ಯಾ ಮರ್ಧಭಾಗಂ ಚ ♦ ಪಾಯು ರಿಂದ್ರಿಯ ಮುಚ್ಯತೇ ।
ವ್ಯೋಮೇ ಚ ಮಿಳಿತಂ ಪೃಥ್ವೀ ♦ ಭಾಗಂ ವಾಗಿಂದ್ರಿಯಂ ಮತಂ ॥

ವಾಯುನಾ ಮಿಶ್ರಿತಂ ಪೃಥ್ವೀ ♦ ಭಾಗಂ ಪಾಣೀಂದ್ರಿಯಂ ತಥಾ ।
ಅಗ್ನಿನಾ ಮಿಳಿತಂ ಭಾಗಂ ♦ ಪಾದೇಂದ್ರಿಯ ಮಿತಿ ಸ್ಮೃತಂ ॥
ಜಲೇಷು ಮಿಳಿತಂ ಭಾಗ ♦ ಮುಪಸ್ಥ ಮಿತಿ ಕಥ್ಯತೇ ।

(ವಿಷ್ಣುಯಾಮಳಂ)

ಮತ್ತು ಪೃಥಿವಿಯಲ್ಲಿಯೂ ಸಮಷ್ಟಿ ವ್ಯಷ್ಟಿಗಳೆಂಬ ಎರಡು ಭಾಗಗಳು. ಸಮಷ್ಟಿಭಾಗವೇ 'ಪಾಯು' ಅಂದರೆ ಗುದಸ್ಥಾನವಾಗಿ ಪರಿಣಮಿಸಿತು. ವ್ಯಷ್ಟಿಭಾಗದ ಪೃಥಿವಿಯನ್ನು ನಾಲಕ್ಕು ಭಾಗಗಳಾಗಿ ವಿಂಗಡಿಸಿ, ಅದರಲ್ಲಿ ಮೊದಲನೆಯ ಭಾಗವನ್ನು ಆಕಾಶದೊಡನೆ ಸೇರಿಸಲು 'ವಾಕ್' ಇಂದ್ರಿಯವೂ, ಎರಡನೇ ಭಾಗವನ್ನು ವಾಯುವಿನೊಡನೆ ಬೆರೆಸಲು 'ಪಾಣಿ' ಅಂದರೆ ಕೈ ಎಂಬ ಇಂದ್ರಿಯವೂ, ಮೂರನೇ ಭಾಗವನ್ನು ಅಗ್ನಿಯೊಡನೆ ಸಂಯೋಗಮಾಡಲು 'ಪಾದ' (ಕಾಲು) ಎಂಬ ಇಂದ್ರಿಯವೂ, ಮತ್ತು ಕಡೆಯ ಭಾಗವನ್ನು ಜಲದೊಡನೆ ಕೂಡಿಸಲು, 'ಉಪಸ್ಥ' (ಗುಹ್ಯಸ್ಥಾನ) ವೆಂಬ ಇಂದ್ರಿಯವೂ ಕ್ರಮವಾಗಿ ಜನಿಸಿದವು. ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಈ ಐದೂ **"ಕರ್ಮೇಂದ್ರಿಯ"** ಗಳೆಂದು ಕರೆಯಲ್ಪಡುವುವು.

ಶ್ಲೋ ॥ ಮಹಾಭೂತಾರ್ಧಭಾಗಾನಿ ♦ ವಕ್ಷ್ಯಾಮಿ ಶೃಣು ನಾರದ ।
ಜ್ಞಾತಾ ವ್ಯಾನಶ್ಚ ಚಕ್ಷುಶ್ಚ ♦ ರಸಂ ಪಾಯು ರಿತೀರಿತಂ ॥

(ವಿಷ್ಣುಯಾಮಳಂ)

ಪಂಚಭೂತಗಳಲ್ಲಿ ಭಾಗಿಸಲ್ಪಡದೆ ಅಖಂಡವಾಗಿರುವ ಮೊದಲನೆಯ ಅರ್ಧಭಾಗವಾದ ಸಮಷ್ಟಿಭಾಗದಿಂದ ಜ್ಞಾತ, ವ್ಯಾನವಾಯುವು, ನೇತ್ರಗಳು, ರಸವು, ಗುದವು ಎಂಬ ಐದು ತತ್ವಗಳು ಹುಟ್ಟಿದವು. ಮತ್ತೆ ಎರಡನೆಯ ಅರ್ಧಭಾಗವಾದ ವ್ಯಷ್ಟಿಭಾಗವನ್ನು ನಾಲಕ್ಕು ಭಾಗಗಳಾಗಿ ಮಾಡಿ ಆಯಾ ಭೂತಗಳೊಡನೆ ಸೇರಿಸಿದಾಗ ಇಪ್ಪತ್ತು ತತ್ವಗಳಾಗುತ್ತವೆ. ಮೇಲೆ ಹೇಳಿದ ಸಮಷ್ಟಿಯ ಐದು ತತ್ವಗಳೊಡನೆ ಸೇರಿ ಇಪ್ಪತ್ತೈದು ತತ್ವಗಳಾಗಿ ಶರೀರವುಂಟಾಗುತ್ತದೆ.

ಇಂತಹ ಪಂಚಭೂತಗಳಿಂದ ಉಂಟಾದ ಶರೀರಗಳಲ್ಲಿ ಸೃಷ್ಟಿಸಲ್ಪಟ್ಟಿರುವ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣಗಳಿಂದ ಸ್ತ್ರೀಪುರುಷರಿಗೆ ಮೋಹವನ್ನುಂಟುಮಾಡಿಸಿ, ಹೆಂಡತಿಮಕ್ಕಳು ಮೊಮ್ಮಕ್ಕಳಲ್ಲಿಯೂ ಮನೆ-ಭೂಮಿ-ತೋಟ-ಧನಧಾನ್ಯಾದಿಗಳಲ್ಲಿಯೂ ವಿಶೇಷವಾಗಿ ಆಶಾಪಾಶಗಳನ್ನು ಈಶ್ವರನು ಹುಟ್ಟಿಸಿ, ತಾನು ಸೂತ್ರಧಾರನಂತಿದ್ದು ಜೀವಿಗಳನ್ನು ಆಡಿಸುತ್ತಲಿದ್ದಾನೆ. ಇದಕ್ಕೆ ದೃಷ್ಟಾಂತವು, ಶ್ರೀ ಭಗವದ್ಗೀತೆಯ 18ನೇ ಅಧ್ಯಾಯ 61ನೇ ಶ್ಲೋಕವು ಪ್ರಮಾಣವು.

ಶ್ಲೋ ॥ ಈಶ್ವರ ಸ್ಸರ್ವಭೂತಾನಾಂ ♦ ಹೃದ್ದೇಶೇಽರ್ಜುನ! ತಿಷ್ಠತಿ ।
ಭ್ರಾಮಯರ್ನ್ಸ ಸರ್ವಭೂತಾನಿ ♦ ಯಂತ್ರಾರೂಢಾನಿ ಮಾಯಯಾ ॥

ಓ ಅರ್ಜುನಾ! ಸಮಸ್ತ ಭೂತಗಳನ್ನೂ ಆಜ್ಞಾಪಿಸುವಂಥ ಈಶ್ವರನು, ಪಂಚಭೂತಗಳ ಹೃದಯಕಮಲಗಳೊಳಗಿದ್ದು ಸೂತ್ರಧಾರಿಯು ಬೊಂಬೆಯನ್ನಾಡಿಸುವಂತೆ ಆಡಿಸಿ, ಪ್ರಾಣಿಗಳನ್ನು ಭ್ರಾಂತಿಪಡುವಂತೆ ಮಾಡುತ್ತಿದ್ದಾನೆ.

ಆದುದರಿಂದ ಈ ಗ್ರಂಥವನ್ನು ಪಠಿಸುವವರೆಲ್ಲರೂ ಪಂಚಭೂತಾತ್ಮಕವಾದ ಈ ಶರೀರವು ಅನಿತ್ಯವೆಂದೂ, ಇದರಿಂದ ತಮಗೆ ದೊರೆತ ದಾರಾಪುತ್ರಾದಿಗಳು ನೀರಿನ ಮೇಲಣ ಗುಳ್ಳೆಯಂತೆ ಬಹು ಶೀಘ್ರವಾಗಿ ನಶಿಸುವರೆಂದೂ ಮನಸ್ಸಿನಲ್ಲಿ ತಿಳಿದು ಅವರ ಮೇಲೆ ಹೆಚ್ಚಾದ ಆಸೆಯನ್ನಿಡಬಾರದು. ಆ ದಾರಾಪುತ್ರರ ಮೇಲಿಡಬೇಕಾದ ಆಸೆಯ ಬಗೆಯು ಹೇಗಿರಬೇಕೆಂದರೆ:-ಹೆಂಡತಿಮಕ್ಕಳು ಮೊಮ್ಮಕ್ಕಳಲ್ಲಿಯೂ ಧನಧಾನ್ಯಾದಿಗಳಲ್ಲಿಯೂ ಪ್ರೀತಿಯಿರುವವನಂತೆ ಇತರ ಜನಗಳಿಗೆ ತೋರಿಸುತ್ತ ಮಕ್ಕಳನ್ನು ಎತ್ತಿಕೊಂಡು ಮುದ್ದಾಡುವಂತೆಯೂ, ಹೆಂಡತಿಯಲ್ಲಿ ಹೆಚ್ಚಾಗಿ ಪ್ರೀತಿಯುಳ್ಳವನಂತೆಯೂ, ಕೃಷಿ ಮತ್ತು ವ್ಯವಹಾರಗಳಲ್ಲಿ ಬಹಳ ಆಸಕ್ತಿಯಿಂದ ವಿಚಾರಮಾಡುವವನಂತೆಯೂ ಇತರರಿಗೆ ನಟನೆಮಾಡಿ ತೋರಿಸಿ, ತಾನು ಮಾತ್ರ ತನ್ನಂತರಂಗದಲ್ಲಿ ಆಸೆಯನ್ನು ತೊರೆದು ತಾವರೆಯೆಲೆಯ ಮೇಲಿರುವ ನೀರಿನ ಹನಿಯಂತೆಯೂ, ಬುರುದೆಯಲ್ಲಿರುವ

ಕುಂಬರ ಹುಳುವಿನಂತೆಯೂ ಇದ್ದು, ಈ ಗ್ರಂಥದಲ್ಲಿ ಹೇಳಿರುವ ಪ್ರಾಣಾಯಾಮವನ್ನು ಅಭ್ಯಸಿಸುವುದರಲ್ಲಿಯಾಗಲಿ, ಇಲ್ಲವೇ ಪಂಚಾಕ್ಷರೀ ಮಂತ್ರವನ್ನೋ, ರಾಮತಾರಕ ಮಂತ್ರವನ್ನೋ ಅಥವಾ ಯಾವುದೋ ಒಂದು ಮಹಾ ಮಂತ್ರವನ್ನು, ವ್ಯಾಪಾರ ಉದ್ಯೋಗ ಕಾಲಗಳು ವಿನಹ ಉಳಿದ ಸಮಯಗಳಲ್ಲಿ, ಹಗಲಿರುಳೂ ಜಪಮಾಡುವುದಕ್ಕೆ ಮನಸ್ಸನ್ನು ನಿಲ್ಲಿಸುವುದರಲ್ಲಿಯಾಗಲಿ ಕಾಲ ಕಳೆಯುತ್ತ ಬಂದರೆ, ಆತನು ಪೂರ್ವ ಜನ್ಮದಲ್ಲಿ ತಾನು ಮಾಡುತ್ತ ಬಂದಿದ್ದ ಪಾಪಕರ್ಮಗಳೆಲ್ಲವೂ ನಶಿಸಿ ಮೋಕ್ಷವನ್ನು ತಪ್ಪದೆ ಹೊಂದುವನು. ಮೋಕ್ಷವೆಂದರೆ ಬಿಡುಗಡೆ. ಬಿಡುಗಡೆಯೆಂದರೆ, ದಾರೇಷಣ, ಪುತ್ರೇಷಣ, ಧನೇಷಣಗಳೆಂಬ ಈಷಣತ್ರಯಗಳನ್ನೂ ಒಟ್ಟಿಗೆ ತೊಲಗಿಸುವುದು. ಹೀಗೆ ಮಾಡಿದ್ದೇ ಆದರೆ ತಕ್ಷಣವೇ ಯಾವ ಸಂಕಲ್ಪವೂ ಮನಸ್ಸಿನಲ್ಲಿ ಹುಟ್ಟದೆ, ತಾನೇ ತಾನಾಗಿದ್ದು ಅಂತ್ಯಕಾಲದಲ್ಲಿ ಪರಮಾತ್ಮನಲ್ಲಿ ಕಲೆತು ಹೋಗುವನು. ಹೀಗೆ ಕಲೆತು ಹೋಗುವುದೇ ಮೋಕ್ಷವೆನಿಸುವುದು.

ಆದುದರಿಂದ ಹೆಂಡತಿಮಕ್ಕಳಲ್ಲಿಯೂ, ಧನಕನಕ ವಸ್ತುವಾಹನಾದಿಗಳಲ್ಲಿಯೂ, ಮನೆ ಹೊಲ ತೋಟಗಳಲ್ಲಿಯೂ ಅಂಟಿಕೊಂಡಿರುವ ಆಶಾಪಾಶಗಳನ್ನು ಕತ್ತರಿಸುವುದಕ್ಕಾಗಿ ಈ ಗ್ರಂಥವು ಮಹಾ ಹರಿತವಾದ ಆಯುಧವಾಗಿದೆಯೆಂದು ಎಣಿಸಿ ಈ ಗ್ರಂಥದಲ್ಲಿ ಹೇಳಿರುವ ರೀತಿಯನ್ನು ಪ್ರತಿಯೊಬ್ಬರೂ ಅನುಷ್ಠಿಸುತ್ತ ಬರಬೇಕೆಂಬುದೇ ಈ ಗ್ರಂಥಕರ್ತರ ಮುಖ್ಯಾಭಿಪ್ರಾಯವೆಂದು ತಿಳಿಯಬೇಕು. ಇನ್ನು ಮುಂದೆ ಶರೀರ ಲಕ್ಷಣವನ್ನು ಕುರಿತು ಹೇಳಲಾಗುವುದು.



# ಶರೀರ ಲಕ್ಷಣವು ಸಾಂಖ್ಯ ವಿಚಾರವು.

ಶರೀರವು ಇಂತಹುದೆಂದು ತಿಳಿಯದಿದ್ದಲ್ಲಿ, ಆತ್ಮನು ಇಂತಹನೆಂಬ ಜ್ಞಾನವುಂಟಾಗದು ; ಆದುದರಿಂದ ಶರೀರ ಲಕ್ಷಣವೆಂತಹುದೆಂಬುದನ್ನು ಶ್ರದ್ಧೆಯಿಂದ ವಿಚಾರಮಾಡುವುದು ಅತ್ಯವಶ್ಯಕ.

ಶ್ರುತಿ ॥ 'ಸಾಂಖ್ಯಂ ದೇಹವಿಚಾರಣಂ ಚ ಬ್ರಹ್ಮ' । (ವಿಷ್ಣುಯಾಮುಳಂ)

ದೇಹವಿಂತಹುದೆಂದೂ, ದೇಹಿಯೆಂದರೆ ಆತ್ಮನು ಇಂತಹನೆಂದೂ ತಿಳಿದುಕೊಳ್ಳುವುದೇ ಸಾಂಖ್ಯವಿಚಾರಣವೆನ್ನಿಸುತ್ತದೆ. ಜ್ಞಾನೇಂದ್ರಿಯಗಳೈದು ; ಕರ್ಮೇಂದ್ರಿಯಗಳೈದು ; ತನ್ಮಾತ್ರಗಳೈದು ; ಪ್ರಾಣಗಳೈದು ; ಮನಸ್ಸು, ಬುದ್ಧಿ, ಚಿತ್ತ ಅಹಂಕಾರಗಳೆಂಬ ಅಂತಃಕರಣಗಳು ನಾಲಕ್ಕು; ಇವೆಲ್ಲವೂ ಸೇರಿದ ಇಪ್ಪತ್ತನಾಲ್ಕು ತತ್ವಗಳಿಂದ ಕೂಡಿದುದೇ ಶರೀರವು. ಇದರಲ್ಲಿ ವಾಸಿಸುವಂಥ ಆತ್ಮನೇ ಅಂದರೆ ದೇಹಿಯೇ ಇಪ್ಪತ್ತೈದನೆಯ ತತ್ವವು. ಇಪ್ಪತ್ತಾರನೆಯ ತತ್ವವೇ ಪರಮಾತ್ಮ. ಈ ಪರಮಾತ್ಮನಲ್ಲಿ ಇಪ್ಪತ್ತೈದನೆಯ ತತ್ವವಾದ ಜೀವಾತ್ಮನನ್ನು ಐಕ್ಯಮಾಡುವುದೇ ಅಂದರೆ ಸೇರಿಸುವುದೇ ಮೋಕ್ಷವೆನಿಸುವುದು.

---

## ಜ್ಞಾನೇಂದ್ರಿಯಗಳು ೫.

---

ಶ್ರುತಿ ॥ ಶ್ರೋತ್ರಾದೀನಿ ಜ್ಞಾನೇಂದ್ರಿಯಾಣಿ ♦ ಶ್ರೋತ್ರಮಾಕಾಶೇ ವಾಯೌ
ತ್ವಕ್ ಅಗ್ನೌ ಚಕ್ಷುಃ ಅಪ್ಸು ಜಿಹ್ವಾ ♦ ಪೃಥಿವ್ಯಾಂ ಘ್ರಾಣ ಮಿತಿ.
(ಶಾರೀರಕೋಪನಿಷತ್)

1. **ಶ್ರೋತ್ರವು :**—ಕಿವಿಯು, ಇದು ಆಕಾಶದ ಒಂದಂಶವು. ಆದುದರಿಂದ ಅದರ ಗುಣವಾದ ನಾನಾ ವಿಧ ಶಬ್ದಗಳನ್ನು ಕೇಳುತ್ತದೆ.

2. **ತ್ವಕ್ಕು :—** ದೇಹವು, ಅಂದರೆ ನಮ್ಮ ಮೈಮೇಲಿರುವ ಚರ್ಮವು. ಇದು ವಾಯುವಿನ ಒಂದಂಶವು. ಆದುದರಿಂದ ಅದರ ಗುಣಗಳಿಂದ ಶೀತ, ಉಷ್ಣ, ಮೃದು, ಕರ್ಕಶವೆಂಬ ನಾಲಕ್ಕು ಬಗೆಯಾದ ಸ್ಪರ್ಶಗಳನ್ನು ಈ ತ್ವಕ್ಕು (ದೇಹವು) ತಿಳಿಯುತ್ತದೆ.

3. **ಚಕ್ಷು :—** ಕಣ್ಣು, ಇದು ಅಗ್ನಿಯ ಒಂದಂಶವಾದುದರಿಂದ ಅದರ ಗುಣಗಳಾದ ಬಿಳುಪು, ಕಪ್ಪು, ಕೆಂಪು, ಹಸುರು, ನೀಲ, ಮಿಶ್ರ ವರ್ಣ, ಉದ್ದ, ಮೋಟು, ದಪ್ಪ, ಸಣ್ಣ ಮೊದಲಾದ ದಶ (ಹತ್ತು) ರೂಪಗಳನ್ನು ತಿಳಿಯುತ್ತದೆ.

4. **ಜಿಹ್ವಾ :—** ನಾಲಿಗೆ, ಇದು ಅಪ್ಪು ಅಂದರೆ ಜಲದ ಅಂಶ ವಾಗಿದೆಯಾದುದರಿಂದ ಅದರ ಗುಣಗಳಿಂದ ಉಪ್ಪು, ಹುಳಿ, ಕಾರ, ಸಿಹಿ, ಕಹಿ, ಒಗರು ಎಂಬ ಈ ಷಟ್ (ಆರು) ರಸಗಳನ್ನು ತಿಳಿಯುತ್ತದೆ.

5. **ಘ್ರಾಣವು :—** ಮೂಗು, ಇದು ಪೃಥಿವಿಯ ಅಂಶವಾದುದ ರಿಂದ, ಅದರ ಗುಣಗಳಾದ ಸುಗಂಧ ದುರ್ಗಂಧಗಳನ್ನು ಮಾತ್ರ ತಿಳಿದು ಕೊಳ್ಳುತ್ತದೆ. ಈ ಐದು ಇಂದ್ರಿಯಗಳೂ ಒಂದೊಂದು ವಿಷಯವನ್ನು ಮಾತ್ರ ತಿಳಿಯುವುದರಿಂದ ಇವಕ್ಕೆ **ಜ್ಞಾನೇಂದ್ರಿಯಗಳೆಂಬ** ಹೆಸರು ಬಂದಿದೆ.

---

## ಕರ್ಮೇಂದ್ರಿಯಗಳು ೫.

ಶ್ರುತಿ ॥ ವಾಕ್ಪಾಣಿಪಾದಪಾಯೂಪಸ್ಥಾನಾಖ್ಯಾನಿ ಕರ್ಮೇಂದ್ರಿಯಾಣಿ♦ತೇಷಾಂ
ಕ್ರಮೇಣ ವಚನಾದಾನಗಮನವಿಸರ್ಗಾನಂದಾ ಶ್ಚೈತೇ ವಿಷಯಾಃ♦ಪೃಥಿ
ವ್ಯಾದಿಮಹಾಭೂತೇಷು ಕ್ರಮೇಣೋತ್ಪನ್ನಾಃ. ॥ (ಶಾರೀರಕೋಪನಿಷತ್)

1. **ವಾಕ್ಕು :—** ಬಾಯಿ, ಇದು ಪೃಥಿವಿಯ ಅಂಶವಾಗಿದ್ದರೂ, ಆಕಾಶದ ಗುಣವಿರುವುದರಿಂದ ಮಾತನಾಡುತ್ತದೆ.

2. **ಪಾಣಿ:**—ಕೈ, ಇದು ವಾಯುವಿನ ಅಂಶವಾಗಿ ಆ ವಾಯುವಿನ ಗುಣದಿಂದ, ಕೊಡುವುದು, ತೆಗೆದುಕೊಳ್ಳುವುದು, ಹಿಡಿಯುವುದು, ಬಿಡುವುದು, ಇವೇ ಮೊದಲಾದ ಕಾರ್ಯಗಳನ್ನು ನಡೆಸುತ್ತದೆ.

3. **ಪಾದವು:**—ಕಾಲು, ಇದು ಅಗ್ನಿಯಂಶವಾಗಿರುವುದರಿಂದ ಅದರ ಗುಣಗಳಿಂದ ನಡೆಯುವುದು, ಕುಳಿತುಕೊಳ್ಳುವುದು, ನಿಲ್ಲುವುದು, ಏಳುವುದು ಮೊದಲಾದ ಕಾರ್ಯಗಳನ್ನು ಮಾಡುತ್ತದೆ.

4. **ಪಾಯುವು:**—ಗುದಸ್ಥಾನವು, ಇದು ಪೃಥಿವಿಯ ಅಂಶವಾದುದರಿಂದ ಮಲಮೂತ್ರಗಳನ್ನು ವಿಸರ್ಜನೆಮಾಡುತ್ತದೆ.

5. **ಉಪಸ್ಥವು:**—ಮರ್ಮಸ್ಥಾನವು, ಇದು ಜಲದಂಶವಾಗಿರುವುದರಿಂದ ಮೂತ್ರ, ಶುಕ್ಲಶೋಣಿತಗಳು ಇವುಗಳನ್ನು ಬಿಡಿಸುವಂತೆ ಮಾಡಿ ಸ್ತ್ರೀಪುರುಷರಿಗೆ ಆನಂದವನ್ನು ಉಂಟುಮಾಡುತ್ತದೆ. ಈ ಒಂದೊಂದು ಇಂದ್ರಿಯವೂ ಒಂದೊಂದು ಕರ್ಮವನ್ನು ಮಾಡುತ್ತದೆಯಾದುದರಿಂದ ಇವುಗಳಿಗೆ **ಕರ್ಮೇಂದ್ರಿಯಗಳೆಂ**ಬ ಹೆಸರು ಬಂದಿದೆ.

---

## ಅಂತಃಕರಣಗಳು ೪.

---

ಶ್ರುತಿ || ಮನೋ ಬುದ್ಧಿ ರಹಂಕಾರಶ್ಚಿತ್ತಮಿತ್ಯಂತಃಕರಣ ಚತುಷ್ಟಯಂ ♦ ತೇಷಾಂ ಕ್ರಮೇಣ ಸಂಕಲ್ಪವಿಕಲ್ಪಾಧ್ಯವಸಾಯಾಭಿಮಾನಾವಧಾರಣಾಃ ಸ್ವರೂಪಾ ಶ್ಚೈತೇ ವಿಷಯಾಃ ♦ ಮನೋ ಸ್ಥಾನಂ ಗಳಾಂತಂ, ಬುದ್ಧೇರ್ವದನಂ, ಅಹಂಕಾರಸ್ಯ ಹೃದಯಂ, ಚಿತ್ತಸ್ಯ ನಾಭಿ ರಿತಿ.

(ಶಾರೀರಕೋಪನಿಷತ್)

ಮನಸ್ಸು, ಬುದ್ಧಿ, ಚಿತ್ತ, ಅಹಂಕಾರವೆಂಬ ಈ ನಾಲಕ್ಕೂ ಅಂತಃಕರಣಗಳೆನ್ನಿಸುತ್ತವೆ.

1. **ಮನಸ್ಸು:**—ವಾಯುವಿನ ಅಂಶವು; ಸಂಕಲ್ಪವಿಕಲ್ಪಗಳನ್ನು ಮಾಡಿಸುತ್ತದೆಯಾದುದರಿಂದ, ಇದು ಕೋರಿಕೆಗಳನ್ನು ಹುಟ್ಟಿಸಿ, ಗಾಳಿ

ಯಂತೆ ಓಡುತ್ತಿರುತ್ತದೆ. ಇದಕ್ಕೆ ಚಂದ್ರನೇ ಅಧಿಪತಿ; ನಾಭಿಯೇ ಇದಕ್ಕೆ ವಾಸಸ್ಥಾನ.

2. **ಬುದ್ಧಿ :**—ಅಗ್ನಿಯ ಅಂಶವು; ಇದು ಕಾರ್ಯಾಕಾರ್ಯಗಳನ್ನು ಮಾಡಿಸುವುದರಲ್ಲಿಯೂ, ದ್ರವ್ಯವನ್ನು ಸಂಪಾದಿಸುವ ವಿಷಯದಲ್ಲಿಯೂ, ಇದು ಒಳ್ಳೆಯದು ಇದು ಕೆಟ್ಟದು ಎಂಬ ವಿಷಯವನ್ನು ತಿಳಿದುಕೊಳ್ಳುವುದರಲ್ಲಿಯೂ, ಶಕ್ತಿಯನ್ನುಂಟಾಗಿದೆ. ಇದಕ್ಕೆ ಬ್ರಹ್ಮನೇ ಅಧಿದೇವತೆ, ಮುಖವೇ ಇದಕ್ಕೆ ವಾಸಸ್ಥಳ.

3. **ಚಿತ್ತವು :**—ಅಪ್ಪಿನ ಅಂದರೆ ಜಲದ ಅಂಶವು; ಇದು ಶರೀರೇಂದ್ರಿಯಗಳಿಗೆ ಚಲನೆಗಳನ್ನುಂಟುಮಾಡಿ ಆಯಾ ಇಂದ್ರಿಯಗಳ ಮೂಲಕ ಅವವುಗಳ ಕರ್ಮಗಳನ್ನು ಮಾಡಿಸುತ್ತ ವಿಷಯಗಳ ಮೇಲೆ ಎಳೆಯುತ್ತಿರುತ್ತದೆ. ಇದಕ್ಕೆ ಅಧಿದೇವತೆ ವಿಷ್ಣು; ಇದಿರುವ ಸ್ಥಾನವು ಕಂಠ.

4. **ಅಹಂಕಾರವು :**—ಪೃಥಿವಿಯ ಅಂಶವು; ಇದು ಮಾಂಸಮಯವಾದ ದೇಹವನ್ನೇ 'ನಾನು, ನಾನು' ಎಂದು ಹೆಮ್ಮೆ ಪಟ್ಟು, ಕಾರ್ಯಾಕಾರ್ಯಗಳ ವಿಷಯವಾಗಿ ಯೋಚಿಸುವುದನ್ನೇ ಬಿಟ್ಟು, 'ನಾನು, ನನ್ನದು' ಎಂಬ ಅಭಿಮಾನವನ್ನಿಟ್ಟುಕೊಂಡು, ಪುಣ್ಯಪಾಪಕರ್ಮಗಳನ್ನು ಮಾಡಿಸುತ್ತಿರುತ್ತದೆ. ಇದಕ್ಕೆ ರುದ್ರನೇ ಅಧಿದೇವತೆಯು; ಇದರ ವಾಸಸ್ಥಾನ ಹೃದಯ.

ಈ ಮೇಲೆ ಹೇಳಿದ ನಾಲಕ್ಕೂ ಶರೀರದಲ್ಲಿರುವ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ತಮ್ಮ ತಮ್ಮ ವೃತ್ತಿಗಳನ್ನು ನಡೆಸುವಂತೆ ಮಾಡುವುದರಿಂದಲೇ ಇವುಗಳಿಗೆ **ಅಂತಃಕರಣಚತುಷ್ಟಯಗಳೆಂ**ಬ ಹೆಸರು ಬಂದಿದೆ.

## ಶರೀರಗಳಲ್ಲಿ ದಶವಾಯುಗಳು ಮಾಡುವ ಕಾರ್ಯಗಳು.

### ಪ್ರಾಣವಾಯುಗಳು ೫.

ಶ್ಲೋ॥ ಹೃದಿ ಪ್ರಾಣ ಸ್ಸ್ಥಿತೋ ನಿತ್ಯ ♦ ಮಪಾನೋ ಗುದಮಂಡಲೇ ।
ಸಮಾನೋ ನಾಭಿದೇಶೇ ತು ♦ ಉದಾನಃ ಕಂಠಮಧ್ಯಗಃ ॥
ವ್ಯಾನ ಸ್ಸರ್ವಶರೀರೇ ತು ♦ ಪ್ರಧಾನಾಃ ಪಂಚವಾಯವಃ ॥
(ಯೋಗಚೂಡಾಮಣ್ಯುಪನಿಷತ್)

ಶ್ಲೋ॥ ಹೃದಿ ಪ್ರಾಣ ಗುದೇಽಪಾನ ♦ ಸ್ಸಮಾನೋ ನಾಭಿಸಂಸ್ಥಿತಃ ।
ಉದಾನಃ ಕಂಠದೇಶೇ ಸ್ಯಾತ್ ♦ ವ್ಯಾನ ಸ್ಸರ್ವಶರೀರಗಃ ॥ (ಅಮರಸಿಂಹ)

1. **ಪ್ರಾಣವಾಯುವು:**—ಇದು ಹೃದಯಸ್ಥಾನದಿಂದ, ನಾಸಾರಂಧ್ರದ ಮೂಲಕ ಉಚ್ಛ್ವಾಸ, ನಿಶ್ವಾಸಗಳಿಂದ ಒಳಕ್ಕೆ ಹೋಗುತ್ತ ಮತ್ತೆ ಹೊರಕ್ಕೆ ಬರುತ್ತ ಜೀವಿಗಳಿಗೆ ಹಸಿವು ಬಾಯಾರಿಕೆಗಳನ್ನುಂಟು ಮಾಡಿಸಿ ತಿನ್ನುವ ಆಹಾರಗಳನ್ನು ಜೀರ್ಣವಾಗುವಂತೆ ಮಾಡುತ್ತದೆ.

2. **ಅಪಾನವಾಯುವು:**—ಇದು ಗುದಸ್ಥಾನದಲ್ಲಿದ್ದು ಮಲಮೂತ್ರಾದಿಗಳನ್ನು ಹೊರಕ್ಕೆ ತಳ್ಳುತ್ತಾ ಶುಕ್ಲಶೋಣಿತಗಳನ್ನು ಬಿಡುವಂತೆ ಮಾಡುವುದು.

3. **ಉದಾನವಾಯುವು:**—ಇದು ಕಂಠಸ್ಥಾನದಲ್ಲಿದ್ದು ಭೋಜನಪದಾರ್ಥಗಳನ್ನು ನುಂಗುವಂತೆ ಮಾಡಿ, ಅವುಗಳ ರಸವನ್ನು ನಾಡಿಗಳ ಮೂಲಕ ಕಳುಹಿಸುತ್ತಿರುತ್ತದೆ. ಮತ್ತು ರಾತ್ರಿಯಲ್ಲಿ ನಿದ್ರೆಮಾಡುವಾಗ ಸರ್ವೇಂದ್ರಿಯಗಳನ್ನೂ ಅಜ್ಞಾನವೆಂಬ ಕತ್ತಲೆಯಲ್ಲಿ ತಳ್ಳಿ ಪುನಃ ಜಾಗ್ರದವಸ್ಥೆಯಲ್ಲಿ ಆಯಾಯಾ ಇಂದ್ರಿಯಗಳನ್ನು ಯಥಾರೀತಿಯಲ್ಲಿ ಅವವುಗಳ ಸ್ಥಾನದಲ್ಲಿ ಸೇರಿಸುತ್ತದೆ.

4. **ಸಮಾನವಾಯುವು:**—ಇದು ನಾಭಿಸ್ಥಾನದಲ್ಲಿದ್ದು ಉದಾನವಾಯುವಿನಿಂದ ಕಳುಹಿಸಲ್ಪಟ್ಟ ಪದಾರ್ಥಗಳ ರಸವನ್ನು ಎಲ್ಲಾ ನಾಡಿಗಳಿಗೂ ಸಮವಾಗಿ ಹಂಚಿಕೊಡುತ್ತದೆ.

**5. ವ್ಯಾನವಾಯುವು:—** ಇದು ಉಂಗುಟದಿಂದ ತಲೆಯವರಿವಿಗೂ ಇರುವ ಶರೀರದ ಅಂಗಾಂಗಗಳಲ್ಲೆಲ್ಲಾ ವ್ಯಾಪಿಸಿ, ಸ್ಪರ್ಶವನ್ನು ತಿಳಿದುಕೊಳ್ಳುವಂತೆ ಮಾಡುವುದು. ಮತ್ತು ಭುಜಿಸಿದ ಅನ್ನವನ್ನು ಚನ್ನಾಗಿ ಅರಗಿಸಿ ಬೇರೆಬೇರೆ ರಸವನ್ನು ಬೇರೆಬೇರೆ ಭಾಗಗಳಾಗಿ ಮಾಡುತ್ತಿರುತ್ತದೆ.

ಈ ಐದು ವಾಯುಗಳೂ ದೇಹದಲ್ಲಿರುವುದರಿಂದಲೇ ನಾವು ಜೀವಿಸಿರುವೆವಾದುದರಿಂದ ಇವುಗಳಿಗೆ **ಪಂಚಪ್ರಾಣಗಳೆಂ**ದು ಹೆಸರು.

## ಉಪವಾಯುಗಳು ೫.

ಶ್ಲೋ॥ ನಾಗಶ್ಚ ಕೂರ್ಮಃ ಕೃಕರೋ ♦ ದೇವದತ್ತೋ ಧನಂಜಯಃ ।
ವಾಗ್ದ್ವಾರೇ ನಾಗ ಆಖ್ಯಾತಃ ♦ ಕೂರ್ಮ ಉನ್ಮಿಲನೇ ಸ್ಮೃತಃ ॥

ಕೃಕರಾ ಚ್ಚಕ್ಷುತಂ ಜ್ಞೇಯಂ ♦ ದೇವದತ್ತಾ ದ್ವಿಜೃಂಭಣಂ ।
ನ ಜಹಾತಿ ಮೃತಂ ಚಾಪಿ ♦ ಸರ್ವವ್ಯಾಪೀ ಧನಂಜಯಃ ॥

ಶರೀರಸ್ಥಾ ಇಮೇ * * * ॥

(ಅಮರಸಿಂಹ)

**1. ನಾಗವಾಯುವು:—** ಇದು ವಾಗ್ದ್ವಾರದಲ್ಲಿ ಅಂದರೆ ಕಂಠಪ್ರದೇಶದಲ್ಲಿದ್ದು ವಮನ ಮೊದಲಾದುವುಗಳನ್ನು ಮಾಡಿಸುವಂಥದು. ಮತ್ತು ಕಣ್ಣುಗಳ ಮೂಲಕ ನೋಡುವಂತೆ ಮಾಡುವಂಥದು.

**2. ಕೂರ್ಮವಾಯುವು:—** ಇದು ಕಣ್ಣುಗಳಲ್ಲಿದ್ದು ರೆಪ್ಪೆಗಳನ್ನು ತೆರೆಯುವಂತೆಯೂ ಮುಚ್ಚುವಂತೆಯೂ ಮಾಡುತ್ತದೆ. ನೇತ್ರಸ್ಫುರಣ (ರೆಪ್ಪೆ ಹಾರುವುದು) ಮೊದಲಾದುವುಗಳು ಇದರಿಂದಲೇ ಉಂಟಾಗುತ್ತದೆ.

3 **ಕೃಕರವಾಯುವು :—** ಇದು ನಾಸಿಕಾ ರಂಧ್ರದಲ್ಲಿದ್ದು ಕೊಂಡು ಸೀನುವುದು (Sneezing) ಮೊದಲಾದುವುಗಳನ್ನುಂಟುಮಾಡು ತ್ತದೆ.

4. **ದೇವದತ್ತವಾಯುವು :—** ಇದು ಬಾಯಿಯಲ್ಲಿದ್ದು ಕೊಂಡು ಆಕಳಿಕೆ (Yawning) ಮೊದಲಾದುವುಗಳನ್ನುಂಟುಮಾಡುತ್ತದೆ.

5. **ಧನಂಜಯವಾಯುವು :—** ಇದು ಶರೀರದ ಒಳಭಾಗದಲ್ಲಿ ನೆಲೆಸಿ ಗರ್ಭದಲ್ಲಿರುವ ಪಿಂಡವನ್ನು ಹೊರಕ್ಕೆ ತಳ್ಳುವುದಕ್ಕೆ ಸಹಕಾರಿ ಯಾಗಿದೆ. ಈ ವಾಯುವು ಪ್ರಾಣ ಹೋದರೂ ಶರೀರವನ್ನು ಬಿಟ್ಟು ಕದಲದು. ಇದೇ, ಶರೀರವನ್ನು ಅಗ್ನಿಯಿಂದ ದಹಿಸುವವರಿವಿಗೂ ಅದನ್ನು ಸ್ಥೂಲವಾಗಿ ಮಾಡಿ ದುರ್ವಾಸನೆ ಮೊದಲಾದುವುಗಳನ್ನು ಹುಟ್ಟಿ ಸುವಂತೆ ಮಾಡುವಂಥದು.

ಈ ಹತ್ತು ವಾಯುಗಳೂ ಹತ್ತು ನಾಡಿಗಳಲ್ಲಿ ಸದಾ ತಿರುಗುತ್ತಿರು ತ್ತವೆ. ಇದೂ ಅಲ್ಲದೆ 'ಪೂಷಾ' 'ಅಲಂಪೂಷಾ' ಎಂಬ ಎರಡು ನಾಡಿ ಗಳು ಕಿವಿಗಳಲ್ಲಿದ್ದು ಪ್ರತಿ ಶಬ್ದವನ್ನೂ ಕೇಳುವಂತೆ ಮಾಡುತ್ತವೆ.

**ಗಾಂಧಾರೀ, ಅಸ್ತಿಜಿಹ್ವಾ :—** ಎಂಬ ಎರಡು ನಾಡಿಗಳು ನೇತ್ರ ಗಳಲ್ಲಿದ್ದು ಪದಾರ್ಥರೂಪಗಳನ್ನು ತಿಳಿದುಕೊಳ್ಳುವಂತೆ ಮಾಡುವುವು. ಇವು ಹೃದಯದಿಂದ ಮೇಲಕ್ಕಿರುವ ಭಾಗಗಳಲ್ಲಿ ವ್ಯಾಪಿಸಿರುತ್ತವೆ.

**ಸಿನೀವಾಲೀ, ಕುಹೂ :—** ಎಂಬ ಈ ಎರಡು ನಾಡಿಗಳು ಮಲ ಮೂತ್ರಗಳನ್ನು ಅಪಾನವಾಯುವಿನ ಸಮೀಪಕ್ಕೆ ತೆಗೆದುಕೊಂಡು ಹೋಗಿ ಬಿಟ್ಟು, ಹೊರಕ್ಕೆ ತಳ್ಳುವಂತೆ ಮಾಡುತ್ತವೆ; ಮತ್ತು ಇವು ಅನಾಹತ ಚಕ್ರದಿಂದ ಗುದಸ್ಥಾನದವರಿವಿಗೂ ವ್ಯಾಪಿಸಿರುತ್ತವೆ.

**ರಕ್ತವ್ಯಾನಾ :—** ಈ ನಾಡಿಯು ಹೃದಯದಿಂದ ಮೊದಲು ಲಿಂಗದ ವರಿವಿಗೂ ವ್ಯಾಪಿಸಿ ಅಂತರಂಗಸ್ಥಾನದಲ್ಲಿರುವ 'ಕುಹೂ' ಎಂಬ ನಾಡಿ ಯೊಡಗೂಡಿ, ಶುಕ್ಲಶೋಣಿತಗಳನ್ನು ಹೊರಕ್ಕೆ ತಳ್ಳುವಂತೆ ಮಾಡುತ್ತದೆ.

ಈ ಏಳು ನಾಡಿಗಳೂ ಹೃದಯಕಮಲದಲ್ಲಿರುವ ಅನಾಹತ ಚಕ್ರವನ್ನು ಆಧಾರವಾಗಿ ಮಾಡಿಕೊಂಡು ನಾಲ್ಕು ನಾಡಿಗಳು ಊರ್ಧ್ವಮುಖವಾಗಿಯೂ ಉಳಿದ ಮೂರು ನಾಡಿಗಳು ಅಧೋಮುಖವಾಗಿಯೂ ವ್ಯಾಪಿಸಿರುತ್ತವೆ.

**ಇಡಾ ಮತ್ತು ಪಿಂಗಳಾ:—** ಈ ಎರಡು ನಾಡಿಗಳೂ ಭ್ರೂಮಧ್ಯದಿಂದ ಮೂಲಾಧಾರ (ಗುದಸ್ಥಾನ) ದ ವರಿವಿಗೂ ಎಡಬಲ ಮೂಗಿನ ಹೊಳ್ಳೆಗಳ ಮೂಲಕ ವ್ಯಾಪಿಸಿ, ಅದರ ಮಧ್ಯದಲ್ಲಿ ಸುಷುಮ್ನಾ ನಾಡಿಯನ್ನು ಅನುಸರಿಸಿರುತ್ತವೆ; ಮತ್ತು ಮೂಗಿನ ಎಡಬಲ ರಂಧ್ರಗಳ ಮೂಲಕ ಪ್ರಾಣವಾಯುವನ್ನು ಉಚ್ಛ್ವಾಸ ನಿಶ್ವಾಸವಾಗಿ ನಡೆಯುವಂತೆ ಮಾಡುತ್ತವೆ.

**ಸುಷುಮ್ನಾ ನಾಡಿ:—** ಇದು ಮೂಲಾಧಾರ (ಗುದಸ್ಥಾನ) ದಿಂದ ಮೊದಲು ಬ್ರಹ್ಮರಂಧ್ರದವರಿವಿಗೂ ವ್ಯಾಪಿಸಿ ನಾಲಗೆಯಲ್ಲಿ ಸೇರಿ ಅಕಾರ, ಉಕಾರ, ಮಕಾರಾದಿ ಶಬ್ದಗಳನ್ನು ಉಂಟುಮಾಡುತ್ತದೆ.

---

## ಪಂಚತನ್ಮಾತ್ರಗಳು.

1. **ಶಬ್ದವು:—** ಇದು ಆಕಾಶದ ತನ್ಮಾತ್ರವು. ಇದು ಕಿವಿಯಲ್ಲಿದ್ದು ಹೆಚ್ಚಾಗಿ ತೆಳ್ಳಗಿರುವ ಚರ್ಮದ ಪೊರೆಯ ಮೂಲಕ ಶಬ್ದಗಳನ್ನು ಕೇಳುವಂತೆ ಮಾಡುತ್ತದೆ.

2. **ಸ್ಪರ್ಶವು:—** ಇದು ವಾಯುವಿನ ತನ್ಮಾತ್ರ. ಇದು ದೇಹದಲ್ಲಿ ಪ್ರಾಣಾದಿ ಸರ್ವವಾಯುಗಳಲ್ಲಿಯೂ ವ್ಯಾಪಿಸಿ ಇರುವುದರಿಂದಲೇ ಸ್ಪರ್ಶಗುಣವನ್ನು ಅಂದರೆ ಮುಟ್ಟುವಿಕೆಯನ್ನು ಶರೀರದ ಮೂಲಕ ತಿಳಿಯುವಂತೆ ಮಾಡುತ್ತದೆ.

3. **ರೂಪವು**:—ಇದು ಅಗ್ನಿಯ ತನ್ಮಾತ್ರ; ಇದು ದೇಹೇಂದ್ರಿಯಗಳಲ್ಲಿ ಅಗ್ನಿಯೊಡನೆ ಸಂಬಂಧಿಸಿರುವುದರಿಂದ ದಶವಿಧ ರೂಪಗಳನ್ನೂ ನೇತ್ರಗಳು ತಿಳಿಯುವಂತೆ ಮಾಡುತ್ತದೆ.

4. **ರಸವು**:—ಇದು ಜಲದ ತನ್ಮಾತ್ರ; ಇದು ನಾಲಿಗೆಯಲ್ಲಿ ದ್ರವವಿರೋಣದರಿಂದ ಆ ಸಂಬಂಧದಿಂದ ಆರು ಬಗೆ ರುಚಿಗಳನ್ನು ತಿಳಿಯುವಂತೆ ಮಾಡುತ್ತದೆ.

5. **ಗಂಧವು**:—ಪೃಥಿವಿಯ ತನ್ಮಾತ್ರ; ಇದು ಮೂಗಿನಲ್ಲಿ ಪೃಥಿವಿಯ ಸಂಬಂಧವಿರೋಣದರಿಂದ, ಸುಗಂಧ ದುರ್ಗಂಧಗಳನ್ನು ಮೂಗು ತಿಳಿಯುವಂತೆ ಮಾಡುತ್ತದೆ.

ಇದುವರಿವಿಗೂ ಹೇಳುತ್ತ ಬಂದ ಇಂದ್ರಿಯಗಳೆಲ್ಲವೂ ಆತ್ಮನನ್ನು ತಿಳಿಯಲಾರವು. ಆದುದರಿಂದ ಈ ದೇಹೇಂದ್ರಿಯಗಳೆಲ್ಲವೂ ಜಡವೆಂದೂ ಆತ್ಮನೊಬ್ಬನೇ ಜ್ಞಾನಸ್ವರೂಪನಾದುದರಿಂದ 'ಚಿತ್' ಎಂದೂ ಹೇಳಲ್ಪಡುತ್ತವೆ. ಇಂತಹ ಸರ್ವೇಂದ್ರಿಯಗಳನ್ನುಳ್ಳ ಮೂರು ಶರೀರಗಳು ಇವೆ. ಅವುಗಳ ವಿವರಗಳನ್ನು ಈ ಕೆಳಗೆ ಹೇಳಿದೆ.

## ಶರೀರತ್ರಯಗಳು.

ಸ್ಥೂಲಸೂಕ್ಷ್ಮಕಾರಣಗಳೆಂಬುದಾಗಿ ಶರೀರಗಳು ಮೂರು ವಿಧ.

1. **ಸ್ಥೂಲಶರೀರವು**:—ಕಾಲುಗಳು, ಕೈಗಳು, ತಲೆ, ಕಣ್ಣುಗಳು, ಮೂಗು ಮೊದಲಾದ ಅವಯುವಗಳಿಂದ ಕೂಡಿದ ಈ ಮಾಂಸಶರೀರವು, ಕೈಯಲ್ಲಿ ಸ್ಪರ್ಶಿಸಲು ಕಠಿಣವಾಗಿಯೂ, ಮೃದುವಾಗಿಯೂ, ಉದ್ದವಾಗಿಯೂ ಮೋಟಾಗಿಯೂ, ದಪ್ಪವಾಗಿಯೂ ಮತ್ತು ತೆಳ್ಳಗೂ ತೋರುವುದರಿಂದ ಇದಕ್ಕೆ ಸ್ಥೂಲಶರೀರವೆಂಬ ಹೆಸರು ಬಂದಿದೆ.

**2. ಸೂಕ್ಷ್ಮಶರೀರವು:**—ಜ್ಞಾನೇಂದ್ರಿಯಗಳೈದು; ಕರ್ಮೇಂದ್ರಿಯಗಳೈದು; ಪ್ರಾಣಗಳೈದು; ಮನಸ್ಸು ಮತ್ತು ಬುದ್ಧಿ ಇವೆರಡು; ಈ ಹದಿನೇಳವಯವಗಳಿಂದ ಕೂಡಿರುವುದೇ ಸೂಕ್ಷ್ಮಶರೀರವು. ಇದನ್ನು ಲಿಂಗಶರೀರವೆಂದೂ ಕರೆಯುತ್ತಾರೆ. ಈ ಲಿಂಗಶರೀರ ಭಂಗವೇ ಮೋಕ್ಷವೆಂಬುದಾಗಿ ತಿಳಿಯಬೇಕು. ಕಣ್ಣಿಗೆ ಕಾಣದೆ, ಕೈಗಳಿಂದ ಸ್ಪರ್ಶಿಸಲಾಗದೆ ಈ ಸ್ಥೂಲಶರೀರದೊಳಗೆ ನೆಲಸಿರುವುದೇ ಸೂಕ್ಷ್ಮಶರೀರವು.

**3. ಕಾರಣಶರೀರವು:**—ಇದುವರೆವಿಗೂ ಹೇಳಿದ ಸ್ಥೂಲ ಸೂಕ್ಷ್ಮಶರೀರಗಳಿಗೆ ಬೀಜವಾಗಿದ್ದು, ಜನನಮರಣಗಳುಂಟಾಗುವಂತೆ ಮಾಡಿ, ದುಃಖವನ್ನೇ ಸುಖವೆಂಬ ಭಾವನೆಯನ್ನುಂಟುಮಾಡುವ ಅಜ್ಞಾನವೇ ಕಾರಣಶರೀರವು.

ಸ್ಥೂಲಶರೀರವು 'ಶೀರ್ಯತೇ ಇತಿ ಶರೀರಃ' ಎಂಬಂತೆ ಕ್ಷೀಣಿಸುವುದೇ ಶರೀರವು ಎಂದೂ, 'ದಹ್ಯತೇ ಇತಿ ದೇಹಃ' ಅಂದರೆ ದಗ್ಧವಾಗುವುದಾದುದರಿಂದ ದೇಹವೆಂದೂ ಕರೆಯಲ್ಪಡುತ್ತದೆ. ಈ ಶರೀರವು ಅನ್ನವಿಲ್ಲದಿದ್ದರೆ ಕೃಶವಾಗುತ್ತದೆ; ವ್ಯಾಧಿಗಳಿಂದ ನವೆಯುತ್ತದೆ; ಮುದಿತನದಿಂದ ಕಳೆದುಹೋಗುತ್ತದೆ; ಪ್ರಾಣವು ಕಳೆದನಂತರ ಈ ಸ್ಥೂಲಶರೀರವು ಶ್ಮಶಾನಾಗ್ನಿಯಿಂದ ದಹಿಸಲ್ಪಡುತ್ತದೆ. ಈ ಶರೀರವು ದಹಿಸಲ್ಪಡುವುದಕ್ಕೆ ಮೊದಲೇ ಈಷಣತ್ರಯಗಳಾದ ದಾರೇಷಣ, ಪುತ್ರೇಷಣ, ಧನೇಷಣಗಳೆಂಬ ವಿಷಯಗಳೊಡನೆ ಕೂಡಿಯಿರುತ್ತದೆ. ರಾಗದ್ವೇಷ ಕಾಮಕ್ರೋಧಗಳು ದಿನೇದಿನೇ ಅಭಿವೃದ್ಧಿ ಹೊಂದುವುದರಿಂದ, ಸೂಕ್ಷ್ಮಶರೀರವೂ ವೃದ್ಧಿಹೊಂದುತ್ತಲೇ ಬರುತ್ತದೆ. ಹಾಗಲ್ಲದೆ ರಾಗದ್ವೇಷಾದಿಗಳು ದಿನೇದಿನೇ ತಗ್ಗುತ್ತ ಬರುವುದರಿಂದ ಸೂಕ್ಷ್ಮಶರೀರವೂ ದಿನಕ್ರಮೇಣ ತಗ್ಗುತ್ತ ಬರುತ್ತದೆ. ಈ ರಾಗದ್ವೇಷಾದಿಗಳು ಸೂಕ್ಷ್ಮಶರೀರದ ವಿಕಾರಗಳು, ಅಜ್ಞಾನದಿಂದ 'ನಾನು, ನನ್ನದು' ಎಂಬ ಅಭಿಮಾನವು ದಿನೇದಿನೇ ಹೆಚ್ಚುತ್ತಿರುವುದರಿಂದ ಕಾರಣಶರೀರವು ವೃದ್ಧಿಹೊಂದುತ್ತದೆ. ಅಭಿಮಾನವು ದಿನಕ್ರಮೇಣ ತಗ್ಗುತ್ತಿರುವುದರಿಂದ ಕಾರಣಶರೀರವೂ ನಶಿಸುತ್ತ ಬರುತ್ತದೆ. ಸೂಕ್ಷ್ಮಕಾರಣಶರೀರ

ಗಳೆರಡೂ ಸದ್ಗುರು ಕಟಾಕ್ಷದಿಂದಲೂ, ಜ್ಞಾನಾಗ್ನಿಯಿಂದಲೂ ನಶಿ ಹೋಗುತ್ತವೆ. ಇವೆರಡೂ ನಾಶಹೊಂದಿದ ತಕ್ಷಣವೇ ಮೋಕ್ಷವು ಸಿದ್ ಸುತ್ತದೆ.

ಸ್ಥೂಲಶರೀರವು ಪ್ರತ್ಯಕ್ಷವಾಗಿ ಕಾಣಬರುತ್ತದೆ; ಸೂಕ್ಷ್ ಶರೀರವು ಹೀಗೆ ಕಾಣ್ಬರುವುದಿಲ್ಲ; ಆದರೆ ಸೂಕ್ಷ್ಮಶರೀರವಿದೆಯೆಂಬ ದನ್ನು ಹೇಗೆ ಹೇಳಬಹುದೆಂದರೆ—ನಿದ್ರೆ, ಮರಣ, ಮೂರ್ಛೆ ಇವುಗಳ ಸಂಭವಿಸುವ ಸಮಯದಲ್ಲಿ ಸ್ಥೂಲಶರೀರದಲ್ಲಿದ್ದ ನೇತ್ರಗಳು ಕಿವಿಗಳ ಮೊದಲಾದ ಇಂದ್ರಿಯಗಳು ಇದ್ದರೂ ಆ ಕಣ್ಣುಗಳು ನೋಡವು ಮತ್ತು ಕಿವಿಗಳು ಕೇಳವು ಹೀಗೆ ಪ್ರತಿಯೊಂದು ಇಂದ್ರಿಯವೂ ತನ್ನತನ್ ಕಾರ್ಯಗಳನ್ನು ಮಾಡುತ್ತಿರುತ್ತದೆಯೆಂದು ಹೇಳಲಾಗದು. ಈ ಸ್ಥೂಲ ಶರೀರದ ಒಳಭಾಗದಲ್ಲಿ ಸೂಕ್ಷ್ಮಶರೀರವೆಂಬುದಿದ್ದೇ ಸಮಸ್ತ ಕಾರ್ಯ ಗಳನ್ನೂ ಮಾಡುತ್ತಿರುತ್ತದೆ. ಆದರೆ ಈ ಸೂಕ್ಷ್ಮಶರೀರವು ತನ್ನಷ್ಟಕ್ಕೆ ತಾನೇ ಯಾವ ಕಾರ್ಯಗಳನ್ನೂ ಮಾಡುವುದಿಲ್ಲ. ಅಗ್ನಿಯು ಕಾಷ್ಠದಲ್ಲಿ ವ್ಯಾಪಿಸಿ, ಸಕಲ ವಸ್ತುಗಳನ್ನೂ ಭಸ್ಮವನ್ನಾಗಿ ಮಾಡುವಂತೆ, ಸೂಕ್ಷ್ಮ ಶರೀರವು ಸ್ಥೂಲಶರೀರದಲ್ಲಿ ವ್ಯಾಪಿಸಿ ಎಲ್ಲಾ ಕೆಲಸಗಳನ್ನೂ ಮಾಡಿಸು ತ್ತಿರುತ್ತದೆ. ಅಗ್ನಿಯಿಲ್ಲದಿರಲು ಕಾಷ್ಠವು ಯಾವ ಪದಾರ್ಥವನ್ನೂ ಹೇಗೆ ಸುಡಲಾರದೋ, ಹಾಗೆಯೇ ಸೂಕ್ಷ್ಮಶರೀರವು ಶರೀರವನ್ನು ಬಿಟ್ಟು ಹೊರಟನಂತರ ಈ ಸ್ಥೂಲಶರೀರವು ಯಾವ ಕಾರ್ಯವನ್ನೂ ಮಾಡ ಲಾರದು. ಆದುದರಿಂದ ಸ್ಥೂಲಶರೀರಕ್ಕಿಂತಲೂ ಬೇರೆಯಾಗಿ ಅದ ರೊಳಗೆ ಸೂಕ್ಷ್ಮಶರೀರವೆಂಬುದಿದ್ದೇ ಇದೆಯೆಂದು ತಿಳಿಯಬೇಕು. ಸ್ಥೂಲಶರೀರದಲ್ಲಿರುವ ನೇತ್ರಗಳಲ್ಲಿ ಸೂಕ್ಷ್ಮಶರೀರದ ನೇತ್ರಗಳು ಸರ್ವೇಂ ದ್ರಿಯಗಳನ್ನೂ ವ್ಯಾಪಿಸಿರುವುದರಿಂದಲೇ ಸ್ಥೂಲಶರೀರೇಂದ್ರಿಯಗಳು ಒಂದೊಂದೂ ತಮ್ಮತಮ್ಮ ಕಾರ್ಯಗಳನ್ನು ಮಾಡುತ್ತಿರುತ್ತವೆ. ಅದು ಹೇಗೆಂದರೆ—ನಾವು ಕೆಲವು ವಸ್ತುಗಳನ್ನು ನೋಡುತ್ತಿದ್ದೇವಲ್ಲಾ ಅವು ಗಳನ್ನು ನೋಡುವುದು ಕಣ್ಣೆಂಬ ಇಂದ್ರಿಯವಲ್ಲ. ಕಣ್ಣಿಗೂ ಮಿದುಳಿಗೂ ನಡುವೆಯಿರುವ ಸಣ್ಣ ನರದ ಮಾರ್ಗವಾಗಿ ಒಂದು ಇಂದ್ರಿಯವು ಹೋಗು

ತ್ತದೆ; ಆ ಇಂದ್ರಿಯವು ವಸ್ತುಗಳನ್ನು ನೋಡುವುದಕ್ಕೆ ಬಹಳ ಸಹಕಾರಿಯಾಗಿದೆ. ಕಣ್ಣೆಂಬುದು ನೋಡತಕ್ಕ ವಸ್ತುಗಳಲ್ಲಿ ಒಂದು. ಮೇಲೆ ಹೇಳಿದ ಮೆದುಳಿಗೂ ಕಣ್ಣಿಗೂ ಮಧ್ಯದಲ್ಲಿ ಸಣ್ಣನರದ ಮಾರ್ಗವಾಗಿ ಆ ನೋಟವು ಹೋಗುತ್ತದೆ. ಈ ನೋಟವು ಇಂದ್ರಿಯಗಳಿಲ್ಲದಿದ್ದಲ್ಲಿ ಒಬ್ಬನಿಗೆ ನೂರು ಕಣ್ಣಿದ್ದಾಗ್ಯೂ ನೋಡಲು ಸಾಧ್ಯವಾಗಲಾರದು. ಕಣ್ಣು ಮತ್ತು ಆ ಕಣ್ಣಿನ ಹಿಂದಿರುವ ಇಂದ್ರಿಯವು ಇವೆರಡು ಇದ್ದರೂ ಮನಸ್ಸು ಆ ಇಂದ್ರಿಯಗಳೊಡನೆ ಕಲೆಯದಿದ್ದಲ್ಲಿ ವಸ್ತುಗಳನ್ನು ಕಣ್ಣು ತಿಳಿಯಲಾರದು. ಒಂದು ವಸ್ತುವನ್ನು ನೋಡಬೇಕೆಂದಿದ್ದ ಕಣ್ಣು, ಅದರ ಹಿಂದಿರುವ ಇಂದ್ರಿಯವು ಮತ್ತು ಮನಸ್ಸು, ಈ ಮೂರೂ ಇದ್ದರೆ ವಸ್ತುಗಳನ್ನು ಗ್ರಹಿಸುತ್ತದೆಯೇ ಹೊರತು ಇದರಲ್ಲಿ ಯಾವುದೊಂದು ಇಲ್ಲದಿದ್ದರೂ ವಸ್ತುಗಳನ್ನು ಗ್ರಹಿಸಲು ಸಾಧ್ಯವಾಗಲಾರದು. ಮನಸ್ಸು, ಬೇರೆ ಇಂದ್ರಿಯಗಳೊಡನೆ ಕಲೆತು ಕೆಲಸಮಾಡುತ್ತಿರಲು ಕಣ್ಣೂ ಮತ್ತು ಕಣ್ಣಿನ ಹಿಂದಿರುವ ಇಂದ್ರಿಯವೂ ಸೇರಿ ಒಂದು ವಸ್ತುವನ್ನೂ ಗ್ರಹಿಸಲಾರದು. ಅವುಗಳೊಡನೆ ಮನಸ್ಸೂ ಕಲೆತದ್ದೇ ಆದರೆ ವಸ್ತುಗಳ ಸ್ವರೂಪಜ್ಞಾನವನ್ನು ಹೊಂದುವುದಕ್ಕೆ ಅವಕಾಶವಿದೆ. ಹೀಗೆಯೇ ಪ್ರತಿಯೊಂದು ಇಂದ್ರಿಯಕ್ಕೂ ಇರುತ್ತದೆಯೆಂದು ತಿಳಿಯಬೇಕು.

ವಸ್ತುಗಳನ್ನು ನೋಡುವಾಗ ಮನಸ್ಸು ಹೊರಕ್ಕೆ ಹೋಗುತ್ತದೆ. ಆ ವಸ್ತುಗಳನ್ನು ಮನಸ್ಸು ಗ್ರಹಿಸಿ, ಕಣ್ಣುಗಳನ್ನು ಮುಚ್ಚಿ ಆ ವಸ್ತುಗಳನ್ನು ಕುರಿತು ಆಲೋಚಿಸುತ್ತಿರುವಾಗ ಮನಸ್ಸು ಇಂದ್ರಿಯದೊಡಗೂಡಿ ಕೆಲಸಮಾಡುತ್ತಿರುತ್ತದೆ. ಇಂದ್ರಿಯಗಳ ಸಹಾಯವಿಲ್ಲದಿದ್ದಲ್ಲಿ, ಮನಸ್ಸು ಯಾವುದನ್ನೂ ಮಾಡಲಾರದು.

ಈ ಸ್ಥೂಲಸೂಕ್ಷ್ಮಗಳೆರಡೂ ಕಾರ್ಯರೂಪಗಳಾಗಿರುತ್ತವೆ. ಹೇಗೆಂದರೆ, ಹೊಗೆ ಬರುವುದರಿಂದ, ಅಗ್ನಿಯನ್ನು ನೋಡದಿದ್ದರೂ, ಅದಕ್ಕೆ ಕಾರಣವಾದ ಅಗ್ನಿಯು ಇರುವುದರಿಂದಲೇ ಅದರ ಕಾರ್ಯವಾದ ಹೊಗೆ ಬರುತ್ತಿದೆಯೆಂದು ನಿಶ್ಚಯಿಸುವಂತೆ, ಕಾರ್ಯರೂಪಗಳಾದ ಸ್ಥೂಲ ಸೂಕ್ಷ್ಮಶರೀರಗಳು ಉಂಟಾಗುವುದಕ್ಕೆ ಕಾರಣವೊಂದಿರಬೇಕೆಂದು ನಿಶ್ಚ

ಯಿಸಬಹುದು. ಅದೇ ಅಜ್ಞಾನಸ್ವರೂಪವಾದ ಕಾರಣಶರೀರವು. ಈ ಕಾರಣಶರೀರದಿಂದಲೇ ಸ್ಥೂಲಸೂಕ್ಷ್ಮಶರೀರಗಳು ಉಂಟಾಗುತ್ತ ಜನನ ಮರಣಗಳು ಬರುತ್ತಿರುತ್ತವೆ. ಹೇಗೆಂದರೆ,

ಶ್ರುತಿ ॥ " ಅಹಂಕಾರಾ ದವಿವೇಕಃ, ♦ ಅವಿವೇಕಾ ದಭಿಮಾನಃ, ♦ ಅಭಿಮಾನಾ ದ್ರಾಗೋದಯಃ, ♦ ರಾಗೋದಯಾ ದ್ಬಹುಕರ್ಮಾಣಿ, ♦ ಕರ್ಮಣಾ ಶರೀರ ಪರಿಗ್ರಹಃ ♦ "

ಅಹಂಕಾರದಿಂದ ಅವಿವೇಕವೂ ಅವಿವೇಕದಿಂದ ನಾನು, ನನ್ನದು ಎಂಬ ಅಭಿಮಾನವೂ, ಆ ಅಭಿಮಾನದಿಂದ ಕಾಮಕ್ರೋಧಾದಿಗಳೂ, ಆ ಕಾಮಕ್ರೋಧಾದಿಗಳಿಂದ ಅನೇಕ ಕರ್ಮಗಳನ್ನು ನಡೆಸುವಿಕೆಯೂ, ಆ ಕರ್ಮವಶದಿಂದ ಈ ಜೀವಾತ್ಮನು ಜನನಮರಣಗಳನ್ನು ಹೊಂದುತ್ತಲೂ ಅಂದರೆ ಪೂರ್ವಜನ್ಮಕರ್ಮಗಳ ಫಲವಾಗಿ ಪುನಃಪುನಃ ಹುಟ್ಟುತ್ತ ಸಾಯುತ್ತಲಿರುವುದೂ ಹೀಗೆ ಅನೇಕ ಜನ್ಮಗಳನ್ನೆತ್ತಿ ದುಃಖಿಸುತ್ತಿರುವನು. ಆದುದರಿಂದ ಕಾರಣಶರೀರವನ್ನು ನಾಶಮಾಡದೇ ಇದ್ದರೆ ಮೋಕ್ಷವಿಲ್ಲ. ಈ ಕಾರಣಶರೀರವೇ ಸಂಚಿತವೆಂದು ಕರೆಯಲ್ಪಡುವಂಥದು.

ಶ್ರುತಿ ॥ ' ತಸ್ಮಾದ್ವಿದ್ವಾನ್ ಬ್ರಹ್ಮ ಜ್ಞಾನಾಗ್ನಿನಾ ಕರ್ಮಬಂಧಂ ವಿನಿರ್ದಹೇತ್ ' ।

ಎಂಬ ಪೈಂಗಳೋಪನಿಷದ್ವಾಕ್ಯರೀತಿಯಾಗಿ ಬ್ರಹ್ಮಜ್ಞಾನಾಗ್ನಿಯಿಂದ ಅಜ್ಞಾನವೂ ಸಕಲ ಕರ್ಮಗಳೂ ನಾಶಹೊಂದಿದಮೇಲೆ ಜೀವಿಯು ಮುಕ್ತಿಯನ್ನು ಪಡೆಯುತ್ತಾನೆ.



# ಗುಣತ್ರಯಗಳು.

---

ಶ್ರುತಿ || "ಊರ್ಧ್ವೇ ಸಾತ್ವಿಕೋ, ಮಧ್ಯೇ ರಾಜಸೋ, ಅಧಸ್ತಾತ್ ತಾಮಸ ಮಿತಿ ♦ ಸತ್ಯಜ್ಞಾನಂ ಸಾತ್ವಿಕಂ, ಧರ್ಮಜ್ಞಾನಂ ರಾಜಸಂ, ತಿಮಿರಾಂತಂ ತಾಮಸಮಿತಿ ♦ (ಶಾರೀರಕೋಪನಿಷತ್)

**ಸಾತ್ವಿಕವೇ** ಉತ್ತಮಗುಣವು, ರಾಜಸವೇ ಮಧ್ಯಮಗುಣವು, ತಾಮಸವೇ ಅಧಮಗುಣವು. ಸಾತ್ವಿಕಕ್ಕೆ ಸತ್ಯಜ್ಞಾನವೂ, ರಾಜಸಕ್ಕೆ ಧರ್ಮಜ್ಞಾನವೂ, ತಾಮಸಕ್ಕೆ ಅಜ್ಞಾನವೂ ಮೂಲಕಾರಣವಾಗಿವೆ. ಇದಕ್ಕೆ ಶ್ರೀ ಭಗವದ್ಗೀತ ಅಧ್ಯಾಯ 14 ಶ್ಲೋ|| 5—ಇದನ್ನು ಪ್ರಮಾಣವಾಗಿ ಈ ಮುಂದೆ ಹೇಳಿದೆ.

ಶ್ಲೋ || ಸತ್ವಂ ರಜ ಸ್ತಮ ಇತಿ ♦ ಗುಣಾಃ ಪ್ರಕೃತಿ ಸಂಭವಾಃ |
ನಿಬಧ್ನಂತಿ ಮಹಾಬಾಹೋ ♦ ದೇಹೇ ದೇಹಿನ ಮವ್ಯಯಂ ||

'ಬಾಹುವೀರ್ಯವುಳ್ಳ ಓ ಅರ್ಜುನಾ! ಪ್ರಕೃತಿಯಿಂದ ಬಂದಂಥ ಸತ್ವರಜಸ್ತಮೋ ಗುಣಗಳು ಮೂರೂ ಶರೀರವನ್ನು ಮುಚ್ಚಿಕೊಂಡು, ಮನೋ ಬುದ್ಧಿ ಚಿತ್ತ ಅಹಂಕಾರಗಳಿಂದೊಡಗೂಡಿ ನಿರ್ವಿಕಾರನೂ ಆಶಾ ರಹಿತನೂ ಆದ ಆತ್ಮನನ್ನು ಬಂಧಿಸುತ್ತವೆ. ಈ ಗುಣತ್ರಯಗಳನ್ನೂ ತಿಳಿಸುತ್ತೇನೆ ಕೇಳು.''

**ಸಾತ್ವಿಕಗುಣವು:**—ಸತ್ಯವನ್ನು ನುಡಿಯುವುದು; ಅಹಿಂಸೆ; ನ್ಯಾಯ ವರ್ತನೆ; ಪರಸ್ವತ್ತನ್ನು ಅಪಹರಿಸದಿರುವುದು; ಪರಸ್ತ್ರೀಯನ್ನು ಮೋಹಿಸದಿರುವುದು; ಶಾಂತಿಯು; ಡಂಭವಿಲ್ಲದಿರುವಿಕೆಯು; ಭೂತದಯೆ; ತಾಯಿತಂದೆಗಳಲ್ಲಿ ಬಹು ಪ್ರೀತಿ; ದೀನರಕ್ಷಣೆ ಮತ್ತು ಗುರುಹಿರಿಯರಲ್ಲಿ ಭಕ್ತಿ ಈ ಗುಣಗಳನ್ನಿರುವವನೇ ಸಾತ್ವಿಕನು. ಇದಕ್ಕೆ ಭರ್ತೃಹರಿ ನೀತಿಶತಕವೇ ಪ್ರಮಾಣವು.

ಶ್ಲೋ ॥ ವಾಂಛಾ ಸಜ್ಜನಸಂಗತೌ, ಪರಗುಣೇ ♦ ಪ್ರೀತಿಃ, ಗುರೌ ನಮ್ರತಾ ।
ವಿದ್ಯಾಯಾಂ ವ್ಯಸನೇ, ಸ್ವಯೋಷಿತಿ ರತೀ ♦ ಲೋಕಾಪವಾದಾ ದ್ಭಯಂ ॥
ಭಕ್ತಿ ಶ್ಶೂಲಿನಿ, ಶಕ್ತಿ ರಾತ್ಮ ದಮನೇ ♦ ಸಂಸರ್ಗಮುಕ್ತಿಃ ಖಲೌ ।
ಏತೇ ಯೇಷು ವಸಂತಿ ನಿರ್ಮಲಗುಣಾಃ ♦ ತೇಭ್ಯೋ ಮಹದ್ಭ್ಯೋ ನಮಃ॥

ಸತ್ಪುರುಷರ ಸಹವಾಸದಲ್ಲಿ ಇಚ್ಛೆ, ಇತರರ ಗುಣದಲ್ಲಿ ಪ್ರೀತಿ, ಗುರುವಿನಲ್ಲಿ ವಿನಯ, ವಿದ್ಯೆಯಲ್ಲಿ ಅಂದರೆ ಬ್ರಹ್ಮಜ್ಞಾನವನ್ನು ಸಂಪಾದಿಸುವುದರಲ್ಲಿ ಅತ್ಯಾಸಕ್ತಿ, ತನ್ನ ಹೆಂಡತಿಯಲ್ಲಿ ಮಾತ್ರ ರತಿಸುಖ, ಲೋಕಾಪವಾದಕ್ಕೆ ಹೆದರುವುದು, ಪರಮಾತ್ಮನಲ್ಲಿ ಭಕ್ತಿ, ಇಂದ್ರಿಯಗಳನ್ನು ನಿಗ್ರಹಿಸುವುದರಲ್ಲಿ ಶಕ್ತಿ, ದುಷ್ಟಸಂಗತ್ಯಾಗ ; ಈ ಮೇಲೆ ಹೇಳಿದ ನಿರ್ಮಲಗುಣಗಳು ಯಾವ ಮಹಾತ್ಮರಲ್ಲಿವೆಯೋ ಅಂತಹ ಸಾತ್ವಿಕಗುಣಶಾಲಿಗಳು ಸಮಸ್ತರಿಂದಲೂ ವಂದ್ಯರು ಎಂಬುದೇ ಮೇಲಿನ ಶ್ಲೋಕದ ತಾತ್ಪರ್ಯ.

ಇದೂ ಅಲ್ಲದೆ,

ಶ್ಲೋ ॥ ಮಾತೃವ ತ್ಪರದಾರೇಷು ♦ ಪರದ್ರವ್ಯೇಷು ಲೋಷ್ಠವತ್ ।
ಆತ್ಮ ವ ತ್ಸರ್ವಭೂತೇಷು ♦ ಯಃ ಪಶ್ಯತಿ ಸ ಪಶ್ಯತಿ ॥

(ಮಹಾವಾಕ್ಯರತ್ನಾವಳಿ)

ಪರಸ್ತ್ರೀಯರಲ್ಲಿ ತಾಯಿಯೆಂಬ ಭಾವನೆಯೂ, ಪರದ್ರವ್ಯದಲ್ಲಿ ಮಣ್ಣಿನ ಹೆಂಟೆಯೆಂಬ ಭಾವನೆಯೂ, ಸಮಸ್ತ ಚರಾಚರ ಭೂತಗಳಲ್ಲಿ ತನ್ನಂತೆಯೇ ಎಂಬ ಭಾವನೆಯೂ ಯಾವನಿಗಿರುತ್ತದೆಯೋ ಅವನೇ ಸಾತ್ವಿಕಶಿರೋಮಣಿ, ಅವನೇ ಜ್ಞಾನಿ ಎಂಬುದೇ ಮೇಲೆ ಹೇಳಿದ ಶ್ಲೋಕರತ್ನದ ಅಭಿಪ್ರಾಯ.

ಇದಕ್ಕೆ ಭಾಗವತದಲ್ಲಿನ ಪ್ರಮಾಣವೂ ಉಂಟು.

ಸೀ ॥ ತನ್ನಲ್ಲಿ ಸಕಲಭೂ ♦ ತಗಳಲ್ಲಿ ಯೊಂದೆ ಪರಿ
ಸಮಭಾವವನ್ನೊಂದಿ ♦ ನಡೆಯುವಾತ ;
ಹಿರಿಯರಂ ಕಂಡೊಡನೆ ♦ ಭೃತ್ಯನಂ ತವರೆಡೆಗೆ
ಪೋಗಿ ಪ್ರಣಾಮಂಗ ♦ ಳೆಸಗುವಾತ ;

ಕಣ್ಣದಿಟ್ಟಿಗೆ ಪರ ♦ ಸ್ತ್ರೀಯು ರಡ್ಡಗಿಸಲು,
ಮಾತೃಭಾವದಿಂ ಮನವ ♦ ತಿರುಗಿಪಾತ ;
ತಾಯಿತಂಡೆಗಳಲ್ಲಿ ♦ ಧರ್ಮವಾತ್ಸಲ್ಯವಂ
ದೀನ ರಕ್ಷಣೆಯುನುಂ ♦ ಚಿಂತಿಪಾತ ;

ತೇ ॥ ಗೀ ॥ ಗೆಳೆಯರೊಳು ಸೋದರಸ್ಥಿತಿ ♦ ನಡೆಸುವಾತ ;
ಗುರುಗಳಂ ದೈವವೆಂದೇ ♦ ನೆನೆಸುವಾತ ;
ಲೀಲೆಗುಂ ಸುಳ್ಳುಗಳ ತಾ ♦ ನುಡಿಯದಾತ ;
ಲಲಿತ ಮರ್ಯಾದೆಯಿಂ ಮೆರೆವ ಪ್ರ ♦ ಹ್ಲಾದನಾತ.

ಸೀ ॥ ಆಕಾರ ಜನ್ಮವಿ ♦ ದ್ಯಾಧನವರಿಷ್ಠನುಂ,
ಗರ್ವದಿಂ ತಡೆಬಿದ್ದ ♦ ಗತಿ ಯಿರದವಂ ;
ವಿವಿಧಮಹಾನೇಕ ♦ ವಿಷಯಸಂಪನ್ನನುಂ,
ಪಂಚೇಂದ್ರಿಯಂಗಳಿಂ ♦ ಗೊಳಬಡದವಂ ;
ಭವ್ಯವಯೋಬಲ ♦ ಪ್ರಾಭವೋಪೇತನುಂ,
ಕಾಮರೋಷಾದಿಗಳಿ ♦ ಗೆಟುಕದವನು ;
ಕಾಮಿನೀ ಪ್ರಮುಖ ಭೋ ♦ ಗಗಳೆಷ್ಟು ಪಡೆದರುಂ,
ವ್ಯಸನಸಂಸಕ್ತಿಯುಂ ♦ ಪೊಂದನವನು ;

ಗೀ ॥ ವಿಶ್ವದೊಳು ತಾ ಕಂಡು ಕೇಳಿ ♦ ದರ್ಥಗಳಲ್ಲಿ
ಮತ್ತಿತರವಸ್ತು ವೋಳ್ತಾ ♦ ನಾಶೆಯಿಡನು ;
ಧರಣಿನಾಥ ! ದೈತ್ಯತನಯು ♦ ನುಂ ಹರಿಪರ !
ತಂತ್ರನಾಗಿರಲು ಹತಾನ್ಯ ತಂತ್ರನಹನು.
(ತೆಲುಗು--ಆಂಧ್ರ ಭಾಗವತ)

**ರಾಜಸಗುಣವು :—** ಪುರುಷನು ಕರ್ತೃತ್ವ ಭೋಕ್ತೃತ್ವ ದಾತೃತ್ವಗಳನ್ನು ಹೊಂದಿ ಅಹಂಕಾರದಿಂದ ಮೆರೆಯುವುದೇ ರಾಜಸಗುಣವು.

ಗೀ ॥ ನಾನೆ ಕರ್ತೃವು ಭೋಕ್ತೃವುಂ ♦ ನಾನೆ ದಾತ
ನೆಂಬಹಂಕಾರವನು ಪೊಂ ♦ ದಿರುವ ಪುರುಷಂ
ಭೂಮಿಯೋಳ್ ರಾಜಸದಗುಣ ♦ ವುಳ್ಳನವನೇ
ಎನುತಾಡುವ ರ್ನಿಜವು ತಾ ♦ ವನಘಮತಿಗಳ್ ॥ (ತೆಲಗು)

**ತಾಮಸಗುಣವು :—** ಯಾವಾಗಲೂ ನಿದ್ರೆಮಾಡುತ್ತಿರುವವ; ಮೂಢಬುದ್ಧಿಯುಳ್ಳವ; ಸದಾ ಮೋಹವೆಂಬ ಪಾಶದಿಂದ ಬಿಗಿಯಲ್ಪಟ್ಟವ; ಕೊನೆಗಾಣದ ಕೋರಿಕೆಗಳನ್ನು ನಿರಂತರವೂ ಮನಸ್ಸಿನಲ್ಲೆಣಿಸುತ್ತಿರುವವ; ವಿಶೇಷವಾಗಿ ಸ್ತ್ರೀಸಂಭೋಗವನ್ನೆಳಸುತ್ತಿರುವವ; ಮತ್ತು ಅನೇಕವಿಧ ಕರ್ಮಗಳಲ್ಲಿ ಮನಸ್ಸನ್ನು ಪ್ರವರ್ತಿಸುವಂತೆ ಮಾಡುತ್ತಿರುವವ; ಇವನೇ ತಾಮಸಗುಣವುಳ್ಳವನೆಂದು ತಿಳಿಯಬೇಕು.

ಗೀ ॥ ನಿದ್ರೆಮೋಹ ಪಾಲಸ್ಯದೋಳ್ ♦ ನಿರತಭೋಗ
ರಾಗಚೌರ್ಯಂಗಳೊಳ್ ಬಹು ♦ ಸಕ್ತಿ ಯಿರವು
ತಾಮಸಗುಣಂಗ ಳೆಂಬರು ♦ ತತ್ವವಿದರು
ಅಧಮತರಗತಿ ಗುಣಗ ಳಿ ♦ ವೆಂದೆನಿಸಿವೆ ॥

ಸಾತ್ವಿಕಗುಣವು ಉತ್ತಮವು; ರಾಜಸಗುಣವು ಮಧ್ಯಮವು; ತಾಮಸಗುಣವು ಅಧಮ ತರಗತಿಗೆ ಸೇರಿದುದು ಎಂದು ತತ್ವವೇದಿಗಳು ಹೇಳುತ್ತಾರೆ.

# 'ನಮ್ಮಾಳ್ವಾರ್ ಸಾತ್ತುನೊರ' ಎಂಬ ಉತ್ಸವದ ರಹಸ್ಯಾರ್ಥವು.

ದಕ್ಷಿಣ ಹಿಂದೂಸ್ಥಾನದಲ್ಲಿ ಒಂದಾನೊಂದು ಗ್ರಾಮದಲ್ಲಿ ಬಹು ಕಾಲದ ಹಿಂದೆ ನಮ್ಮಾಳ್ವಾರ್ ಎಂಬ ಹೆಸರುಳ್ಳ ಒಬ್ಬ ವೈಷ್ಣವ ಮಹಾತ್ಮ ರೊಬ್ಬರಿದ್ದರು. ಇವರು ತಮ್ಮನ್ನು ಮುಚ್ಚಿಕೊಂಡಿದ್ದ ಇಪ್ಪತ್ತನಾಲ್ಕು ತತ್ವಗಳನ್ನೂ ಒಂದೊಂದು ತತ್ವವನ್ನಾಗಿ ವಿಂಗಡಿಸಿ, ಇದರ ಮೇಲೆ ತನ್ನಲ್ಲಿರುವ ಇಪ್ಪತ್ತೈದನೇ ತತ್ವವಾದ ಜೀವಾತ್ಮನನ್ನು ಇಪ್ಪತ್ತಾರ ನೆಯ ತತ್ವವಾದ ಪರಮಾತ್ಮನಲ್ಲಿ ಐಕ್ಯವನ್ನು ಮಾಡಿದರು. ಅಂದರೆ ಜೀವಾತ್ಮಸ್ವರೂಪಿಗಳಾಗಿದ್ದ ತಾವು ಎಲ್ಲೆಲ್ಲಿಯೂ ತುಂಬಿ ತುಳುಕಾಡು

ಶ್ತಿರುವ ಪರಮಾತ್ಮನಲ್ಲಿ ಹೋಗಿ ಸೇರಿದರು. ತನ್ನಲ್ಲಿರುವ ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿಸುವುದೇ ಮೋಕ್ಷವು. ನಮ್ಮಾಳ್ವಾರೆಂಬ ಈ ಮಹನೀಯರ ಆತ್ಮಸ್ವರೂಪವನ್ನು ಯಾವ ಇಪ್ಪತ್ತನಾಲ್ಕು ತತ್ವಗಳು ಆವರಿಸಿಕೊಂಡಿದ್ದವೋ ಅವುಗಳನ್ನು ಈ ಮುಂದೆ ವಿವರಿಸಲಾಗಿದೆ.

ದಕ್ಷಿಣ ಹಿಂದೂಸ್ಥಾನದಲ್ಲಿ ಅನೇಕ ದೊಡ್ಡ ದೊಡ್ಡ ವಿಷ್ಣು ದೇವಾಲಯಗಳಿವೆ. ಆ ದೇವಾಲಯಗಳಲ್ಲಿ ಪ್ರತಿ ಸಂವತ್ಸರದಲ್ಲಿಯೂ ಹತ್ತು ದಿನಗಳ ಒಂದು ಮಹೋತ್ಸವವನ್ನು ನಡೆಸುತ್ತಾರೆ. ಇಂಥಾ ಮಹೋತ್ಸವವು ನಡೆಯುತ್ತಿರುವಾಗ ಒಂದು ದಿನ ಈ ಮುಂದೆ ಹೇಳುವ ಪದ್ಧತಿಯ ಕ್ರಮವನ್ನನುಸರಿಸುತ್ತಾರೆ. ಅದೇನೆಂದರೆ—ಮೇಲೆ ಹೇಳಿದಂತೆ ನಮ್ಮಾಳ್ವಾರ್ ಮಹಾತ್ಮರು ಮುಕ್ತಿಭವನವನ್ನು ಹೊಂದಿದಮೇಲೆ, ಆ ಮಹಾತ್ಮರ ಶರೀರದಂತೆ ಎರಡಡಿ ಎತ್ತರವುಳ್ಳ ಒಂದು ತಾಮ್ರದ ವಿಗ್ರಹವನ್ನು ಮಾಡಿಟ್ಟು, ಮೂರಡಿ ಉದ್ದ ಎರಡಡಿ ಅಗಲವುಳ್ಳ ಇಪ್ಪತ್ತನಾಲ್ಕು ಕಾಶೀರೇಷ್ಮೆ ದುಪ್ಪಟಿ (ಧೋತ್ರ) ಗಳನ್ನು ಆ ನಮ್ಮಾಳ್ವಾರ್ ಎಂಬ ಹೆಸರುಳ್ಳ ವಿಗ್ರಹದ ಶರೀರವೆಲ್ಲಕ್ಕೂ ಚನ್ನಾಗಿ ಹೊದ್ದಿಸಿ, ಪುಷ್ಪಗಳಿಂದಲಂಕರಿಸಿ 'ಪೆರಮಾಳ್ಳು' (ದೇವರ) ಮುಂಭಾಗದಲ್ಲಿ ಅದನ್ನು ತಂದು ನಿಲ್ಲಿಸುತ್ತಾರೆ. ಇದಾದಮೇಲೆ ಒಬ್ಬ ಬ್ರಾಹ್ಮಣನು ಒಂದು ತತ್ವವನ್ನು ಗಟ್ಟಿಯಾಗಿ ಓದಿ ಹೇಳಿ ಮುಗಿಸಿದನಂತರ ಕರ್ಪೂರದಾರತಿಯನ್ನು ನಮ್ಮಾಳ್ವಾರ್ ವಿಗ್ರಹಕ್ಕೆ ತೋರಿಸಿ ಆ ವಿಗ್ರಹಕ್ಕೆ ಹೊದ್ದಿಸಿರುವ ಮೊದಲನೇ ಕಾಶೀದುಪ್ಪಟಿಯನ್ನು ಬಿಚ್ಚಿ ತೆಗೆದು ಒಂದೆಡೆಯಲ್ಲಿಡುತ್ತಾನೆ. ಪುನಃ ಮೇಲೆ ಹೇಳಿದ ರೀತಿಯಲ್ಲಿ ಮತ್ತೊಂದು ತತ್ವವನ್ನು ಓದಿ ಕರ್ಪೂರದಾರತಿಯನ್ನು ಪುನಃ ಸಮರ್ಪಿಸಿ ಮತ್ತೊಂದು ದುಪ್ಪಟಿಯನ್ನು ತೆಗೆದು ಮೊದಲು ತೆಗೆದಿಟ್ಟ ದುಪ್ಪಟಿಯ ಮೇಲಿಡುತ್ತಾನೆ. ಈರೀತಿಯಾಗಿ ಇಪ್ಪತ್ತನಾಲ್ಕು ತತ್ವಗಳನ್ನೂ ಹೇಳಿ ಇಪ್ಪತ್ತನಾಲ್ಕು ದುಪ್ಪಟಿಗಳನ್ನೂ ಒಂದರಮೇಲೊಂದು ಕ್ರಮವಾಗಿ ತೆಗೆದಿಡುತ್ತಾನೆ. ಇವೆಲ್ಲವನ್ನೂ ತೆಗೆದ ಬಳಿಕ ನಮ್ಮಾಳ್ವಾರ್ ವಿಗ್ರಹವು ನಿರ್ವಾಣ (ಬೆತ್ತಲೆ) ವಾಗಿರುವುದು. ಆಗ ಈ ನಿರ್ವಾಣ ವಿಗ್ರಹವನ್ನು ತೆಗೆದುಕೊಂಡು ಹೋಗಿ ಇದರ ಮುಂಭಾಗದಲ್ಲಿರುವ 'ಪೆರಮಾಳ್ಳು' (ದೇವರ) ಪಾದದ ಸಮೀಪದಲ್ಲಿ

ಸಾಷ್ಟಾಂಗವಾಗಿ ಮಲಗಿಸಿದನಂತರ, ಆ ವಿಗ್ರಹವು ಕಾಣದಂತೆ ತುಳಸೀ ದಳಗಳಿಂದ ಪೂರ್ಣವಾಗಿ ಮುಚ್ಚಿ, 'ಪೆರಮಾಳ್ಳು' ಗೂ ಮತ್ತು ತುಳಸೀ ದಳಗಳಿಂದ ಮುಚ್ಚಲ್ಪಟ್ಟ ನಮ್ಮಾಳ್ವಾರ್ ವಿಗ್ರಹಕ್ಕೂ ಕರ್ಪೂರದಾರತಿ ಯನ್ನು ತೋರಿಸುತ್ತಾರೆ. ಈ ಆಶ್ಚರ್ಯವಿಷಯವನ್ನು ನೋಡುವು ದಕ್ಕಾಗಿ ಅನೇಕ ಜನಗಳು ಅಲ್ಲಿಗೆ ಬರುತ್ತಿರುತ್ತಾರೆಯೇ ಹೊರತು ಇದರ ರಹಸ್ಯವೇನೆಂಬುದನ್ನು ಅವರು ತಿಳಿಯದಿದ್ದಾರೆ. ಈ ರಹಸ್ಯಾರ್ಥಗಳೆಲ್ಲ ವನ್ನೂ ಇನ್ನು ಮುಂದೆ ವಿಶದಪಡಿಸಿದೆ.

ಇದುವರಿವಿಗೂ ಹೇಳುತ್ತ ಬಂದ ಜ್ಞಾನೇಂದ್ರಿಯಗಳೈದನ್ನು ಕುರಿತು 'ನೇತಿ ನೇತಿ' ಎಂದರೆ ಕಣ್ಣು ನಾನಲ್ಲ, ಕಿವಿಯು ನಾನಲ್ಲ, ಮೂಗು ನಾನಲ್ಲ, ನಾಲಗೆಯು ನಾನಲ್ಲ ಮತ್ತು ಚರ್ಮವೂ ನಾನಲ್ಲ ಎಂಬ ಈ ಐದಿಂದ್ರಿಯಗಳ ಹೆಸರನ್ನು ಹೇಳಿ, ನಮ್ಮಾಳ್ವಾರ್ ವಿಗ್ರಹದ ಒಂದೊಂದು ಇಂದ್ರಿಯವನ್ನೂ ಬೇರೆಬೇರೆ ತೆಗೆದುಬಿಡುತ್ತಾರೆ.

ಹೀಗೆ ಮಾಡಿದನಂತರ ಪುನಃ ಕರ್ಮೇಂದ್ರಿಯಗಳೈದನ್ನೂ ಕುರಿತು "ನೇತಿ, ನೇತಿ" ಅಂದರೆ ಬಾಯಿ ನಾನಲ್ಲ, ಕೈಗಳು ನಾನಲ್ಲ, ಕಾಲು ನಾನಲ್ಲ, ಗುದಸ್ಥಾನವು ನಾನಲ್ಲ ಮತ್ತು ಮರ್ಮಸ್ಥಾನವೂ ನಾನಲ್ಲ ಎಂದು ಹೇಳಿ ನಮ್ಮಾಳ್ವಾರ್ ವಿಗ್ರಹದ ಒಂದೊಂದು ಇಂದ್ರಿಯಭಾಗವನ್ನೂ ಹಿಂದೆಹೇಳಿದಂತೆ ಬೇರೆಬೇರೆ ತೆಗೆದುಬಿಡುತ್ತಾರೆ.

ಅನಂತರ ಪುನಃ ಅಂತಃಕರಣಗಳು ನಾಲ್ಕನ್ನೂ ಕುರಿತು 'ನೇತಿ ನೇತಿ' ಅಂದರೆ, ಮನಸ್ಸು ನಾನಲ್ಲ, ಬುದ್ಧಿಯು ನಾನಲ್ಲ, ಚಿತ್ತವು ನಾನಲ್ಲ, ಅಹಂಕಾರವೂ ನಾನಲ್ಲ ಎಂಬುದಾಗಿ ಹೇಳಿ ಈ ನಾಲ್ಕನ್ನೂ ಒಂದೊಂದಾಗಿ ಹೊರಗೆ ತೆಗೆದು ಮುಗಿಸುತ್ತಾರೆ.

ಇದಾದಮೇಲೆ ಪುನಃ ದಶವಾಯುಗಳನ್ನು ಕುರಿತು ಹಿಂದಿನಂತೆಯೇ "ನೇತಿ ನೇತಿ" ಅಂದರೆ ಮುಖ್ಯಗಳಾದ ಪ್ರಾಣವಾಯುವು ನಾನಲ್ಲ, ಅಪಾನವಾಯುವು ನಾನಲ್ಲ, ಉದಾನವಾಯು ನಾನಲ್ಲ, ಸಮಾನವಾಯುವು ನಾನಲ್ಲ, ವ್ಯಾನವಾಯುವೂ ನಾನಲ್ಲ ಮತ್ತು ಉಪವಾಯುಗಳಾದ

ನಾಗವಾಯುವು ನಾನಲ್ಲ, ಕೂರ್ಮವಾಯುವು ನಾನಲ್ಲ, ಕೃಕರವೆಂಬ ವಾಯುವು ನಾನಲ್ಲ, ದೇವದತ್ತವೆಂಬ ವಾಯುವು ನಾನಲ್ಲ ಮತ್ತು ಧನಂಜಯವೆಂದು ಕರೆಯಲ್ಪಡುವ ವಾಯುವೂ ನಾನಲ್ಲ ಎಂದು ಹೇಳಿ, ಈ ಇಪ್ಪತ್ತನಾಲ್ಕು ತತ್ವಗಳನ್ನೂ ತೊಲಗಿಸಿದ ಬಳಿಕ ಶೇಷವಾಗಿ ಉಳಿದ ಇಪ್ಪತ್ತೈದನೆಯ ತತ್ವವಾದ ಜೀವಾತ್ಮಯೆಂಬುದು ಬಹಳ ಪರಿಶುದ್ಧವಾದ ಆತ್ಮವಾಗಿ ಪರಿಣಮಿಸುತ್ತದೆ. ಆ ನಮ್ಮಾಳ್ವಾರ್ ಜೀವಾತ್ಮನು ಪರಶುದ್ಧನಾದ ಆತ್ಮನಾದ ಮೇಲೆ ಎಲ್ಲೆಲ್ಲಿಯೂ ಪರಿಪೂರ್ಣನಾಗಿರುವ ಪರಬ್ರಹ್ಮನಲ್ಲಿ ಸೇರಿ ಐಕ್ಯನಾದನು.

ಇಂತಹ ಶ್ರೇಷ್ಠವಾದ ರಹಸ್ಯವನ್ನು ಹೊರಗೆಡವದೆ ನಮ್ಮಾಳ್ವಾರ್ ಮಹಾತ್ಮರ ವಿಗ್ರಹದ ಮೇಲೆ ಇಪ್ಪತ್ತನಾಲ್ಕು ಕಾಶೀ ದುಪ್ಪಟಿಗಳನ್ನು ಹೊದ್ದಿಸಿಟ್ಟು, ಅವುಗಳಲ್ಲಿ ಒಂದೊಂದನ್ನೂ ಹೊರತೆಗೆದು ಕಡೆಯಲ್ಲಿ ಯಾವ ವಸ್ತ್ರವೂ ಇಲ್ಲದೆ ನಿರ್ವಾಣವಾಗಿರುವ ಆ ವಿಗ್ರಹವನ್ನು ತೆಗೆದುಕೊಂಡು ಹೋಗಿ ಪೆರುಮಾಳ್ಳ ಪಾದಗಳ ಸಮೀಪದಲ್ಲಿ ಮಲಗಿಸಿ ತುಳಸೀ ದಳಗಳಿಂದ ಮುಚ್ಚಿ ಪ್ರಜೆಗಳಿಗೆ ತೋರಿಸುತ್ತಿದ್ದಾರೆ.

ಆದುದರಿಂದ ಸ್ತ್ರೀಪುರುಷರ ಹೃದಯಕಮಲವೆಂಬ ಗುಹೆಯಲ್ಲಿ ಅಂತರ್ಯಾಮಿಯಾಗಿಯೂ, ಸಾಕ್ಷಿಭೂತವಾಗಿಯೂ ಇರುವ ಜೀವಾತ್ಮನು ಇಪ್ಪತ್ತನಾಲ್ಕು ವಿಧಗಳಾದ ತತ್ವಗಳನ್ನೂ ನಾನಾ ವಿಧವಾದ ಆಸೆಗಳನ್ನೂ, ತನ್ನನ್ನು ಆವರಿಸಿರುವ ಆಸೆಗಳ ಜೊತೆಗೆ ತನ್ನನ್ನು ಅಂಟಿಕೊಂಡಿರುವ ಕಾಮಕ್ರೋಧಾದಿ ದುರ್ಗುಣಗಳನ್ನೂ ಯಾವ ಜನ್ಮದಲ್ಲಿ ತೊಲಗಿಸಿ ಕಳೆದುಬಿಡುತ್ತಾನೆಯೋ, ಆ ಜನ್ಮದಲ್ಲಿಯೇ, ಪರಮಾತ್ಮಸ್ವರೂಪದಲ್ಲಿ ಹೋಗಿ ಸೇರಿ ಐಕ್ಯನಾಗುತ್ತಾನೆಂಬುದೇ ನಮ್ಮಾಳ್ವಾರ್ ಉತ್ಸವದ ರಹಸ್ಯಾರ್ಥವೆಂದು ತಿಳಿದುಕೊಳ್ಳಬೇಕು. ಈ ಇಪ್ಪತ್ತು ನಾಲ್ಕು ತತ್ವಗಳನ್ನೂ ಮತ್ತು ಅನೇಕ ವಿಧವಾದ ಆಸೆಗಳನ್ನೂ ಹೇಗೆ ತೊಲಗಿಸಬಹುದೋ ಅದನ್ನು ಇನ್ನು ಮುಂದೆ ಹೇಳಲಾಗಿದೆ.

ಕುಂಟೆ ಅಥವಾ ಭಾವಿ ಇವುಗಳಲ್ಲಿನ ನೀರಿನ ಮೇಲೆ ಅನೇಕವೇಳೆ ಪಾಚಿ ಹರಡಿರುವುದು ಅನೇಕರಿಗೆ ಗೊತ್ತುಂಟು. ಕೈಯಿಂದ ಆ ಪಾಚಿಯನ್ನು

ದೂರಮಾಡಿದರೆ ಪಾಚಿಯ ಕೆಳಗಿರುವ ನೀರು ಕಾಣ್ಬರುವುದು. ಕೈಗಳಿಂದ ಈ ಪಾಚಿಯನ್ನು ದೂರಮಾಡುವುದು ನಿಲ್ಲಿಸಲು ಸ್ವಲ್ಪದೂರ ಹೋಗಿದ್ದ ಆ ಪಾಚಿಯು ಹೆಪ್ಪು ಪುನಃ ನೀರನ್ನು ಮುಚ್ಚಿ ಅದುಕಾಣದಂತೆ ಮಾಡಿ ಬಿಡುತ್ತದೆ. ಇಂತಹ ಪಾಚಿಯನ್ನು ಹೋಗಲಾಡಿಸುವ ಕ್ರಮವನ್ನು ಈ ಮುಂದೆ ವಿಶದಪಡಿಸಿದೆ.

ಒಂದು ಕುಂಟೆಯ ಸಮೀಪದಲ್ಲಿ ಒಂದು ಭಂಡಿಯ ತುಂಬಾ ಕಲ್ಲು ಗಳನ್ನು ತೆಗೆದುಕೊಂಡು ದಡದಲ್ಲಿಟ್ಟುಕೊಂಡು, ಅದರಲ್ಲಿ ಒಂದು ಕಲ್ಲನ್ನು ತೆಗೆದು ಕುಂಟೆಯ ನಡುನೀರಿನೊಳಕ್ಕೆ ಹಾಕಬೇಕು. ಆಗ ಕಲ್ಲು ನೀರಿ ನಲ್ಲಿ ಬಿದ್ದ ಸ್ಥಳದಲ್ಲಿ ಸುಮಾರು ನಾಲ್ಕೈದು ಸಣ್ಣ ಅಲೆಗಳು (ripples) ಹುಟ್ಟಿ, ಆ ಪಾಚಿಯನ್ನು ಸ್ವಲ್ಪ ದೂರವಾಗಿ ತಳ್ಳುತ್ತದೆ. ಪುನಃ ಮತ್ತೊಂದು ಕಲ್ಲನ್ನು ತೆಗೆದು ಮೊದಲು ಹಾಕಿದ ಸ್ಥಳದಲ್ಲಿಯೇ ಹಾಕ ಬೇಕು. ಆಗ ಮತ್ತೆ ನಾಲ್ಕೈದು ಅಲೆಗಳು ಅದೇ ಸ್ಥಳದಲ್ಲಿ ಹುಟ್ಟಿ ಆ ಪಾಚಿಯನ್ನು ಮತ್ತಷ್ಟು ದೂರ ತಳ್ಳುತ್ತವೆ. ಹಾಗೆಯೇ ಕಲ್ಲುಮೇಲೆ ಕಲ್ಲನ್ನು ಬಿಡದೆ ಒಂದೇ ಸಮನಾಗಿ ಹಾಕುತ್ತಿದ್ದರೆ ಅನೇಕ ಅಲೆಗಳು ಹುಟ್ಟಿ ಆ ಪಾಚಿಯೆಲ್ಲವನ್ನೂ ನಾಲ್ಕೂ ಕಡೆಯ ದಡಗಳ ಕೊನೆಗೆ ತಳ್ಳಿ ಕೊಂಡು ಹೋಗುತ್ತವೆ. ಕಲ್ಲು ಹಾಕುವುದನ್ನು ನಿಲ್ಲಿಸಿಬಿಟ್ಟರೆ ಪುನಃ ಆ ಪಾಚಿಯೆಲ್ಲವೂ ಹಿಂದಿನಂತೆಯೇ ಸ್ವಲ್ಪಸ್ವಲ್ಪವಾಗಿ ನೀರೆಲ್ಲವನ್ನೂ ಪುನಃ ಮುಚ್ಚಿಕೊಳ್ಳುತ್ತದೆ. ಅದೇ ರೀತಿಯಲ್ಲಿಯೇ ಸ್ತ್ರೀಪುರುಷರ ಹೃದಯಕಮಲವೆಂಬ ಗುಹೆಯಲ್ಲಿ ವಾಸಿಸುತ್ತಿರುವ ಮಹಾ ಪರಿಶುದ್ಧಾತ್ಮಕ ನಾದ ಆತ್ಮನನ್ನು ಮುಚ್ಚಿಕೊಂಡಿರುವ ಆಸೆಯೆಂಬ ಪಾಚಿಯು ಜನ್ಮಜನ್ಮ ದಲ್ಲಿಯೂ ಸ್ವಲ್ಪ ಸ್ವಲ್ಪವಾಗಿ ಅಭಿವೃದ್ಧಿಯಾಗುತ್ತಲೇ ಇರುತ್ತದೆ. ಈ ಆಸೆಯೆಂಬ ಪಾಚಿಯನ್ನು ಹೋಗಲಾಡಿಸುವ ಕ್ರಮ ಹೇಗೆಂಬುದನ್ನು ಈ ಕೆಳಗೆ ವಿಸ್ತಾರವಾಗಿ ಹೇಳಲಾಗಿದೆ.

ಪ್ರತಿದಿನವೂ ಪ್ರಾತಃಕಾಲ ಸ್ನಾನಮಾಡಿ ಮುಗಿಸಿದ ಮೇಲೆ ಈ ಗ್ರಂಥ ದಲ್ಲಿ "**ಶಿವರಾಜಯೋಗ ಸಮಾಧಿಯು ಇದನ್ನು ಜಪಮಾಡುತ್ತ ಬರಬೇಕು**" ಎಂಬ ವಿಷಯಸೂಚಿಕೆಯಲ್ಲಿ ಶಿವ ಮತಸ್ಥರಿಗೂ, ವಿಷ್ಣು

ಮತಸ್ಥರಿಗೂ ಹೇಳಿರುವ ಪ್ರಕಾರ ಆಯಾ ಸ್ಥಳಗಳಲ್ಲಿ ವಿಭೂತಿಯೋ ಇಲ್ಲವೇ ಶ್ರೀ ಚೂರ್ಣವೋ ಇವುಗಳನ್ನಿಟ್ಟು ಮುಗಿಸಿದಮೇಲೆ ಪೂಜೆಯ ಕೋಣೆಗೆ ಹೋಗಿ ಕುಳಿತುಕೊಂಡು ಪ್ರಾತಸ್ಸಾಯಂಕಾಲಗಳಲ್ಲಿಯೂ ಮೇಲೆ ಹೇಳಿದ ವಿಷಯಸೂಚಿಕೆಯಲ್ಲಿ ಹೇಳಿರುವ "ಸೋಽಹಂ" ಮಂತ್ರವನ್ನು ಎಷ್ಟು ಹೊತ್ತಿನವರೆಗೆ ಮಾಡುವುದಕ್ಕೆ ಶಕ್ತಿಯುಂಟೋ ಅಷ್ಟು ಹೊತ್ತಿನವರಿವಿಗೂ ಜಪವನ್ನು ಮಾಡಿ, ಪೂಜಾಗೃಹದಿಂದ ಹೊರಕ್ಕೆ ಬಂದು, ಭೋಜನವನ್ನು ತೀರಿಸಿಕೊಂಡು, ವ್ಯಾಪಾರಕ್ಕೋ, ಕೃಷಿಕೆಲಸಕ್ಕೋ ಅಥವಾ ಇತರ ಉದ್ಯೋಗಕ್ಕೋ ಮನೆಯಿಂದ ಹೊರಹೊರಟು, ನಡೆಯುವಾಗ ಆ ಕಡೆ ಈ ಕಡೆ ತಿರುಗದೆ ಎಡಗೈ ಕಡೆಯ ಭೂಮಿಯ ಕಡೆಗೆ ದೃಷ್ಟಿಯಿಟ್ಟು ನಡೆಯುತ್ತಾ ಹಿಂದೆ ಹೇಳಿದ 'ಸೋಽಹಂ' ಮಂತ್ರವನ್ನು ಶ್ವಾಸದಲ್ಲಿ ಕಲೆಸಿ, ಮೇಲಕ್ಕೆಳೆದು ಜಪವನ್ನು ಮಾಡುತ್ತ ಹೊರಡಬೇಕು. ಹೀಗೆ ನಡೆಸುತ್ತ ಹೊರಟರೆ ಆಗ ನಿಮ್ಮ ಮನಸ್ಸು ಲೋಕವ್ಯವಹಾರಗಳ ಕಡೆಗೆ ತಿರುಗದೆ, 'ಸೋಽಹಂ' ಮಂತ್ರದಲ್ಲಿಯೇ ಕಟ್ಟುಬಿದ್ದು ನಿಂತು ಹೋಗುತ್ತದೆ. ಮಾತಾಡುವಾಗಲೂ, ಕೆಲಸಮಾಡುವಾಗಲೂ, ನಿದ್ರೆ ಮಾಡುವಾಗಲೂ ವಿನಹ ಉಳಿದ ಕಾಲದಲ್ಲೆಲ್ಲಾ ಮೇಲಿನ ಮಂತ್ರವನ್ನು ಶ್ವಾಸದಲ್ಲಿ ಸೇರಿಸಿ ಜಪಮಾಡುತ್ತ ಬಂದದ್ದೇ ಆದರೆ, ಆಗ ಮನಸ್ಸು ಬೇರೆ ಇತರ ಕೋರಿಕೆಗಳನ್ನು ನೆನಸುವುದಕ್ಕೆ ಅವಕಾಶವಿರದು. ಸ್ತ್ರೀ ಪುರುಷರು ತಮ್ಮ ಮರಣಕಾಲದ ವರಿವಿಗೂ ಹೀಗೆ ನಡೆಸುತ್ತ ಬಂದರೆ, ಪ್ರಾಣವನ್ನು ಬಿಡುವಾಗ ಈ 'ಸೋಽಹಂ' ಮಂತ್ರವನ್ನು ಜಪಮಾಡುತ್ತಲೇ ಹೊರಡುವರು. ಹೀಗೆ ಹೊರಟ ಮೇಲೆ ಮರುಜನ್ಮದಲ್ಲಿ ಅವರು ಯೋಗಿಗಳಾಗುವರು. ಆಗ ಅವರಿಗಿರುವ ಅನೇಕವಿಧಗಳಾದ ಆಸೆಗಳೆಲ್ಲವೂ ತಾವಾಗಿಯೇ ದೂರವಾಗುವುವು.

ಕುಂಟೆಯಲ್ಲಿದ್ದ ಪಾಚಿಯನ್ನು ಹೋಗಲಾಡಿಸುವುದಕ್ಕಾಗಿ ನೀರಿನೊಳಕ್ಕೆ ಹೇಗೆ ಎಡೆಬಿಡದೆ ಕಲ್ಲುಗಳನ್ನು ಹಾಕಬೇಕೋ ಹಾಗೆಯೇ, ನಮ್ಮಲ್ಲಿರುವ ಆಸೆಯೆಂಬ ಪಾಚಿಯನ್ನು ಸಂಪೂರ್ಣವಾಗಿ ತೊಲಗಿಸಬೇಕಾದರೆ 'ಸೋಽಹಂ' ಮಂತ್ರವೆಂಬ ಕಲ್ಲುಗಳನ್ನು ಹಗಲಿರುಳೂ ಹಾಕುತ್ತ ಬಂದಲ್ಲಿ ಈ ಆಸೆಯೆಂಬ ಪಾಚಿಯು ದೂರ ಸಾಗಿ ಕಣ್ಮರೆಯಾಗುತ್ತದೆ,

ಅಂದರೆ ಆಸೆಯೆಂಬುದು ಎಳ್ಳಷ್ಟೂ ನಿಲ್ಲದೆ ಕಳೆದುಹೋಗುತ್ತದೆಂದ ಭಾವವು.

ಸಾವಿರವೇತಕ್ಕೆ; ಸ್ತ್ರೀಪುರುಷರಿರಾ! ದಿವಾರಾತ್ರಿಗಳಲ್ಲಿಯೂ ಬಿಡ ಒಂದೇ ಸಮನಾಗಿ ಹತ್ತುದಿವಸಗಳ ಮಾತ್ರವಾದರೂ ಈ 'ಸೋಽಹಂ' ಮಂತ್ರಜಪವನ್ನು ಮಾಡುತ್ತ ಬನ್ನಿರಿ. ಆಗ ಇದರ ಅನುಭವವು ನಿಮಗೇ ಪ್ರತ್ಯಕ್ಷವಾಗಿ ತಿಳಿಯಬರುತ್ತದೆ.

ಇನ್ನು, ಮೇಲೆ ಹೇಳಿದ 'ಸೋಽಹಂ' ಮಂತ್ರವನ್ನು ಜಪಮಾಡುವ ಕ್ರಮವನ್ನು ಹೇಳಲಾಗುವುದು. ಶ್ವಾಸವು ಮೂಗಿನ ಹೊಳ್ಳೆಗಳೊಳಕ್ಕೆ ಹೋಗುವಾಗ ಆ ಶ್ವಾಸದಲ್ಲಿ 'ಸೋ' ಎಂಬುವ ಮಂತ್ರವನ್ನು ಸೇರಿಸಿ ಒಳಕ್ಕೆ ಸೆಳೆದು, ಸ್ವಲ್ಪಹೊತ್ತು ಒಳಗೇ ನಿಲ್ಲಿಸಿ ಪುನಃ ಶ್ವಾಸವನ್ನು ಹೊರಕ್ಕೆ ಬಿಡುವಾಗ ಆ ಶ್ವಾಸದಲ್ಲಿ 'ಽಹಂ' ಮಂತ್ರವನ್ನು ಸೇರಿಸಿ ಬಿಡ ಬೇಕು. ಹಾಗೆ ಬಿಡುವ ಸಮಯದಲ್ಲಿ ನಿಮ್ಮ ಮನಸ್ಸು ಬಾಹ್ಯ ವ್ಯಾಪಾರ ದಲ್ಲಿ ಹೊರಟಿದ್ದೇ ಆದರೆ, ಆಗ ಅದರ ಇಷ್ಟಾನುಸಾರವಾಗಿ ಹೋಗದಂತೆ ತಿರುಗಿಸಿ 'ಸೋಽಹಂ' ಮಂತ್ರವನ್ನೇ ಜಪಮಾಡುವಂತೆ ಮಾಡಬೇಕು. ಹೀಗೆ ನೀವು ಮಾಡಿದ್ದೇ ಆದರೆ, ಲೆಕ್ಕವಿಲ್ಲದಷ್ಟು ವ್ಯರ್ಥವಾದ ಕೋರಿಕೆ ಗಳನ್ನು ದಿನವೂ ನೆನಸುವಂತೆ ನೆನಸದೆ ನಿಂತುಹೋಗುತ್ತದೆ. ಈ 'ಸೋಽಹಂ' ಮಂತ್ರಜಪವು ಒಂದು ಮಹಾರಹಸ್ಯವು. ಅಂತಹ ಶ್ರೇಷ್ಠ ವಾದ ರಹಸ್ಯವನ್ನು ಸ್ತ್ರೀಪುರುಷರ ಉಪಯೋಗಕ್ಕಾಗಿ ಹೊರಗೆಡುವು ತ್ತಿದ್ದೇವೆ. ಆದುದರಿಂದ ಇದನ್ನೇ ಗುರುವಾಕ್ಯೆಂದು ಭಾವಿಸಿ ಪ್ರತಿ ಯೊಬ್ಬ ಸ್ತ್ರೀಪುರುಷರೂ, ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಅಂದರೆ ಜಲಮಲವಿಸರ್ಜನೆಮಾಡುವಾಗಲೂ ಕೂಡ ಈ ಮಂತ್ರವನ್ನು ಜಪ ಮಾಡುತ್ತ ಬರಬೇಕು. ಈ ಜಪಕ್ಕೆ ಮುಟ್ಟು ಅಂಟು ಎಂಬಿವುಗಳು ಇಲ್ಲವೇ ಇಲ್ಲ. ಇನ್ನು ಮುಂದೆ ಪಿಂಡೋತ್ಪತ್ತಿ ವಿಷಯವನ್ನು ವಿಶದ ಪಡಿಸಲಾಗಿದೆ.



# ಪಿಂಡೋತ್ಪತ್ತಿ ಪ್ರಕರಣವು.

---

ಶ್ರುತಿ॥ಷಡ್ವಿಧೋ ರಸಃ ♦ ರಸಾಚ್ಛೋಣಿತಂ ♦ ಶೋಣಿತಾ ನ್ಮಾಂಸಂ ♦ ಮಾಂಸಾನ್ಮೇದೋ ♦ ಮೇದಸ ಸ್ಸ್ನಾಯವಃ ♦ ಸ್ನಾಯುಭ್ಯೋ ಅಸ್ಥೀನಿ ♦ ಅಸ್ಥಿಭ್ಯೋ ಮಜ್ಜಾ ♦ ಮಜ್ಜಾತಃ ಶುಕ್ಲಂ ♦ ಶುಕ್ಲ ಶೋಣಿತ ಸಂಯೋಗಾ ♦ ದಾವರ್ತತೇ ಗರ್ಭಃ ♦ ॥

ಜೀವಿಗಳು ಭುಜಿಸುವ ಅನ್ನವು, ಉಪ್ಪು ಹುಳಿ ಕಾರ ವೊಗರು ಸಿಹಿ ಕಹಿಯೆಂಬ ಆರು ಬಗೆ ರಸವಿಶೇಷಗಳಿಂದ ಕೂಡಿಕೊಂಡಿರುತ್ತದೆ. ಈ ರಸರೂಪವಾದ ಅನ್ನವೇ ರಕ್ತವಾಗಿ ಪರಿಣಮಿಸುತ್ತದೆ. ಈ ರಕ್ತದಿಂದಲೇ ಮಾಂಸವು (flesh) ಬೆಳೆಯುತ್ತದೆ. ಹೀಗೆಯೇ ಈ ಮಾಂಸದಿಂದ ಮೇದಸ್ಸೂ (fat) ಅಂದರೆ ಕೊಬ್ಬೂ, ಕೊಬ್ಬಿನಿಂದ ನರಗಳೂ, (nerve system) ನರಗಳಿಂದ ಎಲುಬುಗಳೂ, (bones) ಎಲುಬುಗಳಿಂದ ಮಜ್ಜವೂ, (marrow of the bones) ಆ ಮಜ್ಜದಿಂದ ಪುರುಷರಿಗೆ ಬಿಳುಪಾದ ಶುಕ್ಲ ಅಂದರೆ ವೀರ್ಯ (Semen Vinile) ವೂ, ಸ್ತ್ರೀಯರಿಗೆ ಕೆಂಪು ಬಣ್ಣವುಳ್ಳ ಶೋಣಿತವೂ ಆಗುತ್ತದೆ. ಸ್ತ್ರೀ ಪುರುಷರು ಕೂಡಿದಾಗ ಪುರುಷನ ಶುಕ್ಲವೂ ಸ್ತ್ರೀಯ ಶೋಣಿತವೂ ಇವೆರಡೂ ಒಂದಾಗಿ ಸೇರಿ, ಸ್ತ್ರೀಯ ಗರ್ಭಕೋಶವನ್ನು ಪ್ರವೇಶಿಸಿದ್ದೇ ಆದರೆ ಗರ್ಭವಾಗಿ ಪರಿಣಮಿಸುತ್ತದೆ. ಹೀಗೆ ಶುಕ್ಲಶೋಣಿತಗಳು ಸೇರದಿದ್ದಲ್ಲಿ ಅಂದರೆ ಇವೆರಡೂ ಒಂದೇ ಕಾಲದಲ್ಲಿ ಹುಟ್ಟದೆ ಹಿಂದು ಮುಂದಾಗಿ ಹುಟ್ಟಿದರೆ ಅವೆರಡೂ ಕಲೆಯದೆ ಗರ್ಭೋತ್ಪತ್ತಿಗೆ ಅವಕಾಶ ದೊರೆಯಲಾರದು. ಸಂತಾನವನ್ನು ಬಯಸುವವರು ಈ ಕೆಳಗೆ ಹೇಳಿದ ಉಪಾಯವನ್ನು ಮಾಡಿದ್ದೇ ಆದರೆ, ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಬಹುದು. ಒಟ್ಟಿನಲ್ಲಿ ಪ್ರಾರಬ್ಧ ಕರ್ಮದ ಬಲಿಯವಿದ್ದದ್ದೇ ಆದರೆ ಸಂತಾನವನ್ನು ಹೊಂದೇ ಹೊಂದುವರು. ಅದು ಇಲ್ಲವಾದರೆ ಎಂದಿಗೂ ಸಂತಾನವು ಜನಿಸದು. ಆದರೂ ಪ್ರಯತ್ನದಿಂದ ಗರ್ಭಧಾರಣೆಯು ಆಗಬಹುದಾದ ರೀತಿಯು ಈ ಕೆಳಗೆ ವಿವರಿಸಿದೆ.

ಸತಿಪತಿಗಳು ಸಂಭೋಗ ಸುಖವನ್ನು ಅನುಭವಿಸುತ್ತಿರುವ ಕಾಲದಲ್ಲಿ ಪತಿಯು ತನ್ನ ಹೆಂಡತಿಯೊಡನೆ ಆಕೆಗೆ ಶೋಣಿತವುತ್ಪನ್ನವಾಗುವ ಕಾಲದಲ್ಲಿ ಅಂದರೆ, ಈ ಕರ್ಮಫಲವಾಗಿ ಅತ್ಯಂತ ಸುಖದಿಂದ ಮೈ ಮರೆತ ಕ್ಷಣದಲ್ಲಿ, 'ಎಚ್ಚರಿಕೆ, ಇದು ಸುಸಮಯ' ಎಂದು ತನ್ನೊಡನೆ ತಿಳಿಸುವಂತೆ ಮೊದಲೇ ಹೇಳಿರಬೇಕು. ಇದೂ ಅಲ್ಲದೆ ಆತನು ಸಂಭೋಗ ಸುಖವನ್ನನುಭವಿಸುವ ಕಾಲದಲ್ಲಿ ತನ್ನ ಮನಸ್ಸನ್ನು ಈ ಯೋಚನೆಯಲ್ಲಿಡದೆ ಬೇರೆ ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡಿರಬೇಕು. ಈ ರೀತಿಯಾಗಿ ಬೇರೆ ವಿಷಯಗಳಲ್ಲಿ ಮನಸ್ಸನ್ನು ಲೀನಮಾಡಿದ್ದರೆ ಶುಕ್ಲವು ಎಷ್ಟು ಹೊತ್ತಿಗೂ ಈಚೆಗೆ ಬರದಂತೆ ನಿಂತಿರುತ್ತದೆ. ಹೀಗಿರುವ ಸಮಯದಲ್ಲಿ ಸತಿಯಾದವಳು ತನಗೆ ಶೋಣಿತವು ಹುಟ್ಟಿದ ಸುಳಿವನ್ನರಿತು, ಮೇಲೆ ಹೇಳಿದಂತೆ 'ಎಚ್ಚರಿಕೆ' ಎಂದು ಪತಿಯೊಡನೆ ಏಕಾಂತದಲ್ಲಿ ತಿಳಿಸಿದ್ದೇ ಆದರೆ, ಆತನು ಬೇರೆ ವಿಷಯಗಳಲ್ಲಿ ನೆಲೆಸಿರುವ ತನ್ನ ಮನಸ್ಸನ್ನು ತಕ್ಷಣವೇ ಸಂಭೋಗದ ಕಡೆಗೆ ತಿರುಗಿಸಿ ಯೋನಿದ್ವಾರವನ್ನು ನೆನೆಸಿದ ತಕ್ಷಣವೇ ಶುಕ್ಲವು ಅತಿ ಶೀಘ್ರವಾಗಿ ಹುಟ್ಟಿ ಹಿಂದೆ ಹೇಳಿದಂತೆ ಸತಿಯ ಶೋಣಿತದೊಡಗೂಡಿ ಗರ್ಭಗೃಹವನ್ನು ಪ್ರವೇಶಿಸಿ ಮುಂದೆ ಹುಟ್ಟುವ ಶಿಶುವಿಗೆ ಬೀಜರೂಪವಾಗಿ ನಿಲ್ಲುತ್ತದೆ. ಈ ಶುಕ್ಲಶೋಣಿತದ ಸಂಯೋಗದಿಂದ ಪಿಂಡೋತ್ಪತ್ತಿಯು ಯಾವ ರೀತಿಯಲ್ಲಿ ಆಗುತ್ತದೆ ಎಂಬ ವಿಷಯವನ್ನು ಈ ಮುಂದೆ ವಿಶದಪಡಿಸಿದೆ.

ಗಂಡಹೆಂಡಿರಿಬ್ಬರೂ ಸಂಭೋಗಿಸುತ್ತಿರುವ ಸಮಯದಲ್ಲಿ ಅವರು ಯಾವ ದುಃಖವನ್ನೂ, ಯಾವ ಸಂಸಾರ ಚಿಂತೆಯನ್ನೂ ಮನದಲ್ಲಿಡದೆ, ಬಹು ಸಂತೋಷದಿಂದ ಕಾಮೇಚ್ಛೆಯುಳ್ಳವರಾಗಿ ಜೊತೆಸೇರಿ ಮನ್ಮಥ ಕ್ರೀಡೆಗಳನ್ನು ಮಾಡುತ್ತಿರಬೇಕು. ಇಂತಹರಿಗೆ ಸತ್ಸಂತಾನವು ದೊರಕುವುದು. ಹೀಗೆ ಸಂತೋಷವನ್ನು ಬಿಟ್ಟು ಭಾರ್ಯಾಭರ್ತರು ಒಬ್ಬರ ವಿಷಯದಲ್ಲಿ ಮತ್ತೊಬ್ಬರು ಪ್ರೀತಿಯನ್ನಿಡದೆ ಕಳವಳದಿಂದ ಕೂಡಿದವರಾಗಿ ಮನೋನ್ಯೈರ್ಮಲ್ಯವನ್ನು ಬಿಟ್ಟು ಸಂಭೋಗಿಸಿದ್ದೇ ಆದರೆ ಅಂತಹರಿಗೆ ಅವರ ಮನೋಸ್ಥಿತಿಗೆ ತಕ್ಕಂಥ ಮಕ್ಕಳು ಹುಟ್ಟುವರು. ಇದಕ್ಕೆ ಶ್ರುತಿಪ್ರಮಾಣವೇನೆಂದರೆ:—

ಶ್ರುತಿ ॥ " ವೃತ್ಯನುಗುಣಾ ಹಿ ಪ್ರವೃತ್ತಿಃ ♦ ತಥಾಹಿ ನಿರ್ಮಲಮನೋಭ್ಯಸ್ಸು ಗುಣಾಃ ♦ ಪಿತ್ರನುಗುಣಾಃ ಪ್ರಜಾಃ ♦ ವ್ಯಾಕುಲಿತ ಮನೋಭ್ಯಃ ಮಂದಾಃ ಖಂಜಾಃ ಕುಬ್ಜಾಃ ವಾಮನಾಃ ವ್ಯಂಗ್ಯಾ ಜಾಯಂತೇ " ♦ ಇತಿ.

ಮನೋವೃತ್ತಿಯನ್ನನುಸರಿಸಿ ಗುಣಗಳುಂಟಾಗುತ್ತವೆ. ಅಂದರೆ ಕಾರಣಗಳಿಗೆ ತಕ್ಕಂತೆ ಕಾರ್ಯವುಂಟಾಗುತ್ತದೆ. ಆದುದರಿಂದ ಗರ್ಭೋತ್ಪತ್ತಿಯಾಗುವ ಕಾಲದಲ್ಲಿ ತಾಯಿತಂದೆಗಳು ಯಾವ ಚಿತ್ತವೃತ್ತಿಯಿಂದಿರುವರೋ ಅದಕ್ಕನುಗುಣವಾದ ಮಕ್ಕಳು ಹುಟ್ಟುತ್ತಾರೆ. ಅಂದರೆ ತಂದೆತಾಯಿಗಳು ಮನಸ್ಸನ್ನು ನಿರ್ಮಲವಾದ ಅಂದರೆ ಒಳ್ಳೆಯ ವಿಷಯಗಳನ್ನೇ ನೆನಸುತ್ತ ಇದ್ದಲ್ಲಿ ಯೋಗ್ಯರಾದ ಮಕ್ಕಳು ಹುಟ್ಟುವರು. ಹಾಗಿಲ್ಲದೆ ಮನಸ್ಸನ್ನು ಚಿಂತೆಯಲ್ಲಿ ಮುಳುಗಿಸಿ ದುಷ್ಟ ವಿಷಯಗಳನ್ನು ನೆನೆಸುತ್ತಿದ್ದಲ್ಲಿ ಶಿಶುಗಳ ಪೂರ್ವಜನ್ಮ ಕರ್ಮಫಲಕ್ಕೆ ತಕ್ಕಂತೆ ಕುಂಟೋ, ಕುರುಡೋ, ಗೂನೋ, ಕುಳ್ಳೋ ಅಥವಾ ಇನ್ನಾವ ಅಂಗಹೀನತೆಯೋ ಉಂಟಾಗಿ ಹುಟ್ಟುವುವು. ಮನಸ್ಸಿನ ಸ್ಥಿತಿಯು ಸಾಧಾರಣವಾಗಿ ಸನ್ನಿವೇಶಗಳಿಂದ ಮಾರ್ಪಡುವುದಾದುದರಿಂದ ಸ್ತ್ರೀಪುರುಷರು ತಾವು ರತಿಸುಖವನ್ನನುಭವಿಸುವ ಮಲಗುವ ಕೊಠಡಿಯನ್ನು ಮನಸ್ಸಿಗೆ ಸಂತೋಷವನ್ನುಂಟುಮಾಡುವ ಅಂದರೆ, ಸುಂದರವಾದ ಮತ್ತು ಯೋಗ್ಯವಾದ ಚಿತ್ರಪಠಗಳಿಂದ ಅಲಂಕರಿಸಬೇಕು. ಹೀಗೆ ಅಲಂಕರಿಸಲ್ಪಟ್ಟ ಕೇಳಿಗೃಹದಲ್ಲಿ ಸತಿಯಾದವಳು ಸಂತೋಷವಾದ ಮನಸ್ಸಿನಿಂದ ತನ್ನೆದುರು ಭಾಗದಲ್ಲಿ ಕಾಣ್ಬರುವ ಅಂದವಾದ ಚಿತ್ರಪಠವನ್ನು ದೃಷ್ಟಿಸಿ ನೋಡುತ್ತಿದ್ದುದೇ ಆದರೆ, ಒಂದುವೇಳೆ ಅದೃಷ್ಟವಶಾತ್ ಗರ್ಭವು ನಿಂತು ಶಿಶುವು ಜನಿಸಿತೆಂದರೆ ಅದು ಸುಂದರವಾಗಿಯೂ, ಸದ್ಗುಣಗಳಿಂದ ಕೂಡಿದುದಾಗಿಯೂ, ಆರೋಗಧೃಢಕಾಯವಾಗಿಯೂ ಇರುವುದು. ಹಾಗಿಲ್ಲದೆ ಮೇಲೆ ಹೇಳಿದವುಗಳಿಗೆ ವ್ಯತ್ಯಸ್ತವಾಗಿ ನಡೆಸಿದರೆ ಅದಕ್ಕೆ ತಕ್ಕ ಶಿಶುಗಳೂ ಹುಟ್ಟುವುವು. ಇದು ಸ್ತ್ರೀಪುರುಷರು ಚನ್ನಾಗಿ ಗಮನವಿಡಬೇಕಾದ ವಿಷಯ.

ಇದೂ ಅಲ್ಲದೆ, ಸ್ತ್ರೀಯರು ಬಹಿಷ್ಠೆಯಾದ ನಾಲ್ಕನೇ ದಿನ ಬೆಳಿಗ್ಗೆ ಮಂಗಳಸ್ನಾನವನ್ನು ಮಾಡಿದ ತಕ್ಷಣವೇ ಯಾರ ಮುಖವನ್ನೂ ನೋಡದೆ

ಸೂರ್ಯ ದರ್ಶನವನ್ನು ಮಾಡಬೇಕೆಂಬುದಾಗಿ ನಮ್ಮ ಪೂರ್ವಿಕರಾದ ದೊಡ್ಡವರು ಹೇಳಿರುತ್ತಾರೆ. ಇದರ ರಹಸ್ಯಾರ್ಥವೇನೆಂದರೆ, ಸ್ನಾನ ಮಾಡಿದ ತಕ್ಷಣವೇ ಸೂರ್ಯದರ್ಶನವನ್ನು ಮಾಡಿದವರಿಗೆ ಒಂದು ವೇಳೆ ಗರ್ಭವು ನಿಂತಿದ್ದೇ ಆದರೆ ಸೂರ್ಯನಂತೆ ಪ್ರಕಾಶಮಾನವಾದ ಶಿಶುವು ಹುಟ್ಟುತ್ತದೆ ಎಂಬುವುದು ದೊಡ್ಡವರ ಅಭಿಪ್ರಾಯ. ಆದರೆ ಇದುವರಿವಿಗೂ ಈ ರಹಸ್ಯವು ಯಾರಿಗೆ ತಿಳಿಯದೆ ಮರೆಯಾಗಿತ್ತು. ಆದುದರಿಂದಲೇ ಈಗ ಇದರ ಒಳಗುಟ್ಟನ್ನು ಈ ಗ್ರಂಥದಲ್ಲಿ ಹೊರಪಡಿಸಿದೆ. ಇದನ್ನು ತಿಳಿದು ಇನ್ನು ಮೇಲೆ ಸ್ತ್ರೀಯರೆಲ್ಲರೂ ಪ್ರತಿ ತಿಂಗಳಲ್ಲಿಯೂ ತಾವು ಬಹಿಷ್ಠೆಯರಾಗಿ ನಾಲ್ಕನೆಯ ದಿನ ಮಂಗಳಸ್ನಾನವನ್ನು ಮಾಡಿದೊಡನೆಯೇ ಪ್ರಾತಃಕಾಲದಲ್ಲಿ ಯಾರನ್ನೂ ನೋಡುವುದಕ್ಕೆ ಮುಂಚೆ ಮರೆಯದೆ ಸೂರ್ಯದರ್ಶನವನ್ನು ಮಾಡಬೇಕು. ಆ ದಿನ ಮೊದಲುಗೊಂಡು ಋತು ದಿನಗಳು ಕಳೆಯುವವರಿವಿಗೂ ಅಂದರೆ ಬಹಿಷ್ಠೆಯಾದಂದಿನಿಂದ ಹದಿನಾರನೆಯ ದಿನದವರಿವಿಗೂ ನಿರ್ಮಲವಾದ ಮನಸ್ಸಿನಿಂದಿದ್ದು ಪತಿಯ ಮನಸ್ಸನ್ನು ಸಂತೋಷಪಡಿಸುತ್ತ ಹಿಂದೆ ಹೇಳಿದಂತೆ ಸುಂದರವಾದ ಚಿತ್ರಪಠಗಳಿಂದಲಂಕೃತವಾದ ಮಲಗುವ ಕೊಠಡಿಗಳಲ್ಲಿ ರಾತ್ರಿಯ ವೇಳೆ ರತಿಕೇಳಿಗೆಡೆಗೊಟ್ಟಿದ್ದೇ ಆದರೆ ಸತ್ಸಂತಾನಕ್ಕೆ ಮೂಲಕಾರಣವಾದ ಗರ್ಭವನ್ನು ಹೊಂದಬಹುದು. ಸ್ತ್ರೀಯರು ತಾವು ಗರ್ಭವನ್ನು ಪಡೆವಾಗ ಉತ್ತಮವಾದ ವಸ್ತುಗಳ ಕಡೆ ಗಮನವಿಟ್ಟಿದ್ದೇ ಆದರೆ ಸುಂದರವಾದ ಮಕ್ಕಳನ್ನೇ ಪಡೆಯುತ್ತಾರೆಂಬ ಸಿದ್ಧಾಂತವು ಶಾಸ್ತ್ರಾಧಾರವಾದದ್ದು. ಇದಕ್ಕೆ ದೃಷ್ಟಾಂತಗಳು ಅನೇಕವಿವೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಈ ಕೆಳಗೆ ಕೊಟ್ಟಿವೆ.

ಒಳ್ಳೆಯ ಕುದುರೆಯ ತಳಿಗಳನ್ನು ಹೊಂದಲಿಚ್ಛಿಸುವ ಹೆಣ್ಣು ಕುದುರೆಯ ಮಾಲಿಕರು ಉತ್ತಮವಾದ ಗಂಡು ಕುದುರೆಗಳನ್ನು ಹಾರಿಸದೆಯೇ ಈ ಮುಂದೆ ಹೇಳುವ ಪದ್ಧತಿಯನ್ನನುಸರಿಸುವುದುಂಟು. ಹೆಣ್ಣು ಕುದುರೆಯು ಬೆದೆಯಾದ ಕಾಲದಲ್ಲಿ ಒಂದು ಗಿಡಕ್ಕೆ ಅದನ್ನು ಕಟ್ಟಿಹಾಕಿ ಸುಂದರವಾದ ಒಂದು ಗಂಡು ಕುದುರೆಯನ್ನು ಅದರ ಮುಂದೆ ನಿಲ್ಲಿಸುತ್ತಾರೆ. ಅದನ್ನು ನೋಡಿದ ತಕ್ಷಣವೇ ಹೆಣ್ಣಿಗೆ ಗಂಡಿನ ಮೇಲೆ ಆಸೆ

ಹುಟ್ಟಿ ಅದರೊಡನೆ ಬೆರೆಯುವುದಕ್ಕೆ ಇಚ್ಛಿಸುತ್ತದೆ. ಈ ಸುಳಿವನ್ನು ತಿಳಿದು ಹೆಣ್ಣು ಕುದುರೆಗೆ ಕಣ್ಣು ಕಟ್ಟಿ, ಗಂಡು ಕುದುರೆಯನ್ನು ಮರೆಯಾಗಿ ತೆಗೆದುಕೊಂಡು ಹೋಗಿ ಹೆಣ್ಣಿಗೆ ತಿಳಿಯದಂತೆ ಮತ್ತೊಂದು ಸಾಧಾರಣವಾದ ಗಂಡು ಕುದುರೆಯನ್ನು ಅದರ ಮೇಲೆ ಹಾರಿಸುತ್ತಾರೆ. ಆ ಹೆಣ್ಣು ಕುದುರೆಯು ತಾನು ನೋಡಿದ ಗಂಡು ಕುದುರೆಯೇ ತನ್ನನ್ನು ಕಲೆತಿದೆ ಎಂಬುದಾಗಿ ತಿಳಿದು ಸಂತೋಷದಿಂದ ಮೈಮರೆತಿರುವ ಕಾಲದಲ್ಲಿ ಮರೆಯಾಗಿದ್ದ ಗಂಡು ಕುದುರೆಯನ್ನು ತಂದು ಅದರೆದುರಿಗೆ ನಿಲ್ಲಿಸಿ ಕಣ್ಣಿನ ಕಟ್ಟನ್ನು ಬಿಚ್ಚುತ್ತಾರೆ. ಬಹು ಸಂತೋಷದಿಂದ ಹೆಣ್ಣು, ಗಂಡಿನ ಕಡೆಗೆ ದೃಷ್ಟಿಸಿ ನೋಡಿದ ಕಾಲದಲ್ಲಿ ಅದಕ್ಕೆ ಗಬ್ಬವುಂಟಾಗಿ ಮುಂದೆ ಹುಟ್ಟುವ ಕುದುರೆಯ ಮರಿಯು ಆ ಗಂಡು ಕುದುರೆಯನ್ನೇ ಹೋಲುತ್ತದೆ. ಮೈಸೂರು ದೇಶದ ಕುಣಿಗಲ್ ತಾಲ್ಲೂಕಿನಲ್ಲಿರುವ ಅಶ್ವವರ್ಧಕ ಶಾಲೆ (Stud farm) ಯಲ್ಲಿ ಒಳ್ಳೆಯ ತಳಿಗಳನ್ನು ಪಡೆಯುವುದಕ್ಕಾಗಿ ಈ ಕೆಳಗೆ ಹೇಳುವಂತೆ ಮಾಡುತ್ತಾರೆ. ಹೆಣ್ಣು ಕುದುರೆಯು ಬೆದೆಗೆ ಬಂದಾಗ ಒಂದು ಕೋಣೆಯಲ್ಲಿ ಅದನ್ನು ಕಟ್ಟಿಹಾಕಿ, ಅದು ಹಿಂದಿರುಗಿ ನೋಡುವುದಕ್ಕೆ ಅವಕಾಶವಿಲ್ಲದಂತೆ ಮಾಡಿ ಒಂದು ಗಂಡು ಹೇಸರಕತ್ತೆಯನ್ನು ಅದರ ಮೇಲೆ ಹಾರಿಸುತ್ತಾರೆ. ಹಿಂದೆ ಹೇಳಿದಂತೆ ಆ ಹೆಣ್ಣು ಕುದುರೆಯು ಮೈಮರೆತಿರುವ ಕಾಲದಲ್ಲಿ ಅದರ ಮುಂಭಾಗದಲ್ಲಿರುವ ಕಿಟಕಿಗೆ ಸರಿಯಾಗಿ ಒಂದು ಸುಂದರವಾದ ಗಂಡು ಕುದುರೆಯನ್ನು ತಂದು ನಿಲ್ಲಿಸುತ್ತಾರೆ. ಇಲ್ಲವೇ ಒಂದು ಕನ್ನಡಿಯನ್ನು ಆ ಹೆಣ್ಣು ಕುದುರೆಯ ಮುಂದೆ ಹಿಡಿಯುತ್ತಾರೆ. ಆಗ ಅದು ತನ್ನ ಮನಸ್ಸಿನಲ್ಲಿ ಆ ಗಂಡು ಕುದುರೆಯ ರೂಪವನ್ನೋ ಅಥವಾ ತನ್ನ ಪ್ರತಿಬಿಂಬವನ್ನೋ ನೆನೆಸುತ್ತದೆ. ಅದರಿಂದ ಗಬ್ಬವುಂಟಾದಾಗ ಆ ಗಂಡು ಕುದುರೆಯಂತಹ ಅಥವಾ ತನಗೆ ಸರಿಯಾದ ಮರಿಯನ್ನು ಕೊಡುತ್ತದೆ. ಹೆಣ್ಣು ಕುದುರೆಯ ಮೇಲೆ ಹಾರಿಸುವ ಸಲುವಾಗಿ ಶ್ರೇಷ್ಠವಾದ ಬೀಜದ ಕುದುರೆಗಳನ್ನು ಇಟ್ಟಿದ್ದೇ ಆದರೆ ಕೆಲವು ದಿನಗಳೊಳಗಾಗಿ ಆ ಗಂಡು ಕುದುರೆಗಳು ಕೆಟ್ಟುಹೋಗುತ್ತವೆಯೆಂಬುದು ಅನುಭವಸಿದ್ಧವಾದದ್ದು. ಆದುದರಿಂದಲೇ ಈ ಉಪಾಯವನ್ನು ಅಶ್ವವರ್ಧಕ ಶಾಲೆಯಲ್ಲಿ ಅನುಸರಿ

ಸುತ್ತಿದ್ದಾರೆ. ಮೇಲಿನ ದೃಷ್ಟಾಂತ ವಿವರಣೆಯು, ಹೆಣ್ಣು ಕುದುರೆಯು ಗಬ್ಬವಾಗುವ ಕಾಲದಲ್ಲಿ ಕಣ್ಣಿನಿಂದ ನೋಡಿ ಮನಸ್ಸಿನಲ್ಲಿ ಯಾವುದನ್ನು ಸ್ಮರಿಸುತ್ತದೆಯೋ, ಅಂತಹ ಮರಿಯನ್ನೇ ಹಾಕುತ್ತದೆಯೆಂಬ ವಿಷಯವನ್ನು ಒತ್ತಿ ಹೇಳುವುದಕ್ಕಾಗಿಯೇ ಹೊರತು ಬೇರಲ್ಲ. ಈ ವರ್ತನೆಯು ಜೀವಿಕೋಟಿಗಳ ಪ್ರತಿಜಾತಿ ಗಂಡು ಹೆಣ್ಣಿಗೂ ಇರುವಂಥದು. ಮಾನವ ವರ್ಗದಲ್ಲಿಯೂ ಸ್ತ್ರೀಪುರುಷರ ಸಂಯೋಗವಾಗುವ ಸಮಯದಲ್ಲಿ ಸ್ತ್ರೀಯ ಮನಸ್ಸಿಗೆ ತಕ್ಕಂತೆ ಶಿಶು ಜನ್ಮವಾಗುತ್ತದೆಯೆಂಬ ವಿಷಯವನ್ನು ಪ್ರತ್ಯಕ್ಷ ಪ್ರಮಾಣವಾಗಿ ಈ ಕೆಳಗಿನ ದೃಷ್ಟಾಂತವಾಗಿ ಕೊಟ್ಟಿದೆ.

ಇಂಜನಿಯರ್ ಉದ್ಯೋಗದಲ್ಲಿದ್ದ ಒಬ್ಬಾನೊಬ್ಬ ಪಾಶ್ಚಾತ್ಯ ದೇಶಸ್ಥನಾದ ಬಿಳಿಯ ದೊರೆಯು ತನ್ನ ಹೆಂಡತಿಯೊಡನೆ ಏಕಾಂತದಲ್ಲಿರುವ ಸಮಯದಲ್ಲಿ ಆಕೆಯು ತಾವು ಮಲಗಿರುವ ಕೊಠಡಿಯಲ್ಲಿ ತನಗೆದುರು ಭಾಗದಲ್ಲಿ ಗೋಡೆಗೆ ನೇತುಹಾಕಿರುವ ಒಬ್ಬ ನೀಗ್ರೋ ಮನುಷ್ಯನ ಚಿತ್ರಪಠವನ್ನೇ ದೃಷ್ಟಿಸಿ ನೋಡುತ್ತ ಮನಸ್ಸಿನಲ್ಲಿ ಅದನ್ನೇ ನೆನೆಸುತ್ತಿದ್ದಳು. ಆ ಪಠದಲ್ಲಿದ್ದ ಮನುಷ್ಯನಿಗಾದರೋ ಕಾಡಿಗೆಯಂತೆ ಕಪ್ಪು ದೇಹ, ಉಂಗುರಗಳಂತೆ ಸುತ್ತಿಕೊಂಡಿರುವ ಒರಟು ಕೂದಲುಗಳಿಂದ ಕೂಡಿದ ತಲೆ, ಸೊಟ್ಟ ಮೂಗು ಮತ್ತು ವಿಕಾರವಾದ ಇತರ ಅಂಗಗಳು. ಇಂತಹ ಚಿತ್ರದ ಕಡೆಗೆ ಆಕೆಯು ದೃಷ್ಟಿಸಿದ್ದ ಕಾಲದಲ್ಲಿಯೇ ಆಕೆಗೆ ಗರ್ಭವೂ ಉಂಟಾಯಿತು. ಇದರ ಸಲುವಾಗಿ ಆಕೆಗೆ ನವಮಾಸ ತುಂಬಿದ ಮೇಲೆ ಹುಟ್ಟಿದ ಮಗುವೂ ಕೂಡ ಆ ಚಿತ್ರಪಠದಲ್ಲಿ ಕಾಣುತ್ತಿದ್ದ ಮನುಷ್ಯನನ್ನು ಹೋಲಿತು. ಇಂತಹ ನೀಗ್ರೋ ರೂಪಿಯಾದ ಶಿಶುವು ಹುಟ್ಟಿದ್ದನ್ನು ನೋಡಿ ಆಕೆಯ ಪತಿಯು, “ಈರೀತಿಯಾದ ಶಿಶುವು ನನ್ನ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟುವುದಕ್ಕೆ ಕಾರಣವೇನು? ಆಕೆಯು ಒಬ್ಬ ನೀಗ್ರೋ ಜಾತಿಯವನನ್ನೇ ಕೂಡಿರಬೇಕು” ಎಂದಾಲೋಚಿಸಿ, ತನ್ನ ಹೆಂಡತಿಯ ವಿಷಯದಲ್ಲಿ ಬಹಳವಾಗಿ ಮನಸ್ಸಿನಲ್ಲಿ ಕುದಿಯುತ್ತ ಏನು ಮಾಡಲೂ ತೋಚದೆ ಸುಮ್ಮನೆ ಇದ್ದನು. ಹೀಗೇ ಇರಲು ಅವನ ಮನಸ್ಸಿಗೆ ಒಂದು ಯೋಚನೆ ಹೊಳೆಯಿತು. ಅದೇನೆಂದರೆ: ಆತನಿಗೆ ಮುಖ್ಯ ಸ್ನೇಹಿತನಾದ ಒಬ್ಬ ದೊಡ್ಡ ಮನುಷ್ಯನು ದೊಡ್ಡ ವೈದ್ಯ (doctor) ನಾಗಿದ್ದನು. ಆತನ

ಸಮೀಪಕ್ಕೆ ಹೋಗಿ ಇಂತಹ ವಿಲಕ್ಷಣವಾದ ಮಗುವು ತನ್ನ ಹೆಂಡತಿಯ ಗರ್ಭದಲ್ಲಿ ಜನಿಸಿರುವ ವಿಷಯವನ್ನೂ ತನಗೆ ಆಕೆಯಲ್ಲುಂಟಾದ ಸಂಶಯವನ್ನೂ ವಿಶದವಾಗಿ ತಿಳಿಸಿದನು. ಆಗ ಆ ಡಾಕ್ಟರಿಗೆ ಇಂತಹ ಅನುಮಾನಕ್ಕೆ ಆಸ್ಪದವಿದೆಯೇ ಇಲ್ಲವೇ ಎಂಬ ಯೋಚನೆ ಹುಟ್ಟಿತು. ಸ್ವಲ್ಪ ಹೊತ್ತು ಯಾವ ಯೋಚನೆಯೂ ಮನಸ್ಸಿಗೆ ಹೊಳೆಯಲಿಲ್ಲ. ಕಡೆಗೆ ಏನನ್ನೋ ಯೋಚಿಸಿ ಆ ಡಾಕ್ಟರು "ಎಲ್ಲಿ ನಿನ್ನ ಮಲಗುವ ಮನೆಯನ್ನು ತೋರಿಸು ನೋಡುವ," ಎಂಬುದಾಗಿ ತನ್ನ ಸ್ನೇಹಿತನನ್ನು ಕೇಳಿದನು. ಇಬ್ಬರೂ ಅಲ್ಲಿಗೆ ಹೋದರು. ಮಲಗುವ ಕೋಣೆಯನ್ನು ನೋಡಿ ಚನ್ನಾಗಿ ಪರೀಕ್ಷಿಸಿ, 'ನೀವು ಯಾವ ಕಡೆ ಮುಖವನ್ನು ಮಾಡಿಕೊಂಡು ಮಲಗುವ ಪದ್ಧತಿ?' ಎಂದು ಡಾಕ್ಟರ್ ಇಂಜನಿಯರನ್ನು ಕೇಳಲು, ಆತನು 'ಇಗೋ ನಾವು ತಲೆಯಿಟ್ಟು ಮಲಗುವುದು ಹೀಗೆ' ಎಂದು ತೋರಿಸಿದನು. ಆಗ ಆ ಡಾಕ್ಟರು ಅವರ ಮುಖಕ್ಕೆದುರು ಗೋಡೆಯಲ್ಲಿ ನೇತುಹಾಕಿದ್ದ ವಿಕಾರರೂಪದಿಂದಿರುವ ಆ ನೀಗ್ರೋ ಮನುಷ್ಯನ ಚಿತ್ರಪಠವನ್ನು ನೋಡಿ ಅದನ್ನು ತನ್ನ ಕೈಗೆ ತೆಗೆದುಕೊಂಡು ಮನೆಯ ಯಜಮಾನನಿಗೆ ತೋರಿಸಿ ಆತನ ಆ ಶಿಶುವನ್ನು ತನ್ನ ಬಳಿಗೆ ಕರೆತರುವಂತೆ ಹೇಳಿದನು. ಆಗ ಆ ಚಿತ್ರಪಠದಲ್ಲಿರುವುದಕ್ಕೂ ಆ ಶಿಶುವಿನ ರೂಪಕ್ಕೂ ಪ್ರತಿಯೊಂದು ಅವಯವದಲ್ಲಿಯೂ ಹೋಲಿಕೆಯನ್ನು ತೋರಿಸಿ ಸ್ವಲ್ಪವೂ ವ್ಯತ್ಯಾಸವಿಲ್ಲದಿರುವುದನ್ನು ಕಂಡು, ಆ ಡಾಕ್ಟರು ಮನೆಯ ಯಜಮಾನನನ್ನು ಕುರಿತು ಹೀಗೆ ಹೇಳುತ್ತಾನೆ: "ಈ ಚಿತ್ರಕ್ಕೂ ನಿಮ್ಮ ಶಿಶುವಿಗೂ ಹೋಲಿಕೆಗಳಿರುವುದಕ್ಕೆ ಕಾರಣವೇನೆಂದರೆ, ನೀವಿಬ್ಬರೂ ರತಿ ಕೇಳಿಯಲ್ಲಿದ್ದ ಸಮಯದಲ್ಲಿ ನಿನ್ನ ಭಾರ್ಯೆಯು ತನಗೆದುರು ಭಾಗದಲ್ಲಿ ಕಾಣ್ಬರುತ್ತಿದ್ದ ಈ ಚಿತ್ರಪಠವನ್ನೇ ದೃಷ್ಟಿಸುತ್ತಿರಬೇಕು. ಆಗಲೇ ಗರ್ಭೋತ್ಪತ್ತಿಯಾಗಿರಬೇಕು. ಹಾಗಿಲ್ಲದೆ ಇಂತಹ ವಿಲಕ್ಷಣವಾದ ಶಿಶುವು ಸುಂದರಿಯಾದ ನಿನ್ನ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟುವುದಕ್ಕೆ ಕಾರಣವಿಲ್ಲ. ನಿಜಸ್ಥಿತಿಯು ಹೀಗಿರುವುದರಿಂದ ನಿನ್ನ ಹೆಂಡತಿಯು ಯಾವ ದೋಷಕ್ಕೂ ಭಾಗಿಯಲ್ಲ ಮತ್ತು ನಿನ್ನ ಸಂಶಯಕ್ಕೆ ಅವಕಾಶವಿಲ್ಲ," ಎಂದು ಹೇಳಿ ಆತನನ್ನು ಸಮಾಧಾನಪಡಿಸಿ ಹೊರಟುಹೋದನು.

ಆದುದರಿಂದ, ಓ ಸಹೋದರ ಸಹೋದರಿಯರೇ! ನೀವು ಮಲ ಗುವ ಕೋಣೆಯಲ್ಲಿ ಸುಂದರವಾದ ಪಠಗಳನ್ನೇ ಇಟ್ಟು ಬಹು ಸಂತೋಷ ವಾದ ಮನಸ್ಸಿನಿಂದ ಸಂಭೋಗ ಸುಖವನ್ನು ಅನುಭವಿಸಿದಿರಾದರೆ, ಅದರ ಫಲವಾಗಿ ನಿಮ್ಮ ಹೊಟ್ಟೆಯಲ್ಲಿ ಹುಟ್ಟುವ ಶಿಶುಗಳು ಸುಂದರರಾದ ಮತ್ತು ಮುಂದೆ ಬೆಳೆದು ದೊಡ್ಡವರಾದ ಮೇಲೆ ಸತ್ಯ ಮತ್ತು ಈಶ್ವರ ಭಕ್ತಿಗಳಿಂದ ಕೂಡಿದ ಮತ್ತು ಭೂತದೆಯೆ ಪಶ್ಚಾತ್ತಾಪಗಳನ್ನುಳ್ಳ ಪುತ್ರಪುತ್ರಿಯರಾಗುತ್ತಾರೆ.

ಒಟ್ಟಿನಲ್ಲಿ ಸತ್ಪುತ್ರರು ಜನಿಸಬೇಕೆಂದು ಪ್ರಾರಬ್ಧ ಕರ್ಮಫಲ ವಿದ್ದದ್ದೇ ಆದರೆ, ಸಂಭೋಗ ಸಮಯದಲ್ಲಿ ಮೇಲೆ ಹೇಳಿದ ಒಳ್ಳೆಯ ಮನಸ್ಸು ಹುಟ್ಟುತ್ತದೆಯೇ ಹೊರತು, ಅದಿಲ್ಲವಾದರೆ ಅಂದರೆ ಪ್ರಾರಬ್ಧ ಕರ್ಮಗಳಲ್ಲಿ ಸತ್ಪುತ್ರವಂತರಾಗುವ ಫಲವಿಲ್ಲದಿದ್ದಲ್ಲಿ ಏಕಾಂತದಲ್ಲಿರುವಾಗ ಎಂದಿಗೂ ನಿರ್ಮಲವಾದ ಮನಸ್ಸುಂಟಾಗದು. ಆದರೂ, ಸನ್ನಿವೇಶಗಳ ಬಲಿಯದಿಂದ ಮನಸ್ಸಿನ ಸ್ಥಿತಿಯು ವ್ಯತ್ಯಾಸವನ್ನು ಹೊಂದುವುದು ಸಿದ್ಧ ವಾದುದರಿಂದಲೂ, ಮತ್ತು ಮನೋಸ್ಥಿತಿಗೆ ತಕ್ಕಂತೆ ಫಲವುಂಟಾಗುತ್ತದೆ ಯಾದುದರಿಂದಲೂ, ಗರ್ಭೋತ್ಪತ್ತಿಯಾಗುವ ಸಮಯದಲ್ಲಿ ಮನಸ್ಸನ್ನು ನಿರ್ಮಲವಾಗಿಡದೆ ಹೋದಲ್ಲಿ ಹುಟ್ಟಿದ ಪುತ್ರನು, ಕುರುಡು,ಕುಂಟು,ಗೂನು ಮೊದಲಾದ ಅಂಗಹೀನತೆಯನ್ನು ಹೊಂದಿದವನಾಗಿಯೋ, ಇಲ್ಲವೇ ಜಾರನೋ ಚೋರನೋ,ಬಹುಕೋಪಿಯೋ ಅಥವಾ ಮಂದಬುದ್ಧಿಯುಳ್ಳವ ನಾಗಿಯೋ ಆಗುತ್ತಾನೆ. ಆದುದರಿಂದಲೇ ಲೋಕದಲ್ಲಿರುವ ಸ್ತ್ರೀಪುರು ಷರ ಹಿತಕ್ಕಾಗಿ ಇಂತಹ ರಹಸ್ಯಗಳನ್ನು ಉಪದೇಶ ಮಾಡಿರುತ್ತೇವೆ. ಸ್ತ್ರೀಪುರುಷರು ಇವುಗಳೆಲ್ಲವನ್ನೂ ಗ್ರಹಿಸಿ ಅದರಂತೆ ನಡೆದುಕೊಳ್ಳಬೇಕು. ಇದೂ ಅಲ್ಲದೆ ಸುಂದರರಾದ ಸತ್ಪುತ್ರರನ್ನು ಪಡೆಯುವುದಕ್ಕೆ ಬೇರೆ ಉಪಾಯವೂ ಉಂಟು. ಅದನ್ನು ಈ ಮುಂದೆ ವಿವರಿಸಿದೆಯಾಗಿ ಎಲ್ಲರೂ ಗಮನವಿಟ್ಟು ಕೇಳಿ. ಅದರಂತೆ ಅನುಸರಿಸಿ ನಡೆಯಬೇಕಾದುದು ಅವರ ಕರ್ತವ್ಯ.

ಈ ಗ್ರಂಥವನ್ನು ಪಠಿಸುವವರ ಮನೆಯಲ್ಲಿ ಸ್ತ್ರೀಯರಿಗೆ ಯಾವಾಗ ಲಾದರೂ ಗರ್ಭವು ನಿಂತಿದ್ದೇ ಆದರೆ, ಅಂದರೆ, ಸ್ತ್ರೀಯರು ಗರ್ಭಿಣಿಗಳಾ

ದರೆ ಆ ಸಮಯದಲ್ಲಿ ಅಂದರೆ **ಎರಡನೆಯ ತಿಂಗಳು ಮೊದಲು ಶಿಶುವು ಹುಟ್ಟುವವರಿವಿಗೂ** ಒಂದು ದಿನವೂ ಮರೆಯದೆ ಬೆಳಿಗ್ಗೆ ಸಾಯಂಕಾಲಗಳಲ್ಲಿ ಯಾವ ಆಹಾರವನ್ನೂ ಸೇವಿಸುವುದಕ್ಕೆ ಮೊದಲು ಒಂದು ದೊಡ್ಡ ಚಿಟಕೆ (one pinch) ಯಷ್ಟು **ಕಾಶ್ಮೀರದ ಕುಂಕುಮದ ಹೂವ** (ಕೇಸರಿ) ನ್ನು ತೆಗೆದು ಬಾಯಿಯಲ್ಲಿ ಹಾಕಿಕೊಂಡು ಚನ್ನಾಗಿ ಅಗೆದು ರಸವನ್ನು ನುಂಗಬೇಕು. ಹಾಗೆ ನುಂಗಿದಮೇಲೆ ಆ ಎಂಜಲನ್ನು ಸ್ವಲ್ಪ ಉಗುಳಿ ನೋಡಿದರೆ ಅದು ಭಂಗಾರದ ಬಣ್ಣದಂತಿರುತ್ತದೆ. ಇದೇ **ಮೊದಲನೆಯ ದರ್ಜೆಗೆ ಸೇರಿದ ಕುಂಕುಮದ ಹೂ** (ಕೇಸರಿ) ವೆಂದು ತಿಳಿದುಕೊಳ್ಳಬೇಕು. ಈ ಕುಂಕುಮದ ಹೂ ಹೇಗಿರುತ್ತದೆಯೆಂದರೆ ತೇಯಲೆ (Tea) ಯಂತೆ ಸಣ್ಣಗೂ, ಒಂದನ್ನೊಂದು ಅಂಟದೆ ಬಿಡಿಬಿಡಿಯಾಗಿ ರಕ್ತದಂತೆ ಕೆಂಪು ಬಣ್ಣವುಳ್ಳದ್ದಾಗಿಯೂ ಇರುತ್ತದೆ. ಇದೇ ಉತ್ತಮ ತರವಾದ ಕೇಸರಿಯೆಂಬುದು. ಇದಕ್ಕಿಂತಲೂ ಕಡಿಮೆ ಬೆಲೆಯ ಬೇರೊಂದು ವಿಧವಾದ ಕುಂಕುಮದ ಹೂವಿರುವುದೂ ಉಂಟು. ಅದು ಕೂದಲಿನಂತೆ ಉದ್ದವಾಗಿಯೂ, ನಾರಿನಂತೆ ಒಂದನ್ನೊಂದು ಸೇರಿಕೊಂಡೂ, ಅರಿಶಿನದ ಬಣ್ಣದಿಂದ ಕೂಡಿಯೂ ಇರುತ್ತದೆ. ಇದು ಅಷ್ಟು ಒಳ್ಳೆಯದಲ್ಲ. ಇದೇ ಶ್ರೇಷ್ಠವಾದುದೆಂದೂ ಅನೇಕ ಅಂಗಡಿಗಳಲ್ಲಿ ಮಾರುವುದುಂಟು. ಗರ್ಭಿಣಿಯಾದವರು ಮೇಲೆ ವಿವರಿಸಿದ ಕಾಶ್ಮೀರ ಕುಂಕುಮದ ಹೂವನ್ನು ಬಿಟ್ಟು ಸುಲಭ ಬೆಲೆಯುಳ್ಳ ಕೀಳು ದರ್ಜೆಗೆ ಸೇರಿದುದನ್ನು ಸೇವಿಸಬಾರದು. ಈ **ಕಾಶ್ಮೀರ್ ಕುಂಕುಮದ ಹೂವನ್ನ**ಪೇಕ್ಷಿಸುವವರು,

| ಟಿ. ಕೆ. ಸುಂದರಂ ಅಂಡ್ ಕೋ, | T. K. Sundaram & Co, |
|---|---|
| ನಂ. 15, ಅರಿಮುತ್ತಮ್ ಮೇಸ್ತ್ರಿ ಬೀದಿ, | No 15, Arimutham Mastri Street, |
| ಚೂಳೇ ಪೋಸ್ಟ್, | Choolai post, |
| ಮದ್ರಾಸು. | Madras. |

ಈ ಮೇಲ್ವಿಳಾಸಕ್ಕೆ ರೂ. 11-8-0 ಯನ್ನು ಮುಂಗಡವಾಗಿ ಕಳುಹಿಸಿದ್ದೇ ಆದರೆ ಆ ಹಣಕ್ಕೆ ಸರಿಯಾದಷ್ಟು 'ಕಾಶ್ಮೀರ್' ಕುಂಕುಮದ

ಹೂವನ್ನು ರಿಜಿಸ್ಟರ್ ಮೂಲಕ ಕಳುಹಿಸುವರು. ಅಲ್ಲದೆ ಅವರು ವಿ. ಪಿ. ಮೂಲಕ ಅದನ್ನು ಕಳುಹಿಸರು. 'ಕಾಶ್ಮೀರ್' ಕೇಸರಿಯನ್ನು ಬಾಯಲ್ಲಿ ಹಾಕಿಕೊಂಡು ಚನ್ನಾಗಿ ಅಗೆದು ಎಂಜಲನ್ನು ಉಗುಳಿದ್ದೇ ಆದರೆ, ಆದರ ಬಣ್ಣವು ಭಂಗಾರದ ಬಣ್ಣದಂತಿರುತ್ತದೆಯೆಂದು ಹಿಂದೆ ಹೇಳಿದೆಯಲ್ಲವೇ! ಈ ಸುವರ್ಣವರ್ಣವನ್ನು ಕುರಿತು ಈ ಮುಂದೆ ವಿಸ್ತರಿಸಿದೆ.

ಗರ್ಭಿಣೀ ಸ್ತ್ರೀಯರು ಉದಯಾಸ್ತಮಯಗಳಲ್ಲಿ ಬರೀ ಹೊಟ್ಟೆಯಲ್ಲಿರುವಾಗ ಹಿಂದೆ ಹೇಳಿದಂತೆ ಒಂದು ದೊಡ್ಡ ಚಿಟಿಕೆಯಷ್ಟು ಕಾಶ್ಮೀರ್ ಕುಂಕುಮದ ಹೂವನ್ನು ಬಾಯಲ್ಲಿ ಹಾಕಿಕೊಂಡು ಅಗೆದು ನುಂಗಿದ್ದೇ ಆದರೆ, ಅದರ ಸತ್ವಾದ ಹಳದಿ ಬಣ್ಣದ ರಸವು ತಾಯಿಯ ಕರುಳುಗಳು ಮೊದಲಾದುವುಗಳಿಗೆ ಸಂಬಂಧಿಸಿಕೊಂಡು, ಗರ್ಭದಲ್ಲಿರುವ ಶಿಶುವಿನ ಕಪಾಲದ್ವಾರಾ ಇಳಿದು ಶಿಶು ಶರೀರದೊಳಗಿನ ನಾಡಿಗಳಲ್ಲೆಲ್ಲಾ ಹರಿಯುತ್ತದೆ. ಇದರಿಂದ ಆ ಶಿಶುವಿನ ಶರೀರವೆಲ್ಲವೂ ಕೆಂಪು ಬಣ್ಣವನ್ನು ಹೊಂದುತ್ತದೆ. ಮತ್ತು ಆ ಶಿಶುವು ಹುಟ್ಟಿದ ಮೇಲೆ ಖಜ್ಜಿ, ತುರಿ, ಕುರುವು ಗಡ್ಡೆಗಳು ಮೊದಲಾದ ಯಾವ ವಿಧವಾದ ಚರ್ಮ ರೋಗಗಳೂ ಉಂಟಾಗದೆ ದೇಹವೆಲ್ಲವೂ ಪರಿಶುದ್ಧವಾಗಿರುತ್ತದೆ. ಇದರಿಂದ ಹುಟ್ಟುವ ಮಕ್ಕಳು ಅರೋಗ ದೃಢಕಾಯರಾಗಿ ಬೆಳೆದು ದೀರ್ಘಾಯುವನ್ನು ಹೊಂದುತ್ತಾರೆ. ಆದುದರಿಂದ ಸ್ತ್ರೀಯರೆಲ್ಲರೂ ಮುಟ್ಟು ನಿಂತ ಎರಡನೆಯ ತಿಂಗಳು ಮೊದಲು ಮಗುವು ಹುಟ್ಟುವವರಿವಿಗೂ ಪ್ರತಿದಿನವೂ ತಪ್ಪದೆ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಮೇಲೆ ಹೇಳಿದ 'ಕಾಶ್ಮಿರ್' ಕೇಸರಿಯನ್ನು ತರಿಸಿ ಸೇವಿಸುತ್ತ ಬರಬೇಕು. ಈರೀತಿಯಲ್ಲಿ ದಿನದಿನವೂ ಅದನ್ನು ಉಪಯೋಗಿಸುತ್ತ ಬಂದು ಅನಂತರ ಹುಟ್ಟುವಂಥ ಮಗುವನ್ನು ಗಮನವಿಟ್ಟು ಪರೀಕ್ಷಿಸಿದಲ್ಲಿ ಇದರನುಭವವು ನಿಮಗೆ ಚನ್ನಾಗಿ ತಿಳಿಯುತ್ತದೆ. ಸಂತಾನವನ್ನು ಪಡೆಯಬೇಕೆಂದು ಕೋರುವವರೆಲ್ಲರೂ ಹೇಗೆಹೇಗಿದ್ದು ಯಾವಯಾವದನ್ನು ಮಾಡಬೇಕೋ ಅವೆಲ್ಲವನ್ನೂ ಈ ಮೇಲೆ ವಿವರಿಸಿದೆ. ಇನ್ನು ಮುಂದೆ ಪಿಂಡೋತ್ಪತ್ತಿ ವಿಷಯವನ್ನು ಕುರಿತು ಹೇಳಲಾಗಿದೆ.

ಶ್ರುತಿ ॥ ಸಪ್ತರಾತ್ರೋಷಿತಂ ಬುದ್ಬುದಂ ಭವತಿ ♦ ಅರ್ಧಮಾಸಾಭ್ಯಂತರೇ ಪಿಂಡೋ ಭವತಿ ♦ ಮಾಸಾಭ್ಯಂತರೇ ಕಠಿನೋ ಭವತಿ ♦ ಮಾಸದ್ವಯೇನ ಶಿರಃ ಕುರುತೇ ♦

ಮಾಸತ್ರಯೇಣ ಪಾದಪ್ರದೇಶೋ ಭವತಿ ♦ ಚತುರ್ಥೇ ಮಾಸೇ ಗುಲ್ಫಜಠರ ಕಟಿಪ್ರದೇಶಾ ಭವಂತಿ ♦ ಪಂಚಮೇ ಮಾಸೇ ಪೃಷ್ಠವಂಶಾದಿಕಂ ಭವತಿ ♦ ಷಷ್ಠೇ ಮಾಸೇ ಮುಖನಾಸಿಕಾಕ್ಷಿಶ್ರೋತ್ರಾಣಿ ಭವಂತಿ ♦ ಸಪ್ತಮೇ ಮಾಸೇ ಜೀವೇನ ಸಂಯುಕ್ತೋ ಭವತಿ ♦ ಅಷ್ಟಮೇ ಮಾಸೇ ಸರ್ವಲಕ್ಷಣಸಂಪೂರ್ಣೋ ಭವತಿ ♦ ನವಮೇ ಮಾಸೇ ಸರ್ವಲಕ್ಷಣಜ್ಞಾನಕರಣಸಂಪೂರ್ಣೋ ಭವತಿ

ಆಹಾ! ಈ ಪ್ರಪಂಚದಲ್ಲಿರುವ ಮಾಯಾ ವೈಚಿತ್ರ್ಯ, ಇಂದ್ರಜಾಲ ವಿದ್ಯೆಗಳನ್ನು ಏನೆಂದು ಹೇಳಬೇಕು! ಸ್ತ್ರೀಯರು ಬಹಿಷ್ಠೆಯರಾದಂದಿನಿಂದ 4-6-8-10-12-14-16 ಈ ಸರಿದಿನಗಳಲ್ಲಿ ಶುಕ್ಲಶೋಣಿತದ ಸಂಯೋಗ ಫಲದಿಂದ ಗರ್ಭವನ್ನು ಧರಿಸಿದ್ದೇ ಆದರೆ ಗಂಡು ಮಗುವನ್ನೂ, ಹಾಗಿಲ್ಲದೆ 5-7-9-11-13-15 ಈ ವಿಷಮ (ಬೆಸ) ದಿನಗಳಲ್ಲಿ ಗರ್ಭವನ್ನು ಹೊಂದಿದ್ದೇ ಆದರೆ ಹೆಣ್ಣು ಮಗುವನ್ನೂ ಪಡೆಯುತ್ತಾರೆ. ಈ ವಿಷಯವನ್ನು ಕುರಿತು ಮಾರನ ಕವೀಶ್ವರರು ಈರೀತಿಯಾಗಿ ಹೇಳಿರುತ್ತಾರೆ.

ಆ ॥ ರುತುವಾದ ನಾರಿಯುನು ನಾ ♦ ಲ್ಕಿರುಳ ಲಾವ
ಜಾತಿಪುರುಷರು ಕೂಡಬಾ ♦ ರದು ಸಮದಿನ
ಗಳಲಿ ಗಂಡು ವಿಷಮ ದಿನಗ ♦ ಳೊಳಗೆ ಪೆಣ್ಣು
ಪುಟ್ಟುವುದು ನಿಜವೆಂದು ತಾ ♦ ನ್ನಡೆಯುಬೇಕು (ತೆಲುಗು)

ಸ್ತ್ರೀಯರಿಗೆ ಗರ್ಭವು ನಿಲ್ಲಬೇಕಾದರೆ ಮುಟ್ಟಾದ ಹದಿನಾರನೆಯ ದಿನಗಳೊಳಗೇ ಹೊರತು ಅದಕ್ಕೆ ಮೇಲೆ ಗರ್ಭವುಂಟಾಗಲಾರದು. ಏಕೆಂದರೆ ರುತುವಾದ ಈ ಹದಿನಾರು ದಿನಗಳು ಮಾತ್ರವೇ ಗರ್ಭಕಮಲವು ತೆರೆದಿರುತ್ತದೆ. ಅದಕ್ಕೆ ಮೇಲೆ ಮುಚ್ಚಿಕೊಂಡಿರುತ್ತದೆ. ಅಂದರೆ ಮುಟ್ಟಾದ ಹದಿನೇಳನೇ ದಿನದ ಬೆಳಿಗ್ಗೆ ಗರ್ಭಕಮಲದ ಬಾಯಿ ಮುಚ್ಚಿಬಿಡುತ್ತದೆ. ಹಾಗೆ ಅದು ಮುಚ್ಚಿಕೊಂಡ ಮೇಲೆ ಸಂಭೋಗದ ಸಲುವಾಗಿ ಹುಟ್ಟಿದ ಪುರುಷನ ಶುಕ್ಲವು ಸ್ತ್ರೀಯ ಶೋಣಿತದೊಡನೆ ಸೇರಿ ಗರ್ಭಕೋಶವನ್ನು ಪ್ರವೇಶಿಸಲಾರದು. ಆದುದರಿಂದಲೇ ರುತು ದಿನಗಳು ಅಂದರೆ ಈ ಹದಿನಾರು ದಿನಗಳು ಮಿಾರಿದಮೇಲೆ ಗರ್ಭೋತ್ಪತ್ತಿ

ಯಾಗಲಾರದು. ಈ ಕಾರಣದಿಂದಲೇ ಲೌಲ್ಯಕ್ಕಾಗಿ ರುತು ದಿನಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ಸಂಭೋಗಕ್ಕೆ ಎಡೆಗೊಡಬಾರದು. ಪುನಃ ರುತುದಿನಗಳಲ್ಲಿ ಅಂದರೆ ಮುಟ್ಟಾದ ದಿನದ ಮೊದಲು ಹದಿನಾರನೇ ದಿನದ ವರಿವಿಗೂ ಆ ಗರ್ಭಕಮಲದ ಬಾಯಿಯು ತೆರೆದಿರುತ್ತದೆ ಮತ್ತು ಹದಿನೇಳನೆಯ ದಿನದಿಂದ ಪುನಃ ಮುಟ್ಟಾಗುವವರಿವಿಗೆ ಅದು ಮುಚ್ಚಿಕೊಂಡೇ ಇರುತ್ತದೆ. ಮೇಲೆ ಹೇಳಿದ ರೀತಿಯಲ್ಲಿ ಗರ್ಭಕಮಲದಲ್ಲಿ 'ಮಾವಿ' ಎಂಬ ಸಂಚಿಯಲ್ಲಿ ಸ್ತ್ರೀಪುರುಷ ಸಂಬಂಧವಾದ ಶುಕ್ಲಶೋಣಿತಗಳೆರಡೂ ಹೋಗಿ ಸೇರಿದ ಮೇಲೆ ಏಳು ದಿನಗಳವರಿವಿಗೂ ನೀರಿನ ಬುಗ್ಗೆ (ಬುದ್ಬುದ) ಯಂತೆಯೂ, ಹದಿನೈದು ದಿನಗಳವರಿವಿಗೆ ಪಿಂಡರೂಪವಾಗಿಯೂ, ಒಂದು ತಿಂಗಳಿಗೆ ಗಟ್ಟಿ ಪಿಂಡವಾಗಿಯೂ ಆಗುತ್ತದೆ. ಹೀಗಾದನಂತರ ಎರಡನೆಯ ತಿಂಗಳಲ್ಲಿ ಶಿರಸ್ಸೂ ಮತ್ತು ಮೆದಳೂ, ಮೂರನೆಯ ತಿಂಗಳಲ್ಲಿ ಕಾಲುಗಳೂ, ನಾಲ್ಕನೆಯ ತಿಂಗಳಲ್ಲಿ ಹೊಟ್ಟೆಯೂ, ಐದನೆಯ ತಿಂಗಳಲ್ಲಿ ಬೆನ್ನೆಲುಬು, ಪಕ್ಕೆಲುಬು ಮೊದಲಾದುವುಗಳೂ, ರೋಮಗಳೂ, ಆರನೆಯ ತಿಂಗಳಲ್ಲಿ ಕಣ್ಣು, ಮೂಗು, ಬಾಯಿ, ಕಿವಿ ಮೊದಲಾದ ನವರಂಧ್ರಗಳೂ ಉಂಟಾಗುತ್ತವೆ. ಇದಾದನಂತರ ಏಳನೆಯ ತಿಂಗಳಲ್ಲಿ ಈರೀತಿಯಾಗಿ ಸಿದ್ಧವಾಗಿರುವ ದೇಹದೊಳಕ್ಕೆ ಜೀವನು ಪ್ರವೇಶಿಸುತ್ತಾನೆ. ಈ ವಿಷಯವನ್ನು ಕುರಿತು ಮಹಮ್ಮದೀಯ ಮತಕ್ಕೆ ಗುರುಗಳಾದವರಲ್ಲೊಬ್ಬರು ಹೀಗೆ ಹೇಳುತ್ತಾರೆ.

"ತೋತಾ ಹೈ ಪಂಜರ್ಮೆ ದೇಕ್ ♦ ಗೀತಾ ಬೋಲ್ ಬೋಲ್ ಕೋ
ಉಸ್ ಮೇ ಕೈಸಾ ಸೋತಾ ಹೈ ದೇಕ್ ♦ ಜಾತಾ ಉಪ್ಪರ್
ಉಟ್‌ಕರ್ ದೇಕ್ ♦ ತೋತಾಸಾತ್ ಜಾ ಬರಾಬರ್" ಪಯಣವು ಜೀವಿಗೆ ‖

ತೋತಾ ಹೈ ಪಂಜರ್ಮೆ ದೇಕ್ = ಸ್ತ್ರೀಪುರುಷರ ಶರೀರವೇ ಒಂದು ಗೂಡಿನಂತಿರುತ್ತದೆ. ಈ ಶರೀರವೆಂಬ ಗೂಡಿನಲ್ಲಿ ಜೀವಾತ್ಮನೆಂಬ ಒಂದು ಗಿಣಿಯು ವಾಸಮಾಡುತ್ತಿರುತ್ತದೆ ನೋಡು. ಗೀತಾ ಬೋಲ್ ಬೋಲ್ ಕೋ= ಈ ಜೀವಾತ್ಮನೆಂಬ ಗಿಣಿಯು ಗೀತಾದಿ ಶಾಸ್ತ್ರಗಳನ್ನೂ, ಉಳಿದ ಅನೇಕ ಶಾಸ್ತ್ರಗಳನ್ನೂ ಓದುತ್ತಾ ತಾನು ಓದಿದ್ದೆಲ್ಲವನ್ನೂ ಇತರರಿಗೆ

ಹೇಳುತ್ತಾ, ಉಸ್ಮೇ ಕೈಸಾ ಸೋತಾ ಹೈ ದೇಕ್=ಆ ಶರೀರವೆಂಬ ಗೂಡಿನೊಳಗೆ ಯಾವ ರೀತಿಯಲ್ಲಿ ನಿದ್ರೆಮಾಡುತ್ತಿದೆ ನೋಡು. ಜಾತಾ ಉಪ್ಪರ್ ಉಟ್‌ಕರ್ ದೇಕ್=ತಾನು ಜನ್ಮವೆತ್ತಿದ್ದಕ್ಕೆ ಯಾವುದನ್ನು ತಿಳಿದುಕೊಳ್ಳಬೇಕೋ ಅದನ್ನು ತಿಳಿಯದಂತೆ ವೃಥಾ ಕಾಲಯಾಪನೆಯನ್ನು ಮಾಡಿ ಜೀವಾತ್ಮನೆಂಬ ಗಿಣಿಯು ಮೇಲಕ್ಕೆದ್ದು ಹಾರಿಹೋಗುತ್ತಿದೆ ನೋಡು. ತೋತಾ ಸಾತ್ ಜಾ್ ಬರಾಬರ್ 'ಪಯಣವು ಜೀವಿಗೆ'= ಈ ಜೀವಾತ್ಮನೆಂಬ ಗಿಣಿಯೂ ಪ್ರಾಣವೂ ಇವೆರಡೂ ಜೊತೆಗೂಡಿ ಅಗೋ! ಗಾಳಿರೂಪದಿಂದ ಮೇಲೆದ್ದು ಆಕಾಶ ಮಾರ್ಗದಲ್ಲಿ ಪ್ರಯಾಣ ಬೆಳೆಸುತ್ತಿದೆ ನೋಡು.

ತಾತ್ಪರ್ಯ:—ಈ ಶರೀರವೇ ಒಂದು ಗೂಡು (ಪಂಜರ). ಇದರಲ್ಲಿ ಜೀವಾತ್ಮನೆಂಬ ಗಿಣಿಯು ವಾಸಿಸುತ್ತಿದೆ. ಈ ಗಿಣಿಯು ಗೀತೆಯೇ ಮೊದಲಾದ ಅನೇಕ ಶಾಸ್ತ್ರಗಳನ್ನು ಚನ್ನಾಗಿ ಓದುತ್ತಲೂ, ತಾನು ಓದಿದವುಗಳನ್ನು ಇತರರಿಗೆ ಬೋಧಿಸುತ್ತಲೂ ಈ ದೇಹಪಂಜರದಲ್ಲಿ ಹೇಗೆ ನಿದ್ರಿಸುತ್ತಿದೆ ನೋಡು. ಅಂದರೆ ತಾನು ಜನ್ಮವೆತ್ತಿದ್ದಕ್ಕೆ ಯಾವ ಮುಖ್ಯ ವಿಷಯವನ್ನು ತಿಳಿದುಕೊಳ್ಳಬೇಕೋ ಅದನ್ನು ಗ್ರಹಿಸದೆ ವ್ಯರ್ಥವಾಗಿ ಕಾಲ ಕಳೆದು ಜೀವಿಯು ಮೇಲೆದ್ದು ಹೊರಡುತ್ತಾನೆ. ಇದಾದಮೇಲೆ ಈ ಜೀವನೂ ಪ್ರಾಣದಿಂದೊಡಗೂಡಿ ಗಾಳಿ ರೂಪದಿಂದ ಗಗನಮಾರ್ಗವಾಗಿ ಹೋಗುತ್ತಿದ್ದಾನೆ ನೋಡಿ.

ಈಜೀವಾತ್ಮನು ಎಲ್ಲಿಗೆಹೋಗುತ್ತಿದ್ದಾನೆಂದರೆ, ಮತ್ತೊಬ್ಬ ತಾಯಿಯ ಗರ್ಭದಲ್ಲಿ ಹೊಸದಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವ ಶಿಶುವಿನ ದೇಹದಲ್ಲಿ ಹೋಗಿ ಸೇರುವುದಕ್ಕಾಗಿ ಇದುವರಿವಿಗೂ ತನಗಿದ್ದ ಹಳೆಯ ಶರೀರವನ್ನು ಬಿಟ್ಟು ಹೊರಡುತ್ತಾನೆ. ಹಿಂದೆ ಹೇಳಿದಂತೆ ತಾಯಿಯ ಗರ್ಭದಲ್ಲಿ ಏಳುತಿಂಗಳವರಿವಿಗೂ ಬೆಳೆದ ಶಿಶುದೇಹದಲ್ಲಿ ಜೀವನು ಪ್ರವೇಶಿಸಿ ಅದಕ್ಕೆ ಚೈತನ್ಯವನ್ನುಂಟುಮಾಡುತ್ತಾನೆ. ಜೀವನು ಪ್ರವೇಶಿಸಿದೊಡನೆಯೇ ಗರ್ಭದಲ್ಲಿರುವ ಪಿಂಡವು ತಿರುಗುವುದಕ್ಕೆ ಆರಂಭಿಸುತ್ತದೆ. ಏಳನೆಯ ತಿಂಗಳಲ್ಲಿ, ಗರ್ಭದಲ್ಲಿರುವ ಶಿಶುವು ತಿರುಗುತ್ತಿರುವುದು ತಾಯಿಗೆ

ಚನ್ನಾಗಿ ತಿಳಿಯಬರುತ್ತದೆ. ಆಗ ತಾಯಿಯ ಗರ್ಭದಲ್ಲಿ ಬಾಧೆಯಿಲ್ಲದೆ ಇರುವುದಕ್ಕಾಗಿ 'ಸೂತಿ' ಎಂಬ ಹೆಸರಿನ ಒಂದು ಕರುಳು ಪಿಂಡವನ್ನು ಸುತ್ತಿಕೊಂಡಿರುತ್ತದೆ. ಎಂಟನೆಯ ಮತ್ತು ಒಂಭತ್ತನೆಯ ತಿಂಗಳಲ್ಲಿ ಆ ಪಿಂಡಕ್ಕೆ ಪೂರ್ವಜ್ಞಾನವುಂಟಾಗಿ ಏಳು, ಎಂಟು ಮತ್ತು ಒಂಭತ್ತು ಈ ತಿಂಗಳುಗಳಲ್ಲಿ ಆ ಶಿಶುವಿನ ಹೃದಯಕಮಲದಲ್ಲಿರುವ ಆತ್ಮನೆಂಬ ದೇವರು ಏನು ಮಾಡುತ್ತಿರುವನೆಂದರೆ, 'ಮಾವಿ' (chorion) ಯೆಂಬ ಗರ್ಭಾಶಯದಲ್ಲಿ ಕಟ್ಟುಬಿದ್ದಿರುವ ಶಿಶುವಿನ ಪೂರ್ವಜನ್ಮಗಳನ್ನೆಲ್ಲಾ ಚಲನಾಚಿತ್ರ (Bioscope) ದಲ್ಲಿ ಚಿತ್ರಗಳನ್ನು ಒಂದರ ಹಿಂದೆ ಒಂದರಂತೆ ಅತಿತ್ವರಿತವಾಗಿ ತೋರಿಸುವ ರೀತಿಯಲ್ಲಿ ಆ ಶಿಶುವಿಗೆ ಒಂದು ಜನ್ಮವಾದನಂತರ ಮತ್ತೊಂದರಂತೆ ಆತ್ಮನೆಂಬ ದೇವರು ತೋರಿಸುತ್ತ ಹೋಗುತ್ತಾನೆ. ತನ್ನ ಪೂರ್ವಜನ್ಮದ ಅನುಭವರೀತಿಗಳನ್ನೆಲ್ಲಾ ತಿಳಿದು ಈ ಕೆಳಗೆ ಹೇಳುವ ರೀತಿಯಲ್ಲಿ ಹೇಳುತ್ತ ಆ ಜೀವಿಯು ದುಃಖಪಡುತ್ತಾನೆ.

ಶ್ಲೋ॥ ನಾನಾಯೋನಿಸಹಸ್ರಾಣಿ ♦ ದೃಷ್ಟ್ವಾ ಚೈವ ತಥಾ ಮಯಾ ।
ಆಹಾರಾ ವಿವಿಧಾ ಭುಕ್ತಾಃ ♦ ಪೀತಾಶ್ಚ ವಿವಿಧಾ ಸ್ತನಾಃ ॥

ಸ್ಥಾವರೋ ಲಕ್ಷವಿಂಶತ್ಯಃ ♦: ಜಲಜೋ ನವಲಕ್ಷಕಃ ।
ಕ್ರಿಮೀಣಾಂ ರುದ್ರಸಂಖ್ಯಾಶ್ಚ ♦ ಚತುರ್ಲಕ್ಷಂ ತು ಮಾನುಷಃ ॥

ತ್ರಿಂಶಲ್ಲಕ್ಷಂ ಗವಾನಾಂ ಚ ♦ ಪಕ್ಷೀಣಾಂ ದಶಲಕ್ಷಕಃ ।

ಚಲಿಸದೆ ನಿಂತಿರುವ ವೃಕ್ಷಾದಿ ಸ್ಥಾವರಗಳು ಇಪ್ಪತ್ತು ಲಕ್ಷಗಳು, ಜಲದಲ್ಲಿ ವಾಸಿಸುವ ಮತ್ಸ್ಯಾದಿ ಜಲಚರಗಳು ಒಂಭತ್ತು ಲಕ್ಷಗಳು, ಕ್ರಿಮಿಕೀಟಾದಿವರ್ಗಗಳು ಹನ್ನೊಂದು ಲಕ್ಷಗಳು ಮತ್ತು ಮನುಷ್ಯ ವರ್ಗಗಳು ಅಂದರೆ ಕನ್ನಡ, ತೆಲುಗು, ಅರವ, ಸಂಸ್ಕೃತ, ಹಿಂದಿ, ಉರ್ದು, ಮರಾಠಿ, ಮಲಯಾಳ, ಅರಬ್ಬಿ, ಪರ್ಷಿಯನ್ ಮೊದಲಾದ ಈ ಭಾಷೆಗಳನ್ನಾಡುವವರೂ ಮತ್ತು ಇಂಗ್ಲಿಷ್, ಫ್ರೆಂಚ್, ರಷ್ಯನ್, ಜರ್ಮನ್, ಮೊದಲಾದ ಪಾಶ್ಚಾತ್ಯ ದೇಶದ ಭಾಷೆಗಳನ್ನಾಡುವವರೂ ಒಟ್ಟು ನಾಲ್ಕು ಲಕ್ಷ ಜಾತಿಗಳೂ ಇರುತ್ತಾರೆ. ಇದೂ ಅಲ್ಲದೆ ಹಸು ಮೊದಲಾದ ಮೃಗವರ್ಗಗಳು

ಮೂವತ್ತು ಲಕ್ಷಗಳೂ, ಪಕ್ಷಿ ಮೊದಲಾದುವುಗಳು ಹತ್ತು ಲಕ್ಷಗಳೂ ಒಟ್ಟು ಸೇರಿ ಮೊತ್ತಕ್ಕೆ ಎಂಭತ್ತನಾಲ್ಕು ಲಕ್ಷ ಜೀವರಾಶಿಗಳ ಲೆಕ್ಕವಿಲ್ಲದಷ್ಟು ನಾನಾಯೋನಿಗಳಲ್ಲಿ ಹುಟ್ಟಿಹುಟ್ಟಿ, ಮೃತಿಹೊಂದಿದವನಾಗಿ, ತನ್ನ ಪೂರ್ವಜನ್ಮಗಳೆಲ್ಲವನ್ನೂ ತಾನು ಈ ಭೂಮಿಯ ಮೇಲೆ ಹುಟ್ಟುವವರಿವಿಗೂ ತಾಯಿಯ ಗರ್ಭದಲ್ಲಿ ಏಳು, ಎಂಟು, ಒಂಭತ್ತನೇ ತಿಂಗಳವರಿವಿಗೂ ಇದ್ದ ವಿಷಯವನ್ನೂ ತನ್ನಲ್ಲಿ ತಾನು ಚೆನ್ನಾಗಿ ತಿಳಿದು ಈ ಕೆಳಗೆ ಹೇಳುವ ರೀತಿಯಲ್ಲಿ ಹೇಳಿಕೊಂಡು ದುಃಖಿಸುತ್ತಾನೆ.

ಅಯ್ಯೋ! ಇದುವರಿವಿಗೂ ಕಳೆದುಹೋದ ನನ್ನ ಹಿಂದಿನ ಜನ್ಮಗಳಲ್ಲಿ ನಾನು ಸ್ವಲ್ಪವೂ ಪುಣ್ಯವನ್ನು ಮಾಡದೆ ಹೋದೆನು; ಪ್ರಪಂಚದ ಅನುಭವವನ್ನು ತಿಳಿದಿದ್ದರೂ 'ನನ್ನನ್ನು ಯಾರು ಏನು ಮಾಡಬಲ್ಲರು'? ಎಂದು ಗರ್ವಿಸಿ ನಿಷ್ಕಾಮ್ಯ ಸತ್ಕರ್ಮಗಳನ್ನು ಮಾಡದೆ ಹೋದೆನು; ಇತರರನ್ನು ಮೋಸಮಾಡುವುದಕ್ಕಾಗಿ ಕಾಮ್ಯ ಕರ್ಮಗಳನ್ನು ಮಾಡಿದೆನು; ದೊಡ್ಡವರು ಸನ್ಮಾರ್ಗ ವಿಷಯಗಳನ್ನು ಬೋಧಿಸಿದಾಗಲೆಲ್ಲ ಅವಕ್ಕೆ ಗಮನಕೊಡದೆ ನನ್ನ ಇಷ್ಟಾನುಸಾರವಾಗಿ ನಾನು ನಡೆಯುವವನೆಂದು ಅವರನ್ನು ದೂಷಿಸಿದೆನು; ಅಜ್ಞಾನದ ಫಲವಾಗಿ ಪರಸ್ತ್ರೀಯರನ್ನು ಮೋಹಿಸಿ ಅನ್ಯಾಯವಾಗಿ ಅವರಿಗೆ ಮಾನಭಂಗವನ್ನು ಮಾಡಿದೆನು; ಗುರುಹಿರಿಯರನ್ನೂ ತಾಯಿತಂದೆಗಳನ್ನೂ ಧಿಕ್ಕರಿಸಿ ಅವರನ್ನು ನಿಂದಿಸಿದೆನು. ಅನೇಕವಾಗಿ ಕಷ್ಟಪಟ್ಟು ಹಣಸಂಪಾದಿಸಿ ಹೆಂಡತಿ ಮಕ್ಕಳಿಗೆ ಕೊಟ್ಟು, ಪುನಃ ನನಗೆ ಬೇಕಾದಾಗ ಅವರು ಕೊಡದಿರಲು ಅದನ್ನು ಕುರಿತು ದುಃಖಿಸಿದೆನು; ಅಯ್ಯೋ! ಈರೀತಿಯಾಗಿ ಹಿಂದಿನ ಜನ್ಮಗಳಲ್ಲಿ ದುಃಖ ಪರಂಪರೆಗಳನ್ನನುಭವಿಸಿದೆನು; ಸುಖವೆಂಬುದು ಎಳ್ಳಷ್ಟಾದರೂ ಇಲ್ಲ. ಇನ್ನು ಈ ಮಲಮೂತ್ರ ಗರ್ಭಾಶಯ (ಜರಾಯು, or ಮಾವಿಚೀಲ) ದಿಂದ ಹೊರಹೊರಟು ಭೂಮಿಯ ಮೇಲೆ ಜನಿಸಿದ ಬಳಿಕ ಸದ್ಗುರುವನ್ನು ಹುಡುಕಿ ಅವರಿಂದ ಭಕ್ತಿ, ಧ್ಯಾನ ಯೋಗ ಜ್ಞಾನ ಮಾರ್ಗಗಳನ್ನು ಉಪದೇಶಹೊಂದಿ, ಆ ಮೂಲಕ ನನ್ನ ನಿಜಸ್ವರೂಪವನ್ನು ತಿಳಿದುಕೊಂಡು ಪರಮಾತ್ಮನಾದ ಪರಬ್ರಹ್ಮನಲ್ಲಿ ಐಕ್ಯನಾಗುತ್ತೇನೆ," ಎಂದು ಈರೀತಿಯಲ್ಲಿ ಆ ಶಿಶುವು ಮನಸ್ಸಿನಲ್ಲೆಣಿಸುತ್ತ ದುಃಖಿಸುತ್ತಿರುವಾಗ ನವಮಾಸ

ಗಳು ತುಂಬಿ ಪಿಂಡವು ಗರ್ಭದಿಂದ ಹೊರಕ್ಕೆ ಬರುವುದಕ್ಕಾಗಿ ತಾಯಿಗೆ ಹೆಚ್ಚಾಗಿ ಪ್ರಸವವೇದನೆಯನ್ನುಂಟುಮಾಡುತ್ತದೆ. ಆಗ 'ಧನಂಜಯ' ವೆಂಬ ವಾಯುವು ಆ ಶಿಶುವಿನ ಬೆನ್ನಿನ ಕೆಳಗೂ ಪೃಷ್ಠದ ಮೇಲ್ಭಾಗದಲ್ಲೂ ಈ ಎರಡು ಕಡೆಯಲ್ಲಿಯೂ ಬಲವಂತವಾಗಿ ಹೊರಭಾಗಕ್ಕೆ ನೂಕುವಾಗ ಶಿಶುವು ಬಂಧಿಸಲ್ಪಟ್ಟ 'ಮಾವಿ' ಯೆಂಬ ಚೀಲವು ಎರಡಾಗಿ ಸೀಳಿ ಪಿಂಡವು ಹೊರಕ್ಕೆ ಬರುತ್ತದೆ ಆಗ ಆ ಶಿಶುವು ಎರಡು ಕೈಗಳನ್ನೂ ಜೋಡಿಸಿಕೊಂಡು ತನ್ನ ತಲೆಯಮೇಲಿಟ್ಟುಕೊಂಡು "ಅಯ್ಯೋ! ದೈವವೇ! ನನ್ನನ್ನು ಈ ಮಾಯಾಪ್ರಪಂಚದೊಳಕ್ಕೆ ಬೀಳುವಂತೆ ನೂಕುತ್ತೀಯಾ?" ಎಂದು ತನ್ನಲ್ಲಿ ತಾನೇ ಎಂದುಕೊಳ್ಳುತ್ತಾ ಈಶ್ವರನಿಗೆ ನಮಸ್ಕರಿಸುತ್ತಿರುವ ರೀತಿಯಲ್ಲಿಯೇ ಹೊರಕ್ಕೆ ಬರುತ್ತದೆ. ಶಿಶುವು ಕೈಜೋಡಿಸಿಕೊಂಡು ತಾಯಿಯ ಗರ್ಭದಿಂದ ಹೊರಕ್ಕೆ ಬರುತ್ತಿರುವುದನ್ನು ಇಗೋ! ☞ ಈ ಎದುರು ಭಾಗದಲ್ಲಿ ಕಾಣುವ ಚಿತ್ರಪಠದಲ್ಲಿ ಕಾಣಿಸಿದೆ. ಶಿಶುವು ಯೊನೀದ್ವಾರದಿಂದ ಹೊರಹೊರಟು ಬರುತ್ತಿರುವಾಗ

ಶ್ಲೋ ॥ ಜ್ಞಾನಾಂತೇ ಜನನಂ ಪ್ರಾಪ್ತಿಃ ♦ ಯೋನಿಮಧ್ಯಶ್ಚ ಗಚ್ಛತಿ ।
ಯೋನಿಸ್ಪರ್ಶನಮಾತ್ರೇಣ ♦ ಪೂರ್ವಜ್ಞಾನಂ ಚ ನಶ್ಯತಿ ॥

ಒಂದು ಯೋನಿದ್ವಾರದಲ್ಲಿರುವ ಶಿಶುವಿನ ಶಿರಸ್ಸು ಹೊರಹೊರಟು ಬರುತ್ತಿರುವಾಗ ಹೊರಗಿನ ವಾಯುವು ಆ ಶಿರಸ್ಸಿನ ಮೇಲ್ಭಾಗವನ್ನು ಮುಟ್ಟುತ್ತದೆ. ಹಾಗೆ ಆ ವಾಯುವು ಸ್ಪರ್ಶಿಸಿದ ತಕ್ಷಣವೇ ಪೂರ್ವಜನ್ಮ ಜ್ಞಾನವನ್ನು ಸಂಪೂರ್ಣವಾಗಿ ಮರೆತು, ಆ ಶಿಶುವು ಯೋನಿದ್ವಾರದಿಂದ ಹೊರಕ್ಕೆ ಬರುತ್ತಿರುವಾಗ ಅದು ಕೆಳಕ್ಕೆ ಬೀಳದಂತೆ, ಒಬ್ಬ ಸೂಲಗಿತ್ತಿಯು (midwife) ತನ್ನ ಎರಡು ಕೈಗಳಲ್ಲಿಯೂ ಅದನ್ನು ಹಿಡಿದುಕೊಂಡು, ಶಿಶುವಿನ ಮೈಮೇಲಿದ್ದ ಕೊಳೆಯನ್ನೆಲ್ಲಾ ಚನ್ನಾಗಿ ತೊಳೆದು ಒರೆಸಿ ಹಾಸಿಗೆಯಮೇಲೆ ಅದನ್ನು ಮಲಗಿಸುತ್ತಾಳೆ. ಆಗ ಹೊಸದಾಗಿ ಜನಿಸಿದ ಆ ಶಿಶುವು ಶುದ್ಧ ಪರಬ್ರಹ್ಮಸ್ವರೂಪವಾಗಿಯೇ ಇರುತ್ತದೆ. ಅನಂತರ ಆ ಸೂಲಗಿತ್ತಿಯು ಏನುಮಾಡುತ್ತಾಳೆಂದರೆ,



**ಗರ್ಭವನ್ನು ಬಿಚ್ಚಿ ಶಿಶುವನ್ನು ತೋರಿಸುವಿಕೆ.**

'ಅಯ್ಯೋ! ಮಾಯಾಪ್ರಪಂಚದಲ್ಲಿ ನನ್ನನ್ನು ತೆಗೆದುಕೊಂಡು ಹೋಗಿ ನೂಕುತ್ತೀಯಾ?' ಎಂದು ಶಿಶುವು ಎರಡು ಕೈಗಳನ್ನೂ ಜೋಡಿಸಿ ತಲೆಯಮೇಲಿಟ್ಟು ಈಶ್ವರನಿಗೆ ದಂಡಪ್ರಮಾಣವನ್ನು ಮಾಡುತ್ತ ಗರ್ಭಕೋಶದಿಂದ ಹೊರಕ್ಕೆ ಹೊರಟು ಬರುವಿಕೆ.

'ಏನು! ಮಗುವು ಅಳಲಿಲ್ಲವಲ್ಲಾ'! ಎಂದು ಹೇಳಿ ತಣ್ಣೀರನ್ನು ಕೈಯಲ್ಲಿ ತೆಗೆದುಕೊಂಡು ಶಿಶುವಿನ ಮುಖದಮೇಲೆ ಎರಚುತ್ತಾಳೆ. ಆಗ ಆ ಶಿಶುವು ಆ ನೀರಿನ ತಂಪಿಗೆ ಪೆಟ್ಟುಬಿದ್ದು ಮೈಮುರಿದು, ಕೈಕಾಲುಗಳನ್ನು ಅಲ್ಲಾಡಿಸುತ್ತ ಬಹು ಸಣ್ಣ ಸ್ವರದಿಂದ 'ಕ್ವ? ಕ್ವ? ಕ್ವ?' ಎಂದು ಅಳುತ್ತದೆ. ಸಂಸ್ಕೃತ ಭಾಷೆಯಲ್ಲಿ ಕ್ವ ಎಂಬ ಪದಕ್ಕೆ 'ಎಲ್ಲಿ?' ಎಂದರ್ಥ. ಅಂದರೆ 'ನನಗೆ ಇದುವರಿವಿಗೂ ಇದ್ದ ಪೂರ್ವಜನ್ಮಜ್ಞಾನವು

ಎಲ್ಲಿಗೆ ಹೋಯಿತು ? ಎಲ್ಲಿಗೆ ಹೋಯಿತು ? ಎಲ್ಲಿಗೆ ಹೋಯಿತು ?' ಎಂದು ಮೂರುಬಾರಿ ನೆನಸಿಕೊಂಡು ಅಳುತ್ತದೆ. ಹೀಗೆ ಅತ್ತನಂತರ ಅದಕ್ಕೆ ಪೂರ್ವಜನ್ಮಜ್ಞಾನವು ಸಂಪೂರ್ಣವಾಗಿ ಮರೆತು ಹೋಗುತ್ತದೆ.

ಹೀಗೆಯೇ ಇದ್ದು, ದಿನೇದಿನೇ ಸ್ವಲ್ಪ ಸ್ವಲ್ಪವಾಗಿ ಬೆಳೆದು ಬಾಲ್ಯ, ಯೌವನ, ವಾರ್ಧಿಕ್ಯ ಅಂದರೆ ಮುದಿತನ ಮೊದಲಾದವುಗಳನ್ನು ಕ್ರಮವಾಗಿ ಹೊಂದಿ, ಈ ಅವಸ್ಥೆಗಳಲ್ಲಿ ನೋಡುವುದು, ತಿನ್ನುವುದು, ಮೂಸಿಸುವುದು, ಕೇಳುವುದು, ಮುಟ್ಟುವುದು ಮೊದಲಾದ ಕರ್ಮೇಂದ್ರಿಯ ಜ್ಞಾನೇಂದ್ರಿಯುಗಳ ವ್ಯಾಪಾರಗಳನ್ನು ಅನುಭವಿಸುತ್ತ ಕಡೆಯಲ್ಲಿ ಅಂದರೆ ಆಯುಃಪರಿಮಿತಿಯು ಸಮೀಪಿಸಿದಾಗ, ಯಾವುದೋ ಒಂದು ವ್ಯಾಧಿಯು ಸಂಭವಿಸಿಯೋ ಇಲ್ಲವೇ ಮತ್ತಾವ ಕಾರಣದಿಂದಲೋ ಅಕಸ್ಮಾತ್ತಾಗಿ ಆ ತನ್ನ ಹಳೆಯ ಶರೀರವನ್ನು ಬಿಟ್ಟು ಮೇಲೆದ್ದು, ಬೇರೆ ಸ್ತ್ರೀಯ ಗರ್ಭದಲ್ಲಿ ತನಗಾಗಿ ಸೃಷ್ಟಿಸಿಟ್ಟಿರುವ ಶಿಶುವಿನ ಹೃದಯಕಮಲದೊಳಕ್ಕೆ ಜೀವನು ತನ್ನನ್ನು ಹಿಂಬಾಲಿಸಿದ ಕರ್ಮಸಂಚಯುಗಳೊಡನೆ ಪ್ರವೇಶಿಸುತ್ತಾನೆ. ಹಾಗೆ ಹೋಗಿ ಸೇರಿದಮೇಲೆ ಆ ಜೀವನು ಪುನಃ ಪೂರ್ವಜನ್ಮ ಸ್ಮರಣೆಯನ್ನು ಹೊಂದಿ ಹಿಂದೆ ಹೇಳಿದಂತೆ ಧನಂಜಯ ವಾಯುವಿನಿಂದ ಬೆನ್ನಿನ ಕೆಳಭಾಗ ಮತ್ತು ಪೃಷ್ಠಭಾಗಗಳ ಮೇಲ್ಗಡೆ ಈ ಸ್ಥಳಗಳಲ್ಲಿ ಬಲತ್ಕಾರದಿಂದ ಹೊರಕ್ಕೆ ತಳ್ಳಲ್ಪಟ್ಟು ಈ ಪ್ರಪಂಚವನ್ನು ಕಾಣುತ್ತಾನೆ. ಧನಂಜಯ ವಾಯುವಿನಿಂದ ತಳ್ಳಲ್ಪಟ್ಟಾಗ ಮೇಲೆ ಹೇಳಿದ ಸ್ಥಳಗಳಲ್ಲಿ ಎರಡು ಗುಣಿಗಳು ಬೀಳುತ್ತವೆ. ಇದನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕಾದರೆ ಒಂದು-ಎರಡು-ಮೂರು-ನಾಲ್ಕು ವರ್ಷ ವಯಸ್ಸುಳ್ಳ ಬಾಲಕಬಾಲಕಿಯರ ಮೇಲೆ ಹೇಳಿದಭಾಗವನ್ನು ನೋಡಿದರೆ ನಿಜಸ್ಥಿತಿಯು ವ್ಯಕ್ತವಾಗುತ್ತದೆ. ಪೃಷ್ಠದ ಮೇಲ್ಭಾಗ ಮತ್ತು ಬೆನ್ನಿನ ಕೆಳಭಾಗದಲ್ಲಿ ಎರಡು ಗುಣಿಗಳು ಬೀಳುವುದಕ್ಕೆ ಕಾರಣವನ್ನು ದೃಷ್ಟಾಂತಪೂರ್ವಕವಾಗಿ ಈ ಕೆಳಗೆ ತಿಳಿಯಪಡಿಸಿದೆ.

ಒಬ್ಬ ಕುಂಬಾರನು ಹಸಿಯ ಮಣ್ಣನ್ನು ಮೃದುವಾಗಿರುವಂತೆ ಕಲೆಸಿ, ಚಕ್ರವನ್ನು ಗಿರಗಿರನೆ ತಿರುಗಿಸಿ ಆ ಮಣ್ಣನ್ನು ಚಕ್ರದ ಮಧ್ಯ

ಭಾಗದ ಪೀಠದೊಳಗಿಟ್ಟು ಭಾಂಡಗಳನ್ನು ಮಾಡಿ ಈಚೆಗೆ ತೆಗೆಯುತ್ತಾನೆ. ಆಗ ಆ ಭಾಂಡದಮೇಲೆ ಬೆರಳಿಟ್ಟು ಅವುಕಿದರೆ ಆ ಸ್ಥಳದಲ್ಲಿ ಗುಣಿ ಬೀಳುತ್ತದೆ. ಇದೇ ರೀತಿಯಲ್ಲಿ ತಾಯಿಯ ಗರ್ಭದಲ್ಲಿನ 'ಮಾವಿಚೀಲ' (chorion) ದಲ್ಲಿ ಸಿಕ್ಕಿಬಿದ್ದಿರುವ ಶಿಶುವಿನ ಶರೀರವು ಮೇಲೆ ಹೇಳಿದ ಹಸಿಯ ಮಣ್ಣಿನ ಮಡಕೆಗೆ ಸಮನಾಗಿರುವುದರಿಂದ ಧನಂಜಯ ವಾಯುವು ಪೃಷ್ಠದ ಮೇಲ್ಭಾಗದಲ್ಲಿ ಹಿಡಿದು ಬಲಾತ್ಕಾರದಿಂದ ನೂಕುವಾಗ ಅಲ್ಲಿ ಎರಡು ಗುಣಿಗಳು ಬೀಳುತ್ತವೆ. ಪ್ರಪಂಚದಲ್ಲಿ ಜನ್ಮಿಸಿದ ಸಮಸ್ತ ಸ್ತ್ರೀಪುರುಷರೂ ಗರ್ಭದಲ್ಲಿರುವಾಗ ಈ 'ಮಾವಿಚೀಲ' ದಲ್ಲಿ ಕಟ್ಟಲ್ಪಟ್ಟಿದ್ದವರು. ಆ ಕಟ್ಟಿನಿಂದ ಬಿಡುಗಡೆಯನ್ನು ಹೊಂದಿ ಭೂಮಿಯಮೇಲೆ ಜನಿಸುವ ಸಮಯದಲ್ಲಿ ಆಸೆಯೆಂಬ ಮಾಯೆಯಿಂದ ಕಟ್ಟಲ್ಪಡುತ್ತಾರೆ. ಜೀವನು ಮೋಕ್ಷವೆಂಬ ಗೃಹವನ್ನು ಹೊಂದುವವರಿವಿಗೂ ಮೇಲೆ ಹೇಳಿದ ಎರಡು ಬಂಧಗಳಲ್ಲಿಯೂ ಕಟ್ಟಲ್ಪಟ್ಟಯೇ ಇರುತ್ತಾರೆ.

ಸ್ತ್ರೀಪುರುಷರೆಲ್ಲರೂ ಇದುವರಿವಿಗೆ ಎಷ್ಟೋ ಲೆಕ್ಕವಿಲ್ಲದಷ್ಟು ಮನೆಗಳಲ್ಲಿ ಪುನಃಪುನಃ ಹುಟ್ಟುತ್ತ ಸಾಯುತ್ತ ಬರುತ್ತಿದ್ದಾರೆ. ಇನ್ನು ಮುಂದೆಯೂ ಎಷ್ಟೋ ಗಣನೆಯಿಲ್ಲದ ಮನೆಗಳಲ್ಲಿ ಹುಟ್ಟಿ ಸಾಯಬೇಕಾಗಿ ಬರುತ್ತದೆ. ಈರೀತಿಯಾಗಿ ಹುಟ್ಟು ಸಾವುಗಳಿಂದ ಕೂಡಿದ ಜೀವಿಗಳಿಗೆ ಒಂದು ಶಾಶ್ವತವಾದ ಗೃಹವು ಬೇಕಲ್ಲವೇ? ಆ ಗೃಹವಾವುದೆಂದರೆ ಎಲ್ಲೆಲ್ಲಿಯೂ ಸದಾ ಬಟ್ಟಬಯಲಾಗಿ (ಆಕಾಶಸ್ವರೂಪನಾಗಿ) ತುಂಬಿ ತುಳುಕಾಡುತ್ತಿರುವ, ನಾಶರಹಿತನಾಗಿ ಶಾಶ್ವತನಾಗಿರುವ ಪರಬ್ರಹ್ಮನೇ ಹೊರತು ಬೇರೆಯಲ್ಲ. ಈ ಪರಬ್ರಹ್ಮನೇ ದೊಡ್ಡ ದೇವರು ಮತ್ತು ಸಮಸ್ತಕ್ಕೂ ಒಡೆಯ. ಪ್ರಪಂಚದಲ್ಲಿರುವ ಜೀವರಾಶಿಗಳೆಲ್ಲವೂ ಆ ಪರಮಾತ್ಮನ ಅಂಶವೇ ಹೌದು. ಈ ಪರಬ್ರಹ್ಮನ ಅಂಶವು ಜೀವರಾಶಿಗಳ ಹೃದಯಕಮಲಗಳಲ್ಲಿ ಹೋಗಿ ಸೇರಿದ್ದರಿಂದ ಅದಕ್ಕೆ 'ಆತ್ಮ' ನೆಂಬ ಒಂದು ಹೆಸರನ್ನಿಟ್ಟರು. ಈ ಆತ್ಮನನ್ನು ಮಾಯೆಯೆಂಬುದು ಮುಚ್ಚಿದೆ. ಈ ಮಾಯೆಯೆಂಬುದು ಯಾವ ಜನ್ಮದಲ್ಲಿ ಆತ್ಮನೆಂಬ ಪರಬ್ರಹ್ಮನನ್ನು ಬಿಟ್ಟು ತೊಲಗುತ್ತದೆಯೋ ಆ ಜನ್ಮದಲ್ಲಿಯೇ ಈ ಆತ್ಮನ ನಿಜಸ್ವರೂಪ ಗೃಹವಾದ ಪರಬ್ರಹ್ಮನಲ್ಲಿ ಹೋಗಿ ಸೇರುತ್ತದೆ. ಜೀವಿಗಳೆಲ್ಲರೂ

ಒಂದೊಂದು ಜನ್ಮದಲ್ಲಿ ಒಂದೊಂದು ಮನೆಯಲ್ಲಿ ಹುಟ್ಟಿ ಸಾಯುತ್ತಲಿರುತ್ತಾರೆ. ಆದರೆ ಈ ಗೃಹಗಳೆಲ್ಲವೂ ಅವರಿಗೆ ಶಾಶ್ವತವಾದ ನಿಲಯಗಳಲ್ಲವು. ಅವರುಗಳ ನಿತ್ಯವಾದ ಮನೆಯಾವುದೆಂದರೆ ಎಲ್ಲೆಲ್ಲಿಯೂ ಬಟ್ಟಬಯಲಾಗಿಯೂ ಪರಿಪೂರ್ಣನಾಗಿಯೂ ಆವರಿಸಿರುವ ಆ ಪರಮಾತ್ಮನಲ್ಲದೆ ಬೇರಲ್ಲ. ಈ ಜೀವಿಗಳೆಲ್ಲವೂ ಯಾವುದೋ ಒಂದು ಜನ್ಮದಲ್ಲಿ ಮಾಯೆಯಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಿ, ಕಡೆಯಲ್ಲಿ ತಮ್ಮ ಸ್ವಂತ ಗೃಹವಾದ ಆಕಾಶಸ್ವರೂಪನಾದ ಆ ಪರಬ್ರಹ್ಮನಲ್ಲಿಯೇ ಹೋಗಿ ಸೇರುವವರಾಗಿದ್ದಾರೆ. ಈರೀತಿಯಾಗಿ ಹೋಗಿ ಸೇರುವುದೇ ಅಂದರೆ ಪರಬ್ರಹ್ಮನಲ್ಲಿ ಕಲೆತು ಹೋಗುವುದೇ ಮೋಕ್ಷವೆಂದೆನಿಸುತ್ತದೆ. ಜೀವಿಯು ಮಾಯೆಯಿಂದ ಕಟ್ಟಲ್ಪಟ್ಟು ಭ್ರಮೆಗೊಳ್ಳುವ ವಿಷಯವನ್ನು ಈ ಮುಂದೆ ಹೇಳಲಾಗಿದೆ.

# ಜೀವಿಯು ಮಾಯೆಗೆ ಸಿಕ್ಕಿ ಭ್ರಮೆಗೊಳ್ಳುವಿಕೆ.

ಶ್ರುತಿ ॥ " ಮಾಯಾಮಯ ಮಿದ ಮಖಿಲಂ ಜಗತ್ । "
" ಜಾಯತೇ ಗಚ್ಛತಿ ಇತಿ ಜಗತ್ । "
" ಇದಂ ಪ್ರಪಂಚಂ ನಾಸ್ತಿ ♦ ಏತೇನೋತ್ಪನ್ನಂ ನೋ ಸ್ಥಿತಂ ಜಗತ್ । "

ಶ್ಲೋ ॥ " ಮಾಯಾಕಾರ್ಯಾದಿಕಂ ನಾಸ್ತಿ ♦ ಮಾಯಾ ನಾಸ್ತಿ ಭಯಂ ನ ಹಿ ।
ವಂಧ್ಯಾ ಕುಮಾರವಚನೇ ♦ ಭೀತಿಶ್ಚೇದಸ್ತಿ್ವದಂ ಜಗತ್ । "

"ಈ ಪ್ರಪಂಚವೆಲ್ಲವೂ ಮಾಯೆಯಿಂದ ತುಂಬಿದೆ. ಉತ್ಪತ್ತಿಯಾಗಿ ನಂತರ ನಾಶವನ್ನು ಹೊಂದುವುದರಿಂದ ಈ ಪ್ರಪಂಚಕ್ಕೆ 'ಜಗತ್' ಎಂಬ ಹೆಸರು. ಈ ಪ್ರಪಂಚವು ನಿತ್ಯವಾದುದಲ್ಲವಾದುದರಿಂದ ಇದರಿಂದ ಹುಟ್ಟಿದ 'ಜಗತ್' ಎಂಬುದೂ ಸ್ಥಿರವಲ್ಲ. ಮಾಯಾಕಾರ್ಯ

ಗಳೆಂಬುವು ಕಾರ್ಯಗಳೇ ಅಲ್ಲ. ಮಾಯೆಯೂ ಇಲ್ಲವು, ಭಯವೆಂಬುದೂ ಇಲ್ಲವು. 'ಬಂಜೆಗೆ ಮಗನು ಹುಟ್ಟಿದ' ನೆಂಬುದು ಹೇಗೆ ಅಸಂಗತವೋ 'ಈ ಜಗತ್ತು ನಿತ್ಯ' ವೆಂಬುದೂ ಅದರಂತೆಯೇ," ಎಂಬುದೇ ಮೇಲಿನ ಶ್ರುತಿವಾಕ್ಯಗಳ ತಾತ್ಪರ್ಯ. ಈ ಮಾಯಾ ಜಗತ್ತು ಮಿಥ್ಯವೇ ಹೊರತು ಸತ್ಯವಾದುದಲ್ಲ. ಇದಕ್ಕೆ ದೃಷ್ಟಾಂತವೇನೆಂದರೆ, ಸ್ತ್ರೀಪುರುಷರು ಜನ್ಮವೆತ್ತುವುದರಿಂದ ಈ ಪ್ರಪಂಚವು ಅವರಿಗೆ ಸತ್ಯವೆಂದು ಕಾಣ್ಬರುತ್ತದೆ. ಪುನಃ ಅವರು ಮರಣಹೊಂದಿದಮೇಲೆ ಹೊರಗೆ ಕಾಣ್ಬರುವ ಈ ಪ್ರಪಂಚವು ಮಾಯೆಯಿಂದ ಕಣ್ಮರೆಯಾಗುವುದು. ಹೀಗೆ ಸ್ತ್ರೀಪುರುಷರು ಎಷ್ಟು ಸಾರಿ ಹುಟ್ಟಿ ಎಷ್ಟು ಸಾರಿ ಸಾಯುತ್ತಾರೆಯೋ ಅಷ್ಟು ಸಾರಿಯೂ ಈ ಪ್ರಪಂಚವು ಅವರಿಗೆ ಕಾಣುತ್ತಲೂ ಪುನಃ ಮರೆಯಾಗುತ್ತಲೂ ಇರುತ್ತದೆ. ಐಂದ್ರಜಾಲಿಕ ವಿದ್ಯೆಯನ್ನು ತೋರಿಸುವವನು ತೋರಿಸುವ ವಸ್ತುಗಳು ಹೇಗೆ ನಿಜವಾದುವುಗಳು ಅಲ್ಲವೋ ಹಾಗೆಯೇ ಕಣ್ಣಿಗೆ ಕಾಣುತ್ತಿರುವ ಈ ಪ್ರಪಂಚವೂ ನಿಜವಾದುದಲ್ಲವು. ಆದರೆ ಮಾಯಾ ಬಲದಿಂದ ನಿಜವಿದ್ದಂತೆ ತೋರುತ್ತದೆ. ಆದುದರಿಂದಲೇ ಸುಳ್ಳನ್ನು ನಿಜದಂತೆ ತೋರಿಸುವ ಈ ಮಾಯೆಯನ್ನು ನಾವು ಜಯಿಸಬೇಕು. ಈ ಮಾಯೆಯ ಉತ್ಪತ್ತಿಸ್ಥಾನವನ್ನು ನಾವು ಕಂಡುಹಿಡಿಯಬೇಕು. ಅದು ಹೇಗೆಂದರೆ, ಮನಸ್ಸು ಇಂದ್ರಿಯಗಳಿಗೊಳಪಟ್ಟು ನಡೆಯುತ್ತದೆ. ಈ ಮನಸ್ಸನ್ನು ಜಯಿಸಬೇಕೆಂದಿರುವವರು ಇಂದ್ರಿಯ ನಿಗ್ರಹವನ್ನು ಮಾಡಬೇಕು. ಇದಕ್ಕೆ ದೃಷ್ಟಾಂತವಾಗಿ ಈ ಗ್ರಂಥಕರ್ತರಿಂದ ಆಂಧ್ರಭಾಷೆಯಲ್ಲಿ ಬರೆಯಲ್ಪಟ್ಟಿರುವ ಮತ್ತು ಶೀಘ್ರವಾಗಿ ಕನ್ನಡಿಸಲ್ಪಡುವುದರಲ್ಲಿರುವ ಶ್ರೀ ಭಗವದ್ಗೀತ ಅಧ್ಯಾಯ 2 ಶ್ಲೋಕ 67 ಇದನ್ನು ಇಲ್ಲಿ ಪ್ರಮಾಣಕ್ಕಾಗಿ ಹೇಳಿದೆ.

ಶ್ಲೋ ॥ ಇಂದ್ರಿಯಾಣಾಂ ಹಿ ಚರತಾಂ ♦ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ♦ ವಾಯುರ್ನಾವ ಮಿವಾಂಭಸಿ ॥

ಯಾವ ಇಂದ್ರಿಯದ ಮೂಲಕ ಮನಸ್ಸು ಒಂದೇ ವಸ್ತುವಿನಲ್ಲಿ ಪ್ರವೇಶಿಸುತ್ತದೆಯೋ ಆ ವಸ್ತುವಿನ ಮೇಲೆ ಇಚ್ಛೆಯುಂಟಾಗುತ್ತದೆ. ಮನಸ್ಸು ಇಂದ್ರಿಯಗಳಿಗೆ ಒಳಗಾಗಿ ಆ ಇಂದ್ರಿಯಗಳು ತೋರಿಸುವ

ಕೆಟ್ಟ ಹಾದಿಯಲ್ಲಿಯೇ ಆ ಮನಸ್ಸು ಹೋಗುತ್ತಿರುತ್ತದೆ. ಹೇಗೆಂದರೆ, ಸಮುದ್ರದಲ್ಲಿ ಪ್ರಯಾಣಮಾಡುತ್ತಿರುವ ಹಡಗನ್ನು ಬಿರುಗಾಳಿಯು ಅದು ಹೋಗುತ್ತಿರುವ ಮಾರ್ಗದಲ್ಲಿ ಹೋಗುವುದಕ್ಕೆ ಬಿಡದೆ ತಾನು ಬೀಸುತ್ತಿರುವ ದಿಕ್ಕಿನ ಕಡೆಗೇ ಬಲಾತ್ಕಾರವಾಗಿ ಅದನ್ನು ತಿರುಗಿಸಿಕೊಂಡು ಹೋಗುತ್ತದೆ. ಹಾಗೆಯೇ ಶುದ್ಧಾತ್ಮಸ್ವರೂಪನಾಗಿರುವವನ ಬುದ್ಧಿಯನ್ನು ಅವನ ಮನಸ್ಸು ಬೇರೊಂದು ಸ್ಥಳಕ್ಕೆ ಒಯ್ಯುತ್ತದೆ ಮತ್ತು ಅಧ್ಯಾಯ 2 ಶ್ಲೋಕ 60 ರಲ್ಲಿ ಹೀಗೆಂದು ಹೇಳಿದೆ.

ಶ್ಲೋ ॥ ಯತತೋ ಹ್ಯಪಿ ಕೌಂತೇಯ ♦ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ♦ ಹರಂತಿ ಪ್ರಸಭಂ ಮನಃ ॥

ಕೃಷ್ಣ:—ಓ ಅರ್ಜುನಾ! ಜ್ಞಾನವಂತನಾದ ಪುರುಷನು ಇಂದ್ರಿಯ ನಿಗ್ರಹವನ್ನು ಮಾಡುವುದಕ್ಕಾಗಿ ಎಷ್ಟು ಪ್ರಯತ್ನಮಾಡಿದರೂ, ಅವನಿಗೆ ವಿಷಯಾಪೇಕ್ಷೆಯು ನಶಿಸದಿದ್ದಲ್ಲಿ, ಇಂದ್ರಿಯಗಳನ್ನು ಅವನು ಎಂದಿಗೂ ಜಯಿಸಲಾರನು. ಆ ವಿಷಯಾಪೇಕ್ಷೆಯೇ ಇಂದ್ರಿಯಗಳಿಗೆ ಬಲವನ್ನು ಕೊಡುತ್ತಿರುವಂಥದು. ಅಂತಹ ಬಲವತ್ತರವಾದ ಆ ಇಂದ್ರಿಯಗಳನ್ನು ಅವನ ಮನಸ್ಸೇ ಚಲಿಸುವಂತೆ ಮಾಡುತ್ತಿರುತ್ತದೆ. ಆದುದರಿಂದ ಆ ಇಂದ್ರಿಯಗಳು ಮನಸ್ಸನ್ನು ಆತ್ಮನಲ್ಲಿ ಸೇರಲೀಯದೆ ಬಲಾಢ್ಯಗಳಾಗಿರುತ್ತವೆ.

ಅರ್ಜುನ:—ಇಂದ್ರಿಯಗಳೇ ಹೆಚ್ಚು ಬಲಿಷ್ಠಗಳಾದರೆ ಇಂತಹ ಇಂದ್ರಿಯಗಳನ್ನು ಜಯಿಸಬಲ್ಲವನಾವನು?

ಕೃಷ್ಣ:—ಸಾಮಾನ್ಯನಾದ ಮನುಷ್ಯನ ಮನಸ್ಸನ್ನು ಇಂದ್ರಿಯಗಳು ಸುಲಭವಾಗಿ ತನ್ನ ಕಡೆಗೆ ಸೆಳೆದುಕೊಳ್ಳಬಲ್ಲವು. ಆದರೆ ಜ್ಞಾನಿಯಾದವನು ತನ್ನ ಮನಸ್ಸನ್ನು ಇಂದ್ರಿಯಗಳಿಗೆ ಒಳಗಾಗದಂತೆ ಮಾಡುವುದಕ್ಕಾಗಿ ನಿರಂತರವೂ ಪ್ರಯತ್ನವನ್ನು ಮಾಡುತ್ತಿರುತ್ತಾನೆ. ಅಂತಹನ ಮನಸ್ಸನ್ನು ಕೂಡಾ ಇಂದ್ರಿಯಗಳು ಬಲಾತ್ಕಾರವಾಗಿ ವಿಷಯಸುಖಗಳ ಕಡೆಗೆ ಎಳೆಯುತ್ತಿರುತ್ತವೆ. ಇದಕ್ಕೆ ಒಂದು ದೃಷ್ಟಾಂತವುಂಟು. ಅದನ್ನು ಈ ಮುಂದೆ ಹೇಳಿದೆ.

ವೇಗವಾಗಿ ಓಡುತ್ತಿರುವ ಒಂದು ಎತ್ತಿನಭಂಡಿಯ ಎರಡು ಚಕ್ರಗಳಲ್ಲಿ ಒಂದೊಂದು ಚಕ್ರವನ್ನು ನಾಲ್ಕು ಜನರು ಹಿಂದಕ್ಕೆ ಎಳೆಯುತ್ತಿದ್ದರೆ, ಆಗ ಆ ಎತ್ತುಗಳು ಮೊದಲಿನಂತೆ ಭಂಡಿಯನ್ನು ಸರಾಗವಾಗಿ ಮುಂದಕ್ಕೆ ಎಳೆಯಲಾರದೆ, ಕುತ್ತಿಗೆಯನ್ನು ನೀಳವಾಗಿ ಕೆಳಕ್ಕೆ ಚಾಚಿ ನಾಲ್ಕು ಮೊಣಕಾಲುಗಳನ್ನೂ ಭೂಮಿಯಮೇಲೂರಿ ಹೆಚ್ಚು ಕಷ್ಟದಿಂದ ಮುಂದಕ್ಕೆ ಎಳೆದುಕೊಂಡು ಹೋಗುತ್ತವೆ. ಅದೇ ರೀತಿಯಲ್ಲಿಯೇ ಇಂದ್ರಿಯಗಳನ್ನು ಜಯಿಸಬೇಕೆಂದು ಇಚ್ಛೆಹೊಂದಿದ ಯೋಗಿಯ ಇಲ್ಲವೇ ಜ್ಞಾನಿಯ ಮನಸ್ಸನ್ನು ಇಂದ್ರಿಯಗಳು ಬಲಾತ್ಕಾರವಾಗಿ ಎಳೆಯುತ್ತಿರುತ್ತವೆ.

ಅರ್ಜುನ :—ಜ್ಞಾನಿಯ ಮನಸ್ಸನ್ನು ಇಂದ್ರಿಯಗಳು ಬಲಾತ್ಕಾರವಾಗಿ ಎಳೆಯುತ್ತಿದ್ದರೆ, ಅಂತಹ ಜ್ಞಾನಿಯು ಕೆಲವು ಕಾಲಕ್ಕಾದರೂ ಆ ಇಂದ್ರಿಯಗಳನ್ನು ಜಯಿಸಬಲ್ಲನೇ ?

ಕೃಷ್ಣ :—ಶ್ಲೋ ॥ ತಾನಿ ಸರ್ವಾಣಿ ಸಂಯಮ್ಯ ♦ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ♦ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

(ಭಗವದ್ಗೀತಾ ಅಧ್ಯಾಯ 2 ಶ್ಲೋಕ 61)

ಎಂಬಂತೆ ಅರ್ಜುನಾ! ನನ್ನ ಅನನ್ಯಭಕ್ತನಾದ ಅಂತಹನು ಸರ್ವೇಂದ್ರಿಯಗಳನ್ನೂ ನಿಸ್ಸಂದೇಹವಾಗಿ ಜಯಿಸಬಲ್ಲನು. ಹೇಗೆಂದರೆ, ನೀನು ಈಗ ಹೇಳಿದ ಜ್ಞಾನಿಯು, ವಿಷಯೇಚ್ಛೆಯು ಸ್ವಲ್ಪವೂ ಇಲ್ಲದೆ ತನ್ನ ಇಂದ್ರಿಯಗಳೆಲ್ಲವನ್ನೂ ಅಣಗಿಸಿ, ತನ್ನ ಮನಸ್ಸನ್ನು ನನ್ನಲ್ಲಿಯೇ ನಿಲ್ಲಿಸಿ ತದೇಕಧ್ಯಾನನಾಗಿರುವನು. ಹಾಗಿದ್ದಮೇಲೆ ಅವನ ಇಂದ್ರಿಯಗಳು ಅವನನ್ನು ಏನೂ ಮಾಡಲಾರವೆಂದು ತಿಳಿಯಬೇಕು. ಅವನು ಹಾಗೆ ಮಾಡದಿದ್ದಲ್ಲಿ, ಅವನ ಮನಸ್ಸೂ ಮತ್ತು ಇಂದ್ರಿಯಗಳೂ ಅವನಿಗೆ ವಶವಾಗಲಾರವು. ಇವೆರಡನ್ನೂ ವಶಪಡಿಸಿಕೊಳ್ಳುವುದಕ್ಕೆ ಬುದ್ಧಿಯೇ ಮುಖ್ಯಕಾರಣವು.

ಅರ್ಜುನ :—ಹಾಗಾದರೆ, ಬುದ್ಧಿಯನ್ನು ಸ್ವಾಧೀನಪಡಿಸಿಕೊಳ್ಳುವ ಮಾರ್ಗವೆಂತದೋ ಅದನ್ನು ತಿಳಿದುಕೊಳ್ಳಬೇಕು ಸ್ವಾಮಿ!

ಕೃಷ್ಣ :—ಅದನ್ನು ತಿಳಿಸುತ್ತೇನೆ, ಶ್ರದ್ಧೆಯಿಂದ ಕೇಳು.

ಶ್ರುತಿ ॥ “ ಆತ್ಮಾನಂ ರಥಿನಂ ವಿದ್ಧಿ ♦ ಶರೀರಂ ರಥ ಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ♦ ಮನಃ ಪ್ರಗ್ರಹ ಮೇವ ಚ ॥
ಇಂದ್ರಿಯಾಣಿ ಹಯಾ ನಾಹುಃ ♦ ವಿಷಯಾಂ ಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ♦ ಭೋಕ್ತೇ ತ್ಯಾಹು ರ್ಮನೀಷಿಣಃ ॥
ಯಸ್ತ್ವ ವಿಜ್ಞಾನವಾನ್ ಭವ ♦ ತ್ಯಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾ ಣ್ಯವಶ್ಯಾನಿ ♦ ದುಷ್ಟಾಶ್ವಾ ಇವ ಸಾರಥೇಃ ॥
ಯಸ್ತು ವಿಜ್ಞಾನವಾನ್ ಭವತಿ ♦ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ♦ ದುಷ್ಟಾಶ್ವಾ ಇವ ಸಾರಥೇಃ ॥ ”

(ಕಠೋಪನಿಷತ್ತು)

“ Know that the Soul is the master of the chariot who sits within it, and the body the chariot. Consider the intellect as the charioteer and the mind the reins.

The senses, they say, are the horses, and their roads are the sense objects. The wise call Him the enjoyer (when He is) United with the body, senses and the mind.

“ One who is always devoid of unrestrained mind and devoid of right understanding, his senses become uncontrollable like the wicked horses of a charioteer.

“ But he who is always of restrained mind and has right understanding, his senses are controllable like the good horses of a charioteer.”

(Swami Sharvananda.)

ಆತ್ಮನೆಂಬ ರಥಿಕನಿಗೆ ಶರೀರವೇ ಒಂದು ರಥ, ಬುದ್ಧಿಯೇ ಸಾರಥಿ, ಮನಸ್ಸೇ ಕುದುರೆಗಳನ್ನು ಹಿಡಿಯುವ ಹಗ್ಗಗಳು ಅಂದರೆ ಲಗಾಮುಗಳು. ಇಂದ್ರಿಯಗಳೇ ರಥವನ್ನು ಎಳೆಯುವ ಕುದುರೆಗಳು. ಆ ಇಂದ್ರಿಯ ವಿಷಯಗಳೇ ಆ ಕುದುರೆಗಳು ಹೋಗುವ ಮಾರ್ಗಗಳು. ಈ ಶರೀರ, ಇಂದ್ರಿಯ

ಗಳು ಮತ್ತು ಮನಸ್ಸು ಇವುಗಳಿಂದ ಕೂಡಿದಾಗ ಮಾತ್ರವೇ ಆ ಜೀವಾತ್ಮನನ್ನು 'ಭೋಕ್ತ' ನೆಂದು ಜ್ಞಾನಿಗಳು ಕರೆಯುತ್ತಾರೆ. ಯಾವಾತನ ಮನಸ್ಸು ಹತೋಟಿಗೆ (ಸ್ವಾಧೀನಕ್ಕೆ) ಬರುವುದಿಲ್ಲವೋ ಯಾವನು ಸರಿಯಾದ ವಿವೇಚನಾಜ್ಞಾನವನ್ನು ಹೊಂದಿರುವುದಿಲ್ಲವೋ ಅಂತಹನಿಗೆ, ಸಾರಥಿಗೆ ದುಷ್ಟಾಶ್ವಗಳು ವಶವಾಗದ ರೀತಿಯಲ್ಲಿ, ಎಂದಿಗೂ ಇಂದ್ರಿಯಗಳು ಅಧೀನವಾಗಲಾರವು. ಆದರೆ ಯಾವನು ಮನಸ್ಸನ್ನು ತನ್ನ ವಶದಲ್ಲಿಟ್ಟುಕೊಂಡು, ವಿವೇಚನಾಪರನಾಗಿದ್ದಲ್ಲಿ ಅಂತಹನಿಗೆ, ಸಾಧುವಾದ ರಥಕುದುರೆಗಳು ಸಾರಥಿಗೆ ವಶವಾಗುವ ರೀತಿಯಲ್ಲಿ, ನಿಶ್ಚಯವಾಗಿಯೂ ಇಂದ್ರಿಯಗಳು ವಶವರ್ತಿಯಾಗುತ್ತವೆ" ಎಂಬುದೇ ಮೇಲಿನ ಉಪನಿಷದ್ವಾಕ್ಯಗಳ ಮುಖ್ಯಾರ್ಥ. ಇಂದ್ರಿಯಗಳು ವಶವಾದೊಡನೆಯೇ ಜೀವಿಯ ಜ್ಞಾನನಿಷ್ಠೆಯು ನಿರ್ವಿಘ್ನವಾಗಿ ನೆರವೇರುತ್ತದೆ. ಇದೂ ಅಲ್ಲದೆ,

ಶ್ರುತಿ ॥ "ಯಸ್ತ್ವವಿಜ್ಞಾನವಾನ್ ಭವ ♦ ತ್ಯಮನಸ್ಕಃ ಸದಾಽಶುಚಿಃ ।
ನ ಸ ತತ್ಪದ ಮಾಪ್ನೋತಿ ♦ ಸಂಸಾರಂ ಚಾಧಿಗಚ್ಛತಿ ॥

ಯಸ್ತು ವಿಜ್ಞಾನವಾನ್ ಭವತಿ ♦ ಸುಮನಸ್ಕಃ ಸದಾ ಶುಚಿಃ ।
ಸ ತು ತತ್ಪದ ಮಾಪ್ನೋತಿ ♦ ಯಸ್ಮಾದ್ಭೂಯೋ ನ ಜಾಯತೇ ॥

ವಿಜ್ಞಾನಸಾರಥಿ ರ್ಯಸ್ತು ♦ ಮನಃ ಪ್ರಗ್ರಹವಾನ್ ನರಃ ।
ಸೋಽಧ್ವನಃ ಪಾರ ಮಾಪ್ನೋತಿ ♦ ತದ್ವಿಷ್ಣೋಃ ಪರಮಂ ಪದಂ ॥

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ♦ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ♦ ಬುದ್ಧೇ ರಾತ್ಮಾ ಮಹಾನ್ ಪರಃ ।

ಮಹತಃ ಪರ ಮವ್ಯಕ್ತ ♦ ಮವ್ಯಕ್ತಾ ತ್ಪುರುಷಃ ಪರಃ ।
ಪುರುಷಾ ನ್ನ ಪರಂ ಕಿಂಚಿತ್ ♦ ಸಾ ಕಾಷ್ಠಾ ಸಾ ಪರಾ ಗತಿಃ ॥"

(ಕಠೋಪನಿಷತ್ತು.)

ಯಾವನು ವಿವೇಕಜ್ಞಾನವಿಲ್ಲದೆಯೂ ಮುಂದಾಲೋಚನೆಯಿಲ್ಲದೆಯೂ ಇದ್ದು ಸದಾ ಅಶುಚಿಯಾಗಿರುತ್ತಾನೆಯೋ ಅವನು ಎಂದಿಗೂ ಮುಕ್ತಿಭವನವನ್ನು ಹೊಂದದೆ ಹುಟ್ಟು ಸಾವುಗಳೆಂಬ ಈ ಸಂಸಾರ ಸಮುದ್ರದಲ್ಲಿ ತೇಲಿ ಮುಳುಗುತ್ತಿರುತ್ತಾನೆ. ಆದರೆ ಯಾವನು ವಿವೇಕಿಯಾಗಿ ನಿರ್ಮಲಚಿತ್ತನಾಗಿ ಮನಸ್ಸನ್ನು ಸ್ವಾಧೀನಪಡಿಸಿಕೊಂಡು ಇರು

ತ್ತಾನೆಯೋ ಅವನು ನಿಶ್ಚಯವಾಗಿಯೂ ಹುಟ್ಟುಸಾವುಗಳೆಂಬ ಸಂಸಾ ಬಂಧದಿಂದ ಮುಕ್ತನಾಗಿ ಮೋಕ್ಷವನ್ನು ಪಡೆಯುತ್ತಾನೆ. ಒಬ್ಬಾನೊಬ್ಬ ಮನುಷ್ಯನು, ತನ್ನ ಸಾರಥಿಯು ಬುದ್ಧಿವಂತನಾಗಿ ಕುದುರೆಗಳನ್ನು ತನ್ನ ವಶಪಡಿಸಿಕೊಂಡು ಸರಿಯಾದ ಮಾರ್ಗದಲ್ಲಿ ರಥವನ್ನು ನಡೆಸಿಕೊಂಡು ಹೋದದ್ದೇ ಆದರೆ, ತಾನು ಸೇರಬೇಕಾದ ಸ್ಥಳವನ್ನು ಸುಖವಾಗಿ ಯಾವ ರೀತಿಯಲ್ಲಿ ಸೇರುತ್ತಾನೆಯೋ, ಹಾಗೆಯೇ ಈ ಶರೀರದೊಳಗಿರುವ ಜೀವನೂ ಕೂಡ, ಬುದ್ಧಿಯು ಮನಸ್ಸನ್ನು ವಶಪಡಿಸಿಕೊಂಡು ಇಂದ್ರಿಯ ಗಳನ್ನು ಜಯಿಸಿದ್ದೇ ಆದರೆ ಶಾಶ್ವತವಾದ ಮತ್ತು ಅತ್ಯುತ್ತಮವಾದ ವಿಷ್ಣುಪದ (ಮೋಕ್ಷ) ವನ್ನು ಪಡೆಯುತ್ತಾನೆ. ಇಂದ್ರಿಯವಿಷಯ ಗಳು ಇಂದ್ರಿಯಗಳಿಗಿಂತಲೂ ಉತ್ತಮವಾದವು, ಮನಸ್ಸು ಇಂದ್ರಿಯಾರ್ಥ ಗಳಿಗಿಂತಲೂ ಶ್ರೇಷ್ಠನಾದದ್ದು. ಬುದ್ಧಿಯು ಮನಸ್ಸಿಗಿಂತಲೂ ಮೇಲ ತರವಾದದ್ದು. ಆತ್ಮನು ಬುದ್ಧಿಗಿಂತಲೂ ಅತ್ಯುತ್ತಮನಾದವನು. ಅವ್ಯಕ್ತ ನಾದ ಅಂದರೆ ಬಯಲುಸ್ವರೂಪನಾದ ಆ ಪರಮಾತ್ಮನು ಆ ಆತ್ಮ ಗಿಂತಲೂ ಶ್ರೇಷ್ಠವಾದವನು. ಇಂತಹ ಪರಮಾತ್ಮನಿಗೇ 'ಪುರುಷ ನೆಂದು ಹೆಸರು. ಈ 'ಪುರುಷ' ನಿಗಿಂತಲೂ ಉತ್ತಮವಾದುದು ಬೇ ಯಾವುದೂ ಇಲ್ಲ. ಇದೇ ಸಮಸ್ತ ಜೀವಿಲೋಕಕ್ಕೂ ಕಡೆಯ ಗುರಿ ಮತ್ತು ಇದೇ ಉಪನಿಷತ್ತಿನಲ್ಲಿ ಅಧ್ಯಾಯ 3, ಶ್ಲೋಕ 12 ರಲ್ಲಿ,

ಶ್ರುತಿ ॥ "ಏಷ ಸರ್ವೇಷು ಭೂತೇಷು ♦ ಗೂಢಾಽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುಧ್ಯಾ ♦ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥"

ಇದೇ ಪರಮಾತ್ಮನು ಸಮಸ್ತ ಜೀವಿಜಾಲಗಳಲ್ಲಿಯೂ ಸ್ಥಾವ ಜಂಗಮಗಳಲ್ಲಿಯೂ ಗೂಢವಾಗಿ ಅಡಗಿದ್ದೇ ತನ್ನ ಸ್ವರೂಪವನ್ನು ಹೊರಗೆ ಬೆಳಗುವಂತೆ ಮಾಡದಿದ್ದರೂ, ಮಹಾಜ್ಞಾನಿಗಳಾದ ಯೋಗೀಶ್ವರರು ತಮ್ಮ ಸೂಕ್ಷ್ಮಬುದ್ಧಿಯಿಂದ ಆತನ ಸ್ವರೂಪವನ್ನು ತಿಳಿದು ಇತರರ ಉಪಯೋಗಕ್ಕಾಗಿ ಆ ರಹಸ್ಯವನ್ನು ಹೊರಪಡಿಸಿರುತ್ತಾರೆ.

ಶ್ಲೋ ॥ ಇಂದ್ರಿಯದ್ವಾರಾ ಸಂಗ್ರಾಹ್ಯೈಃ ♦ ಗಂಧಾದ್ಯೈ ರಾತ್ಮದೇವತಾಂ ।
ಸ್ವಯಂ ಭಕ್ತ್ಯಾ ಸಮಾರಾಧ್ಯ ♦ ಜ್ಞಾತಂ ಸೋಽಯಂ ಮಹಾಮುಖಃ ॥

ಹಿಂದೆ ಹೇಳಿದಂತೆ ಇಂದ್ರಿಯಗಳೆಂಬ ಕುದುರೆಗಳನ್ನು ಅವುಗಳ ಇಷ್ಟಾನುಸಾರವಾಗಿ ದುರ್ವ್ಯಾಪಾರಗಳಲ್ಲಿ ಹೋಗಲೀಯದೆ ಹಿಂದಿರುಗಿಸಿ ಆತ್ಮನಿಷ್ಠೆಯನ್ನು ಮಾಡುವುದೇ ಮಹಾ ಯೋಗವು. ಕಣ್ಣು, ಕಿವಿ, ಮೂಗು, ಬಾಯಿ, ಚರ್ಮವೆಂಬಿವೈದೂ ಇಂದ್ರಿಯಗಳು. ಇವುಗಳನ್ನು ಅವುಗಳ ಇಷ್ಟಾನುಸಾರವಾಗಿ ಹೋಗದಂತೆ ತನ್ನ ಹತೋಟಿಯಲ್ಲಿಟ್ಟು ಕೊಂಡಿದ್ದು ಮನಸ್ಸನ್ನು ಆತ್ಮನಿಷ್ಠೆಯಲ್ಲಿ ನಿಲ್ಲಿಸಬೇಕು.

ಮೇಲೆ ಹೇಳಿದ ಪಂಚೇಂದ್ರಿಯಗಳಲ್ಲಿ ನೇತ್ರೇಂದ್ರಿಯಗಳನ್ನು ಕುರಿತು ಈ ಕೆಳಗೆ ವಿವರಿಸಿದೆ. ಅದು ಹೇಗೆಂದರೆ:—ದೇವಾಲಯಗಳಲ್ಲಿ ನಡೆಯುತ್ತಿರುವ ಉತ್ಸವಗಳನ್ನು ನೋಡುವುದಕ್ಕೆ ಹೋಗಬೇಕೆಂದೆಳೆ ಸುವ ಕೆಲವು ಸ್ತ್ರೀಯರು ಸ್ನಾನಮಾಡಿ, ತಲೆ ಬಾಚಿಕೊಂಡು ಕೆಲವರು ಮುಡಿಯನ್ನೂ ಕೆಲವರು ಜಡೆಯನ್ನೂ ಹಾಕಿಕೊಂಡು, ಘಮಘಮಿಸುವ ಹೂವನ್ನು ಮುಡಿದು, ಹಣೆಯಲ್ಲಿ ಒಳ್ಳೆಯ ರಂಗಿನಿಂದ ಕೂಡಿರುವ ಕುಂಕುಮದ ಬೊಟ್ಟನ್ನೋ ಇಲ್ಲವೇ ತಿಲಕವನ್ನೋ ಇಟ್ಟು, ಪಟ್ಟೆಶೀರೆ, ಕಾಶೀ ಪೀತಾಂಬರ, ಮತಾಪುಶೀರೆ ಮೊದಲಾದ ಹೆಚ್ಚು ಬೆಲೆಯುಳ್ಳ ಸೀರೆಗಳನ್ನುಟ್ಟು, ವಿವಿಧ ಬಣ್ಣಗಳಿಂದಲೂ ಹೂವಿನ ಚುಕ್ಕೆಗಳಿಂದಲೂ ಹೊಳೆಯುತ್ತಿರುವ ಪಟ್ಟೆಕುಪ್ಪಸಗಳನ್ನೋ ಇಲ್ಲವೇ ರೇಷ್ಮೆ ಜಂಪರ್ ಕುಪ್ಪಸಗಳನ್ನೋ ತೊಟ್ಟು, ತಮಗೆ ಹಾಕಿಕೊಳ್ಳುವುದಕ್ಕೆ ಆಭರಣಗಳು ಇಲ್ಲವಾದರೂ ಪತ್ತೆಲ್ಲಿಂದಲಾದರೂ ಎರವು ತೆಗೆದುಕೊಂಡುಬಂದು, ಕಿವಿಗಳು, ಕಂಠ, ಕೈಗಳು, ಕಾಲ್ಗಳು, ಮೂಗು, ತಲೆ ಈ ಮೊದಲಾದ ಭಾಗಗಳಲ್ಲಿ ಬೇರೆ ಬೇರೆ ಒಡವೆಗಳನ್ನು ಅಲಂಕರಿಸಿಕೊಂಡು ಅಕ್ಕಪಕ್ಕದಲ್ಲಿರುವ ಸಂಗಾತಿಯರಿಗೂ ಅಲಂಕಾರಮಾಡಿ ಅವರನ್ನು ತಮ್ಮೊಡನೆ ದೇವಾಲಯಗಳಿಗೆ ಕರೆದುಕೊಂಡು ಹೋಗುತ್ತಾರೆ. ದೇವಾಲಯಗಳಿಗೆ ಹೋದಮೇಲೆ ಆ ಸ್ಥಳಗಳಲ್ಲಿರುವ ಕೆರೆಯೋ, ಕೊಳವೋ, ಕುಂಟೆಯೋ ಇವುಗಳಲ್ಲಿ ಕೈಕಾಲುಬಾಯಿಗಳನ್ನು ಚನ್ನಾಗಿ ತೊಳೆದುಕೊಂಡು ಗುಡಿಯೊಳಕ್ಕೆ ಪ್ರವೇಶಿಸುವುದಕ್ಕೆ ಹೋದಾಗ ದಾರಿಯಲ್ಲಿ ತಮ್ಮಂತೆಯೇ ನಡೆದು ಬರುತ್ತಿದ್ದ ಇತರ ಸ್ತ್ರೀಯರನ್ನು ನೋಡಿ "ಲಕ್ಷ್ಮೀ! ಅಗೋ ಆ ಮತಾಪು ಕುಪ್ಪಸವನ್ನು ತೊಟ್ಟಿರುವ ಅವಳನ್ನು ನೋಡಿದೆಯಾ? ಅವಳು

ಉಟ್ಟುಕೊಂಡಿರುವ ಮೇಘವರ್ಣದ ಸೀರೆಗೂ ಆ ಮತಾಪು ಕುಪ್ಪಸಕ್ಕೂ ಯಾವ ರೀತಿಯಾಗಿ ಜೊತೆಗೂಡುತ್ತದೆ ನೋಡು. ಇಂತಹ ಸೀರೆಯನ್ನೂ ಕುಪ್ಪಸವನ್ನೂ ನಾನೂ ಕೊಂಡುಕೊಳ್ಳಬೇಕು. ಆಕೆಯ ಕಪ್ಪುಬಣ್ಣದ ಮುಖಕ್ಕೆ ತಕ್ಕಂತೆ ಬಿಳೀಹರಳಿನ ಮೂಗುಬೊಟ್ಟನ್ನೂ ಮತ್ತು ಬಿಳೀಹರಳಿನ ಬೆಂಡೋಲೆಯನ್ನೂ ಅವಳು ಧರಿಸಿದ್ದರೆ ಎಷ್ಟು ಪ್ರಕಾಶವಾಗಿರುತ್ತಿತ್ತೋ ನೋಡು" ಎಂದು ಒಬ್ಬೊಬ್ಬ ಸ್ತ್ರೀಯೂ ಮತ್ತೊಬ್ಬಳನ್ನು ನೋಡಿ ಸ್ವೇಚ್ಛೆಯಿಂದ ಮಾತನಾಡಿಕೊಳ್ಳುವುದಕ್ಕೆ ದೇವಾಲಯಕ್ಕೆ ಹೋಗುವರೇ ಹೊರತು ಭಕ್ತಿಯಿಂದ ದೇವರನ್ನು ದರ್ಶನಮಾಡುವುದಕ್ಕಲ್ಲವು. ಇದೇರೀತಿಯಲ್ಲಿಯೇ ಪುರುಷರೂ ಸ್ನಾನವನ್ನು ಮಾಡಿ ವಿಭೂತಿಯನ್ನೋ ಇಲ್ಲವೇ ಶ್ರೀಚೂರ್ಣವನ್ನೋ ಹಣೆಯಲ್ಲಿಟ್ಟು ಜರತಾರು ಪಂಚೆಯನ್ನಾಗಲಿ ಅಥವಾ ಕಂಚಿ ಪಟ್ಟೆ ಪಂಚೆಯನ್ನಾಗಲಿ ಉಟ್ಟು, ನಾನಾತರದ ಉತ್ತಮವಾದ ಧೋತ್ರಗಳನ್ನು ಹೊದೆದು ದೇವಾಲಯವನ್ನು ಪ್ರವೇಶಿಸುವ ಸಮಯದಲ್ಲಿ ಪಕ್ಕದಲ್ಲಿರುವ ತಮ್ಮ ಸ್ನೇಹಿತನನ್ನು ಕುರಿತು "ರಘುನಾಥರಾವ್, ಅಗೋ! ಕೆಂಪು ಕಾಶೀಪೀತಾಂಬರವನ್ನುಟ್ಟು ನವಿಲುಗರಿಯ ಬಣ್ಣವನ್ನುಳ್ಳ ಕುಪ್ಪಸವನ್ನು ತೊಟ್ಟು ಹೋಗುತ್ತಿರುವ ಆಕೆಯನ್ನು ನೋಡು. ಅವಳಿಗೆ ಎಷ್ಟು ಸಣ್ಣ ನಡು, ಎಂತಹ ಗುಂಡು ಮುಖ, ಅಂದವಾದ ಮೂಗು, ಕಾಂತಿಯುತವಾದ ಕಣ್ಣು, ಬಿಲ್ಲಿನಂತೆ ಬಗ್ಗಿರುವ ಹುಬ್ಬುಗಳು, ಅಷ್ಟಮೀ ಚಂದ್ರನಂತಿರುವ ಹಣೆ, ಸರ್ಪದಂತಿರುವ ಜಡೆ, ಹಂಸದಂತಿರುವ ನಡಿಗೆ ಇವೆಲ್ಲವೂ ಆಕೆಯ ಸೌಂದರ್ಯವನ್ನು ಎಷ್ಟು ಹೆಚ್ಚಿಸುತ್ತವೆ ನೋಡು. ಹೆಚ್ಚೇಕೆ, ಆಕೆಯ ಸೌಂದರ್ಯವನ್ನು ಈ ಕೆಳಗಿನ ಪದ್ಯಗಳು ಚನ್ನಾಗಿ ತಿಳಿಯಹೇಳುತ್ತವೆ.

ವಾರ್ಧಿಕಷಟ್ಪದಿ ॥ "ಸುನಿಮೇಷಮೀನಚಾಪಲನೇತ್ರೆ ಚಕೋರೀನ್ಮಿ ।
ಘನಕುಂಭಕುಚೆ ಮಕರಕೇತುವರಮಾತುಳಸಮಾ ।
ನನೆ ಸಿಹ್ಮಮಧ್ಯೆ ವೃಷಭಧ್ವಜಾರಿಯ ಪಟ್ಟದಾನೆ ಕನ್ಯಾಕುಲಮಣಿ ॥
ಮನಸಿಜ ಶಶಾಂಕ ಕರ್ಕಟಕ ಚೇಲಮುಂ ತೊಡುವ ।
ತನಿಸೊಬಗು ವಡೆದ ಸನ್ಮೋಹನದ ಕಣಿಯೆ! ಬಾ ।
ಯೆನು ತೋರ್ವ ತಾಂ ನೀರೆಯುಂ ಕರೆದ ನೀರಾರು ರಾಶಿಯುಂ ಪೆಸರಿಪವೊಲು ॥"

"ಕಲಹಂಸಗಮನೆ ಪೂರ್ಣೇಂದುಮುಖಿ ಚಾರು ಮಂ ।
ಗಳಗಾತ್ರಿ ಘನಸೌಮ್ಯಸುಂದರವಿಲಾಸಿನಿ ವಿ ।
ಮಲಗುರುಪಯೋಧರೆ ಸರಸಕವಿನುತಪ್ರಮದೆ ಮಲ್ಲಿಕಾ
ಮಂದಸ್ಮಿತೆ ॥
ವಿಲಸದ್ಭುಜಂಗಸಂಗತೆ ಮದನಕೇತುಜಂ ।
ಚಲನೇತ್ರೆ ಕೇಳ್ನಿನ್ನ ಪೆಸರಿಗಿದೆ ನವಗ್ರಹಂ ।
ಗಳ ಪೆಸರಬಲ ನಿನ್ನ ಸೋಲ್ದಪು ದಿವಳಿಗೆ ಜನಮೆಂದನೊಬ್ಬನು।
ಸಖನೊಳು ॥"

ಮತ್ತು ಈಕೆಯ ಕಣ್ಣುಗಳಾದರೋ,

"ಅಪರದಿಗ್ಭಾಗದಂತಂಜನೋದ್ಭಾಸಿತಂ ।
ವಿಪುಲಹರಿಪದದಂತೆ ತಾರಕಾಲಂಕೃತಂ
ಲಿಪಿಯಂತೆ ದೀರ್ಘಶೋಭಾನ್ವಿತಂ ದ್ವಿಜನಂತೆ ಶ್ರುತಿಯುತಂ
ದೈತ್ಯನಂತೆ ॥
ಅಪಹೃತಾನಿಮಿಷಲೀಲಾವಿಲಾಸಂ ನರಾ ।
ಧಿಪನಂತೆ ಕುವಲಯಶ್ರೀಧರಂ ಘನದಂತೆ ।
ಚಪಲಾಭಿರಾಮಮಾಗಿರುವುದಾ ಶಶಿಮುಖಿಯ ನೇತ್ರಯುಗ
ಮೇವೇಳ್ವೆನು ॥"
(ಜೈಮಿನಿಭಾರತ)

ಈಕೆಯನ್ನು ಮದುವೆಮಾಡಿಕೊಳ್ಳುವ ಪುಣ್ಯವು ಯಾರಿಗೆ ಲಭಿಸಿದೆಯೋ' ಎಂದು ಹೇಳುತ್ತಿರುವಾಗ್ಗೆ ಮತ್ತೊಬ್ಬನು ಇನ್ನೊಬ್ಬಳನ್ನು ನೋಡಿ ಆಕೆಯ ಸೌಂದರ್ಯಕ್ಕೆ ಮೋಹಪಟ್ಟು, "ಪ್ರಿಯಗೆಳೆಯಾ! ಈ ಸುಂದರಿಯನ್ನು ನೋಡಿದೆಯಾ! ಈಕೆಯು ಹೇಗಿರುವಳೆಂದರೆ:—

ಶ್ಲೋ॥ ತನ್ವೀ ಶ್ಯಾಮಾ ಶಿಖರಿದಶನಾ ♦ ಪಕ್ವಬಿಂಬಾಧರೋಷ್ಠೀ ।
ಮಧ್ಯೇ ಕ್ಷಾಮಾ ಚಕಿತಹರಿಣೀ ♦ ಪ್ರೇಕ್ಷಣಾ ನಿಮ್ನನಾಭಿಃ ॥
ಶ್ರೋಣೀಭಾರಾ ದಲಸಗಮನಾ ♦ ಸ್ತೋಕನಮ್ರಾ ಸ್ತನಾಭ್ಯಾಂ ।
ಯಾ ತತ್ರಾಸ್ತೇ ಯುವತಿವಿಷಯೇ ♦ ಸೃಷ್ಟಿರಾದ್ಯೈವ ಧಾತುಃ ॥
(ಮೇಘಸಂದೇಶ)

"ಈ ಸುಂದರಿಯು ಕೃಶಾಂಗಿ ಅಂದರೆ ಲತೆಯಂತೆ ಬಳುಕುತ್ತಿದ್ದಾಳೆ; ಹದಿನಾರುವರ್ಷದ ಬಾಲೆ; ಒಂದೇ ಸಮನಾಗಿರುವ ಮತ್ತು

ಮೊಲ್ಲೆಯ ಮೊಗ್ಗಿನಂತೆ ಮೊನೆಚಾದ ಹಲ್ಲುಳ್ಳವಳು; ಕೆಳತುಟಿಯಾದರೋ ಕೆಂಪಾದ ತೊಂಡೆಯ ಹಣ್ಣಿನಂತಿದೆ; ಕೃಶವಾದ ನಡು; ಹೆಣ್ಣುದುಪ್ಪಿಯ ಕಣ್ಣಿನಂತೆ ಚಂಚಲವಾದ ಕಣ್ಣುಳ್ಳವಳು, ಶ್ರೋಣೀಭಾರದಿಂದ ನಿಧಾನವಾದ ನಡಿಗೆಯುಳ್ಳವಳು ಮತ್ತು ಕುಚಭಾರದಿಂದ ಸ್ವಲ್ಪ ಬಗ್ಗಿರುವಳು. ಬ್ರಹ್ಮನ ಸೃಷ್ಟಿಯಲ್ಲಿ ಇವಳೇ ಮೊದಲನೆಯವಳೆಂದು ತೋರುತ್ತದೆ." ಇದ್ದರೆ ಇಂತಹಳು ಹೆಂಡತಿಯಾಗಿರಬೇಕು ಎಂದು ಆ ತರುಣಿಯ ಕಡೆಗೆ ಬೆರಳು ತೋರಿಸುತ್ತ ಅವಳಲ್ಲೇ ನಟ್ಟ ಮನಸ್ಸುಳ್ಳವನಾಗಿರುವನೇ ಹೊರತು ದೇವರಲ್ಲಿನ ಭಕ್ತಿಯೆಂಬುದೇ ಇಲ್ಲವು. ಮೇಲೆ ಹೇಳಿದಂತೆ ಸ್ತ್ರೀಪುರುಷರು ಮನ್ಮಥಾವಿಷ್ಟಮನಸ್ಕರಾಗಿ "ದೈವಭಕ್ತಿಯೆಂಬುದೇ ಇಲ್ಲದಂತೆ, ದೇವಾಲಯದೊಳಕ್ಕೆ ಹೋಗಿ ದೇವರ ದರ್ಶನವನ್ನು ಮಾಡದೆಯೇ "ನುಗ್ಗಾಟ ಬಹಳ, ದೇವರ ದರ್ಶನ ಬಹು ಕಷ್ಟ," ಎಂಬ ನೆಪವಿಟ್ಟುಕೊಂಡು ಹೊರಗಡೆಯೇ ತಮಗೆ ಪ್ರೀತಿಯುಳ್ಳ ವ್ಯಕ್ತಿಗಳಲ್ಲಿ ಇಷ್ಟಬಂದದ್ದನ್ನು ಮಾತನಾಡಿ ಹಿಂದಿರುಗುತ್ತಾರೆ. ಇದೇನು ವೈಚಿತ್ರ್ಯ! ನೋಡಿದಿರಾ! ಮಹಾ ಪವಿತ್ರವಾದ ದೇವಾಲಯವು ಕೂಡ ದೈವಭಕ್ತಿಯಿಲ್ಲದ ಸ್ತ್ರೀಪುರುಷರಿಗೆ ಮನ್ಮಥನ ಕೇಳೀಗೃಹವಾಯಿತು. ಇಂತಹರು ತಾವೂ ಕೆಡುವುದಲ್ಲದೆ ತಮ್ಮ ಅನುಭವಗಳನ್ನು ತಮ್ಮ ಆಪ್ತಮಿತ್ರರಿಗೆ ಹೇಳಿ ಅವರಿಗೂ ದೈವಭಕ್ತಿಯುಂಟಾಗುವುದಕ್ಕೆ ಅವಕಾಶಕೊಡದೆ ಕಡೆಗೆ ಅವರನ್ನೂ ಅಧೋಗತಿಗೆ ಸೆಳೆಯುತ್ತಿರುತ್ತಾರೆ.

ಕೆಲವರ ವಿಷಯವಂತೂ ಮೇಲೆ ವಿವರಿಸಿದ್ದಾಯಿತು. ಮತ್ತೆ ಕೆಲವರು ದೇವಾಲಯಕ್ಕೆ ಹೋಗದೆಯೇ ಸದಾ ತಮ್ಮ ತಮ್ಮ ವ್ಯಾಪಾರಗಳಲ್ಲಿಯೇ ನಿರತರಾಗಿ ದೈವಭಕ್ತಿಯೆಂತಹುದೆಂಬುದನ್ನೇ ಮರೆತು ವೃಥಾ ಕಾಲಯಾಪನೆಯನ್ನು ಮಾಡಿ ಮೋಕ್ಷಭವನಕ್ಕೆ ಹಾದಿಯನ್ನು ಹುಡುಕದೆಯೇ ಕೆಡುತ್ತಿದ್ದಾರೆ. ಇಂತಹ ಪಾಮರ ಜನಗಳಿಗಾಗಿಯೇ ದೇವಾಲಯಗಳಲ್ಲಿ ಮಹೋತ್ಸವಗಳು ನಡೆಯುತ್ತಿರುವ ಕಾಲದಲ್ಲಿ ದೇವರ ಮುಂಭಾಗದಲ್ಲಿ ಇಂಪಾದ ಅಂದರೆ ಮೇಳ ತಾಳ ಮೃದಂಗ ಮೊದಲಾದ ವಾದ್ಯಗಳನ್ನು ಬಾರಿಸುವುದೂ, ಸೂಳೆಯರ ನರ್ತನ ಮೊದಲಾದುವುಗಳನ್ನು ಏರ್ಪಡಿಸುವುದೂ, ಹರಿಕಥೆ, ಸಂಗೀತ ಮೊದಲಾದುವುಗಳು ನಡೆಯು

ವಂತೆ ಮಾಡುವುದೂ ಉಂಟು. ಹೀಗೆ ಮಾಡಿದ್ದರಿಂದ ಇವುಗಳಿಗಾಗಿ ಮೋಹವಿಟ್ಟು ಬಂದವರೂ ಕೂಡ ಇವೆಲ್ಲವನ್ನೂ ಆ ಪರಮಾತ್ಮಸ್ವರೂಪಿಯಾದ ಆ ದೇವರ ಸೇವೆಗಾಗಿಯೇ ಹೊರತು ಬೇರಲ್ಲ. ನಮ್ಮೆಲ್ಲರಿಗೂ ಈರೀತಿಯಾದ ಆನಂದವು ಆ ದೇವರಿಂದ ನಮಗೆ ದೊರಕಿದೆಯಾದುದರಿಂದ ಆ ಪರಮಾತ್ಮನ ಮಹಿಮೆಯು ಅಪಾರವಾದುದು ಆತನನ್ನು ನಾವೂ ಸೇವಿಸಬೇಕು' ಎಂಬ ಬುದ್ಧಿಯು ಒಂದು ಕ್ಷಣಮಾತ್ರವಾದರೂ ಉಂಟಾಗುತ್ತದೆಯಾಗಿ ನಮ್ಮ ಹಿರಿಯರು ದೇವಾಲಯಗಳಲ್ಲಿ 'ಸೂಳೆಯರ ಕುಣಿತ, ಇಂಪಾದ ಗಾನ ವಾದ್ಯಗಳು, ಇವುಗಳು ನಡೆಯುವಂತೆ ಏರ್ಪಡಿಸಿರುತ್ತಾರೆ. ಈರೀತಿಯಾಗಿ ಏರ್ಪಡಿಸಿದ್ದರೂ ಜನಗಳು ದೇವಾಲಯಕ್ಕೆ ಹೋಗಿ ಭಗವಂತನ ಸಗುಣಾರಾಧನೆಯನ್ನು ಮಾಡದೆ, ತಮ್ಮ ಮನಸ್ಸು, ಕಣ್ಣು ಮೊದಲಾದ ಇಂದ್ರಿಯಗಳನ್ನು ದುರ್ವಿಷಯದಲ್ಲಿಯೇ ಓಡುವಂತೆ ಮಾಡುತ್ತಾರೆ. ಈ ಮೇಲೆ ಹೇಳಿದ ಅನಾಹುತಗಳೆಲ್ಲವೂ ಕಣ್ಣಿನಿಂದಾದುದು. ಆದುದರಿಂದ ನೇತ್ರೇಂದ್ರಿಯಗಳು ಯಾವ ವಸ್ತುಗಳ ಮೇಲೆ ಬಿದ್ದು ನೋಡುತ್ತವೆಯೋ ಆ ವಸ್ತುಗಳನ್ನು ಮನಸ್ಸಿನ ಸಮಿಾಪಕ್ಕೆ ತಂದು ಸೇರಿಸುತ್ತವೆ. ಆಗ ಮನಸ್ಸು ಆ ವಸ್ತುಗಳನ್ನು ಗ್ರಹಿಸಿ ಅದನ್ನು ಹೊಂದಬೇಕೆಂದು ದುರ್ಮಾರ್ಗವಿಷಯಗಳಲ್ಲಿ ಪ್ರವೇಶಿಸಿ ಪುರುಷನನ್ನು ಅಧೋಗತಿಗೆ ಬೀಳುವಂತೆ ಮಾಡಿ ಅದರಿಂದ ಅನೇಕ ಅನರ್ಥಗಳೊಳಕ್ಕೆ ಎಳೆದುಕೊಂಡುಹೋಗಿ ಬಿಡುತ್ತದೆ. ಆದುದರಿಂದ ಸಮಸ್ತ ಸ್ತ್ರೀಪುರುಷರೂ ಇಂದ್ರಿಯವ್ಯಾಪಾರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಹಿಡಿತದಲ್ಲಿಟ್ಟುಕೊಂಡು ಆತ್ಮನಿಷ್ಠೆಯಲ್ಲಿ ಮನಸ್ಸನ್ನು ಐಕ್ಯಮಾಡುವುದು ಯಜ್ಞವೆಂದೆನಿಸುವುದೇ ಹೊರತು ಕರೀಮೇಕೆಗಳನ್ನು ಹಿಡಿತಂದು ಕೊಂದು ಹವಿರ್ಭಾಗವನ್ನು ಸ್ವೀಕರಿಸುವುದು ಯಜ್ಞವೆಂದೆನಿಸಲಾರದು.

ಶ್ರುತಿ ॥ ಪ್ರಾಣೇಂದ್ರಿಯಾ ದ್ಯಂತಃಕರಣಗುಣಾದೇಹಃ ಪರತರಂ ।
ಸಚ್ಚಿದಾನಂದಮಯಂ ನಿತ್ಯಮುಕ್ತಬ್ರಹ್ಮಸ್ಥಾನಂ ಪರಮಪದಂ ॥"

(ನಿರಾಲಂಬೋಪನಿಷತ್ತು)

ಪ್ರಾಣವು, ಇಂದ್ರಿಯಗಳು, ಅಂತಃಕರಣವು ಮೊದಲಾದುವು ಗಳೆಲ್ಲಕ್ಕೂ ಅತೀತನಾಗಿರುವ ಆತ್ಮಸ್ವರೂಪನೇ ಆತ್ಮನಾಗಿರುತ್ತಾನೆ. ಅಂತಹ ಆತ್ಮನೊಡನೆ ಮನಸ್ಸನ್ನು ಐಕ್ಯಮಾಡುವುದಕ್ಕೆ ಮೋಕ್ಷವೆಂದು ಹೆಸರು.

ಶ್ರುತಿ ॥ ಅಸತ್ಸಂಸಾರವಿಷಯಜನನಸಂಸರ್ಗ ಏವ ನರಕಃ ।
ಸತ್ಸಂಸರ್ಗ ಏವ ಸ್ವರ್ಗಃ ಸ್ವರ್ಗಃ ॥
(ನಿರಾಲಂಬೋಪನಿಷತ್ತು)

ಅಸತ್ಯವಾದ ಸಂಸಾರ ವಿಷಯಗಳಲ್ಲಿ ಸಿಕ್ಕಿಕೊಂಡು ಇರುವಿಕೆಯೇ ನರಕವೆಂದೆನಿಸುತ್ತದೆ. ಹಾಗಲ್ಲದೆ ಪರಮಾತ್ಮವಿಷಯವನ್ನು ತಿಳಿದು ಕೊಂಡು ಅದರಲ್ಲಿ ಐಕ್ಯವನ್ನು ಹೊಂದುವಿಕೆಯೇ ಸ್ವರ್ಗವೆನ್ನಿಸುತ್ತದೆ.

ಶ್ರುತಿ ॥ ಸಚ್ಚಿದಾನಂದಸ್ವರೂಪಂ ಜ್ಞಾತ್ವಾ ನಂದರೂಪಾಯಾಸ್ಥಿತಿಃ ।
ನೈವ ಸುಖಂ ಅನಾತ್ಮಾ ರೂಪವಿಷಯಸಂಕಲ್ಪ ಏವ ದುಃಖಂ ॥
(ನಿರಾಲಂಬೋಪನಿಷತ್ತು)

ಸಚ್ಚಿದಾನಂದಸ್ವರೂಪವನ್ನು ತಿಳಿದುಕೊಂಡು ಆ ವಿಧವಾದ ಆನಂದ ದಲ್ಲಿ ಮುಳುಗಿರುವುದಕ್ಕಿಂತಲೂ ಬೇರೆ ಸುಖವೇ ಇಲ್ಲ. ಮಾಯಾಸ್ವರೂಪಿ ಗಳಾದ ವಿಷಯಸಂಕಲ್ಪಗಳಲ್ಲಿ ತಗುಲಿಕೊಂಡಿರುವುದಕ್ಕಿಂತಲೂ ಬೇರೆ ದುಃಖವೇ ಇಲ್ಲ. ಇದಕ್ಕೆ ಶ್ರೀ ಭಗವದ್ಗೀತ ಅಧ್ಯಾಯ 7 ಶ್ಲೋಕ 3 ದೃಷ್ಟಾಂತವು.

ಶ್ಲೋ ॥ ಮನುಷ್ಯಾಣಾಂ ಸಹಸ್ರೇಷು ♦ ಕಶ್ಚಿದ್ಯತತಿ ಸಿದ್ಧಯೇ ।
ಯತತಾ ಮಪಿ ಸಿದ್ಧಾನಾಂ ♦ ಕಶ್ಚಿನ್ಮಾಂ ವೇತ್ತಿ ತತ್ವತಃ ।

ಅನೇಕ ಸಾವಿರ ಜನಗಳಲ್ಲಿ ಒಬ್ಬನು ಜ್ಞಾನಸಿದ್ಧಿಗೋಸ್ಕರ ಯತ್ನಿ ಸುತ್ತಾನೆ. ಹೀಗೆ ಯತ್ನಿಸುವ ಅನೇಕ ಸಹಸ್ರ ಸಾಧಕರ ಮಧ್ಯದಲ್ಲಿ ನನ್ನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯುವವನು ಯಾವನೋ ಒಬ್ಬನಿರುವನು. ಹಾಗೆ ತಿಳಿಯುವವನು ಯಾವನೋ ಅವನ ವಿಷಯ ವನ್ನು ಈ ಕೆಳಗೆ ಹೇಳಿದೆ.

ಶ್ರುತಿ ॥ " ಯ ಏವಂ ವೇದಾಹಂ ಬ್ರಹ್ಮಾಽಸ್ಮೀತಿ ಸ ಇದಂ ಸರ್ವಂ ಭವತಿ ।
ನ ತಸ್ಯೇಹ ನದೇನಾಶ್ಚ ನ ಭೂತ್ಯಾ ಈಶತೇ ಆತ್ಮಾ ಹ್ಯೇಷಾಂ ।
ನ ಭವತಿ ಅಥ ಯೋಽನ್ಯಾಂ ದೇವತಾ ಉಪಾಸತೇ ಅನ್ಯೋ ।
ಭಾವನ್ಯೋಽಹ ಮಸ್ಮೀತಿ ನ ಸ ವೇದ ಯಥಾ ಪಶು ರೇವಂ ಸದೇವಾವಾ
ಮಿತಿ " ॥ (ಶ್ವೇತಾಶ್ವತರೋಪನಿಷತ್ತು)

ತನ್ನಲ್ಲಿರುವ ಜೀವಾತ್ಮನೇ ಪರಬ್ರಹ್ಮನೆಂದೂ ಆ ಪರಬ್ರಹ್ಮನೇ ಜೀವಾತ್ಮನೆಂದೂ, ಜೀವಾತ್ಮ ಪರಮಾತ್ಮರಿಬ್ಬರಿಗೂ ಭೇದವೇ ಇಲ್ಲವೆಂದೂ ತಿಳಿದು ಆತ್ಮಧ್ಯಾನದಲ್ಲಿ ನಿರತನಾಗಿ ಯಾವನು ಇರುತ್ತಾನೆಯೋ ಅಂತಹ ನನ್ನು ನೋಡಿ ಬ್ರಹ್ಮೇಂದ್ರಾದಿ ದೇವತೆಗಳು ಕೂಡ ಅವನನ್ನು ಪರಬ್ರಹ್ಮ ಸ್ವರೂಪಿಯೇ ಎಂದು ಭಾವಿಸಿ ಯಾವಾಗಲೂ ಬಿಡದೆ ಅವನನ್ನು ಹಿಂಬಾಲಿಸಿಯೇ ಇರುವರು.

"ಅಯ ಮಾತ್ಮಾ ಬ್ರಹ್ಮಾ" ಎಂಬ ಮಾಂಡೂಕ್ಯೋಪನಿಷದ್ವಾಕ್ಯರೀತಿಯಾಗಿ ಮನಸ್ಸು ಬುದ್ಧಿ ಚಿತ್ತಾಹಂಕಾರಗಳಿಗೆ ಯಾವನು ಅತೀತನಾಗಿದ್ದಾನೆಯೋ ಆತನೇ ಆತ್ಮ. ಅಂತಹ ಆತ್ಮನೇ ಪರಬ್ರಹ್ಮವು.

ಶ್ರುತಿ ॥ " ಭೂತೇಷು ಭೂತೇಷು ವಿಚಿತ್ಯ ಧೀರಾಃ ।
ಪ್ರೇತ್ಯಾಸ್ಮಾಲ್ಲೋಕಾ ದಮೃತಾ ಭವಂತಿ " ॥ (ಕೇನೋಪನಿಷತ್ತು)

ಸರ್ವಭೂತಗಳಲ್ಲಿಯೂ ತುಂಬಿ ತುಳುಕಾಡುತ್ತಿರುವ ಆತ್ಮನನ್ನು ಯಾರು ಹುಡುಕಿ ತಿಳಿಯುತ್ತಾರೆಯೋ ಅವರೇ ಜ್ಞಾನಿಗಳು. ಅಂತಹ ಜ್ಞಾನಿಗಳೇ ಸಾಯುಜ್ಯಪದವಿಯನ್ನು ಹೊಂದಲು ಶಕ್ತರು.

ಶ್ರುತಿ ॥ " ಯಥಾ ಪಂಚಾವತಿಷ್ಠಂತಿ ♦ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟೇತ ♦ ತಾಮಾಹುಃ ಪರಮಾಂ ಗತಿಂ ॥

ಪಂಚೇಂದ್ರಿಯಗಳನ್ನೂ, ಮನಸ್ಸನ್ನೂ, ಬುದ್ಧಿಯನ್ನೂ ಚಲಿಸಲು ಬಿಡದೆ ಆತ್ಮನಲ್ಲಿ ಸೇರಿಸಿರುವುದೇ ಉತ್ತಮಪದವಿಯೆಂದು ಜ್ಞಾನಿಗಳು ಹೇಳುತ್ತಾರೆ.

ಶ್ರುತಿ ॥ ತ್ವಮೇವಾಽಹಂ ನ ಭೇದೋಽಸ್ತಿ ♦ ಪೂರ್ಣತ್ವಾತ್ ಪರಮಾತ್ಮನಃ ।
(ಮಂಡಲಬ್ರಾಹ್ಮಣೋಪನಿಷತ್ತು)

ತ್ವಂ ಅಂದರೆ ನೀನು, ಅಹಂ ಅಂದರೆ ನಾನು ಎಂದರ್ಥ. ಅಂದರೆ ಪರಬ್ರಹ್ಮನಾದ ನೀನೇ ನಾನು; ನಾನೇ ಪರಮಾತ್ಮನು. ಆ ಪರಮಾತ್ಮನು ಎಲ್ಲೆಲ್ಲಿಯೂ ಪರಿಪೂರ್ಣನಾಗಿ ಅಖಂಡನಾಗಿರುವುದರಿಂದ ಅಂತಹ ಪರಮಾತ್ಮನಿಗೂ ಜೀವಾತ್ಮನಿಗೂ ಭೇದವಿಲ್ಲವು. 'ತತ್ತ್ವಮಸಿ' ಎಂಬ ಮಹಾವಾಕ್ಯಾರ್ಥವೂ ಇದೇ. ಈ ವಿಷಯವನ್ನು ಕುರಿತು ಶ್ರೀ ಭಗವದ್ಗೀತ ಅಧ್ಯಾಯ 13 ಶ್ಲೋಕ 27 ರಲ್ಲಿ ಹೀಗೆಂದು ಹೇಳಿದೆ.

ಶ್ಲೋ ॥ ಸಮಂ ಸರ್ವೇಷು ಭೂತೇಷು ♦ ತಿಷ್ಠಂತಂ ಪರಮೇಶ್ವರಂ ।
ವಿನಶ್ಯತ್ಸ್ವ ವಿನಶ್ಯಂತಂ ♦ ಯಃ ಪಶ್ಯತಿ ಸ ಪಶ್ಯತಿ ॥

ಸಮಸ್ತ ಪ್ರಾಣಿಗಳಲ್ಲಿಯೂ ಪರಮೇಶ್ವರನಾಗಿಯೂ, ಸಾಕ್ಷಿಭೂತನಾಗಿಯೂ ಇರುವ ಆತ್ಮನು, ಪರಮಾತ್ಮನಾಗಿಯೂ, ದೇಹಾದಿಗಳು ನಶಿಸಿದರೂ ತಾನು ಮಾತ್ರ ನಶಿಸದಿರುವ ಸ್ವಭಾವವುಳ್ಳವನಾಗಿಯೂ ಇದ್ದಾನೆಂದು ಯಾವನು ತಿಳಿಯುತ್ತಾನೆಯೋ ಅವನೇ ನನ್ನನ್ನು ತಿಳಿಯಬಲ್ಲನು. ಮತ್ತು ಅಧ್ಯಾಯ 12 ಶ್ಲೋಕ 6-7 ರಲ್ಲಿ ಹೀಗೆಂದು ಹೇಳಿದೆ.

ಶ್ಲೋ ॥ ಯೇ ತು ಸರ್ವಾಣಿ ಕರ್ಮಾಣಿ ♦ ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ♦ ಮಾಂ ಧ್ಯಾಯಂತ ಉಪಾಸತೇ ॥

ತೇಷಾ ಮಹಂ ಸಮುದ್ಧರ್ತಾ ♦ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾ ತ್ಪಾರ್ಥ! ♦ ಮಯ್ಯಾವೇಶಿತಚೇತಸಾಂ ॥

ಕೃಷ್ಣ :—ಅರ್ಜುನಾ! ಪರಮಾತ್ಮನಾದ ನನ್ನಲ್ಲಿ ಬುದ್ಧಿಯನ್ನು ನಿಲ್ಲಿಸಿ ಪ್ರಪಂಚವ್ಯವಹಾರಕ್ಕೆ ಬೇಕಾದ ಕೃಷಿವಾಣಿಜ್ಯಾದಿಗಳೂ, ದೇಹಧಾರಣೆಗೋಸ್ಕರ ಮಾಡುವ ಭೋಜನ ಮೊದಲಾದವುಗಳೂ ಆದ ಈ ಲೌಕಿಕಕರ್ಮಗಳನ್ನೂ ಸಂಧ್ಯಾವಂದನಾದಿ ವೈದಿಕಕರ್ಮಗಳನ್ನೂ ಬಿಟ್ಟು ನನ್ನನ್ನೇ ಆಧಾರನನ್ನಾಗಿ ತಿಳಿದು ಪ್ರತಿಫಲವನ್ನು ಕೋರದೆ, ಯೋಗನಿಷ್ಠನಾಗಿದ್ದು ನನ್ನನ್ನು ಕುರಿತು ನನಗೆ ಪ್ರಿಯವಾದ ಧ್ಯಾನ, ಅರ್ಚನ,

ಪ್ರಣಾಮ, ಸ್ತುತಿ, ಕೀರ್ತನಾದಿಗಳನ್ನು ಯಾರು ಮಾಡುತ್ತ, ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ ನನ್ನನ್ನೇ ಉಪಾಸನೆಮಾಡುತ್ತಿರುತ್ತಾರೋ ಅಂತಹ ರನ್ನು ಸಂಸಾರವೆಂಬ ಸಮುದ್ರದಿಂದ ಜಾಗ್ರತೆಯಾಗಿ ಮೇಲಕ್ಕೆತ್ತುತ್ತೇನೆ. ಮತ್ತು ಭಗವದ್ಗೀತಾ ಅಧ್ಯಾಯ 10 ಶ್ಲೋಕ 2 ಪ್ರಮಾಣ ವೇನೆಂದರೆ,

ಶ್ಲೋ || ನ ಮೇ ವಿದು ಸ್ಸುರಗಣಾಃ ♦ ಪ್ರಭವಂ ನ ಮಹರ್ಷಯಃ |
ಅಹ ಮಾದಿ ರ್ಹಿ ದೇವಾನಾಂ ♦ ಮಹರ್ಷೀಣಾಂ ಚ ಸರ್ವಶಃ ||

ನಾನು ಉತ್ಪತ್ತಿರಹಿತನಾದರೂ ನನ್ನ ಸ್ವಾಧೀನದಲ್ಲಿರುವ ಯೋಗ ಮಾಯೆಯ ವಶದಿಂದ ಆದಿತ್ಯಾದಿ ವಿಭೂತಿ ರೂಪದಿಂದ ಆವಿರ್ಭವಿಸಿರುವ ನನ್ನ ಜನ್ಮಸ್ವರೂಪವನ್ನು ಅಂದರೆ ನನ್ನ ಉತ್ಪತ್ತಿಯನ್ನು ದೇವತೆಗಳೂ ಮಹರ್ಷಿಗಳೂ ಅರಿಯರು. ಏತಕ್ಕೆಂದರೆ ನಾನು ಎಲ್ಲಾ ದೇವತೆಗಳಿಗೂ ಮಹರ್ಷಿಗಳಿಗೂ ಸರ್ವಪ್ರಕಾರದಿಂದಲೂ ಕಾರಣಭೂತನಾಗಿರುವೆನು. ಅಂದರೆ ಅವರವರ ಕರ್ಮಗಳಿಗೆ ತಕ್ಕಂತೆ ದೇವತ್ವವನ್ನೂ ಮತ್ತು ಮಹರ್ಷಿತ್ವವನ್ನೂ ಫಲರೂಪವಾಗಿ ಅವರಿಗೆ ಕೊಡುವವನು ನಾನೇ. ಅಂತಹರೂ ನನ್ನ ನಿಜಸ್ವರೂಪವನ್ನು ತಿಳಿಯಲಾರರು. ಆದುದರಿಂದ ಓ ಪಾಠಕರೇ! ಮಾತೃಗರ್ಭದಿಂದ ಉತ್ಪತ್ತಿಯಾಗಿ ಬಂದಂಥ ನೀವೆಲ್ಲರೂ ಕಾಲವನ್ನು ವ್ಯರ್ಥವಾಗಿ ಕಳೆಯದೆ, ಈ ಗ್ರಂಥದಲ್ಲಿ ಹೇಳಿರುವ ವಿಷಯ ವನ್ನು ಶ್ರದ್ಧೆಯಿಂದ ಗ್ರಹಿಸಿ ನಿಮ್ಮ ಅನುಭವಕ್ಕೆ ತಂದುಕೊಂಡು ಶಾಶ್ವತ ವಾದ ಸುಖಕ್ಕೆ ಬೇಕಾದ ಪ್ರಯತ್ನವನ್ನು ಮಾಡುತ್ತೀರೆಂದು ದೃಢವಾಗಿ ನಂಬಿದೆ. ಈ ಮುಂದೆ ವೇದಾಂತರಹಸ್ಯವು ಎಂತಹುದೆಂಬುದನ್ನು ವಿವರಿಸ ಲಾಗಿದೆ.



# ವೇದಾಂತ ರಹಸ್ಯವು.

---

ವೇದಾಂತವು ಎಂತಹುದೆಂದರೆ, ಪರಬ್ರಹ್ಮನನ್ನು ಕುರಿತು ವಿವರಿಸಿ ಹೇಳುವುದೂ, ಅವಿದ್ಯೆ ಅಂದರೆ ಅಜ್ಞಾನವನ್ನು ನಾಶಮಾಡುವುದೂ ಆಗಿದೆ. ಇದಕ್ಕೆ ಪ್ರಮಾಣವು ಈ ಕೆಳಗೆ ಹೇಳಿದೆ.

ಶ್ಲೋ॥ ಉಪನೀಯ ಮಹಾತ್ಮಾನಾಂ ♦ ಬ್ರಹ್ಮೋಪಾಸ್ತಿ ದ್ವಯಂ ತತಃ ।
ನಿಹಂತ್ಯವಿದ್ಯಾಂ ತದ್ಜ್ಞಾಂ ಚ ♦ ತಸ್ಮಾ ದುಪನಿಷ ನ್ಮತಂ ॥

ಈ ವೇದಾಂತಗಳನ್ನೇ ಉಪನಿಷತ್ತುಗಳೆಂದೂ ವೇದಶಿಖೆಗಳೆಂದೂ ಕರೆಯುತ್ತಾರೆ. ಇವುಗಳು ಚತುರ್ವೇದಗಳ ಮುಖ್ಯಸಾರಾಂಶಗಳೆಂದೂ ಹೇಳುವುದುಂಟು, ಆದುದರಿಂದಲೇ ಇವಕ್ಕೆ ವೇದಶಿಖೆಗಳೆಂಬ ಹೆಸರಾಯಿತು. ಈ ವೇದಗಳು ಯುಗಾಂತರ ಮಹಾ ಪ್ರಳಯಕಾಲದಲ್ಲಿ ಶ್ರೀ ಮಹಾವಿಷ್ಣುವು ಕ್ಷೀರಾಬ್ಧಿಯಲ್ಲಿ ವಟಪತ್ರದಮೇಲೆ ಪವಡಿಸಿದ್ದು,

ಶ್ರುತಿ॥ ನಿಶ್ವಾಸಭೂತಾ ಮೇ ವಿಷ್ಣೋ ♦ ರ್ಜಾತಾ ವೇದಾ ಸ್ಸುವಿಸ್ತರಾಃ ।

ಎಂಬಂತೆ ಮುಂದೆ ತಾನು ಸೃಷ್ಟಿಸುವಂಥ ಪ್ರಪಂಚಗಳಲ್ಲಿ ನಡೆಯಬೇಕಾದ ಧರ್ಮಗಳೆಲ್ಲವನ್ನೂ, ತನ್ನ ನಿಶ್ವಾಸಮೂಲಕವಾಗಿ ವೇದಗಳನ್ನು ಪರಮಾತ್ಮನು ಹೊರಬೀಳಿಸಿದ್ದಾನೆ. ಪರಮಾತ್ಮನು ವಟಪತ್ರದಲ್ಲಿ ಶಯನಿಸಿರುವುದನ್ನು ☞ ಇಗೋ ಈ ಎದುರು ಭಾಗದಲ್ಲಿರುವ ಪಠದಲ್ಲಿ ನೋಡಿರಿ.

ಈ ವೇದಗಳು ಋಕ್, ಯಜುಸ್, ಸಾಮ, ಅಥರ್ವಣಗಳೆಂದು ನಾಲ್ಕು ವಿಧಗಳಾಗಿವೆ. ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಬೇರೆಬೇರೆ ಶಾಖೆಗಳಿವೆ. ಅವುಗಳು ಹೇಗೆಂದರೆ, ಋಗ್ವೇದಕ್ಕೆ ಇಪ್ಪತ್ತೊಂದು ಶಾಖೆಗಳು, ಎಜುರ್ವೇದಕ್ಕೆ ನೂರೊಂಭತ್ತು, ಸಾಮವೇದಕ್ಕೆ ಒಂದು ಸಾವಿರ ಮತ್ತು ಅಥರ್ವಣವೇದಕ್ಕೆ ಐವತ್ತು ಹೀಗೆ ನಾಲ್ಕು ವೇದಗಳಿಗೂ ಒಟ್ಟಿಗೆ



ಮಹಾವಿಷ್ಣುವು ಸಮುದ್ರದಲ್ಲಿ ವಟಪತ್ರದಮೇಲೆ ಪವಡಿಸಿರುವುದು.

ಒಂದುಸಾವಿರದನೂರಎಂಭತ್ತು ಶಾಖೆಗಳು ಇವೆ. ಈ ಶಾಖೆಗಳಲ್ಲಿ ಪ್ರತಿಯೊಂದರಲ್ಲಿಯೂ ಮುಖ್ಯಮುಖ್ಯವಾದ ಭಾಗವನ್ನು ಹೊರತೆಗೆದು ಅವುಗಳಿಗೆ ಉಪನಿಷತ್ತುಗಳು ಎಂಬ ಹೆಸರನ್ನಿಟ್ಟರು. ಅವುಗಳು ಹೇಗೆಂದರೆ ಮೇಲೆ ಹೇಳಿದಂತೆ, ಋಗ್ವೇದದಿಂದ 21 ; ಯಜುರ್ವೇದದಿಂದ 109 ; ಸಾಮವೇದದಿಂದ 1000 ; ಮತ್ತು ಅಥರ್ವಣವೇದದಿಂದ 50 ; ಅಂತೂ ಮೊತ್ತಕ್ಕೆ 1180 ಉಪನಿಷತ್ತುಗಳಾದವು. ಈ ಒಂದುಸಾವಿರನೂರ ಎಂಭತ್ತು ಉಪನಿಷತ್ತುಗಳನ್ನೂ ಪರಿಶೀಲಿಸುವುದಕ್ಕೆ ಮಾನವರಿಗೆ ಆಯುರ್ಭಾಗವು ಸಾಲದುದರಿಂದ ಜೀವಿಗಳು ಮೋಕ್ಷವನ್ನು ಹೊಂದುವುದಕ್ಕಾಗಿ ಬೇಕಾದ ಉಪನಿಷತ್ತುಗಳನ್ನು ಮಾತ್ರ ಅವುಗಳೊಳಗೆ ಪರಿಶೋಧಿಸುವಲ್ಲಿ, ನೂರೆಂಟು ಉಪನಿಷತ್ತುಗಳು ಮಾತ್ರವೇ ಮುಖ್ಯವಾದುವುಗಳೆಂದು ಅಷ್ಟನ್ನಾರಿಸಿಕೊಂಡರು. ಈ ಉಪನಿಷತ್ತುಗಳನ್ನೂ ಕೂಡ ನೋಡುವುದಕ್ಕೆ ಅವಕಾಶವಿಲ್ಲವಾಗಿ ಮನಸ್ಸನ್ನು ನಿಲ್ಲಿಸುವುದಕ್ಕಾಗಿ ಮುಖ್ಯವಾದ ಉಪನಿಷತ್ತುಗಳೆಷ್ಟೋ ಅಷ್ಟು ಮಾತ್ರವನ್ನೇ ಈ ಗ್ರಂಥದಲ್ಲಿ ಸಂದರ್ಭಾನುಸಾರವಾಗಿ ಅಲ್ಲಲ್ಲಿ ಸೇರಿಸಿದೆ. ಅದನ್ನು ಪಠಿಸಿ ಮಾನವರು ಮುಕ್ತಿ ಹೊಂದುವರೆಂದು ನಂಬಿದೆ.

ಒಬ್ಬಾನೊಬ್ಬನು ಬೇರೊಂದು ಗ್ರಾಮವನ್ನು ಕುರಿತು ಹೋಗುವುದಕ್ಕಾಗಿ ತನಗೆ ಬೇಕಾದ ಸಲಕರಣೆಗಳನ್ನು ತನ್ನ ಪ್ರಯಾಣಕ್ಕಾಗಿ ಸಿದ್ಧಪಡಿಸಿಕೊಳ್ಳುವಂತೆ ಪರಮಪದವನ್ನು ಪಡೆಯಬೇಕೆಂದಿರುವವನೂ ಕೂಡ, ಮೊದಲು ವೇದಾಂತಸಾರೋಪದೇಶವನ್ನು ಪಡೆದು ಆಮೇಲೆ ಸದ್ಗುರೂಪದೇಶವನ್ನು ಹೊಂದಿ, ಈಶ್ವರಧ್ಯಾನತತ್ಪರನಾಗಿರಬೇಕು.

ಮರಣಕಾಲದಲ್ಲಿ 'ಕೃಷ್ಣ' ಎಂದು ಒಂದುಬಾರಿ ಹೇಳಿದೊಡನೆಯೇ ಅವನಿಗೆ ಜನ್ಮರಾಹಿತ್ಯವುಂಟಾಗುತ್ತದೆಂದು ದೊಡ್ಡವರು ಹೇಳುವರು. ಆದರೆ ಅವನು ಸದಾ ಕುಟುಂಬವಿಷಯುಗಳನ್ನೇ ಸ್ಮರಿಸುತ್ತಾ ಬರುತ್ತಿದ್ದರೆ ಆ ಕುಟುಂಬವಿಷಯುಗಳು ಜ್ಞಾಪಕಕ್ಕೆ ಬರುತ್ತವೆಯೇ ಹೊರತು, ಕೃಷ್ಣನ ನಾಮಸ್ಮರಣೆಯು ಅಂತ್ಯಕಾಲದಲ್ಲಿ ಅವನಿಗೆ ಎಂದಿಗೂ ದೊರಕದು. ಹಾಗೆ ಭಗವನ್ನಾಮಸ್ಮರಣೆಯು ಮರಣಕಾಲದಲ್ಲಿ ಉಂಟಾಗ

ಬೇಕಾದರೆ, ಈಗಿನಿಂದ ಅಂತ್ಯಕಾಲದವರಿವಿಗೂ ಶ್ರೀಕೃಷ್ಣನನ್ನು ಅಂದರೆ ಪರಮಾತ್ಮನನ್ನು ವಿಶೇಷಭಕ್ತಿಯಿಂದ ಧ್ಯಾನಿಸುತ್ತ ಬಂದದ್ದೇ ಆದರೆ ಮರಣಕಾಲದಲ್ಲಿ ಅವನಿಗೆ ಪ್ರಜ್ಞೆ ತಪ್ಪಿದ್ದರೂ, "ಅಯ್ಯೋ! ಇವನು ಇಷ್ಟು ಸಂವತ್ಸರಗಳವರಿವಿಗೂ ನನ್ನನ್ನು ಸ್ಮರಿಸುತ್ತಲಿದ್ದು ಈಗ ಪ್ರಜ್ಞೆ ತಪ್ಪಿ ನನ್ನನ್ನು ಮರೆತಿದ್ದಾನಲ್ಲವೇ?" ಎಂದು ಭಗವಂತನಿಗೆ ಅವನ ಮೇಲೆ ಕೃಪೆಯುಂಟಾಗಿ ತನ್ನ ನಾಮವನ್ನು ಅವಸಾನಕಾಲದಲ್ಲಿ ಆ ಜೀವಿಯು ಸ್ಮರಿಸುವಂತೆ ಮಾಡುತ್ತಾನೆ. ಆದುದರಿಂದ ಲೋಕದಲ್ಲಿರುವ ಸ್ತ್ರೀಪುರುಷರೆಲ್ಲರೂ ಈ ಕ್ಷಣದಿಂದಲೇ ಈಶ್ವರನ ದಿವ್ಯನಾಮಗಳನ್ನು ವಿಶೇಷ ಭಕ್ತಿಯಿಂದ ಕೂಡಿ ಸ್ಮರಿಸುವುದಕ್ಕೆ ಯತ್ನಿಸಬೇಕು.

ಈ ಮೇಲೆ ಹೇಳಿದ ವಿಷಯವನ್ನು ಅಂದರೆ ಕಾಲವಿಳಂಬಮಾಡದೆ ಪರಮಾತ್ಮನ ನಾಮಸ್ಮರಣೆಯನ್ನು ಮಾಡಬೇಕೆಂಬ ವಿಷಯವನ್ನು ಭಗವದ್ಭಕ್ತಶಿಖಾಮಣಿಗಳಾದ ಮಹಾತ್ಮರು ಈ ಕೆಳಗೆ ಹೇಳಿರುವ ರೀತಿಯಲ್ಲಿ ತಿಳಿಸಿರುತ್ತಾರೆ. ಅದರಲ್ಲಿ ಒಬ್ಬರು **ಕುಲಶೇಖರಾಳ್ವಾರ್** ಎಂಬುವರು. ಇವರು ಒಂದು ದೇಶದ ರಾಜರಾದರೂ ಮಹಾವಿಷ್ಣು ಧ್ಯಾನದಲ್ಲಿಯೇ ಸದಾ ನಿರತರಾಗಿದ್ದವರು. ಅವರು ತಾವು ಬರೆದಿರುವ ಭಕ್ತಿರಸದಿಂದ ತುಂಬಿ ತುಳುಕಾಡುತ್ತಿರುವ "**ಮುಕುಂದ ಮಾಲಾ**" ಎಂಬ ಸ್ತೋತ್ರರತ್ನದ ಆದಿಭಾಗದಲ್ಲಿ ಹೀಗೆಂದು ಹೇಳಿರುತ್ತಾರೆ.

ಶ್ಲೋ ॥ ಶ್ರೀವಲ್ಲಭೇತಿ ವರದೇತಿ ದಯಾಪರೇತಿ ।
ಭಕ್ತಪ್ರಿಯೇತಿ ಭವಲುಂಠನಕೋವಿದೇತಿ ॥
ನಾಥೇತಿ ನಾಗಶಯನೇತಿ ಜಗನ್ನಿವಾಸೇ ।
ತ್ಯಾಲಾಪನಂ ಪ್ರತಿಪದಂ ಕುರು ಮೇ ಮುಕುಂದ ! ॥

ಮುಕುಂ=ಮೋಕ್ಷವನ್ನು, ದ=ಕೊಡುವಂಥ ಎಲೈ ಪರಮಾತ್ಮನೇ! ಶ್ರೀವಲ್ಲಭ=(ಮೋಕ್ಷ ಲಕ್ಷ್ಮಿಗೆ ಪತಿಯೇ!) ವರದ=(ಜ್ಞಾನಿಗಳ ಇಷ್ಟಾರ್ಥವನ್ನು ದಯಪಾಲಿಸುವವನೇ!) ದಯಾಪರ=(ಭಕ್ತರಲ್ಲಿ ಮಹಾ ಕರುಣವನ್ನು ತೋರುವವನೇ!) ಭವಲುಂಠನಕೋವಿದ=(ಭಕ್ತರಿಗಿರುವ ಸಂಸಾರ ಬಂಧವನ್ನು ಕತ್ತರಿಸುವುದರಲ್ಲಿ ಚತುರನೇ!) ನಾಥ=(ಸರ್ವಶಕ್ತ, ಸರ್ವ

ವ್ಯಾಪಿ, ಸರ್ವಸ್ವಾಮಿಯೇ), ನಾಗಶಯನ=(ಸರ್ಪದ ಆಕಾರವನ್ನು ಹೊಂದಿರುವ ಪಂಚವಾಯುವು, ಪಂಚೇಂದ್ರಿಯ ಇವುಗಳ ವ್ಯಾಪಾರ ಗಳನ್ನು ತಡೆದು ನಿಲ್ಲಿಸಿದವನೇ! ಅಂದರೆ ಕರ್ಮಗಳಿಗೆ ನಿಲುಕದ ಮಹಾ ಯೋಗಿಯೇ), ಜಗನ್ನಿವಾಸ=(ಅಖಂಡ ಪರಿಪೂರ್ಣನಾಗಿ ಪ್ರಪಂಚದ ಒಳಗೂ ಹೊರಗೂ ಆವರಿಸಿರುವ ಪರಮಾತ್ಮನೇ!) ಎಂಬುವ ಆಲಾಪನೆಯ= (ಸ್ತುತಿವಚನವ) ನ್ನು ಪ್ರತಿದಿನವೂ ಪ್ರತಿಕ್ಷಣವೂ ನನಗೆ ದಯಪಾಲಿಸು. ಎಂಬುದೇ ಈ ಶ್ಲೋಕರತ್ನದ ತಾತ್ಪರ್ಯ. "ಈಗಿನಿಂದ ಪ್ರತಿಕ್ಷಣ ದಲ್ಲಿಯೂ ಪರಮಾತ್ಮನ ಸ್ಮರಣೆಯನ್ನು ಏತಕ್ಕಾಗಿ ಮಾಡಬೇಕು ? ಪ್ರಾಣ ಪ್ರಯಾಣಕಾಲದಲ್ಲಿ ಮಾಡಿದರೆ ಸಾಲದೇ?" ಎಂಬುವ ಪ್ರಶ್ನೆಗೆ ಉತ್ತರ ವಾಗಿ ಅದೇ ಕುಲಶೇಖರಾಳ್ವಾರರು ಈ ಕೆಳಗೆ ಹೇಳುವ ರೀತಿಯಲ್ಲಿ ಹೇಳಿ ರುತ್ತಾರೆ.

ಶ್ಲೋ॥ 'ಕೃಷ್ಣ ! ತ್ವದೀಯ ಪದಪಂಕಜಪಂಜರಾಂತಂ ।
ಅದ್ಯೈವ ಮೇ ವಿಶತು ಮಾನಸರಾಜಹಂಸಃ ॥
ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ ।
ಕಂಠಾವರೋಧನವಿಧೌ ಸ್ಮರಣಂ ಕುತ ಸ್ತೇ' ॥

'ಓ ಕೃಷ್ಣಾ ! ಅಂದರೆ ಯೋಗಿಗಳ ಮನಸ್ಸನ್ನು ಸದಾ ಆಕರ್ಷಿ ಸುತ್ತಲಿರುವ ಪರಮಾತ್ಮನೇ ನನ್ನ ಮನಸ್ಸೆಂಬ ರಾಜಹಂಸವನ್ನು ನಿನ್ನ ಪಾದಪದ್ಮಗಳೆಂಬ ಪಂಜರದಲ್ಲಿ ಸೇರಿಸು ಅಂದರೆ ಪಂಜರದಲ್ಲಿರುವ ಹಂಸವು ಅತ್ತಿತ್ತ ಹಾರಿಹೋಗದಿರುವಂತೆ, ಸ್ವಭಾವವಾಗಿ ಚಂಚಲವಾದ ನನ್ನ ಮನಸ್ಸನ್ನು ನಿನ್ನ ಪಾದಾರವಿಂದಗಳಲ್ಲಿ ಸ್ತಬ್ಧವಾಗಿ ನಿಲ್ಲಿಸು ಅಂದರೆ ನಿನ್ನ ಪಾದಗಳಲ್ಲಿ ನಿಶ್ಚಲವಾದ ಭಕ್ತಿಯನ್ನಿಡುವಂತೆ ನನಗೆ ಅವಕಾಶ ಕೊಡು. ಮತ್ತು ಹಂಸಕ್ಕೆ ತಾವರೆಯು ಹೇಗೆ ಆಹಾರವೋ ಅದರಂತೆಯೇ ನನ್ನ ಮನಸ್ಸಿಗೆ ನಿನ್ನಲ್ಲಿರುವ ಭಕ್ತಿಯೇ ಆಹಾರ. ಇಂತಹ ನನ್ನ ಮನೋ ಹಂಸವು ಈ ಕ್ಷಣವೇ ನಿನ್ನ ಪಾದಾರವಿಂದಗಳಲ್ಲಿ ಸೇರಲಿ. ಏತಕ್ಕೆಂದರೆ, ಪ್ರಾಣಪ್ರಯಾಣಸಮಯೇ ಅಂದರೆ ಅವಸಾನಕಾಲದಲ್ಲಿ, ಕಫ, ವಾತ, ಪಿತ್ಥ ಇವುಗಳಿಂದ ನನ್ನ ಕಂಠವ್ಯಾಪಾರವು ತಡೆಯಲ್ಪಡುತ್ತದೆಯಾಗಿ, ಓ ಪರ

ಮಾತ್ಮ! ಆಗ ನಿನ್ನ ಸ್ಮರಣೆಗೆ ಅವಕಾಶವು ದೊರಕುವುದು ಹೇಗೆ? ಆದುದರಿಂದ ಈಗಲೇ ನಿನ್ನ ಸ್ಮರಣೆಯನ್ನು ನನಗೆ ದಯಪಾಲಿಸು' ಎಂದು ಆ ಆಳ್ವಾರ್‌ರವರು ಹೇಳಿರುತ್ತಾರೆ.

ಈ ವಿಷಯವನ್ನು ಕುರಿತು ಬೇರೊಬ್ಬ ಮಹಾತ್ಮರೂ ಹೇಳಿದ್ದಾರೆ. ಅವರೇ ಪಾಷಂಡ ಮತಗಳನ್ನೆಲ್ಲಾ ಖಂಡಿಸಿ ವೇದಗಳೇ ಪ್ರಮಾಣಗಳೆಂದು ಸ್ಥಿರವಾಗಿ ನಿಲ್ಲಿಸಿ, ಷಣ್ಮತಸ್ಥಾಪನಾಚಾರ್ಯರೆಂಬ ಬಿರುದನ್ನು ಪಡೆದು, ಹುಟ್ಟಿದ ಐದುವರ್ಷದೊಳಗಾಗಿ ಮಾನಸಸನ್ಯಾಸವನ್ನು ಸ್ವೀಕರಿಸಿ, ಹದಿನಾರನೇ ವರ್ಷ ತುಂಬುವುದರೊಳಗಾಗಿ ವೇದವೇದಾಂಗಗಳನ್ನೂ, ಸಮಸ್ತ ಸ್ಮೃತಿಗಳು, ಪುರಾಣಗಳು, ಇತಿಹಾಸಗಳು ಮೊದಲಾದುವುಗಳನ್ನೂ ಸಮಗ್ರವಾಗಿ ಪಠಿಸಿ ಅದರ ತತ್ವಗಳನ್ನು ತೆಗೆದು ಸ್ತೋತ್ರರೂಪವಾಗಿ ವೇದಾಂತವನ್ನು ಪ್ರತಿಯೊಂದು ಜನಾಂಗಕ್ಕೂ ಸುಲಲಿತವಾಗಿ ತಿಳಿಯುವಂತೆ ಬೋಧಿಸಿ, ಇದರಮೇಲೆ ಗೀತಾಭಾಷ್ಯವನ್ನೂ ಉಪನಿಷದ್ಭಾಷ್ಯಗಳನ್ನೂ ಬರೆದಿಟ್ಟರು. ಮೂವತ್ತೆರಡನೆಯ ವರುಷದೊಳಗಾಗಿ ಬ್ರಹ್ಮಸೂತ್ರ ಭಾಷ್ಯಗಳನ್ನು ಮಾಡಿ ಮುಗಿಸಿ ಆಸೇತುಹಿಮಾಚಲ ಪರ್ಯಂತವಾಗಿ ಸಂಚರಿಸಿ ನಾಸ್ತಿಕರನ್ನೆಲ್ಲಾ ಆಸ್ತಿಕರನ್ನಾಗಿ ಮಾಡುತ್ತ ಅಲ್ಲಲ್ಲಿ ಅಸಂಖ್ಯಾತಶಿಷ್ಯರನ್ನು ಪಡೆದು, ಅವರಲ್ಲಿ ಮುಖ್ಯವಾಗಿ ಯೋಗ್ಯರಾಗಿರುವವರನ್ನು ಅಲ್ಲಲ್ಲಿರುವ ಪೀಠಗಳಲ್ಲಿ ಸ್ಥಾಪಿಸಿ, ಪರಮೇಶ್ವರನೇ ಈ ಮನುಷ್ಯಾವತಾರದಿಂದ ಭೂಮಿಗೆ ಬಂದು ಭಗವತ್ಸ್ವರೂಪ ಬೋಧೆಯಿಂದ ಇಡೀ ಹಿಂದೂಸ್ಥಾನವನ್ನೇ ನೀತಿಮಾರ್ಗದಲ್ಲಿ ನೆಲೆಯಾಗಿ ನಿಲ್ಲಿಸಿ, "**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ**" ರೆಂಬ ಬಿರುದನ್ನು ಪಡೆದು, ಪೂರ್ವವಯಸ್ಸಿನಲ್ಲಿಯೇ ಅಂದರೆ 32ನೇ ವಯಸ್ಸಿನಲ್ಲಿಯೇ ಪರಂಧಾಮವನ್ನೈದಿದರು. ಇವರೇ **ವೇದಾಂತ ಶಿಖಾಮಣಿ ಸದ್ಗುರುವರ್ಯ ಶಂಕರಾಚಾರ್ಯರೆಂಬುವರು.** ಆ ಮಹಾತ್ಮರು 'ಸಂಸಾರವು ಮಹಾದುಃಖಕರ, ಪರಮಾತ್ಮಧ್ಯಾನವೇ ಪರಮಪದವನ್ನೈದುವುದಕ್ಕೆ ಮುಖ್ಯ ಸೋಪಾನ' ಎಂಬುದನ್ನು ಬೋಧಿಸುವ ಸಲುವಾಗಿ ಈ ಕೆಳಗಿರುವ ಶ್ಲೋಕರತ್ನಗಳನ್ನು ಹೇಳಿರುತ್ತಾರೆ. ಅವುಗಳಲ್ಲಿ ಕೆಲವನ್ನು ಮಟ್ಟಿಗೆ ಇಲ್ಲಿ ಎತ್ತಿ ಬರೆದಿದೆ. ಈ ಸ್ತುತಿಗೀತೆಗಳು ಯಾವ ಸಂದರ್ಭದಲ್ಲಿ ಅವರು ಹೇಳಿದವೆಂದರೆ:—

'ಮೋಕ್ಷಕ್ಕೆ ಕರ್ಮವೇ ಮುಖ್ಯ, ಜ್ಞಾನವು ಮುಖ್ಯವಲ್ಲ' ಎಂದು ವಾದಿಸುತ್ತಿದ್ದ ಕರ್ಮಯೋಗಿಯಾದ ಮಂಡನಮಿಶ್ರಾಚಾರ್ಯರಿಗೆ ಕಾರಣಾಂತರದಿಂದ ಸರಸ್ವತಿಯು ಹೆಂಡತಿಯಾಗಿದ್ದಳು. ಶಂಕರಾಚಾರ್ಯರು ಆ ಕರ್ಮಯೋಗಿಯನ್ನು ವಾದದಿಂದ ಜಯಿಸಿದಮೇಲೆ ಆತನ ಹೆಂಡತಿಯನ್ನೂ ವಾದದಲ್ಲಿ ಜಯಿಸಬೇಕಾದ ಸಂದರ್ಭವೊದಗಿದಾಗ ಆಕೆಯು ಕೇಳಿದ ರತಿಕೇಳಿಯ ವಿಷಯವಾದ ಪ್ರಶ್ನೆಗೆ ಹುಟ್ಟುಸನ್ಯಾಸಿಯಾದ ಶಂಕರರು ಅನುಭವದಿಂದ ವಿಷಯವನ್ನು ಗ್ರಹಿಸಿ ಉತ್ತರ ಹೇಳುತ್ತೇನೆಂದು ಹೊರಟು ಅದೇತಾನೆ ಸತ್ತುಹೋಗಿದ್ದ ಒಬ್ಬಾನೊಬ್ಬ ರಾಜನ ಶರೀರದೊಳಕ್ಕೆ ಪ್ರವೇಶಿಸಿ (ಇದಕ್ಕೆ ಪರಕಾಯಪ್ರವೇಶವೆಂದು ಹೆಸರು. ಈ ವಿಷಯವು ಮುಂದೆ ವಿಸ್ತರಿಸಿದೆ) ಕಾಮಶಾಸ್ತ್ರವನ್ನು ಅಭ್ಯಸಿಸುತ್ತಿರುವಾಗ 'ಈತನು ಮಹಾತ್ಮನು' ಎಂದು ತಿಳಿದು ಆತನ ಪತ್ನಿಯರು 'ಸುತ್ತುಮುತ್ತಲೆಲ್ಲಿಯಾದರು ಯೋಗಿಗಳ ಶರೀರಗಳಿದ್ದಲ್ಲಿ ಅವನ್ನು ದಹಿಸಬೇಕು' ಎಂದು ಅಪ್ಪಣೆಮಾಡಿದರು. ಆಗ ಈ ಶಂಕರರು ಬಿಟ್ಟ ಪೂರ್ವದೇಹವನ್ನು ಚಿತೆಯಮೇಲಿಟ್ಟು ಸುಡುತ್ತಿರುವ ಸಮಯದಲ್ಲಿ ಇದರ ಸುಳಿವನ್ನು ತಿಳಿದ ಇವರು ರಾಜನ ದೇಹವನ್ನು ಬಿಟ್ಟು ತಮ್ಮ ಶರೀರದೊಳಕ್ಕೆ ಪ್ರವೇಶಿಸಿ, ಈರೀತಿಯಾಗಿ ಪರಮಾತ್ಮನನ್ನು ಸ್ತುತಿಸುವುದಕ್ಕೆ ಆರಂಭಿಸಿದರು.

ಶ್ಲೋ ॥ "ಶ್ರೀಮತ್ಪಯೋನಿಧಿನಿಕೇತನ! ಚಕ್ರಪಾಣೇ।
ಭೋಗೀಂದ್ರಭೋಗಮಣಿರಾಜಿತಪುಣ್ಯಕೀರ್ತೇ! ॥
ಯೋಗೀಶಶಾಶ್ವತಶರಣ್ಯ! ಭವಾಬ್ಧಿಪೋತ!।
ಲಕ್ಷ್ಮೀನೃಸಿಹ್ಮ! ಮಮ ದೇಹಿ ಕರಾವಲಂಬಂ ॥"

"ಪ್ರಳಯಾಂತದಲ್ಲಿ ಕ್ಷೀರಸಾಗರದೊಳಗೆ ವಟಪತ್ರದಲ್ಲಿ ಯೋಗಮುದ್ರೆಯಿಂದ ನಿದ್ರಿಸುತ್ತಿರುವ ಪರಮಾತ್ಮನೇ! ದುಷ್ಟಶಿಕ್ಷಣೆ ಶಿಷ್ಟಪರಿಪಾಲನೆ ಮಾಡುವುದಕ್ಕಾಗಿ ಚಕ್ರಾಯುಧವನ್ನು ಕೈಯಲ್ಲಿ ಧರಿಸಿರುವವನೇ! ಸರ್ಪಾಧಿರಾಜನಾದ ಆದಿಶೇಷನ ಹೆಡೆಯಲ್ಲಿರುವ ಮಣಿಯಿಂದ ಶೋಭಿಸುತ್ತಿರುವ ಮಹಾಮೂರ್ತಿಯೇ! ಅಂದರೆ ಪಂಚವಾಯುಗಳು ಮತ್ತು ಇಂದ್ರಿಯಗಳ ಸಮೂಹಗಳೇ ತಲೆಗಳನ್ನಾಗಿ ಉಳ್ಳ ಆದಿಶೇಷನ ತಲೆಯ ಮೇಲೆ ನಿಂತಿರುವವನೇ! ಅಂದರೆ ಇಂದ್ರಿಯಗಳನ್ನು ಜಯಿಸಿ ಪಂಚ

ಪ್ರಾಣಗಳನ್ನು ಬಂಧಿಸಿ ಯೋಗೀಶ್ವರನೆಂಬ ಬಿರುದನ್ನು ಪಡೆದಂಥವನೇ! ಪರಮಹಂಸರಾದ ಯೋಗೀಶ್ವರರಿಗೆ ನಿರಂತರವೂ ಆಶ್ರಯಭೂತನಾದವನೇ! ಸಂಸಾರವೆಂಬ ಸಾಗರದಿಂದ ಭಕ್ತರನ್ನು ದಾಟಿಸುವವನೇ! ಮೋಕ್ಷಲಕ್ಷ್ಮಿಗೆ ಆಧಾರಭೂತನಾದ (ಲಕ್ಷ್ಮೀನೃಸಿಹ್ಮನೇ) ಇಷ್ಟು ದಿನವೂ ಸಂಸಾರಕೇಳಿಗೆಡೆಗೊಟ್ಟು ದುಃಖಿಸುತ್ತಿರುವ ನನಗೆ ಕೈಕೊಟ್ಟು ಕಾಪಾಡು."

'ಆ ಪರಮಾತ್ಮನೇ ಸಮಸ್ತಕ್ಕೂ ದೊಡ್ಡವನು, ಸರ್ವಶಕ್ತ, ಆದುದರಿಂದಲೇ ಧ್ಯಾನಕ್ಕೆ ಅರ್ಹನು' ಎಂಬುದು ಹೇಗೆಂದರೆ:—

ಶ್ಲೋ || ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿ- |
ಸಂಘಟ್ಟಿತಾಂಘ್ರಿಕಮಲಾಮಲಕಾಂತಿಕಾಂತ! ||
ಲಕ್ಷ್ಮೀಲಸತ್ಕುಚಸರೋರುಹರಾಜಹಂಸ! |
ಲಕ್ಷ್ಮೀನೃಸಿಹ್ಮ ಮಮ ದೇಹಿ ಕರಾವಲಂಬಂ ||

"ನವಬ್ರಹ್ಮರೂ, ಇಂದ್ರಾದಿ ಅಷ್ಟದಿಕ್ಪಾಲಕರೂ, ಏಕಾದಶ ರುದ್ರರೂ, ಸಪ್ತಮರುತ್ತುಗಳೂ, ದ್ವಾದಶಾದಿತ್ಯರೂ, ಇವೆಲ್ಲರೂ ಯಾವ ಪರಮಾತ್ಮನನ್ನು ಸೇವಿಸುವ ಸಲುವಾಗಿ ಆತನ ಪಾದಪದ್ಮಗಳನ್ನು ತಮ್ಮ ಕಿರೀಟಗಳಲ್ಲಿರುವ ರತ್ನಗಳ ಕಾಂತಿಯಿಂದ ಬೆಳಗುತ್ತಿರುವರೋ ಅಂತಹ ಮನೋಹರವಾದ ಪಾದಗಳನ್ನುಳ್ಳ ಪರಮಾತ್ಮನೇ! ಜ್ಞಾನಿಗಳಿಗೆ ಮೋಕ್ಷವೆಂಬ ಲಕ್ಷ್ಮಿಯನ್ನು ದಯಪಾಲಿಸುವ ಅಂದರೆ ಅಂತಹ ಮುಕ್ತಿಕಾಂತೆಗೆ ಒಡೆಯನಾದ, ಲಕ್ಷ್ಮೀನೃಸಿಹ್ಮನೇ! ಸಂಸಾರಬಂಧದಲ್ಲಿ ಸಿಕ್ಕಿಬಿದ್ದು ನರಳುವ ನನ್ನಂಥವರಿಗೆ ಕೈಕೊಟ್ಟು ಕಾಪಾಡು." ಈ ಸಂಸಾರದ ಸ್ವಭಾವವೆಂತಹುದೆಂದರೆ:—

ಶ್ಲೋ || ಸಂಸಾರವೃಕ್ಷ ಮಘಬೀಜ ಮನಂತಕರ್ಮ- |
ಶಾಖಾಶತಂ ಕರಣಪತ್ರ ಮನಂಗಪುಷ್ಪಂ ||
ಆರುಹ್ಯ ದುಃಖಫಲಿನಂ ಪತತೋ ದಯಾಳೋ! |
ಲಕ್ಷ್ಮೀನೃಸಿಹ್ಮ! ಮಮ ದೇಹಿ ಕರಾವಲಂಬಂ ||

"ಈ ಸಂಸಾರವೆಂಬುದು ಒಂದು ವೃಕ್ಷ, ಅದಕ್ಕೆ ಪಾಪವೆಂಬುದೇ ಬೀಜ, ಜನ್ಮಾಂತರಗಳಿಂದ ಮಾಡುತ್ತ ಬಂದ ಅಪರಿಮಿತ ಕರ್ಮಗಳೇ ಆ

ಗಿಡಕ್ಕಿರುವ ನೂರಾರು ಕೊಂಬೆಗಳು, ಇಂದ್ರಿಯಗಳೇ ಅದಕ್ಕೆ ಎಲೆಗಳು, ಮನ್ಮಥನೇ ಅದಕ್ಕೆ ಪುಷ್ಪವು, ಇಂತಹ ಸಂಸಾರವೃಕ್ಷದಲ್ಲಿ ಬಿಡುವುದೇ ದುಃಖವೆಂಬ ಫಲ. ಈರೀತಿಯಾದ ಸಂಸಾರವೃಕ್ಷವನ್ನು ನಾನು ಹತ್ತಿ ಮೋಹಕೂಪದಲ್ಲಿ ಬೀಳುತ್ತಿದ್ದೇನೆ. ಓ ದಯಾನಿಧಿಯಾದ ಲಕ್ಷ್ಮೀ ನೃಸಿಹ್ಮ! ನಿನ್ನ ಆಶ್ರಯವನ್ನು ಅತಿದೈನ್ಯದಿಂದ ಬೇಡುತ್ತಿರುವ ನನಗೆ ಕೈಕೊಟ್ಟು ಕಾಪಾಡು. ದುಃಖಕ್ಕೆ ಕಾರಣಭೂತವಾದ ಈ ಸಂಸಾರದಿಂದ ನನಗೆ ಬಿಡುಗಡೆಯನ್ನುಂಟುಮಾಡಿ ಸಾಯುಜ್ಯಪದವಿಯನ್ನು ಕರುಣಿಸು" ಎಂಬುದೇ ಮುಖ್ಯ ಭಾವಾರ್ಥ. ಮತ್ತು,

ಶ್ಲೋ ॥ ಸಂಸಾರಭೀಕರಕರೀಂದ್ರಕರಾಭಿಘಾತ- ।
ನಿಷ್ಪಿಷ್ಟಮರ್ಮವಪುಷಃ ಸಕಲಾರ್ತಿನಾಶ! ॥
ಪ್ರಾಣಪ್ರಯಾಣಭವಭೀತಿನಿಪೀಡಿತಸ್ಯ ।
ಲಕ್ಷ್ಮೀನೃಸಿಹ್ಮ ! ಮಮ ದೇಹಿ ಕರಾವಲಂಬಂ ॥

"ಈ ಸಂಸಾರವೆಂಬುದು ಒಂದು ಮದಿಸಿದ ಕಾಡಾನೆ. ಸ್ವೇಚ್ಛೆಯಾಗಿ ತಿರುಗುತ್ತಿರುವ ಅದರ ಸೊಂಡಲಿನಿಂದ ಹೊಡೆಯಲ್ಪಟ್ಟ ಮರ್ಮಸ್ಥಾನ ವುಳ್ಳವನು ನಾನು! ನೀನು ಭಕ್ತರ ದುಃಖಗಳನ್ನು ಹೋಗಲಾಡಿಸುವ ವನು ನಾನು ಪ್ರಾಣಪ್ರಯಾಣಕಾಲದಲ್ಲಿ ಅಂದರೆ ಅವಸಾನಸಮಯದಲ್ಲಿ ಪುನಃ ಜನನಮರಣರೂಪವಾದ ಮತ್ತು ದುಃಖದಿಂದ ತುಂಬಿರುವ ಸಂಸಾ ರಕ್ಕೆ ಹೆದರಿದಂಥ ನನಗೆ ಎಲೈ ಲಕ್ಷ್ಮೀನೃಸಿಹ್ಮನೇ! ಮುಕ್ತಿಯನ್ನು ಕೊಟ್ಟು ಕಾಪಾಡು."

ಇದೇ ರೀತಿಯಲ್ಲಿ ಆ ಮಹಾತ್ಮರು, ಸಂಸಾರವನ್ನು ದುಃಖವೆಂಬ ಸರ್ಪಗಳಿಂದ ತುಂಬಿದ ಒಂದು ಅಗಾಧವಾದ ಕೂಪಕ್ಕೂ, ಮೊಸಳೆ ತಿಮಿತಿ ಮಿಂಗಲಗಳಿಂದ ತುಂಬಿದ ಒಂದು ಆಳವಾದ ಸಾಗರಕ್ಕೂ, ಭಯಂಕರ ವಾದ ವಿಷದಂಷ್ಟ್ರಗಳಿಂದ ಕೂಡಿದ ಒಂದು ಕಾಳಸರ್ಪಕ್ಕೂ, ಸುತ್ತಲೂ ಆವರಿಸಿಕೊಂಡು ಬರುತ್ತಿರುವ ಕಾಳ್ಕಿಚ್ಚಿನ ಬೇಗೆಗೂ, ಮನ್ಮಥನೆಂಬ ಬೆಸ್ತನಿಂದ ಬೀಸಲ್ಪಟ್ಟ ಗಾಣಕ್ಕೂ ಹೋಲಿಸಿ ಅಂತಹ ಸಂಸಾರದಲ್ಲಿ ಅಸಹ್ಯವನ್ನೂ, ಭಯವನ್ನೂ ಜನಗಳಿಗೆ ಹುಟ್ಟಿಸುವಂತೆ ಬಹಳ ಚಮತ್ಕಾರ

ದಿಂದಲೂ, ಅರ್ಥಗರ್ಭಿತವಾಗಿಯೂ ಸಂಸಾರದ ಗುಟ್ಟನ್ನು ಹೊರಗೆಡವಿರುತ್ತಾರೆ. ಕೈಯಲ್ಲಿ ಯೋಗಮುದ್ರೆಯನ್ನು ಹಿಡಿದು ಸಂಸಾರವೆಂಬ ಬಲೆಗೆ ಸಿಕ್ಕಿ ಮೋಹಾಂಧಕಾರದಿಂದ ಆವರಿಸಲ್ಪಟ್ಟು ದಾರಿಗಾಣದೆ ಇರುವ ಅಜ್ಞಾನಿಗಳಿಗೆ ತಮ್ಮ ಉಪದೇಶವಾಕ್ಯಗಳೆಂಬ ಜ್ಞಾನದೀಪಗಳನ್ನು ತೋರಿಸುತ್ತ ಪಾಮರರನ್ನು ಪಾರುಮಾಡಿದ ಈ ಪರಮಹಂಸರು,

ಶ್ಲೋ ॥ ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ ।
ಚೋರೈಃ ಪ್ರಭೋ! ಬಲಿಭಿ ರಿಂದ್ರಿಯನಾಮಧೇಯೈಃ ॥
ಮೋಹಾಂಧಕೂಪಕುಹರೇ ವಿನಿಪಾತಿತಸ್ಯ ।
ಲಕ್ಷ್ಮೀನೃಸಿಹ್ಮ ! ಮಮ ದೇಹಿ ಕರಾವಲಂಬಂ ॥

"ಮಹಾ ಪರಾಕ್ರಮಶಾಲಿಗಳಾದ ಇಂದ್ರಿಯಗಳೆಂಬ ಹೆಸರುಳ್ಳ ನನ್ನ ಶರೀರದಲ್ಲಿ ನೆಲೆಸಿರುವ, ಕಳ್ಳರಿಂದ ನನ್ನ ವಿವೇಕಧನವು ಅಪಹರಿಸಲ್ಪಟ್ಟಿದೆ. ನಾನು ಮುಂದೆಕಾಣದ ಕುರುಡನಂತಿರುವುದರಿಂದಲೇ ಆಳವಾದ ಮತ್ತು ಕಗ್ಗತ್ತಲೆಯಿಂದ ತುಂಬಿದ ಮೋಹವೆಂಬ ಭಾವಿಯಲ್ಲಿ ಬಿದ್ದಿರುತ್ತೇನಾಗಿ ದಿಕ್ಕುತೋಚದಿರುವ ನನಗೆ ಓ ಲಕ್ಷ್ಮೀನೃಸಿಹ್ಮನೇ! ಜ್ಞಾನಮಾರ್ಗವನ್ನು ತೋರಿಸಿ ನನ್ನನ್ನು ಕಾಪಾಡು."

ನಿನ್ನ ನಾಮಸ್ಮರಣೆಯನ್ನು ಪ್ರತಿಕ್ಷಣವೂ ಪ್ರತಿದಿನವೂ ಮಾಡದಿರುವುದೇ ಈ ನನ್ನ ದುಸ್ಥಿತಿಗೆ ಕಾರಣ. ಆದುದರಿಂದ ಓ ಪರಮಾತ್ಮ! ನಿನ್ನನ್ನು ಈಗಿನಿಂದಲೇ ಹೀಗೆಂದು ಹೊಗಳಲು ಆರಂಭಿಸುತ್ತೇನೆ.

ಶ್ಲೋ ॥ ಲಕ್ಷ್ಮೀಪತೇ! ಕಮಲನಾಭ! ಸುರೇಶ! ವಿಷ್ಣೋ! ।
ವೈಕುಂಠ! ಕೃಷ್ಣ! ಮಧುಸೂದನ! ಪುಷ್ಕರಾಕ್ಷ ॥
ಬ್ರಹ್ಮಣ್ಯ! ಕೇಶವ! ಜನಾರ್ದನ! ವಾಸುದೇವ ।
ದೇವೇಶ! ದೇಹಿ ಕೃಪಣಸ್ಯ ಕರಾವಲಂಬಂ ॥

'ಓ ಮುಕ್ತಿಕಾಂತೆಗೆ ಒಡೆಯಾ! ಸಮಸ್ತ ಪ್ರಪಂಚಸೃಷ್ಟಿಗೆ ಮೂಲಕಾರಣನಾದ ಬ್ರಹ್ಮನಿಗೆ ಉತ್ಪತ್ತಿಸ್ಥಾನವಾದ ಕಮಲವನ್ನೇ ನಾಭಿಸ್ಥಾನದಲ್ಲುಳ್ಳವನೇ! ಜ್ಞಾನಿಗಳ ಸಮೂಹಕ್ಕೆ ಒಡೆಯನಾದವನೇ! 'ಅಂತ

ರ್ಬಹಿಶ್ಚ ತತ್ಸರ್ವಂವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ನಾರಾಯಣೋಪ ನಿಷದ್ವಾಕ್ಯದಂತೆ ಈ ಬ್ರಹ್ಮಾಂಡದ ಒಳಗೂ ಹೊರಗೂ ಆವರಿಸಿರುವುದ ರಿಂದಲೇ ವಿಷ್ಣುವೆಂಬ ಹೆಸರಿನಿಂದ ಮೆರೆಯುವ ಪರಮಾತ್ಮನೇ! ದುಷ್ಟ ಶಿಕ್ಷಣ ಶಿಷ್ಟಪರಿಪಾಲನೆಯನ್ನು ಮಾಡುವುದಕ್ಕಾಗಿ ಕಾರಣಾಂತರದಿಂದ 'ವಿಕುಂಠ' ಎಂಬಾಕೆಯ ಹೊಟ್ಟೆಯಲ್ಲಿ ಹುಟ್ಟಿದವನೇ! ಯೋಗಿಗಳ ಮನಸ್ಸ ನ್ನು ಯಾವಾಗಲೂ ಸೆಳೆಯುತ್ತಿರುವುದರಿಂದ ಕೃಷ್ಣ ಎಂಬ ಹೆಸರಿನಿಂದ ಬೆಳ ಗುವವನೇ! ಕ್ಷೀರಸಮುದ್ರದಲ್ಲಿ ಯೋಗನಿದ್ರೆಯನ್ನನುಭವಿಸುವ ಕಾಲದಲ್ಲಿ ನಿಶ್ವಾಸದಮೂಲಕ ಹೊರಹೊರಟ ಮಧುಕೈಟಭರೆಂಬ ರಾಕ್ಷಸರನ್ನು ಅಂದರೆ ಯೋಗಕ್ಕೆ ವಿಘ್ನಗಳನ್ನು ತಂದೊಡ್ಡುವ ಆಸುರೀಕಪ್ರಕೃತಿಗಳನ್ನು ನಾಶ ಮಾಡಿದುದರಿಂದಲೇ ಮಧುಸೂದನನೆಂಬ ಬಿರುದನ್ನು ಪಡೆದಿರುವವನೇ! ಯೋಗಿಗಳಿಗೆ ಜ್ಞಾನವೆಂಬ ನೇತ್ರಪದ್ಮವನ್ನು ದಯಪಾಲಿಸಿ ಅದನ್ನು ವಿಕಾಸ ಗೊಳ್ಳುವಂತೆ ಮಾಡುವವನೇ! ಬ್ರಹ್ಮಸಾಕ್ಷಾತ್ಕಾರ ಮಾಡಿದವರಿಗೆ ತನ್ನಲ್ಲಿ ಐಕ್ಯಸುಖವನ್ನು ಕೊಡುವವನೇ! ದುಷ್ಟಾತ್ಮರ ಮನಸ್ಸನ್ನು ನೋಯಿಸಿ ತನ್ಮೂಲಕ ಜ್ಞಾನೋದಯವನ್ನುಂಟುಮಾಡುವವನೇ! ವಸು=ಅಂದರೆ ಜ್ಞಾನವೆಂಬ ಐಶ್ವರ್ಯಕ್ಕೆ ಒಡೆಯರಾದವರು ವಸುದೇವರು, ಅಂದರೆ ಜ್ಞಾನಿ ಗಳು. ಅಂತಹ ಜ್ಞಾನಿಗಳಿಗೆ ಉತ್ಪತ್ತಿಸ್ಥಾನನಾದಕಾರಣದಿಂದ 'ವಾಸು ದೇವನೆಂಬ ಹೆಸರಿನಿಂದ ಕೂಡಿರುವವನೇ! ಓ ಷಡ್ಗುಣೈಶ್ವರ್ಯಸಂಪನ್ನ ನಾದ ಪರಮಾತ್ಮನೇ! ಸಂಸಾರಬಂಧಕ್ಕೆ ಸಿಕ್ಕಿ ನರಳುತ್ತಿರುವ ದೀನನಾದ ನನಗೆ ಕೈಕೊಟ್ಟು ಕಾಪಾಡುವುದಲ್ಲದೆ ಸದಾ ನಿನ್ನ ಧ್ಯಾನವನ್ನು ದಯೆಗೈಯು ತ್ತಿರು.' ಹೀಗೆಂದು ಅರ್ಥಗರ್ಭಿತವಾದ ಮಹಾ ಸ್ತೋತ್ರರತ್ನಗಳನ್ನು ಮಾಡಿ ಮುಗಿಸಿದರು. ಇವೆಲ್ಲವೂ ಈ ಪ್ರಪಂಚದಲ್ಲಿ ಸಂಸಾರಪಾಶಕ್ಕೆ ಸಿಕ್ಕಿ ನರಳುತ್ತಿದ್ದರೂ ಅದೇ ಪರಮಸುಖವೆಂದು ಭಾವಿಸಿ ನಡೆಯುತ್ತಿರುವ ಪಾಮರಜನಗಳ ಉದ್ಧಾರಕ್ಕಾಗಿಯೇ ಒತ್ತಿಹೇಳಿ ತಮ್ಮ ಕೀರ್ತಿಲತೆ ಯನ್ನು ಎಲ್ಲಾ ಕಡೆಯಲ್ಲಿಯೂ ಹಬ್ಬಿಸಿದರು. ಪಾಶ್ಚಾತ್ಯ ಪಂಡಿತರೂ ಕೂಡ ಈ ಮಹಾನುಭಾವರನ್ನು ಕುರಿತು, 'The great Sankara' 'The world Teacher' 'The Intelletual giant, Sankara, the great genious' ಎಂಬುದಾಗಿ ಅವರನ್ನು ಹೊಗ

ಳಿರುತ್ತಾರೆ. ಇವರು ವೇದಾಂತ ರಹಸ್ಯವನ್ನು 'ಸುಲಿದ ಬಾಳೆಯ ಹಣ್ಣಿನಂತೆ' ಜನಗಳ ಮನಸ್ಸಿಗೆ ಸುಲಭವಾಗಿ ಹಿಡಿಯುವಂತೆ ವರ್ಣಿಸಿರುತ್ತಾರೆ. ಜೀವಿಗಳು ಯಾವಾಗಲೂ 'ತದೇಕಧ್ಯಾನ' ಅಂದರೆ 'ಸದಾ ಪರಮಾತ್ಮನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ ಆತನನ್ನು ಭಕ್ತಿಯಿಂದ ಸ್ತುತಿಸುವುದೇ ಜ್ಞಾನವನ್ನು ಪಡೆಯುವುದಕ್ಕೆ ಮಾರ್ಗ. ಆ ಜ್ಞಾನದಿಂದಲೇ ಮುಕ್ತಿಯುಂಟಾಗುತ್ತದೆ,' ಎಂಬುದೇ ಇವರ ಉಪದೇಶಗಳ ಸಾರ.

ತದೇಕಧ್ಯಾನವನ್ನು ಕುರಿತು ಹಿಂದೆ ಹೇಳಿದ ಕುಲಶೇಖರಾಳ್ವಾರ್ ಎಂಬುವರು ಈರೀತಿಯಾಗಿ ಹೇಳಿರುತ್ತಾರೆ.

ಶ್ಲೋ॥ ಜಿಹ್ವೇ! ಕೀರ್ತಯ ಕೇಶವಂ ಮುರರಿಪುಂ ♦ ಚೇತೋ! ಭಜ ಶ್ರೀಧರಂ।
ಪಾಣಿದ್ವಂದ್ವ! ಸಮರ್ಚಯಾಚ್ಯುತ ಕಥಾಂ ♦ ಶ್ರೋತ್ರದ್ವಯ! ತ್ವಂ ಶೃಣು॥
ಕೃಷ್ಣಂ ಲೋಕಯ ಲೋಚನದ್ವಯ! ♦ ಹರೇಃ ಗಚ್ಛಾಂಘ್ರಿಯುಗ್ಮಾಲಯಂ।
ಜಿಘ್ರ ಘ್ರಾಣ! ಮುಕುಂದಪಾದತುಲಸೀಂ ♦ ಮೂರ್ಧನ್! ನಮಾಧೋಕ್ಷಜಂ॥

ಎಲೈ ನಾಲಗೆಯೇ! ಕೇಶವನನ್ನು ಕೀರ್ತಿಸು; ಮನಸ್ಸೇ! ಮುರರಿಪುವಾದ ಪರಮಾತ್ಮನನ್ನು ಭಜಿಸು; ಎರಡು ಕೈಗಳೇ! ಮುಕ್ತಿದಾಯಕನಾದ ಶ್ರೀಧರನನ್ನು ಪೂಜೆಮಾಡು; ಎರಡು ಕಿವಿಗಳೇ! ನಾಶರಹಿತನಾದ ಆ ಪರಮಾತ್ಮನ ಕಥೆಯನ್ನು ಕೇಳುವುದರಲ್ಲಿ ಆಸಕ್ತಿಯಿಡಿ; ಕಣ್ಣುಗಳೇ! ಯೋಗಿಗಳ ಹೃತ್ಪದ್ಮವಾಸಿಯಾದ ಕೃಷ್ಣನಲ್ಲಿ ದೃಷ್ಟಿಯಿಡಿ; ಪಾದದ್ವಯಗಳೇ! ಪರಮಾತ್ಮನ ದೇವಾಲಯಕ್ಕೆ ಹೋಗುವುದಕ್ಕೆ ತೊಡಗಿ; ಮೂಗೇ! ಮೋಕ್ಷಪ್ರದನಾದ ಮುಕುಂದನ ಪಾದತುಲಸಿಯನ್ನು ಮೂಸಿನೋಡು; ಎಲೈ ತಲೆಯೇ! ಇಂದ್ರಿಯಗಳನ್ನು ನಿಗ್ರಹಮಾಡಿ ತನ್ನಧೀನದಲ್ಲಿಟ್ಟುಕೊಂಡಿರುವ ಆ ಅಧೋಕ್ಷಜನಿಗೆ ನಮಸ್ಕರಿಸು. ಅಂದರೆ ಸಮಸ್ತ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ತಮ್ಮ ಸ್ವೇಚ್ಛೆಯಾದ ವ್ಯಾಪಾರಕ್ಕೆ ಬಿಡದೆ ಅವುಗಳನ್ನು ನಿಗ್ರಹಿಸಿ ಮನಸ್ಸನ್ನು ಪರಮಾತ್ಮನಲ್ಲಿ ಐಕ್ಯಮಾಡಬೇಕು ಎಂಬುದೇ ಮೇಲಿನ ಶ್ಲೋಕದ ತಾತ್ಪರ್ಯ. ಇಂತಹ ಪರಮಾತ್ಮಧ್ಯಾನತತ್ಪರತೆಯನ್ನು ಎಷ್ಟು ಜಾಗ್ರತೆ

ಯಾಗಿ ನಡೆಸಿದರೆ ಮುಕ್ತಿಸ್ಥಾನವು ಅಷ್ಟು ಸಮೀಪವಾಗಿರುತ್ತದೆಯಾಗಿ ಅವಸಾನಕಾಲದವರೆವಿಗೂ ಮುಂದುವರಿಸುವುದು ಶುದ್ಧ ತಪ್ಪು ಎಂಬ ಭಾವನೆಯನ್ನು ಸ್ಥಿರೀಕರಿಸುವುದಕ್ಕಾಗಿಯೇ ಮೇಲೆ ಅಷ್ಟು ವಿಸ್ತಾರವಾಗಿ ತಿಳಿಯಪಡಿಸಿದೆ.

'ಕರಿಧ್ರುವಬಲಿಪಾಂಚಾಲೆಅಹಲ್ಯೆಯ ಪೊರೆದವ ನೀನಂತೆ' ಮತ್ತು 'ಮರಣಕಾಲದಿ ಅಜಮಿಳಗೊಲಿದೆ ಗರುಡಧ್ವಜನೆಂಬ ಬಿರುದಿನಿಂದ' ಎಂಬ ದಾಸರಕೀರ್ತನೆಯಂತೆ "ಮೊಸಳೆಗೆ ಸಿಕ್ಕಿದ ಗಜೇಂದ್ರನಿಗೂ ಚಿಕ್ಕಮ್ಮನಿಂದಾದ ಅವಮಾನವನ್ನು ಸಹಿಸದೆ ಕಾಡಿಗೆ ಹೋಗಿ ತಪಸ್ಸುಮಾಡಬೇಕೆಂದಿದ್ದ ಬಾಲನಾದ ಧ್ರುವನಿಗೂ, ಬಲಿಗೂ ದುಷ್ಟರಾದ ದುಶ್ಯಾಸನಾದಿಗಳು ಸೀರೆ ಸೆಳೆದು ಅವಮಾನಮಾಡುವ ಕಾಲದಲ್ಲಿ ಬಹಳ ದುಃಖದಿಂದ ಗೋಳಾಡುತ್ತಿರುವ ದ್ರೌಪದಿಗೂ, ಗಂಡನ ಕ್ರೂರವಾದ ಶಾಪಕ್ಕೊಳಗಾಗಿದ್ದ ಅಹಲ್ಯೆಗೂ ಮತ್ತು ದುಷ್ಟಪಿತನಾದ ಹಿರಣ್ಯಾಕ್ಷನ ಕ್ರೂರಶಿಕ್ಷೆಗೆ ಒಳಪಟ್ಟ ಪ್ರಹ್ಲಾದನಿಗೂ, ಚಂಡಾಲಸ್ತ್ರೀಸಂಪರ್ಕದ ಪಾಪಕ್ಕೊಳಗಾಗಿದ್ದರಿಂದಲೇ, ಮರಣಕಾಲದಲ್ಲಿ ಯಮಭಟರ ಬಾಧೆಗೆ ಸಿಕ್ಕಿ ನರಳುತ್ತಿದ್ದ ಅಜಾಮಿಳನಿಗೂ ಆ ಪರಮಾತ್ಮನ ಧ್ಯಾನವನ್ನು ಒಂದುವೇಳೆ ಮಾಡಿದ ತಕ್ಷಣವೇ ಇವರಿಗೆಲ್ಲರಿಗೂ ಒದಗಿದ್ದ ಆಪತ್ತುಗಳು ನಷ್ಟವಾಗಿ ಹೋದವು ಮತ್ತು ಅಜಾಮಿಳನು ಶಾಶ್ವತವಾದ ಮುಕ್ತಿಯನ್ನೇ ಪಡೆದಂಥವನಾದನು. ಇವರೆಲ್ಲರೂ ತದೇಕಧ್ಯಾನದಲ್ಲಿ ನಿರತರಾಗಿದ್ದರು ಅಂದರೆ ಇವರು ಇಂದ್ರಿಯಗಳನ್ನು ನಿಗ್ರಹಮಾಡಿ, ತಮ್ಮ ದೇಹವನ್ನೇ ಮರೆತು, ಯೋಗದಿಂದ ಮನಸ್ಸನ್ನು ಸ್ಥಿರೀಕರಿಸಿ ಪರಮಾತ್ಮನಲ್ಲಿಯೇ ಅದನ್ನು ಲಯಮಾಡಿದರು. ಆದುದರಿಂದಲೇ ಅವರಿಗೆ ಫಲವು ಅಷ್ಟು ಸುಲಭವಾಗಿ ಕ್ಷಿಪ್ರದಲ್ಲಿಯೇ ದೊರಕಿದುದು. ಆದುದರಿಂದ ಪರಮಾತ್ಮಧ್ಯಾನವನ್ನು ಸಮಸ್ತರೂ ಸದಾ ಭಕ್ತಿಯಿಂದ ಆಚರಿಸುತ್ತ ಬರಬೇಕೆಂಬುದೇ ಇದರ ಮುಖ್ಯಾಶಯವು.

ಪರಮಾತ್ಮನ ಧ್ಯಾನಮಾಡಬೇಕೆಂದಿರುವವರು ಬಹಳ ನಮ್ರತೆಯಿಂದಲೂ ಮಹಾ ಭಕ್ತಿಯಿಂದಲೂ ಕನಕದಾಸರ ಮಾತಿನ ಮುಖೇನ ಈರೀತಿಯಾಗಿ ಸ್ತುತಿಸುತ್ತಿರಬೇಕು.

ಭಾಮಿನೀಷಟ್ಪದಿ ॥ ದೀನ ನಾನು, ಸಮಸ್ತ ಲೋಕಕೆ ।
ದಾನಿ ನೀನು, ವಿಚಾರಿಸಲು ಮತಿ ।
ಹೀನ ನಾನು, ಮಹಾಮಹಿಮಕೈವಲ್ಯಪತಿ ನೀನು ॥
ಏನಬಲ್ಲೆನು ನಾನು ? ನೆರೆ ಸು ।
ಜ್ಞಾನಮೂರುತಿ ನೀನು, ನಿನ್ನ ಸ ।
ಮಾನರುಂಟೇ ? ದೇವ ! ರಕ್ಷಿಸು ನಮ್ಮ ನನವರತ ॥

ಯಾರ ನಾಮವ ಸೊಲಿದು ಪಾಡುವೆ ।
ಯಾರ ಪಾದವ ಪೂಜಿಮಾಡುವೆ ।
ಯಾರ ಮೂರ್ತಿಯ ನೆನೆವೆ ಮನದಲಿ ನೀನರಿಯದಂತೆ ॥
ಯಾರು ಗತಿ ? ಮತಿಯಾರು ? ದಿಕ್ಕೆನ ।
ಗಾರು ? ನೀನಲ್ಲದೆ ಜಗತ್ಪತಿ ! ।
ಕಾರುಣಿಕ ! ಮೈದೋರಿ ರಕ್ಷಿಸು ನಮ್ಮ ನನವರತ ॥

(ಹರಿಭಕ್ತಿಸಾರ)

'ಓ ಪರಮಾತ್ಮ ! ನನಗೂ ನಿನಗೂ ಎಷ್ಟು ಅಂತರವಿದೆ ! ನಾನು ಕಡುಬಡವ, ನೀನು ಸಮಸ್ತ ಲೋಕಕ್ಕೂ ದಾನಿ, ನಾನು ಬುದ್ಧಿಯಿಲ್ಲದ ಮೂಢ, ನೀನು ಮೋಕ್ಷದಾಯಕನಾದ ಪರಮಾತ್ಮ ; ನನಗೆ ಏನುಗೊತ್ತಿದೆ? ನೀನಾದರೋ ಸುಜ್ಞಾನಮೂರ್ತಿ ; ನಿನ್ನ ಸಮನಾದವರು ಪ್ರಪಂಚದಲ್ಲಿ ಮತ್ತಾರಾದರೂ ಉಂಟೇ ? ಎಂದಿಗೂ ಇಲ್ಲ. ದುಸ್ಥಿತಿಯಲ್ಲಿರುವ ನನ್ನನ್ನು ಸದಾ ಕಾಪಾಡಬೇಕೆಂದು ನಾನು ದೈನ್ಯದಿಂದ ಬೇಡಿಕೊಳ್ಳುತ್ತೇನೆ.'

'ಯಾವ ಪರಮಾತ್ಮನ ದಿವ್ಯನಾಮವನ್ನು ನಾನು ಬಹುಭಕ್ತಿಯಿಂದ ಹಾಡುತ್ತೇನೆಯೋ, ಯಾವಾತನ ದಿವ್ಯಪಾದಗಳನ್ನು ಆಸಕ್ತಿಯಿಂದ ಪೂಜೆ ಮಾಡುತ್ತೇನೆಯೋ, ನಿರಂತರವೂ ಮನಸ್ಸಿನಲ್ಲಿ ಯಾವಾತನ ಮೂರ್ತಿ ಯನ್ನು ಧ್ಯಾನಮಾಡುತ್ತೇನೆಯೋ ಆ ಪರಮಾತ್ಮನು ನೀನೆ. ನಿನ್ನನ್ನು ಬಿಟ್ಟರೆ ನನಗೆ ಗತಿಯಾರು? ನನಗೆ ಬುದ್ಧಿ ಕೊಡುವವರಾರು? ನನಗೆ ಆಶ್ರಯವನ್ನು ಕೊಡುವವರಾರು? ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಭೂತನಾದ ಪರಮಾತ್ಮನೇ ! ನನ್ನಲ್ಲಿ ಕರುಣವಿಟ್ಟು ಸಾಲೋಕ್ಯಸುಖವನ್ನು ಕೊಟ್ಟು ಕಾಪಾಡು.'

ಎಂಬುದೇ ಮೇಲಿನ ಪದ್ಯಗಳ ತಾತ್ಪರ್ಯ. ಈರೀತಿಯಾಗಿ ಅಹಂಕಾರ ಮಮಕಾರಗಳನ್ನು ತೊಲಗಿಸಿ ನಿರಾಳವಾದ ಮನಸ್ಸಿನಿಂದ ಭಕ್ತಿಪೂರ್ವಕ ವಾಗಿ ದೈವವನ್ನು ಮರೆಹೊಕ್ಕಿದ್ದೇ ಆದರೆ ಖಂಡಿತವಾಗಿಯೂ ನಾವು ಆ ಪರಮಾತ್ಮನ ಪ್ರೀತಿಗೆ ಪಾತ್ರರಾಗಿ ಶ್ರೇಷ್ಠವಾದ ಪದವಿಯನ್ನು ಹೊಂದುವೆವು.

ಯಾವನಾದರೂ ಒಬ್ಬನು ಪ್ರಾಣಬಿಡುವ ಸಮಯದಲ್ಲಿ,ಅವನ ಬಂಧು ಗಳೆಲ್ಲರೂ ಅವನನ್ನು ಸುತ್ತುಗಟ್ಟಿ ರಾಮಾ! ಕೃಷ್ಣಾ! ಗೋವಿಂದಾ! ನಾರಾಯಣಾ! ಎಂದು ಹೇಳಬೇಕೆಂದು ಎಷ್ಟು ಗಟ್ಟಿಯಾಗಿ ಅವನ ಕಿವಿಯ ಹತ್ತಿರ ಅರಚಿದರೂ, ಅವನು ಮುಂದಿನ ಪ್ರಯಾಣದಲ್ಲಿ ಗಮನ ವಿಟ್ಟಿರುವನಾದುದರಿಂದ ಅವನಿಗೆ ಇವುಗಳೆಲ್ಲವೂ ಮನಸ್ಸಿಗೆ ಹತ್ತುವು. ಮತ್ತು ಸಂಸಾರವಿಷಯಕವಾದ ವ್ಯವಹಾರಗಳಲ್ಲಿ ಮಾತ್ರವೇ ಅವನ ಮನಸ್ಸು ನಿಂತಿರುತ್ತದೆ.

ಶ್ಲೋ ॥ ಮನಸಾ ಭಾವ್ಯಮಾನೋ ಹಿ ♦ ದೇಹತಾಂ ಯಾತಿ ದೇಹಕಃ ।
ದೇಹವಾಸನಯಾ ಮುಕ್ತೋ ♦ ದೇಹಧರ್ಮೈರ್ನ ಲಿಪ್ಯತೇ ॥

ನಾಲ್ಕುಜನ ಸ್ನೇಹಿತರು ಒಬ್ಬರನ್ನೊಬ್ಬರು ಎಡೆಬಿಡದೆ ಬಹಳ ಪ್ರೀತಿಯಿಂದ ಇರುವ ಸಮಯದಲ್ಲಿ ಅವರಲ್ಲಿ ಒಬ್ಬನು ರೋಗಪೀಡಿತನಾಗಿ ಪ್ರಜ್ಞೆತಪ್ಪಿ ಮಲಗಿರಲು, ಉಳಿದ ಮೂವರೂ ಆ ರೋಗಿಯನ್ನು ಕುರಿತು ದುಃಖಿಸುವರೇ ಹೊರತು, ಅವನುಮಟ್ಟಿಗೆ (ಇಹಲೋಕದ ಜ್ಞಾನವಿಲ್ಲದಿ ರೋಣದರಿಂದ) ತನ್ನ ಮನಸ್ಸಿನಲ್ಲಿ ಆ ಮೂವರನ್ನು ಎಂದಿಗೂ ಚಿಂತಿ ಸನು. ಆಗ ತನ್ನ ಕರ್ಮಾನುಸಾರವಾಗಿ ಜೀವಿಯು ಮುಂದೆ ತನಗೆ ಬರಬಹು ದಾದ ಜನ್ಮದ ವಿಷಯವನ್ನು ಕುರಿತು ಯೋಚಿಸುತ್ತಿರಲು, ಆ ರೂಪವೇ ಅವ ನೆದುರುಭಾಗದಲ್ಲಿ ಚಿತ್ರಗುಪ್ತಪಠದಲ್ಲಿ ತೋರುವಂತೆ,ತನ್ನಲ್ಲಿ ಅಂತರ್ಯಾಮಿ ಯಾಗಿಯೂ, ಸಾಕ್ಷಿಮಾತ್ರನಾಗಿಯೂ ಇರುವ ಆತ್ಮನು ಮುಂದೆ ಅವನೆತ್ತು ಬೇಕಾಗಿರುವ ರೂಪವನ್ನು ತಂದು ಮುಂದೆ ನಿಲ್ಲಿಸುತ್ತಾನೆ. ಆಗ ಅವನು ಆ ರೂಪವನ್ನು ನೋಡುತ್ತ ಪ್ರಾಣವನ್ನು ಬಿಡುತ್ತಾನೆ. ಇದಕ್ಕೆ ದೃಷ್ಟಾಂತ

ವಾಗಿ ಲಕ್ಷಾಧಿಪತಿಯೊಬ್ಬನು ಕುದುರೆಯ ಜನ್ಮವನ್ನು ಹೊಂದಬೇಕಾದ ವಿಷಯುವನ್ನೂ, ಜಡಭರತನು ಜಿಂಕೆಯ ಜನ್ಮವನ್ನು ಹೊಂದಿದ ವಿಷಯ ವನ್ನೂ ಈ ಗ್ರಂಥದಲ್ಲಿ ಮುಂದೆ ಹೇಳಿರುತ್ತೇವೆ. ಈಗ ಶ್ವಾಸವು ಜೀವ ರಾಶಿಗಳ ಆಯುಃಪ್ರಮಾಣವನ್ನು ಯಾವರೀತಿಯಲ್ಲಿ ಅಳೆಯುತ್ತದೆ ಎಂಬ ವಿಷಯುವನ್ನು ಕುರಿತು ಹೇಳುತ್ತೇವೆ.



# ಜೀವರಾಶಿಗಳ ಆಯುಃಪ್ರಮಾಣವು ಶ್ವಾಸವೇ ಹೌದು.

ಓ ಸೋದರ ಸೋದರಿಯರೇ !

ಜೀವರಾಶಿಗಳ ಆಯುರ್ಭಾಗವು ಇಷ್ಟೇ ಎಂದು ನಿರ್ಣೈಸಿ ಹೇಳಲು ಶಕ್ಯವಿಲ್ಲ. ಏತಕ್ಕೆಂದರೆ ನಾವು ಹೊರಕ್ಕೆ ಬಿಟ್ಟ ಶ್ವಾಸವನ್ನೇ ಪುನಃ ಒಳಕ್ಕೆ ಸೆಳೆಯುತ್ತೇವೆಯೋ, ಇಲ್ಲವೋ ಎಂಬುದು ನಮಗೆ ಗೊತ್ತಿಲ್ಲ. ಹೊರಕ್ಕೆ ಬಿಟ್ಟ ಶ್ವಾಸವನ್ನು ಪುನಃ ಮೂಗಿನ ಮೂಲಕ ಒಳಕ್ಕೆ ಸೆಳೆದು ಕೊಂಡಿದ್ದೇ ಆದರೆ ನಾವು ಜೀವಿಸಿರುತ್ತೇವೆಯೇ ಹೊರತು ಹಾಗೆ ಅದನ್ನು ಒಳಕ್ಕೆ ಎಳೆಯುವುದನ್ನು ಬಿಟ್ಟರೆ ಸತ್ತಂತೆಯೇ ಭಾವಿಸುವರು. ಸತ್ತು ಹೋಗಿದ್ದಾನೆಂಬ ಪದಕ್ಕೆ ಅರ್ಥವೇನೆಂದರೆ, ನಮ್ಮ ಮೂಗಿನ ದ್ವಾರ ಗಳಲ್ಲಿ ಮೇಲಕ್ಕೂ ಕೆಳಕ್ಕೂ ಆಡುತ್ತಿರುವ ಶ್ವಾಸವೆಂಬ 'ಸತ್ತು' ಶರೀರ ವನ್ನು ಬಿಟ್ಟು ಹೊರಟುಹೋಗುವಾಗ ಅವನ ಶರೀರದಲ್ಲಿದ್ದ ಪ್ರಾಣಾದಿ ದಶವಿಧ ವಾಯುಗಳೂ ಅದನ್ನು ಹಿಂಬಾಲಿಸಿ ಹೊರಡುವುದು ಮಾತ್ರವಲ್ಲದೆ, ಕಣ್ಣು, ಮೂಗು, ಬಾಯಿ, ಕಿವಿ, ಚರ್ಮಗಳೆಂಬ ಪಂಚೇಂದ್ರಿಯಗಳ ಮೂಲಕ ನೋಡುತ್ತ ಕೇಳುತ್ತಿರುವ ಮನಸ್ಸೂ ಆ ಶ್ವಾಸದಲ್ಲಿಯೇ ಸೇರಿ ಹೊರಹೊರಡುತ್ತದೆ. ಇಷ್ಟೇ ಅಲ್ಲದೆ, ತನಗಿರುವ ಆಶಾಪಾಶಗಳೂ

ಅದನ್ನು ಹಿಂಬಾಲಿಸಿಯೇ ಹೊರಹೊರಡುವುದರಿಂದ ಸತ್ತುಹೋಗಿದ್ದಾನೆಂದು ಹೇಳುವುದಕ್ಕೆ ಕಾರಣವಾಯಿತು. ಇದೇ ಸಾಯುವುದೆನ್ನುವುದರ ರಹಸ್ಯಾರ್ಥವು. ನಾವು ಹೊರಕ್ಕೆ ಬಿಡುವ ಶ್ವಾಸವನ್ನು ಒಳಕ್ಕೆ ಎಳೆಯುತ್ತೇವೆಂಬ ನಿಶ್ಚಯವಿಲ್ಲ. ಆದುದರಿಂದ ಹೊರಕ್ಕೆ ಬಿಟ್ಟ ಶ್ವಾಸವನ್ನು ಇದೇ ಕಡೇಶ್ವಾಸವೆಂಬುದಾಗಿ ನಿಶ್ಚೈಸಿಕೊಳ್ಳಬೇಕೇ ಹೊರತು, ಆ ಶ್ವಾಸವು ಪುನಃ ಮೂಗಿನ ಮೂಲಕ ಮೇಲಕ್ಕೇರುತ್ತದೆಯೆಂಬ ಆಸೆಯನ್ನು ಸ್ವಲ್ಪಮಾತ್ರವೂ ಇಟ್ಟುಕೊಳ್ಳಬಾರದು. ನಮ್ಮಲ್ಲಿರುವ ಶ್ವಾಸವೆಂಬ 'ಸತ್ತು' ಹೊರಟುಹೋಗುವುದರಿಂದ 'ಸತ್ತು' ಹೋಯಿತು ಅಥವಾ 'ಪ್ರಾಣ' ಹೋಯಿತು ಎಂದು ಹೇಳುವುದಕ್ಕೆ ಕಾರಣವಾಯಿತು. ಇದಕ್ಕೆ ದೃಷ್ಟಾಂತವಾಗಿ ದ್ರವಿಡ (ಅರವ) ಭಾಷೆಯಲ್ಲಿರುವ 'ನೆಂಜರಿವಿಳಕ್ಕ' ಎಂಬ ಶಾಸ್ತ್ರಪ್ರಮಾಣವನ್ನು ಕನ್ನಡದಲ್ಲಿ ಪದ್ಯರೂಪವಾಗಿ ಈ ಕೆಳಗೆ ಹೇಳಿದೆ.

ಸೀ ॥ ಪ್ರತಿಜೀವಿ ನಿಮಿಷಕ್ಕೆ ♦ ಹದಿನೈದು ಶ್ವಾಸಗಳ ಬಿಡುತಿರುವ
ಲೆಕ್ಕದಿಂ ♦ ದನುದಿನದೊಳು
ಇಪ್ಪತ್ತು ಮೇಲೊಂದು ♦ ಸಾಸಿರವು ಆರ್ನೂರು ಶ್ವಾಸಗಳು
ನಷ್ಟವ ♦ ನೈದುತಿಹವು ;
ಈ ಬಗೆಯೊ ಳಾಯುವುಂ ♦ ವ್ಯರ್ಥವಾ ಗುತ್ತಿರಲಿ ಕೀಶ್ವರನ
ದರ್ಶನವು ♦ ಮೆಂದಿಗಹುದು ?
ಎವೆಯಿಡುವ ಪರ್ಯಂತ ♦ ವೆಡೆಬಿಡದೆ ನಿರುತ ಮೂಲಾಧಾರ
ಮೆಂಬ ಗುದ ♦ ಸ್ಥಾನಮಾರ್ಗ

ಗೀ ॥ ದೋಳ್ನಡೆಯುತಿಹ ಶ್ವಾಸೋ ♦ ರಗವ ಬಿಡದೆ
ಬೆನ್ನೆಲುಬ ನಡುವಿರ್ಪ ನರ ♦ ರಂಧ್ರದೊಳಗೆ
ಆ ಬ್ರಹ್ಮಕಪಾಲಕೆ ನೀಂ ♦ ಸೇರಿಸಲಿಕೆ
ನಿಶ್ಚಯವು ಕಾಂಬೆ ಪರಮೇ ♦ ಶ್ವರನ ಮನವೇ !

ಪ್ರತಿದಿನವೂ ಇಪ್ಪತ್ತನಾಲ್ಕು ಗಂಟೆಗಳೊಳಗೆ ನಿಮಿಷ ಒಂದಕ್ಕೆ ಹದಿನೈದರಂತೆ ಶ್ವಾಸಗಳು ನಡೆದು ನಡೆದು ಮೊತ್ತಕ್ಕೆ ಇಪ್ಪತ್ತೊಂದು ಸಾವಿರದ ಆರನೂರು ಶ್ವಾಸಗಳು ಮೂಗಿನ ದ್ವಾರದ ಮೂಲಕ

ಶರೀರದೊಳಗಿನಿಂದ ಹೊರಗೆ ನಷ್ಟವಾಗುತ್ತಿದ್ದರೆ ಪರಮೇಶ್ವರನ ದರ್ಶನವಾಗುವುದೆಂದಿಗೆ? ರೆಪ್ಪೆ ಹೊಡೆಯುವ ಕಾಲವಾದರೂ ಸುಮ್ಮನಿರದೆ ಮೂಲಾಧಾರವೆಂಬ ಗುದಸ್ಥಾನದ ಮೂಲಕ ಚಲಿಸುತ್ತಿರುವ ಶ್ವಾಸವೆಂಬ ಆ ಸರ್ಪವನ್ನು ಬೆನ್ನೆಲುಬಿನ ನಡುವೆ ಬಿಳೀ ನರದಲ್ಲಿರುವ ಸಣ್ಣ ರಂಧ್ರದ ಮೂಲಕ ಆ ಶ್ವಾಸವೆಂಬ ಸರ್ಪವನ್ನು ಅಂದರೆ ಉಸಿರನ್ನು ಬ್ರಹ್ಮಕಪಾಲಕ್ಕೇರಿಸಿ, ಅಲ್ಲಿ ನಿಲ್ಲಿಸಿದ್ದೇ ಆದರೆ, ಓ ಮನಸ್ಸೇ! ಆ ಪರಮಾತ್ಮನ ನಿಜಸ್ವರೂಪವನ್ನು ನಿಶ್ಚಯವಾಗಿಯೂ ತಿಳಿಯಬಹುದು ಅಂದರೆ, ಯೋಗಮಾರ್ಗದಿಂದ ಪರಮಾತ್ಮ ದರ್ಶನವು ಸುಲಭವಾಗಿ ಆಗುತ್ತದೆ ಎಂಬುದೇ ಮೇಲಿನ ಪದ್ಯದ ತಾತ್ಪರ್ಯ. ಶರೀರದಲ್ಲಿದ್ದ ಮೂಲಾಧಾರಾದಿ ಏಳು ಚಕ್ರಗಳಲ್ಲಿ ಶ್ವಾಸವು ನಡೆಯುತ್ತ, ಅದು ಜೀವಿಗಳ ಆಯುಃಪ್ರಮಾಣವನ್ನು ಯಾವ ರೀತಿಯಲ್ಲಿ ನಿರ್ಣೈಸುತ್ತದೆಯೆಂಬುದನ್ನು ಈ ಕೆಳಗೆ ಹೇಳಿದೆ.

ಶ್ಲೋ ॥ ಪ್ರಣಷ್ಟಶ್ವಾಸನಿಶ್ವಾಸ ♦ ಪ್ರಧ್ವಂಸ್ತ ವಿಷಯಗ್ರಹಃ ।
ನಿಶ್ಚೇಷ್ಟೋ ನಿರ್ವಿಕಾರಶ್ಚ ♦ ಲಯೋ ಜಯತಿ ಯೋಗಿನಾಂ ॥

ಮೂಗಿನ ಹೊಳ್ಳೆಗಳ ಮೂಲಕ ನಾಭಿಸ್ಥಾನದಿಂದ ಹೊರಕ್ಕೆ ಬಿಡುವ ಗಾಳಿಗೆ ನಿಶ್ವಾಸವೆಂದೂ, ಅದೇ ಮಾರ್ಗವಾಗಿ ಹೊರಗಿನಿಂದ ಒಳಕ್ಕೆ ಎಳೆಯುವ ಗಾಳಿಗೆ ಉಚ್ಛ್ವಾಸವೆಂದೂ ಹೆಸರು. ಮೇಲೆ ಹೇಳಿದ ನಿಶ್ವಾಸ ಉಚ್ಛ್ವಾಸಗಳು ಯೋಗಬಲದಿಂದ ಯಾರಿಗೆ ನಿಂತುಹೋಗುತ್ತವೆಯೋ ಅಂತಹರಿಗೆ ಮಾತಾಡಿದರೂ ಕೇಳದೆ ಮತ್ತು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಯಾವ ವ್ಯಾಪಾರಗಳೂ ಇರವು. ಹೀಗಿರುವ ಸ್ಥಿತಿಯೇ 'ಲಯ'ವು ಎಂದು ದೊಡ್ಡವರು ಹೇಳುತ್ತಾರೆ. ಇಂತಹ ಲಯಸ್ಥಿತಿಯು ಯೋಗಾಭ್ಯಾಸವನ್ನು ಮಾಡಿ ಸಿದ್ಧಿಹೊಂದಿದವರಿಗೆ ಮಾತ್ರ ಲಭಿಸುವುದೇ ಹೊರತು ಇತರರಿಗೆ ಇದು ಎಂದಿಗೂ ಲಭಿಸಲಾರದು. ಈ ನಿಶ್ವಾಸ ಉಚ್ಛ್ವಾಸಗಳನ್ನು 'ಹಂಸ' ಎಂದು ಶೃತಿಯು ಹೇಳುತ್ತದೆ. ಈ 'ಹಂಸ' ವೆಂದು ಕರೆಯಲ್ಪಡುವ ನಿಶ್ವಾಸ ಉಚ್ಛ್ವಾಸಗಳು ಪ್ರತಿ ಜೀವರಾಶಿಗಳಲ್ಲಿಯೂ ತಿರುಗುತ್ತ ಆಯಾ ಜೀವರಾಶಿಗಳ ಆಯುಃಪ್ರಮಾಣವನ್ನು

ತೋರಿಸುತ್ತವೆ. ಮೇಲೆ ಹೇಳಿದ ಮೂಲಾಧಾರ ಸ್ವಾಧಿಷ್ಠಾನಾದಿ ಸಪ್ತ ಚಕ್ರಗಳಿರುವ ಚಿತ್ರಪಠವನ್ನು ಇಗೋ ☞ ಈ ಎದುರು ಭಾಗದಲ್ಲಿ ತೋರಿಸಿದೆ. ಗಮನಿಸಿ ನೋಡಿ. ಆ ಏಳು ಚಕ್ರಗಳಲ್ಲಿಯೂ ಏಳು ಜನ ದೇವತೆಗಳಿದ್ದಾರೆ. ಆಯಾ ಚಕ್ರಗಳಲ್ಲಿರುವ ದೇವತೆಗಳ ಹಸಿವನ್ನು ಕಳೆಯುವುದಕ್ಕಾಗಿಯೇ ಪ್ರತಿದಿನವೂ ಇಪ್ಪತ್ತೊಂದು ಸಾವಿರದ ಆರನೂರು ಸಾರಿ ಶ್ವಾಸಗಳು ಶರೀರದಲ್ಲಿ ಚಲಿಸುತ್ತಿರುತ್ತವೆ. ಇದಕ್ಕೆ ಶ್ರುತಿಪ್ರಮಾಣವುಂಟು.

ಶ್ರುತಿ ॥ ಷಟ್ಶತಂ ಗಣನಾಥಸ್ಯ ♦ ಷಟ್ಸಹಸ್ರಂ ಪ್ರಜಾಪತೇಃ ।
ಷಟ್ಸಹಸ್ರಂ ಮಹಾವಿಷ್ಣೋಃ ♦ ಷಟ್ಸಹಸ್ರಂ ಹರಸ್ಯ ಚ ॥
ಸಹಸ್ರಂ ಜೀವರೂಪಸ್ಯ ♦ ಸಹಸ್ರಂ ಈಶ್ವರಾತ್ಮನಃ ।
ಸಹಸ್ರಂ ಗುರುರೂಪಸ್ಯ ♦ ಏಕಂ ಬುಧ್ಯಾ ಪ್ರಕಲ್ಪಯೇತ್॥

## ಸಪ್ತ ಚಕ್ರಗಳಲ್ಲಿಯೂ ಶ್ವಾಸಗಳು ನಡೆಯುತ್ತಿರುವುದಕ್ಕೆ ಶ್ರುತಿ ಪ್ರಮಾಣಗಳು.

### 1. ಮೂಲಾಧಾರ ಚಕ್ರ.

ಶ್ರುತಿ ॥ " ಆಧಾರೇ ಬ್ರಹ್ಮ ಚಕ್ರಂ, ತ್ರಿಧಾವರ್ತಂ, ಭಗಮಂಡಲಾಕಾರಂ ♦
ತತ್ರ ಮೂಲಕಂದಃ, ತತ್ರ ಶಕ್ತಿಂ ಭಾವನಾಕಾರಂ ಧ್ಯಾಯೇತ್ ♦
ತತ್ರೈವ ಸರ್ವಕಾಮೇಶ್ವರೀಪೀಠಂ ಸರ್ವಕಾಮಫಲಪ್ರದಂ ಭವತಿ ।"

**1. ಗುದಸ್ಥಾನವು.** ಇದನ್ನು ಮೂಲಾಧಾರವೆಂದು ಹೇಳುತ್ತಾರೆ. ಈ ಗುದಸ್ಥಾನಕ್ಕೆ ಅಧಿಪತಿಯು ಗಣನಾಥನು. ಶರೀರದಲ್ಲಿರುವ ಗಣಗಳಿಗೆಲ್ಲಾ ಅಧಿಪತಿ ಅಥವಾ ಒಡೆಯನಾದುದರಿಂದ ಆತನಿಗೆ ಗಣನಾಥನೆಂಬ ಹೆಸರುಂಟಾಯಿತು. ಮತ್ತು ಆತನನ್ನು ' ವಿಘ್ನೇಶ್ವರನು ' ಎಂದೂ ಹೇಳುವು




ಸಪ್ತ ಚಕ್ರಗಳಲ್ಲಿಯೂ ಶ್ವಾಸ ತಿರುಗುವ ಪಟವು.

ದುಂಟು. ಯಾವ ಕಾರ್ಯಗಳಲ್ಲಿಯೂ ವಿಘ್ನವುಂಟಾಗದಿರುವಂತೆ ಮಾಡುವವನಾದುದರಿಂದ ಆ ದೇವತೆಗೆ ವಿಘ್ನೇಶ್ವರನೆಂಬ ಹೆಸರುಂಟಾಯಿತು. ಸಕಲ ಜೀವರಾಶಿಗಳ ಗುದಸ್ಥಾನದಲ್ಲಿ ವಿಘ್ನೇಶ್ವರನೇ ಆದಿದೇವನಾಗಿ ನಿಂತು ಶ್ವಾಸವನ್ನು ನಡೆಸುವುದರಿಂದ ಯಾರು ಯಾರು ಯಾವ ಯಾವ ಕೆಲಸಗಳನ್ನು ಪ್ರಾರಂಭಿಸಿದರೂ ಅವರವರು ಮಾಡುವ ಆಯಾ ಕೆಲಸಗಳಿಗೆ ವಿಘ್ನವುಂಟಾಗದಿರುವುದಕ್ಕಾಗಿ ಮೊಟ್ಟಮೊದಲು ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ ಅನಂತರ ಕಾರ್ಯಾರಂಭವನ್ನು ಮಾಡಬೇಕೆಂದು ಹಿರಿಯರು ನಿರ್ಣೈಸಿರುತ್ತಾರೆ. ಆ ವಿಘ್ನೇಶ್ವರನಿಗಾಗಿ ಪ್ರತಿದಿನವೂ ಪ್ರಾತಃಕಾಲ 6 ಘಂಟೆಯಿಂದ (ಸೂರ್ಯೋದಯಕ್ಕೆ ಸರಿಯಾಗಿ) 6 ಘಂಟೆ 40 ನಿಮಿಷಗಳ ವರಿವಿಗೆ ಷಟ್ಶತವು ಅಂದರೆ ಆರುನೂರು ಶ್ವಾಸಗಳು ನಡೆಯುವುವು. ಆಗ ವಿಘ್ನೇಶ್ವರನಿಗೆ ಹಸಿವು ತೀರಿದ ಮೇಲೆ, ಆ ಶ್ವಾಸವು ಸ್ವಾಧಿಷ್ಠಾನಕ್ಕೆ ಅಂದರೆ ಲಿಂಗಸ್ಥಾನದೊಳಕ್ಕೆ ಪ್ರವೇಶಿಸುತ್ತದೆ. ಸಕಲ ಜೀವರಾಶಿಗಳೂ ಲಿಂಗದ ಮೂಲಕವೇ ಉತ್ಪತ್ತಿಯಾಗುವದರಿಂದ ಅದಕ್ಕೆ ಅಧಿದೇವತೆಯು ಚತುರ್ಮುಖ ಬ್ರಹ್ಮನು.

---

## 2. ಸ್ವಾಧಿಷ್ಠಾನ ಚಕ್ರ.

---

ಶ್ರುತಿ ‖ "ದ್ವಿತೀಯಂ ಸ್ವಾಧಿಷ್ಠಾನಚಕ್ರಂ ♦ ತನ್ಮಧ್ಯೇ ಪಶ್ಚಿಮಾಭಿಮುಖಂ ಲಿಂಗಂ ಪ್ರವಾಳಾಂಕುರಸದೃಶಂ ಧ್ಯಾಯೇತ್ ♦ ತತ್ರೈವ ಓಡ್ಯಾಣ ಪೀಠನಿಲಯಂ ಜಗದಾಕರ್ಷಣಂ ಭವತಿ. ♦ ‖"

2. ಮೇಲೆ ಹೇಳಿದಂತೆ ಈ ಚಕ್ರವಿರುವುದು ಲಿಂಗಸ್ಥಾನದಲ್ಲಿ. ಅದಕ್ಕೆ ಅಧಿದೇವತೆ ಬ್ರಹ್ಮನು. ಈ ಬ್ರಹ್ಮದೇವನಿಗೆ ಪ್ರಾತಃಕಾಲ 6 ಘಂಟೆ 41 ನಿಮಿಷದಿಂದ ಮಧ್ಯಾಹ್ನ 1 ಘಂಟೆ 20 ನಿಮಿಷಗಳವರಿವಿಗೂ ಷಟ್ಸಹಸ್ರಂ ಅಂದರೆ ಆರುಸಾವಿರ ಶ್ವಾಸಗಳು ನಡೆಯುತ್ತವೆ. ಆಗ ಬ್ರಹ್ಮನಿಗೆ ಹಸಿವು ತೀರಿದ ಮೇಲೆ ಮಣಿಪೂರಕಕ್ಕೆ ಅಂದರೆ ನಾಭಿ

ಸ್ಥಾನಕ್ಕೆ ಶ್ವಾಸವು ಪ್ರವೇಶಿಸುತ್ತದೆ. ಈ ನಾಭಿಸ್ಥಾನದಲ್ಲಿ ಜಲವಿರುವುದರಿಂದ ಇದಕ್ಕೆ ಅಧಿದೇವತೆ ವಿಷ್ಣು. ಈತನೇ ಸಕಲ ಜೀವರಾಶಿಗಳನ್ನೂ ರಕ್ಷಿಸುವವನು.

---

## 3. ಮಣಿಪೂರಕವು.

ಶ್ರುತಿ ॥ " ತೃತೀಯಂ ನಾಭಿಚಕ್ರಂ ಪಂಚಾವರ್ತಂ ಸರ್ಪವತ್ಕುಟಿಲಾಕಾರಂ ♦
ತನ್ಮಧ್ಯೇ ಕುಂಡಲೀಶಕ್ತಿಂ ಬಾಲಾರ್ಕಕೋಟಿಸದೃಶಂ ಧ್ಯಾಯೇತ್ ♦
ಸಾ ಮಧ್ಯಶಕ್ತಿಃ ಸರ್ವಸಿದ್ಧಿಪ್ರದಾ ಭವತಿ ♦ ॥"

3. ಮಣಿಪೂರಕವೆಂಬ ಈ ಚಕ್ರವು ನಾಭಿಪ್ರದೇಶದಲ್ಲಿ ಸರ್ಪದಂತೆ ಕುಟಿಲಾಕಾರವುಳ್ಳದಾಗಿ ಗುಂಡಾಗಿ ಐದು ಸುತ್ತುಗಳಿಂದ ಸುತ್ತಿರುತ್ತದೆ. ಇದರ ಮಧ್ಯದಲ್ಲಿ ಹೊಸದಾಗಿ ಹುಟ್ಟಿದ ಸೂರ್ಯಬಿಂಬದಂತೆ ಪ್ರಕಾಶಮಾನನಾಗಿರುವ ಅನಂತಪದ್ಮನಾಭನೆಂಬ ಹೆಸರಿನಿಂದ (ಸರ್ಪಾಕಾರವಾಗಿ) ಶ್ರೀ ಮಹಾವಿಷ್ಣುವು ವಾಸಿಸುತ್ತಾನೆ. ಈ ವಿಷ್ಣುವಿಗೋಸ್ಕರ ಹಗಲು 1 ಘಂಟೆ 21 ನಿಮಿಷದಿಂದ ಮೊದಲು ರಾತ್ರಿ 8 ಘಂಟೆಯುವರಿವಿಗೂ ಷಟ್ಸಹಸ್ರಂ ಅಂದರೆ ಆರು ಸಾವಿರ ಶ್ವಾಸಗಳು ನಡೆಯುತ್ತವೆ. ಆಗ ಆ ವಿಷ್ಣುವಿನ ಹಸಿವನ್ನು ಕಳೆದು ಅಲ್ಲಿಂದ ಮುಂದೆ ಹೊರಟು ಶ್ವಾಸವು 'ಅನಾಹತ'ಕ್ಕೆ ಅಂದರೆ ಹೃದಯಕಮಲದೊಳಕ್ಕೆ ಪ್ರವೇಶಿಸುತ್ತದೆ. ಈ ಹೃದಯದಲ್ಲಿ ಅಗ್ನಿಯಿರುವುದರಿಂದ ಇದಕ್ಕೆ ಅಧಿದೇವತೆಯಾದ ರುದ್ರನು ಇಲ್ಲಿ ವಾಸಿಸುತ್ತಾನೆ. ಈತನೇ ಸಕಲ ವಸ್ತುಗಳನ್ನೂ ಭಸ್ಮವನ್ನಾಗಿ ಮಾಡುವವನು. ಆದುದರಿಂದ ಆ ರುದ್ರನು ಹೃದಯಸ್ಥಾನಲ್ಲಿದ್ದು ಸಕಲ ಜೀವರಾಶಿಗಳೂ ಭುಜಿಸುವ ಆಹಾರವನ್ನು ಭಸ್ಮವನ್ನಾಗಿ ಅಂದರೆ ಜೀರ್ಣಿಸುವಂತೆ ಮಾಡುತ್ತಾನೆ.

---

## 4. ಅನಾಹತ ಚಕ್ರ.

ಶ್ರುತಿ ॥ " ಚತುರ್ಥಂ ಹೃದಯಾಧಾರಂ, ಅಷ್ಟದಳಕಮಲಂ, ಅಧೋಮುಖಂ ♦ ತನ್ಮಧ್ಯೇ ಕರ್ಣಿಕಾಯಾಂ ಲಿಂಗಾಕಾರಂ ಜ್ಯೋತಿ ರ್ಧ್ಯಾಯೇತ್ ♦ ಶೈವಾ ಹಂಸಕಳಾ ಸರ್ವೇಂದ್ರಿಯವಶ್ಯಾ ಭವತಿ ♦ ॥ "

4. ಹೃದಯದಲ್ಲಿ ತಾವರೆಯ ಕಮಲದಂತೆ ಅಧೋಮುಖವಾಗಿ ಅಂದರೆ ತಲೆಕೆಳಗಾಗಿ ಲಿಂಗಾಕಾರದಂತೆ ತೂಗಾಡುತ್ತಿರುವ ಕಮಲದ ಮಧ್ಯಭಾಗದಲ್ಲಿ ರುದ್ರನು ವಾಸಿಸುತ್ತಾನೆ. ಈ ರುದ್ರನಿಗೋಸ್ಕರ ರಾತ್ರಿ 8 ಘಂಟೆ 1 ನಿಮಿಷ ಮೊದಲು 2 ಘಂಟೆ 40 ನಿಮಿಷಗಳವರಿವಿಗೂ ಷಟ್ ಸಹಸ್ರಂ ಎಂದರೆ ಆರು ಸಾವಿರ ಶ್ವಾಸಗಳು ನಡೆಯುತ್ತವೆ. ಆಗ ಆ ರುದ್ರನಿಗೆ ಹಸಿವು ತೀರಿದ ಮೇಲೆ ಅಲ್ಲಿಂದ ಮುಂದೆ ಆ ಶ್ವಾಸವು "ವಿಶುದ್ಧ ಚಕ್ರ"ಕ್ಕೆ ಅಂದರೆ ಕಂಠಪ್ರದೇಶಕ್ಕೆ ಪ್ರವೇಶಿಸುತ್ತದೆ. ಇದಕ್ಕೆ ಅಧಿದೇವತೆಯು 'ಜೀವನು.' ಈ ಜೀವನು ಉದಾನವಾಯುವಿನಿಂದ ಕೂಡಿ ತಿನ್ನುವ ವಸ್ತುಗಳನ್ನೂ ಕುಡಿಯುವ ನೀರನ್ನೂ ಒಳಕ್ಕೆ ಹೋಗುವಂತೆ ಮಾಡುತ್ತಾನೆ ಮತ್ತು ನಿದ್ರೆ ಹೋಗುವಾಗ ಆಯಾ ಇಂದ್ರಿಯಗಳನ್ನು ಗಾಡಾಂಧಕಾರದಲ್ಲಿ ಬೀಳುವಂತೆ ಮಾಡಿ ಎಚ್ಚರಿಕೆಯಾದಾಗ ಆಯಾ ಇಂದ್ರಿಯಗಳು ಇರುವ ಸ್ಥಾನಗಳಿಗೆ ಪುನಃ ತಂದು ನಿಲ್ಲಿಸುತ್ತಾನೆ.

---

## 5. ವಿಶುದ್ಧ ಚಕ್ರ.

ಶ್ರುತಿ॥ "ಪಂಚಮಂ ಕಂಠಚಕ್ರಂ ಚತುರಂಗುಳಂ ♦ ತತ್ರ ವಾಮೇ ಚಂದ್ರನಾಡೀ ಇಡಾ, ♦ ದಕ್ಷಿಣೇ ಪಿಂಗಳಾ ಸೂರ್ಯನಾಡೀ ♦ ತನ್ಮಧ್ಯೇ ಸುಷುಮ್ನಾಂ ಧ್ಯಾಯೇತ್ ♦ ಶೈವಾ ಅನಾಹತಕಳಾ ಅನಾಹತಸಿದ್ಧಿ ರ್ಭವತಿ ॥ "

5. ಐದನೆಯದು ವಿಶುದ್ಧ ಚಕ್ರ ಅಥವಾ ಕಂಠ ಚಕ್ರ. ಅದರ ವಿಸ್ತಾರ ನಾಲ್ಕಂಗುಲ ಮಾತ್ರ. ಅದಕ್ಕೆ ಎಡಭಾಗದಲ್ಲಿ 'ಇಡಾ' ಎಂಬ

ಚಂದ್ರ ನಾಡಿಯೂ ಬಲಭಾಗಕ್ಕೆ 'ಪಿಂಗಳಾ' ಎಂಬ ಸೂರ್ಯನಾಡಿಯೂ, ಮಧ್ಯಭಾಗದಲ್ಲಿ 'ಸುಷುಮ್ನಾ' ಎಂಬ ನಾಡಿಯೂ ಇರುತ್ತವೆ. ಈ ಸುಷುಮ್ನಾ ನಾಡಿಯ ಮಧ್ಯದಲ್ಲಿ ನೆಲೆಸಿರುವ ಜೀವನೇ ಈ ಚಕ್ರಕ್ಕೆ ಅಧಿದೇವತೆ. ಈ ಜೀವನಿಗೋಸ್ಕರ ರಾತ್ರಿ 2 ಘಂಟೆ 41 ನಿಮಿಷ ಮೊದಲು 3 ಘಂಟೆ 46ನೇ ನಿಮಿಷದವರಿವಿಗೂ ಸಹಸ್ರಂ ಅಂದರೆ ಒಂದು ಸಾವಿರ ಶ್ವಾಸಗಳು ನಡೆಯುುತ್ತವೆ. ಆಗ ಆ ಜೀವನಿಗೆ ಹಸಿವು ತೀರಿದ ಮೇಲೆ 'ಆಗ್ನೇಯ ಚಕ್ರ'ಕ್ಕೆ ಅಂದರೆ ಭ್ರೂಮಧ್ಯಪ್ರದೇಶಕ್ಕೆ ಶ್ವಾಸವು ಹೊರಡುತ್ತದೆ. ಇದಕ್ಕೆ ಅಧಿದೇವತೆ 'ಈಶ್ವರನು.' ಈತನು ಜೀವಿಗಳ ಕರ್ಮಗಳಿಗೆ ತಕ್ಕಂತೆ, ಭಕ್ತಿಯೋಗ ಜ್ಞಾನಮಾರ್ಗಗಳನ್ನು ಕೊಡುವವನಾದುದರಿಂದ ಭ್ರೂಮಧ್ಯದಲ್ಲಿದ್ದಾನೆಂದು ದೊಡ್ಡವರು ಹೇಳುತ್ತಾರೆ.

---

## 6. ಆಗ್ನೇಯ ಚಕ್ರ.

ಶ್ರುತಿ ॥ "ಷಷ್ಠಂ ಭ್ರೂಮಧ್ಯಚಕ್ರಂ ♦ ತತ್ರ ಅಂಗುಷ್ಠಮಾತ್ರಂ ಜ್ಞಾನನೇತ್ರಂ ದೀಪಶಿಖಾಕಾರಂ ಧ್ಯಾಯೇತ್ ♦ ವಾಚಾ ಸಿದ್ಧಿ ರ್ಭವತಿ ॥"

6. 'ಆರನೆಯದು ಭ್ರೂಮಧ್ಯಚಕ್ರವೆನಿಸುವ ಆಗ್ನೇಯ ಚಕ್ರ. ಅಲ್ಲಿ ಹೆಬ್ಬೆಟ್ಟು ಪ್ರಮಾಣವುಳ್ಳ ದೀಪದ ಜ್ವಾಲೆಯಂತೆ ಆಕಾರವನ್ನುಳ್ಳ ಜ್ಞಾನನೇತ್ರಸ್ವರೂಪನಾದ ಈಶ್ವರನು ನೆಲೆಸಿರುತ್ತಾನೆ. ವಾಙ್ಮಾತ್ರದಿಂದ ಸಿದ್ಧಿಯುುಂಟಾಗುತ್ತದೆ' ಎಂಬುದೇ ಮೇಲಿನ ಶ್ರುತ್ಯರ್ಥ. ಈ ಈಶ್ವರನಿಗೋಸ್ಕರ ರಾತ್ರಿ 3 ಘಂಟೆ 47 ನಿಮಿಷ ಮೊದಲು 4 ಘಂಟೆ 53ನೇ ನಿಮಿಷದವರಿವಿಗೂ ಸಹಸ್ರಂ ಅಂದರೆ ಒಂದು ಸಾವಿರ ಶ್ವಾಸಗಳು ನಡೆಯುುತ್ತವೆ. ಆಗ ಈ ಈಶ್ವರನಿಗೆ ಹಸಿವು ತೀರಿದ ಬಳಿಕ ಶ್ವಾಸವು 'ಸಹಸ್ರಾರ ಚಕ್ರ'ಕ್ಕೆ ಸ್ಥಾನವಾದ ಬ್ರಹ್ಮಕಪಾಲಕ್ಕೆ ಪ್ರವೇಶಿಸುತ್ತದೆ. ಇದಕ್ಕೆ ಅಧಿದೇವತೆಯು ಪರಮಾತ್ಮ. ಈತನು ಜ್ಞಾನಸಿದ್ಧರಾದ ಜೀವಿಗಳೆಲ್ಲವನ್ನೂ ತನ್ನಲ್ಲಿ ಐಕ್ಯವಾಗಿ ಮಾಡಿಕೊಳ್ಳುವವನಾಗಿರಲು ಎಲ್ಲದಕ್ಕಿಂ

ತಲೂ ಶ್ರೇಷ್ಠವಾದ ಮೂಲಸ್ಥಾನವೆನಿಸುವ ಬ್ರಹ್ಮಕಪಾಲದೊಳಕ್ಕೆ ಹೋಗಿ ನಿಂತಿರುತ್ತಾನೆ.

---

## 7. ಸಹಸ್ರಾರ ಚಕ್ರ.

---

ಶ್ರುತಿ ॥ "ಸಪ್ತಮಂ ಬ್ರಹ್ಮರಂಧ್ರಂ ನಿರ್ವಾಣಚಕ್ರಂ ♦ ಸೂಚಿಕಾಗ್ರಭೇದ್ಯಂ ಧೂಮಶಿಖಾಕಾರಂ ಧ್ಯಾಯೇತ್ ♦ ತತ್ರ ಜಾಲಂಧರಪೀಠಂ ಮೋಕ್ಷಪ್ರದಂ ಭವತಿ ॥"

7. "ಏಳನೆಯದೇ ಸಹಸ್ರಾರಚಕ್ರ. ಇದಕ್ಕೆ ನಿರ್ವಾಣಚಕ್ರವೆಂದೂ ಹೆಸರುಂಟು. ಇದರ ಸ್ಥಾನ ಬ್ರಹ್ಮರಂಧ್ರ. ಇಲ್ಲಿ ಧೂಮಶಿಖಾಕಾರ ಸ್ವರೂಪಿಯಾದ, ಸೂಜಿಯ ಮೊನೆಯಿಂದ ಮಟ್ಟಿಗೆ ಭೇದಿಸಲು ಸಾಧ್ಯವಾದ ಅಂದರೆ ಅತಿ ಸೂಕ್ಷ್ಮವಾದ ಮತ್ತು ದಟ್ಟವಾದ ಆಕಾರವನ್ನುಳ್ಳ ಆ ಪರಮಾತ್ಮನು ವಾಸಿಸುತ್ತಾನೆ. ಅಲ್ಲಿ 'ಜಾಲಂಧರ' ಪೀಠವಿದೆ. ಇದೇ ಮೋಕ್ಷಕ್ಕೆ ಮೂಲಪೀಠ." ಎಂಬುದೇ ಮೇಲಿನ ಶೃತ್ಯರ್ಥ. ಈ ಪರಮಾತ್ಮನಿಗೋಸ್ಕರ ಬೆಳಗಿನ ಝಾವ 4 ಘಂಟೆ 54 ನಿಮಿಷ ಮೊದಲುಗೊಂಡು ಬೆಳಿಗ್ಗೆ 6 ಘಂಟೆಯ ವರಿವಿಗೂ ಸಹಸ್ರಂ ಅಂದರೆ ಒಂದು ಸಾವಿರ ಶ್ವಾಸಗಳು ನಡೆಯುತ್ತವೆ. ಆಗಲೇ ಆ ಪರಮಾತ್ಮನಿಗೆ ಹಸಿವು ತೀರುವುದು. ಪರಮಾತ್ಮನಿಗೆ ಹಸಿವು ತೀರಿದ ತಕ್ಷಣವೇ ಪುನಃ ಗುದಸ್ಥಾನದಲ್ಲಿರುವ ವಿಘ್ನೇಶ್ವರನ ಹಸಿವನ್ನು ಕಳೆಯುವುದಕ್ಕಾಗಿ ಶ್ವಾಸವು ಪ್ರಾತಃಕಾಲ 6 ಘಂಟೆಗೆ ಸರಿಯಾಗಿ ಆ ಸ್ಥಳವನ್ನು ಸೇರುತ್ತದೆ. ಈ ವಿಧವಾಗಿ ಏಳು ಚಕ್ರಗಳಲ್ಲಿಯೂ ಶ್ವಾಸವು ಪ್ರತಿನಿತ್ಯವೂ ನಡೆಯುತ್ತ ನಡೆಯುತ್ತ ಜೀವ ರಾಶಿಗಳ ಆಯುಃಪ್ರಮಾಣವನ್ನು ತೋರಿಸುತ್ತಿರುತ್ತದೆ.

ಘಂಟೆಗಳನ್ನು ತೋರಿಸುವುದು ಗಡಿಯಾರವು. ಜೀವಿಗಳ ಆಯಸ್ಸನ್ನು ತೋರಿಸುವುದು ಶ್ವಾಸವು. ಯುಗಗಳನ್ನು ತೋರಿಸುವುದು ದಿನಗಳು ವಾರಗಳು ಸಂವತ್ಸರಗಳೇ ಹೊರತು ಬೇರೆ ಯಾವುವೂ ಇಲ್ಲವು. ಮೇಲೆ ಹೇಳಿದುದಲ್ಲದೆ ನಮ್ಮ ಶರೀರದಲ್ಲಿರುವ ಚಕ್ರಗಳನ್ನು ತಿರುಪತಿ

ಯಲ್ಲಿನ ಏಳು ಬೆಟ್ಟಗಳೆಂದು ಹೇಳಿರುತ್ತಾರೆ. ಏಳನೆಯ ಚಕ್ರವಾದ ಸಹಸ್ರಾರ ಚಕ್ರದಲ್ಲಿರುವ ಪರಮಾತ್ಮನೇ ತಿರುಪತಿಯ ಏಳನೇ ಬೆಟ್ಟದ ಶಿಖರದಲ್ಲಿರುವ ಶ್ರೀ ವೆಂಕಟರಮಣಸ್ವಾಮಿಯಾಗಿದ್ದಾನೆಂದೂ ಕೆಲವರು ಪೂಜ್ಯರು ತಿಳಿಸಿರುತ್ತಾರೆ.

ಇಂತಹ ಪರಮಾತ್ಮನು ಹಂಸರೂಪವಾಗಿ ಅಂದರೆ 'ಸೋऽಹಂ' ಮಂತ್ರರೂಪವಾಗಿ 'ಪಿಪೀಲಿಕಾದಿ ಬ್ರಹ್ಮಪರ್ಯಂತಂ' ಅಂದರೆ ಇರುವೆಯಿಂದ ಆರಂಭಿಸಿ ಬ್ರಹ್ಮನವರಿವಿಗೂ ಆವರಿಸಿರುತ್ತಾನೆ. ಈ 'ಸೋऽಹಂ' ಎಂಬುದೇ 'ಓಂ' ಎಂಬ ತಾರಕಮಂತ್ರವು. ಹೇಗೆಂದರೆ, 'ಸೋ' ಎಂಬ ಮಂತ್ರದಲ್ಲಿನ 'ಓ' ಎಂಬ ಜೀವಾಕ್ಷರವನ್ನೂ, 'ಹಮ್' ಎಂಬ ಮಂತ್ರದಲ್ಲಿನ 'ಂ' ಅಥವಾ 'ಮ್' ಎಂಬ ಅನುಸ್ವಾರವನ್ನೂ ತೆಗೆದು ಎರಡನ್ನೂ ಕಲೆಸಲು 'ಓಂ' ಎಂಬ ಶಬ್ದವು ಹುಟ್ಟಿತು. ಹೀಗೆ 'ಸೋऽಹಂ' ಎಂಬ ಶ್ವಾಸವು ತನ್ನಷ್ಟಕ್ಕೆ ತಾನೇ ಜಪಿಸುತ್ತಿರುವ ಮಂತ್ರವನ್ನು ಯೋಗಿಗಳು ಕಂಡುಹಿಡಿದು ಆ ಶ್ವಾಸವನ್ನು ವ್ಯಯಮಾಡದೆ ನಿಲ್ಲಿಸಿರುವುದರಿಂದ ಅವರು ಕಾಲನನ್ನು ಜಯಿಸಿ ಅನೇಕ ಸಾವಿರ ಸಂವತ್ಸರಗಳು ಜೀವಿಸಿದ್ದಾರೆಂದು ದೊಡ್ಡವರು ಹೇಳಿರುತ್ತಾರೆ.

ಯಾವ ಜಾತಿಯಲ್ಲಿಯಾಗಲಿ ಶಿಶುವು ಹುಟ್ಟಿ ಅವರವರ ಕರ್ಮಕ್ಕೆ ತಕ್ಕಂತೆ ಮೂರುತಿಂಗಳು ಜೀವಿಸಿದ್ದು ಮರಣಹೊಂದಬೇಕೆಂದು ಸೃಷ್ಟಿಕರ್ತನು ನಿರ್ಣೈಸಿದ್ದದ್ದೇ ಆದರೆ, ಆ ಮೂರು ತಿಂಗಳವರಿವಿಗೂ ನಡೆಯುತ್ತಿರುವ ಹತ್ತೊಂಭತ್ತು ಲಕ್ಷ ನಲವತ್ತು ನಾಲ್ಕುಸಾವಿರ ಶ್ವಾಸಗಳನ್ನು ದಿವಾರಾತ್ರಿಗಳಲ್ಲಿ ರೆಪ್ಪೆಹೊಡೆಯುವಷ್ಟು ಕಾಲವೂ ಅಂದರೆ ಕಣ್ಣು ತೆರೆದು ಕಣ್ಣುಮುಚ್ಚುವ ಕಾಲವೂ ಸುಮ್ಮನಿರದೆ, ಆ ಹತ್ತೊಂಭತ್ತುಲಕ್ಷ ನಲವತ್ತು ಸಾವಿರ ಶ್ವಾಸಗಳು ಶರೀರದಲ್ಲಿರುವವರಿವಿಗೂ ಎಡೆಬಿಡದೆ ಒಂದೇ ಸಮನಾಗಿ ನಡೆಯುತ್ತ, ಕಡೆಯಲ್ಲಿ ಬರುವ ಶ್ವಾಸವು ಮೂಗಿನ ಹೊಳ್ಳೆಗಳ ಮೂಲಕ ಶರೀರವನ್ನು ಬಿಟ್ಟು ಹೊರಹೊರಡುವ ಸಮಯದಲ್ಲಿ ಆ ಶಿಶುವಿನ ಕರ್ಮಫಲಕ್ಕೆ ತಕ್ಕಂತೆ ಬರಬೇಕಾದ ವ್ಯಾಧಿಯು ಅದಕ್ಕೆ ಸಂಭವಿಸಿ ಶಿಶು ಶರೀರದೊಳಗಿನ ಜೀವನು ಹೊರಹೊರಡುತ್ತಾನೆ.

ಯಾವ ಜಾತಿಯಲ್ಲಿಯೇ ಆಗಲಿ ಶಿಶುವು ಹುಟ್ಟಿ ಐದು ತಿಂಗಳು ಮಾತ್ರ ಜೀವಿಸಿದ್ದು ಮರಣವನ್ನು ಹೊಂದಬೇಕೆಂದು ಪ್ರಾರಬ್ಧ ಕರ್ಮವಿದ್ದದ್ದೇ ಆದರೆ ಶಿಶುವು ಹುಟ್ಟಿದ ತಕ್ಷಣವೇ ನಡೆಯುವ ಶ್ವಾಸವು ಮೊದಲುಗೊಂಡು ಮೂವತ್ತೆರಡು ಲಕ್ಷ ನಲವತ್ತುಸಾವಿರ ಶ್ವಾಸಗಳಿರುವ ವರಿವಿಗೂ ಶ್ವಾಸಗಳಾಡುತ್ತ ಕಡೆಗೆ ಆ ಶಿಶುವಿಗೆ ಸಂಭವಿಸಬೇಕಾದ ವ್ಯಾಧಿಯುಂಟಾಗಿ ಶಿಶುದೇಹದಿಂದ ಜೀವನು ಹೊರಟುಹೋಗುತ್ತಾನೆ.

ಹತ್ತು ತಿಂಗಳು ಜೀವಿಸಿದ್ದು ಮರಣವನ್ನು ಹೊಂದಬೇಕೆಂಬ ಪ್ರಾರಬ್ಧಕರ್ಮದ ವಿಧಿಯಿದ್ದಲ್ಲಿ, ಅರವತ್ತನಾಲ್ಕು ಲಕ್ಷ ಎಂಭತ್ತುಸಾವಿರ ಶ್ವಾಸಗಳಿರುವ ವರಿವಿಗೂ ಜೀವಿಸಿದ್ದು ಕಡೆಗೆ ಜೀವನು ದೇಹವನ್ನು ಬಿಟ್ಟು ಹಾರಿಹೋಗುವನು.

ಹತ್ತು ಸಂವತ್ಸರಗಳು ಜೀವಿಸಿ ಪ್ರಾಣವನ್ನು ಬಿಡಬೇಕೆಂಬುದು ಪ್ರಾರಬ್ಧಕರ್ಮಫಲದಿಂದ ನಿಯಾಮಕವಾಗಿದ್ದದ್ದೇ ಆದರೆ ಏಳುಕೋಟಿ ಎಪ್ಪತ್ತೇಳು ಲಕ್ಷ ಅರವತ್ತುಸಾವಿರ ಶ್ವಾಸಗಳು ಶರೀರದಲ್ಲಿರುವ ವರಿವಿಗೂ ಜೀವಿಸಿದ್ದು ಅನಂತರ ಜೀವನು ಹೊರಟುಹೋಗುತ್ತಾನೆ.

ಇಪ್ಪತ್ತು ವರ್ಷಗಳ ಕಾಲ ಜೀವಿಸಿದ್ದು ಅನಂತರ ಮೃತಿಹೊಂದಬೇಕೆಂದು ಪ್ರಾರಬ್ಧ ಕರ್ಮವು ಇದ್ದದ್ದೇ ಆದರೆ, ಹದಿನೈದುಕೋಟಿ ಐವತ್ತೈದು ಲಕ್ಷ ಇಪ್ಪತ್ತುಸಾವಿರ ಶ್ವಾಸಗಳಿರುವವರೆವಿಗೂ ಜೀವಿಸಿದ್ದು ಆ ಬಳಿಕ ಪ್ರಾಣವನ್ನು ಬಿಡುತ್ತಾನೆ.

ಮೂವತ್ತು ವರ್ಷಗಳ ಕಾಲ ಬದುಕಿ ಆ ಬಳಿಕ ಮರಣಹೊಂದಬೇಕೆಂಬುದನ್ನು ಪೂರ್ವಜನ್ಮ ಕರ್ಮಫಲಗಳು ನಿಯಮಿಸಿದ್ದೇ ಆದರೆ, ಇಪ್ಪತ್ತಮೂರುಕೋಟಿ ಮೂವತ್ತೆರಡು ಲಕ್ಷ ಎಂಭತ್ತು ಸಾವಿರ ಶ್ವಾಸಗಳಿರುವವರಿವಿಗೂ ಪ್ರಾಣದಿಂದಿದ್ದು ತದನಂತರ ಸಾಯುತ್ತಾನೆ.

ಮೂವತ್ತೈದು ಸಂವತ್ಸರಗಳು ಜೀವಿಸಿರಬೇಕೆಂಬದಾಗಿ ಕರ್ಮವಿದ್ದದ್ದೇ ಆದರೆ ಇಪ್ಪತ್ತೇಳುಕೋಟಿ ಇಪ್ಪತ್ತೊಂದು ಲಕ್ಷ ಅರವತ್ತು ಸಾವಿರ ಶ್ವಾಸಗಳು ನಷ್ಟವಾಗುವ ವರಿವಿಗೂ ಇದ್ದು ಉತ್ತರಕ್ಷಣವೇ ಪ್ರಾಣವನ್ನು ಬಿಡುತ್ತಾನೆ.

ನಲವತ್ತು ವರ್ಷಗಳಕಾಲ ಭೂಮಿಯಮೇಲೆ ನೆಲೆಸಿರಬೇಕೆಂಬುದು ಕರ್ಮದಿಂದ ವಿಧಿಸಲ್ಪಟ್ಟದ್ದರೆ, ಮೂವತ್ತೊಂದುಕೋಟಿ ಹತ್ತುಲಕ್ಷ ನಲವತ್ತುಸಾವಿರ ಶ್ವಾಸಗಳು ಪೂರ್ತಿಯಾಗಿ ಕಳೆಯುವ ವರಿವಿಗೂ ಇದ್ದು ಅನಂತರ ಈ ಲೋಕವನ್ನು ಬಿಡುತ್ತಾನೆ.

ಐವತ್ತು ಸಂವತ್ಸರಗಳು ಜೀವಿಸಿದ್ದು ಸಾಯಬೇಕೆಂಬುದು ಅವನ ಪ್ರಾರಬ್ಧಕರ್ಮಫಲವಾಗಿದ್ದರೆ ಮೂವತ್ತೆಂಟುಕೋಟಿ ಎಂಭತ್ತೆಂಟುಲಕ್ಷ ಶ್ವಾಸಗಳು ನಡೆಯುವವರಿವಿಗೂ ಜೀವಿಸಿದ್ದು ಅನಂತರ ಶರೀರವನ್ನು ಬಿಡುತ್ತಾನೆ.

ಅರವತ್ತು ವರ್ಷಗಳಕಾಲ ಜೀವಿಸಿರಬೇಕೆಂದು ಕರ್ಮವಿಧಿಯಿದ್ದರೆ, ನಲವತ್ತಾರುಕೋಟಿ ಅರವತ್ತೈದು ಲಕ್ಷ ಅರವತ್ತು ಸಾವಿರ ಶ್ವಾಸಗಳು ನಡೆಯುವ ವರಿವಿಗೂ ಬದುಕಿದ್ದು, ತಾನು ನೆಲೆಸಿದ್ದ ಈ ದೇಹವೆಂಬ ಗೂಡನ್ನು ಬಿಟ್ಟು ಜೀವನು ಹೊರಹೊರಡುತ್ತಾನೆ.

ಎಪ್ಪತ್ತು ವರ್ಷಗಳ ಕಾಲ ಬದುಕಿದ್ದು ಆ ಬಳಿಕ ವಿಧಿವಶನಾಗ ಬೇಕೆಂಬುದು ಪ್ರಾರಬ್ಧಕರ್ಮ ವಿದ್ದದ್ದೇ ಆದರೆ, ಐವತ್ತನಾಲ್ಕುಕೋಟಿ ನಲವತ್ತಮೂರು ಲಕ್ಷ ಇಪ್ಪತ್ತುಸಾವಿರ ಶ್ವಾಸಗಳಾಡುತ್ತಿರುವ ವರಿವಿಗೂ ಈ ಭೂಸಂಗವು ದೊರೆತು, ಆ ಶರೀರವನ್ನು ಬಿಟ್ಟು ಜೀವಿಯು ಮುಂದೆ ಹೊರಡುತ್ತಾನೆ.

ಎಂಭತ್ತು ವರ್ಷಗಳಕಾಲ ಜೀವಿಸಿದ್ದು ಬಳಿಕ ಮೃತಿಹೊಂದಬೇಕೆಂ ಬುದು ಕರ್ಮವಿದ್ದದ್ದೇ ಆದರೆ, ಅರವತ್ತೆರಡುಕೋಟಿ ಇಪ್ಪತ್ತು ಲಕ್ಷ ಎಂಭತ್ತುಸಾವಿರ ಶ್ವಾಸಗಳು ನಡೆಯುತ್ತಿರುವ ವರಿವಿಗೂ ಆ ಜೀವನು ಆ ಶರೀರ ಸಂಬಂಧವನ್ನೇ ಪಡೆದು ಆಮೇಲೆ ಆ ಶರೀರವನ್ನು ಬಿಟ್ಟು ಬೇರೆಯಾಗುತ್ತಾನೆ.

ಕಡೆಯಲ್ಲಿ ಎಂಭತ್ತೈದು ವರ್ಷಗಳಕಾಲ ಜೀವವನ್ನು ಧರಿಸಿ ಅನಂ ತರ ಮೃತಿಯನ್ನು ಹೊಂದಬೇಕೆಂಬುದು ಕರ್ಮದ ನಿರ್ಣಯವಿದ್ದದ್ದೇ ಆದರೆ ಮೊತ್ತಕ್ಕೆ ಅರವತ್ತಾರುಕೋಟಿ ಒಂಭತ್ತು ಲಕ್ಷ ಅರವತ್ತುಸಾವಿರ

ಶ್ವಾಸಗಳು ಮುಗಿಯುವ ವರಿವಿಗೂ ಜೀವಿಯು ಆ ಶರೀರದ ಸಂಬಂಧ ವನ್ನು ಹೊಂದಿ ಅನಂತರ ಅದನ್ನು ಬಿಟ್ಟು ಹೊರಡುತ್ತಾನೆ.

ಈ ಮೇಲಿನ ಲೆಕ್ಕದಲ್ಲೆಲ್ಲಾ ವರ್ಷಕ್ಕೆ ಮುನ್ನೂರರವತ್ತು ದಿನಗ ಳೆಂದೇ ಗಣಿಸಲಾಗಿದೆ. ಅದಕ್ಕೆ ಬದಲು ವರ್ಷವೊಂದಕ್ಕೆ ಮುನ್ನೂರರ ವತ್ತೈದು ದಿನಗಳೆಂದು ಲೆಕ್ಕಿಸಿದರೆ 171ನೇ ಪುಟದಲ್ಲಿ ತಿಳಿಸಿರುವಂತೆ ಎಂಭತ್ತೈದು ವರ್ಷಗಳಿಗೆ ಒಟ್ಟು ಅರವತ್ತೇಳುಕೋಟಿ ಒಂದುಲಕ್ಷ ನಲವತ್ತುಸಾವಿರ ಶ್ವಾಸಗಳು ನಡೆಯಬೇಕು. ಹೀಗೆಯೇ ಉಳಿದವು ಗಳಲ್ಲಿಯೂ ಲೆಕ್ಕವಿಡಬೇಕು. ಜೀವಿಗಳಿಗೆ ಯಾವಯಾವ ಕಾರ್ಯವು ಮಾಡುವಾಗ ಎಷ್ಟೆಷ್ಟು ಶ್ವಾಸಗಳು ನಷ್ಟವಾಗುತ್ತವೆ ಎಂಬ ವಿಷಯ ವನ್ನು "ಶ್ವಾಸವು ಸ್ತ್ರೀಪುರುಷರ ಆಯುಃಪ್ರಮಾಣವನ್ನು ತಿಳಿಸುವಿಕೆ" ಎಂಬ ಪ್ರಕರಣದಲ್ಲಿ ಹಿಂದೆಯೇ ಹೇಳಿದೆ. ಈ ಅಧ್ಯಾಯವನ್ನು ಪಠಿಸು ವಾಗ ವಾಚಕರು ಅದನ್ನೂ ಇದರ ಜೊತೆಯಲ್ಲಿಯೇ ಗಮನಿಸಬೇಕು. ಎಷ್ಟೆಷ್ಟು ವರ್ಷಗಳಲ್ಲಿ ಎಷ್ಟೆಷ್ಟು ಶ್ವಾಸಗಳು ನಡೆಯುತ್ತವೆ ಎಂಬುದಕ್ಕೆ ಈ ಕೆಳಗೆ ಹೇಳಿದರೀತಿ ಮಾಡಬೇಕು. ದಿನವೊಂದಕ್ಕೆ ಇಪ್ಪತ್ತೊಂದು ಸಾವಿರದ ಆರನೂರು ಶ್ವಾಸಗಳಂತೆ ಆಯಾಯಾ ವರ್ಷಗಳಿಗೆ ಎಷ್ಟೆಷ್ಟು ದಿನಗಳಾಗುತ್ತವೆಂಬುದನ್ನು ಲೆಕ್ಕಮಾಡಿ, ಇಷ್ಟು ದಿನಗಳಿಗೆ ಎಷ್ಟಾಗುತ್ತ ದೆಂಬುದನ್ನು ಕಂಡುಹಿಡಿಯಬಹುದು. ಇದಕ್ಕೆ ಪ್ರಮಾಣವಾಗಿ ದ್ರವಿಡ ಭಾಷೆಯಲ್ಲಿರುವ 'ನೆಂಜರಿವಿಳಕ್ಕ' ಎಂಬ ಶಾಸ್ತ್ರಪ್ರಮಾಣವನ್ನು ಕನ್ನಡ ಪದ್ಯರೂಪವಾಗಿ ಹಿಂದೆಯೇ ಹೇಳಿರುತ್ತೆ.

ಅಯ್ಯೋ! ಅವರವರ ಕರ್ಮಕ್ಕನುಗುಣವಾಗಿ ಬರಬೇಕಾದ ರೋಗವು ಪ್ರಾಪ್ತವಾಗಿ ಜೀವಿಗಳು ಸಾಯುತ್ತಿದ್ದಾರೆಂದು ಹಿಂದೆಯೇ ಹೇಳಿದ್ದೇ ವಲ್ಲವೇ? ಅದರ ರಹಸ್ಯವನ್ನು ಈಗ ವಿಪುಲವಾಗಿ ಹೇಳುತ್ತೇವೆ.

ಕೆಲವರು ಯಾವ ವ್ಯಾಧಿಯೂ ಸಂಭವಿಸದೆ ಅಕಸ್ಮಾತ್ತಾಗಿ ಪ್ರಾಣ ಬಿಡಬೇಕೆಂದು ಅವರಿಗೆ ಕರ್ಮವಿದ್ದದ್ದೇ ಆದರೆ, ಹಾಗೆಯೇ ಅವರು ಪ್ರಾಣವನ್ನು ಬಿಡುವರು. ಈ ಅಕಸ್ಮಾತ್ ಮರಣದ ವಿಷಯವು ಈ ಮುಂದೆ ತಿಳಿಸಿದೆ.

ಒಬ್ಬನು ಇಪ್ಪತ್ತೈದು ಸಂವತ್ಸರಗಳು, ಆರು ತಿಂಗಳು, ಹತ್ತು ದಿವಸಗಳು, ಹನ್ನೊಂದುಘಂಟೆ, ಐವತ್ತೈದು ನಿಮಿಷಗಳಕಾಲ ಜೀವಿಸಿದ್ದು, ಐವತ್ತಾರನೆಯ ನಿಮಿಷಕ್ಕೆ ಸರಿಯಾಗಿ ಯಾವುದೋ ಒಂದು ಸ್ಥಳದಲ್ಲಿ ಹಬೆಯ ಗಾಡಿಯು (Railway train) ಓಡುತ್ತಿರುವಾಗ ಆ ರೈಲ್ ಕಂಬಿಗೆ ಅಡ್ಡವಾಗಿ ಮಲಗಿ ಆ ರೈಲಿನ ಚಕ್ರಗಳಿಗೆ ಸಿಕ್ಕಿ ಪ್ರಾಣಬಿಡ ಬೇಕಾದುದು ಅವನಿಗೆ ಕರ್ಮಫಲವಿದ್ದದ್ದೇ ಆದರೆ ಆ ರೈಲು ಕೆಳಗೆ ಬಿದ್ದೇ ಸಾಯುತ್ತಾನೆ.

ಮತ್ತೊಬ್ಬನು, ಇಷ್ಟು ವರ್ಷಗಳು, ಇಷ್ಟು ತಿಂಗಳುಗಳು, ಇಷ್ಟು ದಿನಗಳು, ಇಷ್ಟು ಘಂಟೆಗಳು, ಇಷ್ಟು ನಿಮಿಷಗಳು ಬದುಕಿದ್ದು ಅನಂತರ ಗೊತ್ತಾದ ಕಾಲಕ್ಕೆ ಸರಿಯಾಗಿ ಯಾವುದೋ ಒಂದು ನಿಯಮಿತವಾದ ಸ್ಥಳದಲ್ಲಿ ದಾರಿನಡೆವಾಗ ಕಾಲಿನ ಹೆಬ್ಬೆಟ್ಟು ಕಲ್ಲಿಗೆ ತಗುಲಿ ಎಂದರೆ ಎಡವಿ ಬೋರಲಾಗಿ ಬಿದ್ದು ಬಾಯಲ್ಲಿ ನೆತ್ತರನ್ನು ಕಾರುತ್ತ ಪ್ರಾಣಬಿಡಬೇಕೆಂಬುದು ವಿಧಿನಿಯಾಮಕವಿದ್ದದ್ದೇ ಆದರೆ, ಗೊತ್ತಾದ ಕಾಲಕ್ಕೆ ಗೊತ್ತಾದ ಸ್ಥಳದಲ್ಲಿ ಮೇಲೆ ಹೇಳಿದಂತೆಯೇ ಅವನಿಗೆ ಮರಣವುಂಟಾಗುತ್ತದೆ. ಇದು ಎಂದಿಗೂ ತಪ್ಪದು.

ಇನ್ನೊಬ್ಬನು, ಇಷ್ಟು ಸಂವತ್ಸರಗಳು, ಇಷ್ಟು ತಿಂಗಳುಗಳು, ಇಷ್ಟು ದಿನಗಳು ಇಷ್ಟು ಘಂಟೆಗಳು, ಇಷ್ಟು ನಿಮಿಷಗಳು ಕಳೆದ ತಕ್ಷಣವೇ ಯಾವುದೋ ಒಂದು ಸ್ಥಳದಲ್ಲಿ 'ಮೋಟಾರು' ಚಕ್ರದ ಕೆಳಗೆ ಬಿದ್ದು ಪ್ರಾಣಬಿಡಬೇಕೆಂದು ಕರ್ಮವಿದ್ದದ್ದೇ ಆದರೆ, ಅವನು ಖಂಡಿತವಾಗಿಯೂ ಆ ಕಾಲಕ್ಕೆ ಆ ಸ್ಥಳದಲ್ಲಿ ಆ ವಿಧವಾದ ಮರಣವನ್ನೇ ಹೊಂದುವನು.

ಹೀಗೆಯೇ ಇನ್ನೂ ಅನೇಕರು, ಸರ್ಪದಷ್ಟರಾಗಿಯೂ, ನದಿ, ಕೆರೆ, ಕುಂಟೆ ಮೊದಲಾದುವುಗಳಲ್ಲಿ ಬಿದ್ದೂ ಮತ್ತು ಅನೇಕ ವಿಧವಾದ ದುರ್ಮರಣಗಳಿಗೆ ತುತ್ತಾಗುವರು. ಆದುದರಿಂದ ಇನ್ನು ಮುಂದೆ ತಮಗೆ ದೊರಕುವ ಜನ್ಮದಲ್ಲಿ ಉತ್ತಮಗತಿಯುಂಟಾಗಬೇಕೆಂಬುದಿದ್ದಲ್ಲಿ ಅಸತ್ಯವನ್ನು ನುಡಿಯದೆ ಸತ್ಯದ ಹಾದಿಯನ್ನು ಹಿಡಿದು ಪರಸ್ವತ್ತಾಪಹರಣಕ್ಕೆ ಗಮನ ಕೊಡದೆ ಧರ್ಮಮಾರ್ಗದಲ್ಲಿ ನಡೆಯುತ್ತಿರಬೇಕು. ಒಬ್ಬನು, ತನ್ನ

ಗ್ರಾಮದಲ್ಲಿ ಗೌರವಪಡೆದು ದೊಡ್ಡ ಮನುಷ್ಯನೆಂದೆನಿಸಿರುವಾಗ ಸುತ್ತ ಮುತ್ತಣ ಗ್ರಾಮದಲ್ಲಿರುವವರು ಒಬ್ಬರಲ್ಲೊಬ್ಬರು ಜಗಳವಾಡಿ ತಮ್ಮ ಜಗಳವನ್ನು ತೀರ್ಮಾನಿಸುವುದಕ್ಕಾಗಿ ಈ ದೊಡ್ಡ ಮನುಷ್ಯನ ಸಮೀಪಕ್ಕೆ ಬರುವುದುಂಟು. ಆಗ ಆ ಗೌರವಸ್ಥನು ಅವರ ಜಗಳದ ವಿಷಯವನ್ನು ಆಮೂಲಾಗ್ರವಾಗಿ ತಿಳಿದು, ನ್ಯಾಯಾನ್ಯಾಯಗಳನ್ನು ವಿಶದಪಡಿಸಿ ನ್ಯಾಯ ವಾದ ಕಡೆಗೆ ತೀರ್ಪುಕೊಡುವುದು ಅವನ ಯೋಗ್ಯತೆಗೆ ತಕ್ಕುದು. ಅಲ್ಲದೆ ಆತನು ತನ್ನ ಪ್ರಯೋಜನವನ್ನೆಣಿಸಿ ಲಂಚವೇ ಮೊದಲಾದುವುಗಳನ್ನು ತೆಗೆದುಕೊಂಡು ಅನ್ಯಾಯಕ್ಕೆ ಎಡೆಗೊಡಬಾರದು. ಇದು ಅವನ ಯೋಗ್ಯ ತೆಗೆ ತಕ್ಕುದಲ್ಲ. ಹಾಗೆ ಅವನು ಲಂಚಕ್ಕೆ ಒಳಬಿದ್ದು ಅನ್ಯಾಯಪರ ನಾದರೆ ತತ್ಫಲವಾಗಿ ಆತನು ಮುಂದೆ ಪಡೆಯುವ ಜನ್ಮವು ಬಹಳ ನೀಚ ವಾದದ್ದು. ಅದರಲ್ಲಿಯೂ ಅವನಿಗೆ ತಿನ್ನುವುದಕ್ಕೆ ಅನ್ನವೂ, ಉಡುವುದಕ್ಕೆ ಬಟ್ಟೆಯೂ ಇಲ್ಲದೆ ಕಡುಬಡವರ ಮನೆಯಲ್ಲಿ ಹುಟ್ಟಿ, ಅಂಬಲಿ ಕುಡಿದು, ಚಿಂದಿಬಟ್ಟೆಗಳನ್ನುಟ್ಟು ಬಹು ಕಷ್ಟವನ್ನೂ, ವ್ಯಸನವನ್ನೂ ಪಡೆಯ ಬೇಕಾಗುವುದು. ಈ ಮಾತು ಸತ್ಯ. 'ಮಾಡಿದ್ದುಣ್ಣೋ ಮಹರಾಯ' ಎಂಬ ನಾಣ್ಣುಡಿಗೆ ತಕ್ಕಂತೆ ಈ ಜನ್ಮದಲ್ಲಿ ಮಾಡಿದ ಕರ್ಮಫಲವನ್ನು ಮುಂದಿನ ಜನ್ಮದಲ್ಲಿ ಅನುಭವಿಸಲೇ ಬೇಕು. ಈ ಜನ್ಮದಲ್ಲಿ ಲಂಚವಾಗಿ ಹಣವನ್ನು ಹೊಂದುವಾಗ ಮಾತ್ರವೇ ಅಲ್ಪಸ್ವಲ್ಪ ಸಂತೋಷವನ್ನು ಹೊಂದುತ್ತಾನೆ. ಆದರೆ ಇದರ ಫಲವಾದ ದುಃಖವನ್ನು ಮರುಜನ್ಮದಲ್ಲಿ ತಪ್ಪದೆ ಅನುಭವಿಸಿಯೇ ತೀರಬೇಕೆಂಬುದನ್ನು ತಿಳಿದುಕೊಳ್ಳಲಾರದೆ ಲಂಚವನ್ನು ತೆಗೆದುಕೊಳ್ಳುತ್ತಾನೆ. ಆದುದರಿಂದ 'ಲಂಚಕ್ಕೆ ಮನ ಗೊಡುವ ಪುರುಷರಿರಾ! ಎಚ್ಚರಿಕೆ, ಎಚ್ಚರಿಕೆ, ಮುಂದಾಗುವ ದುಷ್ಫಲ ವನ್ನರಿಯದೆ ಇದುವರಿವಿಗೂ ನೀವು ಲಂಚವನ್ನು ತೆಗೆದಿರಬಹುದು. ಆದರೆ ಈ ಗ್ರಂಥವನ್ನು ಪಠಿಸಿ ಈ ವಿಷಯವನ್ನು ತಿಳಿದಬಳಿಕ ಎಂದಿಗೂ ಅಂತಹ ಹೀನವಾದ ಯೋಚನೆಗೆ ಮನಸ್ಸಿನಲ್ಲಿ ಎಡೆಗೊಡಬೇಡಿ. ಈ ವಾಕ್ಯವನ್ನೇ ಗುರುವಾಕ್ಕೆಂದು ತಿಳಿದು ನ್ಯಾಯವಾದ ಮಾರ್ಗದಲ್ಲಿ ನಡೆ ಯುತ್ತ ಜಗಳವನ್ನು ನ್ಯಾಯದ ಕಡೆಗೆ ತೀರ್ಮಾನಿಸಿ ಆಮೇಲೆ, ಆ ದಿನ ಉಭಯಪಕ್ಷಿಗಳಿಗೂ ನಿಮ್ಮ ಮನೆಯಲ್ಲಿಯೇ ಆತಿಥ್ಯವನ್ನು ನಡೆಸಿ ಒಬ್ಬರಿ

ಗೊಬ್ಬರಿಗೆ ರಾಜಿಮಾಡಿಸಿ ಮನೆಗೆ ಕಳುಹಿಸಿದ್ದೇ ಆದರೆ, ಅದರಿಂದ ನಿಮಗೆ ಒಳ್ಳೆಯ ಹೆಸರೂ, ಗೌರವವೂ ಉಂಟಾಗುವುದಲ್ಲದೆ ನೀವು ಮುಂದೆ ಪಡೆಯುವ ಜನ್ಮದಲ್ಲಿ ಈಗಿನದಕ್ಕಿಂತಲೂ ಉತ್ತಮ ಪದವಿಯನ್ನೂ ಒಳ್ಳೆಯ ಕೀರ್ತಿಯನ್ನೂ ಹೊಂದುವವರಾಗುತ್ತೀರಿ. ಅಲ್ಲದೆ ಲಂಚವೆಂಬ ಎಂಜಲಿಗೆ ಆಸೆಪಡಬಾರದು. ಲೋಕದಲ್ಲಿ ಲಂಚಾಕೋರರನೇಕರಿದ್ದಾರೆ. ಇನ್ನು ಮೇಲೆ ಅಂತಹ ದುರ್ಬುದ್ಧಿಗಳನ್ನು ತೊಲಗಿಸಿ ಸತ್ಯವಾಗಿಯೇ ನಡೆಯಬೇಕು. ಈಹೊತ್ತೋ, ನಾಳೆಯೋ, ಇಲ್ಲವೇ ಇನ್ನು ಹತ್ತು ವರ್ಷಗಳಾದ ಮೇಲೆಯೋ ಸಾಯುವುದು ನಿಶ್ಚಯ. ಆದುದರಿಂದ ಇಂತಹ ಪಾಪಕಾರ್ಯಗಳನ್ನು ಮಾಡಿ ಆ ಪಾಪಗಳ ಮೂಟೆಯನ್ನು ತಲೆಯಮೇಲೆ ಹೊತ್ತುಕೊಂಡು ಮುಂದಿನ ಜನ್ಮಕ್ಕೋಸ್ಕರ ತೆಗೆದುಕೊಂಡು ಹೋಗಿ ಆ ಜನ್ಮದಲ್ಲಿ ಏತಕ್ಕಾಗಿ ದುಃಖವನ್ನನುಭವಿಸಬೇಕು ? ಈ ವಿಧವಾಗಿ ಹಣವನ್ನು ಗಳಿಸಿ ನಿಮ್ಮ ಹೆಂಡತಿಮಕ್ಕಳಿಗೆ ಇಟ್ಟುಹೋದರೆ ಅವರುಗಳಿಂದ ನಿಮಗೇನಾದರೂ ಫಲವು ಇದೆಯೇ ? ಅವರುಗಳಿಂದ ವ್ಯರ್ಥವಾಗಿ ನೀವು ಪಾಪವನ್ನು ಸಂಪಾದಿಸುತ್ತಿದ್ದೀರೇ ಹೊರತು ಅದರಿಂದ ನಿಮಗೆ ಪುಣ್ಯವೆಂಬುದು ಎಳ್ಳಷ್ಟೂ ದೊರಕದು. ಮೇಲೆ ಹೇಳಿದಂತೆ ಲಂಚ ಮೊದಲಾದ ಅನ್ಯಾಯ ಸಂಪಾದನೆಯನ್ನು ಮಾಡದೆ, ಪರಸ್ತ್ರೀ ಚಿಂತೆಯಿಲ್ಲದೆ ಇದ್ದು, ನೀವು ನ್ಯಾಯವಾಗಿ ಸಂಪಾದಿಸಿದ ಹಣದಲ್ಲಿ ದಾನಧರ್ಮಾದಿಕಾರ್ಯಗಳನ್ನು ನಡೆಸುತ್ತ ಹಸಿದು ಬಂದಂಥವರಿಗೆ ಹೊಟ್ಟೆತುಂಬ ಅನ್ನವನ್ನಿಡುತ್ತ ಬಂದು, ಮತ್ತು ಈ ಗ್ರಂಥದಲ್ಲಿ ಉಪದೇಶಿಸಲ್ಪಟ್ಟ ರಹಸ್ಯಗಳೆಲ್ಲವನ್ನೂ ತಿಳಿದು ನಡೆಯುತ್ತ ಬಂದಲ್ಲಿ, ನಿಮಗೆ ಮುಂದೆ ಸಂಭವಿಸುವ ಜನ್ಮದಲ್ಲಿ ಒಳ್ಳೆಯ ಗತಿಯನ್ನು ಹೊಂದುವುದಕ್ಕೆ ಅವಕಾಶವು ದೊರೆಯುತ್ತದೆ. ಈ ಮಾತಿನಲ್ಲಿ ಎಳ್ಳಷ್ಟೂ ಅನುಮಾನವಿಲ್ಲ. ಅಂದರೆ ಧರ್ಮದಿಂದ ಸುಖವೂ ಅಧರ್ಮದಿಂದ ದುಃಖವೂ ಉಂಟಾಗುವುದು ನಿಜ. ಅದನ್ನರಿತು ಜನಗಳು ತಮ್ಮ ಕಾರ್ಯಗಳನ್ನು ಧರ್ಮದಿಂದ ನಡೆಸುತ್ತ ಬರಬೇಕು. ಈ ಮುಂದಿನ ಪ್ರಕರಣದಲ್ಲಿ 'ಶರೀರವೇ ಕಾಶೀಕ್ಷೇತ್ರವು' ಎಂಬ ವಿಷಯವನ್ನು ವಿಶದಪಡಿಸಿದೆ.



# ಕಾಶೀಕ್ಷೇತ್ರವು-ಶರೀರವು.

---

ಕಾಶೀ, ಪ್ರಯಾಗ, ಶ್ರೀಶೈಲ, ಕಂಚಿ, ಶ್ರೀಕಾಳಹಸ್ತಿ ಈ ಯಾತ್ರಾ ಸ್ಥಳಗಳೆಲ್ಲವೂ ನಮ್ಮ ಈ ಶರೀರದಲ್ಲಿಯೇ ಇವೆ. ಇವುಗಳನ್ನು ಹುಡುಕಿಕೊಂಡು ಬೇರೆ ದೇಶಗಳಿಗೆ ಹೋಗಬೇಕಾದುದಿಲ್ಲ. ಇದಕ್ಕೆ ಪ್ರಮಾಣವೇನೆಂದರೆ:—

ಶ್ಲೋ ॥ “ ಶ್ರೀಶೈಲಂ ತು ಶಿರಸ್ಥಾನಂ ♦ ಮುಖಂ ಕೇದಾರನಾಮಕಂ ।
ವಾರಣಾಸೀ ತು ಭ್ರೂಮಧ್ಯಂ ♦ ಕುಚಸ್ಥಾನಂ ತು ಕಾಂಚಿಸ್ಯಾತ್ ॥
ದೇವಾನಾಂ ಪೂರಯೋಧ್ಯಾ ಚ ♦ ಅಯೋಧ್ಯಾ ಹೃದಯಂ ತಥಾ ।
ಇಡಾ ಭಾಗೀರಥೀ ಗಂಗಾ ♦ ಪಿಂಗಳಾ ಯಮುನಾ ನದೀ ॥
ತಯೋರ್ಮಧ್ಯಗತಾ ನಾಡೀ ♦ ಸುಷುಮ್ನಾಖ್ಯಾ ಸರಸ್ವತೀ ।
ಧ್ಯಾನಪ್ರದೇ ಜ್ಞಾನಜಲೇ ♦ ರಾಗದ್ವೇಷಮಲಾಪಹೇ ॥
ಯಃ ಸ್ನಾತಿ ಮಾನಸೇ ತೀರ್ಥೇ ♦ ಸ ಯಾತಿ ಪರಮಾಂ ಗತಿಂ ॥
* * * * ...............................................
* * * ತ್ರಿಜಗತಮು ♦ ವ್ಯಾಪಿನೀ ಜ್ಞಾನಗಂಗಾ ।
ಭಕ್ತಿಶ್ರದ್ಧಾ ಗಯೇಯಂ ♦ ನಿಜಗುರುಚರಣ ♦ ಧ್ಯಾನಯೋಗಃ ಪ್ರಯಾಗಃ ।
ವಿಶ್ವೇಶೋಽಯಂ ತುರೀಯಃ ♦ ಸಕಲಮಭಿಮತಂ ♦ ವ್ಯಾಪ್ಯತೇ ಚಾಂತರಾತ್ಮ ॥

ಶ್ಲೋ ॥ ಸುಷುಮ್ನಾಯಾಃ ಸ್ಥಿತಂ ಸರ್ವಂ ♦ ದರ್ಪಣೇ ವಸ್ತುಜಾಲವತ್ ।
ತತ್ರ ಸ್ಥಿತ್ವಾ ತು ಜೀವೋ ಸಾ ♦ ದೃಶ್ಯಂ ಸರ್ವಂ ಪರಿತ್ಯಜೇತ್ ॥
ಪ್ರಾಸಾದಸ್ಥೋ ಯಥಾ ಭೂಮ್ಯಾಂ ♦ ಭೂಮ್ಯಾಂ ತು ಪರಿವೇಷ್ಟಿತಂ ।
ಸರ್ವಂ ಸೂಕ್ಷ್ಮತಯಾ ಪಶ್ಯೇತ್ ♦ ತದ್ವನ್ಮಧ್ಯಗತೋ ಜನಃ ” ॥

ಶಿರಸ್ಥಾನವೇ ಶ್ರೀಶೈಲ, ಮುಖವೇ ಕೇದಾರಕ್ಷೇತ್ರ, ಕಾಶಿಯೇ ಭ್ರೂಮಧ್ಯ (ಹುಬ್ಬುಗಳ ನಡು) ಭಾಗ, ಕುಚಸ್ಥಾನವೇ ಕಂಚೀಕ್ಷೇತ್ರವು. ಹೃದಯವೇ ಅಯೋಧ್ಯೆ (ದೇವಪುರವಾದ ವೈಕುಂಠ). ಇಡಾ ಎಂಬ

ನಾಡಿಯೇ ಗಂಗಾನದಿ, ಪಿಂಗಳವೆಂಬ ನಾಡಿಯೇ ಯಮುನಾನದಿ, ಇಡಾ ಮತ್ತು ಪಿಂಗಳ ಇವುಗಳ ಮಧ್ಯದಲ್ಲಿರುವ ಸುಷುಮ್ನವೆಂಬ ನಾಡಿಯೇ ಸರಸ್ವತೀ ನದಿ. ಧ್ಯಾನವೇ ಪುಣ್ಯತೀರ್ಥಗಳು, ಜ್ಞಾನವೇ ಅವುಗಳಲ್ಲಿರುವ ಪುಣ್ಯಜಲ. ಈ ಪುಣ್ಯಜಲವೇ ರಾಗದ್ವೇಷಗಳೆಂಬ ಮಲವನ್ನು ಅಪಹರಿಸುವಂಥದು. ಇಂತಹ ಮಾನಸತೀರ್ಥದಲ್ಲಿ ಯಾರು ಸ್ನಾನಮಾಡುತ್ತಾರೆಯೋ ಅವರು ಶ್ರೇಷ್ಠವಾದ ಪದವಿಯನ್ನು ಅಂದರೆ ಮೋಕ್ಷವನ್ನು ಹೊಂದುತ್ತಾರೆ.

ಶರೀರವೇ **ಕಾಶೀಕ್ಷೇತ್ರವು.** ಇಂತಹ ಶರೀರದ ದೆಸೆಯಿಂದ ಬ್ರಹ್ಮ ಜ್ಞಾನವನ್ನು ಹೊಂದುವುದಕ್ಕೆ ಪ್ರಯತ್ನಪಡುವುದೇ **ಕಾಶೀಗಂಗೆ.** ಇವುಗಳಿಗೆ ಬೇಕಾದ ಶ್ರದ್ಧೆಯೇ ಅಂದರೆ ಆಸಕ್ತಿಯೇ **ಗಯೆ.** ಗುರುವನ್ನಾಶ್ರಯಿಸಿ ಬ್ರಹ್ಮೋಪದೇಶವನ್ನು ಪಡೆಯುವುದೇ **ಪ್ರಯಾಗ.** ಪ್ರತ್ಯಗಾತ್ಮನೇ **ವಿಶ್ವೇಶ್ವರನು.** ಇವೆಲ್ಲವೂ ನಮ್ಮ ಶರೀರದಲ್ಲಿಯೇ ಇವೆಯೆಂದು ಮೇಲಿನ ಶ್ಲೋಕಗಳು ತಿಳಿಯಹೇಳುತ್ತವೆ.

ಇದೂ ಅಲ್ಲದೆ, ನಿರ್ಮಲವಾದ ಕನ್ನಡಿಯಲ್ಲಿ ಎಲ್ಲವೂ ಶುಭ್ರವಾಗಿ ಹೇಗೆ ಕಾಣಬರುತ್ತವೆಯೋ ಹಾಗೆಯೇ, ಇಡಾಪಿಂಗಳಾ ಸುಷುಮ್ನಾನಾಡಿಗಳೊಳಗೆ ಸುಷುಮ್ನಾಯೆಂಬ ನಾಡಿಯಲ್ಲಿ ಸಮಸ್ತವನ್ನೂ ಸ್ಪಷ್ಟವಾಗಿ ಕಾಣಬಹುದು. ಜೀವನು ಈ ಸುಷುಮ್ನಾನಾಡಿಯೊಡನೆ ಬೆರತಿರುವುದರಿಂದ, ಉಪ್ಪರಿಗೆಯ ಮೇಲಿರುವವನು ಕೆಳಗಿರುವ ಪದಾರ್ಥಗಳೆಲ್ಲವನ್ನೂ ಯಾವ ರೀತಿಯಾಗಿ ಸ್ಪಷ್ಟವಾಗಿ ನೋಡಬಲ್ಲನೋ, ಹಾಗೆಯೇ ಜೀವನು ಸುಷುಮ್ನಾನಾಡಿಯ ಕೊನೆಯಲ್ಲಿ ನಿಂತು, ಕಂಡುಬರುವ ಪದಾರ್ಥಗಳೆಲ್ಲವನ್ನೂ ಅಂದರೆ ಸಕಲವಿಧ ಆಸೆಗಳಲ್ಲಿಯೂ ಬದ್ಧನಾಗಿರುವುದರಿಂದಲೇ ಜನನಮರಣಾದಿ ದುಃಖಗಳನ್ನು ತಿಳಿದು ಅವುಗಳನ್ನು ಅನುಭವಿಸಬೇಕಾಗಿ ಬರುತ್ತದೆ.

ಹೃದಯದಲ್ಲಿ ಅಧೋಮುಖವಾಗಿ, ಅಂದರೆ ತಲೆಕೆಳಗಾಗಿ ತೂಗಾಡುತ್ತಿರುವ ಕಮಲದಲ್ಲಿ ಪರಮೇಶ್ವರನು ವಾಸಿಸುತ್ತಿದ್ದಾನೆ. ಅಂತಹ ಪರ

ಮೇಶ್ವರನನ್ನು ಮೇಲೆ ಹೇಳಿದ ಜೀವನು ಎಂದು ಹೊಂದುತ್ತಾನೆಯೋ ಆಗ ಆನಂದಸ್ವರೂಪನಾಗುತ್ತಾನೆ.

ದೇಹವು ಮೊದಲಾಗಿ ಅಂಡಪಿಂಡಬ್ರಹ್ಮಾಂಡಗಳೆಲ್ಲವೂ, ಅಗ್ನಿಯಲ್ಲಿ ಹುಟ್ಟಿದ ಕಿಡಿಗಳಂತೆ, ಪರಬ್ರಹ್ಮನಿಂದಲೇ ಹುಟ್ಟಿದವುಗಳೆಂದು ತಿಳಿದು ಕೊಳ್ಳದೆ ದೇಹವೇ ನಾನೆಂದು ಭ್ರಾಂತಿಗೊಂಡು ಕರ್ಮಸಾಗರದಲ್ಲಿ ಮುಳುಗಿ, ದೃಶ್ಯರೂಪವಾದ ಕಾಶೀ ಗಯಾ ಪ್ರಯಾಗಗಳಲ್ಲಿರುವ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದರೆ ಮುಕ್ತಿಹೊಂದುವರೆಂದು ಮನುಷ್ಯರು ಮನಸ್ಸಿನ ಲ್ಲೆಣಿಸುತ್ತಾರೆ. ಆದರೆ ಹೆಂಡದ ಗಡಿಗೆಯನ್ನು ಗಂಗಾನದಿಯಲ್ಲಿ ಮುಳುಗಿಸಿ ಎಷ್ಟುವೇಳೆ ಅದನ್ನು ತೊಳೆದರೂ ಆ ವಾಸನೆಯು ಹೋಗದಿರುವಂತೆ, ಶುಕ್ಲಶೋಣಿತ ಸಂಬಂಧದಿಂದ ಉಂಟಾದ ಈ ದೇಹದಲ್ಲಿರುವ ಕರ್ಮ ವಾಸನೆಗಳೆಂಬ ಕೊಳೆಯನ್ನು ತೊಳೆದು ಹೋಗಲಾಡಿಸದೆ, ಈ ಶರೀರ ಚರ್ಮವನ್ನು ಎಷ್ಟುಸಾರಿ ಮೇಲೆ ಹೇಳಿದ ಪುಣ್ಯಕ್ಷೇತ್ರಗಳ ಸಮೀಪದಲ್ಲಿ ಇರುವ ಪುಣ್ಯತೀರ್ಥಗಳಲ್ಲಿ ತೊಳೆದರೂ ಮೋಕ್ಷವನ್ನು ಹೊಂದಲಾರರು. ಆದುದರಿಂದ ಪುರುಷರು ಮನಸ್ಸಿನ ಕೊಳೆಯನ್ನು ಹೋಗಲಾಡಿಸಿ ಹಂಸ ಮಾತ್ರರಾಗಿದ್ದದ್ದೇ ಆದರೆ, ಜನನಮರಣ ಪ್ರವಾಹದಿಂದ ತಪ್ಪಿಸಿಕೊಳ್ಳ ಬಹುದು. ಕಪಿಯಂತೆ ಇಷ್ಟಬಂದ ಕಡೆ ಓಡುತ್ತಿರುವ ಮನಸ್ಸನ್ನು ಈಶ್ವರನಲ್ಲಿ ಐಕ್ಯಮಾಡಿ, ರಾತ್ರಿಯಲ್ಲಿ ನಿದ್ರಿಸುವಾಗ ಪರಮಾತ್ಮನನ್ನು ಸ್ತುತಿಸಿ ಅನಂತರ ಮಲಗಿಕೊಳ್ಳಬೇಕೆಂಬ ವಿಷಯವನ್ನು ಕುರಿತು ಈ ಮುಂದೆ ಹೇಳಲಾಗಿದೆ.



# ಪರಮಾತ್ಮನಾದ ಈಶ್ವರನಿಗೆ ಕೆಟ್ಟ ಕೋರಿಕೆಗಳೆಲ್ಲವನ್ನೂ ಸಮರ್ಪಿಸುವಿಕೆ.

---

ಶ್ಲೋ ॥ ಸದಾ ಮೋಹಾಟವ್ಯಾಂ ಚರತಿ ಯುವತೀನಾಂ ಕುಚಗಿರೌ ।
ನಟ ತ್ಯಾಶಾಶಾಖಾ ಸ್ವಟತಿ ಝುಡಿತಿ ಸ್ವೈರ ಮಭಿತಃ ॥
ಕಪಾರ್ಲಿ ! ಭಿಕ್ಷೋ ಮೇ ! ಹೃದಯಕಪಿ ಮತ್ಯಂತಚಪಲಂ ।
ದೃಢಂ ಭಕ್ತ್ಯಾ ಬಧ್ವಾ ಶಿವ ! ಭವದಧೀನಂ ಕುರು ವಿಭೋ ॥
(ಶಿವಾನಂದಲಹರೀ, ಶ್ರೀ ಶಂಕರಾಚಾರ್ಯ)

ಭಾಮಿನೀಷಟ್ಪದಿ ॥ ನಿರುತಮೋಹಾಟವಿಯೊ ಳಲೆಯುವ ।
ತರುಣಿಕುಚಗಿರಿಗಳಲಿ ಕುಣಿಯುವ ।
ಕೊರೆಯು ವಾಶಾತರುಗಳೇರುವ ತಿರುಗವಲ್ಲಲ್ಲಿ ॥
ತಿರುಕ ! ಬಹುಚಂಚಲಮನೋವಾ ।
ನರವ ದೃಢಭಕ್ತಿಯಲಿ ಬಿಗಿಗ ।
ಟ್ಟಿರದೆ ನಿನ್ನಯ ವಶಕೆ ಕೊಳ್ಳೈ ಶಿವ ! ಕಪಾಲಿ ! ವಿಭೋ ! ॥

**ಹೇಕಪಾರ್ಲಿ=**ಬ್ರಹ್ಮಕಪಾಲವನ್ನು ಕೈಯಲ್ಲಿಟ್ಟುಕೊಂಡಿರುವವನೇ! ವಿಭೋ=ಸರ್ವವ್ಯಾಪಕನಾಗಿ ಸಮಸ್ತಕ್ಕೂ ಒಡೆಯನೆನಿಸಿರುವ, ಶಿವ=ಮಂಗಳಸ್ವರೂಪನಾದ, ಭಿಕ್ಷೋ = ಬಿಕ್ಷುಕನ ವೇಷದಿಂದ ಮೆರೆಯುವ, ಓ ಪರಮೇಶ್ವರನೇ ! ಸದಾ=ಯಾವಾಗಲೂ, ಮೇ = ನನ್ನ, ಹೃದಯಕಪಿಃ=ಮನಸ್ಸೆಂಬ ಕಪಿಯು, ಮೋಹಾಟವ್ಯಾಂ=ಮೋಹವೆಂಬ ಅರಣ್ಯದೊಳಗೆ, ಚರತಿ=ಸಂಚರಿಸುತ್ತದೆ. ಯುವತೀನಾಂ=ಸ್ತ್ರೀಯರ, ಕುಚಗಿರೌ = ಸ್ತನಗಳೆಂಬ ಪರ್ವತಪ್ರದೇಶಗಳಲ್ಲಿ, ನಟತಿ = ಕುಣಿಯುತ್ತದೆ ಅಂದರೆ ಆಟಗಳಾಡುತ್ತದೆ. ಆಶಾಶಾಖಾಸು=ದಾರಾಪುತ್ರಾದಿಗಳಲ್ಲಿರುವ ಪ್ರೇಮವೆಂಬ ಗಿಡದ ರೆಂಬೆಗಳಲ್ಲಿ ಅಟತಿ=ಅಲೆದಾಡುತ್ತದೆ. ಝುಡಿತಿ=ಶೀಘ್ರವಾಗಿ, ಅಭಿತಃ = ಸುತ್ತಮುತ್ತಲೂ, ಅಟತಿ = ಓಡಾಡುತ್ತದೆ.

ಅತ್ಯಂತಚಪಲಂ=ಮಹಾ ಚಂಚಲವಾದ, ಮೇ=ನನ್ನ, ಹೃದಯಕಪಿಂ=ಮನಸ್ಸೆಂಬ ಕೋತಿಯನ್ನು ದೃಢಂ=ಬಿಗಿಯಾಗಿ, ಭಕ್ತ್ಯಾ=ಭಕ್ತಿಯೆಂಬ ಹಗ್ಗದಿಂದ ಬಧ್ವಾ=ಕಟ್ಟಿ ಭವದಧೀನಂ ಕುರು=ನಿನ್ನ ವಶಪಡಿಸಿಕೋ.

ಬ್ರಹ್ಮಕಪಾಲವನ್ನು ಕೈಲಿ ಹಿಡಿದಿರುವವನೂ, ಸರ್ವವ್ಯಾಪಕ ಮತ್ತು ಸರ್ವಶಕ್ತನು ಆಗಿದ್ದರೂ, ಲೋಕಕ್ಕೆ ಬಿಕ್ಷುಕನಂತೆ ವೇಷವನ್ನು ತೋರಿಸುತ್ತಿರುವ ಓ ಪರಮಾತ್ಮನೇ! ನನ್ನ ಮನಸ್ಸು ಎಂಬ ಕಪಿಯು ಅತ್ಯಂತ ಚಂಚಲವಾದದ್ದು; ಯಾವಾಗಲೂ ಮೋಹವೆಂಬ ಅಡವಿಯಲ್ಲಿ ಸಂಚರಿಸುತ್ತಲೂ ಸ್ತ್ರೀಯರ ಸ್ತನಪ್ರದೇಶದಲ್ಲಿ (ಮೋಹದಿಂದ) ಕುಣಿದಾಡುತ್ತಲೂ ಆಸೆಯೆಂಬ ಗಿಡದ ರೆಂಬೆಗಳಲ್ಲಿ ಹಾರಾಡುತ್ತಲೂ, ಸುತ್ತಲೂ ಅತ್ತಿತ್ತ ಓಡಾಡುತ್ತಲೂ ಇರುವಂಥದಾಗಿದೆ. ಆದುದರಿಂದ ನಿನ್ನಲ್ಲಿನ ದೃಢವಾದ ಭಕ್ತಿಯೆಂಬ ಹಗ್ಗದಿಂದ ನನ್ನ ಈ ಮನಸ್ಸೆಂಬ ಕಪಿಯನ್ನು ಬಿಗಿಸಿ ನಿನ್ನ ವಶಪಡಿಸಿಕೋ. ಅಂದರೆ ನನ್ನ ಮನಸ್ಸು ಕಪಿಯಂತೆ ಅತಿ ಚಂಚಲವಾದದ್ದು ಆದುದರಿಂದ ನಿನ್ನಲ್ಲಿ ಭಕ್ತಿಯುಂಟಾಗುವಂತೆ ಮಾಡಿ ಅದನ್ನು ಸ್ಥಿರವಾಗಿ ನಿನ್ನಲ್ಲಿ ನೆಲೆಸುವಂತೆ ಮಾಡು. ನಿನ್ನಲ್ಲಿ ನನಗೆ ನಿಶ್ಚಲವಾದ ಭಕ್ತಿಯಿರುವಂತೆ ಮಾಡು ಎಂಬುದೇ ಮೇಲಿನ ಶ್ಲೋಕದ ಭಾವಾರ್ಥ.

---

# ರಾತ್ರಿಯಲ್ಲಿ ಈಶ್ವರಧ್ಯಾನಮಾಡಿ ಮಲಗಬೇಕು.

ಓ ಸಹೋದರ ಸಹೋದರಿಯರೇ! ಪ್ರಪಂಚದಲ್ಲಿರುವ ಮಾನವರೆಲ್ಲರೂ ಪ್ರಾತಃಕಾಲ ನಿದ್ರೆಬಿಟ್ಟೆದ್ದುದು ಮೊದಲು ಪುನಃ ರಾತ್ರಿ ಮಲಗುವ ವರಿವಿಗೂ ಅವರವರಿಗೆ ತಕ್ಕ ವ್ಯಾಪಾರವೋ, ವ್ಯವಸಾಯವೋ ಅಥವ ಇತರ ಉದ್ಯೋಗವೋ ನಡೆಸಿ, ರಾತ್ರಿಯಲ್ಲಿ ಭೋಜನವನ್ನು ಮಾಡಿ ಕೆಲಸಕ್ಕೆ ಬಾರದ ಪೊಳ್ಳು ಹರಟೆಗಳಲ್ಲಿ ಕಾಲಕಳೆದು ಭಗವಂತನ ಧ್ಯಾನ

ಅಥವಾ ಆರಾಧನೆಯನ್ನು ಮಾಡದೆಯೇ ಹಾಸಿಗೆಯಮೇಲೆ ಮಲಗಿ ನಿದ್ರಿಸುವರು. ಹಾಗೆ ನಿದ್ರಿಸಿದಮೇಲೆ ಅವರ ಮನಸ್ಸು ಮಟ್ಟಿಗೆ ವಿಶ್ರಾಂತಿಯನ್ನು ಹೊಂದದೆ ಕುಟುಂಬ ವಿಷಯಗಳಲ್ಲಿಯೋ, ದಾರಾಪುತ್ರಪುತ್ರಿಕೆಯರ ವಿಷಯಗಳಲ್ಲಿಯೋ ಅಂದರೆ ತನ್ನ ಹೆಂಡತಿಯು ತನ್ನ ಮಾತನ್ನು ಕೇಳದೆ ಸ್ವೇಚ್ಛೆಯಿಂದ ನಡೆಯುತ್ತಿದ್ದಾಳೆ ಎಂಬ ವಿಷಯದಲ್ಲಿಯೋ ಇಲ್ಲವೇ, ತನಗೆ ಪುತ್ರರು ಹುಟ್ಟಲಿಲ್ಲವೇ ಅಥವ ಹುಟ್ಟಿಯೂ ಸನ್ಮಾರ್ಗಿಗಳಾಗಲಿಲ್ಲವೇ ಎಂಬ ವಿಷಯದಲ್ಲಿಯೋ, ಉದ್ಯೋಗ ವ್ಯಾಪಾರ ವ್ಯವಹಾರಾದಿ ವಿಷಯಗಳಲ್ಲಿಯೋ, ಹಿಂದೆ ನಡೆದುಹೋದ ವಿಷಯಗಳಲ್ಲಿಯೋ ಅಥವಾ ಮುಂದೆ ನಡೆಯಬಹುದಾದ ವಿಷಯಗಳನ್ನು ಕುರಿತೋ, ಹೀಗೆ ಯಾವುದೋ ಒಂದರಲ್ಲಿ ಸುಮಾರು ಕಾಲು, ಅರ್ಧ, ಮುಕ್ಕಾಲು ಅಥವಾ ಒಂದುಘಂಟೆಯ ಕಾಲದವರಿವಿಗೆ ತನ್ನ ಮನಸ್ಸು ಲೀನವಾಗಿದ್ದು ಅನಂತರ ಅವರಿಗೆ ನಿದ್ರೆಹತ್ತುವುದು. ಹೀಗಿರುವಾಗ ತನ್ನ ಶರೀರವನ್ನೇ ತಾನು ಮರೆತು ತನ್ನ ಮೈಮೇಲಿದ್ದ ಬಟ್ಟೆ ಹೋಗಿರುವುದನ್ನೂ ತಿಳಿಯದೆ ಮತ್ತು ತಮ್ಮ ಸುತ್ತಮುತ್ತ ನಡೆಯುವ ವ್ಯಾಪಾರಗಳ ತಿಳಿವೇ ಇಲ್ಲದೆ ನಿದ್ರಿಸುವರು. ಆ ಸಮಯದಲ್ಲಿ ದುಃಖಗಳೂ, ಸಂತೋಷಗಳೂ, ಮನೆ, ಮಠ, ಹೆಂಡತಿಮಕ್ಕಳು, ಮೊಮ್ಮಕ್ಕಳು ಧನಧಾನ್ಯಾದಿ ವಸ್ತುವಾಹನಾದಿಗಳೂ, ಆರಾಮುಕೇದಾರಾದಿಗಳೂ, ಇವೇ ಮೊದಲಾದ ಹಗಲು ವೇಳೆ ಯೋಚಿಸುತ್ತಿದ್ದ ವಿಷಯಗಳೆಲ್ಲವೂ ರಾತ್ರಿಯಲ್ಲಿ ನಿದ್ರಿಸುತ್ತಿರುವಾಗ ಹೇಗೆ ಮಾಯವಾಗಿ ಹೋಗುತ್ತವೆ ನೋಡಿ! ನಿದ್ರೆಮಾಡುವ ಸಮಯದಲ್ಲಿ ಇವೆಲ್ಲವೂ ತನಗೆ ಗೋಚರವಾಗದಲ್ಲವೇ? ಪುನಃ ನಿದ್ರೆತಿಳಿದೆದ್ದಮೇಲೆ ಹಿಂದಿನ ಮನಸ್ಸು ಯಾವ ಯಾವ ವ್ಯಾಪಾರಗಳನ್ನು ಮಾಡುತ್ತಿತ್ತೋ ಅದೇ ರೀತಿಯಲ್ಲಿಯೇ ಮಾರನೆಯದಿನವೂ ಮನಸ್ಸು ಬೇರೆ ಬೇರೆ ಯೋಚನೆಗಳನ್ನು ಹೊಸಹೊಸದಾಗಿ ಹೊಂದುತ್ತಿರುತ್ತದೆ. ಇದೇ ರೀತಿಯಲ್ಲಿಯೇ ತನ್ನ ಮರಣಕಾಲದವರಿವಿಗೂ ನಿದ್ರೆಮಾಡುತ್ತ ಪುಣ್ಯ ಪಾಪಗಳೆಂಬ ಎರಡು ಕರ್ಮಗಳನ್ನು ಮಾಡುತ್ತ ಯಾವ ಈಶ್ವರಪೂಜೆಯೂ ಇಲ್ಲದೆ ವೃಥಾ ಕಾಲವನ್ನು ಕಳೆದು ಅನೇಕರು ಮೃತಿಯನ್ನು ಹೊಂದುತ್ತಿರುತ್ತಾರೆ. ಇಂಥವರಿಗೆ ಸದ್ಗತಿಯು ಎಂದಿಗೂ ದೊರಕಲಾರದು.

ಸ್ತ್ರೀಪುರುಷರೆಲ್ಲರು ಪ್ರತಿದಿನವೂ ಮಾಡುತ್ತಬಂದ ಪಾಪಕರ್ಮಗಳನ್ನೆಲ್ಲಾ ಆಯಾ ದಿನಗಳಲ್ಲಿಯೇ ರಾತ್ರಿಯಲ್ಲಿ ಮಲಗುವಾಗ ಈಶ್ವರನಿಗೆ ಅರ್ಪಣೆಯನ್ನು ಮಾಡಿ ಅನಂತರ ಮಲಗಬೇಕು. ಹಾಗೆ ಪ್ರತಿದಿನವೂ ಮಾಡಿದರೆ ತಮಗೆ ಯಾವ ಪಾಪಕರ್ಮಗಳೂ ಅಂಟಲಾರವು. ಆದುದರಿಂದ ಎಲ್ಲರೂ ರಾತ್ರಿಯವೇಳೆ ಮಲಗುವಾಗ ಯಾವ ರೀತಿಯಲ್ಲಿ ಪರಮಾತ್ಮನ ಧ್ಯಾನಮಾಡಬೇಕೆಂಬುದನ್ನು ಈ ಮುಂದೆ ತಿಳಿಸಿದೆ.

ಸ್ತ್ರೀಪುರುಷರೆಲ್ಲರೂ ರಾತ್ರಿಯವೇಳೆ ಭೋಜನವನ್ನು ಮಾಡಿ ಮುಗಿಸಿದಮೇಲೆ ಎಲ್ಲಾ ಕಾರ್ಯಗಳನ್ನು ಮುಗಿಸಿಕೊಂಡು, ಮಲಗುವುದಕ್ಕಾಗಿ ಹಾಸಿಗೆಯಮೇಲೆ ಕುಳಿತುಕೊಂಡು ಬೆನ್ನನ್ನು ವಕ್ರವಾಗಲ್ಲದೆ ಕಡ್ಡಿಯಂತೆ ನೆಟ್ಟಗೆ ನಿಲ್ಲಿಸಿ ಸರಿಯಾಗಿ ಕುಳಿತು, ಕಣ್ಣುಗಳನ್ನು ಮುಚ್ಚಿಕೊಂಡು, ಎರಡು ಕೈಗಳನ್ನೂ ಜೋಡಿಸಿಕೊಂಡು ಪರಮಾತ್ಮನಿಗೆ ನಮಸ್ಕರಿಸುತ್ತ ತನ್ನ ಮನಸ್ಸಿನಲ್ಲಿ ಈ ಕೆಳಗೆ ಹೇಳುವ ರೀತಿಯಲ್ಲಿ ಈಶ್ವರನನ್ನು ಧ್ಯಾನಿಸಬೇಕು.

**“ ಎಲ್ಲೆಲ್ಲಿಯೂ ಪರಿಪೂರ್ಣನಾಗಿ ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಸಾಕ್ಷಿಸ್ವರೂಪವಾಗಿ ವ್ಯಾಪಿಸಿರುವ ಓ ಪರಬ್ರಹ್ಮನೇ!** ಈ ದಿನ ಬೆಳಿಗ್ಗೆ ನಿದ್ರೆಕಳೆದು ಎದ್ದಕಾಲದಿಂದ ನಿದ್ರಿಸುವ ಸಲುವಾಗಿ ಈಗ ಹಾಸಿಗೆಯ ಮೇಲೆ ಕುಳಿತುಕೊಂಡವರಿವಿಗೂ ನಾನು ನನ್ನ ಕೈಗಳಿಂದಲೂ, ಕಾಲುಗಳಿಂದಲೂ, ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಬುದ್ಧಿಯಿಂದಲೂ, ಅಹಂಕಾರದಿಂದಲೂ, ತಿಳಿದೂ ತಿಳಿಯದೆ ಮಾಡಿದ ಪಾಪಕರ್ಮಗಳನ್ನೆಲ್ಲಾ ನಿನಗೆ ಅರ್ಪಣೆಯನ್ನು ಮಾಡಿದೆನು. ನೀನು ನನ್ನಲ್ಲಿ ಅಂತರ್ಯಾಮಿಯಾಗಿಯೂ ಸಾಕ್ಷಿಸ್ವರೂಪನಾಗಿಯೂ ಇರುವುದರಿಂದ ನಾನು ಈ ರಾತ್ರಿ ಮಲಗಿ ನಿದ್ರೆಮಾಡಿ ಎದ್ದು ಮೊದಲು ಪುನಃ ನಾಳೆಯರಾತ್ರಿ ಮಲಗುವುದಕ್ಕಾಗಿ ಹಾಸಿಗೆಯನ್ನು ಹತ್ತುವವರಿವಿಗೂ ಅಸತ್ಯವನ್ನು ನುಡಿಯಲೀಯದೆಯೂ, ಯಾವ ಪಾಪಕಾರ್ಯಗಳನ್ನು ಮಾಡಲೀಯದೆಯೂ, ಒಳ್ಳೆಯ ಕಾರ್ಯಗಳನ್ನೇ ಮಾಡುವಂತೆಯೂ ನಿನ್ನ ಕೃಪೆಯೆಂಬ ಬೀಗವನ್ನು ನನ್ನ ಮನಸ್ಸಿಗೆ ಹಾಕಿ ಮಾಯೆಯಿಂದ ಕೂಡಿ

ಜೀವಾತ್ಮಸ್ವರೂಪನಾಗಿರುವ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ಸಮಸ್ತ ಲೋಕಗಳಲ್ಲಿಯೂ ತುಂಬಿ ತುಳುಕಾಡುವವನೇ! ಅನಾಥರಕ್ಷಕನೇ! ಆಪದ್ಬಾಂಧವನೇ! ನನ್ನನ್ನು ರಕ್ಷಿಸು, ನನ್ನನ್ನು ರಕ್ಷಿಸು, ಓ ಭಗವಂತಾ!" ಎಂಬ ಈರೀತಿಯಾದ ಸ್ತೋತ್ರವನ್ನು ಮಾಡಿ ಮುಗಿಸಿದ ಮೇಲೆ, ಮೊದಲು ಮುಚ್ಚಿದ ಕಣ್ಣನ್ನು ತೆರೆಯದೆ ಎಡದ ಮಗ್ಗುಲಾಗಿಯೇ ಮಲಗಿಕೊಂಡು ಶ್ವಾಸವು ಮೂಗಿನ ಹೊಳ್ಳೆಯಲ್ಲಿ ಪ್ರವೇಶಿಸುವಾಗ ಅದನ್ನು 'ಸೋ' ಎಂಬ ಮಂತ್ರದೊಡಗೂಡಿ ಒಳಕ್ಕೆ ಎಳೆದು, ಸ್ವಲ್ಪ ಹೊತ್ತು ಒಳಗೇ ನಿಲ್ಲಿಸಿ ಪುನಃ ಆ ಶ್ವಾಸವನ್ನು ಹೊರಕ್ಕೆ ಬಿಡುವಾಗ ಆ ಶ್ವಾಸದೊಡನೆ 'ऽಹಂ' ಮಂತ್ರವನ್ನು ಸೇರಿಸಿ ಬಿಡಬೇಕು. ಹೀಗೆ ಉಚ್ಛ್ವಾಸ ನಿಶ್ವಾಸವೆಂಬ ಈ ಎರಡು ಶ್ವಾಸಗಳಲ್ಲಿಯೂ ಮೇಲೆ ಹೇಳಿದ ಎರಡು ಮಂತ್ರಗಳನ್ನು ಸೇರಿಸಿ ಶ್ವಾಸವನ್ನು ಒಳಕ್ಕೆ ಎಳೆಯುತ್ತಾ ಮತ್ತು ಹೊರಕ್ಕೆ ಬಿಡುತ್ತಾ ಇದ್ದರೆ ಹತ್ತು ನಿಮಿಷಗಳೊಳಗಾಗಿ ಒಳ್ಳೆಯ ಸುಖನಿದ್ರೆಯು ಬರುತ್ತದೆ. ರಾತ್ರಿಯಲ್ಲಿ ಮಲಗುವಾಗ ಈಶ್ವರನ ಸ್ತೋತ್ರ ಮಾಡಿ, 'ಸೋऽಹಂ' ಮಂತ್ರವನ್ನು ಶ್ವಾಸದೊಳಗೆ ಸೇರಿಸಿ ಜಪವನ್ನು ಮಾಡುತ್ತ ನಿದ್ರೆಹೋಗುವವರಿಗೆ ಒಂದು ಕನಸ್ಸೂ ಬರದೆ ಸುಖವಾಗಿ ನಿದ್ರೆ ಹತ್ತುತ್ತದೆ. ಹೀಗೆ ಮಾಡದೆ ಇರುವವರಿಗೆ ಕೆಲಸಕ್ಕೆ ಬಾರದ ಏನೇನೋ ವಿಷಯಗಳಲ್ಲಿ ಮನಸ್ಸು ಪ್ರವೇಶಿಸಿ ಅನಂತರ ಕಾಲು ಅಥವಾ ಅರ್ಧಘಂಟೆಯೊಳಗಾಗಿ ನಿದ್ರೆ ಹತ್ತುತ್ತದೆ. ಪ್ರತಿನಿತ್ಯವೂ ರಾತ್ರಿಯಲ್ಲಿ ಮಲಗುವಾಗ ಎಲ್ಲರೂ ಮೇಲೆಹೇಳಿದ ರೀತಿಯಲ್ಲಿ ಈಶ್ವರನನ್ನು ಸ್ತುತಿಸಿ 'ಸೋऽಹಂ' ಮಂತ್ರವನ್ನು ಜಪಮಾಡುತ್ತಲೇ ನಿದ್ರೆಮಾಡಬೇಕು. ಒಂದು, ಎರಡು, ಮೂರು ದಿನಗಳವರಿವಿಗೂ ಹೀಗೆ ಮಾಡಿ ನಿದ್ರೆಮಾಡಿ ನೋಡಿದರೆ ಇದರ ಅನುಭವವು ಆಗಲೇ ನಿಮಗೆ ಪ್ರತ್ಯಕ್ಷದೃಷ್ಟಾಂತವಾಗಿ ಕರತಲಾಮಲಕದಂತೆ ತಿಳಿಯುಬರುವುದು.



# ಲಕ್ಷಾಧಿಪತಿಯು ಅಶ್ವಜನ್ಮವನ್ನು ಹೊಂದುವಿಕೆ.

ಮೋಕ್ಷಭವನವನ್ನೇರುವವರು ಎರಡು ಮೆಟ್ಟಲುಗಳನ್ನು ಹತ್ತಬೇಕು. ಮೊದಲನೆಯದು ಕರ್ಮಕಾಂಡ, ಎರಡನೆಯದು ಜ್ಞಾನಕಾಂಡ. ಕರ್ಮಕಾಂಡದ ಸಹಾಯದಿಂದ ಅಂದರೆ ಉತ್ತಮ ಕರ್ಮಗಳನ್ನು ಮಾಡುತ್ತ ಬಂದರೆ ಒಳ್ಳೆಯ ಜನ್ಮವನ್ನು ಹೊಂದುವುದಕ್ಕೆ ಅನುಕೂಲವಾಗುತ್ತದೆ. ಹೀಗೆ ಬೇರೆಬೇರೆ ಉತ್ತಮಜನ್ಮಗಳನ್ನು ಈ ಕರ್ಮಗಳ ಸಹಾಯದಿಂದ ಪಡೆಯಬಹುದೇ ಹೊರತು ಇವುಗಳಿಂದ ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲ. ಕರ್ಮಕಾಂಡದಲ್ಲಿ ಉತ್ತೀರ್ಣನಾದರೆ ಅಂದರೆ ಶ್ರೇಷ್ಠವಾದ ಕರ್ಮಗಳನ್ನೇ ಮಾಡುತ್ತ ಬಂದರೆ ಮುಂದಿನ ಮೆಟ್ಟಲಾದ ಜ್ಞಾನಕಾಂಡವನ್ನು ಹತ್ತಬಹುದು ಅಂದರೆ ಜ್ಞಾನೋದಯವಾಗುವುದು. ಈ ಜ್ಞಾನದ ಸಹಾಯದಿಂದ ಮೋಕ್ಷವನ್ನು ಪಡೆಯಬಹುದೇ ಹೊರತು ಎಷ್ಟು ಕರ್ಮಗಳನ್ನು ಮಾಡಿದರೂ, ಜ್ಞಾನೋದಯವಾಗದಿದ್ದಲ್ಲಿ, ಮೋಕ್ಷವು ಎಂದಿಗೂ ಲಭಿಸದು. ಎರಡನೆಯ ಮೆಟ್ಟಲಾದ ಜ್ಞಾನಕ್ಕೆ ಕರ್ಮವು ಒಂದು ಸಹಕಾರಿಯೇ ಹೊರತು ಜ್ಞಾನವೇ ಸಮಸ್ತಕ್ಕೂ ದೊಡ್ಡದು. ಅದೇ ಮುಖ್ಯವಾದದ್ದು. ಈ ಜ್ಞಾನದ ಉತ್ಪತ್ತಿಸ್ಥಾನವು ಮನಸ್ಸು ಆದುದರಿಂದ ಆ ಮನಸ್ಸಿನ ಸ್ವಭಾವವನ್ನು ಕುರಿತು ಇನ್ನು ಈ ಮುಂದೆ ಹೇಳಲಾಗಿದೆ. ಪೈಂಗಳೋಪನಿಷತ್ತು ಇದಕ್ಕೆ ಪ್ರಮಾಣವು.

ಶ್ರುತಿ ॥ "ಮನಸೋ ಹ್ಯುನ್ಮನೀಭಾವೇ ♦ ದ್ವೈತಂ ನೈವೋಪಲಭ್ಯತೇ ।
ಯದಾ ಯಾ ತ್ಯುನ್ಮನೀಭಾವ ♦ ಸ್ತದಾ ತತ್ಪರಮಂ ಪದಂ" ॥

ಮನಸ್ಸು ಮಾಯೆಯೆಂಬುವ ಕತ್ತಲಿನಲ್ಲಿ ಮುಳುಗಿರುವುದರಿಂದ, ಜೀವಾತ್ಮನು ಪರಮಾತ್ಮನ ಅಂಶವೆಂದು ತಿಳಿದುಕೊಳ್ಳದೆ, ತನಗಿಂತಲೂ ಬೇರೆಯಾಗಿರುವ ಭಾರ್ಯಾಪುತ್ರಾದಿಗಳನ್ನು ಧನಧಾನ್ಯವಸ್ತುವಾಹನ

ಪಶುಗೃಹಾರಾಮಾದಿಗಳೆಲ್ಲವನ್ನು ತನ್ನವೆಂದೂ, ಶರೀರವೇ ತಾನೆಂದೂ ಭ್ರಮೆಪಡುವಂತೆ ಈ ಮಾಯೆಯೆಂಬ ಮನಸ್ಸು ಮಾಡುತ್ತದೆ. ಆದುದರಿಂದ ಇಂತಹ ಮಾಯಾ ಮನಸ್ಸನ್ನು ಬಂಧಿಸಿ ಪರಮಾತ್ಮಧ್ಯಾನ ನಿಷ್ಠೆಯಲ್ಲಿ ನಿಲ್ಲುವಂತೆ ಮಾಡಿದ್ದೇ ಆದರೆ ಮೇಲೆ ಹೇಳಿದುವೆಲ್ಲವೂ ನಾಶಹೊಂದಿ ಬ್ರಹ್ಮಸಾಕ್ಷಾತ್ಕಾರವು ಸಿದ್ಧಿಸುತ್ತದೆ. ಮತ್ತು,

ಶ್ರುತಿ ॥ ಸುಷುಪ್ತೌ ಸುಖಮಾತ್ರಾಯಾಂ ♦ ಭೇದಃ ಕೇನಾವಲೋಕಿತಃ ।
ಚಿತ್ತಮೂಲೋ ವಿಕಲ್ಪೋಽಯಂ ♦ ಚಿತ್ತಾಭಾವೇ ನ ಕಶ್ಚನ ॥

(ಅಧ್ಯಾತ್ಮಿಕೋಪನಿಷತ್ತು)

ಸುಷುಪ್ತಿಯಲ್ಲಿ ಮನಸ್ಸು ಲಯಹೊಂದಿದಾಗ ಜಗತ್ತಿನ ವಿಷಯವೇನೊಂದೂ ತೋಚದೆ ಇರುತ್ತದೆ. ಹೀಗೆ ಸುಷುಪ್ತಿಯಲ್ಲಿದ್ದು ಎಚ್ಚತ್ತ ಮೇಲೆ, ಪುನಃ ಆಯಾಯಾ ಸ್ವಭಾವ ವೃತ್ತಿಗಳು ಬರುತ್ತಲೇ ಇರುತ್ತವೆ. ಹೀಗಿಲ್ಲದೆ ಈ ಮನಸ್ಸನ್ನು ಯಾವಾಗಲೂ ಬ್ರಹ್ಮನಿಷ್ಠೆಯಲ್ಲಿ ಲಯ ಮಾಡಿದ್ದೇ ಆದರೆ ಪುನಃ ಪ್ರಪಂಚದಲ್ಲಿ ಭ್ರಾಂತಿಯುಂಟಾಗದೆ ಬ್ರಹ್ಮಸಾಕ್ಷಾತ್ಕಾರವನ್ನು, ಮೇಲೆ ಹೇಳಿದಂತೆ ಮಾಡಿದ ಮನುಷ್ಯನು ಪಡೆಯುತ್ತಾನೆ. ಆದರೆ, 'ಮನಸ್ಸು ಸುಷುಪ್ತಿಯಲ್ಲಿ ಲಯಮಾಡಿರುವಾಗ ಜಗತ್ತು ತೋರದೆಯೇ ಇದ್ದಲ್ಲಿ ಪುನಃ ಏತಕ್ಕಾಗಿ ಬ್ರಹ್ಮನಿಷ್ಠೆಯನ್ನು ಸಾಧನ ಮಾಡಬೇಕು'? ಎಂಬ ಒಂದು ಸಂಶಯವು ನಿಮಗೆ ಉಂಟಾಗಬಹುದು. ಅದಕ್ಕೆ ಸಮಾಧಾನವಾಗಿ ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿರುವ ಪ್ರಮಾಣವನ್ನು ಈ ಕೆಳಗೆ ಉದಹರಿಸಿದೆ.

ಶ್ರುತಿ ॥ ಸುಷುಪ್ತಿಸಮಾಧ್ಯೋರ್ಮನೋಲಯವಿಶೇಷೇಽಪಿ ಮಹದಸ್ತ್ಯುಭಯೋರ್ಭೇದಃ ♦ ತಮಸಿ ಲೀನತ್ವಾತ್ ಮುಕ್ತಿಹೇತುತ್ವಾಭಾವಾಚ್ಚ ಸಮಾಧೌ ಮೃತಿಃ ♦ ತಮೋವಿಕಾರಸ್ತದಾಕಾರಾಕಾರಿತ ಅಖಂಡಾಕಾರ ವೃತ್ತ್ಯಾತ್ಮಿಕ ಸಾಕ್ಷಿಚೈತನ್ಯೇ ಪ್ರಪಂಚಲಯಸ್ಸಂಪದ್ಯತೇ ♦ ॥

ಅಂದರೆ ಮನಸ್ಸು ಸುಷುಪ್ತಿಯಲ್ಲಿಯೂ ಸಮಾಧಿನಿಷ್ಠೆಯಲ್ಲಿಯೂ ಲಯಮಾಡುವುದರಲ್ಲಿ ವಿಶೇಷ ಭೇದಗಳಿವೆ. ಅದು ಹೇಗೆಂದರೆ ಸುಷುಪ್ತಿಯಲ್ಲಿ ಮನಸ್ಸು ಲಯವಾದಾಗ, ಅದು ಅಂಧಕಾರದಲ್ಲಿ ಬಿದ್ದು ಹೋಗು

ತ್ತದೆ. ಆದರೆ ಸಮಾಧಿನಿಷ್ಠೆಯಲ್ಲಿ ಮನಸ್ಸು ಲೀನವಾದಾಗ ಅದು ಅಂಧಕಾರದಲ್ಲಿ ಬೀಳದೆ ಅಖಂಡಾಕಾರವಾಗಿ ಸಾಕ್ಷಿಚೈತನ್ಯವಾಗಿ ಮಹಾ ತೇಜೋಮಯವಾಗಿ ಇರುವ ಪರಬ್ರಹ್ಮನಲ್ಲಿ ಲಯವನ್ನು ಹೊಂದುತ್ತದೆ. ಮತ್ತು ಇನ್ನೊಂದು ಭೇದವೂ ಉಂಟು. ಅದೇನೆಂದರೆ, ನಿದ್ರೆಯಿಂದೆಚ್ಚೆತ್ತ ಮೇಲೆ ಜಗತ್ತು ಪುನಃ ಕಾಣಿಸುತ್ತಿರುತ್ತದೆ. ಆದರೆ ಬ್ರಹ್ಮನಿಷ್ಠೆ ಅಂದರೆ ಸಮಾಧಿಯಿಂದ ಎದ್ದಾಗ ಮಾಯೆಯಿಂದ ಕೂಡಿದ ಈ ಜಗತ್ತು ಜ್ಞಾನಿಗಳಿಗೆ ತೋರಲಾರದು. ಆದುದರಿಂದ ಸುಷುಪ್ತಿಗಿಂತಲೂ ಸಮಾಧಿನಿಷ್ಠೆಯೇ ಶ್ರೇಷ್ಠವಾದುದೆಂದು ತಿಳಿಯಬೇಕು.

ಪ್ರತಿ ಮನುಷ್ಯನೂ ಮರಣಸಮಯದಲ್ಲಿ ಯಾವ ವಿಷಯದಲ್ಲಿ ಮನಸ್ಸನ್ನು ಲಯಮಾಡುತ್ತಾನೆಯೋ ಅಂತಹ ರೂಪವನ್ನೇ ಅವನು ಮುಂದೆ ತನಗೆ ಬರುವ ಜನ್ಮದಲ್ಲಿ ಹೊಂದುವವನಾಗುತ್ತಾನೆ. ಇದಕ್ಕೆ ಒಂದು ದೃಷ್ಟಾಂತವಿದೆ. ಅದೇನೆಂದರೆ, ಲಕ್ಷಾಧಿಪತಿಯಾಗಿದ್ದ ಒಬ್ಬ ಧನಿಕನಿದ್ದನು. ಅವನು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಆಸ್ಟ್ರೇಲಿಯಾದೇಶದ ಕುದುರೆಯೊಂದನ್ನು ಕೊಂಡುಕೊಂಡನು. ಅವನು ಅದನ್ನು ಬಹಳ ಪ್ರೇಮದಿಂದ ಸಾಕಿ ಬೆಳೆಸುತ್ತಿದ್ದನು. ಹೀಗಿರಲು ಕೆಲವು ದಿನಗಳಲ್ಲಿ ಆತನಿಗೆ ರೋಗವು ಸಂಭವಿಸಿ ಸಾಯುವ ಸ್ಥಿತಿಗೆ ಬಂದನು. ಆಗ ಅವನ ಪ್ರಾಣವು ಹೋಗುವ ಸಮಯದಲ್ಲಿ ಚಿತ್ರಗುಪ್ತವೆಂಬ ಒಂದು ಚಿತ್ರಪಠವನ್ನು ಅವನಲ್ಲಿರುವ ಜೀವನು ತನ್ನ ಕಣ್ಣೆದುರಿಗೆ ನೋಡುತ್ತಿದ್ದನು. ಚಿತ್ರ ಎಂದರೆ ಚಿತ್ರಪಠವು, ಎಂದೂ ಗುಪ್ತ ಅಂದರೆ ರಹಸ್ಯವು ಎಂದೂ ಅರ್ಥವು. ಅಂದರೆ ರಹಸ್ಯವಾದ ಚಿತ್ರಪಠವೆಂದರ್ಥ. ಸಾಧಾರಣವಾಗಿ ಈ ಚಿತ್ರಗುಪ್ತ ಪದದ ಅರ್ಥವನ್ನು ತಿಳಿದುಕೊಳ್ಳದೆ ಚಿತ್ರಾಪುತ್ರನೊಬ್ಬನಿದ್ದಾನೆಂದೂ, ಆತನು ಪ್ರತಿ ಜೀವಿಯೂ ಮಾಡುತ್ತ ಬರುವ ಪುಣ್ಯಪಾಪಕರ್ಮಗಳನ್ನು ಬರೆದಿಡುತ್ತ ಯಮಧರ್ಮರಾಜನ ಸಮ್ಮುಖದಲ್ಲಿ ಜೀವಿಯು ನಿಂತಿರುವಾಗ ಆ ಜೀವಿಯ ಚರಿತ್ರೆಯನ್ನು ಆ ಚಿತ್ರಾಪುತ್ರನು ಅಂದರೆ ಚಿತ್ರಗುಪ್ತನು ವಿವರಿಸಿ ಹೇಳುವನೆಂದೂ, ಜನರು ಆಡಿಕೊಳ್ಳುತ್ತಾರೆ. ಆದರೆ ಅವರ ಅಭಿಪ್ರಾಯವು ಸರಿಯಲ್ಲ.

ಪ್ರತಿಜೀವಿಯ ಅಂತಃಕರಣಕ್ಕೆ ಸಾಕ್ಷಿಯಾಗಿದ್ದ ಅಂತರಾತ್ಮನೇ ಆ ಜೀವಿಯು ಮಾಡುತ್ತ ಬರುತ್ತಿರುವ ಪುಣ್ಯಪಾಪಕರ್ಮಗಳನ್ನು ಗಮನಿಸುತ್ತ ಬಂದು, ಕಡೆಯಲ್ಲಿ ಸತ್ತಮೇಲೆ ಇನ್ನು ಮುಂದೆ ಅವನು ಎತ್ತುವ ಜನ್ಮವನ್ನು ಚಿತ್ರಪಠದಲ್ಲಿ ಕಾಣುವಂತೆ ಮಾಡುತ್ತಾನೆ. ಅದು ಹೇಗೆಂದರೆ, ಮರಣಸಮಯದಲ್ಲಿ ಜೀವಿಯು ಮನಸ್ಸಿನಲ್ಲೆಣಿಸಿದ ಅನೇಕ ವಿಷಯಗಳನ್ನು ಆ ಪಠದಲ್ಲಿ ಆತ್ಮನು ತೋರಿಸುತ್ತಾನೆ ಅದೇ ವಿಧವಾಗಿಯೇ ಮೇಲೆ ಹೇಳಿದ ಲಕ್ಷಾಧಿಪತಿಗೂ ಸಾಕ್ಷಿಭೂತನಾಗಿದ್ದ ಅವನ ಅಂತರಾತ್ಮನು ಅವನು ಕೋರಿದ ವಸ್ತುಗಳನ್ನು ಆ ಪಠದಲ್ಲಿ ತೋರಿಸುತ್ತ ಬಂದು ಕಡೆಯಲ್ಲಿ ಅವನ ಅಧಿಕ ಪ್ರೀತಿಗೆ ಪಾತ್ರವಾದ ಆ ಆಸ್ಟ್ರೇಲಿಯಾ ದೇಶದ ಕುದುರೆಯ ಆಕಾರವನ್ನು ಅವನ ಎದುರುಭಾಗದಲ್ಲಿ ಚಿತ್ರಪಠದಲ್ಲಿ ತಂದು ನಿಲ್ಲಿಸಿದನು. ಇದನ್ನು ☞ ಈ ಎದುರುಭಾಗದಲ್ಲಿರುವ ಪಠದಲ್ಲಿ ಕಾಣಿಸಿದೆಯಾಗಿ ಗಮನವಿಟ್ಟು ನೋಡಬೇಕು. ಆಗ ಆ ಧನಿಕನು ಆ ಕುದುರೆಯ ಆಕಾರದಲ್ಲಿಯೇ ಮನಸ್ಸನ್ನು ಲೀನಮಾಡಿ ಪ್ರಾಣವನ್ನು ಬಿಟ್ಟನು. ಹೀಗೆಯೇ ಪ್ರತಿಯೊಂದು ಜೀವಿಗೂ ಯಾವುದರಲ್ಲಿ ಹೆಚ್ಚು ಪ್ರೇಮವೋ ಮತ್ತು ಹೆಚ್ಚು ಆಸಕ್ತಿಯೋ, ಅವಸಾನಕಾಲದಲ್ಲಿ ಅಂತರಾತ್ಮನು ಅದೇ ವಸ್ತುವನ್ನು ಆ ಜೀವಿಯ ಎದುರಿನಲ್ಲಿರುವ ಚಿತ್ರಪಠದಲ್ಲಿ ಕಾಣುವಂತೆ ಮಾಡುವುದರಿಂದ ಜೀವಿಯು ಅದನ್ನೇ ಅತ್ಯಾಸಕ್ತಿಯಿಂದ ನೋಡುತ್ತಾನೆ. ಆ ಸಮಯದಲ್ಲಿ ಸಾಯುವುದರಲ್ಲಿರುವ ಜೀವನು, ಬಾಲ್ಯದೆಸೆಯಿಂದ ಮೊದಲು ಮರಣವಾಗುವವರಿವಿಗೂ ತಾನು ಯಾವ ಯಾವ ವಸ್ತುಗಳಲ್ಲಿ ವಿಶೇಷ ಪ್ರೀತಿಯನ್ನಿಟ್ಟಿದ್ದನೋ ಅವೆಲ್ಲವನ್ನೂ ಮೇಲೆ ಹೇಳಿದ ಚಿತ್ರಪಠದಲ್ಲಿ ಚಲನಾಚಿತ್ರ ಅಂದರೆ 'ಬಯಾಸ್ಕೋಪ್' (Bioscope) ನಲ್ಲಿ ಚಿತ್ರಗಳು ಒಂದಾದ ಮೇಲೊಂದು ಅತಿತ್ವರಿತವಾಗಿ ಹೇಗೆ ಕಾಣ್ಬರುತ್ತವೆಯೋ ಹಾಗೆಯೇ, ಚಿತ್ರಗುಪ್ತಪಠದಲ್ಲಿ ಅವನು ಕೋರಿದ ವಸ್ತುಗಳೆಲ್ಲವನ್ನೂ ಆತ್ಮನು ಒಂದೊಂದಾಗಿ ತಂದು ತೋರಿಸುತ್ತ ಹೊರಟು ಕಡೆಯಲ್ಲಿ ಅವನವನ ಕರ್ಮಕ್ಕೆ ತಕ್ಕಂತೆ ಯಾವ ಯಾವ ಶರೀರವನ್ನು ಎತ್ತಬೇಕಾಗಿದೆಯೋ ಆ ಶರೀರದಮೇಲೆ ಅವನಿಗೆ ಅಧಿಕವಾದ ಪ್ರೀತಿಯನ್ನು ಹುಟ್ಟಿಸಿ, ಅದನ್ನು ಮನಸ್ಸಿನಲ್ಲಿ ನೆನೆಸುವಂತೆ ಮಾಡಿ, ಆ ರೂಪ



ಲಕ್ಷಾಧಿಪತಿಗೆ ಅಶ್ವಜನ್ಮವು ಬರಬೇಕಾಗಿರುವುದರಿಂದ ಆತನ ಕುದುರೆಯ ರೂಪವು
ತನ್ನೆದುರುಭಾಗದ ಚಿತ್ರಗುಪ್ತಪಟದಲ್ಲಿ ಕಾಣುವುದು.
ಪತಿಯ ಅವಸ್ಥೆಯನ್ನು ನೋಡಿ ಆತನ ಹೆಂಡತಿಯು ದುಃಖಿಸುತ್ತಿರುವುದು.

ವನ್ನು ಚಿತ್ರಗುಪ್ತ ಪಠದಲ್ಲಿ ಆತ್ಮನು ತಂದು ನಿಲ್ಲಿಸಿ, ಅದನ್ನೇ ನೋಡು ವಂತೆ ಮಾಡಿ, ಅವನ ಪ್ರಾಣವನ್ನು ಕೊಂಡುಹೋಗಿ, ಅವನು ಇಚ್ಛೆ ಪಟ್ಟಂಥ ಪ್ರಾಣಿಯ ಗರ್ಭದಲ್ಲಿ ಸೇರಿಸಿ, ಪುನಃ ಆ ಆತ್ಮನು ಅವನೊಡ ಗೂಡಿ ಸಾಕ್ಷಿಮಾತ್ರನಾಗಿಯೇ ಇರುವನು. ಜೀವಿಗಳು ಮೋಕ್ಷವನ್ನು ಹೊಂದುವವರಿವಿಗೂ ಆತ್ಮನು ಜೀವನಿಗೆ ಸಾಕ್ಷಿಮಾತ್ರನಾಗಿಯೇ ಇದ್ದು, ಪ್ರತಿ ಶರೀರದಲ್ಲಿಯೂ ಆ ಜೀವಿಯೊಡಗೂಡಿ ಬರುತ್ತಲೇ ಇರುವನು. ಈ ಜೀವಿಗಳು ಇದುವರಿವಿಗೆ ಎಷ್ಟುಕೋಟಿ ಜನ್ಮಗಳನ್ನೆತ್ತಿರುವುದು, ಇನ್ನು ಮುಂದೆ ಎಷ್ಟು ಕೋಟಿ ಜನ್ಮಗಳನ್ನು ಎತ್ತಬೇಕಾಗಿರುವುದು ಮತ್ತು ಯಾವಾಗ ಮೋಕ್ಷವನ್ನು ಪಡೆಯುವುದು, ಎಂಬ ಇವೆಲ್ಲವೂ ಆತ್ಮನಿಗೆ ಸ್ಪಷ್ಟವಾಗಿ ತಿಳಿಯಬರುತ್ತದೆ. ಹಿಂದೆ ಹೇಳಿದ ಲಕ್ಷಾಧಿಪತಿಯು ತನ್ನ ಕರ್ಮಾನುಸಾರವಾಗಿ ಅಶ್ವಜನ್ಮವನ್ನು ಎತ್ತಬೇಕಾಗಿರುವುದರಿಂದ ಪ್ರಾಣ ಪ್ರಯಾಣಕಾಲದಲ್ಲಿ ಪರಮೇಶ್ವರನಾದ ಆತ್ಮನು ಅವನು ಕೊಂಡುಕೊಂಡಿದ್ದ ಆಸ್ಟ್ರೇಲಿಯಾ ದೇಶದ ಕುದುರೆಯನ್ನೇ ಸ್ಮರಿಸುವಂತೆ ಮಾಡಿ, ಅದರ ರೂಪವನ್ನು ಅವನ ಮುಂಭಾಗದಲ್ಲಿ ಚಿತ್ರಗುಪ್ತಪಠದಲ್ಲಿ ಕಾಣಿಸಿ, ಆ ಅಶ್ವವನ್ನು ನೋಡುವಂತೆ ಮಾಡಿ, ಅವನ ಜೀವವನ್ನು ತೆಗೆದುಕೊಂಡು ಹೋಗಿ, ಆ ಅಶ್ವಗರ್ಭದಲ್ಲಿ ಹಾಕುತ್ತಿದ್ದಾನೆ.

ಅಂದರೆ ಪ್ರತಿಯೊಬ್ಬರೂ ಪ್ರಾಣಬಿಡುವಾಗ ಆ ಜನ್ಮದಲ್ಲಿ ಅವರು ಕೋರಿದ ವಸ್ತುಗಳೆಲ್ಲವೂ ಅವರ ಎದುರಿನಲ್ಲಿ ಎತ್ತರವಾದ ಸ್ಥಳದಲ್ಲಿ ಅಂದರೆ ಮೇಲ್ಭಾಗದಲ್ಲಿರುವ ಚಿತ್ರಗುಪ್ತ ಪಠದಲ್ಲಿ ಬಂದು ಅವರ ದೃಷ್ಟಿಗೆ ನೇರವಾಗಿ ನಿಲ್ಲುತ್ತವೆ. ಆಗ, ಪ್ರಾಣವನ್ನು ಬಿಟ್ಟುಬಿಡುವವರು ಆ ಪಠದ ಕಡೆಗೇ ದಿಟ್ಟಿಸಿ ನೋಡುತ್ತ ಅತ್ತಿತ್ತ ದೃಷ್ಟಿಯಿಡದೆ ಅದರಲ್ಲಿರುವ ವಸ್ತುಗಳನ್ನು ಬಹು ಆಸಕ್ತಿಯಿಂದ ನೋಡುತ್ತಿರುವರು. ಆ ಸಮಯ ದಲ್ಲಿ ಸಾಯುವವನ ಬಂಧುಗಳೆಲ್ಲರೂ ಮೃತಿಹೊಂದುತ್ತಿರುವವನ ದೃಷ್ಟಿ ಸ್ವರೂಪವನ್ನು ನೋಡಿ ಏನು ಹೇಳುತ್ತಾರೆಂದರೆ, ' ಸಾಯುತ್ತಿರುವವನ ಎದುರಿನಲ್ಲಿ ಯಮನು ಬಂದು ನಿಂತಿದ್ದಾನಾದುದರಿಂದ ಚನ್ನಾಗಿ ಕಣ್ಣು ತೆಗೆದು ಬಿರುಗುಡ್ಡಿನ ದೃಷ್ಟಿಯಿಂದ ನೋಡುತ್ತಿದ್ದಾನೆ' ಎಂದೂ 'ಆದುದ ರಿಂದಲೇ ನಮ್ಮ ಕಡೆಗೆ ಪ್ರಜ್ಞೆಯಿಲ್ಲ' ವೆಂದೂ ಹೇಳುವರು. ಹೀಗೆ

ಜನಗಳು ಹೇಳುವರೇ ಹೊರತು ಆ ಸಾಯುವವನ ಮುಂಭಾಗದಲ್ಲಿ ಯಮನೂ ಇಲ್ಲ, ಯಮನ ದೂತರೂ ಇಲ್ಲ. ಇದುವರಿವಿಗೂ ಅವನು ಕೋರಿದ ವಸ್ತುಗಳೆಲ್ಲವೂ ಅವನ ಎದುರುಭಾಗದಲ್ಲಿ ಕಾಣ್ಬರುವ ಚಿತ್ರಗುಪ್ತ ಪಠದಲ್ಲಿ ಬಂದು ನಿಂತಿರುವುದನ್ನು ನೋಡುತ್ತಿರುವನೇ ಹೊರತು ಬೇರೆ ಯಾವುದೂ ಅಲ್ಲವು. ಇಂತಹ ರಹಸ್ಯಾರ್ಥಗಳನ್ನು ಜನಗಳು ತಿಳಿದುಕೊಳ್ಳದೆ ' ಯಮನು ಬಂದು ನಿಂತಿದ್ದಾನೆ, ಆತನನ್ನೇ ಈ ಆಸನ್ನ ಮರಣಜೀವಿಯು ನೋಡುತ್ತಿರುವನು ' ಎನ್ನುವರು. ಇದಕ್ಕೆ ದೃಷ್ಟಾಂತವಾಗಿ ದ್ರವಿಡ (ಅರವ) ಭಾಷೆ ಇಪ್ಪತ್ತೇಳನೆಯ ಶಿವಾಗಮದಲ್ಲಿ ಪರಮಶಿವನು ಶ್ರೀ ಪಾರ್ವತೀದೇವಿಗೆ ಉಪದೇಶಮಾಡಿದ **" ದೇವೀ ಕಾಲೋತ್ತರ "** ಎಂಬ ಶಾಸ್ತ್ರದಲ್ಲಿರುವ ಸಾರಾಂಶಗಳನ್ನೆಲ್ಲಾ ಪ್ರಮಾಣಕ್ಕಾಗಿ ಕನ್ನಡ ಭಾಷೆಯಲ್ಲಿ ಈ ಗ್ರಂಥವನ್ನು ಕನ್ನಡಿಸಿದವರಿಂದಲೇ ಪದ್ಯರೂಪದಿಂದ ಈ ಕೆಳಗೆ ಬರೆಯಲ್ಪಟ್ಟಿದೆ.

ಗೀ ॥ ಕೆಲಸಕ್ಕೆ ಬಾರದಿಪ ಕೋ ♦ ರಿಕೆಗಳೆಲ್ಲ
ಸತ್ಯವಹ ಪರಿಪೂರ್ಣವಹ ♦ ಮೋಕ್ಷಪದವಿ
ಯನ್ನೀಯಲಾರ ವಾತ್ಮಸ್ವ ♦ ರೂಪವನ್ನೆ
ಚಿಂತಿಸಲು ಜನ್ಮರಾಹಿತ್ಯ ♦ ವೊಂದಬಹುದು ॥

ಗೀ ॥ ಮರಣಕಾಲದೊ ಳಾವುದಂ ♦ ಮನದಿ ನೆನೆವ
ನಾ ಬಗೆಯ ಜಂತುಯೋನಿಯೊಳು ♦ ಜನಿಪ ನದರಿ
ನಾತ್ಮ ಚಿಂತೆಯಲಿ ಬಿಡದೆ ಮ ♦ ಗ್ನನಾಗಿರಲು
ಜನ್ಮರಾಹಿತ್ಯವನು ತಾ ♦ ಕಾಂಬ ನಿಜವು ॥

ಗೀ ॥ ಮನವು ಸಂತತವು ಚಲಿಸು ♦ ತ್ತಿರಲು ತಿಳಿಯ
ಲಾರ ದಾತ್ಮಸ್ವರೂಪವನು ♦ ಸತ್ಯ ವಿದುವೆ ;
ಆದರಿಂದ ವಿಷಯೇಚ್ಛೆಯೊ ♦ ಳದನು ಬಿಡದೆ
ನೋಡ ಲಾತ್ಮಸ್ವರೂಪವನು ♦ ಕಾಂಬಿ ರೀವು ॥

ಎಂದರೆ ನಿಷ್ಪ್ರಯೋಜನವಾದ ಕೋರಿಕೆಗಳೆಲ್ಲವೂ ಸತ್ಯವಾದ ಮತ್ತು ಪರಿಪೂರ್ಣವಾದ ಕೈವಲ್ಯಪದವಿಯನ್ನು ಕೊಡಲಾರವು. ಅವರವರ ಮರಣಕಾಲದಲ್ಲಿ ಯಾವರೂಪವನ್ನು ಮನಸ್ಸಿನಲ್ಲಿ ಜೀವಿಗಳು

ನೆನೆಸುತ್ತಾರೆಯೋ ಆಯಾ ಜಂತುಯೋನಿಗಳಲ್ಲಿ ಹೋಗಿ ಹುಟ್ಟು ತ್ತಾರೆ. ಅಂದರೆ ಮರಣಸಮಯದಲ್ಲಿ ದೇಹಕರ್ಮವಶದಿಂದ ಇಚ್ಛೆಪಟ್ಟು ಮನಸ್ಸಿನಲ್ಲಿ ನೆನಸಿದ ರೂಪವನ್ನೇ ಜೀವಿಗಳು ಹೊಂದುತ್ತಾರೆ. ಹೀಗೆ ಜೀವಿಗಳಿಗೆ ಕೋಟ್ಯಂತರವಾಗಿ ಸಂಭವಿಸುವ ಜನ್ಮಗಳು ಪುನಃ ಅವುಗಳಿಗೆ ಬರದಂತೆ ಮಾಡುವುದಕ್ಕಾಗಿ ಏನು ಮಾಡಬೇಕೆಂದರೆ, ಆತ್ಮಸ್ವರೂಪ ವನ್ನು ಸರ್ವಕಾಲದಲ್ಲಿಯೂ ಚಿಂತಿಸುತ್ತಿರಬೇಕು. ಅಂದರೆ ಯಾವ ಕೋರಿಕೆಗಳನ್ನೂ ಕೋರದೆ ಸುಮ್ಮನಿರುವಿಕೆಯೇ ಆತ್ಮಸ್ವರೂಪವನ್ನು ಕುರಿತು ಚಿಂತಿಸುವ ಬಗೆಯೆಂದು ಭಾವವು.

ಮನಸ್ಸು ನಿಂತಕಡೆ ನಿಲ್ಲದೆ ಸದಾ ಚಲಿಸುತ್ತಿರುವುದರಿಂದ, ನಮ್ಮ ಆತ್ಮಸ್ವರೂಪವನ್ನು ತಿಳಿಯದೆ ಇದ್ದೇವೆ. ಮನಸ್ಸನ್ನು ಯಾವ ವಿಷಯ ದಲ್ಲಿಯೂ ಚಲಿಸದಿರುವಂತೆ ಒಂದೇ ಸ್ಥಳದಲ್ಲಿ ನಿಲ್ಲಿಸಿದ್ದೇ ಆದರೆ, ನಮ್ಮ ಲ್ಲಿರುವ ಆತ್ಮಸ್ವರೂಪವನ್ನು ನಾವು ತಿಳಿದುಕೊಳ್ಳಬಲ್ಲೆವು ಎಂದು ತಾತ್ಪರ್ಯವು. ಮತ್ತು ಜೀವಿಗಳು ಹೇಗೆ ಪ್ರಾಣವನ್ನು ಬಿಡುತ್ತಾ ರೆಂದು ಹೇಳುವುದಕ್ಕೆ ಪ್ರಮಾಣಕ್ಕಾಗಿ ಶ್ವೇತಾಶ್ವತರೋಪನಿಷತ್ತನ್ನು ಈ ಕೆಳಗೆ ಹೇಳಿದೆ.

ಶ್ಲೋಕ॥ ಏಕೋ ದೇವ ಸ್ಸರ್ವಭೂತೇಷು ಗೂಢ ।
ಸ್ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ॥
ಕರ್ಮಾಧ್ಯಕ್ಷ ಸ್ಸರ್ವಭೂತಾಧಿವಾಸ ।
ಸ್ಸಾಕ್ಷೀ ಚೇತಾ ಕೇವಲೋ ನಿರ್ಗುಣ ಶ್ಚ ॥

ಪರಮಾತ್ಮನೊಬ್ಬನೇ ಸರ್ವಭೂತಗಳಲ್ಲಿಯೂ ವ್ಯಾಪಿಸಿದ್ದಾನೆ, ಮತ್ತು ಸರ್ವಭೂತಗಳಿಗೂ ಅಂತರಾತ್ಮನಾಗಿದ್ದಾನೆ. ಇಷ್ಟೇ ಅಲ್ಲದೆ ಸರ್ವಭೂತಗಳನ್ನು ನಡೆಸುವವನಾಗಿಯೂ, ಸರ್ವಭೂತಗಳಲ್ಲಿ ವಾಸ ಮಾಡುವವನಾಗಿಯೂ ಮತ್ತು ಸರ್ವಭೂತಗಳು ಮಾಡುವ ಕರ್ಮಗಳಿಗೆ ಸಾಕ್ಷಿಭೂತನಾಗಿಯೂ ಇದ್ದಾನೆ. ಇಂತಹ ಪರಬ್ರಹ್ಮವು ಕೇವಲ ನಿರ್ಗುಣ ಸ್ವರೂಪವಾಗಿರುತ್ತದೆ.

ಇಂತಹ ಸಾಕ್ಷಿಸ್ವರೂಪನೇ, ಮೇಲೆ ಹೇಳಿದ ಚಿತ್ರಗುಪ್ತಪಠವನ್ನು ತೋರಿಸುವವನಾಗಿದ್ದು ಆ ಲಕ್ಷಾಧಿಪತಿಯನ್ನು ಅಶ್ವಗರ್ಭದಲ್ಲಿ ಹುಟ್ಟು ವಂತೆ ಮಾಡಿದನು. ಆ ಧನಿಕನು ಮಾಡಿದ ಪುಣ್ಯಪಾಪಕರ್ಮಗಳಲ್ಲಿ ಪುಣ್ಯವನ್ನು ಸ್ವಲ್ಪ ವಿಶೇಷವಾಗಿ ಮಾಡಿದ್ದರಿಂದಲೇ ಈ ಅಶ್ವಜನ್ಮ ದಲ್ಲಿಯೂ ಬಹಳ ಸುಖವಾಗಿರುವಂತೆ ಆತನು ಮಾಡುವನು. ಅಂದರೆ, ಆಸ್ಟ್ರೇಲಿಯಾದೇಶದ ಕುದುರೆಯಾಗಿಯೋ ಇಲ್ಲವೇ ಅರಬ್ಬೀದೇಶದ ಠಾಕಣಾವಾಗಿಯೋ ಅಥವಾ ಮತ್ತಾವ ಉತ್ತಮವಾದ ಅಶ್ವಜಾತಿಯಲ್ಲಿ ಹುಟ್ಟುವಂತೆಯೋ ಮಾಡುವನು. ಈ ತರಹ ಕುದುರೆಗಳು ಉತ್ತಮ ಜಾತೀಯವಾದುದರಿಂದ ಧನಿಕರು ಮಾತ್ರವೇ ಅವುಗಳನ್ನು ಕೊಂಡು ಮನೆ ಯಲ್ಲಿ ಬಹಳ ಸುಖದಿಂದ ಬೆಳೆಸುತ್ತ ಸವಾರಿಗೆ ಮಾತ್ರ ಉಪಯೋಗಿಸುತ್ತ ಬರುತ್ತಾರೆ.

ಹೀಗೆ ಅವುಗಳು ಯಜಮಾನರ ಮನೆಯಲ್ಲಿ ಹುಲ್ಲುಮೇವುಗಳ ಸುಖ ವನ್ನನುಭವಿಸುತ್ತ ಅವರ ಹೆಚ್ಚಾದ ಪ್ರೇಮಕ್ಕೆ ಪಾತ್ರವಾಗುತ್ತವೆ. ಮೇಲೆ ಹೇಳಿದ ಆಸ್ಟ್ರೇಲಿಯಾದೇಶದ ಕುದುರೆಗಿಂತಲೂ ಕಡಿಮೆ ಪುಣ್ಯ ವನ್ನು ಮಾಡಿದ್ದೇ ಆದರೆ, ಕಡಿಮೆಜಾತಿಯ ಕುದುರೆಯ ಜನ್ಮವನ್ನು ಪಡೆಯುವುದು. ಆಗ ಅಂತಹ ಹೀನಜಾತಿ ಕುದುರೆಯು ಹೀನಜಾತಿ ಯವನ ಮನೆಯಲ್ಲಿಯೋ ಕಡುಬಡವನ ಮನೆಯಲ್ಲಿಯೋ ಅಥವಾ ಆ ಕುದುರೆಯ ಮೂಲಕ ತನ್ನ ಜೀವನವನ್ನು ಸಂಪಾದಿಸಿಕೊಳ್ಳುವವನ ಮನೆ ಯಲ್ಲಿಯೋ ಸೇರಿ, ಹಗಲಿರುಳೂ ಅಧಿಕವಾಗಿ ಶ್ರಮಪಡುತ್ತಾ, ಹೊಟ್ಟೆ ತುಂಬ ತಿನ್ನುವುದಕ್ಕೆ ಒಳ್ಳೆಯ ಮೇವು ಹುರುಳಿ ಇವುಗಳಿಲ್ಲದೆ ಹೀನ ಜೀವನವನ್ನು ಅನುಭವಿಸುವುದು. ಗಾಡಿಯೆಳೆಯುವುದು, ಭಾರಹೊರು ವುದು, ಮಳೆಗಾಳಿಬಿಸಿಲುಗಳೆನ್ನದೆ ಒಂದೇ ಸಮನಾಗಿ ಕಷ್ಟಪಡುವುದೇ ಪಾಪವನ್ನು ಹೆಚ್ಚಾಗಿ ಮಾಡಿ ಅಶ್ವಜನ್ಮವನ್ನು ಪಡೆದ ಜೀವಿಗಳ ಕರ್ಮ ಫಲ.

ಜೀವನು ರೂಪವಿಲ್ಲದವನು. ಆದುದರಿಂದ ಈ ಜೀವನು ಯಾವ ಬಗೆಯ ಶರೀರದಲ್ಲಾದರೂ ಹೋಗಿ ಸೇರಬಹುದು. ಆದರೆ, " ಲಕ್ಷಾಧಿ

ಪತಿಯಾಗಿದ್ದು ಏತಕ್ಕಾಗಿ ಕುದುರೆಯಾಗಿ ಹುಟ್ಟುತ್ತಾನೆ? ಮಾನವಜನ್ಮವನ್ನು ಪಡೆದು ಪುನಃ ಪಶು ಜನ್ಮವನ್ನು ಪಡೆಯುವನೇ?" ಎಂಬ ಒಂದು ಸಂದೇಹವು ನಿಮಗೆ ಉಂಟಾಗಬಹುದು. ಅದಕ್ಕೆ ಸಮಾಧಾನವನ್ನು ಈ ಕೆಳಗೆ ವಿಶದಪಡಿಸಿದೆ.

ಪೂರ್ವಜನ್ಮ ಪುಣ್ಯವಿಶೇಷದಿಂದ ಈ ಜನ್ಮದಲ್ಲಿ ಲಕ್ಷಾಧಿಪತಿಯಾಗಿ ಹುಟ್ಟಿ ಅನುಭವಿಸಬೇಕಾದ ಸೌಖ್ಯಗಳನ್ನೆಲ್ಲಾ ಹೊಂದಿ ಕಡೆಗೆ ಪ್ರಾಣ ಬಿಡುತ್ತಾನೆ. ಅದೇ ರೀತಿಯಾಗಿ ತಾನು ಮಾಡಿದ ಪಾಪಕರ್ಮ ಫಲವನ್ನೂ ಅವನು ಹೊಂದುವವನಾಗಿರುತ್ತಾನೆ. ಆದುದರಿಂದ ಅವನ ಪಾಪಕರ್ಮಕ್ಕೆ ತಕ್ಕಂತೆ ಕುದುರೆಯ ಜನ್ಮವನ್ನು ಪಡೆಯಬೇಕಾಗಿರುವುದರಿಂದ ಅವನ ಅವಸಾನಕಾಲದಲ್ಲಿ ಕುದುರೆಯ ಆಕಾರವನ್ನು ಮನಸ್ಸಿನಲ್ಲಿ ನೆನೆಸಿಕೊಂಡನು. ಆ ಕೋರಿಕೆಗೆ ತಕ್ಕಂತೆ ಮುಂದೆ ಅವನಿಗುಂಟಾಗುವ ಜನ್ಮದಲ್ಲಿ ಕುದುರೆಯಾಗಿ ಹುಟ್ಟುವ ಪ್ರಾಪ್ತಿಯುಂಟಾಯಿತೇ ಹೊರತು ಮತ್ತೆ ಬೇರಲ್ಲ.

ಇದಕ್ಕೆ ಇನ್ನೊಂದು ದೃಷ್ಟಾಂತವನ್ನು ಈ ಕೆಳಗೆ ಹೇಳಿದೆ. ಆದುದರಿಂದ, ಅದನ್ನು ಬಹಳ ಆಸಕ್ತಿಯಿಂದ ಪಠಿಸಿ ಜ್ಞಾಪಕದಲ್ಲಿಟ್ಟು, ವೃಥಾ ಕಾಲಯಾಪನೆಯನ್ನು ಮಾಡದೆ, ಸದಾ ಈಶ್ವರಭಕ್ತಿಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದರೆ, ಉತ್ತಮವಾದ ಸ್ಥಿತಿಯನ್ನು ಹೊಂದಬಹುದೆಂಬ ವಿಷಯವನ್ನು ಒತ್ತಿ ಹೇಳುತ್ತಿದ್ದೇವೆ. ಮುಂದಿನ ಪ್ರಕರಣದಲ್ಲಿ ಯೋಗಿಯ ಮನೋಸ್ಥಿತಿ ಮತ್ತು ಇದಕ್ಕೆ ದೃಷ್ಟಾಂತವಾಗಿ ಜಡಭರತೋಪಾಖ್ಯಾನ ಇವುಗಳನ್ನು ವಿಶದವಾಗಿ ತಿಳಿಯಹೇಳಿದೆ.



# ಯೋಗಿಯ ಮನೋಸ್ಥಿತಿ, ಜಡಭರತೋಪಾಖ್ಯಾನ.

---

ಒಂದು ದೊಡ್ಡ ಕುಟುಂಬದಲ್ಲಿ ಅನೇಕ ಸ್ತ್ರೀಪುರುಷರಿದ್ದರು. ಅವರಲ್ಲಿ ಒಬ್ಬನು ಮಾತ್ರವೇ ಆತ್ಮಾನಾತ್ಮ ವಿವೇಕವನ್ನು ಹೊಂದಿದ ಯೋಗಿಯಾಗಿದ್ದನು. ಉಳಿದವರೆಲ್ಲರೂ ಇಂತಹ ವಿವೇಕವನ್ನು ಹೊಂದದೆ ಕೇವಲ ವಿಷಯಸುಖಭೋಗಗಳಲ್ಲಿ ಆಸೆಯುಳ್ಳವರಾಗಿದ್ದರು. ಇದರ ವಿಷಯಗಳನ್ನೆಲ್ಲಾ ಈ ಕೆಳಗೆ ವಿವರಿಸಿ ಹೇಳಲಾಗಿದೆ. ಇವರು ಒಂದು ಸಮಯದಲ್ಲಿ ಸಿಹಿಪದಾರ್ಥಗಳನ್ನೂ ಮತ್ತು ಮಧುರವಾದ ಮತ್ತು ರಸವತ್ತಾದ ಫಲವರ್ಗಗಳನ್ನೂ ಭುಜಿಸಿ ಸಂತೋಷಿಸುವರು. ಬೇರೊಂದು ಕಾಲದಲ್ಲಿ ಸ್ತ್ರೀ, ಗಂಧ, ಪುಷ್ಪ, ತಾಂಬೂಲಾದಿ ಭೋಗಗಳನ್ನು ಅನುಭವಿಸುವರು. ಮತ್ತೆ ಬೇರೆ ಸಮಯದಲ್ಲಿ ಚದುರಂಗ, ಪಗಡೆ, ಇಸ್ಪೇಟು ಮೊದಲಾದ ಜೂಜಾಟಗಳಲ್ಲಿ ಆಸಕ್ತರಾಗಿ ಕಾಲವನ್ನು ಕಳೆಯುವರು. ಮಗದೊಂದು ವೇಳೆಯಲ್ಲಿ ಅವರು ಸಂಗೀತರಾಗಾದಿಗಳನ್ನು ಕೇಳುತ್ತ, ಸೂಳೆಯರ ಕುಣಿತ, ನಾಟಕ ಮೊದಲಾದುವುಗಳನ್ನು ನೋಡುತ್ತ ಆನಂದಪಡುತ್ತಿರುವರು. ಒಂದು ವೇಳೆ ಸುರಾಪಾನವನ್ನು ಮಾಡಿ ಸೊಕ್ಕಿ ಪ್ರಜ್ಞೆತಪ್ಪಿ ತೂಗಾಡುತ್ತ ಸಂತೋಷದಿಂದ ಮೈಮರೆಯುತ್ತಿರುವರು. ಇನ್ನೊಂದು ವೇಳೆ ಪರಸ್ತ್ರೀಜನಕಾಂಕ್ಷಿಗಳಾಗಿ ಅವರಿಗೆ ತಮ್ಮ ಹಣವನ್ನು ಕೊಡುತ್ತಲೂ, ಅವರ ಹಣವನ್ನು ತಾವು ಕಸುಕೊಳ್ಳುತ್ತಲೂ, ರತಿಕೇಳಿಗಳಿಗೆ ಎಡೆಗೊಟ್ಟು, ಇಹಪರಲೋಕಗಳನ್ನೂ ತಮ್ಮನ್ನೂ ಮರೆತು, ಸುಖದಿಂದ ಬೀಗುತ್ತಿರುವರು. ಈರೀತಿಯಾಗಿ ಆತ್ಮಾನಾತ್ಮವಿವೇಕಶೂನ್ಯರಾದ ಆ ಜನಗಳು ತಮ್ಮತಮ್ಮ ಇಷ್ಟಾನುಸಾರವಾಗಿ ದುರ್ಗತಿಗೆ ಕಾರಣಭೂತಗಳಾದ ಸ್ತ್ರೀಸಂಭೋಗ, ಸುರಾಪಾನ ಮೊದಲಾದ ಸಪ್ತವ್ಯಸನಗಳಲ್ಲಿ ಹೆಚ್ಚಾದ ಆಸಕ್ತಿಯನ್ನು ಹೊಂದಿ, ತಮ್ಮ ಮುಂದಿನ ಗತಿಯ ವಿಷಯವನ್ನೇ ತಿಳಿಯದವರಾಗಿ ಇರು

ತ್ತಿದ್ದರು. ಆದರೆ ಮೇಲೆ ಹೇಳಿದ ಆತ್ಮಾನಾತ್ಮವಿವೇಕವನ್ನರಿತ ಆ ಯೋಗಿಯೊಬ್ಬನು ಮಾತ್ರ, ಯಾವ ವಿಷಯಸುಖಗಳಲ್ಲಿಯೂ ಸಿಕ್ಕಿ ಬೀಳದೆಯೂ, ಮೇಲೆ ಹೇಳಿದ ಇತರರೊಡನೆ ಸೇರದೆಯೂ, ತನ್ನ ದೇಹಧಾರಣೆಗೆ ಬೇಕಾದ ಆಹಾರವನ್ನು ಮಾತ್ರ ಭುಜಿಸಿ ಯಾರಗೋಜಿಗೂ ಹೋಗದೆ ಇತರರ ಸಂಬಂಧವನ್ನು ಬೆಳೆಸದೆ ಏಕಾಂತಸ್ಥಳದಲ್ಲಿ ಆತ್ಮಾನುಭವನಿಷ್ಠೆಯಲ್ಲಿರುತ್ತಿದ್ದನು. ಈ ಯೋಗಿ ಉಳಿದವರುಗಳನ್ನು ನೋಡಿ ತನ್ನಲ್ಲಿ ತಾನು, "ಇವರು, ಈ ಪ್ರಪಂಚವನ್ನು 'ಮಿಥ್ಯೆ' ಯೆಂದು ತಿಳಿಯದೆ ಅದೇ 'ಸತ್ಯ' ವೆಂದು ತಿಳಿದು ತುಚ್ಛವಾದ ಭೋಗಭಾಗ್ಯಗಳನ್ನೆಲ್ಲಾ ಶಾಶ್ವತವಾದ ಪುರುಷಾರ್ಥಗಳೆಂದೆಣಿಸಿ ಭಗವದ್ಭಕ್ತಿಯೆಂಬುದು ಎಳ್ಳಷ್ಟೂ ಇಲ್ಲದೆ, ಸದಾ ದುಷ್ಟಕಾರ್ಯಗಳನ್ನೇ ಮಾಡುತ್ತ ಅಜ್ಞಾನವೆಂಬ ಕತ್ತಲೆಯಲ್ಲಿ ಮುಳುಗಿ ಆತ್ಮಜ್ಞಾನವಿಷಯದಲ್ಲಿ ಸ್ವಲ್ಪವೂ ಎಚ್ಚರಿಕೆಯಿಲ್ಲದೆ, ನಿದ್ರೆಮಾಡುವವರಂತೆ ಇರುತ್ತಾರೆ" ಎಂದು ಮನಸ್ಸಿನಲ್ಲಿ ಯೋಚಿಸುತ್ತಿದ್ದನು.

ಹೀಗೆಂದು ಮನಸ್ಸಿನಲ್ಲಿ ಯೋಚಿಸುತ್ತ ಈತನೊಬ್ಬನೇ ಆತ್ಮಜ್ಞಾನ ವಿಷಯಗಳಲ್ಲಿ ಎಚ್ಚೆತ್ತು ಅಂದರೆ, ತಾನು ಎಂದಿಗೂ ಮಾಯೆಯಲ್ಲಿ ಬೀಳದೆ ಜಾಗ್ರತನಾಗಿಯೇ ಇರುವನೆಂದು ಎಣಿಸುವವನಾಗಿದ್ದನು. ಮೊದಲು ಹೇಳಿದವರೆಲ್ಲರೂ ಯೋಗಿಯ ವಿಷಯವನ್ನು ಕುರಿತು ಯಾವಯಾವ ರೀತಿಯಲ್ಲಿ ಎಣಿಸುತ್ತಿದ್ದಾರೆಂದರೆ, 'ನಾವೆಲ್ಲರೂ ಹೀಗೆ ಅನೇಕ ವಿಧವಾದ ಭೋಗಗಳನ್ನು ಅನುಭವಿಸುತ್ತಿರುವಾಗ, ಇವನು ಮಾತ್ರ ನಮ್ಮೊಡನೆ ಬೆರೆಯದೆ ಪ್ರತ್ಯೇಕವಾಗಿದ್ದು ನಾವು ನೋಡುತ್ತಿರುವಾಗಲೆಲ್ಲ ಮೌನವಾಗಿಯೇ ಇರುತ್ತಾನೆ. ಇವನು ನಪುಂಸಕನಾಗಿರುವುದರಿಂದಲೇ ಸ್ತ್ರೀಯರ ಕಡೆಗೆ ದೃಷ್ಟಿಸಿ ನೋಡನು' ಎಂದು ಕೆಲವರೂ, ಸ್ರಕ್ಚಂದನವನಿತಾದಿಗಳಲ್ಲಿ ಇಚ್ಛೆಯಿಲ್ಲದಿರುವುದರಿಂದ ಈತನು ಬಹಳ ಮಡ್ಡಿಯೆಂದು ಕಾಣುತ್ತದೆ' ಎಂದು ಕೆಲವರೂ, 'ರುಚಿಕರವಾದ ಪದಾರ್ಥಗಳಲ್ಲಿ ಇವನಿಗೆ ಆಸಕ್ತಿಯಿಲ್ಲದಿರುವುದರಿಂದ ಇವನಿಗೆ ಗೋಮಯವೇ ಬೆಲ್ಲವಾಗಿದೆ' ಎಂದು ಕೆಲವರೂ, ಸಂಗೀತದ ರುಚಿ ಇವನಿಗಿಲ್ಲದಿರುವುದರಿಂದ ಸಂಗೀತವೆಂಬುದು ಇವನ ವಿಷಯದಲ್ಲಿ 'ಕಿವುಡನ ಕಿವಿಯಲ್ಲಿ ಶಂಖವಿಟ್ಟು ಊದಿ

ದಂತೆ' ಯೆಂದು ಕೆಲವರೂ ಹೀಗೆ ಅನೇಕ ವಿಧವಾಗಿ ಆ ಯೋಗಿಯಾದ ಅಂತರ್ಮುಖಿಯ ವಿಷಯದಲ್ಲಿ ಆಡಿಕೊಳ್ಳುತ್ತಿದ್ದರು. 'ನಾವು ಈರೀತಿಯಾದ ಸೌಖ್ಯಗಳನ್ನು ಅನುಭವಿಸುತ್ತಿದ್ದರೂ, ಇವನಿಗೆ ಅವುಗಳ ಲಭ್ಯವಿಲ್ಲದೆ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ತಿಳಿವೆಂಬುದೇ ಇಲ್ಲದೆ ಇರುತ್ತಿದ್ದಾನೆ' ಎಂದು ಅವರೆಲ್ಲರೂ ಅಂದುಕೊಳ್ಳುತ್ತಿದ್ದರು. ಈ ಎರಡು ಬಗೆಯವರ ನಡತೆಗಳು ಬಹಳ ವಿರುದ್ಧವಾಗಿವೆ. ಇದಕ್ಕೆ ಜಡಭರತನ ವಿಷಯವನ್ನು ದೃಷ್ಟಾಂತವಾಗಿ ಈ ಕೆಳಗೆ ಹೇಳಿದೆ.

## ಜಡಭರತನು ಜಿಂಕೆಯ ಜನ್ಮವನ್ನು ಪಡೆಯುವುದು.

ಪೂರ್ವದಲ್ಲಿ 'ಋಷಭ' ಎಂಬಾತನ ಪುತ್ರನಾದ 'ಭರತ' ನೆಂಬವನು, 'ಪಂಚಜನಿ' ಎಂಬ ತನ್ನ ಹೆಂಡತಿಯೊಡಗೂಡಿ ಏಕಚಕ್ರಾಧಿಪತ್ಯದಿಂದ ರಾಜ್ಯಪರಿಪಾಲನೆಯನ್ನು ಧರ್ಮದಿಂದ ನೆರವೇರಿಸಿ, ಕಡೆಯಲ್ಲಿ ರಾಜ್ಯವನ್ನು ತನ್ನ ಪುತ್ರರಾದ ಸುಮತಿ ಮೊದಲಾದವರಿಗೆ ಹಂಚಿಕೊಟ್ಟು ತಾನು 'ಪುಲಹಾಶ್ರಮ' ವೆಂಬ ಸ್ಥಳಕ್ಕೆ ಹೋಗಿ ಅಲ್ಲಿ ತಪಸ್ಸುಮಾಡುತ್ತಿದ್ದನು. ಹೀಗಿರಲು ಒಂದು ದಿನ ಆತನು ಚಕ್ರತೀರ್ಥದಲ್ಲಿ ಸ್ನಾನವನ್ನು ಮಾಡುತ್ತಿರುವಾಗ ಅಲ್ಲಿಗೆ ಪೂರ್ಣ ಗರ್ಭಿಣಿಯಾದ ಹೆಣ್ಣುಜಿಂಕೆಯೊಂದು ನೀರು ಕುಡಿಯುವುದಕ್ಕಾಗಿ ಬಂದಿತು. ಹಾಗೆ ಅದು ನೀರು ಕುಡಿಯುತ್ತಿರುವ ಸಮಯಕ್ಕೆ ಮೃಗರಾಜನಾದ ಒಂದಾನೊಂದು ಸಿಹ್ಮವು ಲೋಕಭಯಂಕರವಾದ ಒಂದು ಘರ್ಜನೆಯನ್ನು ಮಾಡಿತು. ಆ ಘರ್ಜನೆಯನ್ನು ಕೇಳಿದ ಆ ಜಿಂಕೆಗೆ ಹೆಚ್ಚಾದ ಭಯವು ಹುಟ್ಟಿ ಅದು ಹಾರಿಬಿದ್ದಿತು. ಹಾಗೆ ಬಿದ್ದ ತಕ್ಷಣವೇ ಗರ್ಭದಲ್ಲಿರುವ ಪಿಂಡವು ಕದಲಿ ಹೊರಬಿದ್ದು ಜಿಂಕೆಯ ಮರಿಯು ಈಚೆಗೆ ಬಂದಿತು. ಆ ಮರಿಯು ಹೊರಕ್ಕೆ ಬಂದು ಬಿದ್ದೊಡನೆಯೇ ತಾಯಿಜಿಂಕೆಯು ಮೃತಿಹೊಂದಿತು. ಇದೆಲ್ಲವನ್ನೂ ನೋಡುತ್ತಿದ್ದ ಭರತನು ಜಿಂಕೆಯ ಮರಿಯ ಸಮಿಾಪಕ್ಕೆ ಹೋದನು. ಅದನ್ನು ನೋಡಿದ ತಕ್ಷಣವೇ ಅವನಿಗೆ ಹೆಚ್ಚಾದ ಕನಿಕರವುಂ

ಟಾಗಿ ಅದನ್ನು ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋಗಿ ಬಹಳ ಪ್ರೀತಿಯಿಂದ ಸಾಕಿ ಬೆಳೆಸುತ್ತಿದ್ದನು. ಹೀಗೆ ಅದನ್ನು ಬೆಳೆಸುತ್ತಿರುವಾಗ ಆ ಭರತನು ಎಲ್ಲಿಗೆ ಹೊರಟರೂ ಆ ಜಿಂಕೆಯ ಶಿಶುವು ಅವನನ್ನು ಹಿಂಬಾಲಿಸಿಯೇ ಹೋಗುತ್ತಿತ್ತು. ಅವನು ತಪಸ್ಸಿಗೆ ಕುಳಿತುಕೊಂಡಾಗ ಆ ಜಿಂಕೆಯ ಮರಿಯು ಅವನ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟು ಮಲಗುತ್ತಿತ್ತು ಮತ್ತು ಅವನು ತಪಸ್ಸನ್ನು ಬಿಟ್ಟು ಮೇಲಕ್ಕೆದ್ದಾಗ ಅದೂ ಏಳುತ್ತಲಿತ್ತು. ಈ ರೀತಿಯಾಗಿ ಆ ಮರಿಯು ಭರತನ ಮೇಲೆ ಅತ್ಯಂತ ಪ್ರೀತಿಯಿಂದ ಇರುತ್ತಿರಲು ಆತನಿಗೆ ಅದರಮೇಲೆ ಅಪರಿಮಿತವಾದ ಪ್ರೇಮವುಂಟಾಗಿತ್ತು. ಯಾವಾಗಲೂ ಅವನಿಗೆ ಅದೇ ಹಮ್ಮು, ಅದೇ ಗಿಲಿ. ಕೂತರೂ ಜಿಂಕೆಯ ಮರಿ, ಎದ್ದರೂ ಜಿಂಕೆಯ ಮರಿ. ಹೀಗಿರಲು ಅವನು ಪರಮಾತ್ಮಧ್ಯಾನವನ್ನು ಕೂಡ ಮರೆತು ಪ್ರತಿದಿನವೂ ಮಾಡುತ್ತಿದ್ದ ತಪಸ್ಸಿನಲ್ಲಿ ಆಸಕ್ತಿಯನ್ನು ಕಡಿಮೆಮಾಡಿ ಆ ಜಿಂಕೆಯ ಮರಿಯ ಧ್ಯಾನದಲ್ಲಿಯೇ ಇರುತ್ತಿದ್ದನು. ಅವನಿಗೆ ಆ ಮರಿಯಲ್ಲಿ ತನ್ನದೆಂಬ ಅಭಿಮಾನವು ಹೆಚ್ಚುತ್ತಾ ಬಂದಿತು. ಪ್ರತಿದಿನವೂ ಅದಕ್ಕೆ ಕಾಲಕ್ಕೆ ಸರಿಯಾಗಿ ಆಹಾರವನ್ನು ಕೊಡುತ್ತಲೂ ಆಗಾಗ ಅದರ ಮೈಯನ್ನು ತೊಳೆದು ಶುದ್ಧಮಾಡುತ್ತಲೂ ಇದ್ದನು. ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗಿಂತಲೂ ಹೆಚ್ಚಾಗಿ ಅದನ್ನು ಮುದ್ದಾಡಿ ಲಾಲಿಸುತ್ತಿದ್ದನು. ಹುಲಿ ಮೊದಲಾದ ಕಾಡು ಮೃಗಗಳ ಈತಿಬಾಧೆಯು ಅದಕ್ಕುಂಟಾಗದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದನು. ಹೀಗೆ ಅದರಲ್ಲಿಯೇ ಸಂಪೂರ್ಣವಾದ ಆಸಕ್ತಿಯು ಭರತನಿಗೆ ಇದ್ದುದರಿಂದ ಕ್ರಮಕ್ರಮವಾಗಿ ಭಗವದಾರಾಧನೆಗಳಲ್ಲಿಯೂ, ನಿತ್ಯ ಕರ್ಮಾನುಷ್ಠಾನದಲ್ಲಿಯೂ ಮತ್ತು ಶೌಚಾಚಾರಗಳಲ್ಲಿಯೂ ದಿನದಿನಕ್ಕೆ ಅಕ್ಕರೆಯು ತಪ್ಪುತ್ತ ಬಂದಿತು ಮತ್ತು ಧರ್ಮಗಳೆಲ್ಲವೂ ದಿನದಿನಕ್ಕೆ ತಗ್ಗುತ್ತ ಬಂದು ಕಡೆಗೆ ಕೆಲವು ದಿನಗಳೊಳಗಾಗಿ ಸಮಸ್ತ ಧರ್ಮಾನುಷ್ಠಾನಗಳೂ ವಿಶೇಷವಾಗಿ ನಷ್ಟವಾಗುತ್ತ ಬಂದವು. ಭರತನು ಆ ಜಿಂಕೆಯ ಮರಿಯನ್ನು ನೋಡಿದಾಗಲೆಲ್ಲಾ, ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸುತ್ತಾನೆ. (ಈ ಮುಂದೆ ಹೇಳುವುದನ್ನು ಶ್ರೀಮದ್ಭಾಗವತದ ಕನ್ನಡದ ಗದ್ಯಾನುವಾದದಿಂದ ಎತ್ತಿ ಬರೆದಿದೆ.)

“ಅಯ್ಯೋ ಪಾಪವೇ! ಕಾಲವಶದಿಂದ ತಂದೆತಾಯಿ ಮೊದಲಾದ ತನ್ನ ಬಂಧು ವರ್ಗವೆಲ್ಲವನ್ನೂ ಅಗಲಿ ಬಂದ ಈ ಜಿಂಕೆಯ ಮರಿಯು ಪ್ರವಾಹದಲ್ಲಿ ಬಿದ್ದು ಸಾಯುತ್ತಿತ್ತು. ಇಂತಹ ದುರವಸ್ಥೆಗೆ ಸಿಕ್ಕಿದ ಈ ಪ್ರಾಣಿಯು ದೈವವಶದಿಂದ ನನ್ನ ಕೈಗೆ ಸಿಕ್ಕಿತು. ಈಗ ಈ ಮರಿಯು, ತನ್ನನ್ನೇ ತಂದೆಯನ್ನಾಗಿಯೂ ತಾಯಿಯನ್ನಾಗಿಯೂ ನಂಬಿರುವುದು. ನನ್ನನ್ನು ಬಿಟ್ಟು ಬೇರೊಬ್ಬ ರಕ್ಷಕನನ್ನು ಕಾಣದು. ಇದು ಸರ್ವವಿಧದಲ್ಲಿಯೂ ನನ್ನನ್ನೇ ನಂಬಿರುವುದರಿಂದ ಇದನ್ನು ಚೆನ್ನಾಗಿ ಪೋಷಿಸಿ ಅಭಿವೃದ್ಧಿ ತರಬೇಕಾದುದು ನನ್ನ ಕರ್ತವ್ಯ. ಇದರ ಸಂತೋಷವೇ ನನ್ನ ಸಂತೋಷವು; ಇದರ ದುಃಖವೇ ನನ್ನ ದುಃಖವು. ಇದರಿಂದ ನನ್ನ ಕಾರ್ಯಗಳು ಕೆಟ್ಟರೂ ಚಿಂತೆಯಿಲ್ಲ; ಅದಕ್ಕಾಗಿ ಕೋಪಿಸದೆ ಇದನ್ನು ನಾನು ಪೋಷಿಸುತ್ತಿರಬೇಕಾದುದೇ ಯುಕ್ತವು. ವಿವೇಕಿಗಳಾದವರು ಮರೆಹೊಕ್ಕವರನ್ನು ಕಾಪಾಡದಿದ್ದರೆ ಬಹಳ ದೋಷಕ್ಕೆ ಗುರಿಯಾಗುವರು. ಪರೋಪಕಾರಿಗಳಾಗಿಯೂ, ಶಾಂತರಾಗಿಯೂ ಇರುವ ಪಂಡಿತರು ಇಂತಹ ದೀನರಲ್ಲಿ ದಯೆಯನ್ನು ತೋರಿಸದೆ ಬಿಡರು. ಸಜ್ಜನರು, ಮರೆಹೊಕ್ಕವರನ್ನು ರಕ್ಷಿಸುವ ವಿಷಯದಲ್ಲಿ ಸ್ವಪ್ರಯೋಜನಹಾನಿಯನ್ನು ಸ್ವಲ್ಪ ಮಾತ್ರವೂ ಲಕ್ಷಿಸಲಾರರು.” ಎಂದು ತನ್ನಲ್ಲಿ ತಾನೇ ಚಿಂತಿಸುತ್ತ, ಆ ಮರಿಯಲ್ಲಿ ಮೇಲೆ ಮೇಲೆ ಹೆಚ್ಚಾದ ಪ್ರೀತಿಯನ್ನು ತೋರಿಸುತ್ತಿದ್ದನು. ಅದು ಮೊದಲು ತಾನು ಪ್ರತಿದಿನವೂ ಆ ಜಿಂಕೆಯ ಮರಿಯೊಡನೆ ಕುಳಿತಿರುವನು. ಅದರೊಡನೆಯೇ ಆಡುತ್ತಿರುವನು, ಅದರೊಡನೆಯೇ ತಾನು ಗೆಡ್ಡೆಗೆಣಸುಗಳನ್ನು ತಿನ್ನುತ್ತಿರುವನು. ಹೀಗೆ ಆ ಜಿಂಕೆಯ ಮರಿಯಲ್ಲಿ ಮಿತಿಮೀರಿದ ಸ್ನೇಹವು ಅವನಿಗುಂಟಾಯಿತು. ಒಮ್ಮೊಮ್ಮೆ ದರ್ಭೆಗಳನ್ನಾಗಲಿ, ಪುಷ್ಪಗಳನ್ನಾಗಲಿ, ನೀರನ್ನಾಗಲಿ ತರುವುದಕ್ಕೆ ತಾನು ಹೊರಗೆ ಹೋಗಬೇಕಾಗಿ ಬಂದಾಗ ಕಾಡುಮೃಗಗಳಿಂದ ಅದಕ್ಕೆ ಏನಾದರೂ ಅಪಾಯವು ಸಂಭವಿಸೀತು ಎಂಬ ಚಿಂತೆಯಿಂದ ಅದನ್ನು ತನ್ನ ಸಂಗಡಲೇ ಕಾಡಿಗೆ ಕರೆದುಕೊಂಡು ಹೋಗುತ್ತಿದ್ದನು. ಕಾಡುದಾರಿಯಲ್ಲಿ ನಡೆವಾಗ ಆ ಮೃಗವು ಅಶಕ್ತಿಯಿಂದಲೋ, ಅಜ್ಞಾನದಿಂದಲೋ ತನ್ನೊಡನೆ ಬಾರದೆ, ಅಲ್ಲಲ್ಲಿ ನಿಂತಾಗ, ತಾನೂ ಅದರೊಡನೆ ನಿಂತುಬಿಡುತ್ತಿದ್ದನು. ಮತ್ತು

ತಾನೇ ಅದನ್ನು ಹೆಗಲಮೇಲೆ ಹೊತ್ತು ತರುತ್ತಿದ್ದನು. ತಾನು ಕುಳಿತಾಗ ಅದನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಳ್ಳುವುದೂ, ಮಲಗುವಾಗ ಅದನ್ನು ತನ್ನ ಎದೆಯ ಮೇಲೆ ಮಲಗಿಸಿಕೊಳ್ಳುವುದೂ ಮಾಡುತ್ತಿದ್ದನು. ಹೀಗೆ ಭರತನು ಮಿತಿಮೀರಿದ ಪ್ರೇಮದಿಂದ ಆ ಹುಲ್ಲೆಯ ಮರಿಯನ್ನು ಬಾರಿಬಾರಿಗೂ ಮುದ್ದಿಸಿ ಲಾಲಿಸುತ್ತ, ಅದರಿಂದ ಬಹಳವಾಗಿ ಸಂತೋಷಿಸುತ್ತಿದ್ದನು. ಮತ್ತು ತನ್ನ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ನಡೆಸುತ್ತಿರುವಾಗಲೂ ನಡನಡುವೆ ಆ ಜಿಂಕೆಯನ್ನು ನೆನೆಸಿಕೊಂಡು ಅದರ ಕಡೆಗೆ ತಿರುಗುವನು; ಅದು ಕಣ್ಣಿಗೆ ಬೀಳದಿದ್ದಾಗ ಎದ್ದೆದ್ದು ನೋಡುವನು, ಅದನ್ನು ಕಂಡಾಗ ನೆಮ್ಮದಿಯಿಂದ ಕುಳ್ಳಿರುವನು; ಅದು ಕಣ್ಣಿಗೆ ಬಿದ್ದಾಗಲೆಲ್ಲಾ, ಸಂತೋಷದಿಂದುಕ್ಕುತ್ತ, "ಓ ನನ್ನ ಮುದ್ದು ಮರಿಯೇ! ನಿನಗೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಕ್ಷೇಮವುಂಟಾಗುತ್ತಿರಲಿ." ಎಂದು ಆಶೀರ್ವದಿಸುವನು.

ಹೀಗಿರುವಾಗ ಒಮ್ಮೆ ಆ ಜಿಂಕೆಯು ಅಕಸ್ಮಾತ್ತಾಗಿ ಅವನ ಕಣ್ಣಿಗೆ ಕಾಣಿಸದೆ ಹೋಗಲು, ತನ್ನ ಆಸ್ತಿಯೆಲ್ಲವನ್ನೂ ಒಟ್ಟಿಗೆ ಕಳೆದುಕೊಂಡವನಂತೆ, ಭಯದಿಂದ ತತ್ತಳಿಸುತ್ತ, ಅದನ್ನು ಕ್ಷಣಮಾತ್ರವೂ ಅಗಲಿರಲಾರದೆ, ಮೋಹಪರವಶನಾಗಿ ದುಃಖದಿಂದ ಈ ರೀತಿಯಾಗಿ ರೋದನ ಮಾಡತೊಡಗಿದನು :—

ಶ್ರುತಿ ॥ "ಅಪಿ ಬತ ವೈ! ಕೃಪಣಃ ಏಣಬಾಲಕೋ ಮೃತಹರಿಣೀಸುತಃ ♦ ಅಹೋ! ಅನಾರ್ಯಸ್ಯ ಶಠಕಿರಾತಮತೇಃ ಅಕೃತಸುಕೃತಸ್ಯ ಕೃತವಿಸ್ರಂಭಃ ಆತ್ಮಪ್ರತ್ಯಯೇನ ತದವಿಗಣಯ್ಯ ಸುಜನ ಇವ ಕಿಮಾಗಮಿಷ್ಯತಿ? ♦ ಅಪಿ ಕ್ಷೇಮೇಣಾಸ್ಮಿನ್ನಾಶ್ರಮೋಪವನೇ ಶಷ್ಪಾಣಿ ಚರಂತಂ ದೇವಗುಪ್ತಂ ಪ್ರಕ್ಷ್ಯಾಮಿ?♦ ಅಪಿ ನ ವೃಕಸ್ಸಾಲಾವೃಕೋಽನ್ಯತಮೋ ವಾ ನೈಕಚರಏಕಚರೋ ನಾಭಕ್ಷಯತಿ? ♦ ನಿಮ್ಲೋಚತೀಹ ಭಗವಾನ್ ಸಕಲ ಜಗತ್ಕ್ಷೇಮೋದಯಃ ತ್ರಯ್ಯಾತ್ಮಾ ಅದ್ಯಾಪಿ ನ ಮೃಗವಧೂನ್ಯಾಸಃ ಅಗಚ್ಛತಿ♦ ಅಪಿ ಸ್ವಿತ್ ಅಕೃತಸುಕೃತಮಾಗತ್ಯ ಮಾಂ ಸುಖಯಿಷ್ಯತಿ ಹರಿಣರಾಜಕುಮಾರೋ ವಿವಿಧರುಚಿರದರ್ಶನೀಯನಿಜಮೃಗದಾರಕವಿನೋದೈ ರಸಂತೋಷಂ ಸ್ವಾನಾಮುಪನುದನ್? ♦ ಕ್ಷ್ವೇಳಿಕಾಯಾಂ ಮಾಂ ಮೃಷಾ

ಸಮಾಧ್ಯಾಮೀಲಿತದೃಶಂ ಪ್ರೇಮಸಂರಂಭೇಣ ಚಕಿತಚಕಿತಃ ಆಗತ್ಯ ಪೃಷದಪರುಷವಿಷಾಣಾಗ್ರೇ ಲುಠತಿ ♦ ಆಸಾದಿತಹವಿಷಿ ಬರ್ಹಿಷಿ ದೂಷಿತೇ ಮಯೋಪಾಲಬ್ಧೋ ಭೀತಭೀತಃ ಸಪದ್ಯುಪರತರಭಸಃ ಋಷಿಕುಮಾರ-ವತ್ ಅವಹಿತಕರಣಕಲಾಪಃ ಆಸ್ತೇ ♦ ಕಿಂ ವಾ ಅರೇ ! ಆಚರಿತಂ ತಪ-ಸ್ತಪಸ್ವಿನ್ಯಾ ಅನಯಾ ಯದಿ ಯಮವನಿಃ ಸವಿನಯಕೃಷ್ಣಸಾರತನಯ-ತನುತರಸುಭಗಖುರಖುರಪದಪಂಕ್ತಿಭಿರ್ದ್ರವಿಣವಿರಹಾತುರಸ್ಯ ಕೃಪಣಸ್ಯ ಮಮ ದ್ರವಿಣಪದವೀಂ ಸೂಚಯಂತ್ಯಾತ್ಮಾನಂ ಸರ್ವತಃ ಕೃತಕೌತುಕಂ ದ್ವಿಜಾನಾಂ ಸ್ವರ್ಗಾಪವರ್ಗಕಾಮಾನಾಂ ದೇವಯಜನಂ ಕರೋತಿ ? ♦ ಅಪಿ ಸ್ವಿತ್‌ಅಸೌ ಭಗವಾನ್ ಉಡುಪತಿ ರೇವಂ ಮೃಗಪತಿಭಯಾತ್ ಮೃಗ-ಬಾಲಕಂ ಸ್ವಾಶ್ರಮಪರಿಭ್ರಷ್ಟಂ ಅನುಕಂಪಯಾ ಕೃಪಣಜನವತ್ಸಲಃ ಪರಿಪಾತಿ ?♦ ಕಿಂ ವಾ ಆತ್ಮಜವಿಶ್ಲೇಷಣಜ್ವರದವದಹನಶಿಖಾಭಿಃ ಉಪತಾ-ತಪ್ಯಮಾನಹೃದಯಸ್ಥಲನಳಿನೀಕಂ ಮಾಂ ಉಪಸೃತಮೃಗೀತನಯಂ ಶಿಶಿರಶಾಂತಾನುರಾಗಗುಣಿತನಿಜವದನಸಲಿಲಾಮೃತಮಯಗಭಸ್ತಿಭಿಃ ಸ್ವ-ಧಯತೀತಿ ವಾ ? ♦ (ಶ್ರೀಮದ್ಭಾಗವತಂ)

“ಅಯ್ಯೋ ! ತಾಯಿತಂದೆಗಳಿಲ್ಲದೆ ತಬ್ಬಲಿಯಾಗಿ ನನ್ನಲ್ಲಿ ಬಂದು ಸೇರಿದ ಆ ನನ್ನ ಮುದ್ದುಮರಿಯು ಎಲ್ಲಿಯೋ ಕಾಣೆನಲ್ಲಾ ! ಇನ್ನೇನು ಗತಿ ? ಅಯ್ಯೋ ! ನಾನೆಂತಹ ದುಷ್ಟನು, ಎಷ್ಟು ಕ್ರೂರಹೃದಯನು ? ನಾನೆಷ್ಟು ದುರ್ಭಾಗ್ಯನು ! ಕಿರಾತನಂತೆ ನಿರ್ದಯನಾದ ನನ್ನನ್ನು ನಂಬಿ ಬಂದುದರಿಂದಲ್ಲವೇ ಆ ಮುದ್ದುಮೃಗಕ್ಕೆ ಈಯವಸ್ಥೆಯುಂಟಾಯಿತು. ಅಯ್ಯೋ ! ನಾನು ಇಷ್ಟು ಎಚ್ಚರ ತಪ್ಪಿದವನೆಂಬುದನ್ನು ಕಾಣದೆ, ಸಾಧುವೆಂದು ತಿಳಿದು ನನ್ನಲ್ಲಿ ಸೇರಿ ಮೋಸಹೋಯಿತು. ಹೇಗಾದರೂ ಆಗಲಿ, ದೈವಕೃಪೆಯಿಂದ ಅದು ಸಾಯದೆ ಬದುಕಿದ್ದು, ಈ ಆಶ್ರಮದಲ್ಲಿಯೇ ಎಲ್ಲಿಯಾದರೂ ಹುಲ್ಲು ಮೇಯುತ್ತಿರುವುದನ್ನು ನಾನು ತಿರುಗಿ ಕಣ್ಣಾರೆ ಕಾಣುವೆನೆ ? ಕಾಡಿನಲ್ಲಿ ಹಿಂಡುಹಿಂಡಾಗಿ ಸಂಚರಿಸುವ ತೋಳನಾಯಿ ಮುಂತಾದುವಾಗಲಿ, ಒಂಟಿಯಾಗಿ ಸಂಚರಿಸತಕ್ಕ ಹುಲಿ ಮೊದಲಾದುವಾಗಲಿ ಅದನ್ನು ಭಕ್ಷಿಸದೆ ಬಿಡುವುದೆ ? ಲೋಕಕ್ಷೇಮಕ್ಕಾಗಿ ಉದಿಸಿ ಸಂಚಾರ ಮಾಡುತ್ತಿದ್ದ ಸೂರ್ಯನೂ ಕೂಡ ಮುಳುಗುತ್ತಿರುವನಲ್ಲಾ ! ಅಯ್ಯೋ ! ಇನ್ನೂ ಆ ನನ್ನ ಮುದ್ದುಮೃಗವು ನನ್ನ ಬಳಿಗೆ ಬಂದು ಸೇರ

ಲಿಲ್ಲವಲ್ಲಾ ! ಆ ನನ್ನ ಜಿಂಕೆಮರಿಯೆಂಬ ರಾಜಕುಮಾರನು ತನ್ನ ಜಾತಿಗೆ ಸಹಜವಾದ ಮತ್ತು ಮನೋಹರವಾದ ಆಟಪಾಟಗಳಿಂದ ದುರ್ಭಾಗ್ಯನಾದ ನನ್ನ ಮನಸ್ಸನ್ನು ತಿರುಗಿ ಯಾವಾಗ ಆನಂದಪಡಿಸುವನೋ ಕಾಣೆನಲ್ಲಾ! ಆಗಾಗ ನನ್ನೊಡನೆ ಸೇರಿ ಆಟವಾಡುತ್ತಿರುವಾಗ, ನಾನು ಸುಳ್ಳುಸುಳ್ಳಾಗಿ ತಪಸ್ಸುಮಾಡುವಂತೆ ಕಣ್ಣುಮುಚ್ಚಿ ಕುಳಿತರೆ, ಆ ನನ್ನ ಮುದ್ದುಮೃಗವು ನನ್ನಲ್ಲಿ ಪ್ರಣಯ ಕೋಪವನ್ನು ತೋರಿಸುತ್ತ ಬಂದು, ಜಲಧಾರೆಯಂತೆ ಮೃದುವಾದ ತನ್ನ ಕೊಂಬಿನ ತುದಿಯಿಂದ ಬಾರಿಬಾರಿಗೂ ಭಯಪಟ್ಟು ನನ್ನನ್ನು ಸವರುತ್ತಿದ್ದಿತಲ್ಲಾ ! ಅಂತಹ ನನ್ನ ಮುದ್ದುಮರಿಯನ್ನು ನಾನು ತಿರುಗಿ ಕಾಣುವೆನೆ? ಒಮ್ಮೊಮ್ಮೆ ಆ ಮೃಗವು ಆಟಕ್ಕಾಗಿ ನಾನು ದರ್ಭೆಗಳಲ್ಲಿ ಮುಚ್ಚಿಟ್ಟ ಹವಿಸ್ಸುಗಳನ್ನು ಬಾಯಿಂದ ಕಡಿದು, ಅಶುದ್ಧ ವಾಗಿ ಮಾಡುವುದುಂಟು. ಅದಕ್ಕಾಗಿ ನಾನು ಕೋಪದಿಂದ ಗರ್ಜಿಸಿ ಹೆದರಿಸಿದಾಗ, ಆ ಕ್ಷಣವೇ ತನ್ನ ಆಟಗಳೆಲ್ಲವನ್ನೂ ಬಿಟ್ಟು ಜಿತೇಂದ್ರಿಯ ನಾದ ಋಷಿಕುಮಾರನಂತೆ ಸದ್ದಿಲ್ಲದೆ ನನ್ನ ಮುಂದೆ ಕುಳಿತಿರುವುದಲ್ಲಾ ! ಅಂತಹ ನನ್ನ ಮುದ್ದುಮಗುವು ಇನ್ನೂ ಏಕೆ ಬರಲಿಲ್ಲವೋ ಕಾಣೆನು." ಎಂದು ಆ ಮೃಗದ ಚಿಂತೆಯಿಂದ ವಿಲಪಿಸುತ್ತ, ಪರ್ಣಶಾಲೆಯನ್ನು ಬಿಟ್ಟು ಹೊರಗೆ ಬಂದನು. ಆಶ್ರಮದ ಹೊರಗೆ ಆ ಮೃಗದ ಹೆಜ್ಜೆಯ ಗುರುತು ಗಳಿಂದ ಕೂಡಿದ ಭೂಪ್ರದೇಶವನ್ನು ನೋಡಿ ಮತ್ತಷ್ಟು ದುಃಖದಿಂದ ಈ ಬಗೆಯಾಗಿ ವಿಲಪಿಸುವನು. "ಆಹಾ! ಈ ಭೂದೇವಿಯು ಎಂತಹ ಭಾಗ್ಯಶಾಲಿನಿಯೋ! ಆ ನನ್ನ ಮುದ್ದುಮೃಗದ ಅಂದವಾದ ಹೆಜ್ಜೆಯ ಗುರುತುಗಳನ್ನು ತನ್ನ ಮೈಗೆ ಭೂಷಣವಾಗಿ ಧರಿಸಿರುವ ಈ ಭೂದೇವಿಯು ಪೂರ್ವಜನ್ಮದಲ್ಲಿ ಎಷ್ಟು ಪುಣ್ಯವನ್ನು ಮಾಡಿದ್ದಳೋ? ಆಹಾ! ಈ ಪಾದ ರೇಖೆಗಳು ಎಷ್ಟು ಮಂಗಳಕರಗಳಾಗಿರುವುವು! ಅದರ ಪಾದರೇಖೆಗಳನ್ನು ಹೊತ್ತಿರುವ ಈ ಭೂಮಿಯಾದರೂ ನನಗೆ ಸರ್ವಸ್ವದಂತಿದ್ದ ಆ ಜಿಂಕೆಯ ಮರಿಯು ಹೋದ ದಾರಿಯನ್ನು ತೋರಿಸಿಕೊಡಬಾರದೇ? ಈ ಭೂ ಭಾಗವು ಆ ಕೃಷ್ಣಸಾರಮೃಗದ ಹೆಜ್ಜೆಯ ಗುರುತುಗಳಿಂದ ಅಲಂಕೃತವಾಗಿ ಯಜ್ಞಾದಿ ಕಾರ್ಯಗಳಿಂದ ಇಷ್ಟಸಿದ್ಧಿಯನ್ನು ಪಡೆಯುವುದಕ್ಕೆ ತಾನು ತಕ್ಕ ಸ್ಥಾನವೆಂದು ಚೆನ್ನಾಗಿ ತೋರಿಸುತ್ತಿರುವುದು. ಓಹೋ! ಇಂತಹ

ಬಡ ಪ್ರಾಣಿಗಳಲ್ಲಿ ಈ ಚಂದ್ರನು, ಒಂದು ವೇಳೆ ತಬ್ಬಲಿಯಾದ ಈ ಮೃಗ ಶಿಶುವನ್ನು ನೋಡಿ ಕನಿಕರಗೊಂಡು ಹುಲಿ ಮೊದಲಾದ ಕ್ರೂರ ಜಂತುಗಳ ಬಾಯಿಗೆ ಬೀಳದಂತೆ ರಕ್ಷಿಸುವುದಕ್ಕಾಗಿ ತನ್ನಲ್ಲಿ ಕರೆದಿಟ್ಟು ಕೊಂಡು ರಕ್ಷಿಸುತ್ತಿರಬಹುದೇ? ಆಹಾ ನನ್ನ ಮೇಲೆ ಬೀಳುವ ಈ ಬೆಳ ದಿಂಗಳು ಎಷ್ಟು ಸುಖಕರವಾಗಿರುವುದು? ಆ ಜಿಂಕೆಯನ್ನು ಕಾಣದ ದುಃಖವೆಂಬ ದಾವಾಗ್ನಿಯಿಂದ ಈ ನನ್ನ ಹೃದಯವು ದಗ್ಧವಾಗುತ್ತಿ ದ್ದರೂ, ಆ ಸಂಕಟವನ್ನೂ ಲಕ್ಷ್ಯಮಾಡದೆ ನಾನು ಆ ಜಿಂಕೆಯನ್ನು ಹುಡು ಕುವುದಕ್ಕಾಗಿ ಅಲೆಯುತ್ತಿರುವುದನ್ನು ನೋಡಿ ದಯಾಳುವಾದ ಆ ಚಂ ದ್ರನು ನನ್ನಲ್ಲಿ ಕನಿಕರಗೊಂಡು, ಪ್ರೀತಿಸೂಚಕವಾದ ಆನಂದಭಾಷ್ಪ ದಂತೆ ತಂಪಾಗಿಯೂ, ಅನುರಾಗವರ್ಧಕವಾಗಿಯೂ ಇರುವ ಅಮೃತ ಮಯವಾದ ಕಿರಣಗಳಿಂದ ನನ್ನ ತಾಪವನ್ನು ನೀಗಿಸುತ್ತಿರುವನು.''

(ಅಳಸಿಂಗ್ರಾಚಾರ್, ಗದ್ಯಾನುವಾದ)

ಶ್ರುತಿ ॥ "ಏವಂ ಅಘಟಮಾನಮನೋರಥಾಕುಲಹೃದಯೋ ಮೃಗದಾರಕಾಭಾ-ಸೇನ ಸ್ವಾರಬ್ಧಕರ್ಮಣಾ ಯೋಗಾರಂಭಣತೋ ವಿಭ್ರಂಶಿತಃ ಸ ಯೋಗ-ತಾಪಸಃ ಭಗವದಾರಾಧನಲಕ್ಷಣಾಚ್ಚ ಕಥಮಿತರತ್ ಜಾತ್ಯಂತರಃ ಏಣ-ಕುಣಕಃ ಅಸಂಗಃ ಸಾಕ್ಷಾತ್ ನಿಶ್ಶ್ರೇಯಸಪ್ರತಿಪಕ್ಷತಯಾ ಪ್ರಾಕ್ಪರಿತ್ಯಕ್ತ-ದುಸ್ತ್ಯಜಹೃದಯಾಭಿಜಾತಸ್ಯ ತಸ್ಯೈವಂ ಅಂತರಾಯವಿಹತಯೋಗಾ-ರಂಭಣಸ್ಯ ರಾಜರ್ಷೇಃ ಭರತಸ್ಯ ತಾವನ್ಮೃಗಾರ್ಭಕಪೋಷಣಪಾಲನ-ಲಾಲನಪ್ರೀಣನಲಾಲನಾನುಷಂಗೇಣ ಅವಿಗಣಯತ ಆತ್ಮಾನ ಮಹಿ ರಿವಾಖುಬಿಲಂ ದುರತಿಕ್ರಮಃ ಕಾಲಃ ಕರಾಳರಭಸಃ ಆಪದ್ಯತ♦ತದಾನೀ-ಮಪಿ ಪಾರ್ಶ್ವವರ್ತಿನ ಮಾತ್ಮಜ ಮಿವಾನುಶೋಚಂತಂ ತಂ ಅಭಿವೀಕ್ಷ-ಮಾಣೋ ಮೃಗ ಏವ ಅಭಿನಿವೇಶಿತಮನಾಃ ವಿಸೃಜ್ಯ ಲೋಕ ಮಿಮಂ ಸಹ ಮೃಗೇಣ ಕಳೇಬರಂ ಮೃತಮನು ನಮೃತಪೂರ್ವಜನ್ಮಾನುಸ್ಮೃತಿಃ ಇತರವನ್ಮೃಗಶರೀರ ಮವಾಪ ♦" (ವ್ಯಾಸಪ್ರಣೀತಂ ಶ್ರೀಮದ್ಭಾಗವತಂ)

ಹೀಗೆಂದು ಭರತನು ಹಲವು ಬಗೆಯ ಮನೋರಥಗಳಿಂದ ಕಳವಳಿಸಿ ರೋದಿಸುತ್ತಿದ್ದನು. ಆ ಜಿಂಕೆಯ ಮರಿಯೆಂಬ ಪ್ರಾರಬ್ಧಕರ್ಮವು ಆತನ ಯೋಗಮಾರ್ಗಕ್ಕೆ ವಿಘ್ನವುಂಟುಮಾಡಿದುದರಿಂದ, ಅವನು ನಡೆಸು

ತ್ತಿದ್ದ ಕರ್ಮಜ್ಞಾನ ಭಕ್ತಿಯೋಗಗಳೆಲ್ಲವೂ ಬಿಟ್ಟು ಹೋದವು. ಪ್ರಾರಬ್ಧ ಕರ್ಮವೆಂಬುದು ಯೋಗನಿಷ್ಠನಾದ ಭರತನಿಗೂ ಯಾವ ಸ್ಥಿತಿಯನ್ನು ತಂದಿಟ್ಟಿತು ನೋಡಿದಿರಾ? ಆ ಭರತನಿಗೆ ಈ ವಿಧವಾದ ಅವಸ್ಥೆಗಳೆಲ್ಲವೂ ಬಂದು ಸೇರುವುದಕ್ಕೆ ಅವನ ಪ್ರಾರಬ್ಧಕರ್ಮವೇ ಕಾರಣವು. ಇಲ್ಲದಿದ್ದರೆ ಮನುಷ್ಯಜಾತಿಯಲ್ಲಿ ಹುಟ್ಟಿದ ಭರತನಿಗೆ ವಿಜಾತೀಯವಾದ ಆ ಜಿಂಕೆಯಲ್ಲಿ ಅಷ್ಟೊಂದು ಮೋಹವುಂಟಾಗುತ್ತಿತ್ತೇ? ಮೋಕ್ಷವಿರೋಧಿಗಳೆಂಬ ಭಾವದಿಂದ ತನ್ನ ಹೆಂಡಿರುಮಕ್ಕಳನ್ನೇ ಬಿಟ್ಟು ಬಂದ ಭರತನು, ಆ ಕಾಡುಜಿಂಕೆಯನ್ನು ಬಿಟ್ಟಿರಲಾರದೆ ಸಂಕಟಪಡಬೇಕಾದರೆ, ಇದು ಅವನ ಪ್ರಾರಬ್ಧವಲ್ಲದೆ ಬೇರೇನು? ಆ ಜಿಂಕೆಯ ಮರಿಯಲ್ಲಿರುವ ಪ್ರೇಮವೆಂಬ ವಿಘ್ನದಿಂದ ತನ್ನ ಯೋಗಾಭ್ಯಾಸವೆಲ್ಲವೂ ನಷ್ಟವಾದರೂ ಅದನ್ನು ತಿಳಿಯಲಾರದೆ, ಯಾವಾಗಲೂ ಆ ಮೃಗಪೋತವನ್ನು ಮುದ್ದಾಡುತ್ತ ತನ್ನ ದೇಹವನ್ನೇ ತಾನು ಮರೆತಿದ್ದನು. ಹೀಗೆ ಎಚ್ಚರತಪ್ಪಿದ್ದ ಆ ಭರತನಿಗೆ ದುರ್ನಿವಾರವಾದ ಮೃತ್ಯುಕಾಲವು ಸಮೀಪಿಸಿತು. ಸರ್ಪವು ಮಹಾವೇಗದಿಂದ ಇಲಿಯ ಬಿಲವನ್ನು ಪ್ರವೇಶಿಸುವಂತೆ, ಮೃತ್ಯುವು ಅವನ ದೇಹವನ್ನೊಳಹೊಕ್ಕಿತು. ತನ್ನ ಮರಣಕಾಲದಲ್ಲಿಯೂ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಪಕ್ಕದಲ್ಲಿ ಕುಳಿತು ದುಃಖಿಸುತ್ತಿರುವ ಆ ಜಿಂಕೆಯ ಮರಿಯನ್ನು ನೋಡುತ್ತ ಅದರಲ್ಲಿಯೇ ನೆಟ್ಟಿಮನಸ್ಸುಳ್ಳವನಾಗಿ, ಆ ಮೃಗದ ಸಂಗಡಲೇ ತನ್ನ ದೇಹವನ್ನು ಬಿಟ್ಟನು. ಇದನ್ನು ☞ ಈ ಎದುರುಭಾಗದಲ್ಲಿರುವ ಪಠದಲ್ಲಿ ಕಾಣಿಸಿದೆಯಾಗಿ ಗಮನವಿಟ್ಟು ನೋಡಬೇಕು. ಅವನಿಗೆ ಪೂರ್ವಜನ್ಮ ಕರ್ಮವಾಸನೆಯು ಬಿಟ್ಟು ಹೋಗದುದರಿಂದಲೂ, ಅಂತ್ಯಕಾಲದಲ್ಲಿಯೂ ಅವನು ಮೃಗವನ್ನೇ ಸ್ಮರಿಸುತ್ತ ದೇಹವನ್ನು ಬಿಟ್ಟುದರಿಂದಲೂ "ಯಂ ಯಂ ವಾಽಪಿಸ್ಮರ್ನ ಭಾವಂ ತ್ಯಜತ್ಯಂತೇ ಕಳೇಬರಂ ♦ ತತ್ತದೇವೇತಿ ಕೌಂತೇಯ ಸದಾ ತದ್ಭಾವಭಾವಿತಃ" || ಎಂಬ ಹಿಂದೆ ಹೇಳಿದಂತೆ ಭಗವದ್ಗೀತಾ ವಾಕ್ಯಾನುಸಾರವಾಗಿ, ತಿರುಗಿ ಜಿಂಕೆಯ ರೂಪದಿಂದ ಹುಟ್ಟಿದನು. (ಗದ್ಯಾನುವಾದ)




ಜಡಭರತನು ಜಿಂಕೆಯ ಜನ್ಮವನ್ನು ಪಡೆಯಬೇಕಾಗಿತ್ತಾಗಿ, ಅವನು ಪ್ರಾಣಬಿಡುವಾಗ ತಾನು ಬೆಳೆಸುತ್ತಿದ್ದ ಜಿಂಕೆಯ ಮರಿಯ ರೂಪವನ್ನೇ ನೆನೆಸುತ್ತಿದ್ದನಾದುದರಿಂದ ಅದರ ರೂಪವು ಚಿತ್ರಗುಪ್ತಪಟದಲ್ಲಿ ಅವನೆದುರಿನಲ್ಲಿಕಾಣಿಸುತ್ತದೆ.

ಆ ಭರತನು ಆ ಜಿಂಕೆಯ ಜನ್ಮವನ್ನು ಹೊಂದಿದ್ದಾಗ್ಯೂ ತನ್ನ ಪೂರ್ವಜನ್ಮದಲ್ಲಿ ನಡೆಸಿದ ಭಗವದಾರಾಧನಾದಿ ಪುಣ್ಯಕರ್ಮಗಳ ಫಲ ದಿಂದ ತನ್ನ ಈರೀತಿಯಾದ ಜನ್ಮಕ್ಕೆ ಕಾರಣವನ್ನು ತಿಳಿದವನಾಗಿ ಅದ ಕ್ಕಾಗಿ ಮನಸ್ಸಿನಲ್ಲಿ ಹೀಗೆಂದು ಪರಿತಪಿಸುವನು. "ಅಯ್ಯೋ! ನಾನೆಷ್ಟು ದುರ್ಭಾಗ್ಯನು? ಮೊದಲು ನಾನು ಜ್ಞಾನಿಗಳ ಮಾರ್ಗವನ್ನವಲಂಬಿಸಿ ದ್ದರೂ ಮಧ್ಯೆ ಬಂದಂಥ ಮೃಗರೂಪವಾದ ವಿಘ್ನದಿಂದ ತಪ್ಪುಮಾರ್ಗ ವನ್ನು ಹಿಡಿದೆನು. ಇದಕ್ಕೆ ಹಿಂದಿನ ಜನ್ಮದಲ್ಲಿ ನಾನು ಸರ್ವಸಂಗಪರಿ ತ್ಯಾಗಮಾಡಿ ರಾಜ್ಯಕೋಶಗಳನ್ನು ಬಿಟ್ಟು ವಾನಪ್ರಸ್ಥ ಧರ್ಮದಿಂದ ಅರಣ್ಯದಲ್ಲಿ ಮುನಿಯಂತೆ ತಪೋಯೋಗಾದಿ ಭಗವದಾರಾಧನೆಗಳ ಕ್ರಮ ವನ್ನು ಸರಿಯಾಗಿ ಅನುಸರಿಸಿ ಪರಮಾತ್ಮನಲ್ಲಿ ಮನಸ್ಸನ್ನು ನೆಟ್ಟಿದ್ದೆನು. ಪರಿಶುದ್ಧವಾದ ಅಂತಹ ನನ್ನ ಮನಸ್ಸನ್ನು ಪರಮಾತ್ಮಧ್ಯಾನದಿಂದ ತಿರು ಗಿಸಿ ಜಿಂಕೆಯ ಮರಿಯಲ್ಲಿಟ್ಟೆನು. ಅದೇ ಈ ನನ್ನ ದುಸ್ಥಿತಿಗೆ ಕಾರಣ ವಾದುದು. ನಾನು ಎಂತಹ ಅವಿವೇಕಿಯು!" ಎಂದು ತನ್ನ ತಪ್ಪಿಗೆ ತಾನೇ ಪಶ್ಚಾತ್ತಾಪಪಡುತ್ತ ತಾನಿದ್ದ ಗುಂಪಿನಿಂದ ಹೊರಹೊರಟು ಉಳಿದ ವಿಷಯಗಳಲ್ಲಿ ಸಂಗವನ್ನು ತೊರೆದು, ತಾನು ವಾಸವಾಗಿದ್ದ ಕಾಲರಂಜ ವೆಂಬ ಪರ್ವತಪ್ರಾಂತದಿಂದ ಪ್ರಯಾಣ ಬೆಳೆಸಿ ಪೂರ್ವಜನ್ಮದಲ್ಲಿ ತಾನು ತಪಸ್ಸಿಗೋಸ್ಕರ ಹುಡುಕಿದ್ದ 'ಸಾಲಗ್ರಾಮ' ವೆಂಬ ಕ್ಷೇತ್ರಕ್ಕೆ ಬಂದು ಸೇರಿತು. 'ಪುಲಹಾಶ್ರಮ' ವೆಂದು ಕರೆಯಲ್ಪಡುವ ಆ ಪುಣ್ಯಕ್ಷೇತ್ರವು ಮಹರ್ಷಿಗಳಿಗೆ ನೆಲೆಮನೆ ಮತ್ತು ಸಿದ್ಧಾಶ್ರಮ. ಇಲ್ಲಿ ಏಕಾಕಿಯಾಗಿದ್ದು, ವಿಷಯಚಿಂತೆಗಳಿಗೆ ಅವಕಾಶಕೊಡದಂತೆ ಹೆದರಿಕೊಂಡಿದ್ದು, ತನ್ನ ಮರಣ ಸಮಯವನ್ನೇ ಎದುರು ನೋಡುತ್ತ, ಅತ್ತಿತ್ತ ಕದಲದೆ ತರಗೆಲೆಯನ್ನು ತಿಂದು ಭಗವಧ್ಯಾನತತ್ಪರತೆಯಿಂದ ಕಾಲವನ್ನು ಕಳೆಯುತ್ತಿತ್ತು. ಹೀಗಿರಲು ಒಂದುದಿನ ತನ್ನ ಪ್ರಾರಬ್ಧ ಕರ್ಮವು ಸವೆದು ಸಮೀಪದಲ್ಲಿದ್ದ ಒಂದಾನೊಂದು ನದಿಯಲ್ಲಿ ತನ್ನ ಅರ್ಧದೇಹವನ್ನು ಮುಳುಗಿಸಿಕೊಂಡಿರು ವಂತೆಯೇ ಆ ಮೃಗಕಳೇಬರವನ್ನು ತ್ಯಜಿಸಿಬಿಟ್ಟಿತು.

ಇದಾದಮೇಲೆ ಮರುಜನ್ಮದಲ್ಲಿ ತಾನು ಜಿಂಕೆಯ ಜನ್ಮವನ್ನು ಪಡೆದಾಗ ಭಗವದಾರಾಧನೆಯಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಯೋಗಸಿದ್ಧನಾದ ಮಹಾ ಯೋಗಿಯನ್ನೇ ಗುರಿಯಿಟ್ಟು ಪ್ರಾಣಬಿಟ್ಟದ್ದರಿಂದ ಅಂಗಿರಸನೆಂಬ ತಾಪಸೋತ್ತಮನಾದ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿದನು. ಹಾಗೆ ಹುಟ್ಟಿದಮೇಲೆ ಪೂರ್ವಜನ್ಮಕರ್ಮವಾಸನಾ ಬಲಿಯುದಿಂದ ಸದಾ ಆತ್ಮಾನುಭವನಿಷ್ಠೆಯಲ್ಲಿಯೇ ಇದ್ದು, ಸರ್ವಸಂಗಪರಿತ್ಯಾಗವನ್ನು ಮಾಡಿ ಯಾವ ಕಾರ್ಯಗಳನ್ನೂ ಮಾಡಲಿಚ್ಛಿಸದೆ ತನ್ನಲ್ಲಿಯೇ ತಾನು ಬ್ರಹ್ಮಾನಂದಸುಖವನ್ನನುಭವಿಸುತ್ತ ನೋಡುವವರಿಗೆ ಮಾತ್ರ ಹುಚ್ಚನಂತೆ ಕಾಣುತ್ತ ಕಾಲವನ್ನು ಕಳೆಯುತ್ತಿದ್ದನು. ವಿಷಯಗಳಲ್ಲಿ ಅನಾಸಕ್ತಿಯೂ, ಸದಾ ಅಂತರ್ಮುಖಿಯಾಗಿ ಬಹಿರ್ವ್ಯಾಪಾರಗಳಲ್ಲಿ ಗಮನವಿಲ್ಲದವನಾಗಿಯೂ, ತನ್ನನ್ನು ಹುಚ್ಚನೆಂದು ಹೊಡೆದು ಬೈದು ಮಾಡಿದರೂ ಆದಕ್ಕೆ ಗಮನಕೊಡದಂತೆ ವರ್ತಿಸುತ್ತಿರುವವನಾಗಿಯೂ, ಇದ್ದುದರಿಂದ ಇವನ ಬಂಧುಗಳೆಲ್ಲರೂ ಇವನಿಗೆ 'ಜಡಭರತ' 'ಜಡಭರತ' ಎಂದು ಹೆಸರಿಟ್ಟರು.

ಹೀಗೆ ಕೆಲವು ಸಂವತ್ಸರಗಳು ಕಳೆದ ಬಳಿಕ ಅವನ ತಂದೆತಾಯಿಗಳು ಪರಲೋಕವನ್ನೈದಿದರು. ಇದಾದಮೇಲೆ ಈ ಜಡಭರತನ ಮಲೆತಾಯಿಯ ಕುಮಾರರಾದ ಒಂಭತ್ತು ಮಂದಿಗಳೂ ಅಂತರ್ಮುಖಿಯಾದ ಈ ಯೋಗಿಯ ಪ್ರಭಾವವನ್ನರಿಯದೆ, ಮಡ್ಡಿಯೆಂದು ತಿಳಿದು, ಅವನಿಂದ ಮನೆಯ ಕೆಲಸಗಳನ್ನು ಮಾಡಿಸುತ್ತ, ಸ್ವಲ್ಪಮಟ್ಟಿಗೆ ಆಹಾರವನ್ನು ಕೊಟ್ಟು ಅವನನ್ನು ಹೊಲದ ಕಾವಲಿಗೆ ನಿಯಮಿಸಿದರು. ಹೀಗೆ ಹೊಲಗಾವಲಿನ ಕೆಲಸದಲ್ಲಿ ಆ ಭರತನು ಇದ್ದಾಗ, ಒಂದು ದಿನ ಸಿಂಧುಸೌವೀರ ದೇಶಾಧಿಪತಿಯಾದ 'ರಹೂಗಣ'ನೆಂಬ ರಾಜನು ಕಪಿಲ ಮಹಾಮುನಿಯಿಂದ ತತ್ವೋಪದೇಶವನ್ನು ಹೊಂದಲೆಣಿಸಿ, ಪಲ್ಲಕ್ಕಿಯಲ್ಲಿ ಕುಳಿತು ಬೋಯಿಗಳಿಂದ ಹೊರಿಸಿಕೊಂಡು, ಭರತನು ಕಾವಲಿದ್ದ ಹೊಲದ ಮಾರ್ಗವಾಗಿ ಹೋಗುತ್ತಿದ್ದನು. ಆ ಬೋಯಿಗಳು ದೃಢಶರೀರ (ಗಟ್ಟಿಮುಟ್ಟು) ನಾಗಿದ್ದ ಆ ಹೊಲಗಾವಲಿನ ಭರತನನ್ನು ಎಳೆದುಕೊಂಡು ಹೋಗಿ ಆ ಮೇನಾವನ್ನು ಹೊರುವಂತೆ ಮಾಡಿದರು. ಆಗ ಆ ಬ್ರಾಹ್ಮಣ

ನಿಗೆ ಅದೇ ಕಡೆಯಜನ್ಮವಾಗಿದ್ದುದರಿಂದ ಅಹಂಕಾರ ಮಮಕಾರವಿಲ್ಲದವನಾಗಿಯೂ, ಮಾಯಾಶೂನ್ಯನಾಗಿಯೂ ಇದ್ದು ಮೌನದಿಂದ, ಅಭ್ಯಾಸವಿಲ್ಲದಿದ್ದರೂ ಮೇನಾವನ್ನು ಹೊತ್ತುಕೊಂಡು ಹೋಗುತ್ತಿದ್ದನು. ಆ ಜಡನನ್ನು ಕುರಿತು ತನ್ನ ಕರ್ತವ್ಯವನ್ನು ಸರಿಯಾಗಿ ಮಾಡುತ್ತಿಲ್ಲವೆಂದು ಆ ರಾಜನು ಬ್ರಾಹ್ಮಣನ ಮೇಲೆ ಕೋಪಿಸಿಕೊಂಡು ಅವನನ್ನು ನಿಷ್ಠೂರವಾದ ಮಾತುಗಳಿಂದ ಹೀಗೆಂದು ದೂಷಿಸಿದನು. ಬೂದಿ ಮುಚ್ಚಿದ ಕೆಂಡದಂತೆ ಬ್ರಹ್ಮತೇಜಸ್ಸನ್ನು ಹೊರಕ್ಕೆ ಕಾಣಿಸದಿದ್ದ ಆ ಬ್ರಾಹ್ಮಣನನ್ನು ಕುರಿತು ರಜೋಗುಣದ ಬಲಿಯದಿಂದ ಹೀಗೆ ಆಕ್ಷೇಪಿದನು. "ಅಪ್ಪಾ, ಅಣ್ಣಾ! ಅಯ್ಯೋ ಪಾಪ! ಬಹುದೂರದಿಂದ ಪಲ್ಲಕ್ಕಿಯನ್ನು ನೀನೊಬ್ಬನೇ ತಂದು ಎಷ್ಟು ಬಳಲಿದೆಯೋ ಕಾಣೆನಲ್ಲಾ! ನಿನಗೆ ಕೈಕಾಲುಗಳೆಲ್ಲವೂ ಸೋತು ಹೋಗಿವೆಯಲ್ಲವೇ? ನೀನು ಹಣ್ಣು ಹಣ್ಣು ಮುದುಕ; ನಿನಗೆ ಕೈಲಾಗದು" ಎಂದು ಮೂದಲಿಸಿ ಮಾತನಾಡಿದನು. ಇದೆಲ್ಲವೂ ಕಿವಿಗೆ ಬೀಳುತ್ತಿದ್ದರೂ, ಭರತನು ಬಾಯೆತ್ತದೆ ಎಂದಿನಂತೆಯೇ ತನಗೆ ಬಂದಂತೆ ಹೊತ್ತುಕೊಂಡು ಹೋಗುತ್ತ ಮುಂದೆ ನಡೆದನು. ಆದರೆ ಜ್ಞಾನಿಯಾದ ಭರತನು, 'ತನಗೆ ಪ್ರಾಪ್ತವಾಗಿರುವ ಆ ಶರೀರಸಂಬಂಧವು ಕರ್ಮಮೂಲಕವಾದುದೇ ಹೊರತು ಸಹಜವಲ್ಲವೆಂದೂ, ಕರ್ಮಗಳ ಮೂಲಕವಾಗಿ ಪರಿಣಮಿಸಿದ ಪಂಚಭೂತಗಳೂ, ಶಬ್ದಾದಿ ವಿಷಯಗಳೂ ಕರ್ಮೇಂದ್ರಿಯಗಳಿಂದ ನಡೆಯತಕ್ಕ ನಡೆನುಡಿ ಮೊದಲಾದ ಕಾರ್ಯಗಳೂ, ಇಂದ್ರಿಯಗಳೂ, ಮನಸ್ಸೂ, ವಾಸನೆ ಇವೆಲ್ಲವೂ ಸೇರಿ ಈ ಶರೀರವೆಂಬ ಒಂದು ಗೂಡು ಏರ್ಪಟ್ಟಿರುವುದೆಂದೂ, ಇದು ಯಾವಾಗಲೂ ಒಂದು ನೆಲೆಯಲ್ಲಿ ನಿಲ್ಲದೆ ಬದಲಾಯಿಸುತ್ತಿರುವ ಸ್ವಭಾವವುಳ್ಳುದರಿಂದಲೇ ಅಸತ್ತೆನಿಸಿಕೊಂಡಿರುವುದೆಂದೂ, ಅದೇ ತನಗೆ ಕೊನೆಯ ಶರೀರವೇ ಹೊರತು ತಿರುಗಿ ತನಗೆ ಆ ವಿಧವಾದ ಶರೀರ ಸಂಬಂಧವಿಲ್ಲವೆಂದೂ ಚೆನ್ನಾಗಿ ತಿಳಿದವನಾದುದರಿಂದ, ಆ ಶರೀರದಲ್ಲಿಯಾಗಲಿ, ಆ ಶರೀರಸಂಬಂಧಗಳಲ್ಲಿಯಾಗಲಿ ಸ್ವಲ್ಪವೂ ಅಭಿಮಾನವಿಲ್ಲದಂತಿದ್ದನು. ಈ ವಿದ್ಯಾಭಿಮಾನವನ್ನು ಬಿಟ್ಟು, ಬ್ರಹ್ಮಸಾಯುಜ್ಯವನ್ನು ಪಡೆಯುವುದಕ್ಕೆ ಸಿದ್ಧನಾಗಿರುವುದರಿಂದಲೇ ಆ ರಾಜನ ತಿರಸ್ಕಾರವಾಕ್ಯಗಳಿಗೆ ಕಿವಿಗೊಡದೆ ಮೊದಲಿನಂತೆಯೇ ತನ್ನ ಕೆಲಸದಲ್ಲಿ ತಾನಿದ್ದನು."

ಸ್ವಲ್ಪಕಾಲದಲ್ಲಿಯೇ ವಕ್ರವಾಗಿ ನಡೆಯುತ್ತಿದ್ದ ಆ ಭರತನನ್ನು ಕುರಿತು ರಹೂಗಣನೆಂಬ ಆ ರಾಜನು ಮದಾಂಧನಾಗಿ ಮುಂದುಗಾಣದೆ ಪುನಃ ಈರೀತಿಯಾಗಿ ಆಕ್ಷೇಪಿಸಿದನು:—

'ಎಲಾ ಭರತಾ! ನನ್ನ ಮಾತಿಗೆ ಲಕ್ಷ್ಯಮಾಡದೆ ನಿನ್ನಿಚ್ಛೆಯಂತೆ ನಡೆಯುತ್ತಿರುವೆ. ತಿಂದುತಿಂದು ಕೊಬ್ಬಿದ್ದರೂ ಕೂಲಿ ಹೆಣದಂತೆ ಕೆಲಸ ಮಾಡುತ್ತೀಯಾ? ನಿನಗೆ ತಕ್ಕ ಶಿಕ್ಷೆಯನ್ನು ಮಾಡಿ ನಿನ್ನ ಕೊಬ್ಬನ್ನು ಮುರಿಯುವೆನು' ಎಂದು ಮನಸ್ಸು ಬಂದಂತೆ ರಾಜನು ಹರಟುತ್ತಿದ್ದರೂ, ಭರತನಿಗೆ ಕೋಪ ಬರಲಿಲ್ಲ. ಮತ್ತು ಪರಬ್ರಹ್ಮನನ್ನು ಸಾಕ್ಷಾತ್ಕರಿಸಿದವನಾಗಿಯೂ, ಬ್ರಹ್ಮಸ್ವರೂಪನಾಗಿಯೂ, ಸರ್ವಭೂತ ಸಮಚಿತ್ತನಾಗಿಯೂ ಮತ್ತು ಮಹಾನುಭಾವನಾಗಿಯೂ ಇದ್ದ ಆ ಭರತನು ಯೋಗಮಾರ್ಗವನ್ನೇ ತಿಳಿಯದ ಮೂಢನಾದ ಆ ರಾಜನಲ್ಲಿ ಕನಿಕರಗೊಂಡು ಹಸನ್ಮುಖಿಯಾಗಿ ಮೃದುವಾದ ಮಾತಿನಿಂದ ಈ ಮುಂದೆ ಹೇಳುವ ರೀತಿಯಾಗಿ ಹೇಳಿದನು. "ಓ ರಾಜೇಂದ್ರಾ! ರಹೂಗಣಾ! ಲೌಕಿಕ ದೃಷ್ಟಿಯಿಂದ ನೋಡಿದರೆ ನೀನು ಹೇಳಿದುದು ನಿಜವಾಗಿರಬಹುದು ಆದರೆ ತತ್ವವಿಚಾರವನ್ನು ಮಾಡಿದಲ್ಲಿ ನಿನ್ನ ಮಾತುಗಳು ಅಸಂಬದ್ಧಗಳಾಗುವುವು. ನೀನು ಮೋಹವೆಂಬ ಪಾಶಕ್ಕೆ ಸಿಕ್ಕಿ ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸುತ್ತಿರುವೆ. ಲೋಕದಲ್ಲಿ ಭಾರವನ್ನು ಹೊತ್ತವನಿಗೆ ಶ್ರಮವೇ ಹೊರತು ನನಗಿಲ್ಲ. ಏಕೆಂದರೆ, ಈಗ ನಾನು ಭಾರವನ್ನು ಹೊತ್ತವನಲ್ಲ. ಬೇಗ ಹೋಗಬೇಕೆಂದು ಹೇಳಿದೆಯೇ ಆ ಸ್ಥಳವಾವುದು? ಎಲ್ಲಿಗೆ ಹೋಗಬೇಕು? ಕೊಬ್ಬಿ ಬೆಳೆದವನೆಂದು ನನಗೆ ಹೇಳುತ್ತಿ. ದೇಹಕ್ಕೆ ಕೊಬ್ಬೇ ಹೊರತು ನನಗಿಲ್ಲ. ಆದ್ದರಿಂದ ನಡೆಯುವುದು, ಬೆಳೆಯುವುದು, ಹೊರುವುದು ನನಗೆ ಸಂಬಂಧಿಸಿದುವಲ್ಲ. ಆತ್ಮಸ್ವರೂಪವನ್ನು ತಿಳಿದವರ ಅಭಿಪ್ರಾಯವು ಇದೇ. ಇದೂ ಅಲ್ಲದೆ, ಬೆಳೆವುದು, ನಶಿಸುವುದು, ರೋಗ, ಮನಸ್ಸಂಕಟ, ಹಸಿವು ಬಾಯಾರಿಕೆ, ಭಯ, ಕಾಮಕ್ರೋಧಗಳು, ಮುಪ್ಪು, ನಿದ್ರೆ, ವಿಷಯಾಸಕ್ತಿ, ದುಃಖ, ಸುಖ, ಅಹಂಕಾರ, ಮೋಹ, ಮದ ಇವೇ ಮೊದಲಾದುವುಗಳು ದೇಹಕ್ಕೆ ಸಂಬಂಧಿಸಿದವುಗಳೇ ವಿನಹ ಆತ್ಮನಿಗಿಲ್ಲ. ಏಕೆಂದರೆ,ದೇಹಕ್ಕೆ ಹುಟ್ಟುಸಾವುಗಳುಂಟು;ಆತ್ಮನಿಗಿಲ್ಲ. ನೀನು ಸ್ವಾಮಿಯೂ

ಅಲ್ಲ, ನಾನು ಭೃತ್ಯನೂ ಅಲ್ಲ. ಈ ಸ್ವಾಮಿಭೃತ್ಯ ಸಂಬಂಧವು ಪರಮಾತ್ಮ ಜೀವಾತ್ಮರಿಗಿದ್ದು ಕಡೆಗೆ ಇವೆರಡೂ ಐಕ್ಯವಾಗುತ್ತವೆ. ಇದೇ ಪರಮ ಪದವಿ ಅಥವಾ ಮೋಕ್ಷ. ಹಿಂದಿನ ಕರ್ಮಫಲದಿಂದ ನಿನಗೆ ಈ ಜನ್ಮ ದಲ್ಲಿ ಸ್ವಾಮ್ಯತ್ವವೂ ನನಗೆ ಭೃತ್ಯತ್ವವೂ ದೊರಕಿರಬಹುದು. ಆದರೆ ಮುಂದಿನ ಜನ್ಮದಲ್ಲಿ ಈ ಸ್ಥಿತಿಯು ವ್ಯತ್ಯಾಸವನ್ನು ಹೊಂದಿ ನಾನು ರಾಜನೂ ನೀನು ದಾಸನೂ ಆಗಬಹುದು. ಆದುದರಿಂದ ಈ ವಿಧವಾದ ಸ್ಥಿತಿಯು ನಿತ್ಯವಲ್ಲ. ರಾಜೇಂದ್ರಾ! ನನ್ನಲ್ಲಿ ಕೋಪಿಸಬೇಡ, ಈ ಲೋಕ ದಲ್ಲಿ ರಾಜನಾರು? ಭೃತ್ಯನಾರು? ನೀನು ರಾಜನೂ ಅಲ್ಲ, ನಾನು ಭೃತ್ಯನೂ ಅಲ್ಲ. ನೀನು ದಂಡನೆಯನ್ನು ಮಾಡುವವನೂ ಅಲ್ಲ, ನಾನು ದಂಡ್ಯನೂ ಅಲ್ಲ. ಜೀವನಿಂದ ಕೂಡಿದ ಈ ದೇಹವನ್ನು ದಂಡಿಸಿದ್ದೇ ಆದರೆ ಅದ ರಿಂದ ನಿನಗಾಗುವ ಫಲವೇನು? ಕರ್ಮಶೇಷದಿಂದ ನಿನಗೆ ರಜೋಗುಣವು ಹೆಚ್ಚಾಗಿದ್ದರೂ ಆತ್ಮತತ್ವವನ್ನು ತಿಳಿಯುವುದಕ್ಕೆ ನೀನು ಅನರ್ಹನಲ್ಲ. ಅದರ ವಿಚಾರವನ್ನು ತಿಳಿಸುವ ಸಲುವಾಗಿಯೇ ನಿನಗೆ ಇಷ್ಟು ತಿಳಿಯ ಹೇಳಿದೆನು." ಎಂದು ಹೇಳಿದ ಈ ಮಹಾನುಭಾವನ ತತ್ವೋಪದೇಶಿಕ ವಾದ ವಾಕ್ಯಗಳನ್ನು ಕೇಳಿ ಆ ರಾಜನು ಪಲ್ಲಕ್ಕಿಯಿಂದ ಕೆಳಕ್ಕೆ ಧುಮುಕಿ, 'ಎಲೈ ಮಹಾತ್ಮಾ! ತಮೋಗುಣವೆಂಬ ಅಂಧಕಾರಕ್ಕೆ ಸಿಕ್ಕಿ ನಿನ್ನ ನಿಜ ಸ್ಥಿತಿಯನ್ನು ತಿಳಿಯದಿದ್ದೇನೆ. ವಜ್ರಾಯುಧಕ್ಕೂ ಹೆದರದ ನಾನು ಬ್ರಹ್ಮ ಜ್ಞಾನಿಗೆ ಮಾಡಿದ ಅವಮಾನವೆಂಬ ತೀಕ್ಷ್ಣಶಸ್ತ್ರಕ್ಕೆ ಹೆದರುತ್ತಿದ್ದೇನೆ. ನನ್ನ ತಪ್ಪುಗಳನ್ನೆಲ್ಲಾ ಮರೆತು ಕಪಿಲಮಹರ್ಷಿಯಿಂದ ತತ್ವೋಪದೇಶ ವನ್ನು ಪಡೆಯಬೇಕೆಂದು ಹೊರಟಿರುವ ನನ್ನನ್ನು ಸಂಸಾರ ಸಾಗರದಿಂದ ದಾಟಿಸುವ ಸಲುವಾಗಿ ನನಗೆ ತತ್ವೋಪದೇಶವನ್ನು ಮಾಡಿ ಉದ್ಧಾರ ಮಾಡು.' ಎಂದು ಕಾಲಿಗೆ ಬಿದ್ದು ಬೇಡಿಕೊಳ್ಳಲು, ಅದಕ್ಕೆ ಆ ಮಹಾತ್ಮ ನಾದ ಜಡಭರತನು ಒಪ್ಪಿ, ಆ ರಾಜನಿಗೆ ಬ್ರಹ್ಮಸಾಕ್ಷಾತ್ಕಾರಾದಿ ತತ್ವೋಪ ದೇಶಗಳನ್ನು ಮಾಡಿ ಅವನನ್ನು ಕೃತಾರ್ಥನನ್ನಾಗಿ ಮಾಡಿದನು.

"ಅಸಾರಂ ಸಂಸಾರಂ" ಎಂಬ ಮಹಾವಾಕ್ಯವನ್ನು ಹೇಳಿ ತತ್ವ ಜ್ಞಾನವನ್ನು ತಿಳಿಯಹೇಳಿದನು. ಆದುದರಿಂದ ಬ್ರಹ್ಮಜ್ಞಾನಸಂಪನ್ನ ರಾದ ಮಹಾನುಭಾವರು ಬೂದಿಮುಚ್ಚಿದ ಕೆಂಡದಂತೆ ಮತ್ತೊಬ್ಬರಿಗೆ

ತಮ್ಮ ನಿಜಸ್ಥಿತಿಯನ್ನು ತಿಳಿಯಪಡಿಸದೆಯೇ ಸಂಚರಿಸುತ್ತಲಿರುವರು. ಇಂತಹರ ಪ್ರಭಾವವನ್ನು ತಿಳಿದುಕೊಳ್ಳದೆ ಪಾಮರಜನರು ತಾವು ಮಾಡುತ್ತ ಬಂದ ವಿಷಯಗಳೇ ವಿಶೇಷ ಶ್ರೇಷ್ಠವಾದವುಗಳೆಂದು ನೆನೆಯುತ್ತಿರುವರು. ಇವರು ಆತ್ಮಾನುಭವನಿಷ್ಠೆಯೆಂಬುದನ್ನು ಪೂರ್ತಿಯಾಗಿ ಎಂದಿಗೂ ತಿಳಿಯಲಾರರು. ಈ ಪ್ರಪಂಚದಲ್ಲಿರುವ ಜನಗಳೆಲ್ಲರೂ ಈ ಆತ್ಮಾನುಭವ ವಿಷಯವನ್ನು ತಿಳಿದುಕೊಳ್ಳದೆ ಹಾಳಾಗುತ್ತಿದ್ದಾರೆ. ಆದುದರಿಂದ ಓ ಸಹೋದರ ಸಹೋದರಿಯರೇ! ಈಗ ತಿಳಿಯಹೇಳಿದ ವಿಷಯಗಳೆಲ್ಲವನ್ನೂ ಗ್ರಹಿಸಿದಿರಲ್ಲವೇ? ಇನ್ನಾದರೂ ಬುದ್ಧಿ ತಂದುಕೊಂಡು, ಪ್ರತಿಯೊಬ್ಬರೂ ಮೋಕ್ಷಪದವಿಗೆ ಬೇಕಾದ ಪ್ರಯತ್ನವು ಯಾವುದೋ ಅದಕ್ಕಾಗಿ ಯತ್ನಿಸಬೇಕೇ ಹೊರತು, ಕೆಲವು ದಿನಗಳಲ್ಲಿಯೇ ನಶಿಸಿ ಹೋಗುವ ಭಾರ್ಯಾಪುತ್ರಧನಧಾನ್ಯಾದಿ ಐಶ್ವರ್ಯಗಳಿಗಾಗಿ ಪಾಟುಬೀಳುತ್ತಿರುವುದರಿಂದ ಯಾವುದೊಂದು ಪ್ರಯೋಜನವೂ ಲಭಿಸದು, ಎಂದು ತಿಳಿಯಿರಿ. ಆದುದರಿಂದ ಜೀವಿಗಳೆಲ್ಲರೂ ಮಾಡುವಂಥ ಪುಣ್ಯಪಾಪಗಳೆಂಬ ಎರಡು ಕರ್ಮಫಲಗಳು ಆಯಾ ಜೀವಿಗಳಲ್ಲಿ ಸಾಕ್ಷಿಸ್ವರೂಪವಾಗಿರುವ ಆತ್ಮನನ್ನು ಎಂದಿಗೂ ಅಂಟಲಾರವು. ಇದಕ್ಕೆ ಕಠೋಪನಿಷದ್ವಾಕ್ಯವನ್ನು ಈ ಕೆಳಗೆ ಪ್ರಮಾಣವಾಗಿ ಕೊಟ್ಟಿದೆ.

ಶ್ರುತಿ ॥ 'ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷು ರ್ನ ಲಿಪ್ಯತೇ ಚಾಕ್ಷುಷೈ
ರ್ಬಾಹ್ಯದೋಷೈಃ ♦ ಏಕ ಸ್ಥಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ
ಲೋಕದುಃಖೇನ ಬಾಹ್ಯಃ ♦' (ಕಠೋಪನಿಷತ್ತು 5ನೇ ವಲ್ಲೀ 11ನೇ ವಾಕ್ಯ)

As the Sun, the eye of the whole world is never contaminated by the external ocular impurities, so the Atman, that resides in all beings, is never touched by the miseries of the world, (as it is) beyond (the world.)

Note :—The light of the Sun makes everything Visible, yet, it is not contaminated by the defects of the objects it illumines; so the transcendental Atman making every life possible by its existance, remains untouched by the miseries

of the world, i. e, by the Karma and the bondages in life it entails. It is the inscrutable Avidya or the Nescience that has superimposed the phenomena of personality and the world—the Subject and the Object-upon the transcendental Atman just as the phenomenon of snake is superimposed upon a piece of rope when seen in the dark or dim light through ignorance; and as such, the superimposition does not affect in the least the real nature of the Atman, as the rope is never really affected by the snake-imposition.

(Swami Sharvananda)

ಲೋಕದಲ್ಲಿರುವ ಸಮಸ್ತ ಜೀವರಾಶಿಗಳ ಹೃದಯಕಮಲದಲ್ಲಿ ಸಾಕ್ಷಿಭೂತನಾಗಿ ಬೆಳಗುತ್ತಿರುವ ಆತ್ಮನಿಗೆ ಆಯಾ ಜೀವಿಗಳು ಮಾಡುವಂಥ ಪುಣ್ಯಪಾಪಗಳು ಅಂಟಲಾರವು. ಅದು ಹೇಗೆಂದರೆ, ಸೂರ್ಯರಶ್ಮಿಗಳು ಶುದ್ಧಾಶುದ್ಧವಸ್ತುಗಳಮೇಲೆ ಪಸರಿಸಿದ್ದರೂ, ಆ ಶುದ್ಧಾಶುದ್ಧ ವಸ್ತುಗಳಿಗಿರುವ ಗುಣದೋಷಗಳ ವಾಸನೆಗಳು ಆ ಸೂರ್ಯನಿಗೆ ಯಾವ ರೀತಿಯಲ್ಲಿ ಅಂಟವೋ, ಅದೇರೀತಿಯಲ್ಲಿ ಆಯಾ ಜೀವಿಗಳು ಮಾಡುವಂಥ ಪುಣ್ಯಪಾಪಕರ್ಮಗಳು ಆತ್ಮನನ್ನು ಎಂದಿಗೂ ಅಂಟಲಾರವು. ಆತ್ಮನು ಪರಿಶುದ್ಧಮೂರ್ತಿಯಾಗಿದ್ದಾನೆ. ಆ ಆತ್ಮನು ಎಂತಹನೆಂದರೆ,

ಶ್ಲೋ ॥ ಆನಂದಂ ನಿರ್ಮಲಂ ಶಾಂತಂ ♦ ನಿರ್ವಿಕಾರಂ ನಿರಂಜನಂ ।
ಸರ್ವವ್ಯಾಪಿನ ಮಾತ್ಮಾನಂ ♦ ಸ್ವಪ್ರಕಾಶ ಮಕಲ್ಮಷಂ ॥

(ಅಧ್ಯಾತ್ಮ ರಾಮಾಯಣ)

ಎಂಬಂತೆ ಆತ್ಮನು ಆನಂದಸ್ವರೂಪನಾದವನು, ಪರಿಶುದ್ಧಾತ್ಮನು, ಶಾಂತಸ್ವರೂಪಿಯು, ವಿಕಾರರಹಿತನು, ಪುಣ್ಯಪಾಪವೇ ಮೊದಲಾದ ದ್ವಂದ್ವ ಕರ್ಮವಾಸನೆಗಳಿಂದ ಅಂಟಲ್ಪಡದವನು. ಸರ್ವವ್ಯಾಪಿ, ಕಲ್ಮಷ ರಹಿತನು ಮತ್ತು ಸ್ವಪ್ರಕಾಶನು. ಆದುದರಿಂದ ನಾವು ಮಾಡುವ ಸಮಸ್ತ ಕರ್ಮಗಳನ್ನು ನಿಷ್ಕಲ್ಮಷವಾದ ಬುದ್ಧಿಯಿಂದ ಇಂತಹ ಆತ್ಮನಿಗೆ ಅರ್ಪಿಸಿದ್ದೇ ಆದರೆ, ಆ ಕರ್ಮಫಲಗಳು ಕರ್ಮವನ್ನು ಮಾಡುವವನಿಗೆ ಸೇರವೆ

ಈಶ್ವರನನ್ನೇ ಹೊಂದುತ್ತವೆ. ಅಂದರೆ ಈಶ್ವರಾರ್ಪಣ ಬುದ್ಧಿಯಿಂದ ಸಮಸ್ತ ಕರ್ಮಗಳನ್ನೂ ಮಾಡಿದ್ದೇ ಆದರೆ, ಅದರಿಂದಾಗುವ ಪುಣ್ಯಪಾಪ ಕರ್ಮವಾಸನೆಗಳು ಜೀವಿಯನ್ನು ಅಂಟಲಾರವು. ಇಂತಹ ಪುಣ್ಯಪಾಪ ಕರ್ಮಫಲಗಳು ಜೀವಿಗೆ ಎಂದಿಗೆ ಸೇರುವುದಿಲ್ಲವೋ, ಆಗಲೇ ಆ ಜೀವಿಯು ಪರಮಾತ್ಮನಲ್ಲಿ ಐಕ್ಯನಾಗುತ್ತಾನೆ ಎಂದರೆ ಮೋಕ್ಷವನ್ನು ಪಡೆಯುತ್ತಾನೆ.

ಶ್ರುತಿ ॥ " ಯಚ್ಚಿತ್ತ ಸ್ತೇನೈಷ ಪ್ರಾಣ ಮಾಯಾತಿ ♦ ಪ್ರಾಣ ಸ್ತೇಜಸಾ
ಯುಕ್ತಃ ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ ♦ "
" ಯ ಏವಂ ವಿದ್ವಾನ್ ಪ್ರಾಣಂ ವೇದ ♦ ನ ಹಾಸ್ಯ ಪ್ರಜಾ
ಹೀಯತೇಽಮೃತೋ ಭವತಿ ♦ ತದೇಷ ಶ್ಲೋಕಃ ♦ "

ಶ್ಲೋ ॥ " ಉತ್ಪತ್ತಿ ಮಾಯತಿಂ ಸ್ಥಾನಂ ♦ ವಿಭುತ್ವಂ ಚೈವ ಪಂಚಧಾ ।
ಅಧ್ಯಾತ್ಮಂ ಚೈವ ಪ್ರಾಣಸ್ಯ ♦ ವಿಜ್ಞಾಯಾಮೃತ ಮಶ್ನುತೇ ॥ "

(ಪ್ರಶ್ನೋಪನಿಷತ್ತು, 3ನೇ ಪ್ರಶ್ನೆ 10, 11-12ನೇ ವಾಕ್ಯಗಳು)

" One enters into life with that, of which his mind is full. The life joined with his heat, leads him with the Atman to whatever world is desired by him."

" He really knows who knows life in this way. His offspring is not lost. He becomes immortal. About this, there is the following verse."

" The source, the entrance, the location, the fivefold pervading and the relation to the self, of life, knowing these, one obtains immortality." (H. R. Bhagavat)

" ಜೀವಿಯು ಈ ಪ್ರಪಂಚವನ್ನು ಪ್ರವೇಶಿಸುವಾಗ ಹಿಂದಿನ ಜನ್ಮದ ಅವಸಾನಕಾಲದಲ್ಲಿ ಯಾವುದನ್ನು ತಾನು ನೆನೆಸುತ್ತಿದ್ದನೋ, ಅವುಗಳಿಂದ ಪರಿಪೂರ್ಣವಾದ ಮನಸ್ಸಿನಿಂದಲೇ ಕೂಡಿರುತ್ತಾನೆ. ಈ ಬಗೆಯಾದ ಮನೋಸ್ಥಿತಿಯು ಆತ್ಮನಿಂದೊಡಗೂಡಿ ಅವನಿಚ್ಛಿಸಿದ ಜನ್ಮವನ್ನೇ ಕೊಡುತ್ತದೆ."

"ಈ ಬಗೆಯಾದ ಜನ್ಮರಹಸ್ಯವನ್ನು ಯಾವನು ತಿಳಿದಿರುತ್ತಾನೆಯೋ ಅವನೇ ವಿವೇಕಿ. ಅವನ ಸಂತತಿಯು ಎಂದಿಗೂ ನಷ್ಟವಾಗದು ಅವನೇ ಮರಣಾತೀತನು. ಈ ವಿಷಯವಾಗಿ ಈ ಮುಂದಿನ ಶ್ಲೋಕವು ಹೇಳಲ್ಪಟ್ಟಿದೆ."

"ಪ್ರಾಣದ ಉತ್ಪತ್ತಿ, ಪ್ರವೇಶ, ಸ್ಥಾನ, ಸ್ವಾಮಿತ್ವ ಮತ್ತು ಅಧ್ಯಾತ್ಮಗಳೆಂಬ ಐದು ವಿಧವಾದ ಸ್ಥಿತಿಯನ್ನು ಯಾವನು ತಿಳಿಯುತ್ತಾನೆಯೋ ಅವನೇ ಶಾಶ್ವತವಾದ ಮೋಕ್ಷಪದವಿಯನ್ನು ಪಡೆಯುವವನು."

ಆದುದರಿಂದ ಮೇಲೆ ಹೇಳಿದ ಶ್ರುತಿ ವಾಕ್ಯಗಳಿಗನುಗುಣವಾಗಿ ಸಕಲ ಕಾರ್ಯಗಳನ್ನೂ ಈಶ್ವರಾರ್ಪಣ ಮಾಡಬೇಕು. ಪ್ರಾಣಪ್ರಯಾಣಕಾಲದಲ್ಲಿ ಮನಸ್ಸು, ಕುಟುಂಬವ್ಯವಹಾರಾದಿಗಳೊಳಗೆ ಯಾವುದನ್ನು ಮುಖ್ಯವಾಗಿ ಸ್ಮರಿಸುತ್ತಿರುತ್ತದೆಯೋ ಅದಕ್ಕೆ ತಕ್ಕ ಜನ್ಮವೇ ಆ ಜೀವಿಗೆ ದೊರಕುತ್ತದೆಂದು ಹಿಂದೆ ಹೇಳಿದ "ಲಕ್ಷಾಧಿಪತಿ, ಜಡಭರತ" ವೊದಲಾದ ದೃಷ್ಟಾಂತಗಳಿಂದ ವ್ಯಕ್ತಪಡಿಸಿದೆ. ಆದುದರಿಂದ ಪ್ರತಿ ಜೀವಿಯೂ ಸಮಸ್ತಕರ್ಮಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ಮಾಡುತ್ತ, ಸದಾ ಈಶ್ವರಧ್ಯಾನದಲ್ಲಿಯೇ ನಿರತನಾಗಿರುತ್ತ ಬಂದದ್ದೇ ಆದರೆ ಈ ದೃಢಾಭ್ಯಾಸದ ದೆಸೆಯಿಂದ ಮರಣಕಾಲದಲ್ಲಿ ಪರಬ್ರಹ್ಮನಲ್ಲಿಯೇ ಲೀನವಾಗಿ ಆ ಪರಬ್ರಹ್ಮಸ್ವರೂಪವನ್ನೇ ಜೀವಿಯು ಹೊಂದುತ್ತಾನೆ. ಆ ಜೀವಿಗಳಿಗೆ ಈ ಮನಸ್ಸಿನ ಕೋರಿಕೆಗಳೇ ಬೀಜಗಳಾಗಿದ್ದು ಹುಟ್ಟುಸಾವುಗಳನ್ನು ದೊರಕಿಸುತ್ತವೆ. ಆದುದರಿಂದ,

ಶ್ರುತಿ ॥ ನ ಹಿ ಪ್ರಯಾಣಂ ಜಂತೂನಾ ♦ ಮುತ್ತರಕ್ಷಣಜೀವಿತಂ ।
ಚರಮುಶ್ವಾಸವೇಳಾಯಾಂ ♦ ಯತ್ಕೃತಂ ತತ್ಸದಾ ಕುರು ॥

ಲೋಕದಲ್ಲಿ ಸಮಸ್ತ ಜನಗಳೂ, ಇನ್ನು ಒಂದು ಕ್ಷಣಕಾಲದ ವರಿವಿಗೂ ಸ್ಥಿರವಾಗಿ ಜೀವಿಸಿರೋಣವೆಂದು ಮನಸ್ಸಿನಲ್ಲಿ ಕೋರುವುದಕ್ಕೆ ಸಾಧ್ಯವಿಲ್ಲ. ಯಾವಾಗಲೋ ತನಗೆ ತಿಳಿಯದೆ ಇರುವ ರೀತಿಯಲ್ಲಿ ಮರಣವುಂಟಾಗಿ ಪ್ರಾಣವು ದೇಹವನ್ನು ಬಿಟ್ಟು ಹೊರಹೊರಡುತ್ತದೆ. ಆದುದ

ರಿಂದ ದೇಹದಲ್ಲಿ ಉಚ್ಛ್ವಾಸನಿಶ್ವಾಸಗಳು ಮೂಗಿನ ಹೊಳ್ಳೆಗಳ ಮೂಲಕ ನಡೆಯುತ್ತಿರುವಾಗ, ಪ್ರತಿಯೊಬ್ಬ ಸ್ತ್ರೀಪುರುಷರೂ ಪ್ರಾಣ ಹೋಗುವುದಕ್ಕೆ 'ಇದೇ ಕಡೆಯ ಶ್ವಾಸ, ಇದೇ ಕಡೆಯ ಶ್ವಾಸ'ವೆಂದು ಮನಸ್ಸಿನಲ್ಲಿ ನೆನೆಯುತ್ತ, ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಈ ಗ್ರಂಥದಲ್ಲಿ ಹೇಳಿರುವ ಬ್ರಹ್ಮಾನುಸಂಧಾನವನ್ನೇ ಅಂದರೆ 'ಸೋಽಹಂ' ಮಂತ್ರವನ್ನು ಹೇಗೆ ಜಪಿಸಬೇಕೆಂಬ ವಿಷಯವನ್ನು ಚನ್ನಾಗಿ ತಿಳಿದು ಹಿಂದೆ ಹೇಳಿದಂತೆ ನಡೆಸಬೇಕು. ಇದೇ ವಿಷಯವನ್ನು ಅಮೂಲಾಗ್ರವಾಗಿ ಇನ್ನು ಮುಂದೆ 'ಶಿವರಾಜಯೋಗ ಸಮಾಧಿ, ಇದನ್ನು ಜಪಿಸುತ್ತಿರಬೇಕು' ಎಂಬ ವಿಷಯ ಸೂಚಿಕೆಯ ಅಧ್ಯಾಯದಲ್ಲಿ ತಿಳಿಯಪಡಿಸುತ್ತದೆ. ಅಲ್ಲಿ ಹೇಳಿರುವ ಕ್ರಮದಂತೆ ಈ ಗ್ರಂಥವನ್ನು ಪಠಿಸುವವರೆಲ್ಲರೂ 'ಸೋಽಹಂ' ಮಂತ್ರವನ್ನು ಒಂದೇ ಮನಸ್ಸಿನಿಂದ ಜಪಿಸುತ್ತ ಬಂದಲ್ಲಿ ಅಂತಹರಿಗೆ ಮರುಜನ್ಮದಲ್ಲಿ ಯಾವ ಸಂಸಾರತಾಪತ್ರಯಗಳೂ ಉಂಟಾಗಲಾರವು.

ಶ್ರುತಿ ॥ ಯಸ್ಯ ವಾಙ್ಮನಸೀ ಶುದ್ಧೇ ♦ ಸಮ್ಯಕ್ಯುದ್ಧೇ ಚ ಸರ್ವದಾ ।
ಸ ವೈ ಸರ್ವ ಮವಾಪ್ನೋತಿ ♦ ವೇದಾಂತೋಪಗತಂ ಫಲಂ ॥

(ನಾರದಪರಿವ್ರಾಜಕೋಪನಿಷತ್ತು)

ಯಾವಾತನ ವಾಕ್ಕು ಮತ್ತು ಮನಸ್ಸು ಶುದ್ಧವಾಗಿರುತ್ತದೆಯೋ ಅಂದರೆ, ವಾಕ್ಕು ಮೌನವಾಗಿಯೂ, ಮನಸ್ಸು ಅತ್ತಿತ್ತ ಕದಲದೆಯೂ ಮತ್ತು ಕಣ್ಣು, ಮೂಗು, ಬಾಯಿ, ಕಿವಿ, ಚರ್ಮಗಳೆಂಬ ಪಂಚೇಂದ್ರಿಯಗಳು ತಮ್ಮ ಇಷ್ಟಾನುಸಾರವಾಗಿ ಹೋಗದೆ ನಿಂತು ಪರಿಶುದ್ಧವಾಗಿರುವುವೋ, ಆತನಿಗೆ ವೇದಾಂತದಲ್ಲಿ ಪ್ರತಿಪಾದಿತವಾದ ಆತ್ಮಾನುಭವದ ಫಲವು ಸಿದ್ಧಿಸುವುದು. ಹೀಗೆ ಅದು ಸಿದ್ಧಿಸಿದ ಬಳಿಕ,

ಶ್ರುತಿ ॥ 'ಯಥಾ ಜಲೇ ಜಲಂ ಕ್ಷಿಪ್ತಂ ♦ ಕ್ಷೀರಂ ಕ್ಷೀರೇ ಘೃತಂ ಘೃತೇ ।
ಅವಿಶೇಷೋ ಭವೇತ್ ತತ್ವಂ ♦ ಜೀವಾತ್ಮ ಪರಮಾತ್ಮ ನೋಃ ॥'
'ಯಥೋದಕೇ ತೋಯ ಮನುಪ್ರವಿಷ್ಟಂ ♦
ತದಾತ್ಮ ರೂಪೋ ನಿರುಪಾಧಿ ಸಂಸ್ಥಿ ರಃ ♦' (ಪೈಂಗಳೋಪನಿಷತ್ತು)

ಜಲದಲ್ಲಿ ಜಲವೂ, ಹಾಲಿನಲ್ಲಿ ಹಾಲೂ, ತುಪ್ಪದಲ್ಲಿ ತುಪ್ಪವೂ ಬೆರೆತು ಏಕವಾಗುವಂತೆ, ಶರೀರವು ನಶಿಸಿದ ತಕ್ಷಣವೇ ಜೀವೋಪಾಧಿ ಅಂದರೆ ಸಂಕಲ್ಪಸ್ವರೂಪವಾದ ಮನಸ್ಸೂ ನಶಿಸಿಹೋಗಿ ಜೀವಾತ್ಮನು ಪರಮಾತ್ಮನಲ್ಲಿ ಬೆರೆತು ಏಕವಾಗಿ ಹೋಗುತ್ತದೆ. ಈರೀತಿಯಾಗಿ ಬೆರೆಯುವುದೇ ಅಂದರೆ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯವಾಗುವುದೇ ವಿದೇಹ ಮುಕ್ತಿಯೆಂದು ಹೇಳಲ್ಪಡುವಂಥದು.

# ಸಂಪ್ರಜ್ಞಾತ ಸಮಾಧಿ ಮತ್ತು ಅಸಂಪ್ರಜ್ಞಾತ ಸಮಾಧಿ.

ಶ್ರುತಿ ॥ ಸಂಪ್ರಜ್ಞಾತಸಮಾಧಿಃ ಸ್ಯಾತ್ ♦ ಧ್ಯಾನಾಭ್ಯಾಸಪ್ರಕರ್ಷತಃ ।
ಪ್ರಶಾಂತವೃತ್ತಿಕಂ ಚಿತ್ತಂ ♦ ಪರಮಾನಂದದೀಪಕಂ ॥

(ಮುಕ್ತಿಕೋಪನಿಷತ್ತು)

ನಾನೇ ಬ್ರಹ್ಮವು, ಬ್ರಹ್ಮವೇ ನಾನು ಎಂದು ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಶ್ವಾಸವು ತನಗೆ ತಾನೇ ಜಪಿಸುತ್ತಿರುವ 'ಸೋऽಹಂ' ಮಂತ್ರವನ್ನು ಸ್ತ್ರೀಪುರುಷರು ಮನಸ್ಸಿನಲ್ಲಿ ನೆನೆಯುತ್ತಾ ಶ್ವಾಸದೊಡನೆ ಸೇರಿಸಿ ಜಪಿಸುತ್ತಾ ಬರಬೇಕು. ಹೀಗೆ ಜಪಿಸುತ್ತಾ ಬರುವಿಕೆಯೇ 'ಸಂಪ್ರಜ್ಞಾತಸಮಾಧಿ' ಎಂದು ಹೇಳಲ್ಪಡುವಂಥದು. ಮೇಲೆ ಹೇಳಿದ 'ಸೋऽಹಂ' ಮಂತ್ರದ ರಹಸ್ಯವನ್ನು ಗುರುಮುಖದಿಂದ ತಿಳಿಯಬೇಕಾಗಿರುವುದರಿಂದ ಮೇಲಿನ ಶ್ರುತಿಯು ಆ ವಿಷಯವನ್ನು ವ್ಯಕ್ತಪಡಿಸಿಲ್ಲವು.

ಶ್ರುತಿ ॥ 'ಅಸಂಪ್ರಜ್ಞಾತನಾಮಾಯಂ ♦ ಸಮಾಧಿ ರ್ಯೋಗಿನಾಂ ಪ್ರಿಯಃ ।
ಪ್ರಭಾಶೂನ್ಯಂ ಮನಶ್ಶೂನ್ಯಂ ♦ ಬುದ್ಧಿಶ್ಶೂನ್ಯಂ ಚಿದಾತ್ಮಕಂ' ॥

'ನಾನೇ ಬ್ರಹ್ಮನು, ಬ್ರಹ್ಮನೇ ನಾನು' ಎಂಬುವ 'ಸೋऽಹಂ' ಮಂತ್ರವನ್ನು ಜಪಮಾಡುವುದನ್ನು ಬಿಟ್ಟು, ಮನಸ್ಸು ಬುದ್ಧಿ ಇವೆರಡನ್ನೂ ಮರೆತು ಮತ್ತಾವುದೂ ಇಲ್ಲದ ರೀತಿಯಲ್ಲಿ ಶೂನ್ಯವಾಗಿ ಮಾಡಿ ಅಂದರೆ ಸಮಸ್ತ ಕೋರಿಕೆಗಳನ್ನೂ ಮರೆತು, ತಾನೇ ತಾನಾಗಿ ಅಂದರೆ ತನ್ಮಯವಾಗಿ ಕೇವಲ ಚಿನ್ಮಾತ್ರ ಸಾಕ್ಷಿಯಾಗಿರುವುದೇ 'ಅಸಂಪ್ರಜ್ಞಾತ ಸಮಾಧಿ' ಯೆಂದೂ, 'ನಿರ್ವಿಕಲ್ಪಸಮಾಧಿ' ಯೆಂದೂ ಹೇಳಲ್ಪಡುತ್ತದೆ. ಈ ವಿಷಯವನ್ನು ಕುರಿತು ಇನ್ನು ಮುಂದೆ ಮತ್ತೊಂದು ವೇಳೆ ವಿಶದಪಡಿಸುವುದಾಗಿದೆ. ಪಾಠಕರ ಮನಸ್ಸಿಗೆ ಚನ್ನಾಗಿ ಗ್ರಾಹ್ಯವಾಗಬೇಕೆಂಬ ಉದ್ದೇಶದಿಂದ ಮುಖ್ಯವಿಷಯಗಳನ್ನು ಈ ಗ್ರಂಥದಲ್ಲಿ ಅಲ್ಲಲ್ಲಿ ಪುನಃಪುನಃ ಹೇಳಿದೆ. ಆದುದರಿಂದ ಹಿಂದೆ ಹೇಳಿದ ಪುಣ್ಯಪಾಪಗಳ ವಿಷಯವನ್ನು ಕುರಿತು ಈ ಕೆಳಗೆ ಇನ್ನೊಂದು ವೇಳೆ ಮತ್ತಷ್ಟು ಒತ್ತಿ ಈ ಮುಂದೆ ಹೇಳಿದೆ.

ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯಪಾಪಗಳೊಳಗೆ ಹಿಂದಿನ ಜನ್ಮದಲ್ಲಿ ಅನುಭವಿಸದೆ ಮಿಕ್ಕಿರುವ ಪುಣ್ಯಪಾಪಗಳೆಂಬ ಕರ್ಮಗಳಿಗೆ 'ಸಂಚಿತ' ವೆಂಬ ಹೆಸರು ಬಂದಿದೆ. ಈ ಸಂಚಿತವು ನಶಿಸಿದ ಹೊರತು ಜೀವಿಗಳು ಮೋಕ್ಷವನ್ನು ಹೊಂದಲಾರರು. ಆದುದರಿಂದ ಸಂಚಿತವುಳ್ಳವರು ಅನೇಕ ವೇಳೆ ಜನ್ಮಗಳನ್ನೆತ್ತುತ್ತಲೇ ಬರಬೇಕು. ಈ ಸಂಚಿತವನ್ನು ನಾಶ ಮಾಡುವ ಶಕ್ತಿಯು ಪ್ರಾಣಾಯಾಮಕ್ಕೆ ಮಾತ್ರವೇ ಉಂಟು. ರಾಜಯೋಗವು, ಪಂಚ ಮುದ್ರೆಗಳು, ಪಂಚಾಕ್ಷರೀ ಮಂತ್ರಗಳು, 'ಸೋऽಹಂ' ಮಂತ್ರಜಪವು, ಶ್ರೀರಾಮ ಮಂತ್ರಜಪವು, ಇವೆಲ್ಲವೂ ಮೇಲೆ ಹೇಳಿದ ಯೋಗಸಿದ್ಧಿಗೆ ಕಾರಣಗಳು. ಮಂತ್ರಗಳನ್ನು ಜಪಮಾಡಿ ಅವುಗಳಲ್ಲಿ ಸಿದ್ಧಿಹೊಂದಿದ್ದೇ ಆದರೆ, ಮುಂದಿನ ಜನ್ಮದಲ್ಲಿ ಯೋಗಸಾಧನೆಗೆ ಪ್ರಯತ್ನವುಂಟಾಗುತ್ತದೆ. ಆ ಕಾಲದಲ್ಲಿ ಮೇಲೆ ಹೇಳಿದ ಮಂತ್ರಜಪಗಳೆಲ್ಲವೂ ತಮಗೆ ತಾವೇ ತೊಲಗಿ ಹೋಗುತ್ತವೆ. ಇವುಗಳೆಲ್ಲಕ್ಕೂ ಕಾರಣವು ಅವನವನ ಆತ್ಮವೇ ಹೊರತು ಮತ್ತೊಬ್ಬರಲ್ಲ. ಇಂತಹ ಆತ್ಮನೇ ಪರಬ್ರಹ್ಮನೆಂದು ಕರೆಯಲ್ಪಡುವವನು. ಈ ಪರಬ್ರಹ್ಮನೇ ಜೀವಿಗಳನ್ನು ಮಾಯೆಯಿಂದ ಬಂಧಿಸಿ ಅವರನ್ನು ಸೂತ್ರಧಾರನಂತೆ ಆಡಿಸುತ್ತಿರು

ತ್ತಾನೆ. ಇದಕ್ಕೆ ಪ್ರಮಾಣವಾಗಿ ತ್ರಿಪುರತಾಪಿನ್ಯುಪನಿಷತ್ತಿನ ಶ್ರುತಿ ವಾಕ್ಯವನ್ನು ಈ ಕೆಳಗೆ ಕೊಟ್ಟಿದೆ.

ಶ್ರುತಿ ॥ "ಏಕಧಾ ಬಹುಧಾ ಚೈವ ♦ ದೃಶ್ಯತೇ ಜಲಚಂದ್ರವತ್."

ಅಂದರೆ ನೀರಿನಿಂದ ತುಂಬಿದ ಅನೇಕ ಭಾಂಡಗಳಲ್ಲಿ ಒಬ್ಬ ಚಂದ್ರನೇ ಪ್ರತಿಫಲಿಸುತ್ತಿರುವನು. ಅದೇ ರೀತಿಯಲ್ಲಿ ಪಿಪೀಲಿಕಾದಿ ಬ್ರಹ್ಮಪರ್ಯಂತದವರಿವಿಗೂ ಪರಮಾತ್ಮನೊಬ್ಬನೇ ವ್ಯಾಪಿಸಿ, ಅವರವರು ಮಾಡುತ್ತ ಬರುತ್ತಿರುವ ಕರ್ಮಗಳಿಗೆಲ್ಲ ಸಾಕ್ಷಿಭೂತನಾಗಿದ್ದಾನೆ. ಮತ್ತೇನೆಂದರೆ, ಮೇಲೆ ಹೇಳಿದ ಜಲಭಾಂಡಗಳನ್ನು ಕದಲಿಸಿದ್ದೇ ಆದರೆ ಅದರಲ್ಲಿ ಪ್ರತಿಬಿಂಬಿಸಿರುವ ಚಂದ್ರಬಿಂಬಗಳೂ ಕದಲುವಂತೆ ಕಾಣಬರುತ್ತವೆಯೇ ಹೊರತು ವಾಸ್ತವವಾಗಿ ಚಂದ್ರನು ಕದಲುವುದಿಲ್ಲ. ಹಾಗೆಯೇ ನಮ್ಮ ಮನಸ್ಸು ಯಾವಾಗಲೂ ಬಿಸಿಲ್ಗುದುರೆಯಂತೆ ಚಲಿಸುತ್ತಿರುವುದರಿಂದ ನಮ್ಮಲ್ಲಿರುವ ಆತ್ಮಸ್ವರೂಪವನ್ನು ತಿಳಿದುಕೊಳ್ಳದಿದ್ದೇವೆ. ಭಾಂಡದಲ್ಲಿರುವ ಜಲವು ಕದಲದಿದ್ದಾಗ ಅದರಲ್ಲಿ ಕಾಣ್ಬರುವ ಚಂದ್ರಬಿಂಬವೂ ಕದಲದೆ ಪರಿಶುದ್ಧವಾಗಿರುವಂತೆ ತೋರುವುದು. ಮರೀಚಿಕೆಯಂತೆ ಚಂಚಲವಾದ ಮನಸ್ಸು ಚಲಿಸದೆ ನಿಂತಿದ್ದೇ ಆದರೆ, ನಾವು ನಮ್ಮಲ್ಲಿರುವ ಆತ್ಮಸ್ವರೂಪವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಇದಕ್ಕೆ ಶ್ರುತಿ ಪ್ರಮಾಣವನ್ನು ಈ ಕೆಳಗೆ ಕೊಟ್ಟಿದೆ.

ಶ್ರುತಿ ॥ "ಸದಾ ವಿವೇಕಪ್ರಕೃತಿಸಂಗತ್ಯಾ ತತ್ರ ಮುಹ್ಯತೇ ♦ ನಾನಾಯೋನಿ-ಶತಗ್ಂ ಗತ್ವಾ ಶೇತೇಽಸೌ ವಾಸನಾವಸಾನಾತ್ ವಿಮೋಕ್ಷಾತ್ ಸಂಚರ-ತ್ಯೇವ ಮತ್ಸ್ಯಃ ಕೂಲದ್ವಯಂ ಯಥಾ ♦"

"ಕರ್ಮೇಂದ್ರಿಯಾಣಿ ಜ್ಞಾನೇಂದ್ರಿಯಾಣಿ ತತ್ತದ್ವಿಷಯಾನ್ ಪ್ರಾಣಾನ್ ಸಂಸೃತ್ಯ, ಕಾಮುಕಮರ್ಮಾನ್ವಿತಾ ವಿದ್ಯಾಭೂತವೇಷ್ಟಿತೋ ಜೀವೋ ದೇಹಾಂತರಂ ಪ್ರಾಪ್ಯ, ಲೋಕಾಂತರಂ ಗಚ್ಛತಿ ♦ ಆವರ್ತಾಂತರಕೀಟವತ್ ವಿಶ್ರಾಂತಿಂ ನೈವ ಗಚ್ಛತಿ ♦"

(ತ್ರಿಶಿಖಿಬ್ರಾಹ್ಮಣೋಪನಿಷತ್ತು)

ಮೇಲೆ ಹೇಳಿದ ಆತ್ಮನು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣಚತುಷ್ಟಯದೊಡನೆ ಕಲೆಸಿ, ತನಗೆ ಸಂಬಂಧವಿಲ್ಲ

ದಿರುವ ವಸ್ತುಗಳನ್ನೆಲ್ಲಾ ತನ್ನವೆಂದೇ ಭ್ರಾಂತಿಗೊಳ್ಳುವಂತೆ ಮಾಡಿ, ಅವುಗಳಿಂದುಂಟಾದ ಪುಣ್ಯಪಾಪಗಳ ಫಲವಾಗಿ, ಧನಿಕನಾಗಿಯೋ ಅಥವಾ ನಿರ್ಧನಿಕನಾಗಿಯೋ ಹುಟ್ಟಿ ಆಯಾ ಪುಣ್ಯಪಾಪಗಳಿಗೆ ತಕ್ಕಂತೆ ಆಯಾಯಾ ಫಲಗಳನ್ನು ಅನುಭವಿಸುತ್ತ, ಪುನಃ ಆ ಶರೀರವನ್ನು ಬಿಟ್ಟು ಬೇರೆ ಶರೀರಗಳನ್ನು ಪ್ರವೇಶಿಸಿ, ಅಲ್ಲಿಯೂ ಕೆಲವು ದಿನಗಳು ಸುಖದುಃಖಗಳನ್ನನುಭವಿಸಿ, ಈ ಸಂಸಾರವೆಂಬ ಸಮುದ್ರವನ್ನು ದಾಟಿ ದಡವನ್ನು ಹತ್ತಲಾರದೆ ಅದರಲ್ಲಿಯೇ ಈಜುತ್ತಿರುವನು. ಹೀಗೆ ಸಂಸಾರವೆಂಬ ಸಮುದ್ರದಲ್ಲಿ ಮೀನಿನಂತೆ ಈಜುತ್ತಿರುವ ಜೀವನು ಯಾವಾಗ ಈ ಸಂಸಾರಸಮುದ್ರವನ್ನು ದಾಟಿ ದಡವನ್ನು ಹತ್ತುತ್ತಾನೆಯೋ ಆಗಲೇ, ಮೋಕ್ಷವೆಂಬ ದೊಡ್ಡ ಸಾಮ್ರಾಜ್ಯಪದವಿಯನ್ನು ಹೊಂದುತ್ತಾನೆ. ಇದಕ್ಕೆ ಶ್ರುತಿ ಪ್ರಮಾಣವು ಹೀಗೆಂದು ಹೇಳಿದೆ.

ಶ್ರುತಿ॥ " ಪ್ರಜ್ಞಾನಘನಯೇ ವೈ ತೇಭ್ಯೋ ಭೂತೇಭ್ಯ ಸ್ಸಮುತ್ಥಾಯ ತಾನ್ಯೇ-
ವಾನುವಿನಶ್ಯತಿ ♦ "

ಮತ್ತು

" ಬ್ರಹ್ಮ ವೇದ ಬ್ರಹ್ಮೈವ ಭವತಿ " (ಯಾಜ್ಞವಲ್ಕ್ಯೋಪನಿಷತ್ತು)

ಎಂಬ ಶ್ರುತಿವಾಕ್ಯಗಳಿಗನುಗುಣವಾಗಿ ಹರವಿ, ಮಡಕೆ, ತಂಬಿಗೆ, ಬಿಂದಿಗೆ, ಹಂಡೆ ಮೊದಲಾದುವುಗಳಲ್ಲಿ ಯಾವಾಗಲೂ ಒಳಭಾಗದಲ್ಲಿ ಆಕಾಶವಿರುತ್ತದೆ ; ಇದಕ್ಕೆ ' ಘಟಾಕಾಶ ' ವೆಂದು ಹೆಸರು. ಘಟಕ್ಕೆ ಉಪಾಧಿಯಾಗಿರುವ ಮಣ್ಣಿನ ಬೋಕಿಯು ಒಡೆದುಹೋದ ತಕ್ಷಣವೇ ಆ ಘಟಕ್ಕೆ ಹೊರಭಾಗದಲ್ಲಿರುವ ' ಮಹಾಕಾಶ ' ದಲ್ಲಿ ಕಲೆತು ಒಂದಾಗಿ ಹೋಗುತ್ತದೆ. ಹಾಗೆಯೇ ಪುರುಷನಿಗೆ ಮೇಲೆ ಹೇಳಿದ ಸಂಚಿತಕರ್ಮಗಳೆಲ್ಲವೂ ಯಾವಾಗ ನಿರ್ಮೂಲವಾಗುತ್ತವೆಯೋ ಆಗಲೇ ಜೀವಿಯು ಮೋಕ್ಷವನ್ನು ಹೊಂದುತ್ತಾನೆ. ಅಂದರೆ ಕರ್ಮ ಸವೆದಮೇಲೆ ದೇಹಿಯು ದೇಹವನ್ನು ಬಿಟ್ಟ ತಕ್ಷಣವೇ ಅವನಲ್ಲಿರುವ ಜೀವಾತ್ಮನು ಪರಮಾತ್ಮನಲ್ಲಿ ಬೆರೆತು ಐಕ್ಯವನ್ನು ಹೊಂದುತ್ತಾನೆ.

ಜೀವಿಗಳನ್ನು ಮಾಯೆಯು ಮುಚ್ಚಿಕೊಂಡಿದ್ದಾಗ್ಯೂ, ಮೇಲೆ ಹೇಳಿದ ಆತ್ಮನು, ಆ ಜೀವಿಗಳ ಕೋರಿಕೆಗಳನ್ನು ಅನುಸರಿಸಿ ಅವರವರ ಕರ್ಮಗಳಿಗೆ ತಕ್ಕಂತೆ ಫಲಗಳನ್ನು ಸಹ ಕೊಡುತ್ತಿರುತ್ತಾನೆ. ಇನ್ನು 'ಜೀವನು ಶರೀರವನ್ನು ಬಿಟ್ಟು ಹೊರಡುವಾಗ ಆ ಜೀವನನ್ನು ಅಂಟಿರುವ ಆಶೆಗಳೆಲ್ಲವೂ ಅವನನ್ನು ಹಿಂಬಾಲಿಸಿಯೇ ಹೊರಡುವುವು' ಎಂಬ ವಿಷಯವನ್ನು ಮುಂದಿನ ಪ್ರಕರಣದಲ್ಲಿ ವಿವರಿಸಲಾಗಿದೆ.



# ಜೀವನು ಶರೀರವನ್ನು ಬಿಡುವಾಗ ಅವನಿಗಂಟಿರುವ ಆಶೆಗಳೆಲ್ಲವೂ ಅವನನ್ನು ಹಿಂಬಾಲಿಸಿಯೇ ಹೊರಡುತ್ತವೆ.

ಓ ಸಹೋದರ ಸಹೋದರಿಯರೇ!

ಪ್ರಪಂಚದಲ್ಲಿರುವ ಸ್ತ್ರೀಪುರುಷರೊಳಗೆ ಪ್ರತಿಯೊಬ್ಬರಿಗೂ ಪ್ರತಿದಿನವೂ ಇಪ್ಪತ್ತೊಂದುಸಾವಿರದ ಆರನೂರು ಶ್ವಾಸಗಳು ಮೂಗಿನ ಹೊಳ್ಳೆಗಳ ಮೂಲಕ ನಡೆಯುತ್ತಿರುತ್ತವೆಯೆಂದು ಹಿಂದೆಯೇ ಹೇಳಿದೆ. ಆದರಲ್ಲಿ ಶ್ವಾಸವು ಎಡದ ಮೂಗಿನ ಹೊಳ್ಳೆಯಲ್ಲಿ ನಡೆಯುವಾಗ ಪ್ರತಿಸಲವೂ ಹನ್ನೆರಡಂಗುಲಗಳುದ್ದದಷ್ಟು, ಬಲದ ಮೂಗಿನ ಹೊಳ್ಳೆಯಲ್ಲಿ ನಡೆಯುವಾಗ ಎಂಟಂಗುಲದುದ್ದದಷ್ಟು ಶ್ವಾಸವು ಶರೀರದೊಳಗಿನಿಂದ ಹೊರಕ್ಕೆ ಬರುತ್ತದೆ. ಈ ಲೆಕ್ಕಕ್ಕೆ ಸರಿಯಾಗಿ ಪ್ರತಿದಿನವೂ ಎಡೆಬಿಡದೆ ಒಂದೇ ಸಮನಾಗಿ ಹಗಲುರಾತ್ರಿಗಳಲ್ಲಿ ಶ್ವಾಸವು ನಡೆಯುತ್ತಿದ್ದು ಸ್ತ್ರೀಪುರುಷರ ಆಯುಃಪ್ರಮಾಣವನ್ನು ತೋರಿಸುತ್ತದೆಯೇ ಹೊರತು, ಜಾತಕ

ಮೊದಲಾದುವುಗಳಲ್ಲಿ ಹೇಳುವಂತಹ ಸಂವತ್ಸರಗಳು ಆಯುಃಪ್ರಮಾಣ ವನ್ನು ತಿಳಿಸಲಾರವು.

ಶಿಶುಗಳು ಹುಟ್ಟುವುದಕ್ಕೆ ಮುಂಚೆಯೇ ಆಯಾ ಶಿಶುಗಳ ಕರ್ಮ ಗಳಿಗೆ ತಕ್ಕಂತೆ ಇಷ್ಟಿಷ್ಟು ಕೋಟಿಗಳು, ಇಷ್ಟಿಷ್ಟು ಲಕ್ಷಗಳು, ಇಷ್ಟಿಷ್ಟು ಸಾವಿರಗಳು ಶ್ವಾಸಗಳೆಂದು ಲೆಕ್ಕವನ್ನು ಏರ್ಪಡಿಸಿ, ಈಶ್ವರನು ಅವು ಗಳನ್ನು ಸೃಷ್ಟಿಮಾಡುತ್ತಾನೆ. ಇದರ ಮೇಲೆ ಆ ಶಿಶುಗಳು ಆಯಾಯಾ ಮನೆಗಳಲ್ಲಿ ಹುಟ್ಟಿದ ಬಳಿಕ ಮೊದಲು ಕೆಲವು ದಿನಗಳು ಅವು ಅಂಗತ ಲಾಗಿ ಮಲಗಿ ಕೈಕಾಲುಗಳನ್ನು ಒದಲುತ್ತ ಆಟಗಳನ್ನಾಡುತ್ತವೆ. ಇದಾದಮೇಲೆ ಕೆಲವು ದಿನಗಳು ಬೋರಲಾಗಿ ಮಲಗುವುದಕ್ಕೆ ಪ್ರಾರಂಭಿ ಸುತ್ತವೆ. ಮತ್ತೆ ಕೆಲವು ದಿನಗಳು ನೆಲದಮೇಲೆ ತೆವಳುವುದಕ್ಕೆ ಮೊದಲು ಮಾಡುತ್ತವೆ. ಇದಾದಮೇಲೆ ಕೆಲವುದಿನ ಕೂತುಕೊಳ್ಳುತ್ತಲೂ ಮತ್ತೆ ಕೆಲವು ದಿನಗಳು ಅಂಬೆಗಾಲಿಡುತ್ತಲೂ ಇನ್ನು ಕೆಲಕೆಲವು ದಿನಗಳು ಮೇಲಕ್ಕೆದ್ದು ನಿಂತು ತಪ್ಪು ಹೆಜ್ಜೆಗಳನ್ನಿಡುತ್ತಲೂ ಇರುತ್ತವೆ. ಆಮೇಲೆ ನಡೆಯುವುದಕ್ಕೆ ಪ್ರಾರಂಭಿಸಿ ಮೂರು ಚಕ್ರದ ಭಂಡಿಯ ಸಹಾಯದಿಂದ ನಡೆಯುವುದನ್ನು ಕಲಿತು ಅನಂತರ ಚನ್ನಾಗಿ ನಡೆಯುವುದಕ್ಕೆ ಪ್ರಾರಂಭಿ ಸುತ್ತವೆ. ಹೀಗೆ ಕೆಲವು ದಿನಗಳು ಕಳೆದಮೇಲೆ ಬಾಲ್ಯದೆಸೆಯೂ ಅನಂತರ ಯೌವನವೂ ಪ್ರಾಪ್ತವಾಗಿ ಅವರವರ ಪೂರ್ವಜನ್ಮ ಕರ್ಮಗಳಿಗೆ ತಕ್ಕಂತೆ ಮೂಗಿನ ಹೊಳ್ಳೆಗಳಲ್ಲಿ ಶ್ವಾಸಗಳು ನಡೆಯುತ್ತಿರುವವರಿವಿಗೂ ಸುಖ ದುಃಖಗಳನ್ನು ಅನುಭವಿಸುತ್ತ ಹೆಂಡತಿಮಕ್ಕಳು, ಮೊಮ್ಮಕ್ಕಳು, ಸಹೋ ದರರು, ಬಂಧುಗಳು ಮೊದಲಾದವರ ಮೇಲೆಯೂ ಉಳಿದ ವಸ್ತುವಾಹ ನಾದಿಗಳ ಮೇಲೆಯೂ ಪ್ರಾಣವು ಶರೀರದಲ್ಲಿರುವವರಿವಿಗೂ ವಿಶೇಷ ಪ್ರೀತಿಯಿಂದ ಆಸೆಯನ್ನಿಟ್ಟಿರುವರು. ಆದ್ದರಿಂದ ಈ ಆಸೆಗಳು ಯಾವಾಗಲೂ ಒಂದೇ ಮನೆಯಲ್ಲಿ ಶಾಶ್ವತವಾಗಿ ನೆಲೆಸಿರುವುವುಗಳಲ್ಲವು. ಶರೀರದಲ್ಲಿ ಪ್ರಾಣವು ಇರುವವರಿವಿಗೆ ಮಾತ್ರವೇ ಆ ಆಸೆಗಳು ತಾನು ವಾಸಮಾಡುವ ಮನೆಯಲ್ಲಿರುವವರ ಮೇಲೆ ಇರುತ್ತವೆ. **ಜೀವನು ಆ ಶರೀರವನ್ನು ಬಿಟ್ಟು ಬೇರೆ ಶರೀರವನ್ನು ಕುರಿತು ಹೊರಡುವಾಗ ಅವರ ಮೇಲಿರುವ ಆಸೆಗಳೂ ಆ ಶರೀರದಲ್ಲಿರದೆ ಆ ಜೀವವನ್ನೇ**

**ಹಿಂಬಾಲಿಸಿ ಹೊರಟು ಬೇರೊಂದು ಶಿಶುವಿನ ಶರೀರದಲ್ಲಿ ಹೋಗಿ ಸೇರುತ್ತವೆ.** ಹಾಗೆ ಸೇರಿದಮೇಲೆ, ಹಿಂದೆ ತಾನು ನೆಲೆಸಿದ್ದ ಶರೀರವು ಪ್ರೇತಭಾವವನ್ನು ಹೊಂದುತ್ತದೆ. ಪ್ರಾಣವು ಶರೀರದಲ್ಲಿರುವವರಿವಿಗೇ ಮೇಲೆ ಹೇಳಿದವುಗಳೆಲ್ಲವೂ ಜ್ಞಾಪಕದಲ್ಲಿರುತ್ತವೆ. ಆದರೆ ಇವರಿಗೆ ಯಾವ ವಸ್ತುಗಳ ಮೇಲೆ ವಿಶೇಷ ಪ್ರೀತಿಯಿರುತ್ತದೆಯೋ ಆ ವಸ್ತುಗಳ ಮೇಲೆ ಮಾತ್ರವೇ, ಪ್ರಾಣವು ಹೊರಹೊರಡುವಾಗ ಇಚ್ಛೆಯಿರುತ್ತದೆ. ಇದಕ್ಕೆ ಒಂದು ದೃಷ್ಟಾಂತವನ್ನು ಈ ಮುಂದೆ ಹೇಳಲಾಗಿದೆ.

ಭತ್ತ, ರಾಗಿ, ಜೋಳ, ಸಜ್ಜೆ ಮೊದಲಾದ ಸಸ್ಯಾದಿಗಳಿಗೂ ಅನೇಕ ವಿಧವಾದ ಇತರ ವೃಕ್ಷಗಳಿಗೂ ಬೀಜಗಳು ಯಾವರೀತಿಯಲ್ಲಿರುತ್ತವೆಯೋ ಹಾಗೆಯೇ ವೃಕ್ಷಗಳಂತಿರುವ ಈ ಮಾನವ ಶರೀರಗಳಿಗೂ ಒಂದು ವಿಧವಾದ ಬೀಜವುಂಟು. ಅನೇಕ ಕೋರಿಕೆಗಳನ್ನು ಸದಾ ನೆನೆಸುತ್ತಿರುವ ಮನಸ್ಸೇ ಸಂಸಾರ ವೃಕ್ಷಕ್ಕೆ ಯೋಗ್ಯವಾದ ಭೂಮಿ. ಸ್ತ್ರೀ-ಪುರುಷರು ಅವಸಾನಕಾಲದಲ್ಲಿ ಯಾವುದಾದರೂ ಕೋರಿಕೆಗಳನ್ನು ಮನಸ್ಸಿನಲ್ಲೆಣಿಸುತ್ತಲೇ ಪ್ರಾಣವನ್ನು ಬಿಡುತ್ತಾರೆ. ಆದುದರಿಂದ ಆ ಕೋರಿಕೆಗಳೇ ಅವರಿಗೆ ಬೀಜಗಳಾಗಿದ್ದು, ಪುನಃ ಆ ಕೋರಿಕೆಗಳಿಗೆ ತಕ್ಕ ಶರೀರಗಳನ್ನು ಪಡೆಯುತ್ತಾರೆ. ಇದಕ್ಕೆ ಸರಿಯಾದ ಒಂದು ದೃಷ್ಟಾಂತವನ್ನು ಈ ಕೆಳಗೆ ಕೊಟ್ಟಿದೆ.

ಸುಮಾರು ನಲವತ್ತು ವರ್ಷಗಳ ಹಿಂದೆ 'ಕಡಪ ಪಟ್ಟಣ' ದಲ್ಲಿ ವಿಶೇಷ ಧನವಂತನಾದ ವೈಶ್ಯನೊಬ್ಬನಿದ್ದನು. ಅವನು ಬಾಲ್ಯದಿಂದಲೂ ಒಂದು ಕಾಸನ್ನೂ ದಾನಧರ್ಮಗಳಿಗೆ ಕೊಡದೆ, ಆಸ್ತಿಯನ್ನು ಮಾತ್ರ ಹೆಚ್ಚಿಸುತ್ತ ಬರುತ್ತಿದ್ದನು. ಇವನು ಪ್ರತಿದಿನವೂ ಮನೆಯ ಕಾಯಿಪಲ್ಯಗಳ ಖರ್ಚಿಗೆ ಒಂದಾಣೆಯನ್ನು ಮಾತ್ರ ಕೊಡುತ್ತಿದ್ದನು. ಆದರೆ ಆ ಮನೆಯಲ್ಲಿರುವವರೆಲ್ಲ ಅವನಿಗೆ ತಿಳಿಯದೆ ಪ್ರತಿದಿನವೂ ನಾಲ್ಕು ವಿಧವಾದ ಪದಾರ್ಥಗಳನ್ನು ಅಡಿಗೆಮಾಡಿ ಹಾಲು, ಮೊಸರು, ತುಪ್ಪ ಇವುಗಳೊಡನೆ ಚನ್ನಾಗಿ ಭೋಜನ ಸೌಖ್ಯವನ್ನನುಭವಿಸುತ್ತಿದ್ದರು. ಇವೆಲ್ಲವನ್ನು ಆ ವೈಶ್ಯನು ನೋಡಿದ್ದೇ ಆದರೆ ಅವನು ಹೊಟ್ಟೆಯೊಡೆದು ಸಾಯುತ್ತಿದ್ದನು. ಆದುದ

ರಿಂದ ಅವನಿಗೆ ತಮ್ಮ ಪಂಕ್ತಿಯಲ್ಲಿ ಭೋಜನಕ್ಕಿಡದೆ ಹಣವನ್ನು ಶೇಖರಿಸಿಟ್ಟ ಕಬ್ಬಿಣದ ಪೆಟ್ಟಿಗೆಯನ್ನಿಟ್ಟಿದ್ದ ಕೊಠಡಿಯೊಳಗೆ ಆತನನ್ನು ಕೂಡಿಸಿ ಹುಳಿಬಸಲೆ ಸೊಪ್ಪಿನ ಹುಳಿಸೊಪ್ಪು, ಹುಣಿಸೇಕಾಯಿಯ ತೊಕ್ಕು (ಚಟ್ಟಣಿ), ಅನ್ನ-ಸಾರು-ಮಜ್ಜಿಗೆ ಇವುಗಳನ್ನು ಮಾತ್ರ ಒಂದು ಹಚ್ಚಿದೆಲೆಯಲ್ಲಿ ಬಡಿಸಿ ಊಟಕ್ಕಿಡುತ್ತಿದ್ದರು. ಹೀಗಿರುವ ಸಮಯದಲ್ಲಿ ಅವನಿಗೆ ಅವಸಾನ ಕಾಲವು ಪ್ರಾಪ್ತವಾದ್ದರಿಂದ ಅವನು ಒಂದು ದೊಡ್ಡ ರೋಗಕ್ಕೀಡಾದನು. ಆಗ ಅವನು ಕಬ್ಬಿಣದ ಪೆಟ್ಟಿಗೆಯ ಸಮೀಪದಲ್ಲಿಯೇ ಹಾಸಿಸಿಕೊಂಡು ಮಲಗಿಕೊಂಡನು. ಹಾಸಗೆಯಮೇಲೆ ಮಲಗಿದ ಸ್ವಲ್ಪಕಾಲದೊಳಗಾಗಿ ಪ್ರಜ್ಞೆತಪ್ಪಿ ಕಣ್ಣುಗಳನ್ನು ಮುಚ್ಚಿಕೊಂಡನು. ಆಗ ಅವನ ಕುಮಾರರು ಅವನಲ್ಲಿದ್ದ ಬೀಗದ ಕೈಯನ್ನು ತೆಗೆದುಕೊಂಡು ಕಬ್ಬಿಣದ ಪೆಟ್ಟಿಗೆಯ ಬೀಗವನ್ನು ತೆಗೆದರು. ಪೆಟ್ಟಿಗೆಯನ್ನು ತೆರೆಯುವಾಗ 'ಟಕ್' ಎಂಬ ಶಬ್ದವು ಆತನಿಗೆ ಕೇಳಬಂದಿತು. ಆ ಶಬ್ದವನ್ನು ಕೇಳಿದ ತಕ್ಷಣವೇ ಆ ರೋಗಿಯು ಕಣ್ಣನ್ನು ತೆರೆದು ಪುನಃ ಆ ಪೆಟ್ಟಿಗೆಯನ್ನು ಮುಚ್ಚುವವರಿವಿಗೂ ಅದರ ಕಡೆಗೇ ನೋಡುತ್ತಿದ್ದನು. ಪ್ರತಿ ದಿನವೂ ಪೆಟ್ಟಗೆಯನ್ನು ತೆರೆದಾಗಲೆಲ್ಲವೂ ಕಣ್ಣು ತೆರೆದು ಅದರ ಕಡೆಗೆ ದೃಷ್ಟಿಸಿ ನೋಡುತ್ತಿದ್ದನು. ಈ ರೀತಿಯಾಗಿ ನಾಲ್ಕು ದಿನಗಳು ಕಳೆದವು. ಆತನಿಗೆ ತ್ವರೆಯಿಂದ ಪ್ರಾಣವು ಹೋಗದಿದ್ದುದರಿಂದ ಆತನು ಸಂಪಾದಿಸಿದ ಬೆಳ್ಳಿ ಭಂಗಾರಗಳಲ್ಲಿ ಅವನಿಗಿರುವ ಆಸೆಯೇ ಇದಕ್ಕೆ ಕಾರಣವೆಂದು ತಿಳಿದು, ಬೆಳ್ಳಿ ಭಂಗಾರಗಳೆರಡನ್ನು ಸಾಣೆ ಕಲ್ಲಿನ ಮೇಲೆ ತೇದು, ಆ ನೀರನ್ನು ಆತನ ಬಾಯಿಯೊಳಕ್ಕೆ ಬಿಟ್ಟರು. ಆ ನೀರು ಹಾಕುವುದಕ್ಕೂ ಧನಿಕನ ಪ್ರಾಣ ಹೋಗುವುದಕ್ಕೂ ಕಾಲವು ಸರಿಹೋಯಿತು. ಆಗ ಜನಗಳು ಈ ವಿಷಯದಲ್ಲಿ ಏನು ಯೋಚಿಸಿದರೆಂದರೆ, 'ಇವನಿಗೆ ಭಂಗಾರ ಬೆಳ್ಳಿಯಲ್ಲಿ ಅತ್ಯಾಸೆಯಿತ್ತು, ಈಗ ಅವುಗಳನ್ನು ತೇದು ಆ ನೀರನ್ನು ಬಾಯೊಳಕ್ಕೆ ಬಿಟ್ಟೊಡನೆಯೇ ಅವನ ಪ್ರಾಣವು ಹೋಯಿತು' ಎಂದು ಹೇಳಿಕೊಂಡರು. ಇದರ ರಹಸ್ಯವು ಈ ಗ್ರಂಥಕರ್ತರಾದ ಯೋಗೀಶ್ವರರಿಗೆ ತಿಳಿದ ವಿಷಯ. ಆದುದರಿಂದ ಆ ವಿಷಯವೆಲ್ಲವನ್ನೂ ಈ ಗ್ರಂಥದಲ್ಲಿ ತಿಳಿಯಪಡಿಸುತ್ತಿದ್ದಾರೆ.

ಭಂಗಾರವನ್ನು ಸಾಣೆಯ ಕಲ್ಲಿನಮೇಲೆ ತೇದು ಆ ನೀರನ್ನು ಬಾಯೊಳಕ್ಕೆ ಹಾಕಿದ ತಕ್ಷಣವೇ ಪ್ರಾಣವು ಹೊರಟುಹೋಯಿತೆಂಬ ಮಾತು ಸರಿಯಾದುದಲ್ಲವು. ಇದನ್ನು 'ಕಾಕತಾಳ ನ್ಯಾಯ' ದಿಂದ ವ್ಯಕ್ತಪಡಿಸಬಹುದು. ಒಂದು ತಾಳೆಯ ಹಣ್ಣು ಚನ್ನಾಗಿ ಪಕ್ವವಾಗಿ ಕೆಳಕ್ಕೆ ಬೀಳುವುದರಲ್ಲಿದ್ದ ಸಮಯಕ್ಕೆ ಸರಿಯಾಗಿ ಹಸಿವಿನಿಂದ ಆಹಾರವನ್ನು ಹುಡುಕಿಕೊಂಡು ಬಂದ ಒಂದಾನೊಂದು ಕಾಗೆಯು ಅದರಮೇಲೆ ಕೂಡಲು ಅದು ತಕ್ಷಣವೇ ಉದುರಿಬಿದ್ದಿತು. ಅದು ಹೇಗೋ ಹಾಗೆಯೇ, ಭಂಗಾರವನ್ನು ತೇದ ನೀರು ಆ ವೈಶ್ಯನ ಬಾಯೊಳಕ್ಕೆ ಹಾಕುವುದಕ್ಕೂ ಅವನ ಪ್ರಾಣ ಹೋಗುವುದಕ್ಕೂ ಸರಿಹೋಯಿತು. ಇದರಿಂದ ಪ್ರಾಣವು ಶರೀರವನ್ನು ಬಿಟ್ಟು ಹೊರಟಿತೇ ಹೊರತು ಆ ನೀರನ್ನು ಹಾಕಿದ್ದರಿಂದ ಪ್ರಾಣವು ಹೋಯಿತೆಂಬುವ ಮಾತು ಅನುಚಿತ. ಈ ವೈಶ್ಯನು ಮೃತಿಹೊಂದಿದ ಮೇಲೆ ಮಾರನೆಯ ಜನ್ಮದಲ್ಲಿ ಬಹಳ ಬಡವರ ಮನೆಯಲ್ಲಿ ಹುಟ್ಟಿ ದೊಡ್ಡವನಾದ ಮೇಲೆ ಪೂರ್ವ ಜನ್ಮದ ಕರ್ಮವಾಸನಾಬಲಿಯದಿಂದ ಪುನಃ ಹೆಚ್ಚು ಧನವನ್ನು ಗಳಿಸಬೇಕೆಂಬದಾಗಿ ಎಷ್ಟೋ ಪ್ರಯತ್ನಪಡುವನು. ಆದರೆ ಅವನ ಪ್ರಯತ್ನಕ್ಕೆ ತಕ್ಕಂತೆ ಹಣವು ದೊರಕದೆ ಕುಡಿಯುವುದಕ್ಕೆ ಅಂಬಲಿಯೂ ಉಡುವುದಕ್ಕೆ ಬಟ್ಟೆಯೂ ಇಲ್ಲದೆ ಬಹಳ ದರಿದ್ರನಾಗಿಯೇ ಇರುವನು. ಹೀಗಾಗುವುದಕ್ಕೆ ಕಾರಣವೇನೆಂದರೆ, ಹಿಂದಿನ ಜನ್ಮದಲ್ಲಿ ದಾನ ಧರ್ಮಾದಿಗಳನ್ನು ಮಾಡುವುದಕ್ಕಾಗಿ ಬೇಕಾದಷ್ಟು ಧನವನ್ನು ಈಶ್ವರನು ಅವನಿಗೆ ಕರುಣಿಸಿದ್ದರೂ ಅವನು ಹಾಗೆ ಮಾಡದೆಯೇ ತಾನೂ ಆ ಧನದ ಸುಖವನ್ನು ಅನುಭವಿಸದೆಯೇ ಇದ್ದು ಅದರಲ್ಲಿ ಅತ್ಯಾಸೆಯನ್ನಿಟ್ಟು ಕಡೆಗೆ ಅದನ್ನೇ ನೆನೆಸುತ್ತ ಪ್ರಾಣಬಿಟ್ಟನು. ಆದುದರಿಂದಲೇ ಮರುಜನ್ಮದಲ್ಲಿ ಅವನಿಗೆ ಈಶ್ವರನು ಧನವನ್ನು ಕರುಣಿಸದೆ ಕಡುಬಡವರ ಮನೆಯಲ್ಲಿ ಹುಟ್ಟುವಂತೆ ಮಾಡಿದನು. ಜೀವಿಗಳು ಹಿಂದಿನ ಜನ್ಮದಲ್ಲಿ ಎಷ್ಟೆಷ್ಟು ದಾನಧರ್ಮಾದಿಗಳನ್ನು ಮಾಡಿರುತ್ತಾರೆಯೋ, ಅವಕ್ಕೆ ತಕ್ಕಂತೆ ಈ ಜನ್ಮದಲ್ಲಿ ಧನವಂತರಾಗಿಯೋ ರಾಜರಾಗಿಯೋ ಚಕ್ರವರ್ತಿಗಳಾಗಿಯೋ ಹುಟ್ಟುತ್ತಾರೆ.

ಧನವಂತನಾಗಿಯೋ ಇಲ್ಲವೇ ಬಡವನಾಗಿಯೋ ಹುಟ್ಟುವುದಕ್ಕೆ ಕಾರಣವೇನೆಂದರೆ, ಆಯಾ ಜೀವಿಯು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಪಾಪ ಕರ್ಮಫಲವೇ ಹೊರತು ಮತ್ತೆ ಬೇರಲ್ಲ. ಮೇಲೆ ಹೇಳಿದ ವೈಶ್ಯನಂತೆ ಪ್ರಪಂಚದಲ್ಲಿ ಅನೇಕರು ಧನವನ್ನು ಸಂಪಾದಿಸಿ, ಅದರೊಳಗೆ ಸ್ವಲ್ಪವನ್ನೂ ದಾನಧರ್ಮಾದಿಕಾರ್ಯಗಳಿಗೆ ಉಪಯೋಗಿಸಲು ಮನಗೊಡದಿದ್ದಾರೆ. ದಾನಧರ್ಮಗಳನ್ನು ಮಾಡದವರೆಲ್ಲರೂ ಮರುಜನ್ಮದಲ್ಲಿ ವಿಶೇಷವಾಗಿ ಕಷ್ಟಪಡುವರು. ಕೆಲವರು ಎಷ್ಟೋ ಲೆಕ್ಕವಿಲ್ಲದಷ್ಟು ಪಾಪ ಕರ್ಮಗಳನ್ನು ಮಾಡುತ್ತಿದ್ದಾರೆ. ಈ ಪಾಪಕರ್ಮಗಳ ಸಲುವಾಗಿ ಇನ್ನುಮುಂದೆ ತಾವು ಪಡೆಯಬಹುದಾದ ಜನ್ಮಗಳಲ್ಲಿ ಹೀನಜಾತಿಯಲ್ಲುದಿಸುತ್ತಾರೆ ಮತ್ತು ಅವರ ಆಯಾ ಪಾಪಕರ್ಮಗಳಿಗೆ ಸರಿಯಾಗಿ ಸಂಭವಿಸುವ ಕ್ರೂರವ್ಯಾಧಿಗಳು ಅವರಿಗೆ ಶಿಕ್ಷಾರೂಪವಾಗಿ ಬಂದು ಅವರನ್ನು ಗೋಳಾಡಿಸುತ್ತವೆ. ಇಂತಹರೆಲ್ಲರೂ ಅಲ್ಲಲ್ಲಿರುವ ದೇವಾಲಯಗಳಲ್ಲಿ ಜರುಗುವ ಉತ್ಸವ ಸಮಯಗಳಲ್ಲಿ ಆ ಗುಡಿಗೋಪುರಗಳ ಬಾಗಿಲುಗಳಲ್ಲಿ ಕುಳಿತು ಭಿಕ್ಷಬೇಡುತ್ತ, "ಪೂರ್ವಜನ್ಮದಲ್ಲಿ ನಾನು ಎಂತಹ ಪಾಪಕರ್ಮಗಳನ್ನು ಮಾಡಿದ್ದೆನೋ ನನಗೆ ತಿಳಿಯಲಿಲ್ಲ. ಇಂತಹ ವ್ಯಾಧಿಯು ಈಗ ನನಗೆ ಸಂಭವಿಸಿ ಈ ಅವಸ್ಥೆಯನ್ನು ನಾನು ಅನುಭವಿಸುತ್ತಿದ್ದೇನೆ." ಎಂದು ತನ್ನಲ್ಲಿ ತಾನು ಮನನೊಂದು ದುಃಖಪಡುತ್ತಿರುವರು. ಇಂತಹ ವ್ಯಾಧಿಗಳಿಂದ ಅವಸ್ಥೆ ಪಡುತ್ತಿರುವವರು ಲೋಕದಲ್ಲಿ ಎಷ್ಟೋ ಜನಗಳಿರುತ್ತಾರೆ. ಇವರೇ ಅಲ್ಲದೆ ಒಳ್ಳೆಯ ದೊಡ್ಡವಂಶಸ್ಥರೂ ಕೂಡ ಎಷ್ಟೋ ಮಂದಿ ವ್ಯಾಧಿಗಳನ್ನು ಅನುಭವಿಸುತ್ತಲೇ ಇದ್ದಾರೆ. ಇಂತಹರು ಪೂರ್ವಜನ್ಮದಲ್ಲಿ ಸ್ವಲ್ಪಮಟ್ಟಿಗೆ ಪುಣ್ಯವನ್ನು ಮಾಡಿದ್ದರು. ಆ ಪುಣ್ಯವಿಶೇಷದಿಂದ ಒಳ್ಳೆಯ ಕುಟುಂಬದಲ್ಲಿ ಅವರಿಗೆ ಈಗ ಜನ್ಮವು ದೊರಕಿದೆ. ಆ ಪುಣ್ಯದ ಜೊತೆಗೆ ಪಾಪವನ್ನೂ ಮಾಡಿದ್ದರು. ಆ ಪಾಪಕರ್ಮವನ್ನು ಅನುಭವಿಸುವ ಸಲುವಾಗಿ ಅದಕ್ಕೆ ತಕ್ಕಂತೆ ವ್ಯಾಧಿಯನ್ನು ಶಿಕ್ಷಾರೂಪವಾಗಿ ಅನುಭವಿಸುತ್ತ ದುಃಖಿಸುತ್ತಿದ್ದಾರೆ. ಇದನ್ನೇ ಪ್ರಾರಬ್ಧವೆಂಬುದಾಗಿಯೂ, ಪೂರ್ವಜನ್ಮ ಕರ್ಮಫಲವೆಂಬುದಾಗಿಯೂ ಹಣೆಯ ಬರಹವೆಂಬುದಾಗಿಯೂ ಜನಗಳು ಬೇರೆ ಬೇರೆ ವಿಧವಾಗಿ ಹೇಳುತ್ತಿರುವರು. ಆದುದರಿಂದ

ಯಾರೂ, ಯಾವ ಪಾಪಕರ್ಮವನ್ನೂ ಮಾಡದೆ, ಮುಂದಿನ ಜನ್ಮದಲ್ಲಿ ಸುಖಪಡುವುದಕ್ಕಾಗಿ ಈ ಜನ್ಮದಲ್ಲಿ ಒಳ್ಳೆಯ ದಾನಧರ್ಮಾದಿಗಳನ್ನು ಮಾಡುತ್ತಿರಬೇಕು.

ಜೀವನು ತಾನಿದ್ದ ಹಳೆಯ ಶರೀರವನ್ನು ಬಿಟ್ಟು ಹೊರಡುವಾಗ ಆ ಜನ್ಮದಲ್ಲಿ ಆ ಶರೀರಕ್ಕೆ ಬಂಧುಗಳಾಗಿದ್ದ ಶರೀರಗಳನ್ನೂ ಆ ಬಂಧು ಶರೀರಗಳ ಕೆಂಪು ಕಪ್ಪು ಬಣ್ಣಗಳನ್ನೂ, ಅವರುಗಳ ಹೆಸರುಗಳನ್ನೂ ಆ ಹಳೆಯ ಶರೀರಗಳಲ್ಲೇ ಮರೆತುಬಿಡುತ್ತಾನೆ. ಆದರೆ ಆ ಶರೀರಗಳ ಮೇಲಿರುವ ಆಸೆಗಳು ಮಾತ್ರವೇ ಜೀವನೊಡಗೂಡಿ ಯಾರಕಣ್ಣಿಗೂ ತಿಳಿಯದೆ ಗಾಳಿರೂಪವಾಗಿ ಮೇಲೆದ್ದು ಹೊರಡುತ್ತವೆ. ಅನಂತರ ಜೀವಿಯೂ ಮತ್ತು ಅವನನ್ನಂಟಿಬಂದಿರುವ ಆಸೆಗಳೂ ಯಾವುದೋ ದೇಶ, ಯಾವುದೋ ಪಟ್ಟಣ ಅಥವಾ ಗ್ರಾಮಕ್ಕೆ ಸೇರಿದ ಯಾವುದೋ ಮನೆಯಲ್ಲಿ ಈಶ್ವರನು ತನಗಾಗಿ ಯಾವುದೋ ತಾಯಿಯ ಗರ್ಭದಲ್ಲಿ ಸೃಷ್ಟಿಸಿಟ್ಟಿರುವ ಶಿಶುಶರೀರದೊಳಕ್ಕೆ ಪ್ರವೇಶಿಸುತ್ತವೆ. ಹಾಗೆ ಸೇರಿ ಗರ್ಭದುಃಖಾದಿಗಳನ್ನು ಕೆಲವು ದಿನಗಳನುಭವಿಸಿ ಅನಂತರ ಶಿಶುವಾಗಿ ಭೂಮಿಯ ಮೇಲೆ ಜೀವಿಯು ಜನ್ಮವೆತ್ತುತ್ತಾನೆ. ಹಾಗೆ ಹುಟ್ಟಿದ ಮೇಲೆ ಶಿಶುವು ಸ್ವಲ್ಪ ಸ್ವಲ್ಪವಾಗಿ ಬೆಳೆದು ದೊಡ್ಡವನಾದಮೇಲೆ ತನ್ನ ಬೆನ್ನಂಟಿ ಬಂದಿದ್ದ ಆಸೆಗಳೆಲ್ಲವನ್ನೂ ಈ ಜನ್ಮದಲ್ಲಿ ತನಗೆ ದೊರಕಿದ ಬಂಧುಗಳ ಮೇಲೆ ಇಡುತ್ತಾನೆ. ಅಂದರೆ ಹಿಂದಿನ ಜನ್ಮದಲ್ಲಿ ಯಾವ ಯಾವ ಬಂಧುಗಳಲ್ಲಿ ಎಷ್ಟೆಷ್ಟು ಆಸೆಯನ್ನಿಟ್ಟಿದ್ದನೋ ಅದೇರೀತಿಯಲ್ಲಿಯೇ ಈ ಜನ್ಮದಲ್ಲಿಯೂ ಆಯಾ ಬಂಧುಗಳಲ್ಲಿ ಅಷ್ಟಷ್ಟು ಆಸೆಯನ್ನಿಡುತ್ತಾನೆ. ಹೊಸದಾಗಿ ತನಗೆ ದೊರಕಿದ ಈ ಜನ್ಮದಲ್ಲಿಯೂ ಕೂಡ ಹಿಂದಿನ ಜನ್ಮದಲ್ಲಿ ಮಾಡಿದಂತೆಯೇ ಪುತ್ರ-ಮಿತ್ರ-ಕಳತ್ರ-ಧನಧಾನ್ಯಾದಿಗಳಲ್ಲಿ ಆಸೆಯನ್ನಿಡುವುದಲ್ಲದೆ ಉತ್ತಮವಾದ ಮಾರ್ಗದಿಂದಲೋ ಇಲ್ಲವೇ ನೀಚಮಾರ್ಗದಿಂದಲೋ ಹಣವನ್ನು ಸಂಪಾದಿಸಿಟ್ಟು, ತಾನು ಆ ಬಂಧುಗಳು, ಸ್ನೇಹಿತರು ಇವರೊಡಗೂಡಿ ಸಂತೋಷದಿಂದ ಬೀಗಿ ಮೆರೆಯುತ್ತಿರುವ ಯಾವುದೋ ಒಂದು ಸಮಯದಲ್ಲಿ, ತನಗೆ ಆಯುಸ್ಸು ತೀರಿದ ತಕ್ಷಣವೆ, ಅಕಸ್ಮಾತ್ತಾಗಿ ನೋಡುವವರಿಗೆ ಯಾವುದೋ ರೋಗವುಂಟಾದಂತೆ ಕಂಡುಬಂದು,

ಕಡೆಯಲ್ಲಿ ಒಂದು ದಿನ ಹಗಲು ವೇಳೆಯಲ್ಲೋ ಅಥವಾ ರಾತ್ರಿಯ ಸಮಯದಲ್ಲೋ ಆ ಶರೀರವನ್ನು ಬಿಟ್ಟು ಜೀವನು ಹೊರಡುತ್ತಾನೆ. ಅನಂತರ ಹಿಂದೆ ಹೇಳಿದಂತೆ ಆ ಜನ್ಮದಲ್ಲಿ ಗಳಿಸಿದ್ದ ಪುಣ್ಯಪಾಪ ಕರ್ಮಫಲಗಳೊಡನೆಯೂ ಹೆಂಡತಿ, ಮಕ್ಕಳು, ಮನೆ, ಮಠ, ಹಣ ಇವುಗಳಲ್ಲಿ ಅವನಿಗಿರುವ ಆಸೆಗಳೊಡನೆಯೂ ಪ್ರಯಾಣ ಬೆಳಸಿ, ಹಿಂದಿನಂತೆಯೇ ಯಾವುದೋ ದೇಶದಲ್ಲಿ ಯಾವುದೋ ಮನೆಯಲ್ಲಿ ವಾಸವಾಗಿರುವ ಯಾವಳೋ ಒಬ್ಬಾಕೆಯ ಗರ್ಭಕೋಶದಲ್ಲಿ ತನಗಾಗಿ ಈಶ್ವರನು ಮಾಡಿಟ್ಟಿರುವ ಮಗುವಿನ ದೇಹವನ್ನು ಹೋಗಿ ಸೇರುತ್ತಾನೆ. ಬಳಿಕ ಶಿಶುವಾಗಿ ಜನಿಸಿ, ದಿನೇ ದಿನೇ ಬೆಳೆದು, ತನ್ನನ್ನಂಟಬಂದ ಆಶಾಬಂಧದಲ್ಲಿ ಸಿಕ್ಕಿ ಆ ಜನ್ಮದಲ್ಲಿ ದೊರಕಿದ ಹೆಂಡತಿ ಮಕ್ಕಳು ಮೊದಲಾದ ಬಂಧುಗಳಲ್ಲಿ ಮೋಹವನ್ನಿಡುತ್ತಾನೆ. ಆ ಮೋಹದಿಂದ ಸುಖದುಃಖಗಳನ್ನನುಭವಿಸುತ್ತ, ಅನೇಕ ಮಾರ್ಗಗಳಲ್ಲಿ ಹಣವನ್ನು ಸಂಪಾದಿಸುತ್ತ ಆಸ್ತಿಯನ್ನು ಕೂಡಿಸಿ ಪೂರ್ವಜನ್ಮ ಕರ್ಮಫಲಕ್ಕೆ ತಕ್ಕಂತೆ ಯಾವುದೋ ಒಂದು ಗೊತ್ತಾದ ಸಮಯಕ್ಕೆ ಆ ಕಳೇಬರವನ್ನು ಬಿಡುತ್ತಾನೆ. ಪುನಃ ಮತ್ತೊಂದು ಹೊಸ ದೇಹವನ್ನು ಹುಡುಕಿಕೊಂಡು ಹೊರಡುತ್ತಾನೆ. ಇದು ಪ್ರತಿ ಜೀವಿಗೂ ಪುನಃ ಪುನಃ ನಡೆಯುತ್ತಲೇ ಇರುತ್ತದೆ.

ಹೀಗೆ ಶರೀರದಲ್ಲಿ ಪ್ರಾಣವಿರುವವರಿವಿಗೆ ಮಾತ್ರವೇ, ಜೀವನು ಆ ಮನೆಯಲ್ಲಿರುವ ಬಂಧುಗಳಲ್ಲಿಯೂ, ತನಗೆ ದೊರಕಿದ ವಸ್ತುವಾಹನಗಳ ಮೇಲೆಯೂ, ಆಸೆಗಳನ್ನಿಟ್ಟು ಪುನಃ ಶರೀರವನ್ನು ಬಿಡುವಾಗ ಆ ಪ್ರಾಣವು ಆಸೆಗಳೊಡಗೂಡಿ ಪುನಃ ಜೀವಿಗೆ ಹೊಸದಾಗಿ ಬರುವಂಥ ಶರೀರದಲ್ಲಿ ಹೋಗಿ ಸೇರುತ್ತದೆ. ಇದೇ ರೀತಿಯಲ್ಲಿ ಪ್ರತಿಯೊಬ್ಬ ಸ್ತ್ರೀ-ಪುರುಷರೂ ಇದುವರಿವಿಗೂ ಲೆಕ್ಕವಿಲ್ಲದಷ್ಟು ಎಷ್ಟೋ ಕೋಟಿ ಶರೀರಗಳನ್ನೆತ್ತಿ, ಆಯಾ ಶರೀರಗಳಿಗೆ ಬಂಧುಗಳಾಗಿದ್ದವರೆಲ್ಲರನ್ನೂ ಬಿಟ್ಟು, ಅವರ ಜ್ಞಾಪಕದ ಲೇಶವೂ ಇಲ್ಲದೆ ಸಂಪೂರ್ಣವಾಗಿ ಮರೆತು, ಈಗ ಈ ಶರೀರದಲ್ಲಿ ಬಂದು ಸೇರಿರುತ್ತಾರೆ. ಪ್ರಸ್ತುತಃ ಅವರು ಈ ಶರೀರಕ್ಕೆ ಬಂಧುಗಳಾಗಿರುವವರ ಮೇಲೆಯೂ ಉಳಿದ ವಸ್ತುವಾಹನಾದಿಗಳ ಮೇಲೆಯೂ ಇದುವರಿವಿಗೂ ಆಸೆಯಿಟ್ಟುಕೊಂಡಿರುವರಲ್ಲವೇ? ಇವರು ಈ

ಶರೀರದ ಸಂಬಂಧಿಗಳೊಡನೆ ಲೋಲರಾಗಿರುವ ವೇಳೆಯಲ್ಲಿ, ಪೂರ್ವಜನ್ಮದಲ್ಲಿ ಇವರಿಗೆ ದೊರಕಿದ್ದ ಕುಟುಂಬ ಸಂಬಂಧಿಗಳ ವಿಷಯವೇನಾದರೂ ತಿಳಿಯುವುದಕ್ಕೆ ಸಾಧ್ಯವೇ? ನಿಜವಾಗಿಯೂ ಆ ಸಂಬಂಧದ ವಾಸನೆಯೇ ಇವರಿಗೆ ತೋರದಂತಿರುತ್ತದೆ. ಇದೇ ರೀತಿಯಲ್ಲಿಯೇ ಈ ಸ್ತ್ರೀ-ಪುರುಷರು ಈಗ ತಾವು ಜನ್ಮಿಸಿರುವ ಕುಟುಂಬವನ್ನು ಬಿಟ್ಟು ಹೊರಟುಹೋಗುವಾಗ, ಈ ಬಂಧುಗಳ ಮೇಲೆಯೂ ಮತ್ತು ಇತರ ವಸ್ತುವಾಹನಗಳ ಮೇಲೆಯೂ ತಮಗೆ ಈಗಿರುವ ಆಸೆಗಳೆಲ್ಲವನ್ನೂ ತಮಗೇನೂ ತಿಳಿಯದಿರುವಂತೆ ಸಂಪೂರ್ಣವಾಗಿ ಮರೆತು ಈ ಶರೀರವನ್ನು ಬಿಟ್ಟು ಕದಲುವರು. ಅಂದರೆ ಈ ಜನ್ಮದ ಕುಟುಂಬದಲ್ಲಿರುವ ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಇತರ ಬಂಧುಗಳು ಮತ್ತು ಸ್ನೇಹಿತರು ಮೊದಲಾದವರನ್ನು ನೋಡಿ ಅವರ ಮೇಲೆ ವಿಶೇಷ ಆಸೆಯುಳ್ಳವರಾಗಿದ್ದಾರೆ. ಈ ಜನ್ಮದಲ್ಲಿ ಹೆಂಡಿರು ಮಕ್ಕಳು ಬಂಧುಗಳ ಮೇಲೆ ಯಾವರೀತಿಯಲ್ಲಿ ಅವರು ಆಶೆಯುಳ್ಳವರಾಗಿರುತ್ತಾರೆಯೋ ಅದೇ ತೆರದಲ್ಲಿ, ಇದುವರಿವಿಗೆ ತಮಗೆ ದೊರಕಿದ್ದ ಜನ್ಮಗಳಲ್ಲಿನ ಬಂಧುಬಾಂಧವರಲ್ಲಿ ಅಪರಿಮಿತವಾದ ಪ್ರೀತಿಯುಳ್ಳವರಾಗಿದ್ದರು. ಮತ್ತು ಹಿಂದಿನಜನ್ಮಗಳಲ್ಲಿನ ಶರೀರ ಸಂಬಂಧಿಗಳ ವಿಷಯದಲ್ಲಿ ಪ್ರೀತಿಯಿಟ್ಟು ಅವಸಾನಸಮಯದಲ್ಲಿ ಅವೆಲ್ಲವನ್ನೂ ಮರೆತು ತಮಗೆ ಅತ್ಯಂತ ಇಷ್ಟವಾದ ವಿಷಯಗಳನ್ನೇ ಗುರಿಯಿಟ್ಟು ಪ್ರಾಣವನ್ನು ಬಿಟ್ಟಿದ್ದರಿಂದ ಈ ಜನ್ಮವನ್ನು ಪಡೆದು ಪೂರ್ವಜನ್ಮಜ್ಞಾನವನ್ನು ಸ್ವಲ್ಪವೂ ಹೊಂದದೆ ಯಾವರೀತಿಯಲ್ಲಿರುತ್ತಾರೆಯೋ ಅದೇರೀತಿಯಲ್ಲಿಯೇ, ಈ ಜನ್ಮದಲ್ಲಿ ಆಯಾಯಾ ಜೀವಿಗಳಿಗೆ ದೊರಕಿದ ಬಂಧು-ಬಾಂಧವರೊಡನೆ ಪ್ರೀತಿಯಿಂದಿದ್ದು ಮರಣಸಮಯದಲ್ಲಿ ಎಲ್ಲವನ್ನೂ ಮರೆತು ತಮ್ಮ ಮುಂದಿನ ಜನ್ಮಕ್ಕೆ ಬೀಜಭೂತವಾಗಿರುವ ಯಾವುದೋ ಒಂದು ಇಷ್ಟವಾದ ವಿಷಯವನ್ನು ನೆನಸುತ್ತ ಪ್ರಾಣವನ್ನು ಬಿಡುವರು. ಅವರಿಗೆ ಅದಕ್ಕೆ ತಕ್ಕಂಥ ಜನ್ಮವು ದೊರಕಿ ಈ ಜನ್ಮದ ತಿಳುವಳಿಕೆಯೇ ಇಲ್ಲದಂತಿರುವರು.

'ಪ್ರತಿ ಜೀವಿಗೂ ಪೂರ್ವಜನ್ಮದ ಕರ್ಮವಾಸನೆಯುಂಟು. ಅದರ ಫಲವನ್ನು ಮುಂದಿನ ಜನ್ಮದಲ್ಲಿ ಅನುಭವಿಸಿಯೇ ತೀರಬೇಕು' ಎಂದು ಹಿಂದೆಯೇ ಹೇಳಿದೆ. ಆದರೆ ಹಿಂದಿನಜನ್ಮದಲ್ಲಿ ತಮಗಾದ ಅನುಭವಗಳ

ತಿಳುವಳಿಕೆಯನ್ನು ಮಟ್ಟಿಗೆ ಹೊಂದಿರುವವರು ಮಾನವರಲ್ಲಿ ಅತಿ ವಿರಳ. ಹೀಗೆ ಪೂರ್ವಜನ್ಮಜ್ಞಾನವಿರುವವರಲ್ಲಿ ಶಾಂತಿದೇವಿಯೇ ಮೊದಲಾದ ಕೆಲವರ ವಿಷಯವನ್ನು ವಿಸ್ತಾರವಾಗಿ ಹಿಂದೆಯೇ ಹೇಳಿದೆ. ಜೀವಿಗಳು ಮರಣಕಾಲದಲ್ಲಿ ಯಾವ ವಿಷಯವನ್ನೂ ಮನಸ್ಸಿನಲ್ಲೆಣಿಸದೆ ಪ್ರಾಣವನ್ನು ಬಿಟ್ಟದ್ದೇ ಆದರೆ, ಅಂಥವರಿಗೆ ಪುನರ್ಜನ್ಮವೇ ದೊರಕದು. ಕರ್ಮಬದ್ಧರಾದ ಜೀವಿಗಳಿಗೆ ಕರ್ಮವು ಸವೆದಹೊರತು ಇಂತಹ ಕೋರಿಕೆಗಳಿಲ್ಲದೆ ನಿರ್ಮಲವಾದ ಮನೋಸ್ಥಿತಿಯು ಮರಣಸಮಯದಲ್ಲಿ ದೊರಕಲಾರದು. ಪೂರ್ವಜನ್ಮಗಳ ಕರ್ಮಫಲಗಳನ್ನು ಅನುಭವಿಸುವುದರಲ್ಲಿ ಜನ್ಮಜನ್ಮಕ್ಕೂ ನಶ್ವರವಾದ ವಸ್ತುಗಳಲ್ಲಿ ಆಸೆಯನ್ನು ಕಡಿಮೆಮಾಡುತ್ತ, ಆಧ್ಯಾತ್ಮಿಕ ವಿಷಯಗಳಲ್ಲಿ ಮನಸ್ಸನ್ನು ತಿರುಗಿಸಿ, ಪರಮಾತ್ಮಧ್ಯಾನದಲ್ಲಿಯೇ ಆಗಾಗ್ಗೆ ಮನಸ್ಸನ್ನು ಲೀನಮಾಡುವುದಕ್ಕೆ ಯತ್ನಿಸುತ್ತ, ಧ್ಯಾನನಿಷ್ಠೆಯಲ್ಲಿ ಯೋಗದಿಂದ ಜ್ಯೋತಿಸ್ಸ್ವರೂಪನಾದ ಪರಮಾತ್ಮನ ನಿಶ್ಚಯಜ್ಞಾನವನ್ನು ಪಡೆದು, ಕಡೆಯಲ್ಲಿ, ಮೇಲೆಹೇಳಿದಂತೆ, ಆಶಾರಹಿತವಾದ ಮನಸ್ಸಿನಿಂದ ಶರೀರವನ್ನು ಬಿಟ್ಟದ್ದೇ ಆದರೆ, ಅಂಥವರಿಗೆ ಪುನರ್ಜನ್ಮವೆಂಬುದೇ ಇಲ್ಲ ಮತ್ತು ಅವರು ಸಾಯುಜ್ಯಪದವಿಯನ್ನು ಖಂಡಿತವಾಗಿಯೂ ಅನುಭವಿಸುವರು. ಇಂತಹ ಸ್ಥಿತಿಗೇ ಮೋಕ್ಷವೆಂದು ಹೆಸರು. ಪರಮಹಂಸರಾದ ಯೋಗೀಶ್ವರರಿಗೇ ಇಂತಹ ಸ್ಥಿತಿಯು ದೊರಕುವುದು.

ಈಯೊಬ್ಬ ಜೀವನು ಹಿಂದೆ ತಾನಿದ್ದ ಕುಟುಂಬಕ್ಕೆ ಸೇರಿದ ಬಂಧುಬಾಂಧವರೆಲ್ಲರನ್ನೂ ಬಿಟ್ಟು ತಾನೊಬ್ಬನೇ ಯಾವರೀತಿಯಲ್ಲಿ ಬಂದನೋ, ಅದೇ ರೀತಿಯಲ್ಲಿಯೇ, ಆ ಕುಟುಂಬಕ್ಕೆ ಸೇರಿದಇತರ ಜೀವಿಗಳೂ ತನಗೆ ಸಂಬಂಧಿಸಿದವರನ್ನೆಲ್ಲಾ ತೊರೆದು ಒಂಟೊಂಟಿಯಾಗಿ ಹೊರಹೊರಡುತ್ತಾರೆ. ಇಂತಹ ಪ್ರತಿಯೊಬ್ಬರೂ ತಮತಮಗೆ ಶರೀರಸಂಬಂಧವು ಈ ಜನ್ಮದಲ್ಲಿ ದೊರಕಿದರೂ ಕರ್ಮಸಂಬಂಧವಿಲ್ಲದ್ದರಿಂದ ತಮ್ಮ ತಮ್ಮ ಕರ್ಮಗಳಿಗನುಗುಣವಾಗಿ ಬೇರೆಬೇರೆ ದೇಶ, ಬೇರೆಬೇರೆ ಕುಟುಂಬ, ಇವುಗಳಲ್ಲಿ ಜನ್ಮವನ್ನೆತ್ತಿ ಹೊಸಹೊಸ ಜೀವಿಗಳ ಸಂಬಂಧವನ್ನು ಆ ಜನ್ಮದಲ್ಲಿ ಪಡೆದು ಕರ್ಮಸಂಬಂಧವನ್ನು ಎಳ್ಳಷ್ಟೂ ಹೊಂದದೆ ಮರಣವಾದ ನಂತರ ಹಿಂದಿನ ವಿಷಯಗಳೆಲ್ಲವನ್ನೂ ಮರೆತು ತಮ್ಮ ಪ್ರಯಾಣ

ವನ್ನು ಮುಂದರಿಸುತ್ತಾರೆ. ಹೀಗೆ ಪ್ರತಿ ಜೀವಿಯೂ ಬೇರೆಬೇರೆ ಮಾರ್ಗಗಳಲ್ಲಿ ತನ್ನ ಪ್ರಯಾಣವನ್ನು ಬೆಳೆಸಿ ಕೋಟ್ಯಂತರವಾಗಿ ಜನ್ಮಗಳನ್ನು ಪಡೆದು, ಕಡೆಗೆ ತಾನು ಆಯಾಯಾ ಜನ್ಮಗಳಲ್ಲಿ ಅನುಭವಿಸಿದ ಸುಖದುಃಖಗಳನ್ನು ಕುರಿತು ಯೋಚಿಸುತ್ತ, ತನ್ನ ಮೂಢಬುದ್ಧಿಗೆ ಪಶ್ಚಾತ್ತಾಪಪಟ್ಟು, ಕಡೆಗೆ ಪರಮಾತ್ಮಧ್ಯಾನದ ಕಡೆಗೆ ಬುದ್ಧಿ ಮನಸ್ಸುಗಳನ್ನು ತಿರುಗಿಸಿ, ಅದರಿಂದ ಕರ್ಮವಾಸನೆಗಳನ್ನು ಕಡಿಮೆಮಾಡಿಕೊಳ್ಳುತ್ತ, ಅಂತ್ಯದಲ್ಲಿ ಪರಮಾತ್ಮಧ್ಯಾನನಿಷ್ಠಾತತ್ಪರನಾಗಿ ಯೋಗದಿಂದ ಆ ಪರಮಾತ್ಮನಲ್ಲಿ ಐಕ್ಯವಾಗುವನು. ಇದೇ ಪ್ರತಿಜೀವಿಯ ಅಂತ್ಯಸ್ಥಿತಿ. ಆದರೆ ಪ್ರತಿಜೀವಿಯು ಈ ಅಂತ್ಯಸ್ಥಿತಿಯನ್ನು ಪಡೆಯುವಪರಿವಿಗೂ ಲೆಕ್ಕವಿಲ್ಲದಷ್ಟು ಜನ್ಮಗಳನ್ನು ಪಡೆಯಬೇಕಾಗುವುದು.

ಜೀವಿಯು ತಾನು ಮೊದಲು ವಾಸವಾಗಿದ್ದ ಮನೆಯಲ್ಲಿ ಪ್ರಾಣವನ್ನು ಬಿಡುವಾಗ, ಶರೀರದಲ್ಲಿ ಸ್ಥಿರವಾಗಿ ನಿಂತಿದ್ದ ಶ್ವಾಸಗಳೆಲ್ಲವೂ ವ್ಯಯಹೊಂದಿ ಕಡೆಯಲ್ಲಿ ಮಿಕ್ಕಿದ್ದ ಶ್ವಾಸಗಳು ಒಟ್ಟಿಗೆ ಸೇರಿ ಒಂದು ದೊಡ್ಡ ಶ್ವಾಸವಾಗಿ ಪರಿಣಮಿಸಿ, ಅದು ಮೂಗಿನ ಹೊಳ್ಳೆಗಳ ಮೂಲಕ ಶರೀರವನ್ನು ಬಿಟ್ಟು ಹೊರಹೊರಡುತ್ತದೆ. ಆಮೇಲೆ ಪುನಃ ಆ ಮೂಗಿನ ಹೊಳ್ಳೆಗಳಲ್ಲಿ ಶ್ವಾಸವು ನಡೆಯದೆ ನಿಂತುಹೋಗುತ್ತದೆ. ಇದನ್ನು 'ಮರಣ' ಅಥವಾ 'ಮೃತಿ' ಯೆಂದು ಕರೆಯುವರು. ಆದರೆ ಜೀವಿಗೆ ಮೃತಿಯಿಲ್ಲವಾದುದರಿಂದ ಅವನು ಈ ಜನ್ಮದಲ್ಲಿ ಪಡೆದಿದ್ದ ಶರೀರವೆಂಬ ಈ ಗೂಡನ್ನು ಬಿಟ್ಟು ಮತ್ತೊಂದನ್ನು ಆಶ್ರಯಿಸುವುದಕ್ಕಾಗಿ ಹೊರಡುತ್ತಾನೆಂದು ತಿಳಿಯಬೇಕು. ಮೇಲೆ ಹೇಳಿದಂತೆ ಶ್ವಾಸವು ನಡೆಯದೆ ನಿಂತ ತಕ್ಷಣವೇ ಪ್ರಾಣಹೋಯಿತೆಂದು ತಿಳಿದು ಆ ದೇಹಸಂಬಂಧಿಗಳಾದ ಭಾರ್ಯಾಪುತ್ರಬಂಧುಮಿತ್ರರು ಆ ದೇಹಿಯನ್ನು ಕುರಿತು ಹೊಟ್ಟೆಯೊಡೆಯುವಂತೆ ಗೋಳಿಡುತ್ತ, ಜೀವಿಯು ಬಿಟ್ಟ ಆ ಕಳೇಬರದಮೇಲೆ ಬಿದ್ದು ಹೊರಳಾಡುತ್ತ ಬಹಳವಾಗಿ ದುಃಖಿಸುತ್ತಿರುವರು. ಸ್ತ್ರೀಪುರುಷರಿರಾ! ಇದೆಲ್ಲಾ ಮಾಯೆಯ ಫಲ. ಇಂತಹ ಮಾಯೆಯ ಪ್ರಭಾವವನ್ನು ನೋಡಿದಿರಾ? ಹಿಂದೆಯೇ ಹೇಳಿದಂತೆ, ಕರ್ಮಸಂಬಂಧವಿಲ್ಲದೆ ದೇಹಸಂಬಂಧವನ್ನು ಕೆಲವು ದಿನಗಳು ಮಟ್ಟಿಗೆ ಪಡೆದು ಆ ಸಂಬಂಧವು ಬಿಟ್ಟುಹೋದಮಾತ್ರಕ್ಕೆ

ಆ ಶರೀರವನ್ನು ಕುರಿತು ದುಃಖಿಸುವುದೇತಕ್ಕೆ ? ಹಿಂದಿನ ಪ್ರಕರಣಗಳಲ್ಲಿ ತಿಳಿಸಿದ್ದಂತೆ ಜೀವಿಗಳು ಅರವಟ್ಟಿಗೆಯಲ್ಲಿ ನೀರು ಕುಡಿಯುವುದಕ್ಕಾಗಿ ಒಟ್ಟುಸೇರಿದ ದಾರಿಪ್ರಯಾಣಿಕರಂತೆ ಸ್ವಲ್ಪಕಾಲ ಜೊತೆಯಲ್ಲಿದ್ದು ತಮ್ಮ ದಾರಿಯನ್ನು ಹಿಡಿದು ತಾವು ಹೊರಟುಹೋಗುವಂತೆಯೂ, ಒಂದು ಸಂತೆ ಯಲ್ಲಿ ಬೇರೆಬೇರೆ ಊರುಗಳಿಂದ ಬಂದು ಒಟ್ಟಿಗೆ ಸೇರಿ ಸಂತೆ ಮುಗಿದ ಮೇಲೆ ತಾವು ಬಂದ ಉದ್ದೇಶಗಳನ್ನು ನೆರವೇರಿಸಿಕೊಂಡು ತಮ್ಮತಮ್ಮ ಊರುಗಳನ್ನು ಕುರಿತು ಹೊರಟುಹೋಗುವಂತೆಯೂ, ಜೀವಿಗಳು ತಮ್ಮ ಪ್ರಾರಬ್ಧಕರ್ಮಗಳಿಗೆ ತಕ್ಕಂತೆ ಯಾವುದೋ ದೇಹಗಳನ್ನು ಪಡೆದು, ಒಂದು ಕುಟುಂಬದಲ್ಲಿ ಶರೀರಸಂಬಂಧಿಗಳಾಗಿ ಹುಟ್ಟಿ, ಕರ್ಮಫಲವು ಮುಗಿದಮೇಲೆ ಆ ಶರೀರವನ್ನು ಬಿಟ್ಟು ಹೊರಟರೆ ನಾವುಗಳು ದುಃಖಿಸ ಬೇಕೇ ? ಹೀಗೆ ದುಃಖಿಸಬೇಕಾದುದಕ್ಕೆ ಕಾರಣವೇನು ? ಹಾಗೆ ದುಃಖಿ ಸಿದ್ದರಿಂದಾಗುವ ಫಲವೇನು ? ಇವೆಲ್ಲವೂ ಅಜ್ಞಾನದಫಲ ಮತ್ತು ಮಾಯಾ ಪ್ರಭಾವ. ಪ್ರತಿ ಜೀವಿಯು ಹುಟ್ಟುವಾಗಲೇ ತನ್ನ ಆ ಜನ್ಮದಲ್ಲಿ ಆಯುಃ ಪ್ರಮಾಣಕ್ಕೆ ತಕ್ಕಂತೆ ಶ್ವಾಸಗಳನ್ನು ಪಡೆದು ಬಂದಿರುತ್ತಾನೆ. ಅವೆಲ್ಲವೂ ನಷ್ಟವಾದ ಕ್ಷಣಕ್ಕೆ ಸರಿಯಾಗಿ ಶರೀರವನ್ನು ಬಿಡುವುದು ಸ್ವಾಭಾವಿಕ. ಅವನ ನಾಸಿಕಾಕುಹರದಲ್ಲಿ ಎಷ್ಟು ಕೋಟಿ ಎಷ್ಟು ಲಕ್ಷ ಎಷ್ಟು ಸಾವಿರ ಶ್ವಾಸಗಳು ನಡೆಯಬೇಕಾದುದಿವೆಯೋ ಅಷ್ಟು ನಡೆದು ಕೊನೆ ಮುಟ್ಟು ತ್ತದೆ. ಒಂದು ಕುಡಿಕೆಯ ತುಂಬ ಹಣವನ್ನು ಇಟ್ಟು ಪ್ರತಿದಿನವೂ ಅದನ್ನು ಸ್ವಲ್ಪಸ್ವಲ್ಪವಾಗಿ ವ್ಯಯಮಾಡುತ್ತ ಬಂದಲ್ಲಿ ಕಡೆಗೆ ಹಣವೆಲ್ಲವೂ ಕಡೆಬಿದ್ದು ಕುಡಿಕೆಯು ಯಾವರೀತಿಯಲ್ಲಿ ಬರಿಯದಾಗುತ್ತದೆಯೋ, ಹಾಗೆಯೇ ಪ್ರತಿಜೀವಿಗೂ ದೊರಕಿದ ಶರೀರವೆಂಬ ಈ ಕುಡಿಕೆಯಲ್ಲಿ ತುಂಬಿದ್ದ ಶ್ವಾಸಗಳೆಂಬ ಹಣವು ಹಗಲೂ ರಾತ್ರಿಯೂ ಎಡೆಬಿಡದೆ ಅಂದರೆ ಕಣ್ಣುರೆಪ್ಪೆಹೊಡೆಯುವ ಕಾಲವಾದರೂ ಸುಮ್ಮನಿರದೆ ಒಂದೇ ಸಮ ನಾಗಿ ವ್ಯಯವಾಗುತ್ತಿರಲಾಗಿ, ಜೀವಿಯ ಕರ್ಮಫಲಕ್ಕೆ ತಕ್ಕಂತೆ ಏರ್ಪಡಿ ಸಿದ್ದ ಶ್ವಾಸಗಳೆಲ್ಲವೂ ಮುಗಿದಮೇಲೆ ಶರೀರವು ಪ್ರೇತಭಾವವನ್ನು ಹೊಂದು ತ್ತದೆ. ಈ ಶ್ವಾಸಗಳ ಲೆಕ್ಕವು ಇಷ್ಟೇ ಎಂದಿರದೆ ಅಸಂಖ್ಯಾತವಾಗಿದ್ದರೆ ಪ್ರಾಣಿಗಳು ಚಿರಂಜೀವಿಗಳಾಗಿರಬೇಕು. ಇಷ್ಟು ಸಂವತ್ಸರಗಳು ಇಷ್ಟು

ಸಂಖ್ಯೆಯ ಶ್ವಾಸಗಳು ನಡೆಯಬೇಕೆಂದು ಪ್ರತಿಜೀವಿಗೂ ವಿಧಿಸಿರೋಣದ ರಿಂದಲೇ ಆ ಶ್ವಾಸಗಳೆಲ್ಲವೂ ಜೀವಿಗಳ ಮೂಗಿನ ಎರಡು ರಂಧ್ರಗಳಲ್ಲಿಯೂ ನಡೆಯುತ್ತಿದ್ದು ಕಡೆಯಲ್ಲಿ, ಹಿಂದೆ ಹೇಳಿದಂತೆ, ಹೊರಹೊರಟ ಪ್ರಾಣ ವಾಯುವಿನ ದೊಡ್ಡ ಶ್ವಾಸವು ಹಿಂದಿನ ಶರೀರವನ್ನು ಬಿಟ್ಟು ಬೇರೆ ಶರೀರ ವನ್ನು ಪ್ರವೇಶಿಸುತ್ತದೆ. ಆ ಹೊಸಶರೀರದಲ್ಲಿ ಇಷ್ಟೇ ಶ್ವಾಸಗಳು ನಡೆಯಬೇಕೆಂದು ಈಶ್ವರನು ಮೊಟ್ಟಮೊದಲೇ ವಿಧಿಸಿದ್ದ ಪ್ರಕಾರ ಪ್ರತಿ ಶ್ವಾಸವು ನಡೆವಾಗಲೂ ಅಷ್ಟಷ್ಟಕ್ಕೆ ಆಯುಃಪ್ರಮಾಣವು ತಗ್ಗುತ್ತಲೇ ಬರುತ್ತದೆ. ಈ ವಿಷಯವು ಅನೇಕರಿಗೆ ತಿಳಿಯದು. ಶ್ವಾಸಗಳು ಹೆಚ್ಚು ಹೆಚ್ಚಾಗಿ ನಡೆದಂತೆಲ್ಲ ಆಯುಸ್ಸು ಬೇಗಬೇಗನೆ ಕ್ಷೀಣವಾಗುತ್ತ ಬರುತ್ತದೆ.

ಯಾವನಾದರೂ ತನ್ನ ಮೂಗಿನ ಹೊಳ್ಳೆಯಲ್ಲಿ ಪ್ರತಿದಿನವೂ ನಡೆಯ ಬಹುದಾದ ಇಪ್ಪತ್ತೊಂದುಸಾವಿರದ ಆರನೂರು ಶ್ವಾಸಗಳನ್ನು ಹತ್ತು ದಿನಗಳಲ್ಲಿ ವ್ಯಯಮಾಡಿದ್ದೇ ಆದರೆ, ಅವನ ಆಯುಃಪ್ರಮಾಣದಲ್ಲಿ ಒಂದು ದಿನ ಮಾತ್ರ ತಗ್ಗುವುದೇ ಹೊರತು ಹತ್ತುದಿನಗಳ ಆಯುಸ್ಸು ನಷ್ಟ ವಾಗುವುದಿಲ್ಲ. ಹಾಗಿಲ್ಲದೆ ಅದೇ ಇಪ್ಪತ್ತೊಂದುಸಾವಿರದ ಆರನೂರು ಶ್ವಾಸಗಳನ್ನು ಇಪ್ಪತ್ತು ದಿನಗಳಲ್ಲಿ ವ್ಯಯಮಾಡಿದರೆ ಆಗಲೂ ಒಂದು ದಿನದ ಆಯುಸ್ಸು ಕಡಿಮೆಯಾದೀತೇ ಹೊರತು ಇಪ್ಪತ್ತು ದಿನಗಳ ಆಯುಸ್ಸು ತಗ್ಗಲಾರದು. ಹೀಗೆಯೇ ಎಷ್ಟೋ ಲೆಕ್ಕವಿಲ್ಲದಷ್ಟು ಶರೀರ ಗಳಲ್ಲಿ ಶ್ವಾಸಗಳು ನಡೆದು ನಡೆದು ಕಳೆದಮೇಲೆ ಆ ಶರೀರಗಳೆಲ್ಲವನ್ನೂ ಕ್ರಮವಾಗಿ ಒಗೆದುಬಿಟ್ಟು ಕಡೆಯ ಶ್ವಾಸವು ಈಗ ಈ ಶರೀರದಲ್ಲಿ ಬಂದು ಸೇರಿರುತ್ತದೆ. ಇದರಲ್ಲಿಯೂ ಕೂಡ ಇನ್ನುಮೇಲೆ ಗೊತ್ತಾದ ಕೆಲವು ವರ್ಷಗಳು ಮಾತ್ರವೇ ನೆಲಸಿದ್ದು ಅನಂತರ ಇದನ್ನೂ ಬಿಟ್ಟುಬಿಟ್ಟು ಬೇರೆ ಶರೀರದೊಳಕ್ಕೆ ಹೋಗಿ ಸೇರುತ್ತದೆ. ಒಂದು ಕುಟುಂಬದಲ್ಲಿರು ವವರೆಲ್ಲರೂ ಮೃತಿಹೊಂದಿ ಒಬ್ಬೊಬ್ಬರಾಗಿ ಹೊರಡುವವರೇ ಹೊರತು ಆ ಕುಟುಂಬದಲ್ಲಿಯೇ ಶಾಶ್ವತವಾಗಿರುವವರೊಬ್ಬರೂ ಇಲ್ಲವು.

ಮತ್ತು ಸ್ತ್ರೀಪುರುಷರು ತಮ್ಮ 5-10-15-20 ವರ್ಷಗಳಲ್ಲಿ ಸಾಧಾ ರಣವಾಗಿ ಮೃತಿಹೊಂದುತ್ತಿದ್ದಾರಲ್ಲವೇ ? ಹೀಗೆ ಸಾಯುವುದಕ್ಕೆ ಕಾರಣ

ವೇನೆಂದರೆ, ಈಶ್ವರನು ಆಯಾ ಜೀವಿಗಳಿಗೆ ಆಯಾ ವರ್ಷಗಳ ಆಯುಸ್ಸಿಗೆ ತಕ್ಕಂತೆ ಶ್ವಾಸಗಳನ್ನು ಲೆಕ್ಕಮಾಡಿ ವಿಧಿಸಿರುತ್ತಾನಾದುದರಿಂದ ಇಷ್ಟು ವರ್ಷ ಮತ್ತು ಇಷ್ಟು ತಿಂಗಳು ಇವುಗಳಿಗೆ ತಕ್ಕಷ್ಟು ಶ್ವಾಸಗಳು ಕಳೆದು ಹೋದ ಉತ್ತರಕ್ಷಣವೇ ಅವರು ಸಾಯುವರು. ಪ್ರಪಂಚದಲ್ಲಿ ಕನ್ನಡ, ತೆಲುಗು, ಅರವ, ಸಂಸ್ಕೃತ, ಹಿಂದಿ, ಹಿಂದೂಸ್ತಾನಿ ಮೊದಲಾದ ಅನೇಕ ಹಿಂದೂದೇಶದ ಭಾಷೆಗಳನ್ನೂ ಮತ್ತು ಜರ್ಮನ್, ಜಪಾನ್, ಇಂಗ್ಲಿಷ್, ಫ್ರೆಂಚ್, ಅರಬ್ಬಿ, ರಷ್ಯನ್ ಮೊದಲಾದ ಇತರದೇಶದ ಭಾಷೆಗಳನ್ನೂ ಆಡುವವರು ಅನೇಕರಿದ್ದಾರೆ. ಈ ಭಾಷೆಗಳನ್ನು ಮಾತನಾಡುವವರು ಮೃತಿ ಹೊಂದಿದ್ದೇ ಆದರೆ, ಅದೇ ಭಾಷೆಯನ್ನೇ ಮಾತನಾಡುವ ಜಾತಿಯಲ್ಲಿ ಹುಟ್ಟುವರೆಂಬ ನಂಬಿಕೆಯಿಲ್ಲ. ಅವರು ತಮ್ಮತಮ್ಮ ಪುಣ್ಯಪಾಪಕರ್ಮಗಳ ಫಲಕ್ಕೆ ತಕ್ಕಂತೆ ಬೇರೆಬೇರೆ ಭಾಷೆಗಳನ್ನಾಡುವ ಬೇರೆಬೇರೆ ದೇಶಗಳಲ್ಲಿ ಬೇರೆಬೇರೆ ಜಾತಿಗಳೊಳಗೆ ಹುಟ್ಟಿ, ಆ ಭಾಷೆಗಳನ್ನಾಡುತ್ತ ಅಲ್ಲಲ್ಲಿ ತಮಗೆ ದೊರಕಿದ ಹೆಂಡತಿಮಕ್ಕಳು, ಬಂಧುಮಿತ್ರರು ಮೊದಲಾದವರಲ್ಲಿ ಆಸೆಯನ್ನಿಟ್ಟು ತಮಗೆ ಈಶ್ವರನಿಂದ ವಿಧಿಸಿದ್ದ ಆಯುಃಪ್ರಮಾಣವನ್ನು ಆ ದೇಹದಲ್ಲಿಯೇ ಕಳೆದು, ಕೊನೆಗೆ ಆ ಶರೀರವನ್ನು ಬಿಟ್ಟು ಮುಂದೆ ಹೊರಡುವರು. ಹಾಗೆ ಹೊರಟಮೇಲೆ ಪೂರ್ವಜನ್ಮದಲ್ಲಿನ ಭಾಷಾಜ್ಞಾನವೆಂಬುದೇ ಇಲ್ಲದಂತೆ ಬೇರೆ ದೇಶಗಳಲ್ಲಿ ಬೇರೆ ಭಾಷೆಗಳನ್ನಾಡುವ ಯಾವುದೋ ಕುಟುಂಬದಲ್ಲಿ ಜನಿಸುತ್ತಾರೆ. ಅಂದರೆ ಜೀವನಿಗೆ ದೇಶ, ಜಾತಿ, ಭಾಷೆ ಈ ಭೇದಗಳಿಲ್ಲ. ಎಲ್ಲಾ ಯೋನಿಗಳಲ್ಲಿಯೂ, ಕರ್ಮಕ್ಕೆ ತಕ್ಕಂತೆ, ಜನ್ಮವು ಸಿಕ್ಕಬಹುದಾದ ಸಂಭವವಿರುವುದರಿಂದಲೇ ಜೀವನಿಗೆ ಹೆಸರಾಗಲಿ, ಜಾತಿಯಾಗಲಿ ಇಲ್ಲ. ಎಲ್ಲಾ ಜಾತಿಗಳೂ, ಭಾಷೆಗಳೂ, ಅವನಿಗೆ ಸೇರಿದವೇ ಆಗಿರುತ್ತವೆ.

ಪ್ರಪಂಚದಲ್ಲಿರುವ ಪ್ರತಿಯೊಂದು ಜಾತಿ ಮತ್ತು ಕುಟುಂಬದಲ್ಲಿರುವವರೆಲ್ಲರೂ ಆಗಾಗ ಮೃತಿಹೊಂದಿ ಎಲ್ಲೆಲ್ಲಿ ಯಾವಯಾವ ಜಾತಿಯಲ್ಲಿ ಹುಟ್ಟುತ್ತಿರುವರೋ, ಅಲ್ಲಲ್ಲಿ ಪೂರ್ವಜನ್ಮಗಳಲ್ಲಿದ್ದ ತಮ್ಮ ಕೆಂಪು ಕಪ್ಪೆಂಬ ಶರೀರಚ್ಛಾಯೆಗಳು ಅವರಿಗೆ ಬರವು. ಬೇರೆಬೇರೆ ಜನ್ಮಗಳಲ್ಲಿ ಬೇರೆಬೇರೆ ಶರೀರದ ಬಣ್ಣ, ಬೇರೆಬೇರೆ ಜಾತಿ, ಬೇರೆಬೇರೆ ಹೆಸರುಗಳು ದೊರಕು

ತ್ತಿರುತ್ತವೆಯೇ ಹೊರತು ಹಿಂದಿನ ಜನ್ಮದಲ್ಲಿ ತಮಗೊದಗಿದ್ದ ಮೇಲೆ ಹೇಳಿದುವುಗಳಲ್ಲಿ ಯಾವುದೂ ಇರದು ಮತ್ತು ಮುಂದಿನ ಜನ್ಮದಲ್ಲಿ ಈ ಜನ್ಮದಲ್ಲುಂಟಾದುದೇ ಸಂಭವಿಸುತ್ತದೆಂಬುದೂ ಇಲ್ಲವು. ಒಂದುವೇಳೆ ಮುಂದಿನ ಜನ್ಮದಲ್ಲಿಯೂ ಅದೇ ದೇಶ ಮತ್ತು ಅದೇ ಜಾತಿಯು ಉಂಟಾಗಬಹುದು. ಆದರೆ ಅದೇ ತರಹದ ಶರೀರ ಮತ್ತು ಅದೇ ಹೆಸರು ಇವು ಮಾತ್ರ ಎಂದಿಗೂ ಉಂಟಾಗದು. ಹಿಂದೆ ಹೇಳಿದ್ದಂತೆ ಹಿಂದಿನ ಜನ್ಮದಲ್ಲಿ 'ಶಾಂತಿದೇವಿ' ಎಂಬ ಹೆಸರುಳ್ಳವಳಿಗೆ ಈ ಜನ್ಮದಲ್ಲಿ 'ಭಗವತಿ' ಎಂದು ನಾಮಕರಣವಾಗಿದೆ. ಆದರೆ ಆಯಾ ಮನೆಯಲ್ಲಿ ಹುಟ್ಟಿ ಬೆಳೆದಮೇಲೆ ಹಿಂದಿನ ಜನ್ಮದಲ್ಲಿ ಯಾವಯಾವ ಕಂಠಧ್ವನಿಯಿಂದ ಮಾತನಾಡುತ್ತಿದ್ದರೋ ಅದೇ ಕಂಠಧ್ವನಿಯಿಂದ ಮಾತನಾಡುತ್ತಾರೆ. ತಾವು ಧರಿಸಿದ ಶರೀರವು ಮಟ್ಟಿಗೆ ನಷ್ಟವಾಗುತ್ತದೆಯೇ ಹೊರತು ಆಯಾ ಶರೀರಗಳನ್ನಂಟಿಬಂದ ಕಂಠಧ್ವನಿಯು ಮಟ್ಟಿಗೆ ವ್ಯತ್ಯಾಸವನ್ನು ಹೊಂದದೆ ಜೀವನನ್ನು ಹಿಂಬಾಲಿಸಿಯೇ ಶಿಶುಶರೀರವನ್ನು ಪ್ರವೇಶಿಸುತ್ತದೆ. ಅನಂತರ ಆ ಶಿಶುವು ದೊಡ್ಡದಾಗುತ್ತ ಆಗುತ್ತ ಪೂರ್ವಜನ್ಮದಲ್ಲಿ ಆಯಾಯಾ ವಯಸ್ಸುಗಳಲ್ಲಿ ಯಾವಯಾವ ರೀತಿಯಲ್ಲಿ ಕಂಠಧ್ವನಿಯಿದ್ದಿತೋ ಅದೇರೀತಿಯಲ್ಲಿಯೇ ಆ ಕಂಠಧ್ವನಿಯು ನಡೆಯುತ್ತಲಿರುತ್ತದೆ. ಒಬ್ಬೊಬ್ಬರೂ ಎಷ್ಟೆಷ್ಟುಕೋಟಿ ಜನ್ಮವೆತ್ತಿದರೂ ಆ ಕಂಠಧ್ವನಿಯು ಎಡೆಬಿಡದೆ ಜೀವನನ್ನು ಹಿಂಬಾಲಿಸಿಯೇ ಹೊರಡುತ್ತಿರುತ್ತದೆ. ಈಗ ಪ್ರತಿಯೊಬ್ಬರೂ ಮಾತನಾಡುವ ಕಂಠಧ್ವನಿಗಳು ಈ ಜನ್ಮದಲ್ಲಿ ಹೊಸದಾಗಿ ಬಂದವುಗಳಲ್ಲವು. ಜೀವಿಗೆ ಪ್ರಥಮಶರೀರವು ಎಂದಿಗೆ ಏರ್ಪಟ್ಟಿತೋ ಕಂಠಧ್ವನಿಯೂ ಕೂಡ ಆಗಲೇ ಶರೀರದ ಜೊತೆಯಲ್ಲಿಯೇ ಏರ್ಪಟ್ಟಿತು. ಅದೇ ಧ್ವನಿಯು ಜನ್ಮಜನ್ಮಕ್ಕೂ ಜೀವಿಗೆ ದೊರೆತಂಥ ಬೇರೆಬೇರೆ ಶರೀರಗಳನ್ನು ಅನುಸರಿಸಿ ಹೋಗುತ್ತದೆ.

ಇಷ್ಟೇ ಅಲ್ಲದೆ, ಪೂರ್ವಜನ್ಮದಲ್ಲಿ ಯಾವಯಾವ ಒಳ್ಳೆಯ ಅಥವಾ ಕೆಟ್ಟ ಗುಣಗಳಿಂದ ಕೂಡಿದ್ದರೋ ಅದೇಬಗೆಯಾದ ಗುಣಗಳು ಜೀವನನ್ನು ಹಿಂಬಾಲಿಸಿಯೇ ಬಂದು, ಆ ಜೀವಿಗಳಿಗೆ ಜನ್ಮಜನ್ಮಕ್ಕೂ ಬರುವಂಥ ಶರೀರಗಳನ್ನು ಸೇರಿ ಹಿಂದಿನ ಜನ್ಮದಲ್ಲಿ ಆಯಾ ಜೀವಿಗಳು ನಡೆಸು

ತ್ತಿದ್ದ ನಡವಳಿಕೆಗಳನ್ನೇ ಮಾಡುತ್ತಾ ಬರುತ್ತಾರೆ. ಆಯಾ ಗುಣಗಳಿಗೆ ತಕ್ಕಂತೆ ಆಯಾ ಕಾರ್ಯಗಳನ್ನು ಮರುಜನ್ಮದಲ್ಲಿ ಮಾಡುತ್ತ ಬರುವರೇ ಹೊರತು, ಪೂರ್ವಜನ್ಮದಲ್ಲಿ ತಾವು ಯಾವ ರೀತಿಯಲ್ಲಿದ್ದರೆಂಬುದನ್ನೂ, ಇನ್ನುಮುಂದೆ ತಮಗೆ ಲಭಿಸುವ ಜನ್ಮಗಳಲ್ಲಿ ತಾವು ಯಾವರೀತಿಯಲ್ಲಿರುವ ರೆಂಬುದನ್ನೂ ಅವರು ತಿಳಿಯಲಾರರು. ಆದರೆ ಕರ್ಮವಾಸನಾಬಲಿಯುವು ಹೆಚ್ಚಾಗಿರುವಂಥ 'ಶಾಂತಿದೇವಿ' ಯಂತಹ ವ್ಯಕ್ತಿಗಳಿಗೆ ಮಾತ್ರ ತಾವು ಹಿಂದಿನ ಜನ್ಮದಲ್ಲಿ ಯಾವ ರೀತಿಯಲ್ಲಿದ್ದರೆಂಬುದು ಕಂಡುಬರುತ್ತದೆ. ಆದರೆ ಮುಂದಿನ ಜನ್ಮದಲ್ಲಿ ಯಾವರೀತಿಯಲ್ಲಿರುವರೆಂಬುದನ್ನು ಮಟ್ಟಿಗೆ ತಿಳಿಯಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಈ ಕೆಳಗೆ ತಿಳಿಸಿದೆ.

ಹಿಂದೆ ಒಂದು ಕುಟುಂಬದಲ್ಲಿ ಇಬ್ಬರು ಜೀವಿಗಳು ಸಹೋದರರಾಗಿ ಹುಟ್ಟಿ, ಆ ಶರೀರಗಳನ್ನು ಬಿಟ್ಟು ಮುಂದೆ ತಮಗೆ ದೊರೆತ ಜನ್ಮದಲ್ಲಿಯೂ ಒಂದೇ ಕುಟುಂಬದಲ್ಲಿ ಅಣ್ಣತಮ್ಮಂದಿರಾಗಿ ಹುಟ್ಟಿದ್ದರೂ, ತಾವು ಹಿಂದಿನ ಜನ್ಮದಲ್ಲಿ ಯಾವ ಸಂಬಂಧಿಗಳಾಗಿ ಹುಟ್ಟಿದ್ದರೆಂಬುದನ್ನು ತಿಳಿಯ ಲಾರರು. ಹಿಂದೆ ಹೇಳಿದಂತೆ ಹಾಗೆ ಪೂರ್ವಜನ್ಮಜ್ಞಾನವನ್ನುಳ್ಳವರು ಅತಿವಿರಳ. ಅವರಿಬ್ಬರೂ ಹಿಂದಿನ ಜನ್ಮದಲ್ಲಿ ಅಣ್ಣತಮ್ಮಂದಿರಾಗಿರ ಬಹುದು, ಮುಂದಿನ ಜನ್ಮದಲ್ಲಿ ತಂದೆಮಕ್ಕಳಾಗಬಹುದು. ಈ ಜನ್ಮ ದಲ್ಲಿ ತಂದೆಯಾಗಿದ್ದವನು ಮುಂದಿನ ಜನ್ಮದಲ್ಲಿ ಮಗನಾಗಿಯೂ ಮತ್ತು ಈ ಜನ್ಮದಲ್ಲಿ ಮಗನಾಗಿದ್ದವನು ಮುಂದಿನ ಜನ್ಮದಲ್ಲಿ ತಂದೆಯಾಗಿಯೂ ಹುಟ್ಟಬಹುದು. ಇದಕ್ಕೆ ಶ್ರುತಿಪ್ರಮಾಣವುಂಟು. ಪಿಂಡೋತ್ಪತ್ತಿ ಪ್ರಕರಣದಲ್ಲಿಯೂ, ಸಂದರ್ಭಕ್ಕನುಗುಣವಾಗಿ ಇದನ್ನು ಹಿಂದೆಯೇ ಹೇಳಿದೆ.

ಶ್ಲೋ॥ ಯಾ ಮಾತಾ ಸಾ ಪುನ ರ್ಭಾರ್ಯಾ ♦ ಯಾ ಭಾರ್ಯಾ ಮಾತ ರೇವ ಹಿ ।
ಯಃ ಪಿತಾ ಸ ಪುನಃ ಪುತ್ರೋ ♦ ಯಃ ಪುತ್ರ ಸ್ಸ ಪುನಃ ಪಿತಾ ॥

ಅಂದರೆ ಯಾವಾಕೆಯು ಒಬ್ಬನಿಗೆ ಹಿಂದಿನ ಜನ್ಮದಲ್ಲಿ ತಾಯಿ ಯಾಗಿದ್ದಳೋ, ಆಕೆಯೇ ಈ ಜನ್ಮದಲ್ಲಿ ಅವನಿಗೆ ಹೆಂಡತಿಯಾಗುತ್ತಾಳೆ

ಆಕೆಯೇ ಮುಂದಿನ ಜನ್ಮದಲ್ಲಿ ತಾಯಿಯಾಗಬಹುದು. ಇದೇ ರೀತಿಯಲ್ಲಿ ಈ ಜನ್ಮದಲ್ಲಿ ತಂದೆಯಾಗಿದ್ದವನು ಮುಂದಿನ ಜನ್ಮದಲ್ಲಿ ಮಗನಾಗಿ ಹುಟ್ಟುತ್ತಾನೆ. ತಂದೆಯೇ ಮಗನಾಗಿ ಹುಟ್ಟುವನೆಂಬ ಶಾಸ್ತ್ರಪ್ರಮಾಣವನ್ನನುಸರಿಸಿಯೇ ಈ ಹಿಂದೂಸ್ಥಾನದಲ್ಲಿ ಸಾಧಾರಣವಾಗಿ ಗತಿಸಿದ ತಂದೆಯ ಹೆಸರನ್ನು ಮಗನಿಗೆ ಇಡುವ ಪದ್ಧತಿಯುಂಟು. ಅನೇಕವೇಳೆ ತಂದೆಯ ನಡವಳಿಕೆಗಳು ಈ ಮಗನಲ್ಲಿ ಕಾಣಬರುತ್ತವಾದುದರಿಂದ ಶಾಸ್ತ್ರಪ್ರಮಾಣವು ಪ್ರತ್ಯಕ್ಷಪ್ರಮಾಣದಿಂದ ಸ್ಥಿರೀಕರಿಸಲ್ಪಡುತ್ತದೆ. ಆದರೆ ಹಿಂದಿನ ಜನ್ಮಗಳಲ್ಲಿ ಯಾವಯಾವ ಶರೀರದ ಬಣ್ಣಗಳನ್ನು ಹೊಂದಿದ್ದರೋ, ಅದೇ ಶರೀರದ ವರ್ಣಗಳು ಬರುತ್ತವೆಂಬ ನಂಬಿಕೆಯಿಲ್ಲವಾದರೂ ನಡವಳಿಕೆಗಳೂ, ಕಂಠಧ್ವನಿಗಳೂ, ಒಳ್ಳೆಯ ಅಥವಾ ಕೆಟ್ಟ ಗುಣಗಳೂ ಹೆಚ್ಚಾದ ವ್ಯತ್ಯಾಸವನ್ನು ಹೊಂದುವುದಿಲ್ಲ. ಅಂದರೆ ಯಾವಾಕೆಯು ಮೊದಲು ಹೆಂಡತಿಯಾಗಿದ್ದಳೋ ಆಕೆಯು ಮೊದಲು ಆಗ ಧರಿಸಿದ್ದ ಶರೀರದ ಕೆಂಪು, ಕಪ್ಪು, ಅಥವಾ ಬಿಳುಪು ಬಣ್ಣಗಳಲ್ಲಿ ವ್ಯತ್ಯಾಸವನ್ನು ಹೊಂದಿದ ಬೇರೆ ಶರೀರವನ್ನು ಪಡೆದು ತಾನು ಯಾರಿಗೆ ಹೆಂಡತಿಯಾಗಿದ್ದಳೋ ಆತನಿಗೆ ತಾಯಿಯಾಗಿ ಜನ್ಮಿಸುವಳು. ಅದೇ ರೀತಿಯಲ್ಲಿಯೇ ಯಾವಾತನು ಹಿಂದಿನ ಜನ್ಮದಲ್ಲಿ ತಂದೆಯಾಗಿದ್ದನೋ ಆತನೇ ಈ ಜನ್ಮದಲ್ಲಿ, ಹಿಂದಿನ ಜನ್ಮದಲ್ಲಿ ತನಗೆ ದೊರಕಿದ್ದ ಶರೀರದ ಬಣ್ಣಗಳಲ್ಲಿ ಮಾತ್ರ ವ್ಯತ್ಯಾಸವನ್ನು ಹೊಂದಿ ಉಳಿದ ನಡವಳಿಕೆಗಳಲ್ಲಿ ಹೆಚ್ಚು ಕಡಿಮೆಗಳು ಅತಿಶಯವಾಗಿ ಕಾಣ್ಬರದೆ, ಈ ಜನ್ಮದಲ್ಲಿ ಮಗನಾಗಿ ಹುಟ್ಟುತ್ತಾನೆ. ಇವನೇ ಮುಂದಿನ ಜನ್ಮದಲ್ಲಿ ಶರೀರಗಳ ಬಣ್ಣಗಳಲ್ಲಿ ವ್ಯತ್ಯಾಸವನ್ನು ಹೊಂದಿ,. ನಡೆವಳಿಕೆಗಳಲ್ಲಿ ಹೆಚ್ಚು ಕಡಿಮೆ ಹಿಂದಿನ ಜನ್ಮದಲ್ಲಿದ್ದಂತೆಯೇ ಇದ್ದು ತಾನು ಯಾರಿಗೆ ಮಗನಾಗಿದ್ದನೋ ಅವನಿಗೇ ತಂದೆಯಾಗಿ ಹುಟ್ಟುತ್ತಾನೆ. ಇದೇ ಜನ್ಮರಹಸ್ಯ. ಹೀಗೆಯೇ ಜೀವಿಗಳು ಹಿಂದಿನ ಜನ್ಮದಲ್ಲಿ ಒಂದು ಮನೆಯಲ್ಲಿ ಹುಟ್ಟಿ ಬಂಧುಗಳಾಗಿದ್ದರೆ ಅದೇ ರೀತಿಯಾದ ಬಾಂಧವ್ಯವನ್ನು ಹೊಂದಿ ಈ ಜನ್ಮದಲ್ಲಿ ಹುಟ್ಟುವುದಿಲ್ಲ. ಮುಂದಿನ ಜನ್ಮದಲ್ಲಿಯೂ ಇಂತಹ ಬಂಧುತ್ವವನ್ನು ಹೊಂದುವುದೂ ಇಲ್ಲ. ಕರ್ಮಫಲಕ್ಕೆ ತಕ್ಕಂತೆ ಕಾರಣಾಂತರದಿಂದ ಕೆಲವು ದಿನ

ಗಳು ಒಂದು ಕುಟುಂಬದಲ್ಲಿ ಬಂಧುಗಳಾಗಿ ಸೇರಿದ ಮಾತ್ರಕ್ಕೆ ಈ ಶರೀರಕ್ಕೆ ಸಂಬಂಧಪಟ್ಟ ಬಂಧುಗಳು ನಿಜವಾದ ಬಂಧುಗಳೆಂದು ತಿಳಿದುಕೊಳ್ಳಬಾರದು. ತನ್ನಲ್ಲಿರುವ ಜೀವನೇ ತನಗೆ ಬಂಧು. ಉಳಿದವ ರೆಲ್ಲರೂ ಶರೀರಕ್ಕೆ ಬಂಧುಗಳೇ ಹೊರತು ದೇಹದಲ್ಲಿರುವ ಜೀವನಿಗೆ ಬಂಧುಗಳಲ್ಲವು. ಈ ರಹಸ್ಯವನ್ನು ತಿಳಿಯಲಾರದೆ ಈ ಪ್ರಪಂಚದಲ್ಲಿ ಹುಟ್ಟುಸಾವುಗಳೆಂಬ ಸಂಸಾರಕ್ಕೆ ಸಿಕ್ಕಿಬಿದ್ದ ಸ್ತ್ರೀಪುರುಷರು ತಮಗೆ ಈ ಜನ್ಮದಲ್ಲಿ ದೊರಕಿದ ಶರೀರಸಂಬಂಧಿಗಳಲ್ಲಿ, ಅಂದರೆ ಸತೀಸುತಮಿತ್ರ ಬಾಂಧವರಲ್ಲಿ ಹೆಚ್ಚು ಪ್ರೀತಿಯನ್ನಿಟ್ಟು ವ್ಯರ್ಥವಾಗಿ ಮೋಸಹೋಗು ತ್ತಿದ್ದಾರೆ. ಇದರ ವಿವರಣೆಯು ಈ ಕೆಳಗೆ ಇದೆ.

ಒಬ್ಬಾನೊಬ್ಬ ಪುಣ್ಯಪುರುಷನು ಪೂರ್ವಜನ್ಮದಲ್ಲಿ ತಾನು ಮಾಡಿದ ಪುಣ್ಯಕರ್ಮಗಳ ಫಲದಿಂದ ಈ ಜನ್ಮದಲ್ಲಿ ಭೂಲೋಕವನ್ನು ಆಳುವಂಥ ಚಕ್ರವರ್ತಿಯಾಗಿ ಹುಟ್ಟುವನು. ಆತನು ಈ ಚಕ್ರವರ್ತಿಶರೀರದಲ್ಲಿರು ವವರಿವಿಗೆ ಮಾತ್ರವೇ 'ನಾನು ಚಕ್ರವರ್ತಿಯಾಗಿ ಹುಟ್ಟಿದ್ದೇನೆ' ಎಂದು ಮನಸ್ಸಿನಲ್ಲಿ ಎಣಿಸುತ್ತ, ಆ ಚಕ್ರವರ್ತಿಶರೀರಕ್ಕೆ ದೊರಕಿದ ಬಂಧು ಬಾಂಧವರ ಮೇಲೆಯೂ, ಮತ್ತು ತನಗೆ ಲಭಿಸಿದ ವಸ್ತುವಾಹನಗಳ ಮೇಲೆಯೂ ಹೆಚ್ಚಾದ ಆಸೆಗಳನ್ನಿಟ್ಟು, ಮತ್ತೆ ಆ ಶರೀರವನ್ನು ಬಿಟ್ಟು ಹೊರಡುವಾಗ ತಾನು ಚಕ್ರವರ್ತಿಯಾಗಿರುವ ಜ್ಞಾಪಕವನ್ನೂ, ಆ ಬಂಧು ಗಳ ಮೇಲೆಯೂ, ಇತರರ ಮೇಲೆಯೂ ಇರುವ ಆಸೆಗಳೆಲ್ಲವನ್ನೂ ಆ ಹಳೆಯ ಶರೀರದ ಜೊತೆಯಲ್ಲಿಯೇ ಸಂಪೂರ್ಣವಾಗಿ ಮರೆತು ಅವಸಾನ ಕಾಲದಲ್ಲಿ ತನ್ನ ಮನೋವ್ಯಾಪಾರಕ್ಕೆ ತಕ್ಕಂತೆ ವಿಷಯಗಳಲ್ಲಿ ಯಾವ ಆಸೆಗಳನ್ನಿಡುತ್ತಾನೆಯೋ, ಅವುಗಳೊಡನೆ ತನಗೆ ಮುಂದೆ ದೊರಕಬಹು ದಾದ ಹೊಸ ಶರೀರಗಳಲ್ಲಿ ಜೀವನು ಹೋಗಿ ಸೇರುತ್ತಾನೆ. ಈ ಹೊಸ ದೇಹವು ಲಭಿಸಿದಮೇಲೆ ಈ ಜನ್ಮದಲ್ಲಿ ತನಗೆ ದೊರಕಿದ ಬಂಧುಗಳ ಮೇಲೆ ಆಸೆಯನ್ನೂ ಮತ್ತು ತಾನು ಮಾಡುವಂಥ ಕರ್ಮಗಳಲ್ಲಿನ ಜ್ಞಾಪಕವನ್ನೂ ಹೊಂದಿರುವನೇ ಹೊರತು ಹಿಂದೆ ತಾನುಮಾಡಿದ ವಿಷಯ ಗಳ ಸುಳಿವೇ ಅವನ ಬುದ್ಧಿಗೇರದು. ಮೇಲೆ ಹೇಳಿದ ಚಕ್ರವರ್ತಿ ಯಾಗಿದ್ದವನು ಆ ಶರೀರವನ್ನು ಬಿಟ್ಟು ಮತ್ತೆ ಬೇರೆ ಶರೀರವನ್ನು

ಪಡೆದಾಗ 'ನಾನು ಹಿಂದಿನ ಜನ್ಮದಲ್ಲಿ ಭೂಮಂಡಲವನ್ನೆಲ್ಲಾ ಆಳುವಂಥ ಚಕ್ರವರ್ತಿಯಾಗಿದ್ದೆನು. ನನ್ನ ಮನೆ, ಮಠ, ಹೆಂಡತಿಮಕ್ಕಳು, ವಸ್ತು ವಾಹನಗಳಲ್ಲಿ ಅಧಿಕವಾದ ಪ್ರೀತಿಯಿಟ್ಟಿದ್ದೆನು' ಎಂಬ ಜ್ಞಾನವೇ ಅವನಿಗುಂಟಾಗದು. ಹಿಂದೆ ಜಡಭರತೋಪಾಖ್ಯಾನದಲ್ಲಿ ಜಡಭರತನು, ಅಹಂಕಾರದಿಂದ ಕೂಡಿ ಮೆರೆಯುತ್ತಿದ್ದ ರಹೂಗಣನೆಂಬ ರಾಜನಿಗೆ ವಿವೇಕವನ್ನುಂಟುಮಾಡುವುದಕ್ಕಾಗಿ ಆತ್ಮಬೋಧೆಯನ್ನು ತಿಳಿಸುತ್ತ ಬೋಧಿಸಿದ್ದಂತೆ, ತಂದೆ ಮಕ್ಕಳು, ಗುರುಶಿಷ್ಯರು, ರಾಜಭೃತ್ಯರು ಇವರುಗಳ ಈ ಜನ್ಮದ ಸಂಬಂಧವು ಮುಂದಿನ ಜನ್ಮದಲ್ಲಿ ಕರ್ಮಗಳಿಗೆ ತಕ್ಕಂತೆ ವ್ಯತ್ಯಾಸವನ್ನು ಹೊಂದುತ್ತಿರುತ್ತದೆ. ಅಂದರೆ, ಈ ಜನ್ಮದಲ್ಲಿ ತಂದೆಯಾದವನು ಮುಂದಿನಜನ್ಮದಲ್ಲಿ ಮಗನಾಗಿಯೂ, ಗುರುವಾದವನು ಶಿಷ್ಯನಾಗಿಯೂ, ರಾಜನಾದವನು ಭೃತ್ಯನಾಗಿಯೂ ಆಗುವುದುಂಟು. ಈ ವಿಷಯವನ್ನು ಕುರಿತು ಒಂದು ಉದಾಹರಣೆಯನ್ನು ಈ ಮುಂದೆ ಕಾಣಿಸಿದೆ.

ಈ ಗ್ರಂಥಕರ್ತರಾದ ಯೋಗೀಶ್ವರರ ತಂದೆಯು ಮರಣಹೊಂದಿ ಈ ಹೊತ್ತಿಗೆ ಐವತ್ತು ವರ್ಷಗಳಾದವು. ಇವರ ಕುಟುಂಬದ ವಿಷಯಗಳು ಇವರ ತಂದೆಗೆ ಈಗೇನಾದರೂ ತಿಳಿಯಬಂದೀತೆ? ಯಾವುದೊಂದೂ ತಿಳಿಯದು. ಆದರೆ ಈಗ ಅವರು ಯಾವ ಕುಟುಂಬದಲ್ಲಿದ್ದಾರೋ ಅದರಲ್ಲಿರುವ ಬಂಧುಗಳ ವಿಷಯವು ಮಾತ್ರವೇ ಅವರಿಗೆ ತಿಳಿಯಬರುತ್ತದೆ. ಆ ಕುಟುಂಬದಲ್ಲಿರುವಾಗ ಮೃತಿಹೊಂದಿದ ತಕ್ಷಣವೇ ಅದರಲ್ಲಿರುವ ಬಂಧುಬಾಂಧವರನ್ನೆಲ್ಲಾ ಮರೆತು ಪುನಃ ತಮಗೆ ಬರುವ ಕುಟುಂಬದವರನ್ನು ನೋಡುತ್ತಾರೆ. ಹೀಗೆ ಜೀವಿಗಳು ಹಿಂದಿನ ಜನ್ಮದಲ್ಲಿ ತಮಗೊದಗಿದ್ದ ಶರೀರ ಸಂಬಂಧಿಗಳನ್ನೆಲ್ಲಾ ಮರೆಯುತ್ತ, ಮುಂದಿನ ಜನ್ಮದಲ್ಲಿ ಬರುವಂಥ ದೇಹಸಂಬಂಧಿಗಳ ಮೇಲೆ ಆಸೆಯನ್ನಿಡುತ್ತ ಬರುತ್ತಾರೆ. ಈ ಬಗೆಯಾಗಿ ಜೀವಿಗಳು ಹಿಂದಿನ ತಮ್ಮ ಸಂಬಂಧಿಗಳನ್ನು ಮರೆತು ಮುಂದೆ ತಮಗೆ ಬಂದವರಲ್ಲಿ ಪ್ರೀತಿಯನ್ನಿಡುತ್ತಿರುವಾಗ, ಗತಿಸಿದ ಅಂತಹ ಜೀವಿಗಳಿಗೆ 'ತದ್ದಿನ' ಅಂದರೆ ವರ್ಷವರ್ಷವೂ ಅವರುಗಳ ಜ್ಞಾಪಕಾರ್ಥವಾಗಿ ಮಾಡುವ ಮತ್ತು ಪಿತೃದೇವತೆಗಳನ್ನು ತೃಪ್ತಿಪಡಿಸುವ ಸಲುವಾಗಿ ಮಾಡಬೇಕಾದ ಶ್ರಾದ್ಧಾದಿಗಳು ಎಲ್ಲಿಯವು? ಪಿಂಡಪ್ರದಾನ ಮಾಡುವುದು ಯಾರಿಗೆ? ಎಲ್ಲಿಯೋ

ಹುಟ್ಟಿ ಬೆಳೆದು ಸತ್ತವರು ಬೇರೆ ಜನ್ಮವನ್ನು ಪಡೆದು, ಎಲ್ಲಿಯೋ ಬೆಳೆಯುತ್ತಿರುವವರಿಗೆ ಅವರು ಸತ್ತ ದಿನದಲ್ಲಿ ಮಾಡುವಂಥ ಪಿಂಡಪ್ರದಾನದಿಂದ ಅವರಿಗಾಗುವ ಪ್ರಯೋಜನವೇನು? ಆದರೆ ತಂದೆತಾಯಿಗಳು ಸತ್ತ ದಿನದಲ್ಲಿ ಅವರ ಜ್ಞಾಪಕಾರ್ಥವಾಗಿ ಮಕ್ಕಳು ಶ್ರಾದ್ಧಾದಿಗಳನ್ನು ಮಾಡಿದರೆ, ಬ್ರಾಹ್ಮಣರು ಆ ದಿನದಲ್ಲಿ ಮಾಡಿದ ಸುಖಭೋಜನದಿಂದ ತೃಪ್ತಿಪಟ್ಟ ಮೇಲೆ ಆ ಪುಣ್ಯದಿಂದ ಮಕ್ಕಳು ಹೆಚ್ಚಾದ ಪುಣ್ಯವನ್ನು ಗಳಿಸಿ ತಮ್ಮ ಪುರೋಭಿವೃದ್ಧಿಯನ್ನು ಹೊಂದುತ್ತಾರೆ. ಆದರೆ ಈ ಬಗೆಯ ಕರ್ಮಗಳಾಗಲಿ ಅವುಗಳ ಫಲವಾಗಲಿ ಗತಿಸಿದವರನ್ನು ಎಂದಿಗೂ ಮುಟ್ಟವು. ಕರ್ಮಕಾಂಡದಲ್ಲಿ ಜೀವಿಗಳು ಗತಿಸಿದವರಿಗೆ ಶ್ರಾದ್ಧಾದಿಗಳನ್ನು ಮಾಡಬೇಕೆಂಬ ವಿಧಿಯು ಈ ಕರ್ಮಗಳನ್ನು ಮಾಡಿ ಪುಣ್ಯವನ್ನು ಪಡೆಯಬೇಕೆಂಬ ಉದ್ದೇಶದಿಂದಲೇ ಹೊರತು ಮತ್ತೆ ಬೇರೆಯಲ್ಲ. ಇದಕ್ಕೆ ಶಾಂತಿದೇವಿಯ ವಿಷಯವೇ ಪ್ರತ್ಯಕ್ಷ ಪ್ರಮಾಣ. ಹಿಂದಿನ ಜನ್ಮದ ತನ್ನ ಅನುಭವವನ್ನು ಹೆಚ್ಚು ಕಡಿಮೆಯಿಲ್ಲದೆ, ತನ್ನ ಪೂರ್ವಜನ್ಮದ ಕರ್ಮಫಲದ ಬಲಿಯದಿಂದ ಹೇಳುತ್ತಿರುವ ಶಾಂತಿದೇವಿಗೆ ತಾನು ಹಿಂದಿನ ಶರೀರವನ್ನು ಬಿಟ್ಟ ಮೇಲೆ ಆಕೆಯ ಸಂಬಂಧಿಗಳು ಪ್ರತಿ ವರ್ಷವೂ ಮಾಡುವ ಶ್ರಾದ್ಧಾದಿಗಳಲ್ಲಿ ಆಕೆಯ ಸಲುವಾಗಿ ಕೊಟ್ಟ ಪಿಂಡ ದಾನಗಳಾಗಲಿ ಅಥವಾ ಆಕೆಯ ಹೆಸರನ್ನುಚ್ಚರಿಸಿ ಬ್ರಾಹ್ಮಣರಿಗೆ ಕೊಟ್ಟ ಅಕ್ಕಿ ಬೇಳೆಗಳಾಗಲಿ ಈಗ ಪ್ರತ್ಯಕ್ಷವಾಗಿ ಜನ್ಮವೆತ್ತಿರುವ ಆಕೆಯನ್ನು ಸೇರುವುವೇ? ಎಂದಿಗೂ ಇಲ್ಲವು. ಇದನ್ನೇ ಆಧಾರವಾಗಿಟ್ಟುಕೊಂಡು ಸ್ತ್ರೀ ಪುರುಷರು ಈ ಶ್ರಾದ್ಧಾದಿಗಳ ನಿಶ್ಚಯಜ್ಞಾನವನ್ನು ಹೊಂದಬೇಕು. ಆದರೆ, ಆ ದಿನ ಬಡಬಗ್ಗರಿಗೆ ಮಾಡುವ ಅನ್ನದಾನಾದಿ ಕರ್ಮಗಳಿಂದ ಭೂತತೃಪ್ತಿಯುಂಟಾದ ಪುಣ್ಯಕರ್ಮಫಲಗಳು ಮಾತ್ರ ತಪ್ಪದೇ ಲಭಿಸುವುವಾದುದರಿಂದ ಇವುಗಳನ್ನು ನಡೆಸಬೇಕೆಂಬುದು ಶಾಸ್ತ್ರಗಳ ವಿಧಿ. ಗೊತ್ತಾದ ಆ ದಿನಗಳಲ್ಲಿ ಗತಿಸಿದವರಲ್ಲಿ ಇವರಿಗಿರುವ ಗೌರವ ವಿಶ್ವಾಸಗಳಿಂದ ಬಡವರಿಗೆ ಅನ್ನಪಾನಾದಿಗಳನ್ನು ಕೊಟ್ಟು ಅವರನ್ನೂ ತೃಪ್ತಿಪಡಿಸಿದ್ದೇ ಆದರೆ, ಹಾಗೆ ನಡೆಸುವವರು ಅಪರಿಮಿತವಾದ ಪುಣ್ಯಕ್ಕೆ ಭಾಗಿಗಳಾಗಿ ತತ್ಫಲದ ಮೂಲಕ ಮುಂದೆ ಉತ್ತಮ ಜನ್ಮವನ್ನು ಪಡೆಯಬಹುದಾದು

ರಿಂದ ಆ ಕಾರ್ಯಗಳನ್ನು ನಡೆಸಲೇಬೇಕು. ಈ ಪುಣ್ಯಗಳೇ ಅಲ್ಲವು, ಮತ್ತೆ ಬೇರೆಬೇರೆ ಧರ್ಮಕಾರ್ಯಾದಿಗಳನ್ನು ನಡೆಸಿ ಪುಣ್ಯವನ್ನು ಸಂಪಾದಿಸಿಕೊಂಡು ತನ್ನ ಮುಂದಿನ ಜನ್ಮವನ್ನು ಉತ್ತಮವಮಾಡಿಕೊಳ್ಳುವುದಕ್ಕೆ ಯತ್ನಿಸಬೇಕು. ಏತಕ್ಕೆ ಪುಣ್ಯವನ್ನು ಮಾಡಬೇಕು ? ಏತಕ್ಕೆ ನಮ್ಮ ಮುಂದಿನ ಜನ್ಮವನ್ನು ಉತ್ತಮಗೊಳಿಸಬೇಕು? ಎಂದರೆ, ಜನ್ಮಜನ್ಮಕ್ಕೂ ಪುಣ್ಯ ಕರ್ಮಗಳನ್ನು ಹೆಚ್ಚಿಸಿದಂತೆಲ್ಲಾ ದುಷ್ಟಯೋಚನೆಗಳಿಗೂ ಪಾಪ ಕಾರ್ಯಗಳಿಗೂ ಮನಸ್ಸು ಎಡೆಗುಡದೆ, ಸರ್ವವ್ಯಾಪಿ, ಸರ್ವಶಕ್ತ, ಸರ್ವಕರ್ಮಸಾಕ್ಷಿಭೂತನಾದ ಪರಮಾತ್ಮನಲ್ಲಿ ಮನಸ್ಸು ಹೆಚ್ಚಾಗಿ ತಿರುಗುತ್ತ ಕಡೆಗೆ ಮನಸ್ಸು ಪರಿಪಕ್ವವಾಗಿ ಆಕಾಶಸ್ವರೂಪವಾದ ಆ ಪರಮಾತ್ಮನಲ್ಲಿಯೇ ಲೀನವಾಗಿ ಮೋಕ್ಷವನ್ನು ಪಡೆಯಬಹುದು. ಇದೇ ಪುಣ್ಯಕಾರ್ಯಗಳನ್ನು ಮಾಡಬೇಕಾದ ಉದ್ದೇಶ. ಇದಕ್ಕೆ ಬದಲಾಗಿ ಪಾಪಕರ್ಮಗಳಲ್ಲಿ ಮನವಿಟ್ಟಿದ್ದೇ ಆದರೆ, ಈಗಿನದಕ್ಕಿಂತಲೂ ಹೀನ ಜಾತಿಯನ್ನು ಪಡೆದು ನರಕಕೂಪದಲ್ಲಿ ಬಿದ್ದು ದುಃಖಗಳನ್ನನುಭವಿಸುತ್ತ ಜನನಮರಣವೆಂಬ ಸಂಸಾರಸಮುದ್ರದಲ್ಲಿ ಮುಳುಗುತ್ತ ಮುಕ್ತಿಯ ಮಾರ್ಗವನ್ನು ಪಡೆಯುವುದಕ್ಕೆ ಅವಕಾಶವಿಲ್ಲದಂತಾಗಿ ಬಹಳ ವೆಥೆಪಡಬೇಕಾಗುವುದು. ಇದೇ ಪಾಪಕರ್ಮಗಳ ಫಲ.

ಹೆಂಡತಿ ಮಕ್ಕಳು ಮತ್ತು ಇತರರು ಇವರುಗಳು ಈ ಜನ್ಮದಲ್ಲಿ ಬಂಧುಗಳಾಗಿ ಸೇರಿದವರಲ್ಲವೇ ? ಈ ವಿಧವಾದ ಬಂಧುಗಳ ವಿಷಯವೆಂಥದೆಂಬುದನ್ನು ಈ ಮುಂದೆ ವಿವರಿಸಿದೆ.

‘ ತಂದೆತಾಯ್ ತಮರ್ತಾರ ಮಗವೆನ್ನುಮಿವ್ವೆಯೆಲಾಂ
ಸಂದೈ ಯಿರ್ರೂಟ ಮಿದಿಲೋ ’

ಎಂದು ಅರವಭಾಷೆಯಲ್ಲಿ ಹಿರಿಯರು ಪದ್ಯರೂಪವಾಗಿ ಹೇಳಿರುತ್ತಾರೆ. ಇದರ ಭಾವವೇನೆಂದರೆ, ಸಂತೆಯಲ್ಲಿ ಜನಗಳು ಪ್ರಾತಃಕಾಲದಲ್ಲಿ ಹತ್ತು ಹನ್ನೆರಡು ಘಂಟೆಗಳವರಿವಿಗೂ ಬೇರೆಬೇರೆ ಊರುಗಳಿಂದ ಬಂದು ಸೇರಿ ಸಾಯಂಕಾಲ ಆರು ಘಂಟೆಯವರಿವಿಗೂ ಒಟ್ಟಿಗಿದ್ದು ತಾವು ಬಂದ

ಉದ್ದೇಶಗಳನ್ನು ನೆರವೇರಿಸಿಕೊಂಡು ತಮ್ಮತಮ್ಮ ಮನೆಗಳಿಗೆ ಹೊರಟು ಹೋಗುವಂತೆ, ಪ್ರತಿಯೊಂದು ಕುಟುಂಬದಲ್ಲಿಯೂ ಇರುವ ಹೆಂಡತಿ, ಮಕ್ಕಳು ಸಹೋದರರು ತಂದೆತಾಯಿ ಎಂಬ ಈ ಬಂಧುಗಳು ಎಲ್ಲೆಲ್ಲಿಂದಲೋ ಬಂದು ಸೇರಿ ಕೆಲವು ದಿನಗಳು ಒಟ್ಟಿಗಿದ್ದು ತಮ್ಮತಮ್ಮ ಕರ್ಮಫಲಗಳಿಗೆ ತಕ್ಕಂತೆ ತಾವು ಬಂದಿದ್ದ ಉದ್ದೇಶಗಳನ್ನು ನೆರವೇರಿಸಿಕೊಂಡು ಒಬ್ಬೊಬ್ಬರಾಗಿ ಈ ಶರೀರಗಳನ್ನು ಬಿಟ್ಟು ಬೇರೆಬೇರೆ ಶರೀರಗಳನ್ನು ಹುಡುಕಿಕೊಂಡು ಹೊರಡುತ್ತಾರೆ. ಹೀಗೆ ಹಿಂದೆ ತಮಗೆ ಯಾವ ಮಾತ್ರ ಸಂಬಂಧವೂ ಇಲ್ಲದೆ ಇದ್ದು ಈಗ ಮಟ್ಟಿಗೆ ದೇಹಸಂಬಂಧಿಗಳಾಗಿ ದೊರಕಿದ್ದ ಮಾತ್ರಕ್ಕೆ ಅವರಲ್ಲಿ ಅತಿಮೋಹವನ್ನಿಟ್ಟು ಹೆಚ್ಚಾದ ಪ್ರೀತಿ ಮತ್ತು ಆಸೆಗಳನ್ನು ತೋರಿಸುತ್ತ ಅದರ ನಿಮಿತ್ತ ದುಷ್ಪರಿಣಾಮಗಳಿಗೊಳಗಾಗುತ್ತ ಬೇರೆಬೇರೆ ಲೆಕ್ಕವಿಲ್ಲದಷ್ಟು ಶರೀರಗಳನ್ನು ಹೊಂದುತ್ತಿದ್ದಾರೆ. ಇದಕ್ಕೆ ಒಂದು ದೃಷ್ಟಾಂತವುಂಟು. ಅದನ್ನು ಈ ಮುಂದೆ ಕೊಟ್ಟಿದೆ.

ಒಂದಾನೊಂದು ಕುಟುಂಬದಲ್ಲಿ ಒಬ್ಬ ಪುರುಷನು ಅಪರಿಮಿತವಾದ ದ್ರವ್ಯವನ್ನು ಸಂಪಾದಿಸಿ ಆ ಕುಟುಂಬದಲ್ಲಿರುವವರೆಲ್ಲರಿಗೂ ಬೇಕಾದಷ್ಟು ಆಭರಣಾದಿಗಳನ್ನು ಮಾಡಿಸಿಕೊಟ್ಟು ಮತ್ತು ಅವರೆಲ್ಲರಿಗೂ ಜೀವನಕ್ಕಾಗಿ ಬೇಕಾದ ಹಣವನ್ನು ಗಳಿಸಿಟ್ಟು ಸಂತೋಷದಿಂದಿದ್ದನು. ಆದುದರಿಂದಲೇ ಆ ಕುಟುಂಬದವರೆಲ್ಲರೂ ಆತನಮೇಲೆ ಬಹಳ ಪ್ರೀತಿ ಗೌರವಗಳನ್ನಿಟ್ಟಿದ್ದರು. ಹೀಗಿರಲು ಆ ಯಜಮಾನನಿಗೆ ಯಾವುದೋ ಒಂದು ರೋಗವು ಪ್ರಾಪ್ತವಾಗಿ ಅವನು ಕಾಲವಶನಾದನು. ಆಗ ಆ ಮನೆಯಲ್ಲಿ ಅವನನ್ನೇ ನಂಬಿಕೊಂಡಿರುವವರ ದುಃಖವನ್ನು ಕೇಳಬೇಕೇ? ಆ ಕುಟುಂಬಕ್ಕೆ ಸೇರಿದ ಪ್ರತಿಯೊಬ್ಬರೂ ಅತ್ತು ಕರೆದು ದುಃಖದಿಂದ ಬೆಂದರು. ಆತನು ಈ ಕಳೇಬರವನ್ನು ಬಿಟ್ಟಮೇಲೆ ಬೇರೇ ಕುಟುಂಬದಲ್ಲ ಶಿಶುವಾಗಿ ಹುಟ್ಟಿ ಬೆಳೆದು ಸುಮಾರು ಇಪ್ಪತ್ತು ವರ್ಷಗಳಾದಮೇಲೆ ಶಾಂತಿದೇವಿಯಂತೆ ಪೂರ್ವಜನ್ಮಜ್ಞಾನವನ್ನು ಪಡೆದಿದ್ದನಾದುದರಿಂದ, ತಾನು ಮೊದಲಿದ್ದ ಮನೆಗೆ ಈ ಹೊಸ ಶರೀರದಿಂದ ಬಂದು, ಆ ಕುಟುಂಬದವರನ್ನು ಕುರಿತು ಈ ಮುಂದೆ ಹೇಳುವ ರೀತಿಯಲ್ಲಿ ಹೇಳುತ್ತಾನೆ.

"ಈಗ್ಗೆ ಇಪ್ಪತ್ತುವರ್ಷಗಳ ಹಿಂದೆ ನನ್ನ ಹಿಂದಿನ ಜನ್ಮದಲ್ಲಿ ಇದೇ ಮನೆಯಲ್ಲಿ ನಾನು ವಾಸವಾಗಿದ್ದೆನು. ಆಗಿನ ನನ್ನ ಹೆಸರು ಇಂಥದು. ನೀವು ಈಗ ಅನುಭವಿಸುತ್ತಿರುವ ಇಷ್ಟು ದ್ರವ್ಯವನ್ನು ಸಂಪಾದಿಸಿದವನೂ ನಾನೇ. ನಿಮ್ಮೆಲ್ಲರಿಗೂ ಇಷ್ಟೆಲ್ಲಾ ಒಡವೆ ವಸ್ತು ಮನೆ ಹೊಲ ಮೊದಲಾದುವುಗಳನ್ನು ಒದಗಿಸಿ ಕೊಟ್ಟವನೂ ನಾನೇ. ಇಷ್ಟೇ ಅಲ್ಲದೆ ನೀವು ಸುಖಜೀವನವನ್ನು ಪಡೆಯುವುದಕ್ಕಾಗಿ ಇಷ್ಟೆಲ್ಲ ಐಶ್ವರ್ಯವನ್ನು ಗಳಿಸಿಟ್ಟವನೂ ನಾನೇ. ಆಗ ನೀವೆಲ್ಲರೂ ನನ್ನ ಮೇಲೆ ಅಪರಿಮಿತವಾದ ಪ್ರೀತಿಯನ್ನಿಟ್ಟಿದ್ದಿರಿ. ಈತನೇ ನನ್ನ ತಮ್ಮ, ಈತನೇ ನನ್ನ ಅಣ್ಣ, ಇವನು ನನ್ನ ಮಗ, ಅವಳು ನನ್ನ ತಂಗಿ, ಆಕೆ ನಮ್ಮ ತಾಯಿ, ಈಕೆ ನನ್ನ ಹೆಂಡತಿ, ಇವರೆಲ್ಲಾ ನನ್ನ ಬಂಧುಮಿತ್ರರು" ಎಂದು ಪ್ರತಿಯೊಬ್ಬರ ಹೆಸರನ್ನೂ ಸಂಬಂಧವನ್ನೂ ತಿಳಿಸುತ್ತ ಮತ್ತು ತಾನು ಆ ಮನೆಯಲ್ಲಿದ್ದಾಗ ಯಾವಯಾವ ಕರ್ಮಗಳನ್ನು ನಡೆಸಿದ್ದನೋ ಅವೆಲ್ಲವನ್ನೂ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಹೇಳುತ್ತ ಇರುವಾಗ ಅವೆಲ್ಲವೂ ಸರಿಯಾಗಿರುವುದನ್ನು ತಿಳಿದು ಆ ಕುಟುಂಬವಾಸಿಗಳು ಬಹಳ ಆಶ್ಚರ್ಯದಿಂದ ಈತನ ಕಡೆಗೆ ನೋಡುತ್ತಿದ್ದರೇ ಹೊರತು, ಆತನಲ್ಲಿ ಎಷ್ಟುಮಾತ್ರವೂ ಹಿಂದೆ ಆತನಲ್ಲಿದ್ದ ಪ್ರೀತಿವಿಶ್ವಾಸಗಳನ್ನು ತೋರಿಸದೇ ಹೋದರು. ಏತಕ್ಕೆಂದರೆ, ಆ ಶರೀರದಲ್ಲಿದ್ದು ಮಾತನಾಡುವ ಜೀವನು ಪೂರ್ವಜನ್ಮದಲ್ಲಿ ಆ ಕುಟುಂಬ ದಲ್ಲಿದ್ದ ಯಜಮಾನನ ಶರೀರದಲ್ಲಿದ್ದವನಾದರೂ ಈಗಿನ ಈ ಶರೀರವು ಹಿಂದಿನ ಆ ಶರೀರದಂತೆ ಇರದೆ ಆಕಾರ ಬಣ್ಣಗಳಲ್ಲಿ ವ್ಯತ್ಯಾಸವಿದ್ದಿತಾಗಿ ಹಿಂದಿನ ಶರೀರದಲ್ಲಿ ಅವರಿಗಿದ್ದ ಪ್ರೀತಿವಿಶ್ವಾಸಗಳು ಈ ಶರೀರದಲ್ಲಿ ಹುಟ್ಟಲಿಲ್ಲ. ಆದುದರಿಂದಲೇ ಆ ಕುಟುಂಬ ವಾಸಿಗಳು ಆತನನ್ನು ಯಾವುದೊಂದೂ ವಿಚಾರಿಸದೆ ಹೊಸ ಮನುಷ್ಯನು ತಮ್ಮ ಮನೆಗೆ ಬಂದವ ನಂತೆಯೇ ಭಾವಿಸಿ ಸುಮ್ಮನೆ ನೋಡುತ್ತಿದ್ದರು. ಶರೀರಗಳು ಎಷ್ಟುವೇಳೆ ಬೇರೆಬೇರೆ ಆಕಾರ ಬಣ್ಣಗಳಿಂದ ವ್ಯತ್ಯಾಸವನ್ನು ಹೊಂದಿದರೂ, ಶರೀ ರದ ಒಳಗಿರುವ ಜೀವನು ಮಾತ್ರ ಯಾವ ವಿಧದಲ್ಲಿಯೂ ಮಾರ್ಪಡದೆ ಸದಾ ಗಾಳಿರೂಪವಾಗಿಯೇ ಇದ್ದು ಬೇರೆಬೇರೆ ಶರೀರಗಳನ್ನು ಪ್ರವೇಶಿಸಿ ಅವುಗಳನ್ನು ಆಗಾಗ್ಗೆ ಬದಲಾಯಿಸುತ್ತ ಬರುತ್ತಾನೆ. ಒಂದು ವಿಧವಾದ

ಶರೀರವನ್ನು ಬಿಟ್ಟ ಮೇಲೆ ಪುನಃ ಅದೇರೀತಿಯಾದ ಶರೀರವು ಜೀವನಿಗೆ ದೊರುಕುವ ಸಂಭವವಿಲ್ಲವು.

ಪ್ರಪಂಚದಲ್ಲಿರುವ ಸ್ತ್ರೀ - ಪುರುಷರೆಲ್ಲರೂ ಕಣ್ಣಿಗೆ ಕಾಣ್ಬರುವ ಶರೀರಗಳನ್ನು ನೋಡಿ ಆಗ ಅವುಗಳಲ್ಲಿ ಆಸೆಯನ್ನಿಡುವರೇ ಹೊರತು, ಆ ಶರೀರದಲ್ಲಿ ಅಂತರಾತ್ಮನಾಗಿರುವ ಜೀವನಮೇಲೆ ಆಸೆಯನ್ನಿಡರು. ಜೀವನು ಆ ಶರೀರವನ್ನು ಬಿಟ್ಟು ಹೊರಟುಹೋದನೆಂದರೆ, ಜನಗಳು ಆ ಶರೀರದಲ್ಲಿ ತಮಗಿರುವ ಪ್ರೀತಿಯಿಂದ ಅಧಿಕವಾಗಿ ದುಃಖಿಸುವರೇ ಹೊರತು, ಶರೀರದ ಒಳಗಿದ್ದ ಜೀವನನ್ನು ನೋಡಿ ದುಃಖಿಸರು. ಆಕಾರರಹಿತನಾಗಿ ಗಾಳಿರೂಪದಿಂದಿರುವ ಆ ಜೀವನನ್ನು ನೋಡುವ ರೀತಿಯು ತಾನೆ ಹೇಗೆ? ಮತ್ತು ಅದರಲ್ಲಿ ಆಸೆಯನ್ನಿಡುವ ಬಗೆಯಾದರೂ ಯಾವುದು? ಶರೀರಗಳ ವಿಷಯವು ಹಾಗಲ್ಲ. ಅವು ಚನ್ನಾಗಿ ಕಣ್ಣಿಗೆ ಕಾಣುತ್ತವೆ. ಆದುದರಿಂದಲೇ ಅವುಗಳ ಮೇಲೆ ಜನಗಳಿಗೆ ಅಷ್ಟು ಪ್ರೀತಿ. ಜೀವನು ಒಂದು ಶರೀರವನ್ನು ತ್ಯಜಿಸಿ ಮತ್ತೊಂದು ಶರೀರವನ್ನು ಪಡೆಯುವುದು ಅವನಿಗೆ ಸ್ವಭಾವವಾದುದರಿಂದ ಆ ಜೀವನಿಗೋಸ್ಕರ ಯಾರೂ ದುಃಖಪಡಬೇಕಾದುದಕ್ಕೆ ಕಾರಣವಿಲ್ಲ. ಮತ್ತು ಜೀವನಿಗಾಗಿ ದುಃಖಿಸುವವರೂ ಇಲ್ಲ. ಶರೀರವು ಇರುವವರಿವಿಗೆ ಮಾತ್ರವೇ ಜೀವಿಗಳು ಸುಖದುಃಖವನ್ನನುಭವಿಸುತ್ತಿರುವರು. ಸತ್ತಮೇಲೆ ಬೇರೆ ಕುಟುಂಬದೊಳಗಿರುವ ಬೇರೆ ತಾಯಿಯ ಗರ್ಭದಲ್ಲಿರುವ ಶಿಶುಶರೀರಗಳನ್ನು ಪ್ರವೇಶಿಸಿ ಶಿಶುಗಳಾಗಿ ಜನಿಸಿ ಬೆಳೆದು ಪುನಃ ಆ ಜನ್ಮಗಳಲ್ಲಿ ಒದಗಿದ ಸುಖದುಃಖಗಳನ್ನು ಹಿಂದಿನಂತೆಯೇ ಅನುಭವಿಸುತ್ತಿರುವರು.

ಓ ಸಹೋದರ ಸಹೋದರಿಯರೇ! ಇದುವರಿವಿಗೂ ವಿಸ್ತಾರವಾಗಿ ತಿಳಿಸಿದ ಜೀವಾತ್ಮನ ವಿಷಯಗಳೆಲ್ಲವನ್ನೂ ಚನ್ನಾಗಿ ಮನಸ್ಸಿಗೆ ತಿಳಿದುಕೊಂಡಿರಲ್ಲವೇ? ಇನ್ನುಮೇಲೆ ನಿಮ್ಮ ನಿಮ್ಮ ಕುಟುಂಬಗಳಲ್ಲಿ ಅವರವರ ಆಯುಃಪ್ರಮಾಣಕ್ಕೆ ತಕ್ಕಂತೆ ಮೃತಿ ಹೊಂದಿದರೆ ಅವರಿಗಾಗಿ ನೀವು ವೃಥಾ ದುಃಖಿಸಬೇಡಿ. ದುಃಖಪಡಬಾರದೆಂದು ಎಷ್ಟು ಹೇಳಿದರೂ, ಒಂದೇ ಕುಟುಂಬದಲ್ಲಿ ಒಟ್ಟು ಸೇರಿ ಅನೇಕ ಸಂವತ್ಸರಗಳು ಜೊತೆಯಲ್ಲಿದ್ದು ಒಬ್ಬರಮೇಲೊಬ್ಬರು ಅತಿಶಯವಾದ ಪ್ರೀತಿ ವಿಶ್ವಾಸಗಳನ್ನು

ತೋರಿಸುತ್ತಿರುವವರಾದುದರಿಂದ ಅವರಲ್ಲಿ ಯಾರಾದರೊಬ್ಬರು ಮರಣವನ್ನು ಹೊಂದಿದರೆಂದರೆ ಅವರಿಗಾಗಿ ಹೊಟ್ಟೆಯೊಡೆಯುವಷ್ಟು ದುಃಖಿಸುತ್ತಲೇ ಇರುವರು. ಇದು ಅಜ್ಞಾನದ ಫಲ. ಆದರೆ ಈ ಮೇಲೆಹೇಳಿದ ವಿಚಾರಗಳು ಮನಸ್ಸಿಗೆ ನಾಟಿದ್ದೇ ಆದರೆ, ಆ ದುಃಖದ ಬೇಗೆಯು ಅಷ್ಟಿರದು ಮತ್ತು ಆ ದುಃಖವು ಬಹಳ ಜಾಗ್ರತೆಯಾಗಿ ಕೊನೆಗಾಣುವುದು. ಈಶ್ವರನು ಜನಗಳಲ್ಲಿ ಒಬ್ಬರಮೇಲೊಬ್ಬರಿಗೆ ಪ್ರೀತಿ ಮತ್ತು ಆಶೆಗಳನ್ನು ಹುಟ್ಟಿಸಿ, ಆ ಆಶೆಗಳೆಂಬ ಹಗ್ಗಗಳಿಂದ ಅವರನ್ನು ಬಿಗಿಗಟ್ಟಿ, ಮೋಹವನ್ನು ಹೇಗೆ ಹುಟ್ಟಿಸುತ್ತಿದ್ದಾನೆ, ನೋಡಿದಿರಾ! ಆಹಾ! ಈ ಜನನಮರಣ ವಿಷಯಗಳು ಎಂತಹ ಆಶ್ಚರ್ಯಕರವಾದವುಗಳು ನೀವೇ ಯೋಚಿಸಿರಿ. ಇನ್ನುಮುಂದೆ "ಪರಬ್ರಹ್ಮನೊಬ್ಬನೇ ಸಮಸ್ತ ಜೀವರಾಶಿಗಳಲ್ಲಿಯೂ ಆತ್ಮನಾಗಿ ವ್ಯಾಪಿಸಿರುತ್ತಾನೆ" ಎಂಬ ವಿಷಯವನ್ನು ವಿವರಿಸಲಾಗಿದೆ.



# ಪರಮಾತ್ಮನೊಬ್ಬನೇ ಸಕಲ ಜೀವರಾಶಿಗಳ ಅಂತರಾತ್ಮ

ಶ್ರುತಿ ॥ ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ♦ ರೂಪಂ ರೂಪಂ ಪ್ರತಿ ರೂಪೋ ಬಭೂವ ♦ ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ♦ (ಕಠೋಪನಿಷತ್ತು 5ನೇ ಅಧ್ಯಾಯ 9ನೇ ವಾಕ್ಯ)

As fire, though one, having entered the world, takes a form corresponding to every form, so does the internal Atman of all living things assume a form for every form and yet, is outside of all forms.

(H. R. Bhagavat.)

ಅಗ್ನಿಯು ಹೇಗೆ ಈ ಪ್ರಪಂಚವನ್ನು ಪ್ರವೇಶಿಸಿ ಬೇರೆಬೇರೆ ರೂಪಗಳಿಂದ ಇರುತ್ತಾನೆಯೋ ಅಂದರೆ ಅಗ್ನಿಯು ಒಂದೇ ಆದರೂ ಬೇರೆಬೇರೆ ತರಹ ದೀಪಗಳಲ್ಲಿ ಯಾವ ರೀತಿಯಲ್ಲಿರುತ್ತಾನೆಯೋ ಹಾಗೆಯೇ, ಅಂತರಾತ್ಮನು ತಾನೊಬ್ಬನೇ ಆದರೂ, ಬ್ರಹ್ಮನಿಂದ ಮೊದಲು ಸಮಸ್ತ ಜೀವರಾಶಿಗಳ ಹೃದಯದಲ್ಲಿ ಹುದುಗಿದ್ದು ಹೊರಗೆ ಬೇರೆಬೇರೆ ರೂಪಗಳಿಂದ ತೋರುತ್ತಿದ್ದಾನೆ. ಇದು ಹೇಗೆಂದರೆ, ಒಂದು ಗೂಡಿನಲ್ಲಿ ಬೆಳಗುತ್ತಿದ್ದ ದೀಪದಿಂದ ಅನೇಕ ದೀಪಗಳನ್ನು ಹೊತ್ತಿಸಬಹುದು. ಅಷ್ಟು ದೀಪಗಳ ಪ್ರಕಾಶವು ಆ ಒಂದು ದೀಪದಿಂದುಂಟಾದರೂ ಎಂದಿಗೂ ಮೊದಲಿನ ಆ ದೀಪದ ಪ್ರಕಾಶವು ಕಡಿಮೆಯಾಗದು. ಹಾಗೆಯೇ ಆಯಾ ಜೀವಿಗಳಿಗೆ ಸಾಕ್ಷಿಮಾತ್ರನಾಗಿರುವುದಕ್ಕಾಗಿ ಆ ಪರಬ್ರಹ್ಮನಿಂದ ಎಷ್ಟು ಆತ್ಮಗಳು ಉದ್ಭವಿಸಿದರೂ ಪರಬ್ರಹ್ಮನ ಅಂಶವು ತೃಣಮಾತ್ರವೂ ತಗ್ಗದು. ಮತ್ತು ಅದೇ ಕಠೋಪನಿಷತ್ತಿನಲ್ಲಿ,

ಶ್ರುತಿ ॥ ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ♦ ರೂಪಂ ರೂಪಂ ಪ್ರತಿ
ರೂಪೋ ಬಭೂವ ♦ ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ
ಪ್ರತಿರೂಪೋ ಬಹಿಶ್ಚ ♦ ॥

As wind, though one, having entered the world, takes forms corresponding to every form, so does the internal Atman of all living things, though one, assume a form for every form and yet, is outside them all.

(H. R. Bhagavat.)

(ಅಧ್ಯಾಯ 5 ವಾಕ್ಯ 10)

ವಾಯುವು ಒಂದೇ ಆಗಿದ್ದರೂ, ಅದು ಈ ಪ್ರಪಂಚವನ್ನು ಪ್ರವೇಶಿಸಿ ಬೇರೆಬೇರೆ ಆಕಾರಗಳನ್ನು ಯಾವ ರೀತಿಯಲ್ಲಿ ಪಡೆಯುತ್ತದೆಯೋ ಅದೇ ರೀತಿಯಲ್ಲಿಯೇ, ಅಂತರಾತ್ಮನು ಸಮಸ್ತ ಜೀವರಾಶಿಗಳ ದೇಹಗಳಲ್ಲಿ ವ್ಯಾಪಿಸಿ, ತಾನೊಬ್ಬನಾದರೂ, ಬೇರೆಬೇರೆ ಆಕಾರಗಳನ್ನು ಪಡೆದವನಂತೆ ಕಾಣ್ಬರುತ್ತಾನಾದರೂ ಇವೆಲ್ಲಕ್ಕೂ ಹೊರಭಾಗದಲ್ಲಿ ನಿಂತು ತಾನು ಸಾಕ್ಷಿಭೂತನಾಗಿರುತ್ತಾನೆ. ಅಂದರೆ ಅಲ್ಲಿಗಿಲ್ಲಿಗೆ ಕದಲದೆ ಇರುವ ವಾಯುವು

ಚಲನೆಯನ್ನು ಪಡೆದು, ಒಂದು ಸಮಯದಲ್ಲಿ ಸುಳಿಗಾಳಿಯಾಗಿ ಗಿರಗಿರನೆ ತಿರುಗಿ ಮೇಲಕ್ಕೇಳುತ್ತಲೂ, ಮತ್ತೊಂದು ಸಮಯದಲ್ಲಿ ಬಿರುಗಾಳಿಯಾಗಿ ಬೀಸಿ ಗಿಡಮರಗಳನ್ನು ಕೆಡವುತ್ತಲೂ, ಸಮುದ್ರದಲ್ಲಿ ಹಡಗುಗಳನ್ನು ತಳ್ಳುತ್ತಲೂ, ಇರುತ್ತದೆ. ಅಲ್ಲದೆ ಕೆಲವುವೇಳೆ ಬಿಸಿಯಾಗಿ ಬೀಸುವುದೂ ಗಾಳಿ; ಮತ್ತೆ ಕೆಲವುವೇಳೆ ತಣ್ಣಗೆ ಬೀಸುವುದೂ ಗಾಳಿ. ಗಾಳಿಯು ಒಂದೇ ಆದರೂ ಆಗಾಗ ಯಾವರೀತಿಯಾದ ರೂಪ ವ್ಯತ್ಯಾಸಗಳನ್ನು ಹೊಂದುತ್ತವೆಯೋ ಅದೇ ರೀತಿಯಲ್ಲಿಯೇ ಪರಮಾತ್ಮನೂ ಸಹ, ನಾನಾ ವಿಧವಾದ ಜಂತುಗಳಲ್ಲಿ ವ್ಯಾಪಿಸಿ, ಅನೇಕ ಆತ್ಮಗಳಾಗಿ ಕಾಣುತ್ತಿರುತ್ತಾನೆ. ಮತ್ತು ಈ ಆತ್ಮನು ಎಂತಹನೆಂದರೆ; ಅದೇ ಕಠೋಪನಿಷತ್ತಿನಲ್ಲಿ ಹೀಗೆಂದು ಹೇಳಿದೆ.

ಶ್ರುತಿ ॥ ಏಕೋ ವಶೀ ಸರ್ವಭೂತಾಂತರಾತ್ಮಾ ♦ ಏಕಂ ರೂಪಂ ಬಹುಧಾ ಯಃ ಕರೋತಿ ♦ ತಮಾತ್ಮಸ್ಥಂ ಯೇಽನುಪಶ್ಯಂತಿ ♦ ಧೀರಾ ಸ್ತೇಷಾಂ ಸುಖಂ ಶಾಶ್ವತಂ, ನೇತರೇಷಾಂ ॥

ಶ್ರುತಿ ॥ " ನಿತ್ಯೋಽನಿತ್ಯಾನಾಂ ಚೇತನ ಶ್ಚೇತನಾನಾಂ ।
ಏಕೋ ಬಹೂನಾಂ ಯೌ ವಿದಧಾತಿ ಕಾಮಾರ್ನ್ ॥
ತಮಾತ್ಮಾನಂ ಯೋಽನುಪಶ್ಯಂತಿ ಧೀರಾಃ ।
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ " ॥

ಶ್ರುತಿ ॥ " ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ।
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ॥
ತಮೇವ ಭಾಂತ ಮನುಭಾತಿ ಸರ್ವಂ ।
ತಸ್ಯ ಭಾಸಾ ಸರ್ವ ಮಿದಂ ವಿಭಾತಿ " ॥

(ಕಠೋಪನಿಷತ್ತು 5ನೇ ಅಧ್ಯಾಯ 12-13-15ನೇ ವಾಕ್ಯಗಳು).

"That one Supreme Ruler, the Soul of all beings, Who makes this one form manifold,—those wise men who perceive Him as existing in their own self, to them belongs eternal happiness and to none else." "He, the eternal among the non-eternals, the intelligence of the intelligent, who,

though one, fulfils the desires of many—those wise men, who perceive Him as existing within their own self, to them belongs the eternal peace and to none else."

"The sun does not shine there nor the moon and the stars, nor these lightings, and much less this fire. When He shines, everything shines after Him, by His light all this is lighted."

(Swami Sharvananda)

"ಯಾವ ಪರಬ್ರಹ್ಮನು ತಾನು ಸಮಸ್ತಗಳನ್ನೂ ತನ್ನ ಅಧೀನವನ್ನಾಗಿ ಮಾಡಿ ಬ್ರಹ್ಮನು ಮೊದಲು ಸಮಸ್ತ ಜೀವರಾಶಿಗಳಲ್ಲಿಯೂ ತಾನೊಬ್ಬನಾದರೂ ತನ್ನ ರೂಪವನ್ನು ಅನೇಕ ವಿಧವಾಗಿ ಭಾಗಿಸಿಕೊಂಡು ಪಸರಿಸಿರುತ್ತಾನೆಯೋ, ಅಂತಹ ಸರ್ವಸ್ವಾಮಿಯನ್ನು ತಮ್ಮ ದೇಹದೊಳಗೆ ಹುದುಗಿರುವ ಆತ್ಮನೆಂಬದಾಗಿ ತಿಳಿಯುವಂತಹ ಪಂಡಿತರು ಮಾತ್ರ, ಶಾಶ್ವತವಾದ ಸಾಯುಜ್ಯಸುಖವನ್ನು ಪಡೆಯುವುದಕ್ಕೆ ಯೋಗ್ಯರೇ ಹೊರತು, ಉಳಿದವರಲ್ಲ."

"'ಆ ಪರಮಾತ್ಮನು ನಶ್ವರವಾದ ಸಮಸ್ತ ವಸ್ತುಗಳ ನಡುವೆ ಶಾಶ್ವತನಾಗಿರುವವನು. ಪ್ರಜ್ಞಾಶಾಲಿಗಳ ಪ್ರಜ್ಞೆಯೂ ಆತನೇ. ಆತನು ತಾನೊಬ್ಬನಾದರೂ ಅನೇಕರ ಕೋರಿಕೆಗಳನ್ನು ನೆರವೇರಿಸುವನು' ಎಂಬುದಾಗಿ ಯಾವ ಪಂಡಿತರು ತಿಳಿದಿರುತ್ತಾರೆಯೋ, ಅಂತಹ ಮಹಾನುಭಾವರಿಗೆ ಮಾತ್ರ ನಿತ್ಯವಾದ ಮನಶ್ಶಾಂತಿಯಿರುತ್ತದೆಯೇ ಹೊರತು, ಇತರರಿಗಿರುವುದಿಲ್ಲವು."

"ತೇಜೋವಂತನಾದ ಆ ಪರಮಾತ್ಮನಿರುವ ಸ್ಥಳದಲ್ಲಿ ನಮ್ಮ ಕಣ್ಣಿಗೆ ಕಾಣ್ಬರುವ ಈ ಸೂರ್ಯನೂ ಪ್ರಕಾಶಿಸನು, ಚಂದ್ರ ಮತ್ತು ನಕ್ಷತ್ರಗಳೂ ತಮ್ಮ ಪ್ರಕಾಶವನ್ನು ವ್ಯಕ್ತಗೊಳಿಸವು, ಹೀಗಿರಲು ಅಗ್ನಿಯು ತನ್ನ ಪ್ರಕಾಶವನ್ನು ತೋರಿಸಲಾರನೆಂಬುದನ್ನು ಹೇಳಬೇಕಾದುದೇ ಇಲ್ಲ. ಅಂದರೆ ಸ್ವಾಭಾವಿಕವಾದ ತೇಜಸ್ಸಿನಿಂದ ಬೆಳಗುತ್ತಿರುವ ಆ

ಪರಬ್ರಹ್ಮನಿರುವ ಕಡೆ ಸೂರ್ಯ ಚಂದ್ರ ಅಗ್ನಿ ನಕ್ಷತ್ರಗಳು ಬೆಳಗಲಾರವು, ಏತಕ್ಕೆಂದರೆ, ಅವುಗಳು ತಮ್ಮ ಪ್ರಕಾಶವನ್ನು ಆ ಪರಮಾತ್ಮನಿಂದ ಪಡೆಯುತ್ತವೆಯೇ ಹೊರತು ಅವುಗಳಿಗೆ ಪ್ರಕಾಶವೆಂಬುದು ಹುಟ್ಟುಗುಣವಲ್ಲ. ಆತನು ಬೆಳಗುತ್ತಿದ್ದರೆ ಎಲ್ಲವೂ ಆತನ ಬೆಳಕಿನಿಂದ ಹೊಳೆಯುತ್ತವೆ; ಮತ್ತು ಆತನ ಪ್ರಕಾಶದಿಂದಲೇ ಇವೆಲ್ಲವೂ ಪ್ರಕಾಶಿಸುವುವು" ಎಂಬುದೇ ಮೇಲಿನ ಶ್ರುತಿವಾಕ್ಯಗಳ ಭಾವಾರ್ಥ. ಇದೂ ಅಲ್ಲದೆ, ಕಠೋಪನಿಷತ್ತು 4ನೇ ಅಧ್ಯಾಯ 10ನೇ ವಾಕ್ಯ.

ಶ್ರುತಿ ‖ ಯದೇವೇಹ ತದಮುತ್ರ ತದನ್ವಿಹ ♦ ।
ಮೃತ್ಯೋಃ ಸ ಮೃತ್ಯು ಮಾಪ್ನೋತಿ ♦ ಯ ಇಹ ನಾನೇವ ಪಶ್ಯತಿ ♦ ‖

Whatever is here in this manifested world or in this body, that is there the obsolute state of Brahma. What is there, the same is here. He, who sees here as different, meets death after death *i.e.* has to undergo various births and deaths through his ignorance of the reality of Life."

(S. Swami)

" ಈ ಪ್ರಪಂಚದಲ್ಲಿ ಮತ್ತು ಈ ಶರೀರದಲ್ಲಿ ಕಾಣ್ಬರುವುದೆಲ್ಲವೂ ಆ ಪರಬ್ರಹ್ಮನಲ್ಲಿದ್ದೇ ಇರುತ್ತವೆ. ಆತನಲ್ಲಿ ನೆಲಸಿರುವುವೆಲ್ಲವೂ ಎಲ್ಲೆಲ್ಲಿಯೂ ಕಾಣಬರುತ್ತವೆ. ಯಾವನು 'ಅದೇ ಬೇರೆ, ಇದೇ ಬೇರೆ' ಎಂಬದಾಗಿ ತಿಳಿಯುತ್ತಾನೆಯೋ ಅಂದರೆ ಯಾವನಿಗೆ ಪದಾರ್ಥಗಳ ನಿಶ್ಚಯಜ್ಞಾನವಿರುವುದಿಲ್ಲವೋ ಆತನು ಜನನಮರಣಗಳೆಂಬ ಈ ಸಂಸಾರದಲ್ಲಿ ಅನೇಕವೇಳೆ ತೇಲಿ ಮುಳುಗಬೇಕಾಗುತ್ತದೆ ಅಂದರೆ ಮೋಕ್ಷಪದವಿಯನ್ನು ಅಂಥವನು ಪಡೆಯಲಾರನು" ಎಂಬುದೇ ಮೇಲಿನ ಶ್ರುತಿವಾಕ್ಯದ ತಾತ್ಪರ್ಯ.

ಆಕಾಶವು ಒಂದಾದರೂ ಅದು ಭಾಂಡದೊಳಗಿರುವಾಗ 'ಭಾಂಡಾಕಾಶ' ವೆಂದು ಹೇಳಲ್ಪಡುತ್ತದೆ. ಭಾಂಡವೊಡೆದ ತಕ್ಷಣವೇ ಅದು 'ಮಹಾಕಾಶ' ದಲ್ಲಿ ಕಲೆತುಹೋಗುತ್ತದೆ. ಇದು ಹೇಗೋ ಹಾಗೆಯೇ,

ಪರಮಾತ್ಮನು ಜೀವಿಗಳ ದೇಹಗಳೊಳಗೆ ಸೇರಿದಾಗ 'ಜೀವಾತ್ಮ' ನೆಂದು ಕರೆಯಲ್ಪಡುತ್ತಾನೆ. ಆ ಜೀವಾತ್ಮನಿಗೆ ಕರ್ಮಗಳು ಸವೆದು ದೇಹಗಳ ಸಂಬಂಧವು ಹರಿಯಿತೆಂದರೆ ತಾನು ಆಶ್ರಯಿಸಿದ್ದ ಕೊನೆಯಗೂಡನ್ನು ಅಂದರೆ ಶರೀರವನ್ನು ಬಿಟ್ಟ ತಕ್ಷಣವೇ ಪರಮಾತ್ಮನಲ್ಲಿ ಐಕ್ಯನಾಗುತ್ತಾನೆ. ಇದೇ ಉತ್ತಮವಾದ ಕಡೆಯ ಸ್ಥಿತಿ. ಇದೇ ಶಾಶ್ವತವಾದ ಸುಖವನ್ನನುಭವಿಸಬೇಕೆಂದಿರುವ ಜೀವಿಯ ಮುಖ್ಯ ಕೋರಿಕೆ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂಬಂತೆ ಜನನಮರಣಗಳಿಗೆ ಕಾರಣಭೂತವಾದ ಈ ಮನಸ್ಸು ಎಂದಿನವರಿವಿಗೆ ಇರುತ್ತದೆಯೋ, ಅಂದಿನವರಿವಿಗೂ ಜೀವಿಯು ದೇಹಸಂಬಂಧವನ್ನು ಪಡೆಯುತ್ತಲೇ ಇರುತ್ತಾನೆ. ಈ ಮನಸ್ಸನ್ನು ಯಾವುದೊಂದೂ ಕೋರಿಕೆಗಳಿಲ್ಲದೆ ಸಂಪೂರ್ಣವಾಗಿ ಲಯಮಾಡಿದಲ್ಲಿ, ಜೀವಿಯು ದೇಹಸಂಬಂಧವನ್ನು ಕಳೆದುಕೊಂಡು ಪರಬ್ರಹ್ಮನಲ್ಲಿ ಐಕ್ಯನಾಗುತ್ತಾನೆ. ಇದೂ ಅಲ್ಲದೆ ಆ ಪರಮಾತ್ಮನು,

ಶ್ರುತಿ ॥ 'ಅಣೋರಣೀಯಾನ್ ಮಹತೋ ಮಹೀಯಾನ್ ।
ಆತ್ಮಾಽಸ್ಯ ಜಂತೋರ್ ನಿಹಿತೋ ಗುಹಾಯಾಂ ॥
ತಮಕ್ರತುಃ ಪಶ್ಯತಿ ವೀತಶೋಕೋ ।
ಧಾತುಃ ಪ್ರಸಾದಾ ನ್ಮಹಿಮಾನ ಮಾತ್ಮನಃ' ॥

(ಕಠೋಪನಿಷತ್ತು ಅಧ್ಯಾಯ 2 ವಾಕ್ಯ 20)

ಪರಮಾತ್ಮನು ಪ್ರಪಂಚದಲ್ಲಿರುವ ಅತಿಸಣ್ಣ ವಸ್ತುಗಳಿಗಿಂತಲೂ ಸಣ್ಣನಾಗಿಯೂ ಅತಿದೊಡ್ಡ ವಸ್ತುವಿಗಿಂತಲೂ ದೊಡ್ಡವನಾಗಿಯೂ ಇದ್ದು, ಜೀವಿಕೋಟಿಗಳಲ್ಲಿ ಅಂತರಾತ್ಮನಾಗಿ ವಾಸಿಸುತ್ತಾನೆ. ಯಾವನು ನಶ್ವರವಾದ ಸುಖಕ್ಕೆ ಒಳಪಡುವ ಕೋರಿಕೆಗಳಿಗೆ ಅವಕಾಶ ಕೊಡುವುದಿಲ್ಲವೋ, ಅಂಥವನು ಶೋಕಮೋಹಾದಿಗಳಿಂದ ಸಂಪೂರ್ಣವಾಗಿ ಬಿಡಲ್ಪಟ್ಟ ಶಾಂತವಾದ ಮನಸ್ಸಿನಿಂದ ಆ ಪರಮಾತ್ಮನ ಮಹಿಮೆಯನ್ನು ಚನ್ನಾಗಿ ತಿಳಿಯಬಲ್ಲನು. ಮತ್ತು ಆ ಪರಬ್ರಹ್ಮನಾದರೋ,

ಶ್ರುತಿ ॥ "ಅಶರೀರಂ ಶರೀರೇಷು ♦ ಅನವಸ್ಥೇಷ್ವವಸ್ಥಿತಂ"

(ಅಧ್ಯಾಯ 2, 22ನೇ ವಾಕ್ಯ)

'ತನಗೆ ಶರೀರವಿಲ್ಲವಾದರೂ ದೇಹಗಳುಳ್ಳ ಪ್ರಾಣಿಕೋಟಿಗಳ ಹೃದಯದಲ್ಲಿ ವ್ಯಾಪಿಸಿರುತ್ತಾನೆ.' ಆತ್ಮನು ಇರುವೆಯಿಂದ ಮೊದಲು ಗೊಂಡು ಬ್ರಹ್ಮನವರಿವಿಗೂ ಇರುವ ಜಂತುಗಳಲ್ಲೆಲ್ಲವೂ ತುಂಬಿರುತ್ತಾನೆ. ಈ ಆತ್ಮನೇ ಪರಮಾತ್ಮನು. ಈ ಪರಮಾತ್ಮನು ಜಂತುಗಳ ಶರೀರ ದಲ್ಲಿರುವಾಗ ಜೀವಾತ್ಮನೆಂದೆನಿಸುತ್ತಾನೆ. ಜಂತುಗಳ ಪುಣ್ಯಪಾಪಗಳೆಂಬ ಕರ್ಮಗಳೆಲ್ಲವೂ ಸವೆದು ಶರೀರವನ್ನು ಬಿಟ್ಟೊಡನೆಯೇ ಜೀವಾತ್ಮನು ಪರಮಾತ್ಮನಲ್ಲಿ ಕಲೆತು ಹೋಗುತ್ತಾನೆ.

ಜೀವಿಗೆ ಆಸೆಯೆಂಬುದಿರುವವರಿವಿಗೂ ಆತ್ಮನು ಯಾವುದೋ ಒಂದು ಶರೀರವನ್ನು ಆಶ್ರಯಿಸಿಯೇ ಇರುತ್ತಾನೆ. ಶರೀರಕ್ಕೆ ನಾಶ ವುಂಟು. ಆದರೆ ಶರೀರವನ್ನು ಪಡೆದ ಜೀವನಿಗೆ ನಾಶವಿಲ್ಲ. ಇದಕ್ಕೆ ಭಗವದ್ಗೀತೆಯಲ್ಲಿನ ಅಧ್ಯಾಯ 2 ಶ್ಲೋಕ 23-24-25 ಇವುಗಳನ್ನು ಪ್ರಮಾಣಕ್ಕಾಗಿ ಈ ಕೆಳಗೆ ಹೇಳಿವೆ.

ಶ್ಲೋ ॥ ನೈನಂ ಛಿಂದಂತಿ ಶಸ್ತ್ರಾಣಿ ♦ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ♦ ನ ಶೋಷಯತಿ ಮಾರುತಃ ॥

ಶ್ಲೋ ॥ ಅಚ್ಛೇದ್ಯೋಽಯ ಮದಾಹ್ಯೋಽಯ ♦ ಮಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯ ಸ್ಸರ್ವಗತಃ ಸ್ಥಾಣು ♦ ರಚಲೋಽಯಂ ಸನಾತನಃ ॥

ಶ್ಲೋ ॥ ಅವ್ಯಕ್ತೋಽಯ ಮಚಿಂತ್ಯೋಽಯ ♦ ಮವಿಕಾರ್ಯೋಽಯ ಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ ♦ ನಾನುಶೋಚಿತು ಮರ್ಹಸಿ ॥

ಎಂಬಂತೆ, ಈ ಆತ್ಮನು ಗಾಳಿಯ ರೂಪದಿಂದಿರುವುದರಿಂದ ಇದನ್ನು ಶಸ್ತ್ರಗಳಿಂದ ಕತ್ತರಿಸುವುದಕ್ಕೂ, ಬೆಂಕಿಯಿಂದ ಸುಡುವುದಕ್ಕೂ, ನೀರಿನಲ್ಲಿ ನೆನಸುವುದಕ್ಕೂ ಮತ್ತು ಗಾಳಿಯಿಂದ ಶೋಷಿಸುವುದಕ್ಕೂ ಸಾಧ್ಯವಿಲ್ಲ. ಅಂದರೆ ಈ ಆತ್ಮನನ್ನು ಖಡ್ಗಾದಿ ಶಸ್ತ್ರಗಳು ಕತ್ತರಿಸಲಾರವು, ಅಗ್ನಿಯು ಸುಡಲಾರದು, ನೀರು ನೆನಸಲಾರದು ಮತ್ತು ವಾಯುವು ಒಣಗಿಸಲಾರದು. ಏತಕ್ಕೆಂದರೆ ಈ ಆತ್ಮನು ಕತ್ತರಿಸಲೂ, ಸುಡಲೂ, ನೆನಯಿಸಲೂ ಮತ್ತು ಒಣಗಿಸಲೂ ಸಾಧ್ಯವಾದವನಲ್ಲ. ಆದುದರಿಂದ ಇವನು ನಿತ್ಯನೂ, ಸರ್ವ ವ್ಯಾಪಕನೂ, ಸ್ಥಿರಸ್ವಭಾವದವನೂ, ಚಲನಾರಹಿತನೂ ಮತ್ತು ಸನಾ

ತನನೂ ಅಂದರೆ ಅನಾದಿಯೂ ಆಗಿರುತ್ತಾನೆ. ಮತ್ತು ಈ ಆತ್ಮನು ಸೂಕ್ಷ್ಮ ಸ್ವರೂಪನೂ, ಮನಸ್ಸಿಗೆ ಅವಿಷಯನೂ, ವಿಕಾರರಹಿತನೂ ಎಂದು ಹೇಳುವುದರಿಂದ ಓ ಅರ್ಜುನಾ! ಇಂತಹ ಆತ್ಮನ ಸ್ವರೂಪವನ್ನು ತಿಳಿದಮೇಲೆ ಅವನನ್ನು ಕುರಿತು ದುಃಖಿಸುವುದು ಯೋಗ್ಯವಲ್ಲ. ಆತ್ಮನಿಗೆ ವಿಕಾರವಾವುದೂ ಇಲ್ಲದುದರಿಂದಲೇ ಕರ್ಮೇಂದ್ರಿಯ ಜ್ಞಾನೇಂದ್ರಿಯಾದಿಗಳಿಗೆ ಕಾಣಬರುವವನಲ್ಲವು. ಮತ್ತು ಅಧ್ಯಾಯ 2 ಶ್ಲೋಕ 26ರಲ್ಲಿ ಹೀಗೆ ಹೇಳಿದೆ.

ಶ್ಲೋ ॥ ಅಥ ಚೈನಂ ನಿತ್ಯಜಾತಂ ♦ ನಿತ್ಯಂ ವಾ ಮನ್ಯಸೇ ಮೃತಂ ।
ತಥಾಪಿ ತ್ವಂ ಮಹಾಬಾಹೋ! ♦ ನೈವಂ ಶೋಚಿತು ಮರ್ಹಸಿ ॥

ಎಲೈ ಮಹಾಬಾಹುವಾದ ಅರ್ಜುನನೇ! ನೀನು ಈ ಆತ್ಮನು ಶರೀರವನ್ನು ಪಡೆದು ಹುಟ್ಟುವನೆಂತಲೂ, ಹಾಗೆಯೇ ಆ ಶರೀರದೊಂದಿಗೆ ನಾಶವಾಗುವನೆಂತಲೂ ಹೇಳುವವರ ಮತವನ್ನು ಅನುಸರಿಸಿದಾಗ್ಯೂ, ಈ ಆತ್ಮನನ್ನು ಕುರಿತು ಶೋಕಿಸುವುದು ಯೋಗ್ಯವಲ್ಲ. ಈ ದೇಹವು ಸದಾ ಹುಟ್ಟುಸಾವುಗಳನ್ನುಳ್ಳದಾಗಿದೆಯಾದುದರಿಂದ ದೇಹವನ್ನು ಕುರಿತು ದುಃಖಿಸಬಾರದು. ಹುಟ್ಟಿದವನು ಸಾಯುವುದೂ, ಸತ್ತವನು ಹುಟ್ಟುವುದೂ ನಿಶ್ಚಯವು. ಶರೀರಗಳು ಮಾತ್ರ ಉತ್ಪತಿಯಾಗುತ್ತವೆ ಮತ್ತು ನಾಶವಾಗುತ್ತವೆಯೇ ಹೊರತು, ಈ ಶರೀರಗಳೊಳಗಿರುವ ಆತ್ಮನು ಎಂದಿಗೂ ನಾಶಕ್ಕೆಡೆಯಾಗಲಾರನು. ಆ ಶರೀರದಲ್ಲಿ ಆತ್ಮನು ಕೆಲವು ದಿನಗಳು ವಾಸಮಾಡಿಕೊಂಡಿದ್ದು ಅನಂತರ ಆ ಶರೀರವನ್ನು ಬಿಟ್ಟು ಬೇರೆ ಶರೀರವನ್ನು ಪ್ರವೇಶಿಸುತ್ತಾನೆ. ಆದುದರಿಂದಲೇ ನಶ್ವರವಾದ ಈ ಶರೀರವನ್ನು ಕುರಿತಾಗಲಿ, ಶಾಶ್ವತವಾದ ಅಂದರೆ ನಾಶರಹಿತವಾದ ಆತ್ಮನನ್ನು ಕುರಿತಾಗಲಿ ದುಃಖಿಸುವುದು ನ್ಯಾಯವಲ್ಲ.

ಶ್ರುತಿ ॥ ಸ ವಾ ಏಷ ಮಹಾಜನ ಆತ್ಮಾ ಜರೋ ಮರೋ ಮೃತ್ಯೋ ।
ಭಯೋ ಬ್ರಹ್ಮಾಭಯಂ ಹಿ ವೈ ಬ್ರಹ್ಮಾ ಭವತಿ ॥

(ಬೃಹದಾರಣ್ಯಕೋಪನಿಷತ್ತು)

ಮತ್ತು ಈ ಆತ್ಮನು ಎಂಥವನೆಂದರೆ, ನಾಶವನ್ನೂ ಭಯವನ್ನೂ ಸಾವು ಮೊದಲಾದವುಗಳನ್ನು ಹೊಂದದವನು. ಶರೀರಕ್ಕೆ ಮಾತ್ರವೇ

ಭಯಮರಣಾದಿಗಳುಂಟು. ಮತ್ತು ಶರೀರಕ್ಕಿರುವಂತೆ ಬಾಲ್ಯ ಯೌವನ ಕೌಮಾರಾದಿ ಅವಸ್ಥೆಗಳೂ ಆತ್ಮನಿಗಿಲ್ಲವು.

ಶ್ರುತಿ ॥ " ಅಂತ ಶ್ಶರೀರೇ ನಿಹಿತೋ ಗುಹಾಯಾಂ " (ಅಧ್ಯಾತ್ಮೋಪನಿಷತ್ತು)

ಎಂಬಂತೆ, ಮೇಲೆ ಹೇಳಿದ ಆತ್ಮನು ಎಲ್ಲಾ ಶರೀರಗಳ ಪಂಚಕೋಶಗಳೆಂಬ ಗುಹೆಯಲ್ಲಿ ವಾಸಮಾಡುತ್ತಿದ್ದಾನೆ.

ಇದೇ ವಿಷಯವನ್ನು ಕುರಿತು ಭಗವದ್ಗೀತೆ ಅಧ್ಯಾಯ 3, ಶ್ಲೋ॥ 38, 39 ಪ್ರಮಾಣವು ಇವುಗಳನ್ನು ಈ ಕೆಳಗೆ ವಿವರಿಸಿದೆ.

ಶ್ಲೋ ॥ ಧೂಮೇ ನಾಧ್ರಿಯತೇ ವಹ್ನಿಃ ♦ ಯಥಾ ऽऽದರ್ಶೋ ಮಲೇನ ಚ ।
ಯಥೋಲ್ಬೇ ನಾವೃತೋ ಗರ್ಭಃ ♦ ತಥಾ ತೇನೇದ ಮಾವೃತಂ ॥
ಆವೃತಂ ಜ್ಞಾನ ಮೇತೇನ ♦ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ ! ♦ ದುಷ್ಪೂರೇ ಣಾನಲೇನ ಚ ॥

ಹೊಗೆಯು ಹೇಗೆ ಅಗ್ನಿಯನ್ನಾವರಿಸಿರುವುದೋ, ರಜೋರೂಪವಾದ ಧೂಳು ಅಂದರೆ ಕೊಳೆಯು ಹೇಗೆ ಕನ್ನಡಿಯನ್ನು ಮುಚ್ಚಿರುವುದೋ, ಜರಾಯು ಅಥವಾ 'ಮಾವಿ ಚೀಲ' ವು ಯಾವರೀತಿಯಲ್ಲಿ ಗರ್ಭವನ್ನು ಮುಚ್ಚಿರುವುದೋ, ಅದೇ ರೀತಿಯಲ್ಲಿಯೇ ಆಸೆಯೆಂಬ ಕಾಮವೂ ಕೂಡ ಪ್ರಾಣಿಕೋಟಿಗಳನ್ನಾವರಿಸಿ ಜ್ಞಾನವನ್ನು ಬೆಳಗದಂತೆ ಮಾಡಿರುವುದು.

ಓ ಅರ್ಜುನಾ! ಅನಾದಿಯಿಂದ ಅಂದರೆ ಜೀವಿಗಳನ್ನು ಸೃಷ್ಟಿ ಮಾಡಿದುದು ಮೊದಲು ಇಂದಿನವರಿವಿಗೆ ಜ್ಞಾನಿಗಳಿಗೆ ವೈರಿಯಾಗಿಯೂ, ಮೋಕ್ಷವನ್ನು ಹೊಂದುವುದಕ್ಕೆ ಯೋಗ್ಯಗಳಲ್ಲದ ವಿಷಯಗಳಿಂದ ತುಂಬಿದುದಾಗಿಯೂ, ತೃಪ್ತಿಪಡಿಸಲು ಅಸಾಧ್ಯವಾಗಿಯೂ ಇರುವ ಈ ಆಸೆಯೆಂಬ ಕಾಮದಿಂದ ಆತ್ಮಜ್ಞಾನವು ಮುಚ್ಚಲ್ಪಟ್ಟಿದೆ. ಈ ಆಸೆಯನ್ನು ನಶಿಸುವಂತೆ ಮಾಡುವುದು ತುಂಬಾ ಕಷ್ಟಸಾಧ್ಯ. ಮನುಷ್ಯರಲ್ಲಿ ಆಸೆಯುಳ್ಳವರು ಮೂರು ಬಗೆಯಾಗಿರುತ್ತಾರೆ. ಅವರಲ್ಲಿ,

**ಮೊದಲನೆಯ ತರಗತಿಯವರು :—** ಬೆಂಕಿಯನ್ನು ಹೊಗೆ ಮುಚ್ಚಿರುವಂತೆ ಇವರ ಆತ್ಮಜ್ಞಾನವನ್ನು ಆಸೆಯೆಂಬ ಹೊಗೆಯು

ಮುಚ್ಚಿರುತ್ತದೆ. ಗಾಳಿಯು ಚನ್ನಾಗಿ ಬೀಸಿದ ತಕ್ಷಣವೇ ಅಗ್ನಿಯನ್ನಾವರಿಸುವ ಹೊಗೆಯು ಚದರಿ, ಆ ಅಗ್ನಿಯು ಪ್ರಜ್ವಲಿಸುವಂತೆ ಅಂದರೆ ಉರಿಯುವಂತೆ ಹಿರಿಯರ ಅಂದರೆ ಜ್ಞಾನಿಗಳ ಸಾಂಗತ್ಯವೂ ಮತ್ತು ಸದ್ಗುರುಗಳ ಕೃಪೆಯೂ ದೊರಕಿದ ತಕ್ಷಣವೇ ಬಹು ಸುಲಭವಾಗಿ ಇವರಿಗೆ ಆತ್ಮಜ್ಞಾನವುಂಟಾಗುತ್ತದೆ.

**ಎರಡನೆಯ ತರಗತಿಯವರು :—** ಇವರಿಗೆ ಆತ್ಮಜ್ಞಾನವನ್ನು ಹೊಂದಬೇಕೆಂಬ ಕೋರಿಕೆ ಮಾತ್ರ ಇರುತ್ತದೆ. ಆದರೆ ಅದು ಯಾವ ರೀತಿಯಲ್ಲಿ ಲಭಿಸುವುದೋ ಆ ಮಾರ್ಗವನ್ನು ತಿಳಿಯಲಾರದೆ ಇರುತ್ತಾರೆ. ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಬೇಕೆಂಬ ಕೋರಿಕೆಯಿದ್ದರೂ, ಆ ಕನ್ನಡಿಯ ಮೇಲಿದ್ದ ಕೊಳೆಯನ್ನು ಚನ್ನಾಗಿ ವರೆಸಿದ್ದೇ ಆದರೆ, ಮುಖವು ಸ್ಪಷ್ಟವಾಗಿ ಕಾಣಬರುತ್ತದೆಯೆಂಬ ತಿಳುವಳಿಕೆ ಮಾತ್ರ ಇವರಿಗಿರುವುದಿಲ್ಲ. ಈ ತರಗತಿಗೆ ಸೇರಿದವರು ಸದ್ಗುರುಸೇವೆಯನ್ನು ಚನ್ನಾಗಿ ಮಾಡಿ ಅವರ ಪ್ರೀತಿಗೆ ಪಾತ್ರರಾಗುವುದಕ್ಕೆ ಯತ್ನಿಸಬೇಕು.

**ಮೂರನೆಯ ತರಗತಿಯವರು:–**ಗರ್ಭಕೋಶದಲ್ಲಿರುವ ಪಿಂಡವು ಹೊರಗೆ ಬರುವುದಕ್ಕೆ ಶಕ್ತಿಯಿಲ್ಲದಿರುವಂತೆ ಈ ಮೂರನೆಯ ತರಗತಿಗೆ ಸೇರಿದವರು, ಆಸೆಯಿಂದ ಪೂರ್ಣವಾಗಿ ಮುಚ್ಚಲ್ಪಟ್ಟು ಆತ್ಮಜ್ಞಾನವನ್ನು ಸಂಪಾದಿಸಬೇಕೆಂಬ ಕೋರಿಕೆಯೇ ಇಲ್ಲದಿರುತ್ತಾರೆ. ಇಂಥವರಿಗೆ ಸದ್ಗುರು ಸೇವೆ, ಜ್ಞಾನಿಗಳ ಸಹವಾಸಗಳು ಕೂಡ ಪ್ರಯೋಜನಕ್ಕೆ ಬರವು. ಅಂದರೆ ಇವರು ಸಂಪೂರ್ಣವಾದ ಮೂಢರೆಂದು ಭಾವವು. "ಅಭ್ಯಾಸೇನ ಚ ಕೌಂತೇಯ! ♦ ವೈರಾಗ್ಯೇನ ಚ ಗೃಹ್ಯತೇ" ಎಂಬಂತೆ ಮೇಲೆ ಹೇಳಿದವರೆಲ್ಲರೂ ವೈರಾಗ್ಯದಿಂದಲೇ ಇದ್ದು ನಿರಂತರವೂ ಧ್ಯಾನಯೋಗವನ್ನು ಅಂದರೆ, 'ಸೋಽಹಂ' ಮಂತ್ರಜಪವನ್ನು ಅಭ್ಯಾಸಮಾಡಿದ್ದೇ ಆದರೆ, ಎಲ್ಲಾ ಆಸೆಗಳೂ ಮತ್ತು ಮೌಢ್ಯವೂ ತಮಗೆ ತಾವೇ ಕ್ರಮಕ್ರಮವಾಗಿ ತೊಲಗಿಹೋಗುತ್ತವೆ. ಇದಕ್ಕೆ ಒಂದು ದೃಷ್ಟಾಂತವುಂಟು ಅದನ್ನು ಈ ಮುಂದೆ ತಿಳಿಸಿದೆ.

ಒಬ್ಬ ಕಳ್ಳನು ಒಂದು ಪಟ್ಟಣವನ್ನು ಪ್ರವೇಶಿಸಿ 'ಆ ಪಟ್ಟಣದಲ್ಲಿ ನಾನು ಯಾರಮನೆಗೆ ಕನ್ನಹಾಕಿದರೆ ನನಗೆ ಹೆಚ್ಚು ಧನವು ದೊರಕುತ್ತದೆ.' ಎಂದು ಯೋಚಿಸಿ, ಕಡೆಯಲ್ಲಿ ಒಬ್ಬಾನೊಬ್ಬ ಧನಿಕನ ಮನೆಯನ್ನು ಹೊಕ್ಕು ಧನವನ್ನಪಹರಿಸಬೇಕೆಂದು ನಿರ್ಧರಿಸಿಕೊಂಡನು. ಹೀಗೆ ನಿಶ್ಚೈಸಿದಮೇಲೆ ಒಂದಾನೊಂದು ದಿನ ರಾತ್ರಿ ಆ ಧನಿಕನ ಮನೆಗೆ ಕನ್ನವನ್ನು ಹಾಕಿ ಒಳಕ್ಕೆ ನುಗ್ಗಿ ಆ ಧನಿಕನು ಮಲಗುವ ಕೊಠಡಿಯ ಸಮೀಪದಲ್ಲಿ ಔತುಕೊಂಡಿದ್ದನು. ಸ್ವಲ್ಪ ಹೊತ್ತಿನೊಳಗಾಗಿ ಆ ಧನಿಕನೂ ಅವನ ಹೆಂಡತಿಯೂ ಮಲಗುವ ಚಿಕ್ಕ ಮನೆಯೊಳಕ್ಕೆ ಹೋಗಿ ಕುಳಿತು ಆ ಗಂಡ ಹೆಂಡಿರಿಬ್ಬರೂ ತಮ್ಮ ಮಗಳ ವಿವಾಹದ ವಿಷಯವನ್ನು ಕುರಿತು ಮಾತ ನಾಡುತ್ತಿದ್ದರು. ಆಗ ಹೆಂಡತಿಯು ಹೇಳಿದ ಅಭಿಪ್ರಾಯಗಳಿಗೆ ಗಂಡನು ತನ್ನ ಸಮ್ಮತಿಯನ್ನು ಕೊಡದೆ ಬಹಳ ಕೋಪದಿಂದ, 'ಈ ಊರಿನಲ್ಲಿರುವ ಒಬ್ಬ ಸಾಧುವಿಗೆ ನನ್ನ ಮಗಳನ್ನು ಕೊಡುವೆನೆಂದು ನಿಶ್ಚೈಸಿದ್ದೇನೆ. ಆ ಸಾಧುವು ನಿಶ್ಚಲವಾದ ಭಗವದ್ಭಕ್ತಿಯನ್ನು ಹೊಂದಿರುವನೆಂದು ತೋರಿದ್ದೇ ಆದರೆ, ಅವನಿಗೆ ನನ್ನ ಈ ಮಗಳನ್ನು ಕೊಟ್ಟು ವಿವಾಹ ಬೆಳಸಿ ನನಗಿರುವ ಸರ್ವಸ್ವವನ್ನೂ ಅವನಿಗೆ ಧಾರೆಯೆರೆಯುತ್ತೇನೆ' ಎಂದು ಪ್ರತಿಜ್ಞೆಮಾಡಿದನು. ಈ ಮಾತುಗಳೆಲ್ಲವನ್ನೂ ಅಲ್ಲಿ ಹುದುಗಿ ಕೊಂಡಿದ್ದ ಕಳ್ಳನು ಕೇಳಿದವನಾಗಿ, 'ಕಳ್ಳತನದಿಂದ ಜೀವನ ಮಾಡು ವುದಕ್ಕಿಂತಲೂ ಸಾಧುವೇಷವನ್ನು ಧರಿಸಿ ಭಗವನ್ನಾಮಸ್ಮರಣೆಯನ್ನು ಭಕ್ತಿಯಿಂದ ತನಗೆ ತೋರಿದ ದಾರಿಯಲ್ಲಿ ಬಿಡದೆ ನಡೆಸುತ್ತಾ ಬಂದರೆ, ತನಗೆ ಸುಂದರಿಯಾದ ಹೆಂಡತಿಯೂ ಹೆಚ್ಚಾದ ಐಶ್ವರ್ಯವೂ ಲಭಿಸುವು ವೆಂದು ಮನಸ್ಸಿನಲ್ಲೆಣಿಸಿ, ಆ ಕ್ಷಣವೇ ತಾನು ಬಂದ ದಾರಿಯಿಂದಲೇ ಆ ಮನೆಯಿಂದಾಚೆಗೆ ಹೊರಟು, ಮಾರನೆಯ ಬೆಳಿಗ್ಗೆ ಊರಮುಂದಿನ ಕೆರೆಯ ಸಮೀಪಕ್ಕೆ ಹೋಗಿ, ಆ ನೀರಿನಲ್ಲಿ ಸ್ನಾನಮಾಡಿ, ವಿಭೂತಿ ಯನ್ನಿಟ್ಟು, ರುದ್ರಾಕ್ಷೆಗಳ ಮಾಲೆಯನ್ನು ಧರಿಸಿ, ಸಾಧುವೇಷದಿಂದ ಆ ಕೆರೆಯ ದಡದಮೇಲಿರುವ ಒಂದು ಗಿಡದ ಕೆಳಗೆ ಕುಳಿತು, ನಿಶ್ಚಲವಾದ ಮನಸ್ಸಿನಿಂದಿರುವವನಂತೆ ಪರಮಾತ್ಮಧ್ಯಾನವನ್ನು ಮಾಡುತ್ತಿದ್ದನು. ಆ ಬೆಳಿಗ್ಗೆ ಆ ಧನಿಕನೂ ಕೂಡ ಕೆರೆಯ ಕಟ್ಟೆಯ ಸಮೀಪಕ್ಕೆ ಬಂದು

ಈ ಕೃತ್ರಿಮಸಾಧುವನ್ನು ನೋಡಿದನು. ಈ ಧನಿಕನ ಬರುವಿಕೆಯನ್ನು ಆ ಕಳ್ಳನಾದ ಸಾಧುವು ತಿಳಿದು, ಮತ್ತಷ್ಟು ಈಶ್ವರಧ್ಯಾನವನ್ನು ಮಾಡು ತ್ತಿರುವಂತೆ ತೋರ್ಪಡಿಸಿದನು. ಈತನು ಧ್ಯಾನನಿಷ್ಠೆಯಲ್ಲಿದ್ದಾನೆಂದು ತಿಳಿದ ಆ ಧನಿಕನು, ಆತನಿಗೆ ಸ್ವಲ್ಪ ದೂರದಲ್ಲಿಯೇ ನಿಂತು ತನ್ನ ಸೇವಕರನ್ನು ಕುರಿತು ಹೀಗೆಂದು ಹೇಳಿದನು. 'ಓ ಸೇವಕರೇ! ಈ ದಿನದಮೊದಲು ಹತ್ತು ತಿಂಗಳವರಿವಿಗೂ ಈ ಸಾಧುವಿನ ಬೆನ್ನು ಹತ್ತಿ ತಿರುಗುತ್ತಾ ಈತನ ಭಕ್ತಿವಿಷಯವೆಂತಹುದೆಂಬುದನ್ನು ಕಂಡುಹಿಡಿದು ನನಗೆ ಅದನ್ನು ವಿಶದ ಪಡಿಸಬೇಕು,' ಎಂದು ಅವರಿಗೆ ಆಜ್ಞಾಪಿಸಿದನು. ಆ ಮಾತುಗಳು ಆ ಕಪಟಸಾಧುವಿನ ಕಿವಿಗೆ ಬಿದ್ದವು. ಆ ದಿನದಮೊದಲು ಆ ಸಾಧುವು ತನ್ನಲ್ಲಿ ತಾನು ಈರೀತಿಯಾಗಿ ಎಂದುಕೊಳ್ಳುತ್ತ ಈಶ್ವರಧ್ಯಾನವನ್ನು ಮಾಡುವುದಕ್ಕೆ ತೊಡಗಿದನು. 'ನಾನು ಮಾಡುವಂಥ ಈಶ್ವರಧ್ಯಾನದಲ್ಲಿ ಲೋಪವು ಬಂದದ್ದೇ ಆದರೆ, ಈ ಧನಿಕನ ಸೇವಕರು ಕಂಡುಹಿಡಿಯು ತ್ತಾರೆಯೋ ಏನೋ?' ಎಂಬ ಭಯದಿಂದ ಎಡೆಬಿಡದೆ ಬಹಳ ಭಕ್ತಿಶ್ರದ್ಧೆ ಗಳಿಂದ ಈಶ್ವರಧ್ಯಾನವನ್ನು ಮಾಡುವುದಕ್ಕಾರಂಭಿಸಿ ಒಂದೇ ಸಮನಾಗಿ ಅದನ್ನು ನಡೆಸುತ್ತಿದ್ದನು. ಹೀಗೆ ಆ ಕಪಟಮುನಿಯು ಈಶ್ವರಧ್ಯಾನ ವನ್ನು ಪ್ರತಿದಿನವೂ ತಪ್ಪದೆ ನಡೆಸುತ್ತ ಬರಲಿಕ್ಕಾಗಿ ಹತ್ತು ತಿಂಗಳಾಗುವ ಹೊತ್ತಿಗೆ ಅವನು ಆ ಪರಮಾತ್ಮಧ್ಯಾನದಲ್ಲಿಯೇ ನಟ್ಟ ಮನಸ್ಸುಳ್ಳವ ನಾಗಿ ನಿಶ್ಚಲವಾದ ಭಕ್ತಿಶ್ರದ್ಧೆಗಳು ದಿನೇದಿನೇ ಅಧಿಕವಾಗಿ ಕಡೆಗೆ ನಿಜ ವಾದ ಸಾಧುವಾಗಿಯೇ ಪರಿಣಮಿಸಿದನು. ಹತ್ತು ತಿಂಗಳು ಕಳೆದ ತಕ್ಷಣವೇ ಆ ಸೇವಕರು ಆ ಧನಿಕನ ಸಮೀಪಕ್ಕೆ ಹೋಗಿ ಆ ವಿಷಯವನ್ನು ತಮ್ಮ ಯಜಮಾನನಿಗೆ ಸವಿಸ್ತಾರವಾಗಿ ತಿಳಿಯಪಡಿಸಿದರು. ಆಗ ಆ ಧನಿಕನು ತನ್ನ ಪ್ರತಿಜ್ಞಾಪ್ರಕಾರವಾಗಿ ಆ ಸಾಧುವಿನ ಸಮೀಪಕ್ಕೆ ಹೋಗಿ ತನ್ನ ಮಗಳನ್ನು ಮದುವೆಮಾಡಿಕೊಂಡು ತನ್ನನ್ನು ಕೃತಾರ್ಥ ನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಈ ಸಾಧುವಿನ ಮನ ಸ್ಸಾದರೋ, ಭಗವದ್ಧ್ಯಾನದಲ್ಲಿ ನಿಂತು ಭಕ್ತಿಪರಿಪಕ್ವವಾಗಿ ಈ ಪ್ರಪಂಚ ದಲ್ಲಿನ ವಿಷಯೇಚ್ಛೆಗಳೆಲ್ಲವೂ ಅಶಾಶ್ವತವಾದವುಗಳೆಂದೂ, ಪ್ರಾಪಂಚಿಕ ಸುಖಗಳೆಲ್ಲವೂ ಅತಿ ತುಚ್ಛವಾದವುಗಳೆಂದೂ, ತಿಳಿದಿತ್ತಾದುದರಿಂದ

ಆತನು ಆ ಧನಿಕನ ಕೋರಿಕೆಗೆ ಸಮ್ಮತಿಸದವನಾದನು. 'ಆರು ತಿಂಗಳ ಸ್ನೇಹದಿಂದ ಅವರು ಇವರಾಗುತ್ತಾರೆ' ಎಂಬ ನಾಣ್ಣುಡಿಯ ಭಾವವು ನಿಜವಾಗುವಂತೆ ಈ ಕಪಟ ಸಾಧುವು ಹತ್ತು ತಿಂಗಳು ಎಡೆಬಿಡದೆ ಪರಮಾತ್ಮಧ್ಯಾನದಲ್ಲಿ ನಟ್ಟ ಮನಸ್ಸುಳ್ಳವನಾದುದರಿಂದಲೇ ಆ ಭಗವಂತನ ಮಹಿಮೆಯಿಂದ ಅವನಲ್ಲಿರುವ ಕಳ್ಳತನವೇ ಮೊದಲಾದ ದುರ್ಗುಣಗಳೆಲ್ಲವೂ ತೊಲಗಿಹೋಗಿ ಸಾಧುಗುಣಗಳನ್ನು ಸ್ವೀಕರಿಸಿ ಈ ಪ್ರಪಂಚದಲ್ಲಿರುವ ವಸ್ತುಗಳಲ್ಲಿಯೇ ವೈರಾಗ್ಯವನ್ನು ಹೊಂದಿದನು. ಆದುದರಿಂದ ನಿಜವಾದ ಭಗವದ್ಭಕ್ತಿಯುಳ್ಳವನಿಗೆ ಐಹಿಕಸುಖಗಳಲ್ಲಿ ಕೋರಿಕೆಗಳೇ ಇರವು. ಒಂದುವೇಳೆ ಆತನ ಮನಸ್ಸು ಪ್ರಾಪಂಚಿಕ ವಿಷಯಗಳಲ್ಲಿ ಪ್ರವೇಶಿಸಿದ್ದೇ ಆದರೆ, ಆತನು ವಿವೇಕವನ್ನು ತಂದುಕೊಂಡು ಸುಲಭವಾಗಿ ಮನಸ್ಸನ್ನು ಹಿಂದಿರುಗಿಸಬಲ್ಲನು.

ಶ್ರುತಿ ॥ 'ಅರೂಪಸ್ತು ಮನೋನಾಶೋ ♦ ವೈದೇಹೀ ಮುಕ್ತಿಗೋ ಭವೇತ್' ॥

(ಮುಕ್ತಿಕೋಪನಿಷತ್ತು ಶ್ಲೋ 36)

ಎಂಬಂತೆ ಮನಸ್ಸು ನಾಶವಾದೊಡನೆಯೇ ಆತ್ಮನು ತನ್ನ ನಿಜಸ್ವರೂಪವನ್ನು ಪಡೆಯುವನು; ಅಂದರೆ ಪರಬ್ರಹ್ಮನಲ್ಲಿ ಹೋಗಿ ಸೇರುವನು. ಹಾಗೆ ಸೇರುವುದಕ್ಕೆ 'ಅರೂಪಮನೋನಾಶ' ವೆಂದು ಹೆಸರು. ಈರೀತಿಯಾದ ಅರೂಪಮನೋನಾಶವನ್ನು ಹೊಂದುವುದೇ ವಿದೇಹಮುಕ್ತಿಯೆಂದೆನಿಸುವುದು. ವಿದೇಹಮುಕ್ತಿಯುಂಟಾಗುವುದಕ್ಕೆ ಸಂಚಿತಕರ್ಮಗಳೂ ಮತ್ತು ಸ್ಥೂಲ-ಸೂಕ್ಷ್ಮ-ಕಾರಣಗಳೆಂಬ ದೇಹತ್ರಯಗಳೂ ನಾಶವಾಗಬೇಕು. ಇವುಗಳು ನಾಶವಾದೊಡನೆಯೇ ಜೀವಾತ್ಮಪರಮಾತ್ಮರೈಕ್ಯವುಂಟಾಗುತ್ತದೆ.

ಜೀವನು ಎಷ್ಟು ಜನ್ಮಗಳನ್ನೆತ್ತಿದ್ದರೂ, ಕಡೆಯಲ್ಲಿ ಯಾವುದೋ ಒಂದು ಜನ್ಮದಲ್ಲಿ ಈ ಜೀವಾತ್ಮ-ಪರಮಾತ್ಮರ ಐಕ್ಯವು ಆಗಿಯೇ ಆಗುತ್ತದೆ. ಅನೇಕಕೋಟಿ ಜನ್ಮಗಳನ್ನು ಪಡೆದು, ಆ ಜನ್ಮಗಳಲ್ಲಿ ಅವರವರ ಕರ್ಮಾನುಸಾರವಾಗಿ ಸಂಭವಿಸುವ ದಾರಾಪುತ್ರ ಧನಧಾನ್ಯ ಗೃಹಕ್ಷೇತ್ರಾರಾಮಾದಿಗಳನ್ನು ಪಡೆಯುತ್ತಾ, ಜನ್ಮಗಳನ್ನೆತ್ತುತ್ತಾ ಅದರಿಂದ ಸಂಸಾರ

ವಿಷಯಾಪೇಕ್ಷೆಯನ್ನು ಹೆಚ್ಚಿಸುತ್ತಾ, ಆಸೆಯೆಂಬ ಬಲೆಯಲ್ಲಿ ಸಿಕ್ಕಿಬೀಳು ತ್ತಿರುವರು. ಈ ವಿಷಯಗಳ ಮೇಲಿರುವ ಆಸೆಯಿಂದ, ಮನಸ್ಸು ಪರ ಮಾತ್ಮನ ಚಿಂತೆಯಲ್ಲಿ ಬುದ್ಧಿಯನ್ನು ಹೋಗಲೀಯದೆ ಅದನ್ನು ದೂರ ವಾಗಿಯೇ ಓಡಿಸುತ್ತಲಿರುತ್ತದೆ.

ಹೇಗೆಂದರೆ, ಒಂದುಕಡೆ ಈಶ್ವರತತ್ತ್ವೋಪದೇಶವನ್ನು ಕುರಿತು ಒಬ್ಬಾನೊಬ್ಬ ಮಹಾತ್ಮನು ಉಪನ್ಯಾಸವನ್ನು ಮಾಡುವುದಕ್ಕಾಗಿ ಒಂದು ಸಭೆಯನ್ನು ಸೇರಿಸಿದ್ದನೆಂದು ಭಾವಿಸೋಣ. ಅಂತಹ ಉಪನ್ಯಾಸವನ್ನು ಕೇಳಬೇಕೆಂಬ ಇಚ್ಛೆಯು ಪುಣ್ಯಪುರುಷರಿಗಿರುತ್ತದೆಯೇ ಹೊರತು, ಇತರ ಸಾಮಾನ್ಯ ಜನಗಳಿಗೆ ಎಂದಿಗೂ ಇರುವುದಿಲ್ಲ. ಆದರೆ ಇಂತಹ ಇಚ್ಛೆಯು ಸಾಮಾನ್ಯರಿಗೆ ಯಾವಾಗಲಾದರೂ ಒಂದುವೇಳೆ ಹುಟ್ಟಿದರೂ ಹುಟ್ಟ ಬಹುದು. ಅದೇ ರೀತಿಯಲ್ಲಿ ಸಾಮಾನ್ಯ ಮನುಷ್ಯರ ಗುಂಪಿಗೆ ಸೇರಿದ ಒಬ್ಬನು ಈ ಉಪನ್ಯಾಸವನ್ನು ಕೇಳುವ ಸಲುವಾಗಿ ಅಲ್ಲಿಗೆ ಬಂದು ಕೂತು ಕೊಂಡಿದ್ದರೂ, ಸ್ವಲ್ಪ ಹೊತ್ತಿನಲ್ಲಿಯೇ ಅವನಿಗೆ ಸಂಸಾರ ವಿಷಯವಾವು ದಾದರೂ ಮನಸ್ಸಿಗೆ ಬಂದೋ, ಇಲ್ಲವೇ ನಿದ್ರೆ ಬಂದೋ, ಮನೆಗೆ ಎದ್ದು ಹೋಗುತ್ತಾನೆ. ಏಕೆಂದರೆ, ಪಾಪಾತ್ಮನಾದ ಆತನ ಮನಸ್ಸು ಸತ್ಕಾಲ ಕ್ಷೇಪಕ್ಕೆ ಅವಕಾಶ ಕೊಡುವುದಿಲ್ಲ. ಆದುದರಿಂದಲೇ ಅವನಲ್ಲಿರುವ ಆತ್ಮನು ಕರ್ಮಾನುಸಾರವಾಗಿ ಮನಸ್ಸನ್ನು ಹೊರಗಿನ ವ್ಯಾಪಾರಗಳಲ್ಲಿ ಪ್ರವರ್ತಿಸು ವಂತೆ ಮಾಡುತ್ತಿರುತ್ತಾನೆ. ಈ ಮನುಷ್ಯನು ಯಾವುದೋ ಒಂದು ಗೃಹ ಕೃತ್ಯ ವಿಷಯದಲ್ಲಿಯಾಗಲಿ ಅಥವಾ ಜೂಜು, ಕಳ್ಳತನ ಮೊದಲಾದ ವಿಷಯಗಳಲ್ಲಿಯಾಗಲಿ, ಬುದ್ಧಿಯನ್ನು ನಿಲ್ಲಿಸುತ್ತಾನೆ. ಹೇಗೆಂದರೆ, ಜೂಜಾಡುವವನು ತನಗೆ ನಿದ್ರೆಬಂದಿದ್ದೇ ಆದರೆ, ಚುಟ್ಟ ಬೀಡಿ ಮೊದಲಾ ದುವುಗಳನ್ನು ತೆಗೆದುಕೊಂಡು ಧೂಮಪಾನವನ್ನುಮಾಡಿ ಆ ನಿದ್ರೆಯನ್ನು ಕಳೆದು ಪುನಃ ಜೂಜಾಡುವುದಕ್ಕೆ ಪ್ರಯತ್ನಿಸುವನೇ ಹೊರತು, ಅದನ್ನು ಬಿಟ್ಟು ಕದಲನು. ಅಂತಹ ದುರ್ವ್ಯಾಪಾರಿಗೆ ಸತ್ಕಾಲಕ್ಷೇಪವನ್ನು ಮಾಡು ವುದಕ್ಕೆ ಅವಕಾಶವೇ ದೊರೆಯಲಾರದು. ಅದಕ್ಕೆ ಕಾರಣಗಳೇನೆಂದರೆ, ಮೇಲೆ ಹೇಳಿದವನ ಕರ್ಮಾನುಸಾರವಾಗಿ ಅವನಿಗೆ ಸಂಭವಿಸಿದ ವಿಷಯಾ

ಪೇಕ್ಷೆಗಳೇ ಹೌದು. ಇಂತಹ ವಿಷಯಾಪೇಕ್ಷೆಗಳು ಜನ್ಮಜನ್ಮದಲ್ಲಿಯೂ ಅವನಿಗುಂಟಾಗಿ ಜನ್ಮಗಳು ಹೆಚ್ಚಿದಂತೆಲ್ಲಾ ಅವುಗಳು ಕ್ರಮಕ್ರಮವಾಗಿ ಹೆಚ್ಚುತ್ತಲೇ ಬರುತ್ತವೆ. ಹಾಗಲ್ಲದೆ ಅವನು ಪ್ರತಿಜನ್ಮದಲ್ಲಿಯೂ ಸ್ವಲ್ಪಮಟ್ಟಿಗಾದರೂ ಪರಮಾತ್ಮಧ್ಯಾನವನ್ನು ಮಾಡುವುದಕ್ಕೆ ಯತ್ನಿಸುತ್ತ ಬರುತ್ತಿದ್ದರೆ, ಕೆಲವು ಜನ್ಮಗಳು ಕಳೆದ ಮೇಲಾದರೂ ಅವನಿಗೆ ಮೋಕ್ಷಪ್ರಾಪ್ತಿಯುಂಟಾಗುತ್ತದೆ. ದುಷ್ಟರನ್ನು ಶಿಕ್ಷಿಸುವುದಕ್ಕಾಗಿಯೂ, ಶಿಷ್ಟರನ್ನು ರಕ್ಷಿಸುವುದಕ್ಕಾಗಿಯೂ ಪರಮಾತ್ಮನಿಂದ ಆ ಸ್ವಾಮಿಯು ಯುಗಯುಗಗಳಲ್ಲಿಯೂ ಅವತರಿಸುತ್ತಾನೆ. ಈ ವಿಷಯವನ್ನು ಕುರಿತು ಪರಮಾತ್ಮನಾದ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯಲ್ಲಿ 8ನೇ ಅಧ್ಯಾಯ 4ನೇ ಶ್ಲೋಕದಲ್ಲಿ ಹೀಗೆಂದು ಹೇಳಿರುತ್ತಾನೆ.

ಶ್ಲೋ ॥ " ಪರಿತ್ರಾಣಾಯ ಸಾಧೂನಾಂ ♦ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ♦ ಸಂಭವಾಮಿ ಯುಗೇ ಯುಗೇ ॥"

ಕೃಷ್ಣ:—ಅರ್ಜುನಾ! ಪ್ರತಿ ಜನ್ಮದಲ್ಲಿ ನಾನೇತಕ್ಕಾಗಿ ಅವತರಿಸುತ್ತೇನೆಂದರೆ: ಧರ್ಮವು ಕ್ಷೀಣಿಸಿ ಅಧರ್ಮವು ಯಾವಾಗ ವೃದ್ಧಿಯಾಗುತ್ತದೆಯೋ ಆಗೆಲ್ಲವೂ ಅಧರ್ಮವನ್ನು ಮಾಡುತ್ತ ಬರುತ್ತಿರುವ ದುಷ್ಟ ಜನಗಳನ್ನು ಶಿಕ್ಷಿಸಿ, ಧರ್ಮವನ್ನು ಎಚ್ಚರಿಕೆಯಿಂದ ಪರಿಪಾಲಿಸುತ್ತ ಬರುತ್ತಿರುವ ಸತ್ಪುರುಷರಿಗೆ ದುಷ್ಟ ಜನಗಳಿಂದ ಬಾಧೆಯುಂಟಾಗದಂತೆ ಅವರನ್ನು ರಕ್ಷಿಸಿ ಮತ್ತು ಧರ್ಮಗಳನ್ನು ಅನುಸರಿಸುವ ಮಾರ್ಗಗಳನ್ನು ಸರ್ವಜನರಿಗೂ ತಿಳಿಯಹೇಳಿ, ಅವರು ಆ ಧರ್ಮಮಾರ್ಗವನ್ನನುಸರಿಸುವಂತೆ ಮಾಡಿ, ಕ್ಷೀಣಹೊಂದಿದ ಧರ್ಮವನ್ನು ಪುನಃ ಉದ್ಧಾರಮಾಡುವುದಕ್ಕಾಗಿಯೇ ನಾನು ಯುಗಯುಗದಲ್ಲಿಯೂ ಅವತರಿಸುತ್ತಿದ್ದೇನೆ. ಮತ್ತು ಜನಗಳು ತಮ್ಮ ವರ್ಣಾಶ್ರಮಧರ್ಮಗಳನ್ನು ಅತಿಕ್ರಮಿಸದಿರುವಂತೆ ಕೆರೆಯಲ್ಲಿರುವ ನೀರನ್ನು ಕಾಪಾಡುವ ಕಟ್ಟೆಯೋಪಾದಿಯಲ್ಲಿ ತಡೆಬಿಟ್ಟು ಅವರನ್ನು ರಕ್ಷಿಸುತ್ತೇನೆ. ' ನಿನ್ನಿಂದಲೇ ಸೃಷ್ಟಿಸಲ್ಪಟ್ಟ ಸಮಸ್ತ ಜೀವರಾಶಿಗಳನ್ನು ಒಂದೇ ರೀತಿಯಲ್ಲಿ ಪರಿಪಾಲಿಸದೆ ಸತ್ಪುರುಷರೆಂಬ ಸಾಧುಗಳನ್ನು ರಕ್ಷಿಸುವುದೂ, ದುರ್ಮಾರ್ಗಿಗಳೆಂಬ ದುಷ್ಟರನ್ನು ಶಿಕ್ಷಿಸುವುದೂ

ನಿನಗೆ ನ್ಯಾಯವೇ?' ಎಂದು ಕೇಳುತ್ತೀಯಾ? ಅದಕ್ಕೆ ಸಕಾರಣವನ್ನು ಹೇಳುತ್ತೇನೆ ಕೇಳು.

ಶ್ಲೋ॥ ಲಾಲನೇ ತಾಡನೇ ಮಾತುಃ ♦ ನ ವೈಷಮ್ಯಂ ಯಥಾಽರ್ಭಕೇ ।
ತದ್ವದೇವ ಮಹೇಶಸ್ಯ ♦ ನಯಂ ಸಜ್ಜನದುಷ್ಟಯೋಃ ॥

ಎಂಬಂತೆ, ತಾಯಿಯಾದವಳು, ತಾನು ಹೇಳಿದ ಮಾರ್ಗದಲ್ಲಿ ನಡೆಯುವಂಥ ತನ್ನ ಮಕ್ಕಳನ್ನು ಮುದ್ದುಮಾಡುತ್ತಲೂ, ಮತ್ತು ತಾನು ಹೇಳಿದ ಮಾರ್ಗದಲ್ಲಿ ನಡೆಯದೆ ಇರುವ ದುರ್ಮಾರ್ಗಿಗಳಾದ ತನ್ನ ಮಕ್ಕಳನ್ನು ದಂಡಿಸುತ್ತಲೂ ಇರುವಳು. ಆ 'ಮಕ್ಕಳು ಒಳ್ಳೆಯ ದಾರಿಯನ್ನು ಹತ್ತಲಿ' ಎಂಬ ಉದ್ದೇಶದಿಂದ ದುರ್ಮಾರ್ಗಿಗಳಾದ ಮಕ್ಕಳನ್ನು ತಾಯಿಯು ಶಿಕ್ಷಿಸುವಳೇ ಹೊರತು, ಅವರ ಮೇಲೆ ಆಕೆಗೆ ಖಂಡಿತವಾಗಿ ವೈಷಮ್ಯವೆಂಬುದೇ ಇಲ್ಲ. ಅದೇ ರೀತಿಯಲ್ಲಿ ಸರ್ವ ಸಮರಸನಾಗಿಯೂ, ಸರ್ವ ಪರಿಪೂರ್ಣನಾಗಿಯೂ, ಸರ್ವೇಶ್ವರನಾಗಿಯೂ ಇರುವಂಥ ಮತ್ತು ಷಡ್ಗುಣೈಶ್ವರ್ಯಸಂಪನ್ನನಾದ ನನ್ನಿಂದ ನಿಯಮಿಸಲ್ಪಟ್ಟಿರುವ ಮತ್ತು ವೇದದಲ್ಲಿ ಹೇಳಿರುವ ರೀತಿಯಂತೆ ನಡೆದುಕೊಳ್ಳುತ್ತಿರುವ ಸತ್ಪುರುಷರನ್ನು ದುಷ್ಟರ ಬಾಧೆಯಿಲ್ಲದಂತೆ ಕಾಪಾಡುತ್ತಲೂ, ಮತ್ತು ದುಷ್ಟರನ್ನು ಸರಿಯಾದ ದಾರಿಗೆ ತರುವುದಕ್ಕಾಗಿಯೇ ಅವರಮೇಲಿನ ಪ್ರೀತಿಯಿಂದ ಅವರನ್ನು ಶಿಕ್ಷಿಸುತ್ತಲೂ, ಇರುವೆನೇ ಹೊರತು ಯಾರಮೇಲೆಯೂ ನನಗೆ ದ್ವೇಷವಿಲ್ಲ.

ಅರ್ಜುನ:— ಸ್ವಾಮಿ! ನೀವು ಹೇಳಿದುದೆಲ್ಲವೂ ಸರಿಯೆ; ಆದರೆ, ನೀವು ಪ್ರಪಂಚಕ್ಕೆ ಒಡೆಯರಾಗಿರುವುದರಿಂದ ನೀವು ಸಂಕಲ್ಪಮಾಡಿದ ಮಾತ್ರಕ್ಕೇ ಚರಾಚರಗಳನ್ನು ಸೃಷ್ಟಿಮಾಡಿ ಅವುಗಳೆಲ್ಲವನ್ನೂ ಲಯಮಾಡುವ ಶಕ್ತಿಯು ನಿಮಗಿದೆ. ಹೀಗಿರುವಲ್ಲಿ ನೀವು ದುಷ್ಟರನ್ನು ಶಿಕ್ಷಿಸುವುದಕ್ಕಾಗಿಯೂ, ಶಿಷ್ಟರನ್ನು ರಕ್ಷಿಸುವುದಕ್ಕಾಗಿಯೂ ಈ ಭೂಮಿಯಲ್ಲಿ ಅವತರಿಸಿ, ಈ ಸಂಸಾರವೆಂಬ ಬಂಧದಲ್ಲಿ ಸಿಕ್ಕಿಕೊಂಡು ಏತಕ್ಕೆ ನರಳುತ್ತಿದ್ದೀರಿ? ಈ ಕಷ್ಟಸುಖವನ್ನು ನೀವು ಅನುಭವಿಸಬೇಕಾದುದಕ್ಕೆ

ಕಾರಣವೇನು? ನೀವು ಮನಸ್ಸಿನಲ್ಲಿ ಸಂಕಲ್ಪಿಸಿದ ಮಾತ್ರಕ್ಕೆ ಸಾಧು ರಕ್ಷಣೆಯೂ ದುಷ್ಟ ನಾಶವೂ ಆಗುವ ಸಂಭವವಿಲ್ಲವೇ?

ಕೃಷ್ಣ:—ಅರ್ಜುನಾ! ನೀನು ಹೇಳಿದುದೇ ಸರಿ. ಸಂಕಲ್ಪ ಮಾತ್ರದಿಂದಲೇ ದುಷ್ಟಶಿಕ್ಷಣ ಸಾಧುಪಾಲನೆಯನ್ನು ಮಾಡಬಲ್ಲೆನು. ಹಾಗೆ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲವು. ನಾನು ಇತರ ರಂತೆ ಒಬ್ಬ ಮನುಷ್ಯನಾಗಿ ಹುಟ್ಟಿ ತಕ್ಕ ಕಾರ್ಯಗಳನ್ನು ಮಾಡಿ ಅಧರ್ಮನಾಶವನ್ನೂ ಧರ್ಮ ಸಂಸ್ಥಾಪನೆಯನ್ನೂ ಮಾಡಿದ್ದೇ ಆದರೆ, ಅದರಿಂದ ಜನಗಳಿಗುಂಟಾಗುವ ಪ್ರಯೋಜನವು ಸಂಕಲ್ಪ ಮಾತ್ರ ದಿಂದಲೇ ಮೇಲಿನ ಕಾರ್ಯಗಳನ್ನು ಮಾಡಿದ್ದರಿಂದುಂಟಾಗದು. ಅದು ಹೇಗೆಂದರೆ:

ಕೃತಯುಗದಲ್ಲಿ ಹಿರಣ್ಯಕಶಿಪುವಿನ ಮಗನಾಗಿಯೂ ನನ್ನ ಪರಮ ಭಕ್ತನಾಗಿಯೂ ಇರುವ ಪ್ರಹ್ಲಾದನನ್ನು ದುಷ್ಟಪಿತನಾದ ಆ ರಾಕ್ಷಸನು ನಾನಾವಿಧವಾಗಿ ಹಿಂಸೆ ಮಾಡಿದರೂ, ಅವನು ಪರಮಾತ್ಮನಾದ ಶ್ರೀಹರಿಯ ಧ್ಯಾನವನ್ನು ಬಿಡದೆ ಮಾಡುತ್ತಿರಲು, 'ನಿನ್ನ ಹರಿಯು ಎಲ್ಲಿದ್ದಾನೋ ಅದನ್ನು ತೋರಿಸು' ಎಂಬದಾಗಿ ಹಿರಣ್ಯಕಶಿಪುವು ಮಗನನ್ನು ಕೇಳಿದನು. ಅದಕ್ಕೆ ಪ್ರಹ್ಲಾದನು ಹೀಗೆಂದು ತಂದೆಗೆ ಉತ್ತರಕೊಟ್ಟನು.

ಕಂ ॥ ಇಲ್ಲಿಹನು ಅಲ್ಲಿಲ್ಲ ವೆಂಬುವ ।
ಸೊಲ್ಲೆಂದಿಗು ಬೇಡ ಹರಿಯು ♦ ಸರ್ವೋಪಗತಂ ॥
ಎಲ್ಲೆಲ್ಲಿ ಹುಡುಕಿ ನೋಡಲಿ ।
ಕಲ್ಲಲ್ಲಿಯೆ ಯಿರುವ ದಾನ ♦ ವಾಗ್ರಣಿ ಕೇಳೈ! ॥

(ತೆಲುಗು–ಪೋತನಾಮತ್ಯ)

ಎಂಬಂತೆ 'ಎಲೈ ರಾಕ್ಷಸೋತ್ತಮನೇ ಆ ನನ್ನ ಸ್ವಾಮಿಯಾದ ಹರಿಯು ಇಲ್ಲಿದ್ದಾನೆ, ಅಲ್ಲಿಲ್ಲವೆಂಬ ಸಂಶಯಕ್ಕೆ ಅವಕಾಶವೇ ಇಲ್ಲ. ಆತನು ಎಲ್ಲೆಲ್ಲಿಯೂ ತುಂಬಿ ತುಳುಕಾಡುತ್ತಿದ್ದಾನೆ. ಎಲ್ಲೆಲ್ಲಿ ನೋಡಿ ದರೂ ಅಲ್ಲಲ್ಲಿಯೇ ಇರುವನು. ಈ ಮಾತು ನಿಶ್ಚಯ' ಎಂದು ಪ್ರಹ್ಲಾದನು ಹೇಳಿದ ತಕ್ಷಣವೇ, ಹಿರಣ್ಯಕಶಿಪುವು ಬಹಳ ಹೆಮ್ಮೆಯಿಂದ ಕೂಡಿ,

ಕೋಪದಿಂದ ಕಿಡಿಕಿಡಿಯಾಗಿ, ತನ್ನ ಸಭಾಮಂಟಪದೊಳಗಿದ್ದ ಒಂದು ಸ್ತಂಭವನ್ನು ತೋರಿಸಿ, 'ಇದರಲ್ಲಿ ಆ ನಿನ್ನ ಹರಿಯನ್ನು ತೋರಿಸ ಬಲ್ಲೆಯಾ?' ಎಂದು ಪ್ರಹ್ಲಾದನನ್ನು ಕೇಳಿದನು. ಅಂತಹ ಸಮಯ ದಲ್ಲಿ ನಾನು ಆ ಸ್ತಂಭದಲ್ಲಿ ಉದ್ಭವಿಸದೆಯೇ ಆ ರಾಕ್ಷಸನು ನಾಶವಾಗ ಬೇಕೆಂದು ನಾನು ನೆನೆಸಿದ ತಕ್ಷಣವೇ ಅವನು ನಶಿಸಿಹೋಗುತ್ತಿದ್ದ ನಲ್ಲವೇ? ಹಾಗೆ ಅವನು ನಾಶಹೊಂದಿದ್ದೇ ಆದರೆ, ಪ್ರಹ್ಲಾದನ ಬಾಧೆ ಮಾತ್ರ ನಿವಾರಣೆಯಾಗುತ್ತಿತ್ತೇ ಹೊರತು, ನನ್ನ ಭಕ್ತನಾದ ಅವನಿಗೆ ನಾನು ಸರ್ವಾಂತರ್ಯಾಮಿಯೆಂಬ ನಂಬಿಕೆಯು ಉಂಟಾಗುತ್ತಿರಲಿಲ್ಲ ವಲ್ಲವೇ? ನನ್ನ ಭಕ್ತನಿಗೇ ನನ್ನಲ್ಲಿ ನಂಬಿಕೆಯಿಲ್ಲದಿದ್ದರೆ, ಉಳಿದ ಪಾಮರ, ಜನಗಳಿಗೆಲ್ಲಾ ನಾನು ಸರ್ವಾಂತರ್ಯಾಮಿಯೆಂಬ ನಂಬಿಕೆಯು ಹೇಗೆ ಉಂಟಾದೀತು? ಆದುದರಿಂದಲೇ ನಾನು,

ಶ್ಲೋ ॥ ಪ್ರಹ್ಲಾದಸ್ಯ ♦ ವ್ಯಸನ ಮಮಿತಂ ♦ ದೈತ್ಯವರ್ಗಸ್ಯ ದಂಭಂ ।
ಸ್ತಭಂ ವಕ್ಷ ♦ ಸ್ಥಲಮಪಿ ರಿಪೋ ♦ ರ್ಯೌಗಪದ್ಯೇನ ಭೇತ್ತುಂ ॥
ಬದ್ಧಶ್ರದ್ಧಂ ♦ ಪುರುಷವಪುಷಾ ♦ ಮಿಶ್ರಿತೇ ವಿಶ್ವದೃಷ್ಟೇ ।
ದಂಷ್ಟ್ರಾರೋಚಿ ♦ ರ್ವಿಶದಭುವನೇ ♦ ರಂಹಸಾ ಸಿಹ್ಮ ವೇಷೇ ॥

(ಚಂಪೂರಾಮಾಯಣ–ಬಾಲಕಾಂಡ)

ನನ್ನ ಪರಮಭಕ್ತನಾದ ಪ್ರಹ್ಲಾದನ ಅಪರಿಮಿತವಾದ ವ್ಯಸನ ವನ್ನೂ, ದೇವತೆಗಳಿಗೆ ಬಾಧೆಕೊಡುತ್ತಿದ್ದ ಇತರ ರಾಕ್ಷಸರ ಸೊಕ್ಕನ್ನೂ, ಕಂಭವನ್ನೂ, ಮತ್ತು ಶತ್ರುವಾದ ಹಿರಣ್ಯಕಶಿಪುವಿನ ವಕ್ಷಸ್ಥಲವನ್ನೂ ಒಂದೇಕಾಲದಲ್ಲಿ ಭೇದಿಸುವುದಕ್ಕಾಗಿ ನಾನು ಮನುಷ್ಯ ಮತ್ತು ಸಿಹ್ಮ ಇವು ಗಳಿಂದ ಮಿಶ್ರಿತವಾದ ನರಸಿಹ್ಮಾವತಾರವನ್ನು ಹೊಂದಿದಂಥಾವನಾದೆನು ಅಂದರೆ ದುಷ್ಟನಾದ ಹಿರಣ್ಯಕಶಿಪುವನ್ನು ಶಿಕ್ಷಿಸುವುದಕ್ಕೂ ಮತ್ತು ಸಾಧು ವಾದ ಪ್ರಹ್ಲಾದನನ್ನು ಕಾಪಾಡುವುದಕ್ಕೂ ನಾನು ನರಸಿಹ್ಮಾವತಾರ ವನ್ನೆತ್ತಬೇಕಾಯಿತು.

ತ್ರೇತಾಯುಗದಲ್ಲಿಯಾದರೋ, ತ್ರಿಲೋಕಕಂಟಕನಾದ ರಾವಣನು ದೇವತೆಗಳಿಗೂ ತಪಸ್ವಿಗಳಿಗೂ ಅಧಿಕವಾದ ಬಾಧೆಯನ್ನುಂಟುಮಾಡುತ್ತಿ

ದ್ದನು. ಅಂತಹ ದುರ್ಮಾರ್ಗನಾದ ರಾವಣನು ನಾಶವಾಗಬೇಕೆಂದು ನಾನು ಮನಸ್ಸಿನಲ್ಲಿ ಸಂಕಲ್ಪಿಸಿದ ಮಾತ್ರಕ್ಕೇ ಅವನು ನಶಿಸುತ್ತಿದ್ದನು. ನಾನು ಹಾಗೆ ಮಾಡದೆ, ನನ್ನ ಭಕ್ತರಾದ ದೇವತೆಗಳಿಗೆ ವಾಗ್ದಾನಮಾಡಿದ್ದಂತೆ ದಶರಥನ ಹಿರಿಯ ಹೆಂಡತಿಯಾದ ಕೌಸಲ್ಯೆಯ ಗರ್ಭದಲ್ಲಿ ಜನಿಸಿ, ಪಿತೃವಾಕ್ಯಪರಿಪಾಲನೆಯೆಂಬ ಧರ್ಮದ ಬಲೆಯಲ್ಲಿ ಕಟ್ಟುಬಿದ್ದು, ಹದಿನಾಲ್ಕು ವರ್ಷಗಳಕಾಲ ಹೆಂಡತಿ ತಮ್ಮನೊಡಗೂಡಿ ದುಷ್ಟ ರಾಕ್ಷಸರಿಂದ ತುಂಬಿದ ದಂಡಕಾವನದಲ್ಲಿ ಕಷ್ಟಪರಂಪರೆಗಳನ್ನನುಭವಿಸಿ, ಅನಂತರ ಹೆಂಡತಿಯಾದ ಸೀತೆಯನ್ನು ರಾವಣನು ಕದ್ದೊಯ್ಯಲು ಸಾಮಾನ್ಯ ಮನುಷ್ಯನ ಹಾಗೆ ಹೆಂಡತಿಯಮೇಲಿನ ಮೋಹದಿಂದ ದುಃಖಿಸುವವನಂತೆ ನಟಿಸುತ್ತಾ, ಸೀತಾನ್ವೇಷಣಕ್ಕಾಗಿ ಹೊರಟು ಸುಗ್ರೀವನೊಡನೆ ಸಖ್ಯವನ್ನು ಬೆಳೆಸಿ, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ರಾವಣನ ರಾಜಧಾನಿಯಾದ ಲಂಕೆಗೆ ಮುತ್ತಿಗೆ ಹಾಕಿ, ಆ ರಾವಣ ಕುಂಭಕರ್ಣರನ್ನೂ ಮತ್ತು ಅಪರಿಮಿತವಾದ ಇತರ ದುಷ್ಟರಾಕ್ಷಸರನ್ನೂ ಸಂಹರಿಸಿ, ಸೀತೆಯನ್ನು ಪರಿಗ್ರಹಿಸಿ, ಅಯೋಧ್ಯೆಯನ್ನು ಸೇರಿ ಪಟ್ಟಾಭಿಷಿಕ್ತನಾಗಿ ಹನ್ನೊಂದು ಸಾವಿರವರುಷಗಳು ಸೀತೆಯೊಡಗೂಡಿ ರಾಜ್ಯಭಾರವನ್ನು ಮಾಡಿ, ಶಾಶ್ವತವಾದಕೀರ್ತಿಯನ್ನು ಪಡೆದನು. 'ಇದರ ರಹಸ್ಯವೇನು?' ಎಂದು ಕೇಳಿದರೆ, ನನ್ನ ಉತ್ತರವು ಇದೇ. ಲೋಕದ ಜನಗಳಿಗೆ ಪಿತೃವಾಕ್ಯಪರಿಪಾಲನೆ, ಸಹೋದರವಾತ್ಸಲ್ಯ, ಪತಿವ್ರತಾಧರ್ಮ, ಅನಾಥರಕ್ಷಣೆ, ದುಷ್ಟಶಿಕ್ಷಣ, ಶಿಷ್ಟಪರಿಪಾಲನ, ಅಭಯದಾನ, ನಿಷ್ಕಳಂಕವಾದ ಮೈತ್ರಿ, ವರ್ಣಾಶ್ರಮ ಧರ್ಮಪಾಲನ ಮೊದಲಾದ ಅನೇಕ ಬಗೆ ಧರ್ಮಮಾರ್ಗಗಳನ್ನು ಮನುಷ್ಯರೂಪದಿಂದ ಪ್ರಪಂಚಕ್ಕೆ ಎತ್ತಿ ತೋರಿಸುವ ಸಲುವಾಗಿ ನಾನು ಆ ಅವತಾರವನ್ನು ಕೈಗೊಂಡೆನೇ ಹೊರತು ಬೇರೆಯಲ್ಲ. ಸಂಕಲ್ಪಮಾತ್ರದಿಂದ ರಾವಣನನ್ನು ಸಂಹರಿಸಿದ್ದೇ ಆದರೆ, ಮೇಲೆ ಹೇಳಿದ ಧರ್ಮಗಳನ್ನು ಜನಗಳಿಗೆ ತೋರಿಸುವುದಕ್ಕೆ ಸಾಧ್ಯವಾಗುತ್ತಿತ್ತೇ ? ಎಂದಿಗೂ ಇಲ್ಲ. ಆದುದರಿಂದಲೇ, ಅಧರ್ಮಗಳನ್ನು ಹೋಗಲಾಡಿಸಿ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ನಾನು ಯುಗಯುಗದಲ್ಲಿ ಹುಟ್ಟುತ್ತೇನೆಯೇ ಹೊರತು, ನಾನು ಅವತರಿಸುವುದು ಎಂದಿಗೂ ವ್ಯರ್ಥವಲ್ಲ. ಆದುದರಿಂದ 'ನ ಮೇ

ಪಾರ್ಥಾಽಸ್ತಿ ಕರ್ತವ್ಯಂ' ಎಂದು ಭಗವದ್ಗೀತೆ 3ನೇ ಅಧ್ಯಾಯ 22ನೇ ಶ್ಲೋಕದಲ್ಲಿಯೂ, 'ಯದಿ ಹ್ಯಹಂ ನ ವರ್ತೇಯಂ' ಎಂದು 23ನೇ ಶ್ಲೋಕದಲ್ಲಿಯೂ ಹೇಳಿದಂತೆ 'ಓ ಪಾರ್ಥ, ನಾನು ಮಾಡಬೇಕಾದು ದಾವುದೂ ಇಲ್ಲವು ; ನಾನು ಎಂದಿಗೂ ಯಾವುದನ್ನೂ ಮಾಡುವವನಲ್ಲವು' ಎಂಬುದನ್ನು ಇದುವರಿವಿಗೆ ನಾನು ನಿನಗೆ ಹೇಳಿರುತ್ತೇನೆ. ಅದು ನಿನಗೆ ಜ್ಞಾಪಕವಿದೆಯೇ?

ಅರ್ಜುನಾ:—ಹೌದು, ಜ್ಞಾಪಕವಿದೆ.

ಕೃಷ್ಣ :—'ಲೋಕಕ್ಕೆ ಅತೀತನಾಗಿದ್ದು, ಸ್ವೇಚ್ಛೆಯಿಂದ ಅಂದರೆ ತನ್ನಿಷ್ಟಬಂದಾಗ ತಾನೇ ಜನ್ಮವೆತ್ತಿ, ಸಾಧುಗಳನ್ನು ಸಂರಕ್ಷಿಸುವ ಮತ್ತು ದುರ್ಮಾರ್ಗರನ್ನು ಶಿಕ್ಷಿಸುವ ಕಾರ್ಯಗಳನ್ನು ಮಾಡುವವನು ನಾನೇ' ಎಂದು ನನ್ನ ಯಥಾರ್ಥಸ್ವರೂಪವನ್ನು ತಿಳಿದುಕೊಂಡು ನನ್ನನ್ನೇ ಸ್ಮರಿಸುತ್ತ ಯಾರು ಪ್ರಾಣವನ್ನು ಬಿಡುತ್ತಾರೆಯೋ, ಅಂಥವರು ಪುನಃ ಜನ್ಮವನ್ನೆತ್ತದೆ ನನ್ನಲ್ಲಿಯೇ ಐಕ್ಯರಾಗುತ್ತಾರೆ. ಅಂದರೆ ಪರಬ್ರಹ್ಮನ ಸತ್ಯಸ್ವರೂಪವನ್ನು ತಿಳಿದುಕೊಂಡವರು ಆ ಬ್ರಹ್ಮಸ್ವರೂಪಪ್ರಾಪ್ತಿಯನ್ನುಂಟುಮಾಡುವ ಮೋಕ್ಷವನ್ನು ಹೊಂದುತ್ತಾರೆ.

ಇನ್ನು ಮುಂದಿನ ವಿಷಯಗಳನ್ನು ಈ ಗ್ರಂಥಕರ್ತರಿಂದ ಬರೆಯಲ್ಪಟ್ಟು ಇಷ್ಟರಲ್ಲಿಯೇ ಕನ್ನಡ ಭಾಷೆಯಲ್ಲಿ ಪ್ರಕಟಿಸಲ್ಪಡುವ ಶ್ರೀ ಭಗವದ್ಗೀತೆಯನ್ನು ನೋಡಿ ತಿಳಿದುಕೊಳ್ಳಬಹುದು.



# ವಿಗ್ರಹಾರಾಧನೆಗೂ ಪರಬ್ರಹ್ಮನಿಗೂ ಇರುವ ಭೇದಗಳು.

'ಪ್ರಪಂಚ ಸೃಷ್ಟಿ' ಯೆಂಬ ಹಿಂದಿನ ಪ್ರಕರಣದಲ್ಲಿ ಹೇಳಿರುವ 'ಸೃಷ್ಟೇಃ ಪುರಾ ನಾಮರೂಪ ವಿವರ್ಜಿತಂ ಜಗತ್ ♦ ಸ ದೇವಸೌಮ್ಯ ಇದಮಗ್ರ ಆಸೀತ್' ಮೊದಲಾದ ಶ್ರುತಿವಾಕ್ಯಗಳ ರೀತಿಯಾಗಿ, ಸೃಷ್ಟಿಗೆ ಮೊದಲು ಈ ಪ್ರಪಂಚವು ನಾಮರೂಪಗಳಿಲ್ಲದೆ 'ನಿರ್ವಿಕಾರಚಿನ್ಮಾತ್ರ ಪರಬ್ರಹ್ಮಸ್ವರೂಪ' ವಾಗಿದ್ದಿತು. ಆ ಪರಬ್ರಹ್ಮನೇ ಅಖಂಡಜ್ಯೋತಿ ಯು ಅಂದರೆ ಒಂದೇ ಸಮನಾಗಿ ಎಡೆಬಿಡದೆ ಎಲ್ಲೆಲ್ಲಿಯೂ ಬೆಳಗುವ ಒಂದು ದೊಡ್ಡ ದೀಪವು. ಇದರಲ್ಲಿ ಪ್ರತಿಫಲಿಸಿರುವ ಪ್ರತಿಬಿಂಬವೇ ಮಾಯಾಶಕ್ತಿ. ಒಂದು ಮಾಯಾಶಕ್ತಿಯು ಎಂದು ಹುಟ್ಟಿತೋ ಅಂದೇ ಅನೇಕ ಮಾಯಾಶಕ್ತಿಗಳೂ ಕಾಣಬರುತ್ತವೆ. ಮಿಥ್ಯಾಸ್ವರೂಪವಾದ ಮಾಯೆಯಲ್ಲಿ ಪ್ರತಿಫಲಿಸಿದ ಬ್ರಹ್ಮಕ್ಕೆ ಈಶ್ವರನೆಂಬ ಹೆಸರುಂಟಾಯಿತು. ಆ ಈಶ್ವರನಿಗೆ ಚಿತ್ರವಿಚಿತ್ರಗಳಾದ ಅನೇಕ ರೂಪಗಳು ಹುಟ್ಟಿದವು, ಅದು ಹೇಗೆಂದರೆ,

ಚಲನವಾಗುತ್ತಿರುವ ಮೂಲಪ್ರಕೃತಿಯಿಂದ ಉತ್ಪನ್ನವಾದ ಮತ್ತು ಶಬ್ದತನ್ಮಾತ್ರವೆನಿಸುವ ಆಕಾಶದಲ್ಲಿ ಪ್ರತಿಫಲಿಸಿದ ಬ್ರಹ್ಮನಿಗೆ **ಸದಾಶಿವ** ನೆಂಬದಾಗಿಯೂ, ಶಬ್ದಗುಣಪ್ರಧಾನವಾದ ಆಕಾಶದಿಂದ ಉತ್ಪನ್ನವಾದ ಮತ್ತು ಶಬ್ದ ಸ್ಪರ್ಶ ತನ್ಮಾತ್ರವೆನಿಸುವ ವಾಯುವಿನಲ್ಲಿ ಪ್ರತಿಫಲಿಸಿದ ಬ್ರಹ್ಮನಿಗೆ **ಮಹೇಶ್ವರ** ನೆಂಬದಾಗಿಯೂ, ಸ್ಪರ್ಶಗುಣಪ್ರಧಾನವುಳ್ಳ ವಾಯುವಿನಿಂದ ಉಂಟಾದ ಮತ್ತು ಶಬ್ದ ಸ್ಪರ್ಶ ರೂಪ ತನ್ಮಾತ್ರವಾದ ಅಗ್ನಿಯಲ್ಲಿ ಪ್ರತಿಫಲಿಸಿದ ಬ್ರಹ್ಮನಿಗೆ **ರುದ್ರ** ನೆಂದೂ, ರೂಪಗುಣ ಪ್ರಧಾನವಾದ ಅಗ್ನಿಯಿಂದ ಉಂಟಾದ ಶಬ್ದ ಸ್ಪರ್ಶ ರೂಪ ರಸ ತನ್ಮಾತ್ರ ವೆನಿಸುವ ಜಲದಲ್ಲಿ ಪ್ರತಿಫಲಿಸಿದ ಬ್ರಹ್ಮನಿಗೆ **ವಿಷ್ಣು** ವೆಂದೂ, ರಸಗುಣ ಪ್ರಧಾನವಾದ ಜಲದಿಂದುಂಟಾದ ಶಬ್ದ ಸ್ಪರ್ಶ ರೂಪ ರಸ ಗಂಧ ತನ್ಮಾತ್ರ

ವಾದ ಪೃಥಿವಿಯಲ್ಲಿ ಪ್ರತಿಫಲಿಸಿದ ಬ್ರಹ್ಮನಿಗೆ **ಬ್ರಹ್ಮದೇವ** ನೆಂದೂ ಹೆಸರುಗಳುಂಟಾದವು.

ಪ್ರಪಂಚೋತ್ಪತ್ತಿಗೆ ಕಾರಣಭೂತವಾದ ಮಾಯೆಯು, ಪರಬ್ರಹ್ಮನ ಒಂದು ತೃಣಮಾತ್ರವೆಂದು ಹೇಳಲ್ಪಡುತ್ತದೆ. ಈ ಮಾಯೆಯೆಂಬ ಪ್ರತಿಬಿಂಬದಲ್ಲಿ ಆಕಾಶವೂ, ಆ ಆಕಾಶದಲ್ಲಿ ವಾಯುವೂ, ವಾಯುವಿನಲ್ಲಿ ತೇಜಸ್ಸೂ ಅಂದರೆ ಅಗ್ನಿಯೂ, ತೇಜಸ್ಸಿನಲ್ಲಿ ಜಲವೂ, ಜಲದಲ್ಲಿ ಪೃಥಿವಿಯೂ ಐಕ್ಯವಾಗಿರುತ್ತವೆ. ನಿರಾಕಾರವಾದ ಅಂದರೆ ಯಾವ ರೂಪವೂ ಇಲ್ಲದೆ ಬಟ್ಟಬಯಲು ಸ್ವರೂಪನಾದ ಆ ಪರಬ್ರಹ್ಮನಲ್ಲಿ ತೋರುವ ಮಾಯೆಯು, ಪಂಚಭೂತಗಳ ಜೊತೆಯಲ್ಲಿ ಸೇರಿರುತ್ತದೆ. ಈರೀತಿಯಾಗಿ ಒಂದಾಗಿ ಸೇರಿದವುಗಳನ್ನೆಲ್ಲಾ ಈಶ್ವರನು ಅನೇಕ ಕೋಟಿ ಬ್ರಹ್ಮಾಂಡಗಳ ಮೂಲಕ ಅನೇಕ ವಿಧವಾದ ವಿಚಿತ್ರರೂಪಗಳನ್ನು ತೋರಿಸುತ್ತಿದ್ದಾನೆ. ಅದು ಹೇಗೆಂದರೆ, ಸ್ಫಟಿಕಮಣಿಯು ಸ್ವಭಾವತಃ ಶುಭ್ರವಾದದ್ದು. ಅದಕ್ಕೆ ಬಣ್ಣಗಳೆಂಬುದೇ ಇಲ್ಲ. ಅಂತಹುದಕ್ಕೆ ಪದಾರ್ಥಗಳ ಸಾನ್ನಿಧ್ಯದಿಂದ ಅಂದರೆ ಬೇರೆಬೇರೆ ಬಣ್ಣಗಳಿಂದ ಕೂಡಿದ ವಸ್ತುಗಳನ್ನು ಆ ಸ್ಫಟಿಕಮಣಿಯ ಸಮೀಪದಲ್ಲಿಟ್ಟದ್ದೇ ಆದರೆ, ಅವುಗಳೆಲ್ಲವೂ ಆ ಮಣಿಯಲ್ಲಿ ಪ್ರತಿಫಲಿಸಿ ಆ ಮಣಿಗೆ ಕೆಂಪು, ಪಚ್ಚೆ, ನೀಲ ಮೊದಲಾದ ಹೆಸರುಗಳುಂಟಾಗುವಂತೆ ಮಾಡುತ್ತವೆ. ಇದು ಹೇಗೋ ಹಾಗೆಯೇ, ಮಾಯೆಯಿಂದ ಕೂಡಿದ ಪಂಚಭೂತಗಳ ಸಂಸರ್ಗದಿಂದ ಸ್ವಭಾವತಃ ನಿರ್ವಿಕಾರನಾದ ಪರಮಾತ್ಮನಿಗೆ ಆ ಪಂಚಭೂತಗಳೇ ಬೇರೆಬೇರೆ ಆಕಾರಗಳನ್ನು ಕೊಟ್ಟು ಆತನಿಗೆ ಸದಾಶಿವ, ಮಹೇಶ್ವರ, ರುದ್ರ, ವಿಷ್ಣು, ಬ್ರಹ್ಮದೇವ ಹೀಗೆಂಬ ಬೇರೆಬೇರೆ ಹೆಸರುಗಳನ್ನುಂಟುಮಾಡುತ್ತವೆ.

ಇವರಲ್ಲಿ ಬ್ರಹ್ಮದೇವನು, ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಐದು ಗುಣಗಳುಳ್ಳ ಪೃಥಿವಿಯಿಂದಲೇ ಸ್ಥಾವರಜಂಗಮ ರೂಪಗಳಾದ ಪ್ರಪಂಚವೆಲ್ಲವನ್ನೂ ಸೃಷ್ಟಿಸಿದನು. ವಿಷ್ಣುವು, ಶಬ್ದ ಸ್ಪರ್ಶ ರೂಪ ರಸಗಳೆಂಬ ನಾಲ್ಕು ಗುಣಗಳಿರುವ ಜಲದಿಂದಲೇ ಸಮಸ್ತ ಪ್ರಪಂಚವನ್ನೂ ರಕ್ಷಿಸುತ್ತಿದ್ದಾನೆ. ರುದ್ರನು, ಶಬ್ದ ಸ್ಪರ್ಶ ರೂಪಗಳೆಂಬ ಮೂರು

ಗುಣಗಳನ್ನುಳ್ಳ ಅಗ್ನಿಯ ಮೂಲಕವೇ ಪ್ರಪಂಚವೆಲ್ಲವನ್ನೂ ಸಂಹರಿಸುತ್ತಿದ್ದಾನೆ. ಮಹೇಶ್ವರನು, ಶಬ್ದ ಸ್ಪರ್ಶವೆಂಬ ಎರಡು ಗುಣಗಳಿರುವ ವಾಯುವಿನಿಂದಲೇ ಮಾಯಾಸಂಬಂಧಿಗಳಾದ ಜೀವರಾಶಿಗಳಿಗೆಲ್ಲ ಭ್ರಮೆಯನ್ನುಂಟುಮಾಡುತ್ತಿದ್ದಾನೆ. ಸದಾಶಿವನಾದರೋ, ಶಬ್ದ ಗುಣವಾದ ಆಕಾಶದಿಂದ ಜೀವಿಗಳಿಗೆ ಬುದ್ಧಿಯು ಹುಟ್ಟುವಂತೆ ಮಾಡುತ್ತಿದ್ದಾನೆ. ಮಾಯೆಯೆಂಬುದು, ಪಂಚಭೂತವಿಕಾರದಿಂದ ದೇಹೇಂದ್ರಿಯಾದಿಗಳನ್ನು ಹುಟ್ಟಿಸಿ, 'ನಾನು, ನನ್ನದು' ಎಂಬ ದುರಭಿಮಾನವನ್ನುಂಟುಮಾಡುತ್ತದೆ. ಜಾಗ್ರತ್ತಿನಲ್ಲಿ ಬ್ರಹ್ಮದೇವನು ಜೀವಿಗಳಿಗೆ ಅನೇಕ ವಿಧವಾದ ಸುಖದುಃಖಗಳನ್ನುಂಟುಮಾಡುತ್ತಿದ್ದಾನೆ. ಸ್ವಪ್ನದಲ್ಲಿ ವಿಷ್ಣುವು, ಜೀವಿಗಳಿಗೆ ನಾನಾವಿಧವಾದ ವಿನೋದಗಳನ್ನು ನೋಡುವಂತೆ ಮಾಡುತ್ತಿದ್ದಾನೆ. ಸುಷುಪ್ತಿಯಲ್ಲಿ ಅಂದರೆ ಕನಸ್ಸುಗಳಿಲ್ಲದೆ ಗಾಢನಿದ್ರೆಯನ್ನು ಅನುಭವಿಸುತ್ತಿರುವಾಗ ರುದ್ರನು ಸರ್ವಶೂನ್ಯವುಂಟಾಗುವಂತೆ ಮಾಡಿ, ಜೀವನನ್ನು ಪ್ರತ್ಯೇಕಮಾಡುತ್ತಿದ್ದಾನೆ. ತುರೀಯಾವಸ್ಥೆಯಲ್ಲಿ ಸದಾಶಿವನು ಜೀವಿಗಳಿಗೆ ಆನಂದವನ್ನುಂಟುಮಾಡುತ್ತಿದ್ದಾನೆ. ಶುದ್ಧಶೂನ್ಯವಾದ ಮಾಯೆಯು ಬ್ರಹ್ಮಜ್ಞಾನವನ್ನು ಮರೆಮಾಡಿ ಯಾವ ಕೆಲಸಕ್ಕೂ ಬಾರದ ವೃಥಾ ಭ್ರಮೆಯನ್ನುಂಟುಮಾಡುತ್ತಿರುತ್ತದೆ.

ಇಂತಹ ಆತ್ಮನು, ಜೀವಿಗಳಿಗೆ ಸಾಕ್ಷಿಯಾಗಿದ್ದು, ಮಾಯಾಂಧಕಾರದಲ್ಲಿ ತಗುಲಿಕೊಂಡು ಒಳ್ಳೆಯ ಮಾರ್ಗವನ್ನು ಕಾಣದೆ, ಕಾಮುಕ್ರೋಧಾದಿ ದಶಗುಣಗಳ ಬಲಿಯದಿಂದ ದಾರೇಷಣ, ಪುತ್ರೇಷಣ, ಧನೇಷಣಗಳೆಂಬ ಈಷಣತ್ರಯಗಳಲ್ಲಂಟಿಕೊಂಡು, ತಾನು ಜೀವಾತ್ಮನೆಂದು ತಿಳಿದುಕೊಳ್ಳಲಾರದೆ, ದುಃಖ ಕಾರ್ಯಗಳನ್ನೇ ಸುಖಕಾರಿಗಳೆಂದು ಮನಸ್ಸಿನಲ್ಲೆಣಿಸಿ, ಅಪರಿಮಿತವಾದ ಆಸೆಗಳಲ್ಲಿ ಮುಣುಗಿ, ಈ ಆಸೆಗಳಿಂದಲೇ ಅನೇಕ ಜನ್ಮಗಳನ್ನೆತ್ತಿ, ಸಂಸಾರಸಮುದ್ರವನ್ನು ದಾಟಿ ದಡವನ್ನು ಸೇರಲಾರದೆ ಪ್ರತಿಜನ್ಮದಲ್ಲಿಯೂ ಬಹಳ ದುಃಖವನ್ನು ಅನುಭವಿಸುತ್ತಿರುವನು. ಮತ್ತು ಪಂಚಭೂತತನ್ಮಾತ್ರಗಳಿಂದಲೂ, ಪಂಚಭೂತಗಳಿಂದಲೂ ಉತ್ಪತ್ತಿಯಾದ ಚರಾಚರ ಪ್ರಪಂಚವೆಲ್ಲವೂ ಮಾಯಾಸಂಬಂಧವಾದ ಲೀಲೆಯೇ ಹೊರತು, ಮತ್ತೆ ಬೇರಲ್ಲ. ಆದುದರಿಂದ ಇದೆಲ್ಲವನ್ನೂ ಬೇರ್ಪಡಿಸಿ

ನೋಡಿದ್ದೇ ಆದರೆ ಅಜ್ಞಾನದಿಂದುಂಟಾದ ದೇಹೇಂದ್ರಿಯಾದಿಗಳನ್ನು 'ನಾನು, ನನ್ನದು' ಎಂಬ ದುರಾಭಿಮಾನದಿಂದ ಅಹಂಕಾರಪಡುವಂತೆ ಮಾಡುವ ಭ್ರಮೆಯೇ 'ಜೀವನೆಂಬದಾಗಿ ತಿಳಿಯುವುದಲ್ಲದೆ ಸರ್ವಸಾಕ್ಷಿ ಸ್ವರೂಪನಾದ ಆತ್ಮನೇ ಪರಬ್ರಹ್ಮನೆಂದೂ ತಿಳಿಯಬೇಕು.

ಶರೀರದಲ್ಲಿರುವ ಕೂಟಸ್ಥಬ್ರಹ್ಮವೇ ಸ್ವಯಂಪ್ರಕಾಶದಿಂದ ಬೆಳಗುತ್ತ ಜಾಗ್ರತ್ಸ್ವಪ್ನಸುಷುಪ್ತಿಯೆಂಬ ಮೂರವಸ್ಥೆಗಳಲ್ಲಿ ಜೀವನು ವಿಷಯಭೋಗಗಳನ್ನು ಅನುಭವಿಸುತ್ತಿದ್ದರೂ, ತಾನು ಮಾತ್ರ ಅವುಗಳನ್ನನುಭವಿಸದೆ, ಅವು ನಶ್ವರವಾಗಿಯೂ ಅಸತ್ಯವಾದದ್ದಾಗಿಯೂ ಇದ್ದರೂ, ತಾನು ಮಾತ್ರ ಶಾಶ್ವತನಾಗಿಯೂ ಸತ್ಯಸ್ವರೂಪಿಯಾಗಿಯೂ ಇರುತ್ತ, ಅವುಗಳೆಲ್ಲವೂ ಅಜ್ಞಾನಮಯವಾಗಿದ್ದರೂ, ತಾನು ನಿರ್ಮಲ ಜ್ಞಾನಸ್ವರೂಪದಿಂದ ಹೊಳೆಯುತ್ತ, ಅವು ದುಃಖಸ್ವರೂಪಿಗಳಾಗಿದ್ದರೂ, ತಾನು ನಿತ್ಯಾನಂದ ಸುಖಮಯನಾಗಿಯೂ ನಿರ್ಮಲನಾಗಿಯೂ ನಿರ್ದೋಷಿಯಾಗಿಯೂ ನಿರ್ವಿಕಾರನಾಗಿಯೂ ಸ್ವಯಂಪ್ರಕಾಶನಾಗಿಯೂ ಮತ್ತು ಚಿದಾಕಾಶಸ್ವರೂಪಿಯಾಗಿಯೂ ಇರುತ್ತಾನೆ. ಇದೂ ಅಲ್ಲದೆ, ಅಧ್ಯಾತ್ಮ ರಾಮಾಯಣದಲ್ಲಿ ಹೇಳಿರುವಂತೆ ಸಾಕ್ಷಿಸ್ವರೂಪನಾದ ಪರಮಾತ್ಮನು ಹೇಗಿರುತ್ತಾನೆಂದರೆ:—

ಶ್ಲೋ॥ ರಾಮಃ ಪರಾತ್ಮಾ ಪ್ರಕೃತೇ ರನಾದಿಃ ।
ಆನಂದ ಏಕಃ ಪುರುಷೋತ್ತಮೋ ಹಿ ♦ ॥

ಶ್ಲೋ॥ ಸ್ವಮಾಯಯಾ ಕೃತ್ಸ್ನ ಮಿದಂ ಹಿ ಸೃಷ್ಟ್ವಾ ।
ನಭೋವ ದಂತರ್ಬಹಿ ರಾಸ್ಥಿತೋ ಯಃ ♦ ॥
ಸರ್ವಾಂತರಸ್ಥೋಽಪಿ ನಿಗೂಢ ಆತ್ಮಾ ।
ಸ್ವಮಾಯಯಾ ಸೃಷ್ಟ ಮಿದಂ ವಿಚಷ್ಟೇ ♦ ॥

ಶ್ಲೋ॥ ಜಗಂತಿ ನಿತ್ಯಂ ಪರಿತೋ ಭ್ರಮಂತಿ ।
ಯತ್ಸನ್ನಿಧೌ ಚುಂಬುಕಲೋಹವ ದ್ಧಿ ♦ ॥
ಏತ ನ್ನ ಜಾನಂತಿ ವಿಮೂಢಚಿತ್ತಾಃ ।
ಸ್ವಾವಿದ್ಯಯಾ ಸಂವೃತಮಾನ ಸಾ ಯೇ ♦ ॥

ಶ್ಲೋ॥ ಸ್ವಾಜ್ಞಾನ ಮುಪ್ಯಾತ್ಮನಿ ಶುದ್ಧಬುದ್ಧೇ।
ಸ್ವಾರೋಪಯಂತೀಹ ನಿರಸ್ತಮಾಯೇ ♦ ॥
ಸಂಸಾರ ಮೇವಾನುಸರಂತಿ ತೇ ವೈ।
ಪುತ್ರಾದಿಸಕ್ತಾಃ ಪುರುಕರ್ಮಯುಕ್ತಾಃ ♦ ॥

ಶ್ಲೋ॥ ಜಾನಂತಿ ನೈನಂ ಹೃದಯೇ ಸ್ಥಿತಂ ವೈ।
ಚಾಮೀಕರಂ ಕಂಠಗತಂ ಯಥಾಽಜ್ಞಾಃ ♦ ॥
ಯಥಾಽಪ್ರಕಾಶೋ ನ ತು ವಿದ್ಯತೇ ರವೌ।
ಜ್ಯೋತಿಸ್ಸ್ವಭಾವೇ ಪರಮೇಶ್ವರೇ ತಥಾ ♦ ॥

ಶ್ಲೋ॥ ವಿಶುದ್ಧವಿಜ್ಞಾನಘನೇ ರಘೂತ್ತಮೇ।
ಽವಿದ್ಯಾ ಕಥಂ ಸ್ಯಾತ್ಪರತಃ ಪರಾತ್ಮನಿ ♦ ॥
ಯಥಾ ಹಿ ಚಾಕ್ಷ್ಣಾ ಭ್ರಮತಾ ಗೃಹಾದಿಕಂ।
ವಿನಷ್ಟದೃಷ್ಟೇ ರ್ಭ್ರಮತೀವ ದೃಶ್ಯತೇ ♦ ॥

ಶ್ಲೋ॥ ತಥೈವ ದೇಹೇಂದ್ರಿಯ ಕರ್ತುರಾತ್ಮನಃ।
ಕೃತಂ ಪರೇಧ್ಯಸ್ಯ ಜನೋ ವಿಮುಹ್ಯತಿ ♦ ॥
ನಾಹೋ ನ ರಾತ್ರಿ ಸ್ಸವಿತು ರ್ಯಥಾ ಭವೇತ್।
ಪ್ರಕಾಶರೂಪಾಽವ್ಯಭಿಚಾರತಃ ಕ್ವಚಿತ್ ♦ ॥

ಶ್ಲೋ॥ ಜ್ಞಾನಂ ತಥಾಽಜ್ಞಾನ ಮಿದಂ ದ್ವಯಂ ಹರೌ।
ರಾಮೇ ಕಥಂ ಸ್ಥಾಸ್ಯತಿ ಶುದ್ಧಚಿದ್ಘನೇ ♦ ॥
ತಸ್ಮಾತ್ಪರಾನಂದಮಯೇ ರಘೂತ್ತಮೇ।
ವಿಜ್ಞಾನರೂಪೇ ಹಿ ನ ವಿದ್ಯತೇ ತಮಃ ♦ ॥

ಶ್ಲೋ॥ ಅಜ್ಞಾನಸಾಕ್ಷಿ ಣ್ಯರವಿಂದಲೋಚನೇ !।
ಮಾಯಾಶ್ರಯತ್ವಾ ನ್ನ ಹಿ ಮೋಹಕಾರಣಂ ♦ ॥

(ಅಧ್ಯಾತ್ಮರಾಮಾಯಣ, 1ನೇ ಸರ್ಗ ಶ್ಲೋಕ 17ರಿಂದ 24)

ಪರಬ್ರಹ್ಮಸ್ವರೂಪಿಯಾದ ಶ್ರೀರಾಮನು ಪ್ರಕೃತಿಗಿಂತ ಅನಾದಿಯಾದ
ವನು. ಲೋಕೈಕದೇವನಾದ, ಆನಂದಮಯನಾದ ಮತ್ತು ಪುರುಷೋತ್ತ
ಮನೆನಿಸಿರುವ ಆ ಸ್ವಾಮಿಯು, ತನಗೆ ಅಧೀನವಾಗಿರುವ ಮಾಯೆಯ
ಬಲಿಯದಿಂದ ಕಣ್ಣಿಗೆ ಕಾಣ್ಬರುವ ಈ ಪದಾರ್ಥಗಳನ್ನೆಲ್ಲಾ ಸೃಷ್ಟಿ

ಮಾಡಿ, ಆಕಾಶದಂತೆ ಎಲ್ಲೆಲ್ಲಿಯೂ ಅಂದರೆ ಈ ಮಾಯಾ ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿ ತುಂಬಿ ತುಳುಕಾಡುತ್ತಲಿದ್ದಾನೆ. ಇದೂ ಅಲ್ಲದೆ, ಆ ಪರಮಾತ್ಮನು ಸರ್ವಾಂತರ್ಯಾಮಿಯಾದರೂ ಗೂಢವಾಗಿ ಲೋಕಗಳನ್ನೆಲ್ಲಾ ಆವರಿಸುವಂತೆ ಮಾಯೆಯನ್ನು ಹರಡಿ, ಎಲ್ಲರನ್ನೂ ಮೋಹಗೊಳಿಸುತ್ತಲಿದ್ದಾನೆ. ಈ ಪ್ರಪಂಚಗಳೆಲ್ಲವೂ ಸಾಕ್ಷಿಮಾತ್ರನಾದ ಮತ್ತು ಚೈತನ್ಯಸ್ವರೂಪನಾದ ಆತ್ಮನನ್ನು, ಸೂಜಿಗಲ್ಲಿನಿಂದ ಆಕರ್ಷಿಸಲ್ಪಡುವ ಕಬ್ಬಿಣದ ತುಂಡುಗಳಂತೆ, ಸುತ್ತಿಕೊಂಡು, ಆತನಿಂದ ಆಕರ್ಷಿಸಲ್ಪಡುತ್ತಲಿವೆ. ಆ ಪರಮಾತ್ಮನ ರಹಸ್ಯವನ್ನು ತಿಳಿಯಲಾರದ ಮೂಢಜನಗಳು ಅಜ್ಞಾನದಿಂದ ತಮ್ಮನ್ನು ತಾವೇ ಮರೆತು, ಮಾಯಾತೀತನಾದ ಮತ್ತು ಶುದ್ಧಜ್ಞಾನಮಯನಾದ ಪರಮಾತ್ಮನಲ್ಲಿ, ದೇಹಾದಿಸಂಬಂಧಗಳನ್ನು ಆರೋಪಣೆ ಮಾಡುತ್ತಾ, ಸಂಸಾರಸಮುದ್ರದಲ್ಲಿ ತೇಲಿಮುಳುಗುತ್ತಾ ಹೆಂಡತಿ ಮಕ್ಕಳೆಂಬ ಮೋಹದಲ್ಲಿ ತಗುಲಿಕೊಂಡು, ದೇಹಪೋಷಣೆಯ ಕಾರ್ಯದಲ್ಲಿಯೇ ನಿರತರಾಗಿರುತ್ತಾರೆ. ಇಂತಹರು ತಮ್ಮ ಹೃದಯದಲ್ಲಿ ಅಂತರಾತ್ಮನಾಗಿ ನೆಲೆಸಿರುವ ಪರಮಾತ್ಮನನ್ನು ಎಂದಿಗೂ ತಿಳಿಯಲಾರರು. ಹೇಗೆಂದರೆ, ತಮ್ಮ ಕೊರಳಲ್ಲಿ ಧರಿಸಿರುವ ಭಂಗಾರದ ಸರವನ್ನು ಅಜ್ಞಾನದಿಂದ ಎಲ್ಲಿಯೋ ಮರೆತಿಟ್ಟಿದ್ದೇನೆಂದು ಭ್ರಾಂತಿಪಟ್ಟು ಎಲ್ಲೆಲ್ಲಿಯೂ ಹುಡುಕುವ ಮೂಢರಂತೆ ಇವರ ಸ್ಥಿತಿಯಿರುತ್ತದೆ. ಪ್ರಕಾಶಸ್ವರೂಪನಾದ ಸೂರ್ಯನಲ್ಲಿ ಕತ್ತಲು ಎಂಬುದು ಹೇಗೆ ಇರಲಾರದೋ ಹಾಗೆಯೇ ಸ್ವಯಂಪ್ರಕಾಶನಾದ ಪರಮಾತ್ಮನಲ್ಲಿ ಅಜ್ಞಾನವೆಂಬುದೇ ಇಲ್ಲ. ಶ್ರೀರಾಮಚಂದ್ರನು ಲೋಕದಲ್ಲಿರುವ ಜನಗಳಿಗೆ ಅಂದರೆ ಅಜ್ಞಾನಿಗಳನ್ನು ಮಾತ್ರ ಮೋಹಪಡಿಸುವುದಕ್ಕೆ ಭಾರ್ಯಾದುಃಖಾದಿಗಳನ್ನು ಮಾಯೆಯ ಪ್ರಭಾವದಿಂದ ತೋರ್ಪಡಿಸಿದನೇ ಹೊರತು, ಪರಾತ್ಪರಸ್ವರೂಪಿಯಾದ ಆ ರಘೂತ್ತಮನಿಗೆ ಅಜ್ಞಾನವೆಂಬುದು ಎಂದಿಗೂ ಇಲ್ಲ. ದೃಷ್ಟಿ ಚದುರಿರುವ ಮನುಷ್ಯನಿಗೆ ಗಿಡ-ಮನೆ-ಮಠಗಳು ತಿರುಗುತ್ತಿರುವಂತೆ ಕಂಡು ಬಂದರೂ, ವಸ್ತುತಃ ಅವುಗಳಿಗೆ ಹೇಗೆ ಚಲನೆಯೆಂಬುದಿಲ್ಲವೋ, ಹಾಗೆಯೇ ಆತ್ಮಸ್ವರೂಪವನ್ನರಿಯದ ಮೂಢರು,ದೇಹೇಂದ್ರಿಯ ಸಂಬಂಧಿಯಾದ ಆತ್ಮನಲ್ಲಿ 'ದೇಹೇಂದ್ರಿಯಗಳೇ ಆತ್ಮನು' ಎಂದು ಭಾವಿಸಿ ಮೋಹಗೊಳ್ಳುತ್ತಿದ್ದಾರೆ.

ಪ್ರಕಾಶವೇ ಸ್ವರೂಪವಾಗುಳ್ಳ ಅಂದರೆ ತೇಜೋಮಯನಾದ ಸೂರ್ಯನಿಗೆ ಹಗಲು-ರಾತ್ರಿಗಳೆಂಬುದು ಯಾವರೀತಿಯಲ್ಲಿಲ್ಲವೋ, ಶುದ್ಧಜ್ಞಾನಸ್ವರೂಪ ನಾದ ಪರಮಾತ್ಮನಿಗೆ ಜ್ಞಾನ ಮತ್ತು ಅಜ್ಞಾನವೆಂಬಿವೆರಡೂ ಇರವು. ಆದುದರಿಂದ ಚಿತ್ಸ್ವರೂಪನೂ, ಪರಮಾನಂದಮಯನೂ, ವಿಜ್ಞಾನರೂಪ ನೂ ಆದ ಆ ಶ್ರೀರಾಮಚಂದ್ರ ಪರಮಾತ್ಮನಲ್ಲಿ ಅಜ್ಞಾನವೆಂಬುದು ಎಳ್ಳಷ್ಟೂ ಇಲ್ಲ. ಅಜ್ಞಾನಸಂಬಂಧದಿಂದ ಮೋಹವುಂಟಾಗುವುದೇ ಹೊರತು, ಅಜ್ಞಾನಕ್ಕೆ ಸಾಕ್ಷಿಯಾದ ಕಣ್ಣಿನಲ್ಲಿ ಮಾಯೆಯ ಆಶ್ರಯವು ಪೂರ್ಣವಾಗಿ ಸಂಬಂಧಿಸಿಕೊಂಡಿರುವುದರಿಂದ ಇಲ್ಲಿ ಮೋಹವು ಕಾರಣ ವಲ್ಲವೆಂಬುದೇ ಮೇಲಿನ ಶ್ಲೋಕಗಳ ಮುಖ್ಯ ತಾತ್ಪರ್ಯ.

ಮಾಯೆಗೆ ಒಳಗಾದವರಿಗೆ ಬ್ರಹ್ಮಜ್ಞಾನವುಂಟಾಗದಾದುದರಿಂದ, ಅಹಂಕಾರವು ವೃದ್ಧಿಯಾಗಿ ಸರ್ವದಾ ದುಃಖವೇ ಬರುತ್ತಿರುತ್ತದೆ. ಬ್ರಹ್ಮಜ್ಞಾನವನ್ನು ಹೊಂದಿದವರಿಗೆ ಅನೇಕ ಸಿದ್ಧಿಗಳು ತಮಗೆ ತಾವೇ ದೊರಕುತ್ತವಲ್ಲದೆ, ಅಖಂಡಾನಂದವುಂಟಾಗಿ ಕೈವಲ್ಯವು ಸಿದ್ಧಿಸುತ್ತದೆ. ಇದಕ್ಕೆ ಭಗವದ್ಗೀತೆ 2ನೇ ಅಧ್ಯಾಯ 13-14 ನೇ ಶ್ಲೋಕಗಳು ಪ್ರಮಾಣವು.

ಶ್ಲೋ ॥ ಅದ್ವೇಷ್ಟಾ ಸರ್ವಭೂತಾನಾಂ ♦ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ♦ ಸಮದುಃಖಸುಖಃ ಕ್ಷಮೀ ॥

ಸಂತುಷ್ಟ ಸ್ಸತತಂ ಯೋಗೀ ♦ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿಃ ♦ ಯೋ ಮದ್ಭಕ್ತ ಸ್ಸ ಮೇ ಪ್ರಿಯಃ ॥

ಸಮಸ್ತ ಜೀವರಾಶಿಗಳಲ್ಲಿ ದ್ವೇಷರಹಿತನಾಗಿಯೂ, ಕರುಣಾಮಯ ನಾಗಿಯೂ, ಸುಖದುಃಖಗಳನ್ನೂ, ಲಾಭಾಲಾಭಗಳನ್ನೂ ಒಂದೇಸಮಾನ ವೆಂದೆಣಿಸಿದವನಾಗಿಯೂ, ಕ್ಷಮಾಗುಣಯುತನಾಗಿಯೂ, ಸರ್ವದಾ ಸಂತೋಷದಿಂದ ಕೂಡಿದವನಾಗಿಯೂ, ಸಮಾಹಿತಚಿತ್ತವುಳ್ಳವನಾ ಗಿಯೂ, ದೇಹಾದಿ ಸಂಘಾತಗಳನ್ನು ಸಂಪೂರ್ಣವಾಗಿ ವಿಶದಪಡಿಸಿಕೊಂ ಡವನಾಗಿಯೂ, ಪರಮೇಶ್ವರನಾದ ನನ್ನಲ್ಲಿ ಅರ್ಪಿಸಲ್ಪಟ್ಟ ಮನೋಬುದ್ಧಿ

ಯನ್ನುಳ್ಳ, ಯೋಗಿಯಾದ ಭಕ್ತನಾವನಿರುವನೋ ಅವನೇ ನನಗೆ ಅತ್ಯಂತ ಪ್ರಿಯನು.

ಇಂತಹ ಜ್ಞಾನವನ್ನು ಪಡೆಯುವುದಕ್ಕೆ ಮೊದಲನೆಯ ಸಾಧನವು ಎಂತಹುದೆಂದರೆ, ಅವರವರಿಗೆ ಇಷ್ಟದೇವತೆಯಾಗುಳ್ಳ ಒಂದೊಂದು ದೇವತಾಸ್ವರೂಪವನ್ನು ಭಕ್ತಿಶ್ರದ್ಧೆಗಳಿಂದ ಪೂಜೆಮಾಡಬೇಕು. ಈರೀತಿ ಯಾದ ಪೂಜೆಯು ಪರಮಾತ್ಮನಿಗೆ ಸಲ್ಲುತ್ತದೆ. ಭಕ್ತರು, ತಮಗೆ ಪ್ರಿಯ ವಾದ ದೇವತೆಯನ್ನು ವಿಗ್ರಹವಾಗಿ ನಿಲ್ಲಿಸಿ, ಈ ವಿಗ್ರಹವನ್ನೇ ಪರಮಾ ತ್ಮನೆಂದು ಭಾವಿಸಿ ಅದನ್ನು ನಿರಂತರವಾಗಿ ಭಕ್ತಿಶ್ರದ್ಧೆಗಳಿಂದ ಪೂಜಿಸಿ ಆರಾಧಿಸುತ್ತಿದ್ದುದೇ ಆದರೆ, ಕಡೆಯಲ್ಲಿ ಅಂತಹರಿಗೆ ಬ್ರಹ್ಮಸಾಯುಜ್ಯವು ತಪ್ಪದೆ ದೊರಕುವುದು. ಯಾವ ವಿಗ್ರಹವನ್ನೂ ಮನಸ್ಸಿನಲ್ಲೆಣಿಸದೆ ನಿರ್ಗುಣ ಮತ್ತು ನಿರ್ವಿಕಾರನಾದ ಪರಮಾತ್ಮನನ್ನು ಧ್ಯಾನಮಾಡಬಹುದು. ಆದರೆ ಹಾಗೆ ನಿರಾಕಾರನನ್ನು ಧ್ಯಾನಿಸುವುದು ಬಹಳ ಕಷ್ಟವು. ಏಕೆಂದರೆ, ಎದುರಿಗೆ ಕಾಣುತ್ತಿರುವ ಸಾಕಾರ ವಿಗ್ರಹಗಳಲ್ಲಿಯೇ ಮನಸ್ಸನ್ನು ಸ್ಥಿರ ವಾಗಿ ನಿಲ್ಲಿಸಲು ಸಾಧ್ಯವಾಗದ ಭಾಗದಲ್ಲಿ, ಆಕಾರರಹಿತನಾದ ಪರಮಾತ್ಮ ನಲ್ಲಿ ಮನಸ್ಸನ್ನು ನಿಲ್ಲಿಸುವ ಬಗೆಯಾದರೂ ಹೇಗೆ? ಮನಸ್ಸನ್ನು ಅತ್ತಿತ್ತ ಕದಲದ ರೀತಿಯಲ್ಲಿ ನಿಲ್ಲಿಸುವುದಕ್ಕಾಗಿ ಸಾಕಾರವಾದ ವಿಗ್ರಹವು ಬಹಳ ಸಹಕಾರಿಯು. ಮೋಕ್ಷವನ್ನು ಬಯಸುವವರಿಗೆ, ಪರಮಾತ್ಮನ ನಿಶ್ಚಯ ಜ್ಞಾನವನ್ನು ಪಡೆಯುವುದಕ್ಕೆ ಈ ತೆರನಾದ ಸಾಕಾರವಿಗ್ರಹವನ್ನು ಭಕ್ತಿ ಶ್ರದ್ಧೆಗಳಿಂದಾರಾಧಿಸುವುದೇ ಪ್ರಥಮಸೋಪಾನ. ವಿಗ್ರಹಗಳ ಸ್ವರೂಪ ವನ್ನು ಪರಮಾತ್ಮನೆಂದೇ ಮನಸ್ಸಿನಲ್ಲೆಣಿಸಿ ಧ್ಯಾನಮಾಡುತ್ತ ಬಂದರೆ, ಚಂಚಲಸ್ವಭಾವವುಳ್ಳ ಮನಸ್ಸು ನಮ್ಮ ಹತೋಟಿಗೆ ಬಂದು ನಿರ್ಗುಣ ಮತ್ತು ನಿರಾಕಾರನಾದ ಪರಮಾತ್ಮನ ವಿಷಯದಲ್ಲಿ ಮನಸ್ಸನ್ನು ನಿಲ್ಲಿಸ ಬಹುದು. ಇದಕ್ಕೆ ಪ್ರಮಾಣವಾದ ಶ್ರುತಿವಾಕ್ಯವು ಈ ಕೆಳಗೆ ಕೊಟ್ಟಿದೆ.

ಶ್ರುತಿ ॥ 'ತೈಲಧಾರಾ ಮಿವಾಚ್ಛಿನ್ನಂ ♦ ದೀರ್ಘಘಂಟಾನಿನಾದವತ್ ।
ಅವಾಚ್ಯಂ ಪ್ರಣವಸ್ಯಾಗ್ರಂ ♦ ಯಸ್ತಂ ವೇದ ಸ ವೇದವಿತ್' ॥

(ಧ್ಯಾನಬಿಂದೂಪನಿಷತ್ತು, 18ನೇ ಶ್ಲೋಕ.)

ಒಂದೇಸಮನಾಗಿ ಸುರಿಯುವ ತೈಲಧಾರೆಯಂತೆಯೂ, ಒಂದೇಸಮನಾಗಿ ಎಡೆಬಿಡದೆ ಶಬ್ದಮಾಡುತ್ತಿರುವ ಘಂಟಾಶಬ್ದದಂತೆಯೂ, ಗುರೂಪದಿಷ್ಟವಾದ ಮಾರ್ಗದಿಂದ, ಉಪಾಸನೆಗೆ ಅರ್ಹನಾದ ಮತ್ತು ಓಂಕಾರ ಸ್ವರೂಪಿಯಾದ ಪರಮಾತ್ಮನನ್ನು ಯಾವನು ಅವಿಚ್ಛಿನ್ನಭಕ್ತಿಯಿಂದ ನಿರಂತರವೂ ಧ್ಯಾನಮಾಡುತ್ತಾನೆಯೋ ಅವನೇ 'ವೇದವಿತ್' ಎಂದು ಕರೆಯಲ್ಪಡುವವನು. ಈರೀತಿಯಾದ ಧ್ಯಾನವನ್ನು ಮಾಡುವುದರಿಂದ ಮನಸ್ಸು ಅತ್ತಿತ್ತ ಕದಲದೆ ಒಂದೇಕಡೆ ನಿಲ್ಲುತ್ತದೆ. ಹೀಗೆ ಮನಸ್ಸನ್ನು ಸ್ಥಿರೀಕರಿಸಿ ಧ್ಯಾನಮಾಡುವುದೇ 'ನಿರ್ಗುಣೋಪಾಸನೆ' ಯೆಂದು ಕರೆಯಲ್ಪಡುತ್ತದೆ. ಅಂದರೆ ಮನಸ್ಸು ಎಲ್ಲಿ ಹುಟ್ಟುತ್ತದೆಯೋ ಅದೇ ಸ್ಥಳದಲ್ಲಿಯೇ ನಶಿಸಿಹೋಗುತ್ತದೆ. ವಿಗ್ರಹಾರಾಧನೆಯನ್ನು ಮೊಟ್ಟಮೊದಲು ಮಾಡುವುದಕ್ಕೆ ಆರಂಭಿಸಿ ಮನಸ್ಸಿನ ಚಾಂಚಲ್ಯವನ್ನು ಹೋಗಲಾಡಿಸಿದರೆ, ನಿರ್ಗುಣಬ್ರಹ್ಮೋಪಾಸನೆಯನ್ನು ಸುಲಭವಾಗಿ ಮಾಡಬಹುದು. ಹೀಗೆ ಮಾಡುವವರು ಬಹು ಜಾಗ್ರತೆಯಾಗಿ ಸಿದ್ಧಿಯನ್ನು ಹೊಂದುವರು. ಇಂತಹ ಸಿದ್ಧಿಯನ್ನು ಪಡೆದ ಮಹಾತ್ಮರ ಮರ್ಮವನ್ನು ತಿಳಿಯದೆ ಕೆಲವು ಮೂಢರು ತಮ್ಮ ಮನಸ್ಸು ಪರಿಪಕ್ವವಾಗುವುದಕ್ಕೆ ಮುಂಚೆಯೇ 'ವಿಗ್ರಹಾರಾಧನೆಯಿಂದ ಎಂದಿಗೂ ಸಿದ್ಧಿಯುಂಟಾಗಲಾರದು' ಎಂದು ಭಾವಿಸಿ ಪ್ರಥಮದಲ್ಲಿಯೇ ನಿರ್ಗುಣಬ್ರಹ್ಮನ ಧ್ಯಾನವನ್ನು ಮಾಡುವುದಕ್ಕೆ ಆರಂಭಿಸುವರು. ಹೀಗೆ ಪ್ರಯತ್ನಮಾಡುವವರು ನಿಶ್ಚಯವಾಗಿಯೂ ಉಭಯಭ್ರಷ್ಟತ್ವವನ್ನು ಹೊಂದುವರು. ಅಂದರೆ ವಿಗ್ರಹಾರಾಧನೆಯ ಫಲವನ್ನಾಗಲಿ, ಅಥವ ಕಷ್ಟಸಾಧ್ಯವಾದ ನಿರ್ಗುಣಬ್ರಹ್ಮೋಪಾಸನೆಯ ಫಲವನ್ನಾಗಲಿ, ಅವರು ಹೊಂದರು.

ಪಂಚೇಂದ್ರಿಯಗಳನ್ನೂ, ಕಾಮಕ್ರೋಧಾದಿ ದಶಗುಣಗಳನ್ನೂ, ಮನಸ್ಸನ್ನೂ, ಜಯಿಸದಿರುವವನು ನಿರ್ಗುಣಬ್ರಹ್ಮನನ್ನು ಪೂಜಿಸಲು ಅರ್ಹನಾಗಲಾರನು. ಭಕ್ತಿಯಿಂದ ವಿಗ್ರಹಾರಾಧನೆಯನ್ನು ಮಾಡುವವರು ಕ್ರಮಕ್ರಮವಾಗಿ ಪರಿಪಕ್ವವಾದ ಮನಸ್ಸಿನಿಂದ ನಿರ್ಗುಣಬ್ರಹ್ಮನನ್ನು ಪೂಜಿಸುವುದಕ್ಕೆ ಅರ್ಹರಾಗುತ್ತಾರೆ. ಇವರೇ ಪರಮಭಾಗವತೋತ್ತಮರೆಂದು ಶ್ರುತಿಗಳು ಸಾರಿಹೇಳುತ್ತವೆ. ಭಗವದ್ಭಕ್ತಿ, ದೊಡ್ಡ

ವರ ಸಹವಾಸ ಮೊದಲಾದುವುಗಳೆಲ್ಲವೂ ಇಂದ್ರಿಯನಿಗ್ರಹವನ್ನು ಮಾಡು ವುದಕ್ಕಾಗಿಯೇ ಹೊರತು ಮತ್ತೆ ಯಾವುದಕ್ಕೂ ಅಲ್ಲವು.

ಆಹಾರ ನಿದ್ರೆ ಮೈಥುನಾದಿ ಕ್ರಿಯಗಳನ್ನು ಮಾಡುತ್ತ ಚತುಷ್ಪಾದಿ ಜಂತುಗಳಂತೆ ಇರುವಂಥ ಅಜ್ಞಾನಿಗಳಿಗಿಂತಲೂ,ವಿಗ್ರಹವನ್ನಾಗಲಿ ಅಥವ ದೇವತೆಗಳ ಪಠವನ್ನಾಗಲಿ ಇಟ್ಟು ಪೂಜೆಮಾಡುವವರೇ ಮಹಾ ಶ್ರೇಷ್ಠರು. ಈ ವಿಗ್ರಹಾರಾಧನೆಗಳನ್ನು ಮಾಡುವವರಿಗಿಂತಲೂ ನಿರ್ಮಲವಾದ ಬುದ್ಧಿ ಯಿಂದ ಪರಮಾತ್ಮನೆಂದೆನಿಸುವ ಪರಬ್ರಹ್ಮನನ್ನು ಆರಾಧಿಸುವವರು ಹೆಚ್ಚು ಶ್ರೇಷ್ಠರು. ಪರಬ್ರಹ್ಮನನ್ನು ಆರಾಧಿಸುವವರಿಗಿಂತಲೂ ಅಂತರಾತ್ಮನಾದ ಭಗವಂತನ ನಿಶ್ಚಯಜ್ಞಾನವನ್ನು ಹೊಂದಿ ಧ್ಯಾನಿಸುವವರು ಮತ್ತಷ್ಟು ಶ್ರೇಷ್ಠರು. ಅಂತರಾತ್ಮನನ್ನು ಧ್ಯಾನಮಾಡುವವರಿಗಿಂತಲೂ ತನ್ನನ್ನು ತಾನು ಮರೆತು ಬ್ರಹ್ಮಾನಂದವೆಂಬ ಸಾಗರದಲ್ಲಿ ತೇಲಿ ಮುಳುಗುತ್ತ, ಬಾಲೋನ್ಮತ್ತನಂತೆ ಇದ್ದ ಸ್ಥಳದಲ್ಲಿ ಚಲಿಸದಿದ್ದ ಮಹಾತ್ಮನನ್ನು ಕಂಡು ಹಿಡಿದು, ಅವರಿಗೆ ತಕ್ಕ ಆಹಾರಾದಿಗಳನ್ನು ಕೊಡುತ್ತ ಅವರಿಗೆ ಅನುಕೂಲ ಗಳನ್ನು ಕಲ್ಪಿಸುತ್ತ ಬರುವವರೇ ಮಹಾ ಶ್ರೇಷ್ಠರು. ಇಂತಹ ಉತ್ತ ಮಸ್ಥಿತಿಯನ್ನು ಪಡೆಯುವುದಕ್ಕೆ ಪ್ರಯತ್ನಿಸದೆ, ಒಂದೊಂದು ಜನ್ಮ ದಲ್ಲಿಯೂ ಕರ್ಮಗಳೆಂಬ ಮೂಟೆಗಳನ್ನು ತಾವು ಹೊರಲಾರದಂತಿದ್ದರೂ, ಪುನಃ ಸಮಸ್ತ ವಸ್ತುಗಳೂ ತಮಗೆ ದೊರಕಬೇಕೆಂಬ ಕೋರಿಕೆಗಳನ್ನು ಬಿಡದೆ ಸರ್ವದಾ ಆ ವಸ್ತುಗಳನ್ನೇ ಮನಸ್ಸಿನಲ್ಲಿ ನೆನೆಸುತ್ತಿರುವುದರಿಂದ ಹಿಂದಿನ ಕರ್ಮಗಳ ಭಾರದ ಜೊತೆಗೆ ಮತ್ತಷ್ಟು ಭಾರವನ್ನು ಹೊತ್ತು ಕೊಂಡು ಆ ಕರ್ಮಗಳ ಭಾರವನ್ನು ಹೆಚ್ಚಿಸಿಕೊಂಡು ಬಂದ ಬಳಿಕ, ಇವರು ಗಳನ್ನು ಕಾಲನು ಕೊಂಡುಹೋಗುವಾಗ ಅವರು ಹೇಗೆ ವರ್ತಿಸುತ್ತಾರೆ ಯೋ ಮತ್ತು ಯಾರಯಾರನ್ನು ದೂಷಿಸುತ್ತಾರೆಯೋ ನಾವು ತಿಳಿಯಲಾರ ದಿದ್ದೇವೆ. ಅಂತಹ ಮಂದಮತಿಗಳಿಗೆ ಬೋಧಿಸುವುದೂ ಜಾತ್ಯಂಧನಿಗೆ ಕನ್ನಡಿಯನ್ನು ತೋರಿಸುವುದೂ ಒಂದೇ ಸರಿ; ಅಂದರೆ ಮೂರ್ಖನಿಗೆ ತತ್ವಬೋಧೆಯಿಂದ ಯಾವ ಪ್ರಯೋಜನವೂ ಇಲ್ಲವೆಂದು ಭಾವವು.

ಶ್ಲೋ ॥ 'ಬ್ರಹ್ಮಾದ್ಯಂ ಸ್ಥಾವರಾಂತಂ ಚ ♦ ಪಶ್ಯಂತಿ ಜ್ಞಾನಚಕ್ಷುಷಾ ।
ಬ್ರಹ್ಮೈಕ್ಯಮೇವ ಪಶ್ಯಂತಿ ♦ ಪರಿಶುದ್ಧಂ ವಿಭುಂ ದ್ವಿಜಾಃ' ॥

'ಯಸ್ಮಿನ್ ಭಾವಾಃ ಪ್ರಲೀಯಂತೇ ♦ ಲೀನಾ ಶ್ಚಾವ್ಯಕ್ತತಾಂ ಯಯುಃ।
ಪಶ್ಯಂತಿ ವ್ಯಕ್ತತಾಂ ಭೂಯೋ ♦ ಜಾಯಂತೇ ಬುದ್ಬುದಾ ಇವ' ॥

ಸಮಸ್ತ ನದಿಗಳೂ ಸಮುದ್ರವನ್ನು ಸೇರಿ ಭೇದವಿಲ್ಲದಂತೆ ಏಕವಾಗುವ ರೀತಿಯಲ್ಲಿ ಬ್ರಹ್ಮನಿಂದ ಮೊದಲು ಸ್ಥಾವರಪರ್ಯಂತವಾಗಿ ಸಕಲ ಚರಾಚರ ಪ್ರಪಂಚವೆಲ್ಲವೂ ಯಾವ ಪರಬ್ರಹ್ಮನಿಂದ ಉತ್ಪತ್ತಿಯಾಗುವುದೋ ಆ ಪರಬ್ರಹ್ಮನಲ್ಲಿಯೇ ಪ್ರಳಯಕಾಲದಲ್ಲಿ ಅದು ಲೀನವಾಗಿ ಹೋಗುವುದು. ಸಮುದ್ರದಲ್ಲಿ ಅಲೆಗಳು ಹುಟ್ಟಿ ಅವುಗಳಿಂದ ನೊರೆಗಳು, ನೀರಿನ ಬುಗ್ಗೆಗಳು, ಮತ್ತು ತುಂತುರುಗಳು ಇವುಗಳು ಅನೇಕ ವೇಳೆ ಹುಟ್ಟಿಹುಟ್ಟಿ, ಪುನಃ ಅವೆಲ್ಲವೂ ಅಲೆಗಳಲ್ಲಿಯೇ ಅಣಗಿ, ಆಮೇಲೆ ಆ ಅಲೆಗಳು ಸಮುದ್ರದಲ್ಲಿ ಐಕ್ಯವಾಗುವ ರೀತಿಯಲ್ಲಿ ಪರಬ್ರಹ್ಮನಿಂದ ಎಲ್ಲವೂ ಉತ್ಪತ್ತಿಯನ್ನು ಹೊಂದಿ ಅವನಲ್ಲಿಯೇ ಅವು ಲಯವನ್ನು ಹೊಂದುತ್ತವೆ. ಸಮುದ್ರಜಲವೇ, ಅಲೆಗಳು ನೀರಿನ ಬುಗ್ಗೆಗಳು ತುಂತುರುಗಳು ಈ ವಿಧಗಳಾಗಿ ಬೇರೆಬೇರೆ ಆಕಾರಗಳನ್ನು ಹೊಂದಿ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿರುವಂತೆ, ಈ ಪ್ರಪಂಚದಲ್ಲಿ ಕಾಣ್ಬರುವ ವಸ್ತುಗಳು ಅನೇಕವಿಧವಾದ ನಾಮರೂಪಭೇದಗಳನ್ನು ಹೊಂದಿದ್ದರೂ, ಎಲ್ಲವೂ ಆ ಪರಬ್ರಹ್ಮನ ಅಂಶವೇ ಹೊರತು, ಆತ್ಮನು ಪರಮಾತ್ಮನಿಗಿಂತಲೂ ಬೇರಲ್ಲ. ಜ್ಞಾನಿಗಳು ಪ್ರಪಂಚವೆಲ್ಲವನ್ನೂ ಪರಬ್ರಹ್ಮನೆಂದೇ ಭಾವಿಸುತ್ತಿದ್ದಾರೆ. ಈ ಪರಬ್ರಹ್ಮವು ಯಾವ ವಿಕಾರವನ್ನೂ ಹೊಂದದೆ ಸದಾ ಒಂದೇ ವಿಧವಾಗಿ ಕಾಣಬರುತ್ತದೆ. ನಾವು ನೋಡುವಂಥ ವಸ್ತುಗಳೆಲ್ಲವೂ ಎಲ್ಲಿ ಹುಟ್ಟುತ್ತವೆಯೋ ಅಲ್ಲಿಯೇ ಮರೆಯಾಗುವಂತೆ ನಾವು ಸಂಪಾದಿಸಿದ ದ್ರವ್ಯ ಮೊದಲಾದುವುಗಳೆಲ್ಲವೂ ಯಾವುದೋ ಒಂದು ಕಾಲದಲ್ಲಿ ನಾಶವನ್ನು ಹೊಂದುವುದು ಖಂಡಿತ. ಪರಬ್ರಹ್ಮನೊಬ್ಬನೇ ನಾಶರಹಿತನಾಗಿ ಯಾವ ವಿಧವಾದ ವ್ಯತ್ಯಾಸವನ್ನೂ ಹೊಂದದೆ ನಿರಂತರವೂ ಜ್ಞಾನಸ್ವರೂಪನಾಗಿ ಮೆರೆಯುತ್ತಿರುವನೆಂದು ತಿಳಿದು,ವೃಥಾ ಕಾಲಯಾಪನೆಯನ್ನು ಮಾಡದೆ, ಈ ಗ್ರಂಥದಲ್ಲಿ ಹೇಳಿರುವ ಗುರೂಪದೇಶ ರಹಸ್ಯಾರ್ಥಗಳನ್ನು ತಿಳಿದುಕೊಂಡು, ಬೆಳಿಗ್ಗೆ ಸಾಯಂಕಾಲಗಳಲ್ಲಿ ಆ ಗುರುವಾಕ್ಯ

ಗಳನ್ನು ಜಪಮಾಡುತ್ತ ಬಂದರೆ ಮೋಕ್ಷಸಿದ್ಧಿಯು ನಿಶ್ಚಯವಾಗಿಯೂ ದೊರಕುತ್ತದೆ.

ಗೀ ‖ ಕಣ್ಗೆ ಕಾಣುವುದೆಲ್ಲ ನಶಿ ♦ ಸುವುದು ನಿಜವು ;
ನಾಶವಿಲ್ಲದಿರುವವನು ಪರ ♦ ಮಾತ್ಮ ನೋರ್ವಂ ;
ಆದರಿಂದ ಕಾಲವನು ಪೊರೆ ♦ ಗಳೆಯಬೇಡ ;
ಆತ್ಮಸ್ವರೂಪವನು ನೆರೆ ♦ ತಿಳಿಯ ಮನವೇ ! (ತೆಲಗು)



# ಸಕಲ ಜೀವರಾಶಿಗಳಲ್ಲಿಯೂ ಸಾಕ್ಷಿಸ್ವರೂಪನು ಆತ್ಮನೇ.

ಶ್ರುತಿ ‖ " ಸಹಸ್ರಾಂಕುರಶಾಖಾತ್ಮ ♦ ಫಲಪಲ್ಲವಶಾಲಿನಃ
ಅಸ್ಯ ಸಂಸಾರವೃಕ್ಷಸ್ಯ ♦ ಮನೋ ಮೂಲ ಮಿದಂ ಸ್ಥಿತಂ "

(ಮುಕ್ತಿಕೋಪನಿಷತ್ತು, 36ನೇ ಶ್ಲೋಕ.)

ಈ ಸಂಸಾರವೆಂಬ ವೃಕ್ಷಕ್ಕೆ ಮನಸ್ಸೇ ಮುಖ್ಯವಾದ ಬೇರು. ಇದಕ್ಕೆ ರಾಗದ್ವೇಷಾದಿಗಳೇ ಎಲೆಗಳು, ಈಷಣತ್ರಯಗಳೇ ಕೊಂಬೆಗಳು, ಸುಖದುಃಖಾದಿಗಳೇ ಹೂಗಳು, ಮತ್ತು ಸ್ವರ್ಗನರಕಾದಿಗಳೇ ಫಲಗಳಾಗಿರುತ್ತವೆ. ಈ ಸಂಸಾರವೃಕ್ಷಕ್ಕೆ ಮನಸ್ಸೆಂಬ ಬೇರು ಬಹಳ ಆಳಕ್ಕೆ ಹೋಗಿ ಆ ವೃಕ್ಷವನ್ನು ರೂಢವಾಗಿ ನಿಲ್ಲಿಸಿ ಬೆಳೆಸುತ್ತದೆ. ಇಂತಹದನ್ನು ನಾಶಮಾಡಬೇಕೆಂದು ಇಚ್ಛೈಸುವವರು ಮೂಲಬೇರೆಂದೆನಿಸುವ ಈ ಮನಸ್ಸನ್ನು ಕತ್ತರಿಸಬೇಕು. ಈ ಬೇರನ್ನು ಕತ್ತರಿಸಲು ಬ್ರಹ್ಮಜ್ಞಾನವೇ ಹರಿತವಾದ ಕೊಡಲಿಯಾದುದರಿಂದ, ಅದನ್ನು ಸಂಪಾದಿಸಲು ಯತ್ನಿಸಬೇಕು. ಈ ಮನಸ್ಸಿನಿಂದುಂಟಾಗುವ ಬಾಧೆಗಳ ಅನುಭವವನ್ನುಳ್ಳ ಬ್ರಹ್ಮಜ್ಞಾನಿಗಳು ಈ ರಹಸ್ಯವನ್ನು ತಿಳಿದು, ಆ ಸಂಸಾರವೃಕ್ಷವನ್ನು

ಮೂಲೋತ್ಪಾಟನೆ ಮಾಡುವುದಕ್ಕೋಸುಗ, ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡುವುದಕ್ಕೆ ಮನಗೊಟ್ಟಂಥವರಾದರು.

ಶ್ರುತಿ ॥ " ಸಂಕಲ್ಪ ಏವ ತನ್ಮನ್ಯೇ ♦ ಸಂಕಲ್ಪೋಪಶಮೇನ ತತ್ ।
ಶೋಷಯಾಽಽಶು ಯಥಾ ಶೋಷ ♦ ಮೇತಿ ಸಂಸಾರಪಾದಪಃ ॥
ಮನಸೋ ಽ ಭ್ಯುದಯೋ ನಾಶೋ ♦ ಮನೋನಾಶೋ ಮಹೋದಯಃ "

(ಮುಕ್ತಿಕೋಪನಿಷತ್ತು, ಶ್ಲೋ 37-38.)

ಸಂಕಲ್ಪಗಳು ಮನಸ್ಸಿಗೆ ಆಧಾರವು. ಆ ಸಂಕಲ್ಪಗಳನ್ನು ತಗ್ಗಿಸುತ್ತ ಬಂದರೆ ಮನಸ್ಸೂ ಕ್ಷೀಣಿಸುತ್ತ ಬರುತ್ತದೆ. ಹೀಗೆ ಮನಸ್ಸು ಕ್ಷೀಣಿಸುತ್ತ ಬರಲಿಕ್ಕಾಗಿ ಸಂಸಾರವೆಂಬ ವೃಕ್ಷವೂ ಕ್ಷೀಣಿಸುತ್ತ ಬಂದು ಕಡೆಗೆ ನಶಿಸಿಹೋಗುತ್ತದೆ. ಉರಿಯುತ್ತಿರುವ ಅಗ್ನಿಗೆ ಕಟ್ಟಿಗೆಗಳನ್ನು ಹಾಕುವುದು ನಿಲ್ಲಿಸಿದರೆ ಅಗ್ನಿಯು ಆರಿಹೋಗುತ್ತದೆ. ಅದೇರೀತಿಯಲ್ಲಿಯೇ ದಿನೇದಿನೇ ವೃದ್ಧಿಹೊಂದುತ್ತಿರುವ ಮನಸ್ಸಿನಲ್ಲಿ ಕೋರಿಕೆಗಳು ಹುಟ್ಟದಂತೆ ಮಾಡುತ್ತಬಂದರೆ, ಕಡೆಗೆ ಆ ಮನಸ್ಸು ನಶಿಸಿಹೋಗುತ್ತದೆ. ಯಾವಾಗ ಮನಸ್ಸು ನಶಿಸಿಹೋಗುತ್ತದೆಯೋ ಆಗಲೇ ಸಂಸಾರವೆಂಬ ವೃಕ್ಷವೂ ತಾನಾಗಿಯೇ ನಶಿಸಿಹೋಗುತ್ತದೆ.

ಗೀ ॥ ಮನವು ವಿಷಯಂಗಳಿಂ ಸತತ ♦ ವೃದ್ಧಿಯಹುದು,
ನಶಿಸಲವು ಮನವು ತಾ ಲಯ ♦ ಕೆಡೆಗುಡುವುದು,
ಉರಿಯುತಿಹ ವೆಂಕಿ ಕಾಷ್ಠಗ ♦ ಳಿಲ್ಲದಿರಲು,
ಅಣಗಿಪೋಪಂ ತಿರುವು ದೀ ♦ ಮನಪ ಬಗೆಯು ॥ (ತೆಲುಗು)

ಶ್ರುತಿ ॥ " ಜ್ಞಮನೋ ನಾಶ ಮಭ್ಯೇತಿ ♦ ಮನೋಽಜ್ಞಸ್ಯ ಹಿ ಶೃಂಖಲಾ ।
ತಾವ ನ್ನಿಶೀವ ವೇತಾಲಾ ♦ ವಲ್ಗಂತಿ ಹೃದಿ ವಾಸನಾಃ ॥
ಏಕತತ್ವದೃಢಾಽಭ್ಯಾಸಾತ್ ♦ ಯಾವ ನ್ನ ವಿಜತಂ ಮನಃ " ॥

(ಮುಕ್ತಿಕೋಪನಿಷತ್ತು, ಶ್ಲೋ 39-40.)

ಅಜ್ಞಾನಿಗೆ ಮನಸ್ಸು ಸಂಕಲೆಯಂತಿರುವುದು. ಆ ಸಂಕಲೆಯಿಂದ ಮನಸ್ಸು ಎಂದಿಗೆ ತಪ್ಪಿಸಿಕೊಳ್ಳುತ್ತದೆಯೋ, ಆಗಲೇ ಪುರುಷನು ಜ್ಞಾನಿಯಾಗುತ್ತಾನೆ. ಮನೋಜಯಕ್ಕೆ ಬ್ರಹ್ಮನಿಷ್ಠಾಭ್ಯಾಸವು ಅತ್ಯವಶ್ಯಕ.

ಮನೋಜಯವನ್ನು ಹೊಂದುವವರಿವಿಗೂ ಪೂರ್ವಜನ್ಮವಾಸನೆಗಳು ನಿಂತೇ ಇರುತ್ತವೆ. ಈ ವಾಸನೆಗಳಿರುವವರಿವಿಗೂ, ಜನನಮರಣಾದಿ ದುಃಖಗಳು ಸಂಭವಿಸುತ್ತಲೇ ಇರುತ್ತವೆ.

ಶ್ರುತಿ ॥ " ದ್ವಾಸುಪರ್ಣೌ ಭವತೋ ಬ್ರಹ್ಮಣೋಽಹಂ ಸಂಭೂತಃ ತಥೇತರೋ ಭೋಕ್ತಾ ಭವತಿ ♦ ಅನ್ಯೋ ಹಿ ಸಾಕ್ಷೀ ಭವತೀತಿ ♦ ವೃಕ್ಷಧರ್ಮೇ ತೌ ತಿಷ್ಠತಃ ♦ ಅತೋ ಭೋಕ್ತೃಭೋಕ್ತಾರೌ ♦ ಪೂರ್ವೋ ಹಿ ಭೋಕ್ತಾ ಭವತಿ ♦ ತಥೇತರೋಽಭೋಕ್ತಾ ಕೃಷ್ಣೋ ಭವತೀತಿ ♦ ।

(ಗೋಪಾಲೋತ್ತರತಾಪಿನ್ಯುಪನಿಷತ್ತು, 1ನೇ ವಾಕ್ಯ.)

ದೇಹವೆಂಬುವ ವೃಕ್ಷದ ಮೇಲ್ಭಾಗದಲ್ಲಿ ಎರಡು ಅಂದವಾದ ಪಕ್ಷಿಗಳು ವಾಸಿಸುತ್ತವೆ. ಅವುಗಳಲ್ಲಿ ಒಂದು ಜೀವಾತ್ಮನೆಂದೂ, ಮತ್ತೊಂದು ಪರಮಾತ್ಮನೆಂದೂ ಕರೆಯಲ್ಪಡುತ್ತವೆ. ಜೀವಾತ್ಮನೆಂಬ ಪಕ್ಷಿಯು ತನ್ನ ಶರೀರ ಮತ್ತು ಇಂದ್ರಿಯಗಳನ್ನು 'ತಾನೇ' ಎಂದು ಎಣಿಸುತ್ತ ಕರ್ಮಫಲಗಳಾದ ಸುಖದುಃಖಗಳನ್ನು ಅನುಭವಿಸುತ್ತಲಿರುವುದು. ಪರಮಾತ್ಮನೆಂಬ ಎರಡನೆಯ ಪಕ್ಷಿಯಾದರೋ, ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲೆಣಿಸದೆ ಸಾಕ್ಷಿಮಾತ್ರವಾಗಿಯೇ ಇರುತ್ತದೆ.

ಶ್ರುತಿ॥" ತೇಷಾಂ ಮನುಷ್ಯಾದೀನಾಂ ಪಂಚಭೂತಸಮವಾಯ ಶ್ಶರೀರಂ♦ಜ್ಞಾನ-ಕರ್ಮೇಂದ್ರಿಯೈಃ ಜ್ಞಾನವಿಷಯೈಃ ಪ್ರಾಣಾದಿಪಂಚವಾಯು ಮನೋ ಬುದ್ಧಿ ಚಿತ್ತಾಹಂಕಾರೈಃ ಸ್ಥೂಲಕಲ್ಪಿತೈಃ ಸೋಽಪಿ ಸ್ಥೂಲಪ್ರಕೃತಿ ರಿತ್ಯುಚ್ಯತೇ ♦ ಜ್ಞಾನಕರ್ಮೇಂದ್ರಿಯೈಃ ಜ್ಞಾನವಿಷಯೈಃ ಪ್ರಾಣಾದಿ ಪಂಚವಾಯುಮನೋಬುದ್ಧಿಭಿಶ್ಚ ಸೂಕ್ಷ್ಮಸ್ಥೋಽಪಿ ಲಿಂಗ ಮೇವೇತ್ಯುಚ್ಯತೇ♦"॥

(ಯೋಗಚೂಡಾಮಣ್ಯುಪನಿಷತ್ತು, 72ನೇ ವಾಕ್ಯ.)

ಸ್ಥೂಲಶರೀರವು ಇಪ್ಪತ್ತೈದು ತತ್ವಗಳಿಂದಲೂ, ಸೂಕ್ಷ್ಮಶರೀರವು ಹದಿನೇಳು ತತ್ವಗಳಿಂದಲೂ ಏರ್ಪಟ್ಟಿವೆ. ಈ ಎರಡುವಿಧ ಶರೀರಗಳಲ್ಲಿ ಸೂಕ್ಷ್ಮಶರೀರಕ್ಕೆ ಬೇಕಾದವುಗಳಾವುವೆಂದರೆ, ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಪ್ರಾಣಾದಿ ಪಂಚವಾಯುಗಳು ಮತ್ತು ಮನೋಬುದ್ಧಿಗಳೆರಡು, ಈ ಹದಿನೇಳು ತತ್ವಗಳು ಸೇರಿಯೇ ಸೂಕ್ಷ್ಮಶರೀರ

ವಾಗುತ್ತದೆ. ಈ ಸೂಕ್ಷ್ಮಶರೀರವು ಸ್ಥೂಲಶರೀರದಂತೆ ಪಂಚಭೂತ ಪಂಚೀಕರಣಗಳಿಂದಾದುದಲ್ಲವು. ಆದುದರಿಂದಲೇ ಈ ಸೂಕ್ಷ್ಮಶರೀರವು ಕಣ್ಣಿಗೆ ಕಾಣಬರುವುದಿಲ್ಲ.

ಶ್ಲೋ || ಸರ್ವವ್ಯಾಪೃತಿಕರಣಂ ಲಿಂಗ ♦ ಮಿದಂ ಸ್ಯಾಚ್ಚಿದಾತ್ಮನಃ ಪುಂಸಃ |
ವಾಸ್ಯಾದಿಕ ಮಿವ ತಕ್ಷಣ ಸ್ತೇ ♦ ನೈವಾತ್ಮಾ ಭವ ತ್ಯಸಂಗೋಽಯಂ ||

ಎಂಬಂತೆ, ಜೀವನು ಸೂಕ್ಷ್ಮಶರೀರ ಸಂಬಂಧವನ್ನು ಹೊಂದಿರುವುದರಿಂದ 'ನಾನು' ಎಂಬ ಅಹಂಕಾರದಿಂದ ಕೂಡಿಕೊಂಡು, ಸ್ಥೂಲಶರೀರದ ಮೂಲಕ ಸಮಸ್ತ ಕರ್ಮಗಳನ್ನು ಮಾಡುತ್ತ, ಅವುಗಳಿಂದುಂಟಾಗುವ ಫಲಗಳನ್ನನುಭವಿಸುತ್ತ ತಾನು ಕರ್ತನಂತೆ ಇರುತ್ತಾನೆ. ಹೇಗೆಂದರೆ, ಮನೆಯನ್ನು ಕಟ್ಟುವವನು, ಮನೆ ಕಟ್ಟುವುದಕ್ಕೆ ಅವಶ್ಯಕವಾದ ಸಾಮಾನುಗಳನ್ನೆಲ್ಲಾ ಶೇಖರಿಸಿಕೊಂಡು ಅವುಗಳ ಮೂಲಕ ಆ ಕಾರ್ಯವನ್ನು ನಡೆಸುತ್ತ, ಆ ಸಾಮಾನುಗಳಿಗೆಲ್ಲ ತಾನೇ ಕರ್ತನಾಗುತ್ತಾನೆ. ಆದರೆ, ಕೆಲಸಕ್ಕೆ ಬೇಕಾದ ಸಲಕರಣೆಗಳಿಲ್ಲದಿದ್ದಲ್ಲಿ, ಆ ಕೆಲಸವನ್ನು ಅವನು ಮಾಡಲಾರನು; ಮತ್ತು ತಾನು ಕರ್ತೃತ್ವವನ್ನು ಪಡೆಯಲಾರನು. ಹಾಗೆಯೇ ಜೀವಾತ್ಮನು ಸೂಕ್ಷ್ಮಶರೀರದ ಮೂಲಕ ಕರ್ಮಗಳನ್ನು ಮಾಡುತ್ತ ತಾನು ಕರ್ತನಾಗುತ್ತಾನೆ. ಯಾವಾಗ ಜೀವಾತ್ಮನಿಗೆ ಸೂಕ್ಷ್ಮಶರೀರ ಸಂಬಂಧವು ನಾಶವಾಗುತ್ತದೆಯೋ ಆಗ ಅವನಿಗೆ ಅಹಂಕಾರಗಳೆಂಬುದಿರುವುದಿಲ್ಲ. ಅಹಂಕಾರವಿಲ್ಲದಿದ್ದರೆ ತಾನು 'ಕರ್ತನು' ಎಂಬ ಬುದ್ಧಿಯು ಹುಟ್ಟಲಾರದು. ಅಂದರೆ ಈ ಶರೀರಸಂಬಂಧವಾದ ಯಾವುದೂ ಆತ್ಮನಾದ ತನಗಂಟದು' ಎಂದು ಭಾವವು. ಈ ಸೂಕ್ಷ್ಮಶರೀರಕ್ಕೆ ಲಿಂಗಶರೀರವೆಂಬ ಹೆಸರೂ ಉಂಟು.

ಶ್ರುತಿ||"ಜೀವಃಪಂಚವಿಂಶಕಃ♦ಸ್ವಕಲ್ಪಿತಚತುರ್ವಿಂಶತಿತತ್ವಂ ಪರಿತ್ಯಜ್ಯ,ಷಡ್ವಿಂಶಃ 'ಪರಮಾತ್ಮಾಽಹ'ಮಿತಿ ನಿಶ್ಚಯಬುದ್ಧ್ಯಾ ಜೀವನ್ಮುಕ್ತೋ ಭವತಿ." ||
(ಮಂಡಲಬ್ರಾಹ್ಮಣೋಪನಿಷತ್ತು, 4ನೇ ವಾಕ್ಯ.)

ಜೀವಾತ್ಮನು ಇಪ್ಪತ್ತೈದು ತತ್ವಗಳನ್ನೂ ಬಿಟ್ಟು, ಇಪ್ಪತ್ತಾರನೆಯ ತತ್ವವಾದ 'ಪರಮಾತ್ಮನೇ ನಾನು' ಎಂಬ ಬುದ್ಧಿಯಿಂದಿರುವವನಾದರೆ

ಜೀವನ್ಮುಕ್ತನಾಗುತ್ತಾನೆ ಎಂಬುದೇ ಮೇಲಿನ ಶ್ರುತ್ಯರ್ಥ. ಜೀವನಾದ ನಾನು ದೇಹದಲ್ಲಿದ್ದರೂ ಯಾವುದನ್ನೂ ಅಂಟದೆ ಇರುತ್ತೇನೆ. ಆದುದರಿಂದ ದೇಹವೂ, ಇಂದ್ರಿಯಗಳೂ, ಸಕಲ ವಿಷಯಭೋಗಗಳೂ ನನ್ನನ್ನೆಂದಿಗೂ ಮುಟ್ಟವು. ಮತ್ತು ನಾನೆಂತಹನೆಂದರೆ, ಅಗ್ನಿಯಲ್ಲಿ ಹುಟ್ಟಿದ ಕಿಡಿಗಳಂತೆ ಪರಬ್ರಹ್ಮನಿಂದ ಅಣುಸ್ವರೂಪವಾಗಿ ಬಂದು ದೇಹದಲ್ಲಿ ಸೇರಿರುವವನಾಗಿದ್ದೇನೆ. ಆದುದರಿಂದ ಅಗ್ನಿಕಣಗಳು ಅಗ್ನಿಯ ಭಾಗವು ಹೇಗೋ, ಮತ್ತು ಅವೆರಡಕ್ಕೂ ಹೇಗೆ ಭೇದವಿಲ್ಲವೋ, ಹಾಗೆಯೇ ನನಗೂ ಮತ್ತು ಪರಮಾತ್ಮನಿಗೂ ಯಾವವಿಧವಾದ ಭೇದವೆಂಬುದೇ ಇಲ್ಲ. ಈ ಸ್ವರೂಪವುಳ್ಳ ನನ್ನಲ್ಲಿ ಯಾವ ಪುರುಷನು ತನ್ನ ಮನಸ್ಸನ್ನು ಐಕ್ಯ ಮಾಡುತ್ತಾನೆಯೋ ಅಂಥವನು, ನನ್ನ ನಿಜಸ್ವರೂಪವನ್ನೇ ಹೊಂದುವನು. ಮತ್ತೆ ಅವನು ಜನನಮರಣಾದಿಗಳಲ್ಲಿ ಪ್ರವೇಶಿಸನು. ಅಂದರೆ ಅವನು ಜೀವ ಬ್ರಹ್ಮೈಕ್ಯವನ್ನು ಹೊಂದಿದ ಮಹಾತ್ಮನೆಂದು ಭಾವವು.

ಶ್ರುತಿ ॥ " ನಾಹಂ ಬ್ರಹ್ಮೇತಿ ಜಾನಾತಿ ♦ ತಸ್ಯ ಮುಕ್ತಿ ರ್ನ ಜಾಯತೇ " ॥

(ಪೈಂಗಳೋಪನಿಷತ್ತು, 13ನೇ ವಾಕ್ಯ.)

ಜೀವಾತ್ಮನಾದ ನನ್ನನ್ನು ಪರಮಾತ್ಮಸ್ವರೂಪನೆಂಬುದಾಗಿ ಯಾರು ತಿಳಿದುಕೊಳ್ಳುವುದಿಲ್ಲವೋ, ಅಂಥವರು ಎಂದಿಗೂ ಮುಕ್ತಿಯನ್ನು ಹೊಂದಲಾರರು.

ಶ್ರುತಿ ॥ " ಅನ್ಯವಿದ್ಯಾಪರಿಜ್ಞಾನ ♦ ಮವಶ್ಯಂ ನಶ್ವರಂ ಭವೇತ್ ।
ಬ್ರಹ್ಮವಿದ್ಯಾಪರಿಜ್ಞಾನಂ ♦ ಬ್ರಹ್ಮಪ್ರಾಪ್ತಿಕರಂ ಸ್ಥಿತಂ " ॥

(ಶುಕರಹಸ್ಯೋಪನಿಷತ್ತು, 14ನೇ ವಾಕ್ಯ.)

ಬ್ರಹ್ಮವಿದ್ಯೆಯಿಂದ ಜ್ಞಾನವನ್ನು ಸಂಪಾದಿಸಿದಲ್ಲಿ ಅದರಿಂದ ಬ್ರಹ್ಮಪದವಿಯನ್ನು ಪಡೆಯಬಹುದು. ಈ ಬ್ರಹ್ಮವಿದ್ಯೆಯನ್ನು ಬಿಟ್ಟು ಪ್ರಾಪಂಚಿಕಸಂಬಂಧವಾದ ಮತ್ತೆ ಯಾವ ವಿದ್ಯೆಯನ್ನು ಸಂಪಾದಿಸಿದರೂ ಕಾಮ್ಯಕರ್ಮವು ಮಾತ್ರ ಸಿದ್ಧಿಸುವುದು. ಅಂದರೆ ಜನನಮರಣರೂಪವಾದ ಸಂಸಾರಫಲವನ್ನು ಮಾತ್ರ ಹೊಂದುವನು. ಇದು ನಶ್ವರವಾದ ಫಲ. ಶಾಶ್ವತವಾದ ಫಲವನ್ನು ಅಂದರೆ ಸಾಯುಜ್ಯಪದವಿಯನ್ನು ಕೊಡುವುದು

ಬ್ರಹ್ಮವಿದ್ಯೆಯೇ ಸರಿ. ಇಂತಹ ಬ್ರಹ್ಮವಿದ್ಯೆಯನ್ನು ಸಂಪಾದಿಸಬೇಕಾದರೂ ಪೂರ್ವಜನ್ಮದ ಪುಣ್ಯಕರ್ಮಫಲಗಳು ಬೇಕೇಬೇಕು. ಅದಿಲ್ಲದಿದ್ದರೆ ಬ್ರಹ್ಮಜ್ಞಾನವು ಸಿದ್ಧಿಸುವುದು ಬಹು ಕಷ್ಟ. ಜೀವಿಯು ಪ್ರತಿಯೊಂದು ಜನ್ಮದಲ್ಲಿಯೂ ನಾಲ್ಕು ಆಶ್ರಮಗಳನ್ನು ಹೊಂದಬೇಕಾದುದಿದೆ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಮತ್ತು ಸನ್ಯಾಸವೆಂಬಿವೇ ನಾಲ್ಕು ಆಶ್ರಮಗಳು. ಜೀವಿಯು ತಾನು ದೇಹವನ್ನು ಪಡೆದಮೇಲೆ ಆಯಾಯಾ ಆಶ್ರಮಗಳಲ್ಲಿ ಅವಕ್ಕೆ ತಕ್ಕ ಧರ್ಮಗಳನ್ನು ಕ್ರಮವಾಗಿ ನಡೆಸಬೇಕು.

ಶ್ಲೋ ॥ ಶೈಶವೇಽಭ್ಯಸ್ತವಿದ್ಯಾನಾಂ ♦ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ♦ ಯೋಗೇನಾಂತೇ ತನುತ್ಯಜಾಂ ॥

(ರಘುವಂಶ, 1ನೇ ಸರ್ಗ, 8ನೇ ಶ್ಲೋಕ.)

ಬ್ರಹ್ಮಚರ್ಯದಲ್ಲಿ ಗುರುಕುಲವಾಸಮಾಡಿ ಬ್ರಹ್ಮಜ್ಞಾನಕ್ಕೆ ಹಾದಿಗಳಾದ ವಿದ್ಯೆಯನ್ನು ಸದ್ಗುರುಪ್ರಸಾದದಿಂದ ಪಡೆಯಬೇಕು. ಗೃಹಸ್ಥಾಶ್ರಮಧರ್ಮವನ್ನು ಸ್ವೀಕರಿಸಿದಮೇಲೆ ಧರ್ಮದಿಂದ ಪ್ರಜೋತ್ಪತ್ತಿ ಮತ್ತು ಪ್ರಜಾಪಾಲನಾದಿ ಕಾರ್ಯಗಳನ್ನು ನಡೆಸುವ ಸಲುವಾಗಿ, ಯೋಗ್ಯಳಾದ ಗೃಹಿಣಿಯ ಕೈಹಿಡಿದು ಪುಣ್ಯಕರ್ಮಗಳನ್ನು ಮಾಡುವುದಕ್ಕೋಸ್ಕರ 'ಗೃಹಮೇಧಿಕ' ಎಂಬ ಯಜ್ಞವನ್ನು ಶಾಸ್ತ್ರನಿಯಮವನ್ನನುಸರಿಸಿ ನಡೆಸುತ್ತ ಬರಬೇಕು. ಈ ಗೃಹಸ್ಥಾಶ್ರಮಧರ್ಮದಲ್ಲಿರುವಾಗ ಜೀವಿಯು, ಹೆಂಡತಿಮಕ್ಕಳು ಧನಧಾನ್ಯವಸ್ತುವಾಹನಗೃಹಾರಾಮ ಮೊದಲಾದುವುಗಳಿಂದ ತಾನು ಕೂಡಿದವನಾಗಿದ್ದರೂ, ಅದರಲ್ಲಿಯೇ ಮನಸ್ಸನ್ನು ಲೀನಮಾಡದೆ, ಪರಮಾತ್ಮಧ್ಯಾನಕ್ಕೆಡೆಗೊಟ್ಟು, ನೀರಿನ ಮೇಲಿನ ತೈಲಬಿಂದುವಿನಂತೆ ಅಂಟಿಅಂಟದೆ ಬಹಳ ಎಚ್ಚರಿಕೆಯಿಂದ ವರ್ತಿಸಬೇಕು. ಮೂರನೆಯದಾದ ವಾನಪ್ರಸ್ಥಾಶ್ರಮದಲ್ಲಿ, ಮಕ್ಕಳುಮನೆಮಠಗಳಲ್ಲಿ ಆಸೆಯನ್ನು ಸಂಪೂರ್ಣವಾಗಿ ತೊರೆದು, ತನ್ನ ಮನೋಸ್ಥಿತಿಯನ್ನೇ ಅನುಕರಿಸುವ ತನ್ನ ಹೆಂಡತಿಯೊಡಗೂಡಿ ನಿರ್ಜನವಾದ ಕಾಡನ್ನು ಸೇರಿ, ನಿಶ್ಚಲವಾದ ಮನಸ್ಸಿನಿಂದ ಪರಮಾತ್ಮಧ್ಯಾನವನ್ನು ಮಾಡುತ್ತ, ತನಗೆ ಮುಂದೆ ಉತ್ತಮಜನ್ಮವು ದೊರಕುವಂತೆ ಮಾಡುವುದಕ್ಕೆ ಯತ್ನಿಸಬೇಕು. ಈ ಸ್ಥಿತಿಯು ಮೀರಿದಮೇಲೆ ಅಂದರೆ ವಾನಪ್ರಸ್ಥವೆಂಬ ಆ

ಮೂರನೆಯ ಆಶ್ರಮವನ್ನು ಕಳೆದಮೇಲೆ ನಾಲ್ಕನೆಯದಾದ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಅಂದರೆ ಮನಸ್ಸಿನಲ್ಲಿ ಯಾವ ಕೋರಿಕೆಗಳೂ ಹುಟ್ಟದಿರುವಂತೆ ಮಾನಸಸನ್ಯಾಸವನ್ನು ಧರಿಸಿ, ಶ್ವಾಸಧಾರಣೆ ಮಾಡಿ ಯೋಗದಿಂದ ಮನಸ್ಸನ್ನು ಅತ್ತಿತ್ತ ಕದಲದೆ ಸ್ಥಿರೀಕರಿಸಿ, ನಶ್ವರವಾದ ಈ ಕಳೇಬರವನ್ನು ಬಿಟ್ಟುಬಿಡಬೇಕು. ಮನಸ್ಸನ್ನು ಬ್ರಹ್ಮನೊಳಗೈಕ್ಯ ಮಾಡಿ ಅನಾಸಕ್ತಿಯಿಂದ ಈ ದೇಹವನ್ನು ಬಿಡುವುದೇ 'ವಿದೇಹಮುಕ್ತಿ'ಯು. ಇದೇ ಜೀವಿಯ ಕಡೆಯ ಸ್ಥಿತಿಯು. ಸನ್ಯಾಸವೆಂದರೆ ಬಾಹ್ಯಾಡಂಬರದಿಂದ ಕಾಷಾಯವಸ್ತ್ರಧಾರಣೆಯನ್ನು ಮಾಡಿಕೊಂಡು ಯೋಗಿಯಂತೆ ನಟನೆಮಾಡುವುದಲ್ಲ. ಶ್ರೀ ಶಂಕರಾಚಾರ್ಯರು ಮಿಥ್ಯಾಯೋಗಿಯ ಯೋಗ್ಯತೆಯನ್ನು ಹೀಗೆಂದು ಹೇಳಿರುತ್ತಾರೆ.

ಶ್ಲೋ ॥ ಜಟಿಲೋ ಮುಂಡೀ ಲುಂಛಿತಕೇಶಃ ♦ ಕಾಷಾಯಾಂಬರ ಬಹುಕೃತವೇಷಃ ।
ಪಶ್ಯನ್ನಪಿ ಚ ನ ಪಶ್ಯತಿ ಮೂಢೋ ♦ ಉದರನಿಮಿತ್ತಂ ಬಹುಕೃತವೇಷಃ ॥

(ಭಜಗೋವಿಂದ ಸ್ತೋತ್ರ.)

ತಲೆಯಲ್ಲಿ ಜಡೆಗಳನ್ನು ಬೆಳೆಸಿ ಇಲ್ಲವೇ ತಲೆಯನ್ನು ಬೋಳಿಸಿ, ಕಾವಿಯ ಬಟ್ಟೆಗಳನ್ನು ಧರಿಸಿ, ಅನೇಕ ವಿಧವಾದ ಸನ್ಯಾಸಿವೇಷಗಳನ್ನು ಧರಿಸಿಕೊಂಡು, ಆ ಧರ್ಮಗಳನ್ನು ಅನುಸರಿಸುವಂತೆ ಯಾವನು ನಟಿಸುತ್ತಾನೆಯೋ, ಅವನು ನಿಜವಾದ ಸನ್ಯಾಸಿಯಲ್ಲ; ಮತ್ತು ಅವು ಅವನು ತನ್ನ ಹೊಟ್ಟೆಯ ಪಾಡಿಗೆ ಧರಿಸುವ ವೇಷಗಳು, ಎಂದು ತಿಳಿಯಬೇಕು.

ಮೇಲೆ ಹೇಳಿದ ನಾಲ್ಕು ಆಶ್ರಮಗಳಲ್ಲಿ 'ಗೃಹಸ್ಥಾಶ್ರಮ'ವೇ ಬಹು ಶ್ರೇಷ್ಠವಾದುದು. ಅವುಗಳ ಧರ್ಮಗಳನ್ನು ಕ್ರಮವಾಗಿ ಅನುಸರಿಸುವುದು ಬಹು ಕಷ್ಟ. ಇದಕ್ಕೆ ಮನುಸ್ಮೃತಿ ಪ್ರಮಾಣವು ಈ ಕೆಳಗೆ ಕೊಟ್ಟಿದೆ.

ಶ್ಲೋ ॥ ಸರ್ವೇಷಾ ಮಪಿ ಚೈತೇಷಾಂ ♦ ವೇದಸ್ಮೃತಿವಿಧಾನತಃ ।
ಗೃಹಸ್ಥ ಉಚ್ಯತೇ ಶ್ರೇಷ್ಠಃ ♦ ಸ ತ್ರೀ ನೇತಾರ್ ಬಿಭರ್ತಿ ಹಿ ॥

ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಶ್ರೇಷ್ಠವಾದುದು ಎಂಬುದಕ್ಕೆ ಶೃತಿಸ್ಮೃತಿಗಳ ಆಧಾರಗಳುಂಟು. ಏತಕ್ಕೆಂದರೆ, ಆ ಗೃಹಸ್ಥನೇ

ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ಉಳಿದ ಮೂರು ಆಶ್ರಮಗಳಲ್ಲಿರುವವರಿಗೆ ಅನ್ನೋದಕಗಳನ್ನೂ, ಉಳಿದ ಸಲಕರಣೆಗಳನ್ನೂ ಒದಗಿಸಿ ಅವರ ಧರ್ಮಗಳನ್ನು ಪಾಲನೆ ಮಾಡುವುದಕ್ಕೆ ಸಹಕಾರಿ. ಇದೂ ಅಲ್ಲದೆ,

ಶ್ಲೋ॥ ಯಥಾ ನದೀನದಾ ಸ್ಸರ್ವೇ ♦ ಸಾಗರೇ ಯಾಂತಿ ಸಂಸ್ಥಿತಂ ।
ತಥೈವಾಶ್ರಮಿಣ ಸ್ಸರ್ವೇ ♦ ಗೃಹಸ್ಥೇ ಯಾಂತಿ ಸಂಸ್ಥಿತಂ ॥

(ಮನುಸ್ಮೃತಿ)

ಪೂರ್ವಸಮುದ್ರಕ್ಕೆ ಬೀಳುವ ಗಂಗಾ, ಬ್ರಹ್ಮಪುತ್ರಾ, ಗೋದಾವರೀ ನದಿಗಳೂ ಮತ್ತು ಪಶ್ಚಿಮಸಮುದ್ರವನ್ನು ಸೇರುವ ಸಿಂಧು ಮೊದಲಾದ ಗಂಡು ನದಿಗಳೂ, ಯಾವರೀತಿಯಲ್ಲಿ ಆಯಾ ಸಮುದ್ರಕ್ಕೆ ಸೇರಿ ಅದರಲ್ಲಿ ಬೆರೆಯುತ್ತದೆಯೋ, ಹಾಗೆಯೇ, ಬ್ರಹ್ಮಚರ್ಯ, ವಾನಪ್ರಸ್ಥ ಸನ್ಯಾಸಾಶ್ರಮಗಳಲ್ಲಿರುವವರು ಗೃಹಸ್ಥಾಶ್ರಮಧರ್ಮದಲ್ಲಿರುವವರನ್ನೇ ಆಶ್ರಯಿಸಿಕೊಂಡಿರುತ್ತಾರೆ. ಆದುದರಿಂದಲೇ ಗೃಹಸ್ಥಾಶ್ರಮವು ಉಳಿದವುಗಳಿಗಿಂತಲೂ ಉತ್ತಮವಾದುದಾಗಿದೆ. ಆ ಗೃಹಸ್ಥನಿರಬೇಕಾದ ಪದ್ಧತಿಯನ್ನು ಕುರಿತು ಮನುವು ತನ್ನ ಧರ್ಮಶಾಸ್ತ್ರದಲ್ಲಿ ಈ ರೀತಿಯಾಗಿ ಹೇಳುತ್ತಿದ್ದಾನೆ.

ಶ್ಲೋ॥ " ಧೃತಿಃ ಕ್ಷಮಾ ಶುಚಿ ಸ್ಸ್ಥೇಯಂ ♦ ಶೌಚ ಮಿಂದ್ರಿಯನಿಗ್ರಹಃ ।
ಧೀ ರ್ವಿದ್ಯಾ ಸತ್ಯ ಮಕ್ರೋಧೋ ♦ ದಶಕಂ ಧರ್ಮಲಕ್ಷಣಂ ॥

ದಶಲಕ್ಷಣಾನಿ ಧರ್ಮಸ್ಯ ♦ ಯೇ ವಿಪ್ರಾ ಸ್ಸಮಧೀಯತೇ ।
ಅಧೀತ್ಯ ಚಾನುವರ್ತಂತೇ ♦ ತೇ ಯಾಂತಿ ಪರಮಾಂ ಗತಿಂ " ॥

(ಮನುಸ್ಮೃತಿ)

ಧೈರ್ಯ, ಕ್ಷಮೆ, ಶುಚಿತ್ವ, ಚಿತ್ತೈಕಾಗ್ರತೆ ಅಂದರೆ ಒಂದೇ ವಿಧವಾದ ಮನಸ್ಸು, ಇಂದ್ರಿಯನಿಗ್ರಹ, ಸೂಕ್ಷ್ಮಬುದ್ಧಿ, ಸದ್ವಿದ್ಯೆ, ಸತ್ಯ, ಕೋಪವಿಲ್ಲದಿರುವುದು, ಈ ಹತ್ತೂ ಧರ್ಮಲಕ್ಷಣಗಳು. ಯಾವ ಬ್ರಾಹ್ಮಣರು ಅಂದರೆ ಬ್ರಹ್ಮಜ್ಞಾನಾಭಿಕಾಂಕ್ಷಿಗಳು ಧರ್ಮದ ಈ ಹತ್ತು

ಲಕ್ಷಣಗಳನ್ನೂ ಅಧ್ಯಯನಮಾಡುತ್ತಾರೆಯೋ ಮತ್ತು ಅವುಗಳನ್ನು ತಾವು ಅನುಸರಿಸುತ್ತಾರೆಯೋ, ಅವರೇ ಪರಮಗುರುವನ್ನು ಹೊಂದುವುದಕ್ಕೆ ಯೋಗ್ಯರು. ಈ ಧರ್ಮಗಳೆಲ್ಲವೂ ಗೃಹಸ್ಥನು ಅತ್ಯವಶ್ಯಕವಾಗಿ ಅನುಸರಿಸಬೇಕಾದವುಗಳು. ಇವುಗಳನ್ನು ಅಕ್ಷರಶಃ ಅನುಸರಿಸಿ ನಡೆಯುವವನೇ ಮನೋಸನ್ಯಾಸವನ್ನು ಹೊಂದಿದ ಮಹಾ ಯೋಗಿಯೆಂದು ಕರೆಯಲ್ಪಡುತ್ತಾನೆ. ಪರಮಾತ್ಮನು ಅಂತರ್ಯಾಮಿಯಾಗಿದ್ದು ಜೀವಿಗಳನ್ನು ಮಾಯೆಯಿಂದ ಮೋಹಿಸುವಂತೆ ಮಾಡಿ ತಾನು ಸೂತ್ರಧಾರನಂತೆ ಇದ್ದು ಆಯಾ ಜೀವಿಗಳನ್ನು ಆಡಿಸುತ್ತಿದ್ದಾನೆಯೇ ಹೊರತು, ತಾನು ಮಾತ್ರ ಆ ಮಾಯೆಯ ಸೋಂಕನ್ನು ಹೊಂದನು. ಇದಕ್ಕೆ ಕಠೋಪನಿಷತ್ತಿನ ಪ್ರಮಾಣವು ಹಿಂದೆಯೇ ಹೇಳಿದೆ. ಅದರ ಸಾರಾಂಶವೇನೆಂದರೆ, ಲೋಕದಲ್ಲಿರುವ ಸುಗುಂಧ ದುರ್ಗಂಧ ವಸ್ತುಗಳಲ್ಲಿ ಸೂರ್ಯನ ರಶ್ಮಿಗಳು ಪಸರಿಸಿದ್ದರೂ ಆ ಸಂಬಂಧವಾದ ಸುಗಂಧ ದುರ್ಗಂಧಗಳನ್ನು ಆ ರಶ್ಮಿಗಳು ಯಾವರೀತಿಯಲ್ಲಿ ಹೊಂದಲಾರವೋ ಅದೇ ರೀತಿಯಲ್ಲಿ ಆತ್ಮನು ಸಮಸ್ತ ದೇಹಗಳನ್ನಾವರಿಸಿದ್ದರೂ, ಆಯಾ ದೇಹಸಂಬಂಧವಾದ ಸುಖದುಃಖಾದಿಗಳ ವಾಸನೆಗಳು ಆತ್ಮನನ್ನುಂಟಲಾರವು.

ದೇಹಿಯು ತಾನು ಜನ್ಮವೆತ್ತಿದಮೇಲೆ ಪ್ರತಿಜನ್ಮದಲ್ಲಿಯೂ ಮಾಡುತ್ತ ಬರುವ ಕೆಲಸಗಳು ಮಾಯೆಯಿಂದ ನಡೆಯುವುವೇ ಹೊರತು, ಆತ್ಮನು ಮಾಡುವವನೂ ಅಲ್ಲ, ಮಾಡುವಂತೆ ಪ್ರೇರಿಸುವವನೂ ಅಲ್ಲ. ಆದರೆ ಇವೆಲ್ಲಕ್ಕೂ ಆತನು ಸಾಕ್ಷಿಭೂತನಾಗಿರುವವನು. ಈ ವಿಷಯವನ್ನು ಕುರಿತು ಸೀತಾದೇವಿಯು ಆಂಜನೇಯನಿಗೆ ತತ್ವೋಪದೇಶವನ್ನು ಮಾಡುವ ಸಮಯದಲ್ಲಿ ಪರಮಾತ್ಮಸ್ವರೂಪಿಯಾದ ರಾಮನ ವಿಷಯವಾಗಿ ಈ ಮುಂದೆ ಹೇಳುವ ರೀತಿಯಲ್ಲಿ ಹೇಳಿರುತ್ತಾಳೆ.

ಶ್ಲೋ॥ ರಾಮೋ ನ ಗಚ್ಛತಿ ನ ತಿಷ್ಠತಿ ನಾನುಶೋಚ–।
ತ್ಯಾಕಾಂಕ್ಷತೇ ತ್ಯಜತಿ ನೋ ನ ಕರೋತಿ ಕಿಂಚಿತ್ ॥
ಆನಂದಮೂರ್ತಿ ರಚಲಃ ಪರಿಣಾಮಹೀನಃ ।
ಮಾಯಾಗುಣಾ ನನುಗತೋ ಹಿ ತಥೈವ ಭಾತಿ ॥

(ಅಧ್ಯಾತ್ಮ ರಾಮಾಯಣ, 1ನೇ ಸರ್ಗ.)

ಪರಮಾತ್ಮನಾದ ಶ್ರೀರಾಮನು ಎಲ್ಲಿಗೂ ಹೋಗುವವನಲ್ಲ, ಸುಮ್ಮನೇ ಕುಳಿತಿರುವವನೂ ಅಲ್ಲ, ವ್ಯಸನಪಡುವವನೂ ಅಲ್ಲ, ಯಾವ ಕೆಲಸವನ್ನು ಮಾಡುವವನೂ ಅಲ್ಲ, ದುಃಖದಿಂದ ವೆಥೆ ಪಡುವವನೂ ಅಲ್ಲ, ಸುಖದಿಂದ ಹಿಗ್ಗುವವನೂ ಅಲ್ಲ, ಯಾವ ಕೋರಿಕೆಯೂ ಅವನಿಗಿಲ್ಲ. ಅಂದರೆ ಯಾವುದನ್ನೂ ಆತನು ಬಯಸುವವನೂ ಅಲ್ಲ. ಆದರೆ ಆ ಪರಮಾತ್ಮನು ಸದಾ ಆನಂದಮೂರ್ತಿಯಾಗಿ, ಚಲಿಸದಿರುವವನಾಗಿ, ನಾಶರಹಿತನಾದ ಶಾಶ್ವತವ್ಯಕ್ತಿಯಾಗಿರುತ್ತಾನೆ. ಆದರೆ ಮಾಯೆಯ ಗುಣಗಳಿಂದ ಕೂಡಿ ಬೇರೆ ಬೇರೆ ಆಕಾರವನ್ನು ಹೊಂದಿ ಬೇರೆ ಕೆಲಸಗಳನ್ನು ಮಾಡುತ್ತಿರುವಂತೆ ಕಾಣಬರುತ್ತಾನೆ. ಶುದ್ಧನಾದ ಪರಮಾತ್ಮನು ನಿಸ್ಸಂಗ ನಿರ್ವಿಕಾರ ನಿರ್ಗುಣನಾದುದರಿಂದ ಅವನು ಯಾವ ಕೆಲಸವನ್ನೂ ಮಾಡುವುದಿಲ್ಲ. ಆದರೆ, ಪ್ರಕೃತಿಪುರುಷರ ನಿಜತತ್ವವನ್ನು ತಿಳಿಯದ ಅಜ್ಞರು ಪ್ರಕೃತಿ ಸಂಬಂಧದಿಂದ ಮಾಯಾಕೃತ ಕಾರ್ಯಗಳನ್ನು ಶುದ್ಧನಾದ ಆತ್ಮನಲ್ಲಿ ಆರೋಪಿಸುತ್ತಾರೆಂಬುದೇ ಮೇಲಿನ ಶ್ಲೋಕದ ಭಾವಾರ್ಥ. ಪರಮಾತ್ಮನ ನಿಜತತ್ವವನ್ನು ಕುರಿತು ಭಗವದ್ಗೀತೆ 5ನೇ ಅಧ್ಯಾಯ 15ನೇ ಶ್ಲೋಕದಲ್ಲಿ ಹೀಗೆಂದು ಹೇಳಿದೆ.

ಶ್ಲೋ || ನಾದತ್ತೇ ಕಸ್ಯಚಿತ್ ಪಾಪಂ ♦ ನ ಚೈವ ಸುಕೃತಂ ವಿಭುಃ |
ಅಜ್ಞಾನೇ ನಾವೃತಂ ಜ್ಞಾನಂ ♦ ತೇನ ಮುಹ್ಯಂತಿ ಜಂತವಃ ||

ಕೃಷ್ಣ :—ಆಯಾ ಜೀವಿಗಳು ಮಾಡುವಂಥ ಪುಣ್ಯಪಾಪ ಕರ್ಮಗಳ ಸಂಬಂಧವು ಆಯಾ ಜೀವಿಗಳಿಗೇ ಹೊರತು, ಅವು ಆತ್ಮನನ್ನಂಟಲಾರವು.

ಅರ್ಜುನ :—ಇದೇನು ಅನ್ಯಾಯವು ? ಆತ್ಮನು ಜೀವಿಗಳ ಸಂಬಂಧವನ್ನು ಪಡೆದು ಸಕಲಕಾರ್ಯಗಳನ್ನೂ ತಾನು ಮಾಡಿಸುತ್ತಿರುವಾಗ, ಆ ಕರ್ಮಸಂಬಂಧವು ಜೀವಿಗಳಿಗೇ ಹೊರತು ಆತ್ಮನಿಗಿಲ್ಲವು ಎಂದು ಹೇಳುವುದಕ್ಕೆ ಕಾರಣವೇನು ? ಸ್ವಾಮಿಾ !

ಕೃಷ್ಣ :—ಜೀವಿಯು ಮಾಯೆಯಿಂದ ಮುಚ್ಚಲ್ಪಟ್ಟಿರುವುದರಿಂದ ತಾನು ಮಾಡುವ ಕಾರ್ಯಗಳೆಲ್ಲವನ್ನು 'ನಾನೇ ಮಾಡುತ್ತಿದ್ದೇನೆ'

ಎಂದು ಅಹಂಕಾರವನ್ನು ಹೊಂದುತ್ತಿದ್ದಾನೆ. ಆದುದರಿಂದ ಆ ಕರ್ಮಫಲಗಳನ್ನು ಅವನೇ ಅನುಭವಿಸಬೇಕು.

ಅರ್ಜುನ:—ಏನೊಂದೂ ತಿಳಿಯದ ಆ ಜೀವನು, ತಾನು ಮಾಡದಿರುವ ಕಾರ್ಯಗಳನ್ನು ನಿರ್ನಿಮಿತ್ತವಾಗಿ ತನ್ನಮೇಲೆ ಹೊತ್ತುಕೊಂಡು ಏತಕ್ಕಾಗಿ ಪಾಪದ ಮೂಟೆಗಳನ್ನು ಕಟ್ಟಿಕೊಳ್ಳಬೇಕು ?

ಕೃಷ್ಣ :—ತನಗೆ ತಿಳುವಳಿಕೆಯಿಲ್ಲದಿರುವುದರಿಂದ ಆತನು ಹಾಗೆ ಮಾಡುತ್ತಿದ್ದಾನೆಯೇ ಹೊರತು, ಆತ್ಮನು ಎಂದಿಗೂ ಆ ಕರ್ಮಗಳನ್ನು ಮಾಡಿಸುವವನಲ್ಲವು. ಆತನು ಸಾಕ್ಷಿಮಾತ್ರನಲ್ಲದೆ ಬೇರೆಯಲ್ಲ. ಈರೀತಿಯಾದ ತಿಳಿವಳಿಕೆಯಿಲ್ಲದಿರುವುದೇ ಜ್ಞಾನವನ್ನು ಮುಚ್ಚಿ ಅದನ್ನು ಬೆಳಗದಂತೆ ಮಾಡುವುದು.

ಅರ್ಜುನ:—ಪ್ರಪಂಚೋತ್ಪತ್ತಿಗೆ ಕಾರಣಕರ್ತನಾಗಿರುವ ಈಶ್ವರನು ಮಾಯೆಯನ್ನು ಸೃಷ್ಟಿಸಿ, ಆ ಮಾಯೆಯಿಂದಲೇ ಜೀವಿಗಳನ್ನು ಮೋಹಗೊಳಿಸಿ, ಅದರಿಂದುಂಟಾದ ಕರ್ಮಗಳನ್ನು ಅವರ ತಲೆಯಮೇಲೆ ಹೊತ್ತುಕೊಳ್ಳುವಂತೆ ಮಾಡಿ, ಆತ್ಮನು ತಾನು ಯಾವುದನ್ನೂ ಮಾಡಿದವನಲ್ಲವೆಂದು ಇರುವುದು ಧರ್ಮವೇ ?

ಕೃಷ್ಣ :—ಪರಮೇಶ್ವರನು ಮಾಯೆಯೊಡನೆ ಜೀವಿಗಳನ್ನು ಸೃಷ್ಟಿಮಾಡಿ ಕಳುಹಿಸಿದಾಗ್ಗೂ, ಆ ಮಾಯೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಬುದ್ಧಿಯೆಂಬ ಶಕ್ತಿಯನ್ನು ಕೂಡ ಕೊಟ್ಟು ಕಳುಹಿಸಿರುತ್ತಾನೆ. ಆ ಬುದ್ಧಿಯನ್ನು ಅವರು ಸರಿಯಾಗಿ ಉಪಯೋಗಿಸಿಕೊಳ್ಳದಿದ್ದಲ್ಲಿ, ಕರ್ಮಗಳ ಮೂಟೆಗಳನ್ನು ತಾನು ಹೊತ್ತುಕೊಳ್ಳಬೇಕಾಗಿ ಬರುವುದು. ಆದರೆ ಜೀವಿಗಳನ್ನು ಕರ್ಮಕ್ಕೆ ಒಳಗಾಗುವಂತೆ ಆತನು ಮಾಡಲಿಲ್ಲವು. ಇದಕ್ಕೆ ಪ್ರಮಾಣವನ್ನು ಈ ಕೆಳಗೆ ತಿಳಿಸಿದೆ.

ಸೀ || ಸರ್ವಜ್ಞ ನೀಶ್ವರನು ♦ ಸರ್ವಾತ್ಮ ನವ್ಯಯನು
ಪಾವನಂ ಸತ್ಯನ ♦ ನಂತ ನಾಥ್ಯಂ
ಆತ್ಮ ಸ್ವರೂಪದಿಂ ♦ ದಶ್ರಾಂತವನು ತನ್ನ
ಮಾಯಾಪ್ರವರ್ತನೆಯ ♦ ಮಹಿಮೆಯಿಂದ

ಗುಣಗಳಂ ಕಲ್ಪಿಸಿಯೆ ♦ ಗುಣಸಂಗದಿಂ ಲಿಂಗ
ದೇಹವನು ಲೀಲೆಯಿಂ ♦ ತಾನು ಧರಿಸಿ
ಕಂಪಿಸುವ ಜಲದೊಡನೆ ♦ ಚಲನಕ್ರಿಯೆಯನು ತೋರ್ವ
ಪಾದಪಂಗಳ ತೆರದಿ ♦ ತಿರುಗುತಿರುವ

ಆ ॥ ದಿಟ್ಟಿಯಿಂ ಭೂಲೋಕ ಚಲಿ ♦ ಪಂತೆ ಜನಕೆ ।
ತೋರುತಿಹ ತೆರದಿಂ ವಿಕಲ ♦ ಭಾವರಹಿತ ॥
ನಾತ್ಮಮಯ ಕಂಪಿತಾಂ ♦ ತರಂಗದೊಳು ।
ಚಲಿಪಂತೆ ತೋರ್ದರುಂ ನಿಜ ♦ ಕದಲ ನವನು ॥

(ಬಮ್ಮೆರಪೋತನಾ–ತೆಲುಗು)

ಇದೂ ಅಲ್ಲದೆ, ಅರ್ಜುನಾ! ಪರಮೇಶ್ವರನನ್ನು ಕರ್ಮಫಲಗಳು ಹೊಂದಲಾರವೆಂಬುದನ್ನು ನಿರ್ಧರಿಸಿ ಹೇಳುತ್ತೇನೆ ಕೇಳು. ಒಬ್ಬನ ಹತ್ತಿರ ಇಬ್ಬರು ಸೇವಕರಿದ್ದರು. ಯಜಮಾನನು ಆ ಸೇವಕರನ್ನು ಕರೆದು, “ನೀವಿಬ್ಬರೂ ಈದಿನ ರಾತ್ರಿ ಕಗ್ಗತ್ತಲಿನಲ್ಲಿಯೇ ಹೊರಟು ನಾನು ನಿಮ್ಮೊಡನೆ ಮೊದಲೇ ತಿಳಿಸಿದ್ದಂಥ ಊರಿಗೆ ಹೋಗಿ, ಅಲ್ಲಿನ ಈ ಕೆಲಸವನ್ನು ಮಾಡಿಕೊಂಡು ಜಾಗ್ರತೆಯಾಗಿ ಹಿಂದಿರುಗಬೇಕಾಗಿದೆ. ಆದರೆ, ನೀವು ಹೋಗುವ ದಾರಿಯಲ್ಲಿ ಅಲ್ಲಲ್ಲಿ ನೆಲಭಾವಿಗಳು ವಿಶೇಷವಾಗಿವೆಯಾದುದರಿಂದ ಬೆಳಕಿಲ್ಲದಿದ್ದರೆ ಕತ್ತಲಿನಲ್ಲಿ ಹಾದಿಗಾಣದೆ ನೀವು ಆ ನೆಲಭಾವಿಗಳಲ್ಲಿ ಬೀಳುವ ಸಂಭವವಿದೆಯಾಗಿ, ನೀವು ಎರಡು ಲಾಂದರಗಳನ್ನು ತೆಗೆದುಕೊಂಡು ಹೋಗಬೇಕು. ಇಗೋ ನಿಮಗಾಗಿ ಈ ದೀಪಗಳನ್ನು ಸಿದ್ಧಮಾಡಿಟ್ಟಿದೆ. ಮರೆಯದೆ ತೆಗೆದುಕೊಂಡು ಹೋಗಿ; ಇಲ್ಲವಾದರೆ ನೀವು ದುಃಖಕ್ಕೊಳಗಾಗುತ್ತೀರಿ. ಗೊತ್ತಾದ ಕೆಲಸಗಳನ್ನು ಸಾಂಗವಾಗಿ ಮಾಡಿಕೊಂಡು ಹೊತ್ತಿಗೆ ಸರಿಯಾಗಿ ಹಿಂದಿರುಗಿ” ಎಂದು ಹೇಳಿ ಕಳುಹಿಸಿದನು. ಆ ಇಬ್ಬರು ಸೇವಕರಲ್ಲಿ ಒಬ್ಬನು ಮಾತ್ರ ಯಜಮಾನನು ತನಗೆ ಕೊಟ್ಟ ದೀಪವನ್ನು ತೆಗೆದುಕೊಂಡು, ಬಹಳ ಎಚ್ಚರಿಕೆಯಿಂದ ಊರಿಗೆ ಹೋಗಿ ಕೆಲಸವನ್ನು ಪೂರ್ಣಮಾಡಿಕೊಂಡು ಹಿಂದಿರುಗಿದನು. ಇನ್ನೊಬ್ಬನಾದರೋ ‘ಹಾದಿಯನ್ನು ಚನ್ನಾಗಿ ತಿಳಿದಿರುವ ನನಗೆ ಬೆಳಕೇತಕ್ಕೆ?’ ಎಂಬ ಅಹಂಕಾರದಿಂದ

ಯಜಮಾನನ ಬುದ್ಧಿವಾದವನ್ನು ಗ್ರಹಿಸದೆ, ದೀಪವನ್ನು ಮನೆಯಲ್ಲಿಯೇ ಬಿಟ್ಟು ಹೊರಟುಹೋದನು. ಕಗ್ಗತ್ತಲೆಯು ಬಹಳವಾಗಿದ್ದುದರಿಂದ ಅವನು ಹಾದಿಯಲ್ಲಿ ಹೋಗುತ್ತಿರುವಾಗ ನೆಲಭಾವಿಯಿದೆಯೆಂದು ತಿಳಿಯದೆ ಕಾಲನ್ನೆತ್ತಿಟ್ಟು ಭಾವಿಯೊಳಕ್ಕೆ ಬಿದ್ದು ಮೂರುಸಾರಿ ಮುಳುಗಿ ಪ್ರಾಣವನ್ನು ಬಿಟ್ಟನು.

ಇದು ಹೇಗೋ ಹಾಗೆಯೇ, ಸಮಸ್ತ ಚರಾಚರಗಳಿಗೂ ಒಡೆಯನಾದ ಆ ಈಶ್ವರನು ಕೊಟ್ಟ ಬುದ್ಧಿಯೆಂಬ ಬೆಳಕನ್ನು ಸರಿಯಾದ ಮಾರ್ಗದಲ್ಲಿ ಉಪಯೋಗಿಸದಿರುವ ಜೀವಿಗಳು ಅಜ್ಞಾನವೆಂಬ ಕಗ್ಗತ್ತಲಿನಲ್ಲಿ ಜೀವನವೆಂಬ ಹಾದಿಯ ಮಾರ್ಗವಾಗಿ ಹೊರಟು ದಿಕ್ಕು ಕಾಣದೆ ಮಾಯೆಯೆಂಬುವ ನೆಲಭಾವಿಯೊಳಕ್ಕೆ ಬಿದ್ದು ಜನನಮರಣಗಳೆಂಬ ದುಃಖಗಳನ್ನನುಭವಿಸುತ್ತಾ ಹಾಳಾಗುತ್ತಿದ್ದಾರೆ. ಇಂತಹ ಜೀವಿಗಳಿಗೆ ಮೋಕ್ಷವೆಂಬ ಗ್ರಾಮವು ಎಂದಿಗಾದರೂ ದೊರಕುತ್ತದೆಯೇ? ಎಂದಿಗೂ ಇಲ್ಲ. ಆದುದರಿಂದ ಬುದ್ಧಿಯನ್ನು ಜ್ಞಾನಮಾರ್ಗದಲ್ಲುಪಯೋಗಿಸದಿರುವ ಜೀವನು ಮಾಯೆಯಿಂದ ತನಗುಂಟಾದ ಕರ್ಮಫಲಗಳನ್ನು ತಾನೇ ಅನುಭವಿಸುವನೇ ಹೊರತು, ಇವುಗಳು ಪರಮೇಶ್ವರನಿಗೆ ಎಂದಿಗೂ ಅಂಟವು. ಮಾಯೆಯು ಜೀವಿಯನ್ನಂಟದೆ ತಪ್ಪಿಸಿಕೊಳ್ಳುವುದಕ್ಕಾಗಿ ಪರಮೇಶ್ವರನು ಪ್ರತಿಜೀವಿಗೂ ಬುದ್ಧಿಯೆಂಬ ಶಕ್ತಿಯನ್ನು ಕೊಟ್ಟಿದ್ದಾನೆ. ಮಾಯಾಶಕ್ತಿಯಾದರೋ ಬಹಳ ಅದ್ಭುತವಾದದ್ದು ಮತ್ತು ಅಪಾರವಾದದ್ದು. ಸರ್ವಸಂಗಪರಿತ್ಯಾಗಮಾಡಿದ ಮುನೀಶ್ವರರಿಗೂ ಕೂಡ, ಆ ಮಾಯೆಯನ್ನು ಸಂಪೂರ್ಣವಾಗಿ ಜಯಿಸುವುದು ಅಸಾಧ್ಯ. ಈ ವಿಷಯವನ್ನು ಕುರಿತು ಒಂದು ದೃಷ್ಟಾಂತವನ್ನು ಈ ಕೆಳಗೆ ಉದಹರಿಸಿದೆ.

'ಕಾದಿ' ಎಂಬ ಹೆಸರುಳ್ಳ ಒಬ್ಬ ಬ್ರಾಹ್ಮಣ ಶ್ರೇಷ್ಠನು ಕೋಸಲ ದೇಶದ ಒಂದಾನೊಂದು ಗ್ರಾಮದಲ್ಲಿ ವಾಸವಾಗಿದ್ದನು. ಇವನು ಮಹಾ ಈಶ್ವರಭಕ್ತಿಯನ್ನುಳ್ಳವನು. ಒಂದಾನೊಂದುದಿನ ಆ ಬ್ರಾಹ್ಮಣನು ಯಾವುದೋ ಒಂದು ಕೋರಿಕೆಯನ್ನು ಮನಸ್ಸಿನಲ್ಲೆಣಿಸಿ ಅಡವಿಗೆ ಹೋಗಿ, ಶ್ರೀ ಮಹಾವಿಷ್ಣುವನ್ನು ಕುರಿತು ತಪಸ್ಸು ಮಾಡುವುದಕ್ಕೆ ಪ್ರಾರಂಭಿಸಿ

ದನು. ಆತನ ತಪೋನಿಷ್ಠೆಗೆ ಮಹಾವಿಷ್ಣುವು ಮೆಚ್ಚಿ ತೃಪ್ತನಾಗಿ ಕಾರುಣ್ಯದಿಂದ,

ವಾರ್ಧಿಕಷಟ್ಪದಿ ||

ವರಸುಪ್ರಸನ್ನವದನದ ಕಮಲನೇತ್ರದ ಮ |
ಕರಕುಂಡಲದ ಲಲಿತನಾಸಿಕದ ಪಣೆಯಕ-|
ಸ್ತುರಿಯತಿಲಕದ ಮುರಿದಪುರ್ಬುಗಳ ಸುಳಿಗುರುಳ ಮಣಿಮುಕುಟ ದೆಳತೊಳಸಿಯ||
ಕೊರಲ ವನಮಾಲೆಗಳ ಕೌಸ್ತುಭಶ್ರೀವತ್ಸ-|
ದುರದ ಚಂದನದ ನಳಿತೋಳ್ಗಳ ಘನಾಂಗಸೌಂ |
ದರಿಯ ದವಯವದ ಸರ್ವಾಭರಣಭೂಷಿತದ ಹರಿ ಮುನಿಯ ಮುಂದೆಸೆದನು ||

(ಜೈಮಿನಿಭಾರತ, 26ನೇ ಸಂಧಿ, 68ನೇ ಪದ್ಯ.)

ಶ್ರೀ ಮಹಾವಿಷ್ಣುವು ಪ್ರಸನ್ನನಾದ ಮುಖದಿಂದಲೂ, ಕಮಲ ನೇತ್ರದಿಂದಲೂ, ಮಕರ ಕುಂಡಲವನ್ನು ಧರಿಸಿಯೂ, ಹೊಳಪಾದ ಮೂಗಿನಿಂದಲೂ, ಹಣೆಯಲ್ಲಿ ಕಸ್ತೂರೀತಿಲಕವನ್ನು ಧರಿಸಿಯೂ, ಹುಬ್ಬುಗಳ ಸೌಂದರ್ಯದಿಂದಲೂ, ಸುಂದರವಾದ ಮುಂಗುರುಳುಗಳಿಂದಲೂ, ಕಂಠದಲ್ಲಿ ಎಳೆತುಳಸೀಹಾರವನ್ನು ಮತ್ತು ಕೌಸ್ತುಭಮಣಿಯನ್ನು ಧರಿಸಿಯೂ, ಎದೆಯಲ್ಲಿ ಶ್ರೀವತ್ಸವೆಂಬ ಲಾಂಛನದಿಂದ ಹೊಳೆಯುತ್ತಲೂ, ಸೊಂಪಾದ ತೋಳುಗಳಿಂದ ಮೆರೆಯುತ್ತಲೂ, ಸರ್ವಾಭರಣ ಭೂಷಿತನಾಗಿ, ನೋಡುವವರ ಕಣ್ಮನಗಳಿಗಾನಂದವೀಯುತ್ತ, ಆ ಬ್ರಾಹ್ಮಣನಿಗೆ ಪ್ರತ್ಯಕ್ಷನಾದನು. ಹೇಗೆಂದರೆ

ವಾರ್ಧಿಕಷಟ್ಪದಿ ||

ಅತಸೀಕುಸುಮಗಾತ್ರನಂ ಕಮಲನೇತ್ರನಂ |
ಸ್ಮಿತರುಚಿರಶುಭರದನನಂ ಚಾರುವದನನಂ |
ಕೃತಮೃಗಮದೋಲ್ಲಸತ್ಸುಲಲಾಟನಂ ಮಣಿಕಿರೀಟನಂ ಕಂಬುಗಳದ ||
ಅತುಲತುಲಸೀಮಾಲನಂ ರಮಾಲೋಲನಂ |
ಧೃತಕೌಸ್ತುಭೋದ್ಭಾಸನಂ ಪೀತವಾಸನಂ |
ನುತಸಮಸ್ತಾಭರಣನಂ ಪುಣ್ಯಚರಣನಂ ದ್ವಿಜ 'ಕಾದಿ' ತಾಂ ಕಂಡನು ||

(ಜೈಮಿನಿಭಾರತ, 13ನೇ ಸಂಧಿ, 26ನೇ ಪದ್ಯ.)

ಕರೀ ಅಗಸೆಯ ಹೂವಿನಂತೆ ನೀಲವರ್ಣದ ದೇಹ, ಕಮಲದಂತಿರುವ ಕಣ್ಣುಗಳು, ಮುಗಳುನಗೆಯಿಂದ ಅರೆಗಾಣಿಸುವ ಸುಂದರವಾದ ದಂತ ಪಂಕ್ತಿಗಳು, ಮನೋಹರವಾದ ಮುಖ, ಕಸ್ತೂರೀತಿಲಕದಿಂದ ಮೆರೆವ ಹಣೆ, ಶಂಖದಂತಿರುವ ಕಂಠ, ಎಳತುಳಸಿಯ ಮಾಲೆಯನ್ನುಳ್ಳ ಕೊರಳು, ಕೌಸ್ತುಭಮಣಿಯಿಂದ ಪ್ರಕಾಶಿಸುವ ಎದೆ, ಪೀತಾಂಬರದುಡಿಗೆ, ರಮ್ಯವಾದ ಆಭರಣ ಮತ್ತು ಪಾವನವಾದ ಪಾದ. ಇವುಗಳಿಂದ ಮೆರೆಯುತ್ತಿರುವ ಆ ವಿಷ್ಣುವು 'ಕಾದಿ' ಯೆಂಬ ಆ ಬ್ರಾಹ್ಮಣನಿಗೆ ಪ್ರತ್ಯಕ್ಷನಾದನು. ಆ ಮಂಗಳಸ್ವರೂಪನನ್ನು ಕುರಿತು ಆತನು ಈ ಕೆಳಗೆ ಹೇಳುವಂತೆ ಹೊಗಳಲಾರಂಭಿಸಿದನು.

ವಾರ್ಧಿಕಷಟ್ಪದಿ ॥

ಜಯಜಯ! ಜನಾರ್ದನ! ಮುಕುಂದ! ಮುರಮರ್ದನ! ವಿ-।
ಜಯಮಿತ್ರ! ಗೋವಿಂದ! ಪಕ್ಷಿವಾಹನ! ಕಮಲ-।
ನಯನ! ಪೀತಾಂಬರ! ಘನಶ್ಯಾಮ! ಹರಿ! ಕೃಷ್ಣ! ವೈಕುಂಠ! ನಾರಾಯಣ!
ಕ್ಷಯರಹಿತ! ರಾಮ! ಲಕ್ಷ್ಮೀರಮಣ! ನತಸುರಾ-।
ಲಯಧೇನು! ಭಕ್ತವತ್ಸಲ! ಕೃಪಾಕರ! ಮಹಾ ।
ಭಯನಿವಾರಣ! ನೃಸಿಹ್ಮ! ತ್ರಾಹಿ ಯೆನುತಿರ್ದ ವಿಪ್ರೇಂದ್ರ ತಾಂ ಮುದದೊಳು ॥

(ಜೈಮಿನಿಭಾರತ, 11ನೇ ಸಂಧಿ, 36ನೇ ಪದ್ಯ.)

ಜೀಯ! ಜಗದಂತರಾತ್ಮಕ! ಸರ್ವಚೈತನ್ಯ!
ಜೀಯ! ಶುದ್ಧಾದ್ವಯ! ನಿರಂಜನ! ನಿರಾವರಣ!
ಜೀಯ! ನಿನ್ನೊಳಗೀಸಮಸ್ತಮಧ್ಯಸ್ತವಾಗಿದೆ ನೀನೆ ಸತ್ಯರೂಪಂ! ॥
ಜೀಯ! ನಾರಾಯಣ! ಮುಕುಂದ! ಮಾಧವ! ಕೃಷ್ಣ!
ಜೀಯ! ಚಕ್ರಿಯೇ! ಪೀತವಾಸ! ಲಕ್ಷ್ಮೀಲೋಲ!
ಜೀಯ! ಸರ್ವಸ್ವತಂತ್ರನೇ! ಬಿಡಿಸು ಸಂಸಾರಪಾಶದಿಂ ದೆನ್ನ ನೆಂದು ॥

(13ನೇ ಸಂಧಿ, 28ನೇ ಪದ್ಯ.)

ಜಯಜಯ! ಜಗನ್ನಾಥ! ವರಸುಪರ್ಣವರೂಥ!
ಜಯಜಯ! ರಮಾಕಾಂತ! ಶಮಿತದುರಿತಧ್ವಾಂತ!
ಜಯಜಯ! ಸುರಾಧೀಶ! ನಿಗಮನಿರ್ಮಲಕೋಶ! ಕೋಟಿಸೂರ್ಯಪ್ರಕಾಶ ॥

ಜಯುಜಯು! ಕ್ರತುಪಾಲ! ತರುಣತುಳಸೀಮಾಲ! |
ಜಯುಜಯು! ಕ್ಷ್ಮಾಪೇಂದ್ರ! ಸಕಲಸದ್ಗುಣಸಾಂದ್ರ! |
ಜಯುತುಜಯು! ಯುದುರಾಜ! ಭಕ್ತಸುಮನೋಭೂಜ! ಜಯುತುಜಯು ಯೆನು
ತಿರ್ದನು

(26ನೇ ಸಂಧಿ, 70ನೇ ಪದ್ಯ.

ಅನಂತರ ಆ ಆನಂದಮೂರ್ತಿಯನ್ನು ನೋಡಿ ತಪಸ್ಸನ್ನು ಬಿಟ್ಟು
ಪರಮಾನಂದದಿಂದ ತುಂಬಿತುಳುಕಾಡುವ ಮನಸ್ಸುಳ್ಳವನಾಗಿ ಕಣ್ಣಿನಲ್ಲಿ
ಆನಂದಬಾಷ್ಪವನ್ನು ಸುರಿಸುತ್ತ, ಈ ಮುಂದೆ ಹೇಳುವ ರೀತಿಯಲ್ಲಿ
ಸ್ತೋತ್ರಮಾಡಲಾರಂಭಿಸಿದನು.

"ಓ ಪರಮೇಶ್ವರಾ! ಅಪ್ರಮೇಯಾ! ಬ್ರಹ್ಮಾನಂದದಾಯಕನೇ
ನೀಲಮೇಘಶ್ಯಾಮಾ! ಕರುಣಾಕರಾ! ಪೂರ್ಣೇಂದುವದನಾ! ತಾರಕ
ನಾಮಾ! ನಿಗಮಾಂತವೇದ್ಯಾ! ಸರಸಿಜನಯನಾ! ಸಶಂಖಚಕ್ರಾ
ಪುರುಷೋತ್ತಮಾ! ಬ್ರಹ್ಮಾಂಡನಾಯಕಾ! ಭವಬಂಧವಿಮೋಚಕಾ!
ಪುಂಡರೀಕಾಕ್ಷಾ! ಬುಧಜನರಂಜನಾ! ಭಕ್ತವತ್ಸಲಾ! ದುರಿತವಿಭಂಜನಾ!
ಪುರಾಣಪುರುಷಾ! ದೇವದೇವೋತ್ತಮಾ! ಪರಮಪಾವನಾ! ಆನಂದ
ನಿಲಯಾ! ಪರಾತ್ಪರಾ! ಪಾವನಮೂರ್ತೀ! ದೇವತಾಸಾರ್ವಭೌಮಾ!
ಪರಂಧಾಮಾ! ನಿತ್ಯಕಲ್ಯಾಣಾ! ಪರಮಪುರುಷಾ! ಪಯೋನಿಧಿಚಕ್ರ
ಪಾಣೇ! ಭುಜಗೇಂದ್ರಶಯನಾ! ಗೋವಿಂದಾ! ಲಕ್ಷ್ಮೀಪತೇ! ಕಮಲ
ನಾಭಾ! ಸುರೇಶಾ! ವಿಷ್ಣೋ! ವೈಕುಂಠಾ! ಕೃಷ್ಣಾ! ಮಧುಸೂದನಾ!
ಬ್ರಹ್ಮಣ್ಯಾ! ಕೇಶವಾ! ಜನಾರ್ದನಾ! ವಾಸುದೇವಾ! ದೇವೇಶಾ!
ಮೋಕ್ಷದಾಯಕನೇ! ಸಂಸಾರಸಾಗರದಲ್ಲಿ ಬಿದ್ದು ದುಃಖಿಸುತ್ತಿರುವ ನನಗೆ
ಕೈಕೊಟ್ಟು ಕಾಪಾಡು, ಭಗವಂತಾ! ನೀನು ಎಂತಹನೆಂದರೆ,

ವಾರ್ಧಿಕಷಟ್ಪದಿ ‖

"ಕಮಲದಳನಯನ! ಕಾಳಿಯಮಥನ! ಕಿಸಲಯೋ |
ಪಮಚರಣ! ಕೀಶಪತಿಸೇವ್ಯ! ಕುಜಹರ! ಕೂರ್ಮ |
ಸಮಸತ್ಕಪೋಲ! ಕೇಯೂರಧರ! ಕೈರವಶ್ಯಾಮ! ಕೋಕನದ ಗೃಹೆಯ ‖

ರಮಣ ! ಕೌಸ್ತುಭಶೋಭ ! ಕಂಬುಚಕ್ರಗದಾಬ್ಜ–।
ವಿಮಲಕರ ! ಕಸ್ತೂರಿಕಾತಿಲಕ ! ಕಾವುದೆಂ ।
ದಮಿತಪ್ರಭಾಮೂರ್ತಿಯಂ ನುತಿಸ ಲಾತನಂ ಹರಿ ನೆಗಪಿದಂ ಕೃಪೆಯೊಳು" ॥

(ಜೈಮಿನಿಭಾರತ, 5ನೇ ಸಂಧಿ, 8ನೇ ಪದ್ಯ.)

ಹೀಗೆಂದು ಆ ಮಹಾವಿಷ್ಣುವನ್ನು ಸ್ತೋತ್ರಮಾಡಿ ಆ ಸ್ವಾಮಿಯನ್ನು ಕುರಿತು "ದೇವಾ! ಅವಾಙ್ಮಾನಸಗೋಚರನಾದ ನಿನ್ನನ್ನು ದರ್ಶನಮಾಡುವುದಕ್ಕಾಗಿ ಅನ್ನಪಾನಾದಿಗಳನ್ನೂ, ನಿದ್ರಾಹಾರಾದಿಗಳನ್ನೂ ನಿಶ್ಶೇಷವಾಗಿ ತೊರೆದ ಅನೇಕ ಮಹಾತ್ಮರೂ ಮತ್ತು ಯೋಗಿಗಳೂ ಇದುವರಿವಿಗೂ ಬೆಟ್ಟದ ಗುಹೆಗಳಲ್ಲಿಯೂ ಮತ್ತು ವನಗಳಲ್ಲಿಯೂ ತಪಸ್ಸುಮಾಡುತ್ತಿದ್ದಾಗ್ಯೂ, ನೀನು ಅವರಿಗೆ ದರ್ಶನವನ್ನು ಕೊಡದೆ ಇರಲಿಕ್ಕಾಗಿ ಅವರೆಲ್ಲರೂ ಬಹಳವಾಗಿ ಪರಿತಪಿಸುತ್ತಿದ್ದಾರೆ. ಕೆಲವರು ನಿನ್ನ ಲೀಲಾವಿನೋದಗಳೆಲ್ಲವನ್ನೂ ಪರಮಾನಂದದಿಂದ ಹಾಡಿ, ಆದರಿಂದ ಅವರಿಗೆ ಬಹಳ ಸಂತೋಷವುಂಟಾಗಿ, ಸರ್ವದಾ ನಿನ್ನ ನಾಮಜಪನೆಯನ್ನು ಮಾಡುತ್ತ, ಅವರಮನಸ್ಸನ್ನೂ ನಿನಗೇ ಅರ್ಪಿಸಿ, ಸಕಲವನ್ನೂ ಮರೆತು, ಪರಮಭಕ್ತರನ್ನು ಗೌರವಿಸಿ, ಅವರಿಗೆ ಬೇಕಾದ ಸಕಲ ಪದಾರ್ಥಗಳನ್ನೂ ಒದಗಿಸಿಕೊಟ್ಟು, ಅವರುಗಳ ಸೇವೆಯನ್ನು ಮಾಡುತ್ತಿದ್ದಾರೆ. ಕೆಲವರು ಯಾವಾಗಲೂ ತ್ರಿಕರಣಶುದ್ಧಿಯಿಂದ ವಿಶೇಷ ಭಕ್ತಿಯುತರಾಗಿ ನಿನ್ನ ಅನಂತ ದಿವ್ಯನಾಮಗಳನ್ನು ಸ್ತುತಿಸುತ್ತ, ಇಹಲೋಕಸುಖಗಳೆಲ್ಲವನ್ನೂ ಬಿಟ್ಟು, ಹಸಿವು ಬಾಯಾರಿಕೆ ಮೊದಲಾದುವುಗಳನ್ನು ಸಹಿಸಿ, ಹೀಗೆ ನಾನಾವಿಧವಾದ ಕಷ್ಟಗಳಿಂದ ನಿನ್ನನ್ನು ಹುಡುಕಿ ಬಳಲಿದಾಗ್ಯೂ, ನೀನು ಅವರಿಗೆ ಕಾಣಿಸದೇ ಇದ್ದುದರಿಂದ ಬಹಳವಾಗಿ ಶ್ರಮಪಡುತ್ತಿದ್ದಾರೆ. ಮತ್ತೆ ಕೆಲವರು ಲೋಕವ್ಯಾಪಾರಗಳನ್ನು ಒಟ್ಟಿಗೆ ತೊರೆದು, ಮುನಿವೇಷವನ್ನು ಧರಿಸಿ, ಶೈಲಗಹ್ವರದೊಳಕ್ಕೆ ಪ್ರವೇಶಿಸಿ, ಸಕಲೇಂದ್ರಿಯಗಳನ್ನೂ ಜಯಿಸಿ, ಗೆಡ್ಡೆಗೆಣಸುಗಳನ್ನೂ ತೃಣಪರ್ಣಗಳನ್ನೂ ಭುಜಿಸಿ, ಛಳಿಗಾಲದಲ್ಲಿ ತಣ್ಣನೆಯ ನೀರಿನಲ್ಲಿಯೂ ಉಷ್ಣಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ, ಇದ್ದು ತಪಸ್ಸು ಮಾಡುತ್ತಿರುವರು. ಇನ್ನು ಕೆಲವರು, 'ಭಕ್ತಿಯೂ ಮನಶ್ಶುದ್ಧಿಯೂ ಗೃಹಸ್ಥಾಶ್ರಮದಲ್ಲಿ ದೊರುಕವುದು' ಎಂದು ಮನಸ್ಸಿನಲ್ಲಿ ಎಣಿಸಿ,

ಗೃಹಸ್ಥಾಶ್ರಮವನ್ನು ತ್ಯಜಿಸಿ ನಿನ್ನ ದಿವ್ಯನಾಮಗಳನ್ನು ಸ್ಮರಿಸುತ್ತ, ದೇಶದೇಶಗಳಲ್ಲಿಯೂ ತಿರುಗುತ್ತಿದ್ದಾರೆ. ಮತ್ತೂ ಕೆಲವರು ಯೋಗ ಬಲದಿಂದ ತನ್ನ ನಾಭಿಯಲ್ಲಿರುವ 'ಕುಂಡಲಿಶಕ್ತಿ' ಯನ್ನು ಮೇಲಕ್ಕೆಬ್ಬಿಸಿ, ಅದರಲ್ಲಿ ಜನಿಸುವ ಯೋಗಾಗ್ನಿಯನ್ನು ತನ್ನಲ್ಲಿರುವ ಸರ್ವನಾಡಿಗಳಲ್ಲಿಯೂ ಹೋಗುವಂತೆ ಮಾಡುವುದಕ್ಕೋಸ್ಕರ ಪ್ರಾಣವಾಯುವನ್ನು ಬಂಧಿಸುತ್ತಾರೆ, ಅಂದರೆ ಶ್ವಾಸಧಾರಣೆಯನ್ನು ಮಾಡುತ್ತಾರೆ. ಹೀಗೆ ಮಾಡಿದ ಮೇಲೆ ಅದರಲ್ಲಿ ಹುಟ್ಟುವ ನಾದದೊಡನೆ ತಮ್ಮ ಮನಸ್ಸನ್ನು ಸೇರಿಸಿ, ಅಲ್ಲಿಂದ ಮುಂದೆ ಬ್ರಹ್ಮಕಪಾಲದಲ್ಲಿರತಕ್ಕ ಚಿದಾಕಾಶದೊಡನೆ ಐಕ್ಯವನ್ನು ಹೊಂದಿ ಆನಂದಿಸುತ್ತಲಿರುವರು. ಅವರಿಗೂ ನಿನ್ನ ಸಾಕಾರರೂಪವಾದ ಮಾನುಷಮೂರ್ತಿಯನ್ನು ತೋರಿಸದೆ ಇರುತ್ತೀಯೆ. ಮನಸ್ಸಿನಲ್ಲಿ ನೆನೆಸಿದ ಮಾತ್ರವೇ ಸಕಲ ಪ್ರಪಂಚವನ್ನೂ ಸೃಷ್ಟಿಸಿ, ರಕ್ಷಿಸಿ, ನಾಶವನ್ನು ಮಾಡುವವನು ನೀನೇ ಅಲ್ಲವೇ? ನಿನ್ನ ಮಹಿಮೆಯು ನಿನಗೆ ತಿಳಿಯುವುದೇ ಹೊರತು, ಬೇರೆಯವರಿಗೆ ತಿಳಿಯಲು ಸಾಧ್ಯವಿಲ್ಲ. ಮೊದಲೇ 'ವಿಷ್ಣೋ ರಿವಾಸ್ಯಾzನವಧಾರಣೀಯಂ ♦ ಈದೃಕ್ತಯಾ ರೂಪಮಿಯತ್ತಯಾ ವಾ' ಎಂಬಂತೆ ವಿಷ್ಣುಮೂರ್ತಿಯಾದ ನಿನ್ನ ಆಕಾರವು ಹೀಗಿದೆಯೆಂಬುದು ಯಾರಿಗೂ ತಿಳಿಯದ ವಿಷಯವಾಗಿದೆ. ಸತ್ಯಸಂಧನೂ ನೀನೇ; ಸಚ್ಚಿದಾನಂದನೂ ನೀನೇ; ಪರಮಪವಿತ್ರಮೂರ್ತಿಯೂ ನೀನೇ; ಪದ್ಮನೇತ್ರನೂ ನೀನೇ; ನಿತ್ಯಕಲ್ಯಾಣನೂ ನೀನೇ; ಪುರುಷೋತ್ತಮನೂ ನೀನೇ; ಸರ್ವವ್ಯಾಪಿ ಸರ್ವಶಕ್ತನೂ ನೀನೇ; ಪರಂಧಾಮನೂ ನೀನೇ; ಸಮಸ್ತ ಪಾಪಮೋಚಕನೂ ನೀನೇ; ಅವಾಙ್ಮನಸಗೋಚರನೂ ನೀನೇ; ವಿಮಲಚರಿತ್ರನೂ ನೀನೇ; ಪುರಾಣಪುರುಷನೂ ನೀನೇ; ಸಕಲ ಜೀವಿಕೋಟಿಗಳ ಹೃದಯಕಮಲದಲ್ಲಿ ಜೀವಾತ್ಮಸ್ವರೂಪನಾಗಿ ವ್ಯಾಪಿಸಿರುವವನೂ ನೀನೇ. ನಿನ್ನ ಪಾದಪದ್ಮಗಳಲ್ಲಿ ಹುಟ್ಟಿದ ದೇವಗಂಗೆಯು ಮೂರು ಲೋಕಗಳನ್ನೂ ಪವಿತ್ರವನ್ನಾಗಿ ಮಾಡುತ್ತಿದೆ. ಇಂತಹ ಪಾದಪದ್ಮಗಳನ್ನು ದರ್ಶನಮಾಡಿದಮೇಲೆ ಜನನಮರಣಗಳುಂಟಾಗುತ್ತವೆಯೇ? ಭಗವಂತಾ!

"ದೇವಾ! ನಾನು ಅನೇಕಕೋಟಿ ಜನ್ಮಗಳಿಂದ ಮಾಡುತ್ತ ಬಂದ ನಿಷ್ಕಾಮ್ಯಪುಣ್ಯಗಳಿಂದ ತೇಜೋಮಯವಾದ ನಿನ್ನ ಸುಂದರಮೂರ್ತಿಯನ್ನೂ ಮತ್ತು ನಿತ್ಯಾನಂದಸ್ವರೂಪವನ್ನೂ ನನ್ನ ಕಣ್ಣಾರೆ ನಾನು ನೋಡುವ ಭಾಗ್ಯವು ಈ ದಿನ ನನಗೊದಗಿತು. ಈಗ ನಾನು ಧನ್ಯನಾದೆನು. ನಾನು ಪಾವನನಾದೆನು. ಓ ಪರಮೇಶ್ವರಾ! ಪರಂಧಾಮಾ! ನಿನ್ನ ಕಲ್ಯಾಣಗುಣಗಳನ್ನು ವರ್ಣಿಸುವುದಕ್ಕೆ ನಾನೆಷ್ಟರವನು? ನೀನು ಸರ್ವವ್ಯಾಪಿಯು, ಅನಾಥರಕ್ಷಕನು ಮತ್ತು ಆಪದ್ಬಾಂಧವನು; ಸಕಲ ಭೂತಗಳಲ್ಲಿಯೂ ಸಾಕ್ಷಿಸ್ವರೂಪವಾಗಿರುವವನೂ, ಅಖಂಡಸ್ವರೂಪನೂ, ಆದಿಮಧ್ಯಾಂತರಹಿತನೂ, ಅಪ್ರಮೇಯನೂ, ಸರ್ವಶಕ್ತನೂ ನೀನಾಗಿದ್ದಿ. ಇಂತಹ ಮಹಾ ಪುರುಷನನ್ನು ಕಣ್ಣಿಗೆ ಹಬ್ಬವುಂಟಾಗುವಂತೆ ನೋಡಿದ್ದಕ್ಕಾಗಿ ನಾನು ಮಹಾ ಕೃತಾರ್ಥನಾದೆನು. ನನ್ನ ಪಾಪಕರ್ಮಗಳೆಲ್ಲವೂ ಈ ದಿನಕ್ಕೆ ನಿರ್ಮೂಲವಾದವು. ನನ್ನ ಮನಸ್ಸಿನ ಕೋರಿಕೆಯು ಇದೊಂದೇ. ಏನೆಂದರೆ,

ಶ್ಲೋ ॥ "ಮಜ್ಜನ್ಮನಃ ಫಲ ಮಿದಂ ಮಧುಕೈಟಭಾರೇ!
ಮತ್ಪ್ರಾರ್ಥನೀಯಮದನುಗ್ರಹ ಏಷ ಏವ!
ತ್ವದ್ಭೃತ್ಯಪರಿಚಾರಕಭೃತ್ಯಭೃತ್ಯ-।
ಭೃತ್ಯಸ್ಯ ಭತ್ಯ ಇತಿ ಮಾಂ ಸ್ಮರ ಲೋಕನಾಥ!" ॥

(ಮುಕುಂದಮಾಲಾ ಸ್ತೋತ್ರ.)

"ಓ ಮಧುಸೂದನಾ! ನಾನು ಹುಟ್ಟಿದ್ದಕ್ಕೆ ಫಲವಾಗಿ ನನ್ನಿಂದ ಪ್ರಾರ್ಥಿಸಲ್ಪಟ್ಟು ನೀನು ಭಕ್ತನಾದ ನನ್ನ ಈ ಕೋರಿಕೆಯನ್ನು ದಯವಿಟ್ಟು ನೆರವೇರಿಸಬೇಕು. ನಿನ್ನ ಭೃತ್ಯನ ದಾಸಾನುದಾಸನೆಂದು ನಾನು ಗಣಿಸಲ್ಪಡಬೇಕೆಂಬುದೇ ಆ ನನ್ನ ಕೋರಿಕೆಯು. ಅಂದರೆ ಭಗವದ್ಭಕ್ತರಿಗೆ ಮೋಕ್ಷಪ್ರಾಪ್ತಿಯು ಅತಿ ಸುಲಭವಾದುದರಿಂದ ನನ್ನನ್ನು ನಿನ್ನ ಭಕ್ತರಲ್ಲಿ ಒಬ್ಬನನ್ನಾಗಿ ಭಾವಿಸು. ಇದೇ ನನ್ನ ಮುಖ್ಯವಾದ ಕೋರಿಕೆ. ನನ್ನ ಕಣ್ಣಿಗೆ ಕಾಣ್ಬರುವ ಈ ನಿನ್ನ ಆಕಾರವು ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಭೂತವಾದ ಬ್ರಹ್ಮ ವಿಷ್ಣು ಮಹೇಶ್ವರ ರೂಪಗಳಲ್ಲಿ ಯಾವುದು?" ಎಂದು ಈ ಕೆಳಗಿನ ಶ್ಲೋಕಮುಖೇನ ಕೇಳುತ್ತಾನೆ.

ಶ್ಲೋ ॥ ಕಿಂ ಯೇನ ಸೃಜಸಿ ವ್ಯಕ್ತಂ ♦ ಉತ ಯೇನ ಬಿಭರ್ಷಿ ತತ್ ।
ಅಥ ವಿಶ್ವಸ್ಯ ಸಂಹರ್ತಾ ♦ ಭಾಗಃ ಕತಮ ಏಷ ತೇ ॥
(ಕುಮಾರಸಂಭವ, 6ನೇ ಸರ್ಗ.)

ಹೀಗೆಂದು ಕೇಳಿ, ಆ ಪರಮಾನಂದ ಮೂರ್ತಿಯನ್ನು ಈ ಮುಂದೆ ಹೇಳುವ ರೀತಿಯಲ್ಲಿ ಸ್ತೋತ್ರಮಾಡುತ್ತಾನೆ.

ಶ್ಲೋ ॥ ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ ♦ ಸ್ತುನ್ವಂತಿ ದಿವ್ಯೈ ಸ್ಸ್ತವೈಃ ।
ವೇದೈ ಸ್ಸಾಂಗಪದಕ್ರಮೋಪನಿಷದೈ ♦ ರ್ಗಾಯಂತಿ ಯಂ ಸಾಮಗಾಃ ॥
ಧ್ಯಾನಾವಸ್ಥಿತತದ್ಗತೇನ ಮನಸಾ ♦ ಪಶ್ಯಂತಿ ಯಂ ಯೋಗಿನೋ ।
ಯಸ್ಯಾಂತಂ ನ ವಿದು ಸ್ಸುರಾಸುರಗಣಾಃ ♦ ದೇವಾಯ ತಸ್ಮೈ ನಮಃ ॥

ಶ್ಲೋ ॥ ಶಾಂತಾಕಾರಂ ♦ ಭುಜಗಶಯನಂ ♦ ಪದ್ಮನಾಭಂ ಸುರೇಶಂ ।
ವಿಶ್ವಾಧಾರಂ ♦ ಗಗನಸದೃಶಂ ♦ ಮೇಘವರ್ಣಂ ಶುಭಾಂಗಂ ॥
ಲಕ್ಷ್ಮೀಕಾಂತಂ ♦ ಕಮಲನಯನಂ ♦ ಯೋಗಿಹೃಧ್ಯಾನಗಮ್ಯಂ ।
ವಂದೇ ವಿಷ್ಣುಂ ♦ ಭವಭಯಹರಂ ♦ ಸರ್ವಲೋಕೈಕನಾಥಂ ॥

ಶ್ಲೋ ॥ ವಿಶ್ವಮಂಗಳ! ವಿಭೋ! ಜಗದೀಶ ।
ನಂದನಂದನ! ನೃಸಿಂಹ! ನರೇಂದ್ರ! ॥
ಮುಕ್ತಿದಾಯಕ! ಮುಕುಂದ! ಮುರಾರೇ!
ಶ್ರೀಪತೇ! ಶಮಯ ದುಃಖ ಮಶೇಷಂ ॥

ಶ್ಲೋ॥ ದುಷ್ಟನಿರ್ದಳನ! ದೇವ! ದಯಾಳೋ! ♦ ಪದ್ಮನಾಭ! ಧರಣೀಧರಧನ್ವಿ ।
ರಾವಣಾಂತಕ! ರಮೇಶ! ಮುರಾರೇ!♦ಶ್ರೀಪತೇ! ಶಮಯ ದುಃಖ ಮಶೇಷಂ॥

ಶ್ಲೋ ॥ ಹರತ್ವಂ ಸಂಸಾರಂ ದ್ರುತತರ ಮಸಾರಂ ಸುರಪತೇ! ।
ಹರತ್ವಂ ಪಾಪಾನಾಂ ವಿತತಿ ಮಪರಾಂ ಯಾದವಪತೇ! ॥
ಅಹೋ! ದೀನಾನಾಥಂ ನಿಹಿತ ಮಚಲಂ ನಿಶ್ಚಿತಪದಂ ।
ಜಗನ್ನಾಥಸ್ವಾಮೀ ನಯನಪಥಗಾಮೀ ಭವತು ಮೇ ॥

ಶ್ಲೋ॥ಪೂರ್ಣಪರಾತ್ಪರ! ಪಾಲಯ ಮಾ ಮತಿದೀನ ಮನಾಥ ಮನಂತಸುಖಾಬ್ಧೇ ।
ಪ್ರಾವೃಡದಭ್ರತಟಿತ್ಸುಮನೋಹರಪೀತವರಾಂಬರ! ರಾಮ! ನಮಸ್ತೇ ॥
ಕಾಮವಿಭಂಜನ! ಕಾಂತತರಾನನ! ಕಾಂಚನಭೂಷಣ! ರತ್ನಕಿರೀಟಂ ।
ತ್ವಾಂ ಭಜತೋ ರಘುನಂದನ! ದೇಹಿ ದಯಾಧನ! ಮೇ ಸ್ವಪದಾಂಬುಜದಾಸ್ಯಂ॥

ಶ್ಲೋ ॥ ತ್ರೈವಿಷ್ಟಪರಿಪುವೀರಘ್ನಂ! ಕ್ಷಿತಿಭಾರಘ್ನಂ! ಭವರೋಗಘ್ನಂ।
ಕೈವಲ್ಯಂ ನವನೀತಾಹಾರ ಮನಾಹಾರಂ ಭುವನಾಹಾರಂ ॥
ವೈಮಲ್ಯಸ್ಫುಟಚೇತೋವೃತ್ತಿವಿಶೇಷಾಭಾಸ ಮನಾಭಾಸಂ।
ಶೈವಂ ಕೇವಲಶಾಂತಂ ಪ್ರಣಮತ ಗೋವಿಂದಂ ಪರಮಾನಂದಂ ॥

ಶ್ಲೋ ॥ ಶರಚ್ಚಂದ್ರಬಿಂಬಾನನಂ ಚಾರುಹಾಸಂ।
ಲಸತ್ಕುಂಡಲಾಕ್ರಾಂತಗಂಡಸ್ಥಲಾಂಗಂ ॥
ಜಪಾರಾಗಬಿಂಬಾಧರಂ ಕಂಜನೇತ್ರಂ।
ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ ॥

ಶ್ಲೋ ॥ ಕಲ್ಯಾಣಾನಾಂ ♦ ತ್ವಮಸಿ ಮಹಸಾಂ♦ ಭಾಜನಂ ವಿಶ್ವಮೂರ್ತೇ!
ಧುರ್ಯಾಂ ಲಕ್ಷ್ಮೀ♦ಮಿಹ ಮಯಿ ಭೃಶಂ ♦ ದೇಹಿ ದೇವ! ಪ್ರಸೀದ ॥
ಯದ್ಯತ್ಪಾಪಂ ♦ ಪ್ರತಿಜಹಿ ಜಗ ♦ ನ್ನಾಥ! ನಮ್ರಸ್ಯ ತನ್ಮೇ।
ಭದ್ರಂ ಭದ್ರಂ ♦ ವಿತರ ಭಗವನ್! ♦ ಭೂಯಸೇ ಮಂಗಳಾಯ ॥

ಶ್ಲೋ ॥ ಸರ್ವಲೋಕಶರಣ್ಯಾಯ ♦ ಮಂಗಳಂ ಪರಮಾತ್ಮನೇ।
ಮಂಗಳಂ ಗುರುವರ್ಯೇಭ್ಯಃ ♦ ಸರ್ವಲೋಕಾಯ ಮಂಗಳಂ ॥

(ಸ್ತೋತ್ರರತ್ನಾಕರ.)

ಮೇಲೆ ಹೇಳಿದಂತೆ ಆ ಬ್ರಾಹ್ಮಣನು, ವಿಷ್ಣುಮೂರ್ತಿಯನ್ನು ತನ್ನ ಮನಸ್ಸಿಗೆ ತೃಪ್ತಿಯಾಗುವವರಿವಿಗೂ ಸ್ತೋತ್ರಮಾಡಲು, ಆ ಸ್ವಾಮಿಯು ಅವನ ಸ್ತೋತ್ರಕ್ಕೆ ಬಹಳವಾಗಿ ಮೆಚ್ಚಿಕೊಂಡು, 'ನಿನ್ನ ಸ್ತೋತ್ರದಿಂದ ನನಗೆ ಸಂತೋಷವಾಯಿತು, ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು' ಎಂದು ಹೇಳಲು, ಅದಕ್ಕೆ ಆ ಬ್ರಾಹ್ಮಣನು, 'ಓ ಮಹಾನುಭಾವಾ! ನಿಮ್ಮ ಸ್ವರೂಪವನ್ನು ದರ್ಶಿಸಿದಮೇಲೆ ನನ್ನ ಇತರ ತುಚ್ಛವಾದ ಕೋರಿಕೆಗಳನ್ನು ತೀರಿಸಬೇಕೆಂದು ನಿಮ್ಮನ್ನು ಕೇಳಲಾರೆನು. ಆದರೆ, ಸರ್ವಕಾಲದಲ್ಲಿಯೂ ನಿಮ್ಮ ನಾಮಸ್ಮರಣೆಯನ್ನು ಮರೆಯದಿರುವಂತೆ ವರವನ್ನು ದಯಪಾಲಿಸಿ, ನಿಮ್ಮ ಮಾಯಾವಿಲಾಸಗಳನ್ನು ನಾನು ನೋಡುತ್ತಿದ್ದರೂ ಆ ಮಾಯೆಯಲ್ಲಿ ನಾನು ಸಿಕ್ಕದಿರುವಂತೆ ಮಾಡಿ, ನಿಮ್ಮ ನಾಮಸ್ಮರಣೆಯು ಒಂದೇ ಸಮನಾಗಿರುವಂತೆ ನನಗೆ ಕರುಣಿಸಿ; ಭಗವಂತಾ!' ಎಂದು ಪ್ರಾರ್ಥಿಸಿಕೊಂಡನು. ಅದಕ್ಕೆ ಶ್ರೀ ಮಹಾವಿಷ್ಣುವು, 'ಹಾಗೆಯೇ

ಆಗಲಿ' ಎಂದು ಹೇಳಿ ಕಣ್ಮರೆಯಾದನು. ಹೀಗೆ ಕೆಲವು ದಿನಗಳು ಕಳೆದಮೇಲೆ, ಆ ಬ್ರಾಹ್ಮಣನು ಶ್ರೀ ಮಹಾವಿಷ್ಣುವು ಕರುಣಿಸಿದ ವರವನ್ನು ಮನಸ್ಸಿನಲ್ಲಿ ನೆನೆಯುತ್ತ, ಸ್ನಾನವನ್ನು ಮಾಡಲು ಕೊಳದ ಸಮೀಪಕ್ಕೆ ಹೋದನು.

ಹೀಗೆ ಹೊರಟು ಕೊಳದಲ್ಲಿಳಿದು ಸ್ನಾನಮಾಡುವುದಕ್ಕೋಸ್ಕರ ತನ್ನ ತಲೆಯನ್ನು ನೀರಿನಲ್ಲಿ ಒಂದುಸಾರಿ ಮುಳುಗಿಸಿದನು. ಮುಳುಗಿ ಪುನಃ ತಲೆಯನ್ನು ಮೇಲಕ್ಕೆತ್ತುವುದರೊಳಗಾಗಿ ಈ ಕೆಳಗೆ ಹೇಳುವ ವಿಷಯಗಳೆಲ್ಲವೂ 'ಕಾದಿ' ಗೆ ಕನಸ್ಸಿನಲ್ಲಿ ನಡೆದಂತೆ ತೋರಿತು. ಅದು ಹೇಗೆಂದರೆ:—ತಾನು ತನ್ನ ಮನೆಯಲ್ಲಿ ಮೃತಿಹೊಂದಿದಂತೆಯೂ, ತನ್ನ ಶವದ ಮೇಲೆ ಹೆಂಡತಿಮಕ್ಕಳು ಬಿದ್ದು ಅಳುತ್ತಿರುವಂತೆಯೂ ಮನಸ್ಸಿನಲ್ಲಿ ಭಾವಿಸಿದನು. ಅದಾದಮೇಲೆ ತಾನೊಬ್ಬ ಚಂಡಾಲನ ಮನೆಯಲ್ಲಿ ಒಬ್ಬ ಸ್ತ್ರೀಗರ್ಭದಲ್ಲಿ ಸೇರಿ, ಗಂಡುಮಗುವಾಗಿ ಹುಟ್ಟಿ ಕಾಲಕ್ರಮದಿಂದ ಬೆಳೆದು ದೊಡ್ಡವನಾಗಿ ಒಬ್ಬ ಚಂಡಾಲಸ್ತ್ರೀಯನ್ನೇ ಮದುವೆಮಾಡಿಕೊಂಡು ಅವಳೊಡನೆ ಕೂಡಿದ್ದಂತೆಯೂ, ಕೆಲವು ಸಂವತ್ಸರಗಳು ಕಳೆದಮೇಲೆ ತನಗೆ ಕೆಲವು ಮಕ್ಕಳು ಜನಿಸಿ ಅವರು ಬೆಳೆದು ದೊಡ್ಡವರಾದಮೇಲೆ ಒಬ್ಬೊಬ್ಬರಾಗಿ ಸಾಯುತ್ತ ಬಂದು ಕಡೆಗೆ ತನ್ನ ಹೆಂಡತಿಯನ್ನೂ ಕೂಡ ಯಮನು ಕೊಂಡುಹೋಗಲು, ತಾನೊಬ್ಬನೇ ಉಳಿದು ದುಃಖವನ್ನು ಸಹಿಸಲಾರದೆ ತನ್ನ ಗ್ರಾಮವನ್ನು ಬಿಟ್ಟು ದೇಶದೇಶಗಳಲ್ಲಿ ತಿರುಗಿತಿರುಗಿ ಕಡೆಯಲ್ಲಿ ಕೇರಳದೇಶವನ್ನು ಸೇರಿ ಅಲ್ಲಲ್ಲಿ ಆಯಾ ಬೀದಿಗಳಲ್ಲಿ ತಿರುಗುತ್ತಿರುವಂತೆಯೂ ಕಂಡನು. ಹೀಗಿರಲು, ಒಂದುದಿನ ಆ ದೇಶಾಧಿಪತಿಯು ಪರಮಪದವನ್ನು ಸೇರಿದನು. ಆ ರಾಜನಿಗೆ ನಡೆಯಬೇಕಾದ ಕರ್ಮಕ್ರಮಗಳೆಲ್ಲವನ್ನೂ ನಡೆಸಿದಮೇಲೆ, ಆ ರಾಜನಿಗೆ ಸಂತಾನವಿಲ್ಲದಿರಲು, ಆ ಪಟ್ಟಣವನ್ನು ಪರಿಪಾಲಿಸುವುದಕ್ಕಾಗಿ ಮತ್ತೊಬ್ಬ ರಾಜನನ್ನು ತಂದು ಪಟ್ಟಾಭಿಷೇಕವನ್ನು ಮಾಡಬೇಕಾಗಿ ಬಂದಿತು. ಆಗ, ಪಟ್ಟದರಾಣಿ ಮತ್ತು ಮಂತ್ರಿಗಳು ಮೊದಲಾದವರು ಆಲೋಚಿಸಿ, ತಮ್ಮ ಪಟ್ಟದಾನೆಯನ್ನು ಸಿಂಗರಿಸಿ ಅದರ ಸೊಂಡಲಿಗೆ ಒಂದು ಹೂವಿನ ಹಾರವನ್ನು ಕೊಟ್ಟು ಸುತ್ತಲೂ ಕಳುಹಿಸಬೇಕೆಂದೂ ಆ ಆನೆಯು ಯಾವ ಪುರುಷನ

ಕಂಠದಲ್ಲಿ ಆ ಹೂವಿನಮಾಲೆಯನ್ನು ಹಾಕಿ ತನ್ನ ಅಂಬಾರಿಯಮೇಲೆ ಹತ್ತಿಸಿಕೊಂಡು ಬರುತ್ತದೆಯೋ, ಅವನಿಗೆ ಪಟ್ಟಾಭಿಷೇಕವಿಧಿಯನ್ನು ನಡೆಸಿ ರಾಜ್ಯವನ್ನು ಅವನಿಗೆ ಅರ್ಪಿಸಬೇಕೆಂದೂ ತೀರ್ಮಾನ ಮಾಡಿಕೊಂಡರು.

ಈ ಸಂಗತಿಯು ಆಯಾ ದೇಶಗಳಲ್ಲಿರುವ ಇತರ ರಾಜರುಗಳಿಗೆ ತಿಳಿಯಬಂದಾಗ ಪಟ್ಟದಾನೆಯನ್ನು ಅಲಂಕರಿಸಿ ಪಟ್ಟಣದೊಳಕ್ಕೆ ಬಿಡುವ ದಿನದ ಹಿಂದಿನ ದಿನವೇ ಅನ್ಯದೇಶಾಧಿಪತಿಗಳೆಲ್ಲರೂ ಈ ಕೇರಳದೇಶಕ್ಕೆ ಬಂದು ಸೇರಿ, ಮಾರನೆಯದಿನ ಆನೆಯು ಬರುವ ಸಮಯವನ್ನೇ ಎದುರು ನೋಡುತ್ತಿದ್ದರು. ಹೀಗಿರಲು ಮಾರನೆಯದಿನ ಸಾಯಂಕಾಲದಲ್ಲಿ ಆನೆಯನ್ನು ಅಲಂಕರಿಸಿ ಅದರ ಸೊಂಡಲಿಗೆ ಹೂವಿನ ಹಾರವನ್ನು ಕೊಟ್ಟು ಅದನ್ನು ಕುರಿತು, "ಓ ಗಜರಾಜ! ಈ ಕೇರಳದೇಶದ ರಾಜನು, ಪರಮ ಪದವಿಯನ್ನು ಹೊಂದಿದ ವಿಷಯವು ನಿನಗೆ ತಿಳಿದೇ ಇದೆಯಲ್ಲವೇ? ಆದುದರಿಂದ ಈದೇಶವನ್ನು ಆಳುವುದಕ್ಕೆ ಬೇರೊಬ್ಬ ರಾಜನನ್ನು ಹುಡುಕಿ ಆತನ ಕುತ್ತಿಗೆಯಲ್ಲಿ ಈ ಹೂವಿನ ಹಾರವನ್ನು ಹಾಕಿ ನಿನ್ನ ಅಂಬಾರಿಯ ಮೇಲೆ ಅವನನ್ನು ಹತ್ತಿಸಿಕೊಂಡು ಬರುವೆಯಾದರೆ, ಅವನಿಗೆ ಈ ರಾಜ್ಯಾಭಿಷೇಕವನ್ನು ಮಾಡಬೇಕೆಂದಿದ್ದೇವೆ. ಆದುದರಿಂದ ಮಾವಟಿಗನಿಲ್ಲದೆ ನೀನೊಂದೇ ಹೊರಟು ಪಟ್ಟಕ್ಕೆ ಯೋಗ್ಯನಾದ ರಾಜನನ್ನು ಶೀಘ್ರವಾಗಿ ಕರೆದುಕೊಂಡು ಬರಬೇಕು." ಎಂದು ಆಜ್ಞಾಪಿಸಿ ಆ ಪಟ್ಟದಾನೆಯನ್ನು ಬಿಟ್ಟರು. ಮಂತ್ರಿ ಮೊದಲಾದವರು ಹೇಳಿದ ವಿಷಯಗಳನ್ನು ಕೇಳಿ ಪಟ್ಟದಾನೆಯು ಬಹಳವಾಗಿ ಸಂತೋಷಿಸಿ ಹೂವಿನಹಾರವನ್ನು ತನ್ನ ಸೊಂಡಲಿನಲ್ಲೆತ್ತಿಕೊಂಡು ಅತಿವೇಗವಾಗಿ ಪಟ್ಟಣದಲ್ಲೆಲ್ಲಾ ಸುತ್ತುತ್ತಿದ್ದಿತು. ಆ ಸಮಯದಲ್ಲಿ ದೇಶದೇಶದಿಂದ ಬಂದಂಥ ರಾಜಾಧಿರಾಜರುಗಳೆಲ್ಲರೂ ತಮ್ಮ ತಮ್ಮ ಕೊರಳಲ್ಲಿ ಆನೆಯು ಆ ಹೂವಿನಹಾರವನ್ನು ಹಾಕುವಂತೆ ಮಾಡಬೇಕೆಂಬ ಉದ್ದೇಶದಿಂದ ಅದಕ್ಕೆ ಅಡ್ಡಲಾಗಿ ನಿಲ್ಲುತ್ತ ಬಂದರು. ಆಗ ಆ ಆನೆಯು ಅವರೆಲ್ಲರನ್ನೂ ದೂರಮಾಡಿ ದಾಟಬಂದು, ಹಿಂದೆ ಹೇಳಿದ ಚಂಡಾಲನು ವಾಸಿಸುತ್ತಿದ್ದ ಸಣ್ಣ ಸಂದಿನ ಕಡೆಗೆ ವೇಗವಾಗಿ ಬರುತ್ತಿತ್ತು. ಹಾಗೆ ಬರುತ್ತಿದ್ದ ಆನೆಯನ್ನು ಆ ಪಂಚಮನು ನೋಡಿ ಭಯಭ್ರಾಂತನಾಗಿ ತಾನೂ ಓಡಲಾರಂಭಿಸಿದನು. ಆದರೂ ಆನೆಯು ಅವನನ್ನು

ಹಿಂಬಾಲಿಸಿ ಹೊರಟು, ಅವನ ದಾರಿಗಡ್ಡಲಾಗಿ ಬಂದು, ತಡೆದು ನಿಲ್ಲಿಸಿ, ಆ ಹೂವಿನಹಾರವನ್ನು ಅವನ ಕೊರಳಲ್ಲಿ ಹಾಕಿಬಿಟ್ಟಿತು. ಅನಂತರ ಅವನನ್ನು ತನ್ನ ಅಂಬಾರಿಯಮೇಲೆ ಕೂಡಿಸಿಕೊಂಡು ಮಂತ್ರಿಗಳ ಸಮೀಪಕ್ಕೆ ಕೊಂಡುಬಂದಿತು.

'ರಾಜಾಧಿರಾಜರುಗಳೆಲ್ಲರೂ ಆನೆಗೆ ಎದುರು ಭಾಗದಲ್ಲಿ ಬಂದು ನಿಂತಿದ್ದರೂ, ಅವರ ಕೊರಳಲ್ಲಿ ಹಾರವನ್ನು ಹಾಕದೆ, ಕೇವಲ ನೀಚನ ಕುತ್ತಿಗೆಯಲ್ಲಿ ಅದನ್ನು ಹಾಕುವುದಕ್ಕೆ ಕಾರಣವೇನು?' ಎಂದು ಕೆಲವರಿಗೆ ಸಂಶಯವುಂಟಾಗಬಹುದು. ಅದಕ್ಕೆ ಸಮಾಧಾನವನ್ನು ಈ ಮುಂದೆ ತಿಳಿಸಿದೆ.

ಈ ಪಂಚಮನಾದರೋ ಪೂರ್ವಜನ್ಮದಲ್ಲಿ 'ಕಾದಿ' ಯೆಂಬ ಬ್ರಾಹ್ಮಣೋತ್ತಮನಾಗಿದ್ದು, ತನ್ನ ತಪಸ್ಸಿನಿಂದಲೂ ಮತ್ತು ಭಕ್ತಿಯುತವಾದ ಸ್ತೋತ್ರಗಳಿಂದಲೂ ಶ್ರೀ ಮಹಾವಿಷ್ಣುವಿನ ಕಾರುಣ್ಯವನ್ನು ಹೊಂದಿದರೂ, ಆ ವಿಷ್ಣುಮಾಯೆಗೊಳಪಟ್ಟು ಚಂಡಾಲನಾಗಿ ಜನಿಸಿ, ಅಲ್ಲಿ ತನಗೆ ದೊರಕಿದ್ದ ಹೆಂಡತಿ ಮಕ್ಕಳನ್ನು ಕಳೆದುಕೊಂಡು ಅದರಿಂದುಂಟಾದ ದುಃಖವನ್ನು ಸಹಿಸಲಾರದೆ ದೇಶದೇಶಗಳನ್ನು ಸುತ್ತುತ್ತಾ, ಕಟ್ಟಕಡೆಗೆ ಈ ಕೇರಳದೇಶಕ್ಕೆ ಬಂದನೆಂಬ ವಿಷಯವೆಲ್ಲವನ್ನೂ ಮೇಲೆಯೇ ಹೇಳಿದೆ. ದೇಶಾಧಿಪತ್ಯವನ್ನೆಳಸಿಬಂದ ಅನೇಕ ರಾಜರನ್ನು ಬಿಟ್ಟು ಪೂರ್ವಜನ್ಮದಲ್ಲಿ ಬ್ರಾಹ್ಮಣನಾಗಿದ್ದಾಗ್ಯೂ ಈಗ ಚಂಡಾಲನಾಗಿರುವ ಇವನ ಕೊರಳಿಗೆ ಹೂವಿನಮಾಲೆಯನ್ನು ಹಾಕಲು ಕಾರಣವೇನಂದರೆ:—ಪ್ರತಿ ಶರೀರದಲ್ಲಿಯೂ ಸಾಕ್ಷಿಮಾತ್ರನಾಗಿರುತ್ತಿರುವ ಆತ್ಮನು ಆ ಆನೆಯಲ್ಲಿಯೂ ಇರುವನಲ್ಲವೇ? ಆ ಆನೆಯಲ್ಲಿ ನೆಲೆಸಿರುವ ಜೀವಾತ್ಮನಿಗೆ ಈ ಚಂಡಾಲನ ಸಮಸ್ತ ವಿಷಯಗಳೂ ಸ್ಪಷ್ಟವಾಗಿ ತಿಳಿದಿರುವುದೇ ಅಲ್ಲವೇ? ಆನೆಯು ಚತುಷ್ಪಾದಿಯಾಗಿದ್ದಾಗ್ಯೂ, ಅದರಲ್ಲಿ ಪರಮಾತ್ಮನ ಅಂಶವಾದ ಜೀವಾತ್ಮನು ನೆಲೆಸಿರುವುದರಿಂದ ಮಾಯಾಪ್ರಭಾವವನ್ನು ತಿಳಿಯುವ ಸಲುವಾಗಿ ಬಂದಂಥ ಚಂಡಾಲನ ಕೊರಳಿನಲ್ಲಿಯೇ ಹಾರವನ್ನು ಹಾಕಬೇಕೆಂದೂ, ಮತ್ತು ಇತರ ರಾಜಾಧಿರಾಜರುಗಳಿಗೆ ಹಾಕಕೂಡದೆಂತಲೂ, ಆನೆಯ ಮನಸ್ಸಿಗೆ ಹೊಳೆಯುವಂತೆ ಆ ಪರಮಾತ್ಮನು ಪ್ರೇರಿಸಿದನು. ಆದುದರಿಂದ ಎಷ್ಟು

ಜನ ರಾಜರುಗಳು ಬಂದು ಅದರ ಮುಂಭಾಗದಲ್ಲಿ ನಿಂತರೂ, ಅವರನ್ನು ಬಿಟ್ಟು ಆ ಚಂಡಾಲನ ಕಂಠದಲ್ಲಿ ಆ ಹಾರವನ್ನು ಹಾಕಬೇಕೆಂದು ಆನೆಗೆ ಬುದ್ಧಿ ಹುಟ್ಟಿತೇ ಹೊರತು ಮತ್ತೆ ಬೇರೆಯಲ್ಲ.

ಹಿಂದೆ ಹೇಳಿದಂತೆ ಆ ಚಂಡಾಲನನ್ನು ಮಂತ್ರಿಗಳ ಮುಂದೆ ತಂದು ನಿಲ್ಲಿಸಲು, ಅವರು ಅವನಿಗೆ ಕ್ರಮವಾಗಿ ಮಂಗಳಸ್ನಾನಾದಿಗಳನ್ನು ಮಾಡಿಸಿ, ರತ್ನಕಿರೀಟಹಾರಕೇಯೂರಾದಿಗಳಿಂದ ಅವನನ್ನು ಅಲಂಕರಿಸಿ, ಪಟ್ಟಾಭಿಷೇಕದ ವಿಧಿಯನ್ನು ನೆರವೇರಿಸಿ, 'ಕವಲ' ನೆಂಬ ಹೊಸ ಸಹೆರನ್ನಿಟ್ಟು ರಾಜ್ಯವನ್ನು ಅವನಿಗೆ ಒಪ್ಪಿಸಿದರು. ಇವೆಲ್ಲವೂ 'ಕಾದಿ' ಗೆ ಕನಸ್ಸಿನಂತೆ ಕಾಣುತ್ತಿತ್ತು. ಇವನಿಗೆ ರಾಜ್ಯಪರಿಪಾಲನೆಯು ಒದಗಿದ ಮೇಲೆ ಮಂತ್ರಿಗಳೊಡನೆಯೂ ಅಂತಃಪುರ ಸ್ತ್ರೀಯರೊಡನೆಯೂ ಹತ್ತು ವರ್ಷಗಳಕಾಲ ಮಹಾ ಸಂತೋಷದಿಂದ ರಾಜ್ಯಭಾರವನ್ನು ನ್ಯಾಯರೀತಿಯಿಂದ ನಡೆಸುತ್ತ ಬಂದನು. ಹೀಗಿರಲು ಒಂದುದಿನ ಇವನ ಪೂರ್ವ ಚಂಡಾಲಬಂಧುಗಳಲ್ಲಿ ಒಬ್ಬ ವೃದ್ಧನು, ಈ ರಾಜನಿರುವ ದೇಶಕ್ಕೆ ಬಂದವನಾಗಿ ರಾಜಾಂತಃಪುರದ ಸಮೀಪದಲ್ಲಿ ಹೋಗುತ್ತಿರುವಾಗ, ರಾಜನು ಅರಮನೆಯ ಮುಂಭಾಗದ ಅಂಗಳದಲ್ಲಿ ಅತ್ತಿತ್ತ ಸುಳಿದಾಡುತ್ತಿದ್ದನು. ಆ ವೃದ್ಧನು ಅವನನ್ನು ನೋಡಿ, ಅವನು ರಾಜನಾಗಿರುವನೆಂದರಿಯದೆ ತಮ್ಮ ಬಂಧುವೆಂದೇ ತಿಳಿದು, ಅವನ ಪೂರ್ವದ ಹೆಸರನ್ನು ಹಿಡಿದು ಕೂಗುತ್ತ, ಆ ಕಡೆಗೆ ಸರಿಯುವುದಕ್ಕಾರಂಭಿಸಿದನು. ಇದನ್ನು ನೋಡಿ ರಾಜನು, ಆ ಮುದುಕನನ್ನು ತನ್ನ ಸಮೀಪಕ್ಕೆ ಬರಕೂಡದೆಂದು ಗಟ್ಟಿಯಾಗಿ ಗದ್ದರಿಸುತ್ತಾ ಅರಮನೆಯೊಳಕ್ಕೆ ಪ್ರವೇಶಿಸಿ ಅಂತಃಪುರವನ್ನು ಹೊಕ್ಕನು.

ಇವೆಲ್ಲವನ್ನೂ ರಾಜಸೇವಕರು ನೋಡುತ್ತಿದ್ದು, ರಾಜಸ್ತ್ರೀಯರು ಮತ್ತು ಮಂತ್ರಿ ಮೊದಲಾದವರಿಗೆ ತಿಳಿಯಪಡಿಸಿದರು. ಈ ವಿಷಯಕವಾದ ಮಾತುಗಳನ್ನು ಅವರು ಕೇಳಿದ ಕೂಡಲೇ ಆ ರಾಜನು ಚಂಡಾಲನೇ ಸರಿ, ಎಂಬದಾಗಿ ನಿಶ್ಚಯಿಸಿದರು. ಅದಾದಮೇಲೆ ಅವನನ್ನು ಸ್ಪರ್ಶಿಸುವುದಕ್ಕೂ, ಅವನೊಡನೆ ಮಾತನಾಡುವುದಕ್ಕೂ ಇಚ್ಛೆಯಿಲ್ಲದೆ, ಇಂತಹ

ನೀಚರಾಜನ ರಾಜ್ಯದಲ್ಲಿರಬಾರದೆಂದು ಸಮಸ್ತರೂ ಮಂತ್ರಾಲೋಚನೆಯನ್ನು ಮಾಡಿಕೊಂಡು ಒಂದು ದೊಡ್ಡ ಅಗ್ನಿಕುಂಡವನ್ನು ಸಿದ್ಧಪಡಿಸಿ ಎಲ್ಲರೂ ಅದರಲ್ಲಿ ಬಿದ್ದು ನಾಶಹೊಂದಿದರು. ಇವೆಲ್ಲವನ್ನೂ 'ಕಾದಿ'ಯು ನೋಡಿ, ತನ್ನಿಂದಲೇ ಅಲ್ಲವೇ ಇಷ್ಟು ಜನಗಳಿಗೆ ಪ್ರಾಣಹಾನಿಯುಂಟಾದುದೆಂದು ಬಹಳ ದುಃಖಪಟ್ಟು, ಅದನ್ನು ಸಹಿಸಲಾರದೆ ತಾನೂ ಅಗ್ನಿಕುಂಡದಲ್ಲಿಯೇ ಬಿದ್ದು ಪ್ರಾಣಬಿಟ್ಟನು. ಹೀಗೆ ಅಗ್ನಿಗೆ ಆಹುತಿಯಾದ ಹಾಗೆ ಕಂಡಕೂಡಲೇ, ಹಿಂದೆ ಕುಂಟೆಯ ನೀರಿನಲ್ಲಿ ಮುಳುಗಿಸಿದ್ದ ತನ್ನ ತಲೆಯನ್ನು ಮೇಲಕ್ಕೆತ್ತಿದನು. ತಲೆಯನ್ನು ಮೇಲಕ್ಕೆತ್ತಿದ ತಕ್ಷಣವೇ ಶರೀರವು ಗಡಗಡನೆ ನಡುಗುತ್ತ ಆ ಕುಂಟೆಯನ್ನು ಬಿಟ್ಟು ದಡವನ್ನು ಸೇರಿ ಇದುವರಿವಿಗೂ ತಾನನುಭವಿಸಿದ್ದೆಲ್ಲವನ್ನೂ ಜ್ಞಾಪಕಕ್ಕೆ ತಂದುಕೊಂಡು, ಈಶ್ವರನ ಮಾಯೆಗೆ ಬಹಳವಾಗಿ ಆಶ್ಚರ್ಯಪಟ್ಟು, ತನ್ನ ನಿವಾಸಸ್ಥಾನಕ್ಕೆ ಹೋಗಿ ಭಗವಂತನನ್ನು ಕುರಿತು ತಪಸ್ಸನ್ನು ಮಾಡಲುಪಕ್ರಮಿಸಿದನು.

'ನೀರಿನಲ್ಲಿ ತಲೆಯನ್ನು ಮುಳುಗಿಸಿ ತಲೆಯನ್ನೆತ್ತುವುದರೊಳಗಾಗಿ ಇಷ್ಟು ಸಂವತ್ಸರಗಳು ಕಳೆಯುವುವೇ'? ಎಂಬ ಸಂದೇಹವು ನಿಮಗುಂಟಾಗಬಹುದು. ಇದಕ್ಕೆ ಸಮಾಧಾನವೇನೆಂದರೆ, ಈ ಮಾಯಾವಿಷಯಕವಾದ ವ್ಯಾಪಾರಗಳೆಲ್ಲವೂ ಶ್ರೀ ಮಹಾವಿಷ್ಣುವಿನ ಸಂಕಲ್ಪದಿಂದುದಿಸಿದವುಗಳು. ಆ ಭಗವಂತನು ಸಂಕಲ್ಪಿಸಿದ ಮಾತ್ರದಿಂದಲೇ ಈಗ ನಡೆದ ಕಾದಿಯ ಅನುಭವವು ಮಾತ್ರವೇ ಅಲ್ಲ; ಇನ್ನೂ ಅನೇಕ ಕೋಟಿಜನ್ಮಗಳ ಅನುಭವಗಳೆಲ್ಲವೂ ತಮಗೆ ತಾವೇ ಒಂದೊಂದಾಗಿ ಕಣ್ಮನಗಳಿಗೆ ಕಂಡುಬರುವುವು. ಇದೇ ಭಗವಂತನ ಮಾಯಾಪ್ರಭಾವ. ಮಹಾವಿಷ್ಣುವಿನ ಲೀಲೆಯ ರಹಸ್ಯವನ್ನು ತಿಳಿದುಕೊಳ್ಳಲು ಯಾರಿಗೂ ಅಳವಲ್ಲ. ಮೇಲೆ ವಿಸ್ತರಿಸಿದ ಈ ಕಥೆಯು ವಾಸಿಷ್ಠದಲ್ಲಿರುವ ಇಪ್ಪತ್ತಮೂರನೇ ಅಧ್ಯಾಯದಿಂದ ಎತ್ತಿ ಬರೆದಿದೆ. ಆ ಗ್ರಂಥದಲ್ಲಿ ವಿಶೇಷವಾಗಿ ವಿಸ್ತರಿಸಿರುವ ಕಥಾಭಾಗದಲ್ಲಿ ಸಂದರ್ಭಕ್ಕನುಗುಣವಾಗಿ ತಕ್ಕಷ್ಟು ಮಾತ್ರವೇ ಇಲ್ಲಿ ತೆಗೆದುಕೊಂಡಿದೆ.

ಶ್ರೀ ಕೃಷ್ಣಮೂರ್ತಿಯು ಅರ್ಜುನನ್ನು ಕುರಿತು 'ಓ ಅರ್ಜುನಾ! ಬ್ರಹ್ಮದೇವನು ತಾನು ಬಹಳ ಕಾಲದವರಿವಿಗೂ ಜೀವಿಸಿರುವನೆಂದು ಗರ್ವಪಡುತ್ತಿದ್ದನು. ಆತನ ಕಾಲನಿರ್ಣಯದ ವಿಷಯವನ್ನು ಸ್ವಲ್ಪವಾಗಿ ಈ ಮುಂದೆ ವಿವರಿಸಿದೆ. ಇದಕ್ಕೆ ಪ್ರಮಾಣವು ಶ್ರೀ ಭಗವದ್ಗೀತೆಯಲ್ಲಿ 8ನೇ ಅಧ್ಯಾಯ 17ನೇ ಶ್ಲೋಕ.

ಶ್ಲೋ॥ ಸಹಸ್ರಯುಗಪರ್ಯಂತ ♦ ಮಹರ್ಯ ದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾನಾಂ ♦ ತೇzಹೋರಾತ್ರವಿದೋ ಜನಾಃ ॥

ಕೃತ, ತ್ರೇತ, ದ್ವಾಪರ ಕಲಿಯೆಂಬದಾಗಿ ನಾಲ್ಕು ಯುಗಗಳುಂಟು. ಈ ನಾಲ್ಕು ಯುಗಗಳೂ ಒಂದುಸಾವಿರ ಸಾರಿ ಆದರೆ ಬ್ರಹ್ಮದೇವನಿಗೆ ಒಂದು ಹಗಲಾಗುತ್ತದೆ. ಹೀಗೆಯೇ ಚತುರ್ಯುಗಗಳ ಸಹಸ್ರಕ್ಕೆ ಒಂದು ರಾತ್ರಿಯಾಗುತ್ತದೆ. ಇಂತಹ ಹಗಲುರಾತ್ರಿಗಳು ಮೂವತ್ತಾದರೆ ಆತನಿಗೆ ಒಂದು ತಿಂಗಳು. ಇಂತಹ ತಿಂಗಳುಗಳು ಹನ್ನೆರಡಾದರೆ ಆತನಿಗೆ ಒಂದು ವರ್ಷ, ಇಂತಹ ವರ್ಷಗಳು ನೂರಾದರೆ ಒಂದು ಬ್ರಹ್ಮಪಟ್ಟವಾಗುತ್ತದೆ, ಅಂದರೆ ಆ ಬ್ರಹ್ಮನ ಆಯುಃಪ್ರಮಾಣವು ತೀರುತ್ತದೆ. ಇದರಂತೆಯೇ ಉತ್ತರಾಯಣ ದಕ್ಷಿಣಾಯನಗಳಿಂದ ಕೂಡಿದ ಒಂದು ಮಾನವರ ವರ್ಷವಾದರೆ ದೇವತೆಗಳಿಗೆ ಒಂದು ಹಗಲೂ ಒಂದು ರಾತ್ರಿಯೂ ಸೇರಿದ ಒಂದು ದಿನವಾಗುತ್ತದೆ. ಇಂತಹ ದಿನಗಳು ಮುನ್ನೂರರತ್ತಾದರೆ ದೇವತೆಗಳಿಗೆ ಒಂದು ವರ್ಷವಾಗುತ್ತದೆ. ಮತ್ತು ಕೃತಯುಗದಲ್ಲಿ ಹದಿನೇಳು ಲಕ್ಷ ಇಪ್ಪತ್ತೆಂಟುಸಾವಿರ ಮನುಷ್ಯ ಸಂವತ್ಸರಗಳಿವೆ. ತ್ರೇತಾಯುಗದಲ್ಲಿ ಹನ್ನೆರಡು ಲಕ್ಷ ತೊಂಭತ್ತಾರುಸಾವಿರ ವರ್ಷಗಳಿವೆ. ಹೀಗೆಯೇ ದ್ವಾಪರಕ್ಕೆ ಎಂಟು ಲಕ್ಷ ಅರವತ್ತನಾಲ್ಕುಸಾವಿರ ಮನುಷ್ಯ ಸಂವತ್ಸರಗಳೂ, ಕಲಿಯುಗಕ್ಕೆ ನಾಲ್ಕುಲಕ್ಷ ಮೂವತ್ತೆರಡುಸಾವಿರ ವರ್ಷಗಳೂ ನಿರ್ಧರ ಮಾಡಲ್ಪಟ್ಟವೆ. ಮತ್ತು ಅಧ್ಯಾಯ 8 ಶ್ಲೋಕ 18 ರಲ್ಲಿ ಹೀಗೆಂದು ಹೇಳಿದೆ.

ಶ್ಲೋ॥ ಅವ್ಯಕ್ತಾ ದ್ವ್ಯಕ್ತಯ ಸ್ಸರ್ವಾಃ ♦ ಪ್ರಭವಂ ತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ♦ ತತ್ರೈವಾ z z ವ್ಯಕ್ತಸಂಜ್ಞಕೇ ॥

ಬ್ರಹ್ಮನಿಗೆ ಹಗಲು ಪ್ರಾರಂಭಿಸಿದೊಡನೆಯೇ ಮೂಲಪ್ರಕೃತಿಯೆಂಬ ಮಾಯೆಯಿಂದ ಸಕಲಚರಾಚರ ಪ್ರಪಂಚಗಳೂ ತೋರುತ್ತಿರುವುವು. ಮತ್ತು ಬ್ರಹ್ಮದೇವನಿಗೆ ರಾತ್ರಿಯು ಪ್ರಾರಂಭಿಸಿದೊಡನೆಯೇ ಪ್ರಕೃತಿಯೆಂಬ ಮಾಯೆಯು ಲಯವಾಗುತ್ತದೆ. ಅಂದರೆ, ಬ್ರಹ್ಮನ ಹಗಲೇ ಪ್ರಪಂಚೋತ್ಪತ್ತಿ, ಆತನ ನಿದ್ರೆಯೇ ಪ್ರಳಯವು. ಇಂತಹ ಸಂವತ್ಸರಾದಿಗಳು ಅನಿತ್ಯವೆಂದು ಯಾರು ತಿಳಿಯುತ್ತಾರೆಯೋ, ಅವರೇ ಜ್ಞಾನಿಗಳೆಂದು ಕರೆಯಲ್ಪಡುವವರು. ಪ್ರಕೃತಿಯೆಂಬ ಈ ಮಾಯೆಯಿಂದ ಕೂಡಿರುವ ಮಾನವರ ಮನಸ್ಸೆಲ್ಲವೂ ಹಗಲುವೇಳೆಯಲ್ಲಿ ಕಪಿಯಂತೆ ನಾನಾವಿಧವಾಗಿ ಓಡುತ್ತಿರುತ್ತದೆ. ಹೀಗೆ ಅಲ್ಲಿಗಿಲ್ಲಿಗೆ ಓಡಾಡುತ್ತಿರುವ ಹೃದಯಕಪಿಯು ರಾತ್ರಿಯಲ್ಲಿ ಗಾಢನಿದ್ರೆಯನ್ನನುಭವಿಸುತ್ತಿರುವಾಗ ಎಲ್ಲಿಗೂ ಓಡಾಡದೆ ಒಂದೇ ಸ್ಥಳದಲ್ಲಿ ಅಣಗಿರುತ್ತದೆ, ಅಂದರೆ ಅದರ ವ್ಯಾಪಾರಗಳನ್ನು ಬಿಟ್ಟು ಶೂನ್ಯಾವಸ್ಥೆಯನ್ನು ಹೊಂದಿರುತ್ತದೆ. ಹೀಗೆ ಅನೇಕ ಕೋಟಿ ಜನ್ಮಗಳನ್ನು ಪಡೆದರೂ ಈ ಮನಸ್ಸು ತೃಪ್ತಿಪಡೆಯದೆ ಓಡುತ್ತಿರುವುದರಿಂದ ಅನೇಕವೇಳೆ ಹುಟ್ಟುತ್ತ ಸಾಯುತ್ತ ಬರುತ್ತದೆ.

ಬ್ರಹ್ಮದೇವನು, ಹಿಂದೆ ಹೇಳಿದಂತೆ 'ದೀರ್ಘಾಯುರ್ಭಾಗವು ತನಗಿದೆ' ಯೆಂಬುದಾಗಿ ಮನಸ್ಸಿನಲ್ಲೆಣಿಸಿ, 'ನನ್ನಂತೆ ಯಾರಿಗಾದರೂ ಇಷ್ಟು ದೀರ್ಘಾಯಸ್ಸು ಇದೆಯೇ?' ಎಂಬದಾಗಿ ಗರ್ವಪಟ್ಟು, ಹಂಸವಾಹನಾರೂಢನಾಗಿ ವೈಕುಂಠವನ್ನು ಸೇರಿ ವಿಷ್ಣುಮೂರ್ತಿಯ ದರ್ಶನವನ್ನು ಮಾಡಿ, 'ಓ ಪರಮಪುರುಷಾ! ಪರಂಧಾಮಾ! ಪರಾತ್ಪರಾ! ಪರಮಪಾವನಾ!' ಎಂಬುದಾಗಿ ಅನೇಕ ವಿಧವಾಗಿ ಆತನನ್ನು ಸ್ತುತಿಸಿ 'ಅನಾಥರಕ್ಷಕಾ! ನನ್ನಂತೆ ಇಷ್ಟು ದೀರ್ಘಾಯಸ್ಸನ್ನು ಪಡೆದಿರುವವರು ಯಾರಾದರೂ ಯಾವ ಲೋಕದಲ್ಲಿಯಾದರೂ ಇದ್ದಾರೆಯೇ?' ಎಂದು ವಿಷ್ಣುಮೂರ್ತಿಯನ್ನು ಪ್ರಶ್ನಿಸಿದನು.

ಇದನ್ನು ಕೇಳಿ ಶ್ರೀಮಹಾವಿಷ್ಣುವು ಬ್ರಹ್ಮನನ್ನು ಕುರಿತು, "ಓ ಪರಮೇಷ್ಠೀ! ನೀನು ಸಕಲ ಪ್ರಪಂಚವನ್ನೂ ಸೃಷ್ಟಿಸಿದ ಮಹಾನುಭಾವನಲ್ಲವೇ! ನಿನಗೆ ಸಮನಾದವರು ತ್ರಿಲೋಕಗಳಲ್ಲಿ ಯಾರೂ

ಇಲ್ಲವು. ನೀನು ಯಾವ ವ್ಯಾಧಿಗಳೂ ಇಲ್ಲದೆ ದೀರ್ಘಕಾಲ ಬದುಕಿರುವವನು ಅಂದರೆ ಆರೋಗದೃಢಕಾಯನಾಗಿ ಬಹುಕಾಲ ಜೀವಿಸಿರುವವನು. ನಿನ್ನ ಮಹಿಮೆಯು ಇಷ್ಟೆಂದು ನಾನು ವರ್ಣಿಸಿ ಹೇಳುವುದು ಅಷ್ಟು ಶ್ಲಾಘ್ಯವಾದುದಲ್ಲ. ಮತ್ತೆ ಕೆಲವು ಪ್ರಾಜ್ಞರನ್ನು ವಿಚಾರಿಸಲಾಗಿ ನಿನ್ನ ಪ್ರಭಾವವನ್ನು ತಿಳಿದುಕೊಳ್ಳಬಹುದು' ಎಂಬದಾಗಿ ಉತ್ತರಕೊಟ್ಟನು. 'ಹಾಗಾದರೆ, ಅಂತಹ ಪ್ರಾಜ್ಞರಿರುವ ಸ್ಥಳಗಳಿಗೆ ಹೋಗಿ ವಿಚಾರ ಮಾಡುವ; ನನ್ನೊಡನೆ ದಯಮಾಡಿಸುವಿರಾ ?' ಎಂದು ಬ್ರಹ್ಮನು ಕೇಳಿದನು. ಅದಕ್ಕೆ ವಿಷ್ಣುಮೂರ್ತಿಯು ಸಮ್ಮತಿಸಿ ಗರುಡಾರೂಢನಾಗಿ ಬ್ರಹ್ಮದೇವನೊಡಗೂಡಿ ಒಂದು ದೊಡ್ಡ ಅಡವಿಯ ಮಧ್ಯಭಾಗದಲ್ಲಿ ವಾಸಿಸುತ್ತಿದ್ದ 'ರೋಮಚ' ನೆಂಬ ಮಹರ್ಷಿಯ ಸಮೀಪಕ್ಕೆ ಹೋಗಿ ಆ ಮಹಾಮುನಿಯನ್ನು ದರ್ಶಿಸಿದರು. ಆಗ ಅಕಸ್ಮಾತ್ತಾಗಿ ವಿಷ್ಣುರೂಪದರ್ಶನವು 'ರೋಮಚ' ಮುನಿಗೆ ಲಭಿಸಲು, ಆ ಮುನಿವರನಿಗೆ ಉಂಟಾದ ಪರಮಾನಂದದಿಂದ ವಿಷ್ಣುವನ್ನು ಬಹುವಿಧವಾಗಿ ಸ್ತುತಿಸಿ, 'ಸ್ವಾಮೀ ! ಇಷ್ಟುದೂರ ತಾವು ಬರುವುದಕ್ಕೆ ಕಾರಣವೇನೋ ತಿಳಿಯದು. ದಯವಿಟ್ಟು ಹೇಳಬೇಕು' ಎಂದು ರೋಮಚನು ಕೇಳಿದನು. ಆಗ ವಿಷ್ಣುಮೂರ್ತಿಯು ಆ ಋಷಿವರ್ಯನನ್ನು ನೋಡಿ, "ಅಯ್ಯಾ ! ಮುನಿಪುಂಗವಾ ! ನಿನ್ನ ಆಯುರ್ಭಾಗವನ್ನು ತಿಳಿದುಕೊಳ್ಳುವುದಕ್ಕಾಗಿ ನಾನೂ ಈ ಬ್ರಹ್ಮದೇವನೂ ಜೊತೆಗೂಡಿ ಈ ಸ್ಥಳಕ್ಕೆ ಬಂದೆವು. ನಿಮ್ಮ ವಯಸ್ಸೆಷ್ಟೆಂಬುದನ್ನು ಈ ಬ್ರಹ್ಮದೇವನಿಗೆ ದಯವಿಟ್ಟು ಸ್ವಲ್ಪ ತಿಳಿಸಬೇಕು." ಎಂದು ಭಗವಂತನಾದ ವಿಷ್ಣುಮೂರ್ತಿಯು ಹೇಳಿದನು. ಈ ಮಾತುಗಳನ್ನು ಕೇಳಿದ ತಕ್ಷಣವೇ ಮುನಿವರನು ಆ ಮಂಗಳಸ್ವರೂಪನಿಗೆ ನಮಸ್ಕರಿಸಿ, "ದೇವಾ ! ಸರ್ವಜ್ಞನಾದ ನಿನಗೆ ತಿಳಿಯದಿರುವ ವಿಷಯವಾವುದಾದರೂ ಉಂಟೇ ? ಆದರೂ ಈ ದಾಸನನ್ನು ಗೌರವಿಸಿ ಕೇಳಿದುದಕ್ಕಾಗಿ ಹೇಳುತ್ತೇನೆ, ದಯವಿಟ್ಟು ಕೇಳಬೇಕು. ಈ ಬ್ರಹ್ಮದೇವನ ಆಯುಃಪ್ರಮಾಣವು ತೀರಿದಮೇಲೆ ನನ್ನ ಶರೀರದಮೇಲಿನ ಒಂದು ರೋಮವು ಉದುರುತ್ತದೆ. ಇಂತಹ ರೋಮಗಳು ಮೂರುಕೋಟಿ ಐವತ್ತು ಲಕ್ಷಗಳು ನನ್ನ ಮೈಮೇಲಿವೆ. ಇವೆಲ್ಲವೂ ಉದುರಿಹೋದಮೇಲೆಯೇ ದಾಸನಾದ ನಾನೂ ನಿಮ್ಮಲ್ಲೈಕ್ಯವಾಗಿ ಸದಾ

ಪರಮಾನಂದಸುಖವನ್ನನುಭವಿಸುತ್ತಿರುವೆನು. ಹಾಗೆಂದರೆ, ಮೂರು ಕೋಟಿ ಐವತ್ತು ಲಕ್ಷ ಇಂತಹ ಬ್ರಹ್ಮದೇವರು ನಾಶವಾದ ಮೇಲೆಯೇ ನನ್ನ ಆಯುಸ್ಸು ತೀರಿ ನಾನು ನಿನ್ನೊಳಗೈಕ್ಯವಾಗುತ್ತೇನೆ' ಎಂದು ರೋಮಚಮಹರ್ಷಿಯು ಉತ್ತರಕೊಟ್ಟನು.

ಅದಕ್ಕೆ ಶ್ರೀ ಮಹಾವಿಷ್ಣುವು ರೋಮಚನನ್ನು ಕುರಿತು, 'ಮುನಿವರನೇ! ಮೂರು ಕೋಟಿ ಐವತ್ತು ಲಕ್ಷ ಬ್ರಹ್ಮದೇವರುಗಳು ನಾಶವಾಗುವವರಿವಿಗೂ ಜೀವಿಸಿರುವ ಈ ಶರೀರವನ್ನು ರಕ್ಷಿಸಬೇಕಾದರೆ ನಿನಗೆ ಒಂದು ದೊಡ್ಡಮನೆಯು ಇರಬೇಕಲ್ಲವೇ? ಮನೆಮಠಗಳಿಲ್ಲದೆ ಗಿಡದ ಕೆಳಗೆ ಈರೀತಿಯಾಗಿ ಏತಕ್ಕೆ ವಾಸಮಾಡುತ್ತಿ ?, ಎಂದು ಕೇಳಿದನು. ಅದಕ್ಕೆ ರೋಮಚನು ದೇವನಿಗೆ ನಮಸ್ಕರಿಸಿ, "ದೇವಾ! ಈ ದೇಹವು ನೀರಮೇಲಣ ಗುಳ್ಳೆಯಂತೆ ನಶ್ವರವೆಂದು ತಿಳಿದಮೇಲೆ, ಇದನ್ನು ಅಷ್ಟು ಭದ್ರವಾಗಿ ಕಾಪಾಡಬೇಕಾದ ಅಗತ್ಯವೇನು? ತಮ್ಮ ಪಾದಸೇವೆಯನ್ನು ಮಾಡುವವರಿಗೆ ದೇಹಾಭಿಮಾನವಿರಲೇ ಬಾರದು. ದೇಹಾಭಿಮಾನ ವಿರುವ ವರಿವಿಗೂ ದುಃಖವಲ್ಲದೆ ಸುಖವೆಂಬುದೇ ಇಲ್ಲ.' ಎಂದು ಉತ್ತರ ಕೊಟ್ಟನು.

ಆ ವಿಷ್ಣುಮೂರ್ತಿಯು ಹೆಚ್ಚಾಗಿ ಸಂತೋಷಿಸಿ ಆ ಮಹರ್ಷಿಗೆ ಮಹಾವಾಕ್ಯಗಳನ್ನು ಉಪದೇಶಮಾಡಿ, "ರೋಮಚ ಮಹರ್ಷಿಯು ಹೇಳಿದ ವಾಕ್ಯಗಳೆಲ್ಲವೂ ಸತ್ಯವಾದವುಗಳೇ" ಎಂದು ಒತ್ತಿ ಹೇಳಿ, 'ನಾವು ಇನ್ನು ಹೊರಡುವೆವು,' ಎಂದು ಆ ಋಷಿಗೆ ತಿಳಿಸಲು, ಆತನು ಭಗವಂತನಾದ ಮಹಾವಿಷ್ಣುವಿಗೆ ಸಾಷ್ಟಾಂಗಪ್ರಣಾಮಮಾಡಿ ಮೇಲೆದ್ದು ಆತನನ್ನು ಕುರಿತು, "ಓ ದೇವಾ! ನಿಮ್ಮ ಪಾದಸೇವೆಯು ಪುನಃ ನನಗೆಂದಿಗೆ ಲಭ್ಯವಾಗಿ ನಾನೆಂದಿಗೆ ಕೃತಾರ್ಥನಾಗುತ್ತೇನೆಯೋ ತಿಳಿಯದು" ಎಂದು ಮನಸ್ಸಿನಲ್ಲಿ ವೆಥೆಪಡುತ್ತ ಸ್ವಲ್ಪದೂರ ಅವರನ್ನು ಹಿಂಬಾಲಿಸಿ ಕಳುಹಿಸಿಕೊಟ್ಟು ಹಿಂದಿರುಗಿದನು.

ಶ್ರೀ ಮಹಾವಿಷ್ಣುವು ರೋಮಚ ಋಷಿಯನ್ನು ಕುರಿತು, 'ಹೋಗಿ ಬರುತ್ತೇನೆ' ಎಂದು ಹೇಳಿ ಬ್ರಹ್ಮನಿಂದೊಡಗೂಡಿ ಹೊರಟು ಮತ್ತೊಂದು

ಅರಣ್ಯ ಮಧ್ಯಭಾಗದಲ್ಲಿನ ನಿರ್ಮಲವಾದ ಒಂದು ಸ್ಥಳದಲ್ಲಿ ಬ್ರಹ್ಮಾನುಸಂಧಾನವನ್ನು ಮಾಡುತ್ತಿದ್ದ 'ಅಷ್ಟಾವಕ್ರ' ಮಹರ್ಷಿಯ ಸಮೀಪವನ್ನು ಸೇರಿ ಆತನಿಗೆ ದರ್ಶನಕೊಟ್ಟನು. ಆಗ ಆ ಮಹರ್ಷಿಯು ಭಗವದ್ದರ್ಶನವಾದ ಕೂಡಲೇ ಪರಮಾನಂದದಿಂದ ವಿಷ್ಣುಮೂರ್ತಿಯನ್ನು ತೃಪ್ತಿಯಾಗುವಂತೆ ನಾನಾ ವಿಧವಾಗಿ ಸ್ತುತಿಮಾಡಿ, "ದೇವದೇವೋತ್ತಮಾ! ವೈಕುಂಠವಾಸಾ! ಸಮಸ್ತ ಪ್ರಪಂಚಕ್ಕೂ ಭಗವಂತನೆನಿಸುವ ತಾವು ಈ ಅರಣ್ಯಪ್ರದೇಶಕ್ಕೆ ದಯಮಾಡಿ ದಾಸನಾದ ನನಗೆ ದರ್ಶನವನ್ನು ಕೊಟ್ಟಿರುವುದು ತುಂಬಾ ಆಶ್ಚರ್ಯಕರವಾದ ವಿಷಯವು. ನಿಮ್ಮ ದಾಸಾನುದಾಸನಾದ ನನ್ನಿಂದ ತಮಗೆ ಯಾವುದಾದರೂ ಕಾರ್ಯವಾಗಬೇಕಾದರೆ, ತಾವು ಮನಸ್ಸಿನಲ್ಲೆಣಿಸಿದ ತಕ್ಷಣವೇ ಶಿರಸಾವಹಿಸಿ ಮಾಡುತ್ತೇನೆ. ಮಹಾಸ್ವಾಮಿಯವರ ಭಕ್ತಜನವಾತ್ಸಲ್ಯವನ್ನು ಏನೆಂದು ಹೇಳಲಿ? ಸ್ವಾಮಿಗಳ ಸಮೀಪಕ್ಕೆ ದಾಸನಾದ ಭಕ್ತನು ಬಂದದ್ದೇ ಆದರೆ, ಅಂಥವನಿಗೆ ಮಾರ್ಗಾಯಾಸವಾಗುತ್ತದೆಂದು ಶಂಕಿಸಿ, ತಾವೇ ಇಲ್ಲಿಗೆ ದಯಮಾಡಿಸಿದಿರಾ ಏನು? ನಿಮ್ಮ ಭಕ್ತನಾದ ನಾನು ಧನ್ಯನಾದೆನು. ಬಂದ ಕಾರ್ಯವನ್ನು ದಯವಿಟ್ಟು ತಿಳಿಸಬೇಕು" ಎಂದು ಬಹಳ ವಿನಯಪೂರ್ವಕವಾಗಿ ಕೈಜೋಡಿಸಿಕೊಂಡು 'ಅಷ್ಟಾವಕ್ರ' ಮಹರ್ಷಿಯು ವಿಷ್ಣುವನ್ನು ಬೇಡಿಕೊಂಡನು.

ಆಗ ಷಡ್ಗುಣೈಶ್ವರ್ಯಸಂಪನ್ನನಾದ ಆ ಸ್ವಾಮಿಯು ಮುಗುಳುನಗೆನಕ್ಕು ಅಷ್ಟಾವಕ್ರಮಹರ್ಷಿಯನ್ನು ನೋಡಿ, "ಋಷಿಕುಲೋತ್ತಮಾ! ನಿಮ್ಮ ಆಯುಃಪ್ರಮಾಣವನ್ನು ತಿಳಿಯುವ ಸಲುವಾಗಿಯೇ ನಾವಿಬ್ಬರೂ ಇಲ್ಲಿಗೆ ಬಂದಿದ್ದೇವೆ. ಆ ವಿಷಯವನ್ನು ಈ ಬ್ರಹ್ಮದೇವನಿಗೆ ಸರಿಯಾಗಿ ತಿಳಿಯಪಡಿಸಿ" ಎಂದು ವಿಷ್ಣುಮೂರ್ತಿಯು ಹೇಳಿದನು.

ಆಗ ಅಷ್ಟಾವಕ್ರಮಹರ್ಷಿಯು ಶ್ರೀಮನ್ನಾರಾಯಣನನ್ನು ಕುರಿತು, 'ಪರಮೇಶ್ವರಾ! ಪರಂಧಾಮಾ! ಸಕಲ ಲೋಕಗಳ ರಕ್ಷಕನಾದ, ದೇವದೇವನಾದ ನಿಮಗೆ ತಿಳಿಯದಿರುವ ವಿಷಯವೇನಾದರೂ ಇದೆಯೇ? ಆದರೂ ಭಗವಂತನ ಆಜ್ಞೆಯನ್ನು ಮೀರಿ ನಡೆಯುವುದು ದಾಸನಾದ ನನಗೆ ಯುಕ್ತವಲ್ಲ. ನನ್ನ ಶರೀರದಲ್ಲಿ ಎಂಟು ಕವಲುಗಳಿವೆ. ಆದುದರಿಂದಲೇ

ನನಗೆ ಅಷ್ಟಾವಕ್ರನೆಂಬ ಹೆಸರು ಬಂದಿದೆ. ಈ ಎಂಟು ವಕ್ರಗಳೂ ಸಮನಾದದ್ದೇ ಆದರೆ ಅಲ್ಲಿಗೆ ನನ್ನ ಆಯುಸ್ಸು ತೀರುತ್ತದೆ. ಅಂದರೆ ಮೂರು ಕೋಟಿ ಐವತ್ತು ಲಕ್ಷ ಬ್ರಹ್ಮದೇವರು ಮೃತಿಹೊಂದಿದರೆ ರೋಮಚ ಮಹರ್ಷಿಯ ಆಯುರ್ಭಾಗವು ತೀರುತ್ತದೆ. ಅಂತಹ ರೋಮಚಮಹರ್ಷಿಗಳು ಎಂಟುವೇಳೆ ಮೃತಿಹೊಂದಿದ್ದೇ ಆದರೆ ನನ್ನ ದೇಹದಲ್ಲಿರುವ ಈ ಎಂಟು ವಕ್ರ (ಕವಲು) ಗಳೂ ಸರಿಹೋಗಿ ಪರಿಶುದ್ಧ ಬ್ರಹ್ಮಸ್ವರೂಪನೇ ನಾನಾಗುತ್ತೇನೆ' ಎಂದು ಆ ಮಹರ್ಷಿಯು ಉತ್ತರಕೊಟ್ಟನು.

ಆಗ ವಿಷ್ಣುಮೂರ್ತಿಯು, ಆ ಮುನಿವರ್ಯನನ್ನು ನೋಡಿ, "ಅಯ್ಯಾ! ಅಷ್ಟು ದೀರ್ಘಕಾಲದವರಿವಿಗೂ ಈ ನಿಮ್ಮ ಶರೀರವನ್ನು ಸಂರಕ್ಷಣೆ ಮಾಡಬೇಕಾದರೆ ನಿಮಗೆ ಒಂದು ಮನೆಯಾದರೂ ಬೇಕಲ್ಲವೇ? ನಿಮಗೆ ಮನೆಯೆಂಬುದು ಇದ್ದಂತೆಯೇ ಕಾಣಲಿಲ್ಲವಲ್ಲಾ? ಮನೆಯಿಲ್ಲದೆ ನೀವು ಹೇಗಿದ್ದೀರಿ?" ಎಂದು ಪ್ರಶ್ನಿಸಿದನು. ಆದಕ್ಕೆ ಆ ಮುನಿಶ್ರೇಷ್ಠನು ಹೀಗೆಂದು ಉತ್ತರಕೊಟ್ಟನು. "ಓ ಮಹಾನುಭಾವಾ! ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹಾಗೆ ಕೇಳುತ್ತಿದ್ದೀರೇ ಹೊರತು, ಮತ್ತೆ ಬೇರಲ್ಲ. ಆದರೂ ಈ ದಾಸನನ್ನು ಒಬ್ಬ ದೊಡ್ಡ ಮನುಷ್ಯನೆಂದು ತಿಳಿದು ಹೀಗೆ ಕೇಳುತ್ತಿದ್ದೀರಲ್ಲವೇ? ತಾವು ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಕೇಳಿ. ಈ ದೇಹವು ನೀರಿನ ಗುಳ್ಳೆಯಂತಿದೆಯೆಂದು ಎಣಿಸದೆ ಶಾಶ್ವತವಾದುದೆಂದೇ ತಿಳಿದು, ಈ ಶರೀರವನ್ನು ಸರ್ವ ಪ್ರಯತ್ನದಿಂದಲೂ ರಕ್ಷಿಸಬೇಕೆಂಬ ಬುದ್ಧಿಯುಳ್ಳವರಿಗೆ ಮಾತ್ರ ಮನೆಯೆಂಬುದಿರಬೇಕು. ಈ ವಿಷಯದಲ್ಲಿ ಹೆಚ್ಚು ಗಮನಕೊಟ್ಟದ್ದೇ ಆದರೆ, ಭಗವಂತನಾದ ನಿಮ್ಮನ್ನು ಸ್ಮರಣೆಮಾಡುವುದಕ್ಕೆ ಬುದ್ಧಿ ಹುಟ್ಟೀತೇ? ಎಂದಿಗೂ ಹುಟ್ಟದು. ಸಮಸ್ತ ಪ್ರಪಂಚವನ್ನೂ ಸೃಷ್ಟಿಮಾಡುವುದಕ್ಕೂ ರಕ್ಷಿಸುವುದಕ್ಕೂ ಸಂಹಾರಮಾಡುವುದಕ್ಕೂ ನೀವೇ ಕರ್ತರಾಗಿರುವಾಗ ಈ ದಾಸನಾದ ನನಗೆ ಯಾವ ಬಗೆಯಾದ ಸಂಬಂಧವಿರುತ್ತದೆ. ದೇಹಾಭಿಮಾನವಿರುವವರಿವಿಗೂ ಅಜ್ಞಾನವು ನಶಿಸದಲ್ಲವೇ? ಪೂರ್ವಜನ್ಮ ಕರ್ಮಗಳ ದೆಸೆಯಿಂದ ಅಭಿಮಾನವುಂಟಾಗುತ್ತದೆ. ಅಂತಹ ಅಭಿಮಾನವನ್ನು ಸಂಪೂರ್ಣವಾಗಿ ಬಿಡುವಿಕೆಯೇ ಜ್ಞಾನವೆಂದು ಹಿಂದೆ ಒಂದು ವೇಳೆ

ನೀವೇ ಹೇಳಿದ್ದಿರಲ್ಲವೇ? ದೇಹಸಂರಕ್ಷಣೆಗೋಸ್ಕರ ಮನೆಯೇ ಬೇಕಾದುದಿಲ್ಲವೆಂದು ತಿಳಿದಿರುವಾಗ ಆ ವಿಷಯವಾಗಿ ಯಾವ ಪ್ರಯತ್ನವನ್ನು ಮಾಡುವುದೂ ಅನವಶ್ಯಕ," ಎಂದು ಹೇಳಿದನು.

ಈ ವಿಧವಾದ ಋಷಿಯ ಉತ್ತರವನ್ನು ಕೇಳಿದ ಶ್ರೀಮನ್ನಾರಾಯಣನು ತುಂಬಾ ಸಂತೋಷಪಟ್ಟು ಕೆಲವು ತತ್ವಗಳನ್ನು ಆ ಋಷಿಗೆ ಉಪದೇಶಿಸಿ ಬ್ರಹ್ಮನ ಎದುರಾಗಿಯೇ 'ಅಷ್ಟಾವಕ್ರ ಮುನಿಯು ಹೇಳಿದುದೆಲ್ಲವೂ ಯಥಾರ್ಥವು,' ಎಂದು ಒಪ್ಪಿ, 'ನಾವು ಇನ್ನು ಹೊರಡುತ್ತೇವೆ,' ಎಂದು ಹೇಳಿ, ವಿಷ್ಣುಬ್ರಹ್ಮರಿಬ್ಬರೂ ಹೊರಟರು. ಆಗ ಆ ಋಷಿಯು 'ದೇವಾ! ಪರಮೇಶ್ವರನಾದ ನಿನ್ನ ಸೇವೆಯು ಇನ್ನೆಂದಿಗೆ ನನಗೆ ಲಭ್ಯವಾಗುತ್ತದೆಯೋ, ಮತ್ತು ನಾನು ಯಾವಾಗ ಕೃತಾರ್ಥನಾಗುತ್ತೇನೆಯೋ ತಿಳಿಯದು.' ಎಂದು ಹೇಳುತ್ತ, ಅವರ ಜೊತೆಯಲ್ಲಿಯೇ ಸ್ವಲ್ಪದೂರ ಹೋಗಿ ಸಾಗಕಳುಹಿಸಿ ಪುನಃ ಹಿಂದಿರುಗಿ ತಪಸ್ಸನ್ನು ಮಾಡುತ್ತ ಬ್ರಹ್ಮಾನಂದವನ್ನನುಭವಿಸುತ್ತಿದ್ದನು. ಅದಾದಮೇಲೆ ವಿಷ್ಣುಮೂರ್ತಿಯು ಬ್ರಹ್ಮನನ್ನು ಕರೆದುಕೊಂಡು ಪರಮಪದವಾದ ವೈಕುಂಠವನ್ನು ಸೇರಿ, ಅಲ್ಲಿ ರತ್ನಮಯವಾದ ಸಿಹ್ಮಾಸನದಲ್ಲಿ ಕುಳಿತುಕೊಂಡು, ಬ್ರಹ್ಮದೇವನನ್ನು ಕುರಿತು ಹೀಗೆಂದು ಹೇಳಿದನು.

"ಅಯ್ಯಾ, ಬ್ರಹ್ಮದೇವಾ! ನಾನು ಮುಂದೆ ಹೇಳುವ ವಾಕ್ಯಗಳನ್ನು ಸ್ವಲ್ಪ ಗಮನವಿಟ್ಟು ಕೇಳು. ಕಣ್ಣು ಕಿವಿ ಮೂಗು ಬಾಯಿ ಚರ್ಮಗಳೆಂಬ ಪಂಚೇಂದ್ರಿಯಗಳನ್ನು ಜಯಿಸಿ, ಅಜ್ಞಾನವೆಂಬ ಕತ್ತಲನ್ನು ದೂರ ತೊಲಗಿಸಿ, ಜ್ಞಾನವೆಂಬ ಪರಂಜ್ಯೋತಿಯನ್ನು ಆನಂದದಿಂದ ದರ್ಶನಮಾಡುತ್ತಿರುವ ಪರಮಭಕ್ತರಾದ ಮತ್ತು ಜೀವನ್ಮುಕ್ತರಾದ ಸತ್ಪುರುಷರನ್ನು ನೀನು ದರ್ಶನಮಾಡಿಕೊಂಡು ಅವರ ಶ್ರೇಷ್ಠವಚನಗಳನ್ನು ಆನಂದದಿಂದ ಕೇಳಿದೆಯಲ್ಲವೇ? ನೀನು ಪೂರ್ವಜನ್ಮದಲ್ಲಿ ಏನೋ ಒಂದು ಪುಣ್ಯವನ್ನು ಮಾಡಿರುವುದರಿಂದಲೇ ನಿನಗೆ ಆ ಮಹಾನುಭಾವರ ಸೇವೆಯು ಈಗ ಲಭ್ಯವಾಯಿತೇ ಹೊರತು, ಬೇರಲ್ಲ. ಇನ್ನಾದರೂ ನೀನು ಈ ಅಹಂಕಾರವನ್ನು ಬಿಟ್ಟು ಭಕ್ತಿಯಿಂದಿರುವವನಾಗು. ಲೋಕ

ದಲ್ಲಿ ಅಹಂಕಾರದಿಂದ ಕೂಡಿರುವವರಲ್ಲಿ ಯಾರಾದರೂ ಸಂಸಾರಸಾಗರ ದಿಂದ ಕಡೆಹಾಯ್ದಿದ್ದಾರೆಯೇ? ಇಂಥವರಿಗೆ ಅಧೋಗತಿಯೇ ಹೊರತು ಮತ್ತೇನಿದೆ? ಎಂಥವರಿಗೇ ಆಗಲಿ, ಅಹಂಕಾರವೆಂಬುದು ಕೇಡನ್ನು ತರುವುದು ನಿಜ. ಇನ್ನಾದರೂ 'ನಾನು' ಎಂಬ ಗರ್ವವನ್ನು ಬಿಟ್ಟು ತೊಲಗಿಸು.' ಎಂಬದಾಗಿ ಅಹಂಕಾರ ನಿರಹಂಕಾರದ ವಿಷಯಗಳನ್ನು ಕುರಿತು ಸ್ವಲ್ಪಕಾಲ ಶ್ರೀಮನ್ನಾರಾಯಣನು ಬ್ರಹ್ಮದೇವನಿಗೆ ಉಪನ್ಯಾಸ ಮಾಡಿದನು.

ಬ್ರಹ್ಮದೇವನು ಆ ವಾಕ್ಯಗಳನ್ನು ಕೇಳಿದ ಕೂಡಲೇ ಜ್ಞಾನವನ್ನು ತಂದುಕೊಂಡು, ವಿಷ್ಣುಮೂರ್ತಿಗೆ ನಮಸ್ಕರಿಸಿ, 'ದೇವದೇವೋತ್ತಮಾ! ನನ್ನ ಹೃದಯಾಕಾಶವನ್ನು ಮುಚ್ಚಿಕೊಂಡಿರುವ ಅಹಂಕಾರವೆಂಬ ಗಾಢಾಂಧಕಾರವೆಲ್ಲವೂ ನಿಮ್ಮ ಕೃಪಾಕಟಾಕ್ಷವೀಕ್ಷಣವೆಂಬ ಜ್ಯೋತಿಯ ಪ್ರಕಾಶದಿಂದ ತೊಲಗಿಹೋಗಿ ನನಗೆ ಜ್ಞಾನೋದಯವುಂಟಾಗಿದೆ. ಲೋಕಾಭಿಮಾನಪಾಶದ ದೆಸೆಯಿಂದ ಬಿಡುಗಡೆಯನ್ನು ಹೊಂದಿ ಮುಮುಕ್ಷು ವಾಗಿರುತ್ತೇನೆ.' ಎಂದು ಹೇಳಿ ವಿಷ್ಣುಮೂರ್ತಿಯ ಅನುಜ್ಞೆಯನ್ನು ತೆಗೆದುಕೊಂಡು ತನ್ನ ವಾಸಸ್ಥಾನವಾದ ಸತ್ಯಲೋಕಕ್ಕೆ ಹೊರಟು ಹೋದನು.

ಇಷ್ಟು ದೀರ್ಘಾಯಸ್ಸನ್ನುಳ್ಳ ಬ್ರಹ್ಮದೇವನು ಒಂದು ಬಾರಿ ಕಣ್ಣು ರೆಪ್ಪೆ ಹಾಕುವುದರೊಳಗಾಗಿ ಮಾನವರೆಲ್ಲರೂ ಅನೇಕಕೋಟಿ ಜನ್ಮಗ ಳನ್ನೆತ್ತಿ, ಮಾಯಾಜಾಲದಿಂದ ತುಂಬಿರುವ ಸಂಸಾರವೆಂಬ ಚಕ್ರದಲ್ಲಿ ಸಿಕ್ಕಿಬಿದ್ದು, ಪ್ರತಿದಿನವೂ ತಾವು ಮಾಡುತ್ತ ಬರುತ್ತಿರುವ ಕರ್ಮಗಳನ್ನೇ ಪುನಃಪುನಃ ಮಾಡುತ್ತ, ನಿತ್ಯವೂ ನಡೆಯುವಂಥ ಇಪ್ಪತ್ತುನಾಲ್ಕು ಘಂಟೆ ಗಳಲ್ಲಿಯೂ ಇಹಲೋಕ ಸುಖಗಳಾದ ಭಾರ್ಯಾಪುತ್ರಗೃಹಾರಾಮಾದಿ ಗಳೊಡನೆ ಓಲಾಡುತ್ತ, ಒಂದು ನಿಮಿಷವಾದರೂ ಪರಮಾತ್ಮಧ್ಯಾನಕ್ಕೆ ಮನಗೊಡದೆ, ಜನನಮರಣಗಳೆಂಬ ದುಃಖವನ್ನನುಭವಿಸುತ್ತಲೇ ಇರು ವರು. ಸರ್ವಸಂಗಪರಿತ್ಯಾಗವನ್ನು ಮಾಡಿದವರಾಗಿಯೂ, ಬ್ರಹ್ಮ ಮಾನಸ ಪುತ್ರರಾಗಿಯೂ, ಯಾವಾಗಲೂ ಪರಮಾತ್ಮನಲ್ಲಿಯೇ ತಮ್ಮ

ಮನಸ್ಸನ್ನು ಲೀನಮಾಡಿ ಪ್ರಪಂಚವನ್ನುದ್ಧಾರಮಾಡುವುದಕ್ಕಾಗಿ ಮೂರು ಲೋಕಗಳಲ್ಲಿ ತಿರುಗುತ್ತಿರುವವರಾಗಿಯೂ, ಮತ್ತು 'ನಾರಾಯಣನೆಂಬ ನಾಮದ ಬೀಜವ ♦ ನಾರದ ಬಿತ್ತಿದ ಧರೆಯೊಳಗೆ' ಎಂಬಂತೆ ನಾರಾಯಣನೆಂಬ ಪರಮಾತ್ಮನ ದಿವ್ಯನಾಮದ ಬೀಜವನ್ನು ಎಲ್ಲೆಲ್ಲಿಯೂ ನೆಡುವುದಕ್ಕಾಗಿ ತಮ್ಮ ವೀಣೆಯಿಂದ ಪರಮಾತ್ಮನ ಮಹಿಮೆಯನ್ನು ಗಾನ ರೂಪದಿಂದ ಹಾಡುತ್ತಿರುವವರಾಗಿಯೂ, ಯಾವ ಮಹಾತ್ಮರು ಬೆಳಗುತ್ತಿದ್ದರೋ, ಅಂತಹ ನಾರದರೂ ಕೂಡ ಕರ್ಮಾನುಬಂಧದಿಂದ ಭಾರ್ಯಾಪುತ್ರರೆಂಬ ಬಲೆಗಳಲ್ಲಿ ಸಿಕ್ಕಿಕೊಂಡು ಯಾವ ರೀತಿಯಲ್ಲಿ ದುಃಖಕ್ಲೇಶಗಳನ್ನು ಅನುಭವಿಸಿದರೆಂಬುದನ್ನು ಈ ಮುಂದೆ ತಿಳಿಸಿದೆ.

ಈ ನಾರದ ಮಹರ್ಷಿಗಳು ಒಂದಾನೊಂದುದಿನ ವೈಕುಂಠಕ್ಕೆ ಹೋಗಿ ಶ್ರೀ ಮಹಾವಿಷ್ಣುವನ್ನು ದರ್ಶನಮಾಡಿಕೊಂಡು ಆ ಸ್ವಾಮಿಯನ್ನು ಕುರಿತು, "ಓ ಸ್ವಾಮಿ! 'ವಿಷ್ಣುಮಾಯೆಯನ್ನು ಜಯಿಸುವುದಕ್ಕೆ ಋಷೀಶ್ವರರಿಗೆ ಕೂಡ ಸಾಧ್ಯವಾಗದು' ಎಂದು ಹೇಳುತ್ತಿದ್ದಾರೆ. 'ಆ ಮಾತು ಸರಿಯಾದುದಲ್ಲ' ಎಂದು ನನ್ನಭಿಪ್ರಾಯವು. ಸಾಮಾನ್ಯರಾದ ಮಾನವರ ವಿಷಯದಲ್ಲಿ ಈ ಮಾತು ಸರಿಹೋದೀತು. ಆದರೆ ನನ್ನಂತಹ ಮಹಾಯೋಗಿಗಳಾದ ಮುನಿಗಳು ನಿಮ್ಮ ಮಾಯೆಯನ್ನು ಜಯಿಸಲು ಸಾಧ್ಯವಿಲ್ಲವೆಂಬ ಮಾತು ಸುಳ್ಳು," ಎಂದು ಗರ್ವಿಸಿ ಮಾತನಾಡಿದನು. ಮಹಾವಿಷ್ಣುವು ಹುಸಿನಗು ನಕ್ಕು ಸುಮ್ಮನಾದನು. ಇದಾದಮೇಲೆ ಒಂದು ಸಮಯದಲ್ಲಿ ಮಹಾವಿಷ್ಣುವು ನಾರದನನ್ನು ಕರೆದುಕೊಂಡು ಮಹಾರಣ್ಯಮಧ್ಯಪ್ರದೇಶದಲ್ಲಿ ಒಂದು ಕಡೆ ನಿಂತು, ನಾರದನನ್ನು ಕುರಿತು "ನಾರದಾ! ನನಗೆ ವಿಶೇಷ ದಾಹವಾಗುತ್ತದೆ. ಸ್ವಲ್ಪ ನೀರನ್ನು ತಂದುಕೊಡಬಲ್ಲೆಯಾ?' ಎಂದು ಕೇಳಿದನು. ನಾರದನು ಅದಕ್ಕೆ ಒಪ್ಪಿ ನೀರು ತರುವವರಿವಿಗೂ ಅಲ್ಲಿಯೇ ಇರುವಂತೆ ಶ್ರೀ ವಿಷ್ಣುಮೂರ್ತಿಗೆ ಹೇಳಿ ಸ್ವಲ್ಪದೂರ ನಡೆದುಹೋಗಲು, ಒಂದು ಗ್ರಾಮವು ಆತನಿಗೆ ಕಾಣಬಂದಿತು. ನಾರದನು 'ಈ ಊರಿನಲ್ಲಿ ಕುಡಿಯುವ ನೀರು ಸಿಕ್ಕಬಹುದು' ಎಂದು ಅದರೊಳಕ್ಕೆ ಪ್ರವೇಶಿಸಿ, ಒಂದು ಬೀದಿಯಲ್ಲಿ ಹೋಗುತ್ತಿದ್ದನು. ಅಲ್ಲಿ ಒಂದು ಸೊಗಸಾದ ಭವನವು ಕಂಡು ಬಂದಿತು. ನಾರದನು ಆ ಮನೆಯ

ಸಮೀಪಕ್ಕೆ ಹೋಗಿ ಬಾಗಿಲು ತಟ್ಟಿ ಒಳಗಿರುವವರನ್ನು ಕೂಗಿ ಕರೆದನು. ಇದನ್ನು ಕೇಳಿ ಆ ಮನೆಯಲ್ಲಿದ್ದ ಒಂದು ಹುಡುಗಿಯು ಬಂದು ಬಾಗಿಲನ್ನು ತೆರೆದಳು. ಆಗ ನಾರದನು ಆ ಹುಡುಗಿಯ ಸೌಂದರ್ಯಾದಿಗಳನ್ನು ನೋಡಿ ಆಶ್ಚರ್ಯಪಟ್ಟು ತಾನು ಬಂದ ಕಾರ್ಯವನ್ನೂ ಮರೆತು ಅವಳೊಡನೆ ಲೌಲ್ಯದಿಂದ ಸಂಭಾಷಣೆಯನ್ನು ಮಾಡುವುದಕ್ಕಾರಂಭಿಸಿದನು. ಮಾತನಾಡುತ್ತ ಆಡುತ್ತ ಕಡೆಗೆ ಅವಳನ್ನು ತಾನು ಮದುವೆಯಾಗಬೇಕೆಂಬ ಆಸೆಯು ಹುಟ್ಟಿ, ತನ್ನಭಿಪ್ರಾಯವನ್ನು ಅವಳಿಗೆ ತಿಳಿಸಿದನು. ಅದಕ್ಕಾ ಯುವತಿಯು 'ನನ್ನ ತಂದೆಯ ಅನುಜ್ಞೆಯನ್ನು ಪಡೆದಮೇಲೆ ಮದುವೆಮಾಡಿಕೊಳ್ಳಲೊಪ್ಪುವೆನು' ಎಂದು ಉತ್ತರ ಕೊಟ್ಟಳು. ಹಾಗೆಯೇ ಆಗಲೆಂದು ಆ ನಾರದನು ಆ ಹುಡುಗಿಯ ತಂದೆಯ ಸಮೀಪಕ್ಕೆ ಹೋಗಿ ತನ್ನ ಕೋರಿಕೆಯನ್ನು ಆತನಿಗೆ ವ್ಯಕ್ತಪಡಿಸಿದನು. ಆ ತಂದೆಯು ಇದಕ್ಕೆ ಸಮ್ಮತಿಪಟ್ಟು ಮಗಳನ್ನು ಕೊಟ್ಟು ನಾರದನಿಗೆ ಮದುವೆ ಮಾಡಿದನು. ಇದಾದ ಹತ್ತು ವರ್ಷಗಳಕಾಲ ಆಕೆಯೊಡನೆ ಸಂಸಾರಮಾಡುತ್ತ ಬಂದನು. ತನ್ನ ಮಾವನಿಗೆ ಆಕೆಯೊಬ್ಬಳೇ ಮಗಳಾದುದರಿಂದ ನಾರದನು ಆ ಮಾವನ ಮನೆಯಲ್ಲಿಯೇ ನಿಂತು ಸುಖಸಂತೋಷಗಳನ್ನನುಭವಿಸುತ್ತ ಬಂದನು. ಆ ಮಾವನು ಮಹಾ ಧನಿಕನು. ಆತನಿಗೆ ಮನೆಗಳು, ತೋಟಗಳು, ಗದ್ದೆಹೊಲಗಳು ಇವು ಅನೇಕವಾಗಿದ್ದವು. ಒಂದಾನೊಂದುದಿನ ಆ ನಾರದನ ಮಾವನಿಗೆ ವ್ಯಾಧಿ ಸಂಭವಿಸಿ ಅವನು ಮರಣ ಹೊಂದಿದನು. ಅನಂತರ ಆ ಆಸ್ತಿಯನ್ನೆಲ್ಲಾ ತಾನೇ ನೋಡಿಕೊಳ್ಳುತ್ತ, ನಾರದನು ತನ್ನ ಹೆಂಡತಿಯೊಡಗೂಡಿ ದಿವ್ಯ ಸುಖಗಳನ್ನನುಭವಿಸುತ್ತ ಬಂದನು. ಅವನಿಗೆ ಮೂರುಜನ ಮಕ್ಕಳಾದರು. ರೂಪವತಿಯಾದ ತನ್ನ ಹೆಂಡತಿಯಲ್ಲಿಯೂ ಮನೋಹರವಾದ ರೂಪವುಳ್ಳ ತನ್ನ ಮಕ್ಕಳಲ್ಲಿಯೂ ಅಧಿಕವಾದ ಪ್ರೇಮವನ್ನಿಟ್ಟು ಸುಖ ಸಂತೋಷಗಳಿಂದ ತನ್ನ ನಿಜಸ್ಥಿತಿಯನ್ನೇ ಮರೆತು ಬೀಗಿ ಮೆರೆಯುತ್ತಿದ್ದನು.

ಹೀಗಿರಲು, ಒಂದಾನೊಂದುದಿನ ಅಧಿಕವಾಗಿ ಮಳೆ ಸುರಿದು ಸಮೀಪದಲ್ಲಿ ಹರಿಯುತ್ತಿದ್ದ ಒಂದು ನದಿಯಲ್ಲಿ ಪ್ರವಾಹವು ಹೆಚ್ಚಾಗಿ ಆ ನಾರ

ದನು ವಾಸಮಾಡುತ್ತಿದ್ದ ಗ್ರಾಮವನ್ನು ಮುಳುಗಿಸಿ ಕೊಚ್ಚಿ ಬಿಟ್ಟಿತು. ಗ್ರಾಮದವಸ್ಥೆಯನ್ನು ಕೇಳಬೇಕೇ? ಮನೆಗಳು ಕೂಲಿದವು, ಪಶುಗಳು ಸತ್ತುವು, ಅನೇಕ ಗ್ರಾಮವಾಸಿಗಳು ಪ್ರವಾಹದಲ್ಲಿ ಹೊಡೆದುಕೊಂಡು ಹೋದರು. ಆ ಸಮಯದಲ್ಲಿ ನಾರದನು, ತನ್ನ ಅಪರಿಮಿತವಾದ ವಿಶ್ವಾಸಕ್ಕೆ ಪಾತ್ರರಾದ ಹೆಂಡತಿ ಮಕ್ಕಳನ್ನು ಕಾಪಾಡುವ ಸಲುವಾಗಿ, ಇಬ್ಬರು ಮಕ್ಕಳನ್ನು ತನ್ನ ಹೆಗಲುಗಳ ಮೇಲೇರಿಸಿಕೊಂಡು, ಇನ್ನೊಬ್ಬನನ್ನು ಕೌಂಕುಳಲ್ಲೆತ್ತಿಕೊಂಡು, ಹೆಂಡತಿಯ ಕೈ ಹಿಡಿದು, ಪ್ರವಾಹದ ಹಾವಳಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಎತ್ತರವಾದ ಸ್ಥಳಕ್ಕೆ ಹೋಗಿ ಪ್ರಾಣವುಳಿಸಿಕೊಳ್ಳಬೇಕೆಂದು ಪ್ರಯಾಣನಾದನು. ಹೀಗೆ ಪ್ರಯಾಣವು ಮುಂದರಿಯುತ್ತಿರುವಾಗ ನೀರಿನಲ್ಲಿ ಒಂದಾನೊಂದು ಕಡೆ ಬಹಳ ಆಳವಾಗಿರುವುದನ್ನು ಕಾಣದೆ ಹೆಜ್ಜೆಯಿಟ್ಟು ಜೋರಲಾಗಿ ಬಿದ್ದು, ಹೆಗಲಮೇಲಿದ್ದ ಇಬ್ಬರು ಮಕ್ಕಳನ್ನೂ, ಕೌಂಕಳಲ್ಲಿದ್ದ ಇನ್ನೊಬ್ಬನನ್ನೂ, ತನ್ನ ಕೈ ಹಿಡಿದುಕೊಂಡಿದ್ದ ಹೆಂಡತಿಯನ್ನೂ, ಕೈ ಬಿಟ್ಟು ಅವರನ್ನು ನೀರುಪಾಲು ಮಾಡಿದನು. ಆದರೂ ತಾನು ಹೇಗೋ ಪ್ರವಾಹದ ಹಾವಳಿಯನ್ನು ತಪ್ಪಿಸಿಕೊಂಡು ಬಂದು ದಡವನ್ನೇರಿ ಪ್ರವಾಹದಲ್ಲಿ ಕೊಚ್ಚಿಹೋದ ತನ್ನ ಭಾರ್ಯಾಪುತ್ರರನ್ನು ಕುರಿತು ಬಹಳವಾಗಿ ದುಃಖಿಸತೊಡಗಿದನು. ಆ ಸಮಯದಲ್ಲಿ ಶ್ರೀ ಮಹಾವಿಷ್ಣುವು ಹಿಂದಿನಿಂದ ಬಂದು, ಬೆನ್ನನ್ನು ತಟ್ಟಿ 'ಓ ನಾರದಾ! ಏತಕ್ಕಾಗಿ ಹೀಗೆ ದುಃಖಿಸುತ್ತೀಯೆ? ನನ್ನ ದಾಹವನ್ನಣಗಿಸುವುದಕ್ಕಾಗಿ ನೀರನ್ನು ತರುತ್ತೇನೆಂದು ಹೇಳಿ ಬಂದು ಹತ್ತುವರುಷಗಳಾದವಲ್ಲಾ; ಏತಕ್ಕಿಷ್ಟಾಲಸ್ಯವನ್ನು ಮಾಡಿದೆ?' ಎಂದು ಕೇಳಿದನು. ಆಗ ಆ ನಾರದನು ಶ್ರೀ ವಿಷ್ಣುವಿನ ಮಾತನ್ನು ಕೇಳಿ ಗಾಬರಿಬಿದ್ದು, ಮಾಯೆಯಿಂದ ಮುಕ್ತನಾಗಿ ಸ್ವಾಮಿಯನ್ನು ನೋಡಿ, "ಸ್ವಾಮೀ! 'ನಿನ್ನ ಮಾಯೆಯನ್ನು ಜಯಿಸಲು ಯೋಗೀಂದ್ರರಿಗಾದರೂ ಶಕ್ಯವಲ್ಲ' ವೆಂಬುವ ನುಡಿ ಸತ್ಯವೇ ಸರಿ. ಓ ಮಹಾನುಭಾವಾ! ಪಂಕಜಾಕ್ಷಾ! ಪರಂಧಾಮಾ! ಭಕ್ತಪರಿಪಾಲಕಾ! ಪರಮಪುರುಷಾ! ಪನ್ನಗಶಯನಾ! ರಾಕ್ಷಸಾಂತಕಾ! ರಘುಕುಲತಿಲಕಾ! ಜಾನಕೀ ಪ್ರಾಣನಾಥಾ! ಮಾಧವಾ! ಶ್ಯಾಮಲವರ್ಣಾ! ವೇದಾಂತವೇದ್ಯಾ! ಜಗದ್ರಕ್ಷಕಾ! ಜಗದುತ್ಪತ್ತಿಸ್ಥಿತಿ

ಸಂಹಾರಕಾರಕಾ ! ಜಗನ್ನಾಥಾ ! ಮುನಿಕುಲಪಾಲಕಾ ! ದುರಿತವಿನಾಶಾ! ದೈತ್ಯಹಂತಾ ! ಪಾಪಹರಣಾ ! ದೇವದೇವಾ! ಬುಧಜನತೋಷಾ! ಪುರಾಣ ಪುರುಷಾ! ಅಖಿಲಾಂಡಕೋಟಿ ಬ್ರಹ್ಮಾಂಡನಾಯಕಾ! ನಿನ್ನ ಮಾಯೆಯನ್ನು ಜಯಿಸುವುದಕ್ಕೆ ಯಾರಿಗೆ ತಾನೇ ಸಾಧ್ಯ? ಬ್ರಹ್ಮಾದಿ ದೇವತೆಗಳಿಗೂ ಸಾಧ್ಯವಿಲ್ಲ.'' ಎಂದು ಹೇಳಿ, ಹೀಗೆಂದು ಸ್ತೋತ್ರ ಮಾಡಲಾರಂಭಿಸಿದನು.

ಶ್ಲೋ ॥ ಯೋಽಂತಃ ಪ್ರವಿಶ್ಯ ಮಮ ವಾಚ ♦ ಮಿಮಾಂ ಪ್ರಸುಪ್ತಾಂ ।
ಸಂಜೀವಯ ತ್ಯಖಿಲಶಕ್ತಿ ♦ ಧರ ಸ್ಸ್ವಧಾಮ್ನಾ ॥
ಅನ್ಯಾಂಶ್ಚ ಹಸ್ತಚರಣ ♦ ಶ್ರವಣತ್ವಗಾದೀ ।
ಪ್ರಾಣಾ ನ್ನಮೋ ಭಗವತೇ ♦ ಪುರುಷಾಯ ತುಭ್ಯಂ ॥

ಶ್ಲೋ ॥ ಏಕ ಸ್ತ್ವಮೇವ ಭಗವ ♦ ನ್ನಿದ ಮಾತ್ಮಶಕ್ತ್ಯಾ ।
ಮಾಯಾಖ್ಯಯೋರುಗುಣಯಾ ♦ ಮಹದಾ ದ್ಯಶೇಷಂ ॥
ಸೃಷ್ಟ್ವಾನುವಿಶ್ಯ ಪುರುಷ ♦ ಸ್ತದಸದ್ಗುಣೇಷು ।
ನಾನೇವ ದಾರುಷು ವಿಭಾ ♦ ವಸುವ ದ್ವಿಭಾತಿ ॥

ಶ್ಲೋ ॥ ತ್ವದ್ದತ್ತಯಾ ವಯುನ ಯೇದ ♦ ಮಚೇಷ್ಟ ವಿಶ್ವಂ ।
ಸುಪ್ತಃ ಪ್ರಬುದ್ಧ ಇವ ನಾಥ! ♦ ಭವತ್ಪ್ರಪನ್ನಃ ॥
ತಸ್ಯಾಪವರ್ಗ್ಯಶರಣಂ ♦ ತವ ಪಾದಮೂಲಂ ।
ವಿಸ್ಮರ್ಯತೇ ಕೃತವಿದಾ ಕಥ ♦ ಮಾರ್ತಬಂಧೋ! ॥

ಶ್ಲೋ ॥ ನೂನಂ ವಿಮೃಷ್ಟಮತಯ ♦ ಸ್ತವ ಮಾಯಯಾ ತೇ ।
ಯೇ ತ್ವಾ ಭವಾಪ್ಯಯವಿಮೋ ♦ ಕ್ಷಣ ಮನ್ಯಹೇತೋಃ ॥
ಅರ್ಚಂತಿ ಕಲ್ಪಕತರುಂ ♦ ಕುಣಪೋಪಭೋಗ್ಯಂ ।
ಇಚ್ಛಂತಿ ಯತ್ಸ್ಪರ್ಶಜಂ ♦ ನರಕೇಽಪಿ ನೃಣಾಂ ॥

ಶ್ಲೋ ॥ ಯಾ ನಿರ್ವೃತಿ ಸ್ತನುಭೃತಾಂ ♦ ತವ ಪಾದಪದ್ಮ –।
ಧ್ಯಾನಾ ದ್ಭವಜ್ಜನಕಥಾ ♦ ಶ್ರವಣೇನ ವಾ ಸ್ಯಾತ್ ॥
ಸಾ ಬ್ರಹ್ಮಣಿ ಸ್ವಮಹಿಮಾ ♦ ನ್ಯಪಿ ನಾಥ! ಮಾಭೂತ್ ।
ಕಿನ್ನ್ವಂತಕಾಸಿ ಲುಲಿತಾ ♦ ತ್ಪತತಾಂ ವಿಮಾನಾತ್ ॥

ಶ್ಲೋ ॥ ಭಕ್ತಿಂ ಮುಹುಃ ಪ್ರವಹತಾಂ ♦ ತ್ವಯಿ ಮೇ ಪ್ರಸಂಗೋ ।
ಭೂಯಾ ದನಂತಮಹತಾ ♦ ಮಮಲಾಶಯಾನಾಂ ॥

ಯೇನಾಂಜಸೋಽಲ್ಬಣ ಮುರು ♦ ವ್ಯಸನಂ ಭವಾಬ್ಧಿಂ ।
ನೇಷ್ಯೇ ಭವದ್ಗುಣಕಥಾ ♦ ಽಮೃತಪಾನಮತ್ತಃ ॥

ಶ್ಲೋ ॥ ತೇನ ಸ್ಮರಂ ತ್ಯತಿತರಾಂ ♦ ಪ್ರಿಯ ಮೀಶ! ಮರ್ತ್ಯಂ ।
ಯೇ ಚಾನ್ವದ ಸ್ಸುತಸುಹೃ ♦ ದ್ಗೃಹವಿತ್ತದಾರಾಃ ॥
ಯೇ ತ್ವಬ್ಜನಾಭ! ಭವದೀಯ ♦ ಪದಾರವಿಂದ-।
ಸೌಗಂಧ್ಯಲುಬ್ಧಹೃದಯೇಷು ♦ ಕೃತಪ್ರಸಂಗಾಃ ॥

ಶ್ಲೋ ॥ ತಿರ್ಯಙ್ನರದ್ವಿಜಸರೀ ♦ ಸೃಪದೇವದೈತ್ಯ-।
ಮರ್ತ್ಯಾದಿಭಿಃ ಪರಿಚಿತಂ ♦ ಸದಸ ದ್ವಿಶೇಷಂ ॥
ರೂಪಂ ಸ್ಥವಿಷ್ಠಮಜತೇ ♦ ಮಹದಾ ದ್ಯನೇಕಂ ।
ನಾಽತಃಪರಂ ಪರಮವೇದ್ಮಿ ♦ ನ ಯತ್ರ ವಾದಃ ॥

ಶ್ಲೋ ॥ ಕಲ್ಪಾಂತ ಏತ ದಖಿಲಂ ♦ ಜಠರೇಣ ಗೃಹ್ಣ್ ।
ಶೇತೇ ಪುಮಾನ್ ಸ್ವದೃಗನಂತ ♦ ಸಖ ಸ್ತದಂಕೇ ॥
ಯನ್ನಾಭಿಸಿಂಧುರುಹಕಾಂ ♦ ಚನಲೋಕಪದ್ಮ -।
ಗರ್ಭೇ ದ್ಯುಮಾನ್ ಭಗವತೇ ♦ ಪ್ರಣತೋಽಸ್ಮಿ ತಸ್ಮೈ ॥

ಶ್ಲೋ ॥ ತ್ವಂ ನಿತ್ಯಮುಕ್ತಪರಿಶುದ್ಧ ♦ ವಿಬುದ್ಧ ಆತ್ಮಾ ।
ಕೂಟಸ್ಥ ಆದಿಪುರುಷೋ ♦ ಭಗವಾಂ ಸ್ತ್ರ್ಯಧೀಶಃ ॥
ಯದ್ಬುದ್ಧ್ಯವಸ್ಥಿತಿ ಮಖಂ ♦ ಡಿತಯಾ ಸ್ವದೃಷ್ಟ್ಯಾ ।
ದ್ರಷ್ಟಾ ಸ್ಥಿತಾವಧಿಮಖೋ ♦ ವ್ಯತಿರಿಕ್ತ ಆಸ್ಸೇ ॥

ಶ್ಲೋ ॥ ಯಸ್ಮಿನ್ ವಿರುದ್ಧಗತಯೋ ♦ ಹ್ಯನಿಶಂ ಪತಂತಿ ।
ಭಿತ್ಯಾದಯೋ ವಿವಿಧಶ ♦ ಕ್ತಯ ಅನುಪೂರ್ವ್ಯಾತ್ ॥
ತದ್ಬ್ರಹ್ಮ ವಿಶ್ವಭವ ಮೇಕ ♦ ಮನಂತ ಮಾದ್ಯಂ ।
ಆನಂದಮಾತ್ರ ಮವಿಕಾರ ♦ ಮಹಂ ಪ್ರಪದ್ಯೇ ॥

ಶ್ಲೋ ॥ ಸತ್ಯಾಶಿಷೋ ಹಿ ಭಗವನ್! ♦ ತವ ಪಾದಪದ್ಮಂ ।
ಆಶೀ ಸ್ತಥಾ ಽನುಭಜತಃ ♦ ಪುರುಷಾರ್ಥಮೂರ್ತೇಃ ॥
ಅಪ್ಯೇವ ಮಾರ್ಯ! ಭಗವಾನ್ ♦ ಪರಿಪಾತಿ ದೀನಾನ್ ।
ಉಸ್ರೇವ ವತ್ಸಕಮನು ♦ ಗ್ರಹಕಾತರೋಽಸ್ಮಾನ್ ॥

(ಶ್ರೀಮದ್ಭಾಗವತ, 4ನೇ ಸ್ಕಂದ, 9ನೇ ಅಧ್ಯಾಯ, ಶ್ಲೋಕ 6 ರಿಂದ 17ರ ವರಿವಿಗೆ.)

ನಾರದ ಮಹರ್ಷಿಯು ಶ್ರೀಮನ್ನಾರಾಯಣನನ್ನು ಕುರಿತು, 'ಓ ಸ್ವಾಮಿಾ! ಇದುವರಿವಿಗೂ ವಿಷ್ಣುಮಾಯೆಯೆಂತಹುದೆಂಬುದನ್ನು ನಾನು ತಿಳಿದಿರಲಿಲ್ಲ. ಈಗ ನಿನ್ನ ಪ್ರಭಾವವೆಂಥದೆಂಬುದನ್ನು ತಿಳಿದಮೇಲೆ ನಿನ್ನನ್ನು ಸ್ತೋತ್ರಮಾಡಬೇಕೆಂಬ ಆತುರವು ನನಗೆ ಹುಟ್ಟಿದೆ. ನಿನ್ನನ್ನು ಸ್ತುತಿಸುವುದಕ್ಕೆ ಸರಿಯಾದ ಮಾತುಗಳು ನನಗೆ ಹೊರಡವು. ಆದರೂ ನೀನು ಅಂತರಾತ್ಮನಾಗಿದ್ದು, ವ್ಯರ್ಥವಾಗುತ್ತಿದ್ದ ನನ್ನ ಸರ್ವೇಂದ್ರಿಯಗಳನ್ನೂ ವ್ಯಾಪಿಸಿ, ಅವುಗಳಿಗೆ ಚೈತನ್ಯವನ್ನು ಕಲ್ಪಿಸಿದವನಾಗಿದ್ದಿ. ಈಗ ವಾಗಿಂದ್ರಿಯದಲ್ಲಿ ನೀನು ನೆಲೆಸಿರುವುದರಿಂದಲೇ ನಿನ್ನನ್ನು ಧಾರಾಳವಾಗಿ ಸ್ತೋತ್ರ ಮಾಡುವ ಶಕ್ತಿಯು ನನಗೆ ಬಂದಿದೆ. ಇದೇ ರೀತಿಯಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವೂ ನಿನ್ನ ಪ್ರೇರಣೆಯಿಂದಲೇ ಅವವುಗಳ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಿವೆ. ಅಂತಹ ಸರ್ವಶಕ್ತ ಸರ್ವಾತ್ಮಕನಾದ ನಿನಗೆ ತಲೆಬಗ್ಗಿ ನಮಸ್ಕರಿಸುತ್ತೇನೆ. ಓ ಷಡ್ಗುಣೈಶ್ವರ್ಯಸಂಪನ್ನನೇ! ನೀನೊಬ್ಬನೇ ಆಗಿದ್ದರೂ ನಿನಗೆ ಅಧೀನವಾದ ಮಾಯೆಯು ನಿನ್ನ ಸಾನ್ನಿಧ್ಯಮಾತ್ರದಿಂದಲೇ ಈ ಪ್ರಪಂಚದಲ್ಲಿ ಕಾಣ್ಬರುವ ಎಲ್ಲಾ ಚಿತ್ರವಿಚಿತ್ರ ಕೆಲಸಗಳನ್ನೆಲ್ಲಾ ಮಾಡುತ್ತಿದೆ. ನಿನಗೆ ರೂಪ ಬಣ್ಣ ಗುಣಗಳಿಲ್ಲದಿದ್ದಾಗ್ಯೂ ಮಾಯಾಸಂಬಂಧದಿಂದ ಅನೇಕ ರೂಪಗಳಿರುವಂತೆ ಕಾಣ್ಬರುತ್ತಿವೆ. ಆದರೆ ಜ್ಞಾನಿಗಳಿಗೆ ನೀನು ಜ್ಯೋತಿಸ್ವರೂಪಿಯು. ಅಗ್ನಿಯು ತಾನೊಬ್ಬನೇ ಆದರೂ ಬೇರೆಬೇರೆ ವಿಧವಾದ ಕಟ್ಟಿಗೆಗಳ ಸಂಬಂಧವನ್ನು ಪಡೆದು ಬೇರೆಬೇರೆ ರೀತಿಯಲ್ಲಿ ಕಾಣಿಸುವ ಹಾಗೆ, ನೀನೊಬ್ಬನೇ ಆದರೂ ಮಾಯಾಸಂಬಂಧದಿಂದ ಬೇರೆಬೇರೆ ಆಕಾರಗಳನ್ನು ಪಡೆಯುವೆಯೇ ಹೊರತು, ನಿನಗೆ ಆಕಾರವೆಂಬುದೇ ಇಲ್ಲ. ಹಿಂದೆ ಬ್ರಹ್ಮನು ನಿನ್ನ ನಾಭೀಕಮಲದಲ್ಲಿ ಹುಟ್ಟಿ ತಾನು ಹುಟ್ಟಿದ ಉದ್ದೇಶವನ್ನು ತಿಳಿಯದಿರುವಾಗ, ನಿನ್ನ ಪ್ರಸಾದದ ಬಲಿಯದಿಂದ ಅವನಿಗೆ ಸೃಷ್ಟಿಮಾಡುವ ಶಕ್ತಿಯು ಲಭಿಸಿತು. ಅವನ ವಿಷಯದಲ್ಲಿಯೇ ಹೀಗಿರುವಾಗ ತುಚ್ಛಜೀವಿಗಳಾದ ನಮ್ಮಗಳಿಗೆ ನೀನೆಷ್ಟು ಉಪಕಾರವನ್ನು ಮಾಡುತ್ತಿ ಎಂಬ ವಿಷಯವನ್ನು ಹೇಳಬೇಕಾದುದೇನು? ಸ್ವಾಮಿಾ! ನಿನ್ನ ಪಾದಸೇವೆಯೇ ಜೀವಿಗಳಿಗೆಲ್ಲ ಕೈವಲ್ಯವನ್ನೊದಗಿಸುವುದು. ಸಮಸ್ತವೂ ಚೈತನ್ಯದಿಂದ

ಬೆಳಗುವುದು ನಿನ್ನಿಂದಲೇ. ಪ್ರಾಣಿಗಳೆಲ್ಲಕ್ಕೂ ಜ್ಞಾನಧನವನ್ನು ಕರುಣಿಸುವವನು ನೀನೇ. ಆದುದರಿಂದ ನನ್ನಂಥ ಪಾಮರರೆಲ್ಲರೂ ಮಹೋಪಕಾರಿಯಾದ ನಿನ್ನ ನಿಜತತ್ವವನ್ನು ತಿಳಿದು, ಇನ್ನುಮೇಲಾದರೂ ಕೃತಜ್ಞತೆಯಿಂದ ವರ್ತಿಸಬೇಕು. ಭಜಿಸುವವರೆಲ್ಲರೂ ಧರ್ಮಾರ್ಥ ಕಾಮಗಳೆಂಬ ನಶ್ವರವಾದ ಫಲಗಳಿಗೆ ಆಸೆಪಡದೆ, ನೀನು ಮೋಕ್ಷಪ್ರದನೆಂದು ತಿಳಿದು ಅದನ್ನು ನಿನ್ನ ಕರುಣದಿಂದ ಸಾಧಿಸುವ ಸಲುವಾಗಿ ನಿನ್ನ ಧ್ಯಾನವನ್ನು ಮಾಡಬೇಕು. ಈ ಶಾಶ್ವತವಾದ ಮೋಕ್ಷಸುಖದೊಡನೆ ಹೋಲಿಸಲು ಸ್ವರ್ಗಾದಿ ಸುಖಗಳೆಲ್ಲವೂ ಅತಿ ಹೇಯವಾದವು ಎಂದು ಕಂಡುಬರುತ್ತದೆ. ನಿನ್ನ ಪಾದಭಜನೆಯನ್ನೂ, ನಿನ್ನ ಗುಣಕೀರ್ತನೆಯನ್ನೂ, ಮಾಡುವುದರಿಂದುಂಟಾಗುವ ಸುಖವು ಸ್ವರ್ಗವಾಸಾದಿಗಳಿಂದುಂಟಾಗದು. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬಂತೆ, ಪುಣ್ಯಕಾರ್ಯಗಳನ್ನು ಮಾಡಿ ಸ್ವರ್ಗಸುಖವನ್ನನುಭವಿಸಿದ ಮೇಲೆ ಪುನಃ ಭೂಲೋಕವನ್ನು ಪ್ರವೇಶಿಸಿ ಜನನಮರಣಗಳೆಂಬ ಸಂಸಾರದುಃಖವನ್ನು ಪಡೆಯಬೇಕಾಗುವುದು. ಇಂತಹ ಸ್ವರ್ಗಸುಖಗಳನ್ನನುಭವಿಸುವಾಗ 'ಅಂತಕ' ನ ಶಸ್ತ್ರದಿಂದ ಹೊಡೆಯಲ್ಪಟ್ಟು ಪುನಃ ಕೆಳಕ್ಕೆ ಬೀಳಬೇಕಾಗುವುದು. ಈ ಸುಖವು ದುಃಖವಲ್ಲದೆ ನಿಜವಾದ ಸುಖವೇ? ಓ ಮಹಾಮಹಿಮನೇ? ನನಗೆ ನಿನ್ನ ಭಕ್ತರ ಸಂಗವನ್ನು ಕರುಣಿಸಿ ಕಾಪಾಡು. ಈ ಸತ್ಸಂಗವು ನಶ್ವರವಾದ ಭಾರ್ಯಾಪುತ್ರಾದಿಗಳಾದ ಈ ಶರೀರದನುಬಂಧಿಗಳಲ್ಲಿ ಮನಸ್ಸನ್ನು ಹೋಗಲೀಯದೆ ಪರಮಾತ್ಮಧ್ಯಾನವೆಂಬ ಮಾರ್ಗದಲ್ಲಿ ಬಿಡುತ್ತದೆ. ಅದರಿಂದ ಮೋಹವು ಹೋಗಿ ಮನಸ್ಸು ಅತ್ತಿತ್ತ ಕದಲದೆ ನಿಶ್ಚಲತತ್ವಸ್ವರೂಪನಾದ ನಿನ್ನಲ್ಲಿಯೇ ಲೀನವಾಗುತ್ತದೆ. ಇದರಿಂದ ನಿನ್ನ ಭಕ್ತರಿಗೆ ಜೀವನ್ಮುಕ್ತಿಯುಂಟಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಹೇ ದೇವ! ನೀನು ಸ್ಥೂಲಸೂಕ್ಷ್ಮಗಳಿಂದ ಮೆರೆಯುತ್ತಿರುವ ಪ್ರಕೃತಿಗಿಂತಲೂ ಬೇರೆಯಾದವನು. ನಿನಗೆ ಉತ್ಪತ್ತಿ ವಿಕಾರ ಲಯಗಳೆಂಬುವೇ ಇಲ್ಲ. ಈ ಕಣ್ಣಿಗೆ ಕಾಣ್ಬರುವ ತಿರ್ಯಕ್ಕಗಳು ಮತ್ತು ಪಕ್ಷಿಮೃಗ ಕ್ರಿಮಿಕೀಟ ದೇವದೈತ್ಯರೆಂಬ ನಾನಾಯೋನಿಗಳಲ್ಲಿ ಜನ್ಮಿಸಿದವರೆಲ್ಲರೂ ನಿನ್ನ ಶರೀರಗಳೇ ಹೊರತು ಬೇರೆಯಲ್ಲ. ನೆನೆದವರ ಮನಸ್ಸೇ ನಿನ್ನ ವಾಸಸ್ಥಾನ. ಮಹತ್ತತ್ವದಿಂದ

ಹಿಡಿದು ಪೃಥ್ವೀತತ್ವದವರಿವಿಗೂ ಆವರಿಸಿರುವ ಆ ನಿನ್ನ ಸ್ವರೂಪವಲ್ಲದೆ ನನ್ನ ಕಣ್ಣೆದುರಿಗೆ ಕಾಣ್ಬರುವ ಈ ದಿವ್ಯಮಂಗಳ ವಿಗ್ರಹವನ್ನು ಕೂಡ ಈಗ ಕಣ್ಣುತುಂಬ ನೋಡುತ್ತಿದ್ದೇನೆ. ಮತ್ತು ನನ್ನ ಮನಸ್ಸನ್ನು ನಿನ್ನಲ್ಲಿ ಲೀನಮಾಡಿ ನಿನ್ನ ನಿತ್ಯಾನಂದ ಸ್ವರೂಪವನ್ನೂ ನೋಡುತ್ತೇನೆಂಬ ಭರವಸೆ ನನಗಿದೆ.

ಓ ಚಿದಾತ್ಮಕನೇ! ಪ್ರಳಯಕಾಲದಲ್ಲಿ ಈ ಪ್ರಪಂಚಗಳೆಲ್ಲವನ್ನು ನಿನ್ನ ಕುಕ್ಷಿಯಲ್ಲಡಗಿಸಿಕೊಂಡು ಯೋಗನಿದ್ರೆಯಿಂದ ನಿತ್ಯಾನಂದ ಸುಖವನ್ನನುಭವಿಸುತ್ತ ಸಹಸ್ರಫಣಗಳನ್ನುಳ್ಳ ಆದಿಶೇಷನ ಮೇಲೆ ಶಯನಿಸಿರುವವನೂ ನೀನೇ! ಹಾಗೆ ನೀನು ಯೋಗನಿದ್ರಾರೂಢನಾಗಿರುವಾಗಲೇ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನು ನಿನ್ನ ನಾಭೀ ಕಮಲದಲ್ಲಿ ಜನಿಸಿದನು. ನೀನು ನಿರ್ವಿಕಾರನು, ನಿತ್ಯನು, ಮತ್ತು ಸತ್ಯಾತ್ಮಕನು. ಅಗ್ನಿಕಣಗಳು ಅಂದರೆ ಕಿಡಿಗಳು ಅಗ್ನಿಯಿಂದ ಹೊರಟು ಬೇರೆಬೇರೆ ಆಕಾರಗಳನ್ನು ಪಡೆದು ಬೇರೆಬೇರೆ ಕಾರ್ಯಗಳನ್ನು ಅವು ನಡೆಸುತ್ತಿದ್ದಾಗ್ಯೂ ಅವೆಲ್ಲವೂ ಅಗ್ನಿಯ ಕೆಲಸವೇ. ಅದು ಹೇಗೋ ಹಾಗೆಯೇ, ನಿನ್ನ ಅಣ್ವಂಶಗಳಾದ ಜೀವಾತ್ಮರು ಅನೇಕ ಶರೀರಗಳನ್ನು ಹೊಂದಿ ಬೇರೆಬೇರೆ ವಿಕಾರಗಳನ್ನು ಪಡೆದರೂ, ನಿರ್ಲಿಪ್ತರಾಗಿ ಕಡೆಗೆ ನಿನ್ನನ್ನೇ ಬಂದು ಸೇರುವರು. ನೀನು ಷಡ್ಗುಣೈಶ್ವರ್ಯಸಂಪನ್ನನೂ ಪುರಾಣಪುರುಷನೂ ಆಗಿರುವುದರಿಂದ ಯಜ್ಞಯಾಗಾದಿಗಳಿಂದ ಆರಾಧಿಸಲ್ಪಟ್ಟು ಅದಕ್ಕೆ ತಕ್ಕ ಫಲಗಳನ್ನು ಕೊಡುತ್ತಿದ್ದಿ. ಸತ್ವರಜಸ್ತಮೋಗುಣಗಳಿಗೆ ನಿಯಾಮಕನೂ ನೀನೇ. 'ನಿದ್ರಾಮುದ್ರಾಂ◆ಸಕಲಜಗತೀ◆ರಕ್ಷಣೇ ಜಾಗರೂಕಾಂ' ಎಂಬಂತೆ ನೀನು ಕ್ಷೀರಸಮುದ್ರದಲ್ಲಿ ವಟಪತ್ರದಲ್ಲಿ ಮಲಗಿ ಯೋಗನಿದ್ರೆಯನ್ನು ಅನುಭವಿಸುತ್ತಿದ್ದಾಗ್ಯೂ, ಸಮಸ್ತ ಪ್ರಪಂಚವನ್ನೂ ಕಾಪಾಡುವುದರಲ್ಲಿ ಬಹಳ ಎಚ್ಚರಿಕೆಯುಳ್ಳವನಾಗಿರುತ್ತಿ. ನಿನ್ನ ಮಹಿಮೆಯನ್ನು ತಿಳಿಯುವುದು ಯಾರಿಗೆ ತಾನೇ ಸಾಧ್ಯ? ವೇದದಲ್ಲಿನ ಪುರುಷಸೂಕ್ತದಲ್ಲಿ ಹೊಗಳಿರುವಂತೆ. ನಿನಗೆ ಲೆಕ್ಕವಿಲ್ಲದಷ್ಟು ತಲೆಗಳು, ಕೈಕಾಲುಗಳು ಮೊದಲಾದುವುಗಳು ನೀನು ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿ, ಸಮಸ್ತ ಜೀವಿಗಳ ಸಮಸ್ತ ಕರ್ಮಗಳಿಗೂ ಸಾಕ್ಷಿಭೂತನಾಗಿದ್ದು, ಅವುಗಳಿಗೆ ಚೈತನ್ಯವನ್ನುಂಟುಮಾಡುತ್ತಿರುವೆ.

"ಓ ಪರಮಾತ್ಮ! ನೀನು ನಿತ್ಯಮುಕ್ತ, ಪರಿಶುದ್ಧಾತ್ಮಕ, ಜ್ಞಾನಸ್ವರೂಪಿ, ಆದಿಪುರುಷ, ಷಾಡ್ಗುಣ್ಯಯುಕ್ತ ಮತ್ತು ಸಮಸ್ತ ಭುವನಗಳನ್ನೂ ನಿನ್ನ ಸ್ವರೂಪಗಳಿಂದ ಆವರಿಸಿರುವನಾದುದರಿಂದಲೇ ನೀನು ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತನು. ದಿವ್ಯಮಂಗಳ ವಿಗ್ರಹನಾದ 'ಮುನಿಜನ ಮನಶ್ಚಾತಕಗಳಿಗೆ ಶರಣ್ಯ' ನಾದ ಸಮಸ್ತ ಜೀವಿಗಳ ಸಂತಾಪವನ್ನು ಹೋಗಲಾಡಿಸುವ, ನಿನ್ನನ್ನು ಭಜಿಸಿ ನಿನ್ನ ಸ್ವರೂಪಜ್ಞಾನವನ್ನು ಪಡೆದಿರುವವರಿಗೆ ಮೋಕ್ಷಲಕ್ಷ್ಮಿಯನ್ನು ಸೂರೆಕೊಡುವ ನೀನು, ಹಸುವಿಗೆ ಹೊಸದಾಗಿ ಹುಟ್ಟಿದ ತನ್ನ ಎಳೆಗರುವಿನಲ್ಲಿ ಯಾವ ರೀತಿಯಾದ ನಿಷ್ಕಳಂಕವಾದ ವಿಶ್ವಾಸವಿರುತ್ತದೆಯೋ, ಅದೇ ರೀತಿಯಲ್ಲಿ ಭಕ್ತರಾದ ನಮ್ಮಂಥವರನ್ನು ನಿನ್ನ ಕೃಪಾದೃಷ್ಟಿಯಿಂದ ಕಾಪಾಡು. ನಿನ್ನ ಮಾಯಾ ಪ್ರಭಾವವನ್ನು ತಿಳಿಯದಂತೆ ಹೆಮ್ಮೆಯಿಂದ ಮಾತನಾಡಿದ ಫಲವು ಆ ಮಾಯೆಯಲ್ಲಿ ಸಿಕ್ಕಿ ನರಳಿದಂಥ ನನಗೆ ಚನ್ನಾಗಿ ಅನುಭವವಾಯಿತು. ನಿನ್ನ ದಿವ್ಯ ಮಂಗಳಮೂರ್ತಿಯನ್ನು ನೋಡಿ ನನಗೆ ಜ್ಞಾನೋದಯವಾದುದಲ್ಲದೆ ನಾನು ಕೃತಾರ್ಥನೂ ಆದೆನು. ಇಗೋ ನಿನ್ನನ್ನು ಮರೆಹೊಕ್ಕಿರುವೆನು. ಇನ್ನು ಮೇಲಾದರೂ ಇಂತಹ ಮಾಯಾಜಾಲಕ್ಕೆ ನಾನು ಸಿಕ್ಕದಂತೆ ಕಾಪಾಡು." ಎಂದು ನಾರದಮಹರ್ಷಿಯು ಅತಿ ದೈನ್ಯದಿಂದ ವಿಷ್ಣುಮೂರ್ತಿಯನ್ನು ಬೇಡಿಕೊಂಡನು.

ಇದನ್ನು ಕೇಳಿದ ವಿಷ್ಣುಮೂರ್ತಿಯು, ನಾರದನಿಗೆ ಜ್ಞಾನೋದಯವಾದುದನ್ನು ಕಂಡು ಸಂತೋಷಿಸಿ ಆತನನ್ನು ಪುರಸ್ಕರಿಸಿ ಮನ್ನಿಸಿದನು. ಆಗ ನಾರದನಿಗೆ ಬಹಳ ಆನಂದವುಂಟಾಗಿ ಆ ಪರಮಾತ್ಮನನ್ನು ಕುರಿತು ಈರೀತಿಯಾಗಿ ಸ್ತುತಿಸತೊಡಗಿದನು.

ಗೀ || ಪನ್ನಗೇಂದ್ರಶಯಾನ! ♦ ಪದ್ಮನಯನ!!
ಆಪದೋದ್ಧಾರ! ಮೌನಿಹೃ ♦ ತ್ತಾಪಹಾರ!
ಭಕ್ತಮಾನಸಭೃಂಗ! ಓ ♦ ಭವವಿಭಂಗ!
ಬಾರೆನ್ನ ಮನದೊಳಗೆ ನೆಲಸು ♦ ಚಕ್ರಪಾಣೇ!

(ತೆಲುಗು, ಬಮ್ಮೆರಪೊತನಾ.)

ಭಾಮಿನೀಷಟ್ಪದಿ ॥

ಮಂಗಳಾತ್ಮಕ! ದುರಿತತಿಮಿರಪ-।
ತಂಗ! ಗರುಡತುರಂಗ! ರಿಪುಮದ-
ಭಂಗ! ಕೀರ್ತಿತರಂಗ! ಪುರಹರಸಂಗ! ನೀಲಾಂಗ! ॥
ಅಂಗದಪ್ರಿಯ! ನಂಗಪಿತ! ಕಾ।
ಳಿಂಗಮರ್ದನ! ಅಮಿತಕರುಣಾ-।
ಪಾಂಗ! ಸಿರಿನರಸಿಂಗ! ರಕ್ಷಿಸು ನಮ್ಮನನವರತ ॥

ಮತ್ತು ನಿನಗೆ,

ಸಿರಿಯೆ ಕುಲಸತಿ, ಸುತನೆ ಕಮಲಜ, ।
ಹಿರಿಯಸೊಸೆ ಶಾರದೆ, ಸಹೋದರಿ ।
ಗಿರಿಜೆ, ಮೈದುನನು ಶಂಕರನು, ಸುರರೆಲ್ಲ ಕಿಂಕರರು ॥
ನಿರತಮಾಯೆಯೆ ದಾಸಿ, ನಿಜಮಂ-।
ದಿರವಜಾಂಡವು, ಜಂಗಮಸ್ಥಾ-।
ವರಕುಟುಂಬಿಗ! ನೀನು ರಕ್ಷಿಸು ನಮ್ಮನನವರತ ॥

(ಹರಿಭಕ್ತಿಸಾರ, ಕನಕದಾಸ.)

ಹೀಗೆಂದು ಸ್ತೋತ್ರಮಾಡಿ, ಆ ವಿಷ್ಣುವಿನ ಕರುಣೆಗೆ ಪಾತ್ರನಾಗಿಯೇ, ಆ ನಾರದನು ದೇವರ್ಷಿಗಳಲ್ಲೆಲ್ಲಾ ಅಗ್ರಗಣ್ಯನಾಗಿರುವನು.

ಅರ್ಜುನ:—ಸ್ವಾಮೀ! ಪರಮಾತ್ಮಸ್ವರೂಪವು ಒಂದೇ ಅಲ್ಲವೇ? ಆ ಪರಮಾತ್ಮನಿಂದ ಮಾಯೆಯೆಂಬುದು ಹುಟ್ಟಿದ್ದೇ ಆದರೆ, ಸೃಷ್ಟಿಕರ್ತ ಮತ್ತು ಸೃಷ್ಟಿಸಲ್ಪಟ್ಟ ವಸ್ತು ಎಂಬ ಎರಡಾಗುತ್ತವೆಯಲ್ಲಾ, ಅದು ಹೇಗೆ?

ಕೃಷ್ಣ:—ಅರ್ಜುನಾ! ಆತ್ಮನೂ ಮತ್ತು ಮಾಯೆಯೂ ಇವು ಬೇರೆಬೇರೆ ಇರುವಂತೆ ಕಾಣಬಂದರೂ ಅವು ಎರಡು ವಸ್ತುಗಳಲ್ಲ. ಹೇಗೆಂದರೆ, 'ಆತ್ಮ' ಎಂಬುದು ಇರುವ ವಸ್ತುವು. 'ಮಾಯೆ' ಯೆಂಬುದು ಇಲ್ಲದಿರುವ ವಸ್ತುವನ್ನು ಇದೆಯೆಂದು ತಿಳಿದುಕೊಳ್ಳುವ ಭ್ರಮೆಯೇ ಹೊರತು ಬೇರಲ್ಲ. ಇದಕ್ಕೆ ದೃಷ್ಟಾಂತವು 'ರಜ್ಜುಸರ್ಪನ್ಯಾಯ' ವೇ. ಅಂದರೆ

ರಾತ್ರಿಯಲ್ಲಿ ಒಂದು ಹಗ್ಗವನ್ನು ನೋಡಿ ಹಾವೆಂದು ಭ್ರಮಿಸಿದರೆ ಹಗ್ಗವು ಹಾವಾದೀತೇ? ಆ ವಸ್ತುವಿನ ನಿಜಸ್ವರೂಪವು ಹಗ್ಗವಾಗಿದ್ದಾಗ್ಗೂ ಭ್ರಮೆ, ಯಿಂದ ಹಾವಾಗಿ ಪರಿಣಮಿಸಿದೆ. ಇದರಲ್ಲಿ ಸತ್ಯವಾದದ್ದು ಹಗ್ಗ, ಮಿಥ್ಯ ವಾದದ್ದು ಹಾವು. ಇವೆರಡೂ ಬೇರೆಬೇರೆ ವಸ್ತುಗಳಲ್ಲ. ಅದು ಹೇಗೋ ಹಾಗೆಯೇ, ಆತ್ಮ ಮತ್ತು ಮಾಯೆ ಇವುಗಳಲ್ಲಿ, ಸತ್ಯವಾದ ಆತ್ಮನೂ, ಅಸತ್ಯ ವಾದ ಮಾಯೆಯೂ ಬೇರೆಬೇರೆ ವಸ್ತುಗಳಲ್ಲ. ಕತ್ತಲಿನ ಮುಸುಕು ಇರು ವುದರಿಂದ ಹಗ್ಗವು ಹಾವೆಂಬ ಭ್ರಾಂತಿಯುಂಟಾಯಿತು. ಬೆಳಕಿನಲ್ಲಿ ಹಾವೆಂಬ ಭ್ರಾಂತಿಯು ತೊಲಗಿ 'ಹಗ್ಗವೇ ಅದು,' ಎಂಬ ನಿಜಸ್ಥಿತಿಯು ವ್ಯಕ್ತವಾಯಿತು. ಹಾಗೆಯೇ ಅಜ್ಞಾನದಿಂದ ಕೂಡಿದಾಗ ಮಾಯೆಯೇ ಪರಮಾತ್ಮನೆಂಬ ಭ್ರಮೆಯುಂಟಾಗುತ್ತದೆ. ಆದರೆ ಜ್ಞಾನೋದಯವಾದ ಮೇಲೆ, 'ಮಾಯೆಯೆಂಬುದು ಭ್ರಾಂತಿ ಮಾತ್ರ; ಪರಮಾತ್ಮನೆಂಬುದು ಸತ್ಯವಾದ ವಸ್ತು; ಇವು ಬೇರೆಬೇರೆ ವಸ್ತುಗಳಲ್ಲ' ವೆಂಬ ನಿಶ್ಚಯಜ್ಞಾನ ವುಂಟಾಗುತ್ತದೆ. ಮಾಯೆಯಿಂದ ಕೂಡಿದಾಗ, 'ಜಗತ್ತೆಲ್ಲವೂ ಜೀವಾತ್ಮರು ಗಳಿಂದ ತುಂಬಿರುತ್ತದೆ. ಮತ್ತು ಪರಮಾತ್ಮನೇಬೇರೆ,' ಎಂದು ಕಾಣ ಬರುತ್ತದೆ. ಆದರೆ ಮಾಯೆಯನ್ನು ಕಳೆದಮೇಲೆ, 'ಜೀವಾತ್ಮನಿಗೂ ಪರಮಾತ್ಮನಿಗೂ ಭೇದವಿಲ್ಲ. ಆ ಪರಮಾತ್ಮನೇ ಪ್ರಪಂಚವೆಲ್ಲವನ್ನೂ ತುಂಬಿರುವವನು. ಆತನೇ ನಿತ್ಯ. ಈ ಮಾಯಾಪ್ರಪಂಚವೆಲ್ಲವೂ ಅನಿತ್ಯ.' ಎಂಬ ನಿಶ್ಚಯಜ್ಞಾನವುಂಟಾಗುತ್ತದೆ.

ಅರ್ಜುನ:—ಜಗತ್ತು ಅಸತ್ಯವಾದದ್ದೇ ಆದರೆ, ಈಗ ಈ ಜಗತ್ತು ಪ್ರತ್ಯಕ್ಷವಾಗಿ ಕಾಣಬರುತ್ತದೆಯಲ್ಲಾ; ಇವೆಲ್ಲವೂ ಹೇಗೆ ಅಸತ್ಯವೆಂದೆನಿಸು ತ್ತದೆ?

ಕೃಷ್ಣ:—ಚನ್ನಾಗಿ ಬಿಸಿಲು ಕಾಯುವ ಸಮಯದಲ್ಲಿ ಜಲವು ಪ್ರವಹಿ ಸುತ್ತಿರುವಂತೆ ಬಿಸಿಲ್ಗುದುರೆಗಳು ಕಾಣಬರುತ್ತವಲ್ಲವೇ? ಆ ಬಿಸಿಲ್ಗುದುರೆ ಗಳ ನಿಜಸ್ಥಿತಿಯನ್ನು ಪರಿಶೀಲಿಸಿ ನೋಡಿದಲ್ಲಿ, ನೀರಿರುವಂತೆ ಭ್ರಮೆಯೇ ಹೊರತು, ವಾಸ್ತವವಾಗಿ ನೀರೆಂಬುದೇ ಅಲ್ಲಿರುವುದಿಲ್ಲ. ಅದೇ ವಿಧವಾಗಿ ಈ ಜಗತ್ತು ನಿನಗೆ ಪ್ರತ್ಯಕ್ಷವಾಗಿ ಕಾಣುತ್ತಿದ್ದರೂ, ತತ್ವವಿಚಾರವನ್ನು

ಮಾಡಿದಲ್ಲಿ, ಮೇಲೆ ಹೇಳಿದ ಮರೀಚಿಕೆಗಳಂತೆ ಜಗತ್ತೇ ಶೂನ್ಯವಾಗಿ ಕಾಣಬರುತ್ತದೆ. ಓ ಅರ್ಜುನಾ! ಯಾವ ವಸ್ತುಗಳು ನಿನಗೆ ಮೊದಲು ಕಂಡೂ ವಿಚಾರಮಾಡಿದನಂತರ ಕಾಣದೆಯೂ ಹೋಗುತ್ತವೆಯೋ, ಅವೆಲ್ಲವೂ ಸತ್ಯವಾದವುಗಳಲ್ಲ, ಎಂದು ತಿಳಿ. ಜಗತ್ತು ನಿನ್ನ ಈ ಹೊರಗಿನ ಕಣ್ಣುಗಳಿಗೆ ಕಂಡುಬಂದರೂ, ನಿನ್ನ ಜ್ಞಾನ ಚಕ್ಷುವಿಗೆ ಇಲ್ಲದಂತೆ ಮಾಯವಾಗಿ ಹೋಗುತ್ತದೆಯಾಗಿ, ಇದನ್ನು ಮಿಥ್ಯೆಯೆಂದು ತಿಳಿಯಬೇಕು. ಇದಕ್ಕೆ ಪ್ರಮಾಣವೇನೆಂದರೆ:—

ಶ್ಲೋ ॥ ಯನ್ನಾದೌ ಯಚ್ಚ ನಾಸ್ತ್ಯಂತೇ ♦ ತನ್ಮಧ್ಯೇ ಭಾತ ಮಪ್ಯಸತ್ ।
ಅತೋ ಮಿಥ್ಯಾ ಜಗತ್ಸರ್ವಂ ♦ ಇತಿ ವೇದಾಂತಡಿಂಡಿಮಃ ॥

ಶ್ಲೋ ॥ ಯದಸ್ತ್ಯಾದೌ ಯದಸ್ತ್ಯಂತೇ ♦ ಯನ್ಮಧ್ಯೇ ಭಾತಿ ತತ್ಸ್ವಯಂ ।
ಬ್ರಹ್ಮೈವೈಕ ಮಿದಂ ಸತ್ಯಂ ♦ ಇತಿ ವೇದಾಂತಡಿಂಡಿಮಃ ॥

(ನೃಸಿಹ್ಮ ಸರಸ್ವತೀತೀರ್ಥ-ವೇದಾಂತಡಿಂಡಿಮಃ.)

ಎಂಬಂತೆ, ಯಾವ ಈ ಜಗತ್ತು ಸೃಷ್ಟಿಗೆ ಮೊದಲಿರಲಿಲ್ಲವೋ, ಪ್ರಳಯವಾದನಂತರ ಇರುವುದಿಲ್ಲವೋ, ಮತ್ತು ಈ ಮಧ್ಯ ಅದಿರುವಂತೆ ಪ್ರಕಾಶಿಸುತ್ತದೆಯೋ, ಅಂತಹ ಜಗತ್ತೆಲ್ಲವೂ ಮಿಥ್ಯೆಯೇ ಹೊರತು ಸತ್ಯವಲ್ಲ. ಆದರೆ ಯಾವುದು ಸೃಷ್ಟಿಗೆ ಆದಿ ಮಧ್ಯ ಮತ್ತು ಅಂತ್ಯದಲ್ಲಿದ್ದು ಬೆಳಗುತ್ತಿರುತ್ತದೋ, ಅಂತಹ ಪರಬ್ರಹ್ಮವಸ್ತುವು ಸತ್ಯವಾದದ್ದು ಮತ್ತು ಅದಕ್ಕೆ ಚ್ಯುತಿಯಿಲ್ಲ, ಎಂಬದಾಗಿ ವೇದಾಂತ ಶಾಸ್ತ್ರವು ಸಾರಿ ಹೇಳುತ್ತದೆ.

ಅರ್ಜುನ:—ಓ ಸ್ವಾಮಿ, ಬಿಸಿಲ್ಗುದುರೆಗಳ ವಿಷಯದಲ್ಲಿ ಮೊದಲು ಅದರಲ್ಲಿ ಜಲವಿರುವಂತೆ ಕಂಡುಬಂದು, ಅನಂತರ ಪರಿಶೀಲಿಸುವಲ್ಲಿ ನೀರಿಲ್ಲದಿರುವುದು ವಾಸ್ತವವೇ ಹೊರತು, ಈ ಜಗತ್ತು ಆ ಬಿಸಿಲ್ಗುದುರೆಯನ್ನು ಹೋಲಬಾರದು. ಏಕೆಂದರೆ, ಮನುಷ್ಯರು ಜಗತ್ಸಂಬಂಧವಾದ ಸುಖದುಃಖಗಳನ್ನು ಸ್ವಾನುಭವದಿಂದ ಪಡೆಯುತ್ತಿದ್ದಾರಲ್ಲವೇ? ಹೀಗಿರುವಲ್ಲಿ ಆ ಜಗತ್ತು ಅಸತ್ಯವೆಂದು ಹೇಗೆ ಹೇಳಲು ಸಾಧ್ಯ?

ಕೃಷ್ಣ:—ಪಾರ್ಥ! ನಿನಗೆ ಉಂಟಾದ ಈ ಸಂದೇಹವು ಬಹಳ ಚನ್ನಾಗಿದೆ. ಅದಕ್ಕೆ ಸಮಾಧಾನವನ್ನು ಹೇಳುತ್ತೇನೆ ಕೇಳು. ಮೇಲೆ

ಹೇಳಿದಂತೆ ಬಿಸಿಲ್ಗುದುರೆಯಲ್ಲಿ ನೀರನ್ನು ನೋಡುವಂತೆಯೇ ಸ್ವಪ್ನದಲ್ಲಿಯೂ ಈ ಜಗತ್ತಿನ ವಿಷಯವನ್ನು ನೀನು ನೋಡುತ್ತಿರುವೆ. ಈ ಅನುಭವವೆಲ್ಲವೂ ನಿನ್ನ ಮನಸ್ಸಿನ ಮೂಲಕ ಆಗುತ್ತಿರುವುದಲ್ಲವೇ? ಆ ಸ್ವಪ್ನದಲ್ಲಿ ನೀನು ಒಬ್ಬಾಳೊಬ್ಬ ಸ್ತ್ರೀಯೊಡನೆ ಕಲೆತು ಸಂಭೋಗಸುಖವನ್ನನುಭವಿಸುತ್ತಿರುವೆ ಎಂದು ಭಾವಿಸೋಣ. ಇಂತಹ ಸುಖದ ಸಲುವಾಗಿ ವೀರ್ಯಸ್ಖಲನವೂ ಆಗುತ್ತದೆಯೆಂಬುದು ಅನುಭವಸಿದ್ಧವಾದುದಲ್ಲವೇ? ನಿದ್ರೆ ತಿಳಿದು ಎದ್ದಮೇಲೆ ಸ್ವಪ್ನದಲ್ಲಿ ನೀನು ಹೊಂದಿದ ಅನುಭವಗಳನ್ನು ಸತ್ಯವೆಂದು ಹೇಳುತ್ತೀಯಾ? ಅಥವಾ ಅವುಗಳು ಅಸತ್ಯಗಳೆಂದು ತಿಳಿಯುತ್ತೀಯಾ?

ಅರ್ಜುನ:—ನಿಶ್ಚಯವಾಗಿಯೂ ಆ ಸ್ವಪ್ನದಲ್ಲಿನ ಅನುಭವಗಳು ಅಸತ್ಯವೆಂದು ತಿಳಿಯುತ್ತೇನೆಯೇ ಹೊರತು ಸತ್ಯವೆಂದು ಭಾವಿಸೆನು.

ಕೃಷ್ಣ:—ಓ ಅರ್ಜುನಾ! ಅದೇ ರೀತಿಯಲ್ಲಿಯೇ ಈ ಜಗತ್ತಿನಲ್ಲಿ ನೀನು ಅನುಭವಿಸುತ್ತಿರುವ ವಿಷಯಗಳೆಲ್ಲವೂ ಕನಸ್ಸಿನಲ್ಲಿ ತೋರಿಬರುವ ವಿಷಯಗಳಂತೆಯೂ, ಮತ್ತು ಇಲ್ಲಿ ಅನುಭವಿಸುತ್ತಿರುವ ಸುಖದುಃಖಗಳೆಲ್ಲವೂ ಸ್ವಪ್ನದಲ್ಲಿ ಅನುಭವಿಸಿದ ಸ್ತ್ರೀಸಂಭೋಗಾದಿ ಸುಖಗಳಂತೆಯೂ, ಇವೆಯೆಂದು ತಿಳಿಯಬೇಕು.

ಅರ್ಜುನ:—ಓ ಸ್ವಾಮಿ! ನೀವು ಹೇಳುವುದು ನೋಡಿದರೆ, ಪುರುಷರಲ್ಲಿ ಯಾರೂ ನಿಮ್ಮ ಮಾಯೆಯನ್ನು ಜಯಿಸಲಾರರೆಂದು ನನಗೆ ತೋರುತ್ತದೆ.

ಕೃಷ್ಣ:—ಅರ್ಜುನಾ! ಕೇಳು. ಭಗವದ್ಗೀತೆ ಅಧ್ಯಾಯ 5, ಶ್ಲೋಕ 16.

ಶ್ಲೋ॥ ಜ್ಞಾನೇನ ತು ತದಜ್ಞಾನಂ ♦ ಯೇಷಾಂ ನಾಶಿತ ಮಾತ್ಮನಃ।
ತೇಷಾ ಮಾದಿತ್ಯವಜ್ ಜ್ಞಾನಂ ♦ ಪ್ರಕಾಶಯತಿ ತತ್ಪರಂ॥

ಭಾಮಿನೀಷಟ್ಪದಿ ||

ಅರು ಕೆಲ ರಜ್ಞತ್ವಜ್ಞಾನದ |
ಸಾರದಿಂ ನೆರೆ ಕೆಡಲವರು ಬಿ-|
ರ್ಥಾರತತ್ವಜ್ಞಾನ ತಾ ಪರಮಾತ್ಮ ರೂಪವನು ||
ಸೂರಿಯನ ಪೊಲು ಬೆಳಗಿ ತೋರಲು-|
ದಾರರುಗಳೇ ಜಗದೊ ಳೀನುವ-|
ಪಾರರೈ ಕೇಳೆಂದ ಸಾಪಾರ್ಥಂಗೆ ಮುರವೈರಿ ||         (ನಾಗರಸ ಕವಿ.)

ಎಂಬಂತೆ ಯಾರ ಆತ್ಮವನ್ನು ಮುಚ್ಚಿರುವ ಮಾಯೆಯೆಂಬ ಅಜ್ಞಾನವು ಜ್ಞಾನದಿಂದ ನಾಶವಾಗುತ್ತದೆಯೋ, ಅಂತಹರಿಗೆ ಕತ್ತಲೆಯನ್ನು ತೊಲಗಿಸಿ ಪ್ರಕಾಶದಿಂದ ಬೆಳಗುತ್ತಿರುವ ಸೂರ್ಯನಂತೆ ಜ್ಞಾನವೆಂಬುದು ತಾನೇ ತಾನಾಗಿ ಹೊಳೆಯುತ್ತಿರುತ್ತದೆ. ಅರ್ಜುನಾ ! ಮಾಯೆಯನ್ನು ಜಯಿಸುವುದು ತುಂಬಾ ಕಷ್ಟಸಾಧ್ಯವೇ ಹೌದು. ಆದರೆ ಯಾರೊಬ್ಬರೂ ಅಂತಹ ಮಾಯೆಯನ್ನು ಜಯಿಸಲಾರರೆಂದು ಹೇಳಲಾಗದು. ಮಾಯೆಯನ್ನು ಜಯಿಸುವುದಕ್ಕೆ ಬುದ್ಧಿಯೆಂಬ ಶಕ್ತಿಯನ್ನು ಈಶ್ವರನು ಪ್ರತಿಯೊಬ್ಬರಿಗೂ ಕೊಟ್ಟಿರುತ್ತಾನೆ ಎಂದು ಹಿಂದೆಯೇ ಹೇಳಿದೆನಲ್ಲವೇ? ಆ ಬುದ್ಧಿಯನ್ನು ಅನೇಕರು ಸರಿಯಾದ ಮಾರ್ಗದಲ್ಲಿ ಉಪಯೋಗಿಸಿಕೊಳ್ಳುತ್ತಿಲ್ಲವಾದರೂ, ಅಲ್ಲಲ್ಲಿ ಕೆಲವರಾದರೂ ಅದನ್ನು ನ್ಯಾಯವಾದ ರೀತಿಯಲ್ಲಿ ಉಪಯೋಗಿಸುತ್ತಿದ್ದಾರೆ. ಇಂತಹರಿಗೆ ರಾಗದ್ವೇಷಾದಿಗಳೆಂಬುವು ತೊಲಗಿ ಹೋಗುತ್ತವೆ. ಹೀಗೆ ಯಾವಾಗ ಅವು ನಿವಾರಣೆಯಾಗುತ್ತವೆಯೋ ಆಗ ಜ್ಞಾನೋದಯವಾಗುವುದು ಸಿದ್ಧ. ಜ್ಞಾನೋದಯವಾದ ತಕ್ಷಣವೇ, ಕತ್ತಲಲ್ಲಿ ದೃಷ್ಟಿಗೆ ಕಾಣಬರದಿರುವ ವಸ್ತುಗಳೆಲ್ಲವೂ ಸೂರ್ಯೋದಯವಾದನಂತರ ಹೇಗೆ ಸ್ಪಷ್ಟವಾಗಿ ಕಾಣುವುವೋ, ಹಾಗೆಯೇ ಅನೇಕ ಕೋಟಿ ಜನ್ಮಗಳಿಂದ ಬರುತ್ತಿರುವ ಆಗಾಮ್ಯಗಳಿಂದ ದೊರಕಿದ ಸಂಚಿತವೆಂಬ ಮೂಟೆಗಳು, ಹತ್ತಿಯ ತುಂಡುಗಳು ಅಗ್ನಿ ಕಣಗಳಿಗೆ ಸಿಕ್ಕಿ ಭಸ್ಮವಾಗುವಂತೆ, ಆತ್ಮಸ್ವರೂಪ ಜ್ಞಾನವೆಂಬ ಬೆಂಕಿಯಿಂದ ಮಾಯೆಯ ಜೊತೆಯಲ್ಲಿಯೇ ನಾಶವನ್ನು ಹೊಂದುತ್ತವೆ. ಅಂತಹ ಆತ್ಮಸ್ವರೂಪಜ್ಞಾನಿಗಳಿಗೆ, ಸೂರ್ಯನ ಪ್ರಕಾಶದಂತೆ, ಆತ್ಮನು ಸಮಸ್ತ ವಸ್ತುಗಳ ನಿಜತತ್ವ

ವನ್ನು ಹೊರಪಡಿಸುತ್ತಾನೆ. ಆಗ ಅವರ ಮನಸ್ಸು ಪರಬ್ರಹ್ಮನಲ್ಲಿ ಕಲೆತು ಐಕ್ಯವಾಗುತ್ತದೆ. ಹೀಗೆ ಐಕ್ಯವಾದಮೇಲೆ ಸಂಸಾರ ಬಂಧವೆಂಬುದು ತನಗೆ ತಾನೇ ನಶಿಸಿಹೋಗುತ್ತದೆ. ಮತ್ತು ಅಧ್ಯಾಯ 9 ಶ್ಲೋಕ 7ನ್ನು ಪ್ರಮಾಣಕ್ಕಾಗಿ ಈ ಕೆಳಗೆ ಹೇಳಿದೆ.

ಶ್ಲೋ ॥ ಸರ್ವಭೂತಾನಿ ಕೌಂತೇಯ ! ♦ ಪ್ರಕೃತಿಂ ಯಾಂತಿ ಮಾಮಿಕಾಂ ।
ಕಲ್ಪಕ್ಷಯೇ ಪುನ ಸ್ತಾನಿ ♦ ಕಲ್ಪಾದೌ ವಿಸೃಜಾ ಮ್ಯಹಂ ॥

ಭಾಮಿನೀಷಟ್ಪದಿ ॥

ಪ್ರಕೃತಿವಶದ ಸ್ವತಂತ್ರವಲ್ಲದ ।
ಸಕಲಭೂತಗ್ರಾಮವನು ತಾ ।
ನಖಿಲ ಕಲ್ಪಾದಿಯಲಿ ಎನ್ನ ಯಧೀನವಾಗಿರ್ದ ॥
ಪ್ರಕೃತಿಯನು ಮಿಗೆ ಕೂಡಿ ಸೃಜಿಸುವೆ ।
ಸಕಲ ಲೋಕರ ಮರಳಿ ನಾಂ ತ- ।
ತ್ಪ್ರಕೃತಿವಶ ವಾಗಿರೆನು ಕೇಳೆಂದನು ಮುರಧ್ವಂಸಿ ॥ (ನಾಗರಸ ಕವಿ.)

ಓ ಅರ್ಜುನಾ ! ಬ್ರಹ್ಮನು ನಿದ್ರಿಸುತ್ತಿರುವಾಗ ಉಂಟಾಗುವ ಪ್ರಳಯದಿಂದ ಸಕಲ ಚರಾಚರ ಪ್ರಪಂಚವೆಲ್ಲವೂ ಈಶ್ವರನಾದ ನನ್ನ ಮಾಯೆಯೊಳಗೆ ಕಲೆತು ಲಯವಾಗುತ್ತದೆ. ಮತ್ತು ಸೃಷ್ಟಿ ಕಾಲದಲ್ಲಿ ಪುನಃ ಅವವುಗಳನ್ನು ನಾನೇ ಸಂಕಲ್ಪಮಾಡಿ ಸೃಷ್ಟಿಮಾಡುತ್ತೇನೆ. ಮತ್ತು ಅಧ್ಯಾಯ 14 ಶ್ಲೋಕ 2 ಇದಕ್ಕೆ ಪ್ರಮಾಣವು.

ಶ್ಲೋ ॥ ಇದಂ ಜ್ಞಾನ ಮುಪಾಶ್ರಿತ್ಯ ♦ ಮಮ ಸಾಧರ್ಮ್ಯ ಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ♦ ಪ್ರಳಯೇ ನ ವ್ಯಥಂತಿ ಚ ॥

ಸಮಸ್ತ ಜೀವಿಗಳೂ ನನ್ನ ಮಾಯೆಯಲ್ಲಿ ಅಣಗಿದ್ದು ಪುನಃ ಸೃಷ್ಟಿ ಸಮಯದಲ್ಲಿ ತಮ್ಮತಮ್ಮ ಪೂರ್ವಜನ್ಮಗಳ ಕರ್ಮವಾಸನಾಪ್ರಕಾರವಾಗಿ ಅಲ್ಲಲ್ಲಿ ಜನ್ಮಗಳೆತ್ತುತ್ತ, ಅನಂತರ ಅವರಲ್ಲಿ ನನ್ನ ಮಾಯೆಯಿಂದ ಬಿಡುಗಡೆ ಹೊಂದಿದವರು ಮಾತ್ರ, ಜನನಮರಣರಹಿತನಾದ ಮತ್ತು ನಿರ್ವಾಣ ಸ್ವರೂಪನಾದ ನನ್ನ ರೂಪವನ್ನೇ ಹೊಂದಿ, ನನ್ನಲ್ಲಿ ಐಕ್ಯವನ್ನು ಪಡೆಯುವರು.

ಹೀಗೆ ನನ್ನಲ್ಲಿ ಐಕ್ಯವಾದವರಿಗೆ ನಾನೆಂತಹ ಗುರುವಾಗಿದ್ದೇನೆಂದರೆ, ಅಧ್ಯಾಯ 10 ಶ್ಲೋಕ 11ರ ಪ್ರಮಾಣವನ್ನು ಹೇಳುತ್ತೇನೆ.

ಶ್ಲೋ॥ ತೇಷಾ ಮೇವಾನುಕಂಪಾರ್ಥ ♦ ಮಹ ಮಜ್ಞಾನಜಂ ತಮಃ ।
ನಾಶಯಾ ಮ್ಯಾತ್ಮ ಭಾವಸ್ಥೋ ♦ ಜ್ಞಾನದೀಪೇನ ಭಾಸ್ವತಾ ॥

ಭಾಮಿನೀಷಟ್ಪದಿ ॥

ಆ ಮಹಾಮುನಿಗಳಿಗೆ ಪ್ರೇಮದಿ ।
ತಾಮಸದ ಗುಣವಾದ ವಿದ್ಯಾ-।
ಸ್ತೋಮದಿಂ ಜನಿಸಿದ ತಮಸ್ಸಿ ನತಿಪ್ರಭೆಯ ನುಳ್ಳ ॥
ಆ ಮಹಾವಿಜ್ಞಾನದೀಪದಿ ।
ನೇಮದಿಂ ಕೆಡಿಸುವೆನು ಭಕ್ತ-।
ಸ್ತೋಮವನು ರಕ್ಷಿಸಲಿ ಕೋಸುಗ ಪಾರ್ಥ! ಕೇಳೆಂದ॥ (ನಾಗರಸ ಕವಿ.)

ಅಜ್ಞಾನದಿಂದುಂಟಾದ ಸಂಸಾರವೆಂಬ ಕತ್ತಲನ್ನು ಹೋಗಲಾಡಿಸುವುದಕ್ಕಾಗಿ ಪ್ರಕಾಶಿಸುತ್ತಿರುವ ಜ್ಞಾನವೆಂಬ ದೀಪವನ್ನು ಅನುಗ್ರಹಿಸುವ ಗುರುವೇ ನಾನು. ಮತ್ತು ಅವರ ಪ್ರಾಣಕ್ಕೆ ಪ್ರಾಣವಾಗಿದ್ದು ಅವರ ಸಂಸಾರಬಂಧವನ್ನು ನಾನೇ ನಾಶಮಾಡುತ್ತೇನೆ ಎಂದು ಹೇಳಿದೆ. ಮತ್ತು ಇದಕ್ಕೆ ಶ್ರುತಿಪ್ರಮಾಣವೂ ಉಂಟು.

ಶ್ಲೋ॥ ಜೀವ ಶ್ಶಿವಃ ಶಿವೋ ಜೀವಃ ♦ ಸ ಜೀವಃ ಕೇವಲ ಶ್ಶಿವಃ ।
ತುಷೇಣ ಬಧ್ದೋ ಪ್ರೀಹಿಸ್ಸ್ಯಾತ್ ♦ ತುಷಾಽಭಾವೇ ತು ತಂಡುಲಃ ॥

ಶ್ಲೋ॥ ಏವಂ ಬದ್ಧ ಸ್ತಥಾ ಜೀವಃ ♦ ಕರ್ಮನಾಶೇ ಸದಾಶಿವಃ ।
ಪಾಶಬದ್ಧ ಸ್ತಥಾ ಜೀವಃ ♦ ಪಾಶಮುಕ್ತ ಸ್ಸದಾಶಿವಃ ॥

(ಸ್ಕಂದೋಪನಿಷತ್ತು, ಶ್ಲೋ॥ 5-6.)

ಅಂದರೆ ಜೀವನೇ ಪರಮಾತ್ಮನು ಮತ್ತು ಪರಮಾತ್ಮನೇ ಜೀವನು. ಇವೆರಡೂ ಬೇರೆಬೇರೆಯೆಂಬುದು ಅಜ್ಞಾನದ ಫಲ. ಹೇಗೆಂದರೆ, ಹೊಟ್ಟಿನಿಂದಕೂಡಿದ್ದರೆ ಭತ್ತವೆಂಬುದಾಗಿಯೂ, ಆ ಹೊಟ್ಟನ್ನು ಹೋಗಲಾಡಿಸಿದರೆ ಅಕ್ಕಿಯೆಂಬುದಾಗಿಯೂ, ಒಂದೇ ಧಾನ್ಯವನ್ನು ಹೇಗೆ ಹೇಳುತ್ತಾರೆಯೋ, ಹಾಗೆಯೇ ಕರ್ಮದಿಂದ ಕೂಡಿದ್ದಾಗ ಜೀವಾತ್ಮನೆಂದೂ, ಕರ್ಮದಿಂದ

ಬಿಡುಗಡೆಯಾದ ತಕ್ಷಣವೇ ಪರಮಾತ್ಮನೆಂದೂ ಒಬ್ಬನನ್ನೇ ಹೇಳುತ್ತಾರೆ. ಅಂದರೆ ಒಟ್ಟಿನಲ್ಲಿ ಪಾಶಬದ್ಧನಾದವನು ಜೀವಾತ್ಮ, ಪಾಶಗಳಿಂದ ಬಿಡುಗಡೆಯಾದವನು ಪರಮಾತ್ಮ. ಹೀಗಿರಲು ಜೀವಾತ್ಮ ಪರಮಾತ್ಮರಿಗೆ ಭೇದವೆಂಬುದು ಎಲ್ಲಿದೆ? ಈ ಪರಮಾತ್ಮನು ನಿರ್ಲಿಪ್ತನಾಗಿಯೂ, ಶಾಶ್ವತನಾಗಿಯೂ, ನಿತ್ಯಮಂಗಳಸ್ವರೂಪನಾಗಿಯೂ ಮತ್ತು ನಿರ್ವಿಕಾರವಾದ ಜ್ಯೋತಿಸ್ವರೂಪನಾಗಿಯೂ ಬೆಳಗುತ್ತಿರುವನು.

ಒಬ್ಬಾನೊಬ್ಬನು ತಾನು ಮೋಕ್ಷಸುಖವನ್ನು ಪಡೆಯುವುದಕ್ಕಾಗಿ ತನ್ನ ಗುರುವನ್ನು ಕುರಿತು ಅನೇಕ ವಿಧವಾದ ಪ್ರಶ್ನೆಗಳನ್ನು ಕೇಳುತ್ತಾನೆ. ಆ ವಿಷಯಗಳನ್ನು ಈ ಮುಂದಿನ ಪ್ರಕರಣದಲ್ಲಿ ವಿಶದಪಡಿಸಿದೆ.

# ಶರೀರವೆಂಬ ಘಟವನ್ನು ಪರಿಶೋಧಿಸಿ ತಾನಾರೆಂಬುದನ್ನು ತಿಳಿಯುವುದು.

ಗರ್ಭಕೋಶವೆಂಬ ಪಟ್ಟಣದಲ್ಲಿ ಕೆಲವು ತಿಂಗಳುಗಳು ಅಂದರೆ ಏಳರಿಂದ ಒಂಭತ್ತು ತಿಂಗಳುಗಳ ಪರ್ಯಂತ ವಾಸಮಾಡಿ ಈ ಲೋಕವನ್ನು ಕಂಡಂಥ ಒಬ್ಬಾನೊಬ್ಬ ಬಾಲಕನು, ಪರೀಕ್ಷಿದ್ರಾಜನಂತೆ ಬ್ರಹ್ಮಜ್ಞಾನ ಹೊಂದಬೇಕೆಂಬ ಅಪೇಕ್ಷೆಯಿಂದ ಒಬ್ಬಾನೊಬ್ಬ ಯೋಗ್ಯನಾದ ಗುರುವನ್ನು ಹುಡುಕಿ, ಆತನನ್ನು ಭಕ್ತಿಶ್ರದ್ಧೆಗಳಿಂದ ಸೇವೆಮಾಡಿ, ಅನಂತರ ಒಂದಾನೊಂದು ದಿನ ತನ್ನ ಮನಸ್ಸಿನಲ್ಲಿ ಹೀಗೆಂದುಕೊಳ್ಳುತ್ತಾನೆ. "ಸಮಸ್ತ ಜಂತುಜಾಲಗಳೂ ಪರಬ್ರಹ್ಮಸ್ವರೂಪವೇ ಎಂದು ಎಲ್ಲಾ ಶ್ರುತಿಗಳೂ ಸಾರಿ ಹೇಳುತ್ತಿವೆ. ಆದರೆ ನಾವು ಆ ಪರಬ್ರಹ್ಮನಿಗಿಂತಲೂ ಬೇರೆಯಾಗಿದ್ದೇವಲ್ಲವೇ? ಅದೇತಕ್ಕೆ? ಇದಕ್ಕೆ ಕಾರಣವು ನಮ್ಮನ್ನು ಮುಚ್ಚಿರುವ ಅಜ್ಞಾನವೇ ಆಗಿರಬೇಕು. ಆದುದರಿಂದ ಈ ಅಜ್ಞಾನವನ್ನು ಹೋಗಲಾಡಿಸಿ ಪರ

ಮಾತ್ಮನ ನಿಶ್ಚಯಜ್ಞಾನವನ್ನುಂಟುಮಾಡುವುದಕ್ಕಾಗಿ ಆ ಗುರುಗಳನ್ನು ಕೇಳಿ ತಿಳಿದುಕೊಳ್ಳುವೆನು.''ಎಂದು ಮನಸ್ಸಿನಲ್ಲಿ ನೆನೆದುಕೊಂಡು, ಆ ಗುರುಗಳನ್ನು ಕುರಿತು ಕೆಲವು ಪ್ರಶ್ನೆಗಳನ್ನು ಕೇಳಿ, ಸದುತ್ತರಗಳನ್ನು ಅವರಿಂದ ಪಡೆಯುತ್ತಾನೆ. ಅವುಗಳನ್ನು ಈ ಕೆಳಗೆ ವಿಸ್ತರಿಸಿದೆ.

ಶಿಷ್ಯ :—ಗುರುವರ್ಯಾ ! ಮೋಕ್ಷವೇ ಶ್ರೇಷ್ಠವಾದುದೆಂದು ನೀವು ಒತ್ತಿ ಹೇಳುತ್ತಿದ್ದೀರಲ್ಲವೇ ? ಆ ಮೋಕ್ಷವೆಂಬುದೆಂಥಹದು ? ಅದನ್ನು ಸಂಪಾದಿಸುವ ಬಗೆ ಹೇಗೆ? ಮತ್ತು ಅಂತಹ ಮೋಕ್ಷಪ್ರಾಪ್ತಿಗೆ ಅಡ್ಡಲಾಗಿರುವ ಮಾಯೆಯನ್ನು ಜಯಿಸುವ ಪರಿಯಾವುದು ?

ಗುರುವು :—ಓ ಬಾಲಾ ! ಮೋಕ್ಷವೆಂದರೆ ಏನೆಂದು ತಿಳಿದುಕೊಂಡಿದ್ದೀ ? ಕರ್ಮಬಂಧಗಳಿಂದ ಬಿಡುಗಡೆಯಾಗುವುದೇ ಮೋಕ್ಷವು. ಆ ಕರ್ಮಗಳಲ್ಲಿ ಕಟ್ಟಲ್ಪಟ್ಟಿರುವುದೇ ಬಂಧಕವೆಂದು ಹೇಳುತ್ತಾರೆ. ಮೋಕ್ಷವನ್ನು ಪಡೆಯುವುದಕ್ಕೆ ಯತ್ನಿಸುತ್ತಿರುವ ನೀನು, ನಿನ್ನಲ್ಲಿರುವ ಇಪ್ಪತ್ತನಾಲ್ಕು ತತ್ವಗಳೊಳಗೆ ಯಾವತತ್ವದಿಂದ ನೀನು ಕಟ್ಟಲ್ಪಟ್ಟದ್ದೀಯೋ, ಅದನ್ನು ನಿನ್ನ ಬುದ್ಧಿಯಿಂದ ತಿಳಿದುಕೊಳ್ಳಬೇಕೇ ಹೊರತು, ಮಾಯೆ ಮತ್ತು ಅಜ್ಞಾನ ಈ ಎರಡರ ವಿಷಯವನ್ನು ವಿಚಾರ ಮಾಡಿ ತಿಳಿದುಕೊಳ್ಳಬೇಕಾದ ಅಗತ್ಯವಿಲ್ಲ.

ಶಿಷ್ಯ :—ನಿಜವೇ ಸರಿ. ಆದರೆ ನನಗೆ ಬುದ್ಧಿಯೆಂಬುದೇ ಇಲ್ಲವಲ್ಲಾ ! ಅದೇತಕ್ಕೆ?

ಗುರುವು :—ಷಡ್ರಸಗಳನ್ನೂ, ಒಳ್ಳೆಯದಲ್ಲದ್ದನ್ನೂ, ಕ್ರಮಾಕ್ರಮಗಳನ್ನೂ, ಸುಖದುಃಖಗಳನ್ನೂ, ಪುಣ್ಯಪಾಪಗಳನ್ನೂ ಇವೇ ಮೊದಲಾದವುಗಳೆಲ್ಲವನ್ನೂ ನೀನು ತಿಳಿದುಕೊಂಡಿರುವುದು ನಿಜವಲ್ಲವೇ ? ಇವೆಲ್ಲವನ್ನೂ ಜ್ಞಾನದಿಂದ ತಿಳಿದುಕೊಳ್ಳುತ್ತೀಯಾ ? ಇಲ್ಲವೇ, ಅಜ್ಞಾನದಿಂದ ತಿಳಿದುಕೊಳ್ಳುವೆಯಾ ? ಅದನ್ನು ಹೇಳು.

ಶಿಷ್ಯ :—ಬುದ್ಧಿಯೆಂಬ ಜ್ಞಾನದಿಂದಲೇ ಮೇಲೆ ಹೇಳಿದವುಗಳನ್ನು ತಿಳಿದುಕೊಳ್ಳುತ್ತಿದ್ದೇನೆ ಎಂಬ ವಿಷಯವು ನನ್ನ ಮನಸ್ಸಿಗೆ ಹಿಡಿಯಿತು.

ಆದರೆ ಬ್ರಹ್ಮಜ್ಞಾನವೆಂದು ಹೇಳುತ್ತಿದ್ದೀರೇ, ಅದು ಯಾವುದು? ಮತ್ತು ಅದರ ವಿಷಯವೇನು? ಎಂಬುದು ನನಗೆ ತಿಳಿಯದು ಸ್ವಾಮಿ! ಅದರ ಸ್ವರೂಪವನ್ನು ನನಗೆ ದಯವಿಟ್ಟು ವಿಶದಪಡಿಸುವಿರಾ?

ಗುರುವು :—ಕುಮಾರಾ! ಕೇಳು, ಜ್ಞಾನದಲ್ಲಿ ಬ್ರಹ್ಮಜ್ಞಾನವೆಂದೂ ಮತ್ತು ಪದಾರ್ಥಜ್ಞಾನವೆಂದೂ ಎರಡುಬಗೆಗಳುಂಟೇ? ಏನು?

ಶಿಷ್ಯ :—ಆ ವಿಷಯವು ನನಗೆ ತಿಳಿಯದೇ ಇರುವುದರಿಂದಲೇ ಅದನ್ನು ಕುರಿತು ನಿಮ್ಮನ್ನು ಕೇಳಬೇಕಾಗಿ ಬಂದಿತು. ನಿತ್ಯಾನಂದಪದವಿಯು ನನಗೆ ಲಭಿಸಬೇಕಾದರೆ ನಾನೇನು ಮಾಡಬೇಕು? ಅದನ್ನೇ ತಾವು ನನಗೆ ಉಪದೇಶಿಸಬೇಕೆಂದು ನಾನು ಕೋರುತ್ತಿದ್ದೇನೆ?

ಗುರುವು :—ನಿನಗೊಂದು ಕೈ ಕುಂಟಾಗಿದೆಯಲ್ಲವೇ? ಕುಮಾರಾ! ಅದು ಹಾಗಾಗುವುದಕ್ಕೆ ಕಾರಣವೇನು? ಅದನ್ನು ವಿಚಾರಿಸಿ ತಿಳಿದುಕೊಳ್ಳುವುದೇ ನಿತ್ಯಾನಂದ ಪದವಿಯನ್ನು ಹೊಂದುವುದಕ್ಕೆ ಮಾರ್ಗವೆಂದು ತಿಳಿದುಕೋ. 'ಶ್ರದ್ಧಾವಾನ್ ಲಭತೇ ಜ್ಞಾನಂ' ಎಂಬಂತೆ ಶ್ರದ್ಧೆಯಿಂದ ಜ್ಞಾನವುಂಟಾಗುತ್ತದೆ. ಆದುದರಿಂದ ನೀನು ಶ್ರದ್ಧೆಯಿಂದ ಆ ವಿಷಯವನ್ನು ಆಲೋಚಿಸಿದ್ದೇ ಆದರೆ, ಜ್ಞಾನೋದಯವು ತಪ್ಪದೆ ಉಂಟಾಗುತ್ತದೆ. ಜ್ಞಾನವು ಸಿದ್ಧಿಸಿತೆಂದರೆ ಮೋಕ್ಷವೆಂಬ ನಿತ್ಯಾನಂದ ಪದವಿಯೂ ಸುಲಭವಾಗಿ ದೊರಕುತ್ತದೆ.

ಶಿಷ್ಯ :—ಸ್ವಾಮಿ! ಪೂಜ್ಯರಾದ ನೀವು ಅಪ್ಪಣೆ ಕೊಡಿಸಿದಂತೆ ಶರೀರತತ್ವವನ್ನು ಕುರಿತು ನಾನು ವಿಚಾರ ಮಾಡುವುದಕ್ಕೆ ತೊಡಗುವೆನು.

ಹೀಗೆಂದು ಹೇಳಿ ಶಿಷ್ಯನು, ಈ ಮುಂದೆ ಹೇಳುವ ರೀತಿಯಲ್ಲಿ ತನ್ನಲ್ಲಿ ತಾನು ಆಲೋಚಿಸುತ್ತಿದ್ದಾನೆ. "ಗುರುಗಳು ನನ್ನನ್ನು ಕುರಿತು, 'ನಿನ್ನ ಕೈ ಕುಂಟಾಗಿರುವುದಕ್ಕೆ ಕಾರಣವೇನು? ಆಲೋಚಿಸಿ ನೋಡು' ಎಂದು ಹೇಳಿದರಲ್ಲವೇ? ಅದನ್ನು ಈಗ ನನ್ನ ಸೂಕ್ಷ್ಮಬುದ್ಧಿಯಿಂದ ವಿಚಾರಿಸಿ ತಿಳಿದುಕೊಳ್ಳುವುದಕ್ಕೆ ಯತ್ನಿಸುವೆನು. ಇರಲಿ, ನನ್ನ ಕೈ ಕುಂಟಾಗಿರು

ವುದನ್ನು ನಾನು ಮಾಡಿಕೊಂಡಿದ್ದಲ್ಲವು. ಏಕೆಂದರೆ ನನ್ನ ಶರೀರದ ಅಂಗಾ ಗಳೆಲ್ಲವೂ ಅಂದವಾಗಿರಬೇಕೆಂದು ನಾನು ನೆನೆಸುತ್ತೇನೆಯೇ ಹೊರತು, ವಿಕಾರವಾಗಿರಬೇಕೆಂಬ ಇಚ್ಛೆಯು ನನಗೆಂದಿಗೂ ಇರದಲ್ಲವೇ? ಇದೂ ಅಲ್ಲದೆ, ಈ ನನ್ನ ಕೈಕುಂಟು ನನಗೆ ಬಾಲ್ಯದಿಂದಲೂ ಇದ್ದೇ ಇದೆ.

"ಈ ವಿಷಯವನ್ನು ಕುರಿತು ಯೋಚಿಸಿದರೆ, ನಾನು ನಮ್ಮ ತಾಯಿಯ ಗರ್ಭದಲ್ಲಿರುವಾಗಲೇ ನನಗೆ ಇಂತಹ ವಿಕಾರಸ್ವರೂಪವುಂಟಾಗಿರಬೇಕೆಂದು ಸ್ಪಷ್ಟಪಡುತ್ತದೆ. ಆದರೆ ನಾನು ಹುಟ್ಟುವುದಕ್ಕೆ ಮುಂಚೆಯೂ, ನಾನು ಹುಟ್ಟಿದಮೇಲೆಯೂ, ನಮ್ಮ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ನನ್ನ ಅಣ್ಣ ತಮ್ಮಂದಿರಿಗೆ ಈ ವಿಧವಾದ ಕೈಕುಂಟು ಉಂಟಾಗದೆ ನನಗೆ ಮಾತ್ರ ಇದು ಲಭಿಸಿದೆ. ನಾನು ನನ್ನ ತಾಯಿಯ ಗರ್ಭದಲ್ಲಿ ವಾಸಮಾಡುತ್ತಿದ್ದಾಗ ಯಾರಾದರೂ ಈರೀತಿಯಾದ ವಿಕಾರವನ್ನು ನನಗುಂಟುಮಾಡಿದರು ಎಂದು ಹೇಳಿಕೊಳ್ಳಲೇ? ಹಾಗೆಂದುಕೊಳ್ಳುವುದಕ್ಕೆ ಅವಕಾಶವೇ ಇಲ್ಲ. ಏತಕ್ಕೆಂ ದರೆ, ಗರ್ಭದಲ್ಲಿ ಬೆಳೆಯುತ್ತಿರುವ ನನ್ನ ಗೋಜಿಗೆ ಬರುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಹಾಗಿರಲು ಯಾರು ತಾನೇ ನನಗೆ ಈಯವಸ್ಥೆಯನ್ನುಂಟು ಮಾಡಬಲ್ಲರು? ಇವೆಲ್ಲವನ್ನೂ ಸರಿಯಾಗಿ ಯೋಚಿಸಿದಲ್ಲಿ, ಈ ಕೈಕುಂಟು ತಾಯಿಯ ಕುಕ್ಷಿಯಲ್ಲಿರುವಾಗಲೇ ನನಗೆ ಒದಗಿರಬೇಕು, ಎಂಬುದು ಸ್ಪಷ್ಟ ವಾಗಿದೆ. ನನ್ನ ಸಹೋದರರಲ್ಲೊಬ್ಬರೂ ಈ ವಿಕೃತಿಯನ್ನು ಹೊಂದದೆ ನಾನೊಬ್ಬನೇ ಹೀಗಾಗುವುದಕ್ಕೆ ಏನೋ ಒಂದು ಪ್ರಬಲವಾದ ಕಾರಣ ವಿದ್ದೇ ಇರಬೇಕು. ಅದು ಯಾವುದಾಗಿರಬೇಕು? ಅದು ನನ್ನ ಪುರಾ ಕೃತಪಾಪಕರ್ಮಫಲವೇ ಹೊರತು ಬೇರಲ್ಲ. ಹೀಗೆ ನಾನು ಪೂರ್ವಜನ್ಮ ಗಳಲ್ಲಿ ಮಾಡಿದ ಪಾಪಕರ್ಮಗಳಿಗಾಗಿ ನಾನೀಯವಸ್ಥೆಯನ್ನು ಪಡೆದು ಹುಟ್ಟಿದೆನೆಂದು ನನಗೆ ಹೊಳೆಯುತ್ತದೆಯಲ್ಲವೇ? ಹೀಗಿರಲು ನಾನು ಯಾವ ವಿಧವಾದ ಜನ್ಮವನ್ನು ಪಡೆಯಬೇಕೆಂಬುದನ್ನು ವಿಧಿಸಲು ನನ್ನ ಮೇಲೆ ಒಬ್ಬ ಅಧಿಕಾರಿಯೂ ಇರಬೇಕು, ಎಂದು ನಾನು ಊಹಿಸಬೇಕಾಗಿದೆ.

"ಈ ಅಧಿಕಾರಿಯೇ ಈಶ್ವರನು ಎಂದು ನಾನು ಭಾವಿಸುತ್ತೇನೆ. ಈಗ ನನಗೊದಗಿರುವ ಶಿಕ್ಷೆಯಿಂದ ನನಗೆ ಏನು ತೋರುತ್ತದೆಯೆಂದರೆ, ಈ

ಜನ್ಮದ ಹಿಂದೆ ನಾನೊಂದು ಜನ್ಮವೆತ್ತಿದ್ದೆನೆಂದೂ, ಮತ್ತು ಆ ಜನ್ಮದಲ್ಲಿ ದುಷ್ಟಕಾರ್ಯಗಳನ್ನು ನಾನು ಮಾಡಿದ್ದೆನೆಂದೂ, ತತ್ಫಲವಾಗಿ ಈಗ ವಿಕಾರರೂಪವೆಂಬ ಶಿಕ್ಷೆಯನ್ನನುಭವಿಸುತ್ತಿದ್ದೇನೆಂದೂ, ನನಗೆ ಈಗ ವ್ಯಕ್ತ ವಾಗುತ್ತಿದೆ. ಈ ಜನ್ಮದಲ್ಲಿ ನಾನು ಮಾಡುವ ಪುಣ್ಯಪಾಪಕರ್ಮಗಳಿಗೆ ತಕ್ಕಂತೆ, ಇನ್ನು ಮುಂದೆ ನನಗೆ ಲಭಿಸುವ ಜನ್ಮದಲ್ಲಿ ಬೇರೆಬೇರೆ ಫಲ ಗಳನ್ನು ತಪ್ಪದೆ ಅನುಭವಿಸಬೇಕೆಂದು ನನ್ನ ಬುದ್ಧಿ ಬಲದಿಂದ ನಾನು ತಿಳಿದುಕೊಂಡೆನು. ಇದರಿಂದ ಏನು ಊಹಿಸಬಹುದೆಂದರೆ, 'ಪ್ರತಿ ಪುರು ಷನಿಗೂ ಹಿಂದೆ ತಾನು ಪಡೆದಿದ್ದ, ಈಗ ಹೊಂದಿರುವಂಥ, ಮತ್ತು ಮುಂದೆ ತಾನು ಪಡೆಯುವಂಥ ಮೂರು ಜನ್ಮಗಳು ಇದ್ದೇ ಇರಬೇಕು, ಎಂಬ ವಿಷ ಯವು ವಿಶದಪಡುತ್ತದೆ. ಹೀಗೆಯೇ ಪ್ರತಿ ಜನ್ಮಕ್ಕೂ ಹಿಂದುಮುಂದು ಜನ್ಮಗಳು ಇದ್ದೇ ಇರಬೇಕಾದುದರಿಂದ, ನಾನು ಪಡೆಯುವ ಅನೇಕ ಜನ್ಮಗಳಲ್ಲೆಲ್ಲಾ 'ನಾನು' ಇದ್ದೇ ಇರಬೇಕು. ಆದುದರಿಂದ 'ನಾನು' ನಿತ್ಯನಾಗಿದ್ದೇನೆ. 'ನನಗೆ' ನಾಶವಿಲ್ಲ. ಪೂರ್ವಜನ್ಮಕರ್ಮಫಲಕ್ಕನು ಗುಣವಾಗಿ ದೊರಕುವ ಶರೀರಗಳಿಗೆ ನಾಶವೇ ಹೊರತು, 'ನನಗೆ' ನಾಶ ವೆಂಬುದಿಲ್ಲ, ಎಂಬುದು ನನ್ನ ಮನಸ್ಸಿಗೆ ಚನ್ನಾಗಿ ನಿರ್ಧಾರವಾಯಿತು.

"ಹಿಂದಿನ ಜನ್ಮದಲ್ಲಿ ನಾನು ಪಾಪವನ್ನು ಮಾಡದಿದ್ದಲ್ಲಿ, ನನ್ನ ಕೈ ಕುಂಟಾಗದೆ ಸರಿಯಾದ ರೂಪದಿಂದಲೇ ಹುಟ್ಟುತ್ತಿದ್ದೆನು. ನಾನು ಮಾಡಿದ ಪಾಪಕರ್ಮಗಳಿಗಾಗಿ ನನಗೆ ಈರೀತಿಯಾದ ಹುಟ್ಟು ದೊರಕಿ ದುದು ನ್ಯಾಯವೇ ಸರಿ. ನಾನು ಪಾಪವನ್ನು ಮಾಡದೆಯೇ ಈಶ್ವರನು ನನಗೆ ಈರೀತಿಯಾದ ವಿಕಾರವಾದ ಹುಟ್ಟನ್ನು ಕೊಟ್ಟದ್ದೇ ಆದರೆ, ಆತನೆಂ ದಿಗೂ 'ಈಶ್ವರ' ನೆಂದೆನಿಸಲಾರನು. ಹಿಂದಿನ ಜನ್ಮದಲ್ಲಿ ನಾನು ಪಾಪ ಕರ್ಮಗಳನ್ನು ಮಾಡಿ ಮೃತಿಹೊಂದಿರುವುದರಿಂದಲೇ, ಈ ಕೈಕುಂಟಾದ ಶರೀರವನ್ನು ಪಡೆಯಬೇಕಾಗಿ ಬಂದಿತು. ಪುನಃ ಈ ಶರೀರವನ್ನು ಬಿಟ್ಟು ಬೇರೊಂದು ಶರೀರವನ್ನು ಪಡೆಯಬೇಕಾದರೂ, 'ನಾನು' ಆತ್ಮಸ್ವರೂಪ ವಾಗಿರುವುದರಿಂದಲೇ 'ನನಗೆ' ಲಭಿಸುವ ಶರೀರಗಳೊಡನೆ 'ನಾನು' ನಾಶವಾಗುವುದಿಲ್ಲ. ಆದುದರಿಂದಲೇ 'ನಾನು' ನಿತ್ಯನು.

"ಇನ್ನು ಮುಂದೆ ಪಡೆಯಬಹುದಾದ ಜನ್ಮದಲ್ಲಿ ನನಗೆ ಒಂದು ಪಕ್ಷಿ ಶರೀರವು ದೊರಕಿದರೆ ಈ ಶರೀರಸಂಬಂಧವಾದ ಆಕಾರವಿಕಾರಗಳು ಎಂದಿಗೂ ನನ್ನನ್ನು ಬೆನ್ನಂಟವು. ಅವು ಆ ಹಿಂದಿನ ಶರೀರದಲ್ಲಿಯೇ ನಶಿಸುವುವೆಂಬುದು ನಿಶ್ಚಯ. ಆತ್ಮಸ್ವರೂಪಿಯಾದ ನನಗೆ ರೂಪವಾಗಲಿ, ಕೈಕಾಲುಗಳೆಂಬ ಅವಯುವಗಳಾಗಲಿ ಇದ್ದದ್ದೇ ಆದರೆ, ಮುಂದೆ ನನಗೆ ಲಭಿಸಬಹುದಾದ ಪಕ್ಷಿ ಜನ್ಮದಲ್ಲಿಯೂ ಅವುಗಳಿದ್ದೇ ಇರಬೇಕಲ್ಲವೇ? ಆದರೆ, ಮೇಲೆ ಹೇಳಿದಂತೆ ಇವೆಲ್ಲವೂ ನಾನು ಮೃತಿಹೊಂದಿದಮೇಲೆ ನನ್ನ ಹಿಂದೆ ಬಾರವು. ಆದುದರಿಂದ ಈ ಕರ್ಮೇಂದ್ರಿಯಗಳು ನಾನಲ್ಲ. ಕರ್ಮೇಂದ್ರಿಯಗಳು ಶರೀರಕ್ಕೆ ಸಂಬಂಧಿಸಿರುವವೇ ಹೊರತು, ಎಷ್ಟು ಮಾತ್ರವೂ ನನಗೆ ಅಂಟಿರುವುವಲ್ಲ. ಇದೇ ರೀತಿಯಲ್ಲಿ ಜ್ಞಾನೇಂದ್ರಿಯಗಳೂ ಕೂಡ, ಶರೀರದಲ್ಲಿಯೇ ನಿಂತುಹೋಗುವುವಾದುದರಿಂದ ಜ್ಞಾನೇಂದ್ರಿಯಗಳೂ ನಾನಲ್ಲ.

"ಈ ರೀತಿಯಲ್ಲಿ ಜೀವಿಗಳಿಗೆ ಅವರವರ ಪುಣ್ಯಪಾಪಕರ್ಮಗಳಿಗನುಗುಣವಾಗಿ ಉತ್ತಮಮಧ್ಯಮಾಧಮ ಜನ್ಮಗಳು ದೊರಕುತ್ತ ಬರುತ್ತವೆ. ಅಂದರೆ ಅವರಿಗೆ ಧನಿಕರ ಅಥವ ಕಡುಬಡವರ ಮನೆಯಲ್ಲಿನ ಜನ್ಮಗಳು ಆಗಾಗ್ಗೆ ಲಭಿಸುತ್ತಿರುತ್ತವೆ, ಎಂದು ಭಾವವು.

ಶ್ಲೋ ॥ ಶರೀರಜೈಃ ಕರ್ಮದೋಷೈಃ ♦ ಯಾತಿ ಸ್ಥಾವರತಾಂ ನರಃ ।
ವಾಚಿಕೈಃ ಪಕ್ಷಿಮೃಗತಾಂ ♦ ಮಾನಸೈ ರಂತ್ಯಜಾತಿತಾಂ ॥

"ಮನುಷ್ಯನಾದವನು, ಅವನ ಮನಸ್ಸು ಮಾಡುವ ಪಾಪಕರ್ಮಗಳ ಫಲವಾಗಿ ನೀಚ ಜಾತಿಯಲ್ಲಿ ಜನಿಸಬೇಕಾಗುವುದು. ಬಾಯಿಯಿಂದ ಮಾಡುವ ಪಾಪಕರ್ಮಗಳಿಗಾಗಿ ಮೃಗಜಾತಿಯಲ್ಲಿಯೋ ಇಲ್ಲವೇ, ಪಕ್ಷಿಜಾತಿಯಲ್ಲಿಯೋ ಹುಟ್ಟಬೇಕಾಗುವುದು. ಕೋಪದಿಂದ ಅಹಂಕಾರಪಟ್ಟು, ಈ ದೇಹದಿಂದ ಮಾಡುವಂಥ ಪಾಪಕರ್ಮಗಳಿಗಾಗಿ ಪರ್ವತ ವೃಕ್ಷ ಮೊದಲಾದ ಸ್ಥಾವರಜನ್ಮವನ್ನೆತ್ತಬೇಕಾಗುವುದು. ಆದುದರಿಂದಲೇ ತಾರತಮ್ಯ ಜ್ಞಾನವುಳ್ಳ ಮನುಷ್ಯನು, ಯಾವ ವಿಧವಾದ ವಿರುದ್ಧ ಕರ್ಮಗಳನ್ನು ಮಾಡುವುದಕ್ಕೂ ಮನಗೊಡಬಾರದು.

ಹಿಂದೆ ವಿವರಿಸಿದಂತೆ ಪ್ರತಿ ಜೀವಿಗೂ ಪಕ್ಷಿಮೃಗ ಸ್ಥಾವರ ಜಂಗಮಾದಿ ಜನ್ಮಗಳು ಪಾಪಕರ್ಮಗಳಿಂದಲೇ ಲಭಿಸುವುವು. ಆದರೆ ಶರೀರಗಳೆಲ್ಲವೂ ನಶ್ವರವಾದವುಗಳೇ ಹೊರತು, ಸ್ಥಿರವಾದವುಗಳಲ್ಲ. ನಾನು ಸ್ಥಿರವಾಗಿರುವಾಗ ನಾನೇ ಬೇರೆ, ಶರೀರವೇ ಬೇರೆ. ಶರೀರವೆಂದಿಗೂ ನಾನಲ್ಲ. ಈ ಶರೀರವು ನನ್ನನ್ನು ಸೇರಿಸಿ ಹಿಡಿದುಕೊಳ್ಳಲಾರದು. ಆದರೆ ಈ ಶರೀರಕ್ಕೆ ಸಂಭವಿಸುತ್ತಿರುವ ಸುಖದುಃಖಗಳೆಲ್ಲವನ್ನೂ ನಾನು ತಿಳಿದುಕೊಳ್ಳುವವನಾಗಿದ್ದೇನೆ. ಇದೂ ಅಲ್ಲದೆ, ನಾನು ಮನುಷ್ಯನಾಗಿ ಹುಟ್ಟದೆ ಆನೆಯ ಜನ್ಮವನ್ನು ಹೊಂದಿದ್ದರೆ, ಈಗ ನಾನು ಭುಜಿಸುವ ಪಕ್ವಾನ್ನಾದಿಗಳನ್ನು ತಿನ್ನದೆ ಜೊಂಡು, ಅರಳಿ, ಆಲ ಮೊದಲಾದ ಗಿಡಗಳೆಲೆಗಳು ಇವೇ ಮೊದಲಾದವುಗಳನ್ನು ತಿಂದು ಜೀವಿಸಬೇಕಾಗುತ್ತಿತ್ತು. ಆದುದರಿಂದ ಆಹಾರವು ಶರೀರಸಂಬಂಧವೇ ಹೊರತು ಆ ಶರೀರವನ್ನು ಪಡೆದ ನನಗೆ ಅದು ಸಂಬಂಧಿಸಿದುದಲ್ಲವು.

ಈಗ ನನಗೆ ಈ ಜನ್ಮದಲ್ಲಿ ದೊರಕುವ ಹೆಂಡತಿಮಕ್ಕಳು, ಬಂಧುವರ್ಗಗಳು, ಸ್ನೇಹಿತರು, ವಿರೋಧಿಗಳು ಮೊದಲಾದವರು ನಾನು ಸತ್ತಮೇಲೆ ನನಗೆ ಸಿಕ್ಕಬಹುದಾದ ಜನ್ಮದಲ್ಲಿ, ಅದೇ ಸಂಬಂಧದಿಂದ ದೊರಕುವವರಲ್ಲವು. ಹಿಂದೆ "ಪುನರ್ಜನ್ಮ ಮತ್ತು ಪೂರ್ವಜನ್ಮ ಸಂಸ್ಕಾರ" ಎಂಬ ಪ್ರಕರಣದಲ್ಲಿ ವಿವರಿಸಿದ್ದ ಶಾಂತಿದೇವಿಯೇ ಮೊದಲಾದ ಪೂರ್ವ-ಜನ್ಮ ವಾಸನೆಯನ್ನುಳ್ಳ ವ್ಯಕ್ತಿಗಳ ವಿಷಯವನ್ನು ಪರೀಕ್ಷಿಸಿದಲ್ಲಿ, ಹಿಂದಿನ ಜನ್ಮದಲ್ಲಿ ಅವರು ಹುಟ್ಟಿದ್ದಕ್ಕೂ, ಈ ಜನ್ಮದಲ್ಲಿ ಹುಟ್ಟಿರುವುದಕ್ಕೂ, ಸಂಬಂಧವೇ ಇಲ್ಲವೆಂದು ವ್ಯಕ್ತವಾಗುತ್ತದೆ. ಆದುದರಿಂದ ಈ ಜನ್ಮದಲ್ಲಿ ನನ್ನ ಸಂಬಂಧಿಗಳನ್ನು ಈ ಶರೀರದೊಡನೆಯೇ ಬಿಟ್ಟುಬಿಡುತ್ತೇನಾದುದರಿಂದ ಅವರೆಲ್ಲರೂ ಶರೀರಬಂಧುಗಳೇ ಹೊರತು, ಆತ್ಮಬಂಧುಗಳಲ್ಲವು.

ನನಗೆ ಧನಧಾನ್ಯಾದಿಗಳೆಂಬುದಿಲ್ಲವು. ಏಕೆಂದರೆ, ಈ ಧನಧಾನ್ಯಾದಿಗಳೆಲ್ಲವೂ ಈ ಜನ್ಮದಲ್ಲಿ ನನ್ನ ಶರೀರವಿರುವವರಿವಿಗೆ ಸಂಬಂಧಿಸಿರುವವೇ ಹೊರತು, ಇನ್ನು ಮುಂದೆ ಅವು ನಾನು ಪಡೆಯುವಂಥ ಮತ್ತೊಂದು ಶರೀರಕ್ಕೆ ಒದಗಲಾರವು. ಆದುದರಿಂದ ಧನಧಾನ್ಯಾದಿ ಸಮಸ್ತ ಸಂಪತ್ತುಗಳು

ಶರೀರಸಂಬಂಧಗಳೇ ಹೊರತು, ಆ ಶರೀರವನ್ನು ಹೊಂದಿರುವ ನನಗೆ ಸಂಬಂಧಿಸಿದುವಲ್ಲವು. ಈ ಜನ್ಮದಲ್ಲಿ ನಾನು ಕ್ಷತ್ರಿಯನಾಗಿ ಹುಟ್ಟಿದ್ದೇನೆ. ನಾನು ಈಗ ಮಾಡುವ ಪಾಪಕರ್ಮಫಲವಾಗಿ ಮುಂದಿನ ಜನ್ಮದಲ್ಲಿ ಶೂದ್ರಯೋನಿಯಲ್ಲಿ ಹುಟ್ಟಿದ್ದೇ ಆದರೆ, ಈ ಜಾತ್ಯಭಿಮಾನವು ಆಗ ನನಗೆಲ್ಲಿ ರುತ್ತದೆ? ಆದುದರಿಂದ ಈ ಬಗೆಯಾದ ಜಾತ್ಯಭಿಮಾನಗಳು ಶರೀರಕ್ಕೆ ಸಂಬಂಧಿಸಿದವೇ ಹೊರತು, ನನಗೆ ಅಂಟಿದುವಲ್ಲ.

"ಈ ಜನ್ಮದಲ್ಲಿ ವೈಷ್ಣವ ಮತಕ್ಕೆ ಸೇರಿದ ನಾನು, ಶೈವ ಮತಸ್ಥರನ್ನು ದೂಷಿಸುತ್ತಿದ್ದೇನೆ. ಹಾಗಲ್ಲದೆ ಮುಂದಿನ ಜನ್ಮದಲ್ಲಿ ಶಿವಮತದಲ್ಲಿ ನಾನು ಹುಟ್ಟಿದ್ದೇ ಆದರೆ, ಆ ಮತದಲ್ಲಿನ ಅಭಿಮಾನದಿಂದ ವೈಷ್ಣವ ಮತಸ್ಥರನ್ನು ದೂಷಿಸುತ್ತೇನೆ. ಹೀಗಿರುವಲ್ಲಿ, ರಾಗದ್ವೇಷಾದಿಗಳು ಶರೀರಗಳನ್ನಂಟಿರುವವೇ ಹೊರತು, ಶರೀರಿಗೆ ಈ ಸೋಕೆಂಬುದೇ ಇಲ್ಲ.

"ಈ ಜನ್ಮದಲ್ಲಿ ನನ್ನನ್ನು 'ರಾಮ' ನೆಂದು ಕರೆಯುತ್ತಾರೆ. ಮುಂದಿನ ಜನ್ಮದಲ್ಲಿ ನನ್ನನ್ನು ಯಾವ ಹೆಸರಿನಿಂದ ಕರೆಯುವರೋ ತಿಳಿಯದು. ಈ ನಾಮಭೇದಗಳು ದೇಹಕ್ಕೆ ಸೇರಿದವೇ ಹೊರತು, ಶರೀರಿಯಾದ ನನಗೆ ಅವು ಸೇರಿದವಲ್ಲವು.

"ಈ ಜನ್ಮದಲ್ಲಿ ನಾನು ಮನುಷ್ಯಯೋನಿಯಲ್ಲಿ ಹುಟ್ಟಿರುವುದರಿಂದ ನನಗೆ ಪೂರ್ಣಾಯುಃಪ್ರಮಾಣವು ನೂರುವರ್ಷಗಳೆಂದೇರ್ಪಟ್ಟಿದೆ. ಆದರೆ ನಾನು ಮುಂದೆ ಕ್ರಿಮಿಕೀಟಪಶುಪಕ್ಷಿಗಳ ಯೋನಿಯಲ್ಲಿ ಜನಿಸಿದ್ದೇ ಆದರೆ, ಈ ಆಯುಃಪ್ರಮಾಣವು ಅಷ್ಟಿರದು. ಆದುದರಿಂದ ಆಯುಃಪರಿಮಿತಿಯೆಂಬುದು ದೇಹಕ್ಕೇ ಹೊರತು, ಆ ದೇಹವನ್ನು ಧರಿಸಿದ ನನಗಲ್ಲ.

"'ನಾನು ನಿತ್ಯನು, ನಿತ್ಯಾನಂದಸ್ವರೂಪಿಯು, ಮತ್ತು ಜ್ಯೋತಿರ್ಮಯನು' ಎಂದು ಯಾವಾಗ ತಿಳಿದುಕೊಂಡೆನೆಂದರೆ, ಇದುವರೆವಿಗೂ ನಾನು ತೊಡಗಿದ ತತ್ವಚಿಂತಾನುವಾದದಿಂದ ನನ್ನ ಮನಸ್ಸು ಪರಿಪಕ್ವವಾದ ಮೇಲೆಯೇ.

"ಪಂಚಭೂತಗಳ ಸಂಯೋಗದಿಂದುಂಟಾದ ಈ ಪ್ರಪಂಚದ ಸೃಷ್ಟಿಗೆ ಮೊದಲು ನನಗೆ ಶರೀರವೇ ಇರಲಿಲ್ಲ. ನಿತ್ಯನಾಗಿಯೂ, ದೇಹರಹಿತನಾಗಿಯೂ ಇದ್ದ ನನಗೆ ಈ ಶರೀರವು ಪಂಚಭೂತಗಳ ಸೃಷ್ಟಿಯಾದ ವೇಳೆಯೇ ಉಂಟಾದುದು.

"ಜ್ಞಾನ ಮತ್ತು ಬುದ್ಧಿ ಎಂಬಿವೆರಡೂ ಬೇರೆಬೇರೆ ಪದಾರ್ಥಗಳಲ್ಲವು. ಅಗ್ನಿಯಲ್ಲಿ ಜ್ವಾಲೆಯೆಂಬುದು ಯಾವ ರೀತಿಯಲ್ಲಿ ಕಲೆತಿದೆಯೋ, ಹಾಗೆಯೇ ಬುದ್ಧಿಯೂ ಜ್ಞಾನವೂ ಒಂದರಲ್ಲೊಂದು ಕಲೆತಿವೆ. ಜ್ಞಾನವೇ ಬೇರೆ, ಬುದ್ಧಿಯೇ ಬೇರೆ ಎಂದು ಬೇರ್ಪಡಿಸುವುದಕ್ಕೆ ಸಾಧ್ಯವಿಲ್ಲ. ಜ್ಞಾನವೇ ಪರಬ್ರಹ್ಮ, ಆ ಪರಬ್ರಹ್ಮನೇ ನಾನು. ಆದುದರಿಂದ ನಾನೇ ಜ್ಞಾನವೆಂದು ಭಾವವು.

"'ತದೇಕೋಽವಶಿಷ್ಟ ಶ್ಶಿವಃ ಕೇವಲೋಽಹಂ' ಎಂಬುದು ನಾನೇ ಪರಮಾತ್ಮನು ಎಂಬ 'ತತ್ತ್ವಮಸಿ' ಎಂಬ ಶ್ರುತಿವಾಕ್ಯದ ಮುಖ್ಯ ಭಾವವಾಗಿದೆ. ಇದನ್ನೇ ಶಂಕರಾಚಾರ್ಯರು ತತ್ವದ ಸಾರವನ್ನಾಗಿ "ಶಿವೋಽಹಂ ಶಿವೋಽಹಂ ♦ ಶಿವೋಽಹಂ ಶಿವೋಽಹಂ" ಎಂಬುದಾಗಿ ಪುನಃಪುನಃ ಜೀವಾತ್ಮ ಪರಮಾತ್ಮರ ಐಕ್ಯಭಾವವನ್ನು ಒತ್ತಿ ಹೇಳಿದ್ದಾರೆ. ಇದೇ ಶ್ರುತಿವಾಕ್ಯಗಳ ತಿರುಳು. ಮೇಲೆ ಹೇಳಿದ 'ತತ್ವಮಸಿ' ಎಂಬ ಮಹಾವಾಕ್ಯದ ಅರ್ಥವೇನೆಂದರೆ,

ಶ್ಲೋ ॥ ತತ್ತ್ವಂ ಪದಾಭ್ಯಾ ಮಭಿಧೀಯಮಾನಯೋಃ ।
ಬ್ರಹ್ಮಾತ್ಮ ನೋಃ ಶೋಧಿತಯೋ ರ್ಯದೀತ್ಥಂ ॥
ಶ್ರುತ್ವಾ ತಯೋಃ ತತ್ವಮಸೀತಿ ಸಮ್ಯಕ್ ।
ಏಕತ್ವ ಮೇವ ಪ್ರತಿಪಾದ್ಯತೇ ಮುಹುಃ ॥

(ವಿವೇಕಚೂಡಾಮಣಿ, 243ನೇ ಶ್ಲೋಕ.)

'ತತ್' ಎಂದರೆ ಅದು ಎಂದೂ, 'ತ್ವಂ' ಅಂದರೆ ನೀನು ಎಂದೂ ಅರ್ಥ. ಅಂದರೆ ಜ್ಯೋತಿಸ್ಸ್ವರೂಪವಾದ ಆ ಪರಬ್ರಹ್ಮವೂ, ಜೀವಾತ್ಮನಾದ ನೀನೇ ಆಗಿದ್ದಿ; ಅಂದರೆ ಜೀವಾತ್ಮ ಪರಮಾತ್ಮರಿಗೆ ಭೇದವೆಂಬುದೇ ಇಲ್ಲ. ಆದರೆ ವಾಕ್ಯಾರ್ಥಗಳಿಂದ ಅವರಿಗೆ ಐಕ್ಯವಿಲ್ಲದಿದ್ದರೂ,

ಶ್ಲೋ॥ ಐಕ್ಯಂ ತಯೋ ರ್ಲಕ್ಷಿತಯೋ ರ್ನ ವಾಚ್ಯಯೋಃ।
ನಿಗದ್ಯತೇಽನ್ಯೋನ್ಯವಿರುದ್ಧಧರ್ಮಿಣೋಃ॥
ಖದ್ಯೋತಭಾಸ್ವೋ ರಿವ ರಾಜಭೃತ್ಯಯೋಃ।
ಕೂಪಾಂಬುರಾಶ್ಯೋಃ ಪರಮಾಣು ಮೇರ್ವೋಃ॥

(ವಿವೇಕಚೂಡಾಮಣಿ, ಶ್ಲೋಕ 244.)

"ಅಂದರೆ ಸೂರ್ಯನಿಗೂ ಮತ್ತು ಮಿಣಕು ಹುಳುವಿಗೂ, ರಾಜನಿಗೂ ಮತ್ತು ಸೇವಕನಿಗೂ, ಸಮುದ್ರಕ್ಕೂ ಮತ್ತು ಭಾವಿಗೂ, ಮೇರು ಪರ್ವತಕ್ಕೂ ಮತ್ತು ಪರಮಾಣುವಿಗೂ ಐಕ್ಯವು ಕೂಡದಿದ್ದರೂ, ಲಕ್ಷ್ಯಾರ್ಥದ ಮೂಲಕವಾಗಿ ಐಕ್ಯವನ್ನು ಶ್ರುತಿಯು ಸಾರಿಹೇಳುತ್ತದೆ. ಹೇಗೆಂದರೆ, ಮಾಯಾಪ್ರತಿಬಿಂಬಿತನಾದ ಈಶ್ವರ ಮತ್ತು ಆತನ ಸ್ಥೂಲಸೂಕ್ಷ್ಮ,ಕಾರಣ ದೇಹಗಳು, ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳು, ಮತ್ತು ಅನ್ನಮಯಾದಿ ಪಂಚಕೋಶಗಳು, ವಿರಾಟ್, ಹಿರಣ್ಯಗರ್ಭಾದಿ ನಾಮಭೇದಗಳು ಮತ್ತು ಸರ್ವಜ್ಞತ್ವಾದಿ ಗುಣಗಳೂ ಇವೆಲ್ಲವೂ 'ತತ್' ಎಂಬ ಪದದ ವಾಚ್ಯಾರ್ಥವು. ಮೇಲೆ ಹೇಳಿದವುಗಳೆಲ್ಲಕ್ಕೂ ವಿಲಕ್ಷಣವಾದ ಸತ್ಯ, ಜ್ಞಾನ, ಆನಂದ, ನಿತ್ಯ, ನಿರ್ಮಲತ್ವಗಳನ್ನು ಉಂಟಾದ ಪರಮಾತ್ಮನೇ 'ತತ್' ಎಂಬ ಪದದ ಲಕ್ಷ್ಯಾರ್ಥವು. ಹೀಗೆಯೇ 'ತ್ವಂ' ಎಂಬ ಪದಕ್ಕೂ ವಾಚ್ಯಾರ್ಥ ಲಕ್ಷ್ಯಾರ್ಥಗಳುಂಟು. ಇವೆರಡೂ ಸೇರಿ ಜೀವಾತ್ಮ ಪರಮಾತ್ಮರಿಗೆ ಐಕ್ಯವನ್ನು ಲಕ್ಷ್ಯಾರ್ಥದಲ್ಲಿ ವ್ಯಕ್ತಪಡಿಸುತ್ತದೆ. ಇದಕ್ಕೆ ಒಂದು ನಿದರ್ಶನವುಂಟು. ಹಸುಗಳು ಬೇರೆಬೇರೆ ಬಣ್ಣಗಳಿಂದ ಕೂಡಿದಾಗ ಬಾಹ್ಯದೃಷ್ಟಿಗೆ ಅವು ಬೇರೆಬೇರೆಗಳಾಗಿರುವುವು, ಮತ್ತು ಅವು ಎಂದಿಗೂ ಬೆರೆಯವು. ಆದರೆ ಅವುಗಳು ಕೊಡುವ ಹಾಲೆಲ್ಲವೂ ಬೆಳ್ಳಗೆ ಇರುತ್ತದೆ ಮತ್ತು ಒಂದರಲ್ಲೊಂದು ಬೆರೆಯುತ್ತದೆ. ಹಾಗೆಯೇ ಜೀವಾತ್ಮ ಪರಮಾತ್ಮರು ಬೇರೆಬೇರೆಯಾಗಿ ಕಂಡುಬಂದರೂ, ತತ್ವವಿಚಾರ ಮಾಡಿದಲ್ಲಿ ಅವರಿಬ್ಬರಿಗೂ ಐಕ್ಯವುಂಟು; ಎಂಬುದೇ 'ತತ್ವಮಸಿ' ಎಂಬುದರ ಮುಖ್ಯಾರ್ಥ. ಗುರೂಪದೇಶದಿಂದ ಇವೆಲ್ಲವೂ ನನಗೆ ವ್ಯಕ್ತಪಟ್ಟಿತು.

'ತತ್ವಮಸಿ' ಮಹಾವಾಕ್ಯದ ಭಾವಾರ್ಥವು 'ತತ್ವಮಸಿ ಪಂಚಕ' ಮತ್ತು 'ಶಿವೋಽಹಂ' ಪಂಚಕ ಇವುಗಳಿಂದ ವ್ಯಕ್ತವಾಗುತ್ತದೆ.

## ತತ್ತ್ವಮಸಿ ಪಂಚಕವು.

ಶ್ಲೋ ॥ ಸರ್ವಾಕಾರಂ ಸರ್ವಮಸರ್ವಂ ♦ ಸರ್ವನಿಷೇಧಾ ವಧಿಭೂತಂ ।
ಯತ್ಸತ್ಯಂ ಶಾಶ್ವತ ಮೇಕ ಮನಂತಂ ♦ ಶುದ್ಧಂ ಬುದ್ಧಂ 'ತತ್ತ್ವಮಸಿ' ತ್ವಂ॥೧॥

ಶ್ಲೋ ॥ ನಿತ್ಯಾನಂದಾಽಖಂಡರಸೈಕಂ ♦ ನಿಷ್ಕಳ ಮಕ್ರಿಯಮಸ್ತವಿಕಾರಂ ।
ಪ್ರತ್ಯಗಭಿನ್ನಂ ಪರಮವ್ಯಕ್ತಂ ♦ ಶುದ್ಧಂ ಬುದ್ಧಂ 'ತತ್ತ್ವಮಸಿ' ತ್ವಂ ॥೨॥

ಶ್ಲೋ ॥ ಪ್ರತ್ಯಸ್ತಮಿತಾಽಶೇಷವಿಶೇಷಂ ♦ ವ್ಯೋಮೇವಾಂತರ್ಬಹಿರಪಿ ಪೂರ್ಣಂ ।
ಬ್ರಹ್ಮಾನಂದಂ ಪರಮಾದ್ವೈತಂ ♦ ಶುದ್ಧಂ ಬುದ್ಧಂ 'ತತ್ತ್ವಮಸಿ' ತ್ವಂ ॥೩॥

ಶ್ಲೋ ॥ ಜ್ಞಾತೃಜ್ಞಾನಜ್ಞೇಯವಿಹೀನಂ ♦ ಜ್ಞಾತು ರಭಿನ್ನಂ ಜ್ಞಾನ ಮಖಂಡಂ ।
ಜ್ಞೇಯಾಜ್ಞೇಯ ತ್ವಾದಿವಿಮುಕ್ತಂ ♦ ಶುದ್ಧಂ ಬುದ್ಧಂ 'ತತ್ತ್ವಮಸಿ' ತ್ವಂ ॥೪॥

ಶ್ಲೋ ॥ ಅಂತಃ ಪ್ರಾಜ್ಞತ್ವಾದಿ ವಿಕಲ್ಪೈ ರಸ್ಪೃಷ್ಟಂ ।
ಪ್ರತ್ಯಗ್ರೂಪಂ ಭಾದ್ಯಶಿಮಾತ್ರಂ ಗಗನಾಭಂ ॥
ಸತ್ತಾಮಾತ್ರಂ ಸಮರಸ ಮೇಕಂ ।
ಶುದ್ಧಂ ಬುದ್ಧಂ 'ತತ್ತ್ವಮಸಿ' ತ್ವಂ ॥೫॥ (ಶಂಕರಾಚಾರ್ಯ.)

ಸರ್ವಾಕಾರವುಳ್ಳದ್ದಾಗಿಯೂ, ಸರ್ವವೂ ತಾನೊಂದೇ ಆಗಿಯೂ, ಸರ್ವಸಾಕ್ಷಿಯಾಗಿಯೂ, ಸಜಾತೀಯ ವಿಜಾತೀಯ ಸ್ವಗತ ಭೇದವಿಲ್ಲದುದಾಗಿಯೂ, ಸತ್ಯಸ್ವರೂಪವಾಗಿಯೂ, ಶಾಶ್ವತವಾದುದಾಗಿಯೂ, ಪರಿಶುದ್ಧವುಳ್ಳದ್ದಾಗಿಯೂ, ವೇದವೇದ್ಯವಾಗಿಯೂ, ಯಾವ ಪರಬ್ರಹ್ಮವಸ್ತುವು ಪ್ರಕಾಶಿಸುತ್ತದೆಯೋ ಆ ಪರಬ್ರಹ್ಮ ವಸ್ತುವೇ ನೀನಾಗಿದ್ದಿ.

ಪ್ರತ್ಯಜ್ಞಾನಾನಂದಸ್ವರೂಪವುಳ್ಳದ್ದಾಗಿಯೂ, ಕಳಾತೀತವಾದದ್ದಾಗಿಯೂ, ನಾಮರೂಪಕ್ರಿಯೆಯಿಲ್ಲದಿರುವುದಾಗಿಯೂ, ವಿಕಾರರಹಿತವಾಗಿಯೂ, ಪ್ರತ್ಯಗಾತ್ಮಸ್ವರೂಪವಾಗಿಯೂ, ಸರ್ವೋತ್ಕೃಷ್ಟವಾದುದಾ

ಗಿಯೂ, ಅವಾಙ್ಮಾನಸ ಗೋಚರವಾದುದಾಗಿಯೂ, ಪರಿಶುದ್ಧವಾಗಿಯೂ, ವೇದವೇದ್ಯವಾಗಿಯೂ ಯಾವ ಪರಬ್ರಹ್ಮನೆಂಬ ವಸ್ತುವು ಪ್ರಕಾಶಿಸುತ್ತದೆಯೋ ಆ ಪರಬ್ರಹ್ಮನೇ ನೀನಾಗಿದ್ದಿ.

ಖಂಡಖಂಡಗಳಾಗದೆಯೂ ಅಂದರೆ ಅಖಂಡಸ್ವರೂಪವಾಗಿಯೂ, ಹೆಚ್ಚು ಕಡಮೆಗಳಿಲ್ಲದೆ ಒಂದೇ ಸಮನಾಗಿರುವುದಾಗಿಯೂ, ಬಟ್ಟಬಯಲು ಸ್ವರೂಪವುಳ್ಳದ್ದಾಗಿಯೂ, ಬ್ರಹ್ಮಾನಂದದಿಂದ ತುಂಬಿ ತುಳುಕಾಡುತ್ತಿರುವುದಾಗಿಯೂ, ತನ್ನ ವಿನಹ ಬೇರೊಂದು ವಸ್ತುವೇ ಇಲ್ಲದುದಾಗಿಯೂ ಪರಿಶುದ್ಧವಾಗಿಯೂ, ಶ್ರುತಿಮೃಗ್ಯವಾಗಿಯೂ, ಯಾವ ಪರಬ್ರಹ್ಮವಸ್ತುವು ಹೊಳೆಯುತ್ತದೆಯೋ ಆ ಪರಬ್ರಹ್ಮವೇ ನೀನಾಗಿದ್ದಿ.

ದ್ರಷ್ಟಾ, ದೃಕ್, ದೃಶ್ಯಗಳು ಎಂದರೆ ನೋಡುವುದು, ನೋಟ, ಮತ್ತು ನೋಡಲ್ಪಡತಕ್ಕದ್ದೆಂಬ ತ್ರಿಪುಟವನ್ನು ಮೀರಿದುದಾಗಿಯೂ, ಇಂಥದಂಥದೆಂದು ವರ್ಣಿಸಲಸದಳವಾದುದಾಗಿಯೂ, ಅಖಂಡ ಸಚ್ಚಿದಾನಂದ ಸ್ವರೂಪವುಳ್ಳದ್ದಾಗಿಯೂ, ಕೆಂಪುಕಪ್ಪೆಂಬ ವರ್ಣಭೇದಗಳೇ ಇಲ್ಲದುದಾಗಿಯೂ, ನಿರ್ಮಲವಾಗಿಯೂ, ವೇದಾಂತ ವೇದ್ಯವಾದುದಾಗಿಯೂ, ಯಾವ ಪರಬ್ರಹ್ಮವೆಂಬ ವಸ್ತುವು ಮೆರೆಯುತ್ತದೆಯೋ ಆ ಪರಬ್ರಹ್ಮವೇ ನೀನಾಗಿದ್ದಿ.

ಜೀವವಿಕಾರಗಳೆಂಬುದೇ ಇಲ್ಲದುದಾಗಿಯೂ, ಸ್ವಯಂಪ್ರಕಾಶವುಳ್ಳದ್ದಾಗಿಯೂ, ಆಕಾಶದಂತೆ ನಿರ್ವಿಕಾರವಾಗಿಯೂ, ಸಮರಸವಾಗಿಯೂ, ಏಕವಾಗಿಯೂ, ನಿತ್ಯಶುದ್ಧವಾಗಿಯೂ, ನಿಗಮವೇದ್ಯವಾಗಿಯೂ ಯಾವ ಪರಬ್ರಹ್ಮವೆಂಬ ವಸ್ತುವು ಸದಾ ಬೆಳಗುತ್ತಿರುತ್ತದೆಯೋ ಆ ಪರಬ್ರಹ್ಮವೇ ನೀನಾಗಿದ್ದಿ ಎಂಬ 'ತತ್ತ್ವಮಸಿ' ಎಂಬ ಮಹಾವಾಕ್ಯದ ವಿವರಣೆಯನ್ನು ನನ್ನ ಗುರುಮುಖದಿಂದ ಕೇಳಿರುತ್ತೇನೆ. ಇದೂ ಅಲ್ಲದೆ 'ಶಿವೋऽಹಂ' ಎಂಬ ವಾಕ್ಯಾರ್ಥವನ್ನೂ ಆ ಗುರುಗಳು ನನಗೆ ವಿಶದಪಡಿಸಿರುತ್ತಾರೆ. 'ಶಿವೋऽಹಂ' ಪಂಚಕದಿಂದ ಅದರ ಅಂತರಾರ್ಥವೆಲ್ಲವೂ ಸ್ಪಷ್ಟಪಡುತ್ತದೆ.

## "ಶಿವೋಽಹಂ" ಪಂಚಕವು.

ಶ್ಲೋ ॥ " ನಾಹಂ ದೇಹೋನೇಂದ್ರಿಯಾ ಣ್ಯಂತರಂಗೋ ।
ನಾಹಂಕಾರಃ ಪ್ರಾಣವರ್ಗೋ ನ ಬುದ್ಧಿಃ ॥
ದಾರಾಪತ್ಯಕ್ಷೇತ್ರವಿತ್ತಾದಿದೂರಃ ।
ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ 'ಶಿವೋಽಹಂ' ॥೧॥

ದೇಹವೂ ನಾನಲ್ಲ; ಇಂದ್ರಿಯಗಳೂ ನಾನಲ್ಲ; ಅಂತಃಕರಣಗಳೂ ನಾನಲ್ಲ; ಮನಸ್ಸೂ ನಾನಲ್ಲ; ಅಹಂಕಾರವೂ ನಾನಲ್ಲ; ಪ್ರಾಣವರ್ಗಗಳೂ ನಾನಲ್ಲ; ಹೆಂಡತಿಮಕ್ಕಳೂ ನಾನಲ್ಲ; ಕ್ಷೇತ್ರವಿತ್ತಾದಿಗಳೂ ನಾನಲ್ಲ. ಮೇಲೆ ಹೇಳಿದ ಎಲ್ಲವುಗಳಿಗೂ ಸಾಕ್ಷಿಯಾದ ಮತ್ತು ಪ್ರತ್ಯಗಾತ್ಮನಾದ ಪರಬ್ರಹ್ಮನೇ ನಾನಾಗಿದ್ದೇನೆ.

ಶ್ಲೋ ॥ ರಜ್ಜ್ವಜ್ಞಾನಾ ದ್ಭಾತಿ ರಜ್ಜೌ ಯಥಾಹಿಃ ।
ಸ್ವಾತ್ಮಾಜ್ಞಾನಾ ದಾತ್ಮನೋ ಜೀವಭಾವಃ ॥
ಆಪ್ತೋಕ್ತ್ಯಾ ಹಿ ಭ್ರಾಂತಿನಾಶೇ ಸ ರಜ್ಜುಃ ।
ಜೀವೋ ನಾಽಹಂ ದೇಶಿಕೋಕ್ತ್ಯಾ 'ಶಿವೋಽಹಂ' ॥ ೨ ॥

ದೂರದಿಂದಲೋ ಅಥವ ಕತ್ತಲೆಯು ಕವಿದಿರುವುದರಿಂದಲೋ ಒಂದು ಹಗ್ಗವನ್ನು ನೋಡಿ ಸರ್ಪವೆಂದು ನಾನು ಭಯಭ್ರಾಂತಿಪಡುತ್ತಿರಲು ಒಬ್ಬಾನೊಬ್ಬ ಆಪ್ತನು ಬಂದು ನನ್ನನ್ನು ನೋಡಿ, " ಅದು ಸರ್ಪವಲ್ಲ, ಹಗ್ಗವು" ಎಂದು ಹೇಳಿ ನನ್ನ ಭಯಭ್ರಾಂತಿಯನ್ನು ಹೋಗಲಾಡಿಸುವಂತೆ, ಅಜ್ಞಾನದ ವಶದಿಂದ ಪರಬ್ರಹ್ಮಸ್ವರೂಪಿಯಾದ ನಾನು, 'ಜೀವನೇ ನಾನೆಂದು' ಭ್ರಮೆಪಟ್ಟು ಭಯಬೀಳುತ್ತಿರುವಾಗ ಸದ್ಗುರುವಿನ ಉಪದೇಶವಾಕ್ಯಗಳ ದೆಸೆಯಿಂದ ಜೀವನು ನಾನಲ್ಲವೆಂದು ತಿಳಿದುಕೊಂಡು ನಾನೇ ಪರಬ್ರಹ್ಮನಾದೆನು.

ಶ್ಲೋ ॥ ಜಾತೋ ನಾಽಹಂ ನ ಪ್ರವೃದ್ಧೋ ನ ನಷ್ಟೋ ।
ದೇಹಸ್ಯೋಕ್ತಾಃ ಪ್ರಾಕೃತಾ ಸ್ಸರ್ವಧರ್ಮಾಃ ॥
ಕರ್ತೃತ್ವಾದಿ ಶ್ಚಿನ್ಮಯಸ್ಯಾಸ್ತಿ ನಾಽಹಂ-।
ಕಾರಸ್ಯೈವ ಹ್ಯಾತ್ಮನೋ ಮೇ 'ಶಿವೋಽಹಂ' ॥ ೩ ॥

ಹುಟ್ಟುವುದು, ಬೆಳೆಯುವುದು, ಸಾಯುವುದು ಮೊದಲಾದ ವಿಕಾರಗಳು ನನಗಿಲ್ಲವು. ದೇಹಗಳಿಗೆ ಈ ವಿಕಾರಗಳುಂಟಾಗುತ್ತವೆ. 'ನಾನು ನನ್ನದು' ಎಂಬ ಅಹಂಕಾರ ಮಮಕಾರಗಳು ಜೀವಿಯ ಗುಣಗಳೇ ಹೊರತು ನನಗೆ ಸೇರಿದವುಗಳಲ್ಲ. 'ನಾನು' ನಿರಹಂಕಾರ ನಿರ್ಗುಣ ಪರಬ್ರಹ್ಮನಾಗಿರುತ್ತೇನೆ.

ಶ್ಲೋ ॥ ಆಭಾತೀದಂ ವಿಶ್ವ ಮಾತ್ಮ ನ್ಯಸತ್ಯಂ ।
ಸತ್ಯಜ್ಞಾನಾನಂದರೂಪೇ ವಿಮೋಹಾತ್ ॥
ನಿದ್ರಾಮೋಹಾ ತ್ಸ್ವಪ್ನವತ್ತಂ ನ ಸತ್ಯಂ ।
ಶುದ್ಧಃಪೂರ್ಣೋ ನಿತ್ಯ ಏಕ 'ಶ್ಶಿವೋಽಹಂ' ॥ ೪ ॥

ನಿದ್ರಿಸುತ್ತಿರುವಾಗ ಕನಸ್ಸಿನಲ್ಲಿ ತೋರಿಬರುವ ಪದಾರ್ಥಗಳು ಹೇಗೆ ಅಸತ್ಯವಾಗಿ ಪರಿಣಮಿಸುತ್ತವೋ, ಹಾಗೆಯೇ ಸತ್ಯಜ್ಞಾನಾನಂದಸ್ವರೂಪನಾದ ಪರಬ್ರಹ್ಮನೆನಿಸುವ ನನ್ನಲ್ಲಿ ಭ್ರಾಂತಿಯಿಂದ, ಈ ಪ್ರಪಂಚವು ಕಾಣಬರುತ್ತಿದೆಯೇ ಹೊರತು, ಅದು ಎಂದಿಗೂ ಸತ್ಯವಾದುದಲ್ಲ. ನನಗಿಂತ ಬೇರೆಯಾದುದಾವುದೂ ಇಲ್ಲ. ನಿತ್ಯನಾದ ನಾನೇ ಸರ್ವಪರಿಪೂರ್ಣ ಪರಬ್ರಹ್ಮನು.

ಶ್ಲೋ ॥ 'ಮತ್ತೋ ನಾನ್ಯ ತ್ಕಿಂಚಿ ದತ್ರಾಽಸ್ತಿ ವಿಶ್ವಂ ।
ಸತ್ಯಂ ಬಾಹ್ಯಂ ವಸ್ತು ಮಾಯೋಪಕ್ಲೃಪ್ತಂ ॥
ಆದರ್ಶಾಂತ ರ್ಭಾಸಮಾನಸ್ಯ ತುಲ್ಯಂ ।
ಮಯ್ಯದ್ವೈತೇ ಭಾವಿ ತಸ್ಮಾತ್ 'ಶಿವೋಽಹಂ' ॥ ೫ ॥

"ನನಗಿಂತ ಬೇರೆ ಯಾವ ವಸ್ತುವೂ ಇಲ್ಲವು. ಕಣ್ಣಿಗೆ ಕಾಣ್ಬರುವುವುಗಳೆಲ್ಲವೂ ಮಾಯಾಮಯವಾದವುಗಳೇ, ಅಂದರೆ ಎಲ್ಲವೂ ಅಸತ್ಯವಾದವುಗಳೆಂದೇ ಭಾವವು. ಕನ್ನಡಿಯಲ್ಲಿರುವ ಪ್ರತಿಬಿಂಬದೋಪಾದಿಯಲ್ಲಿ ಜ್ಞಾನಾನಂದ ಪರಬ್ರಹ್ಮನಾದ ನನ್ನ ಪ್ರತಿಬಿಂಬಗಳೇ ಈ ಚರಾಚರ ಜಗತ್ತಾಗಿದೆಯಾದುದರಿಂದ ನಾನೇ ಪರಬ್ರಹ್ಮನು."

ಇದೂ ಅಲ್ಲದೆ, ಈ 'ಶಿವೋಽಹಂ' ಎಂಬುದನ್ನು ಕುರಿತು ಹೀಗೆಂದು ಹೇಳಿದೆ.

ಸ್ರಗ್ಧರಾ ವೃತ್ತ ||

ಜಾಗ್ರತ್ಯುದ್ಭೂತಬಾಹ್ಯೇಂ ♦ ದ್ರಿಯ ವಿಷಯಸಮು ♦ ಲ್ಲಾಸಸಾಕ್ಷೀ 'ಶಿವೋಽಹಂ' |
ಸ್ವಪ್ನೇ ದೃಷ್ಟಪ್ರಪಂಚ ♦ ಪ್ರತಿಫಲನ ಮನೋ ♦ ವೃತ್ತಿಸಾಕ್ಷೀ 'ಶಿವೋಽಹಂ' ||
ಸುಪ್ತೌ ಚಿತ್ತೇ ಪ್ರಲೀನೇ ♦ ಪ್ರಬಲತಮ ಮಹಾ ♦ ಮೋಹಸಾಕ್ಷೀ 'ಶಿವೋಽಹಂ' |
ನಿತ್ಯಾನಂದೇ ತುರೀಯೇ ♦ ವಿಗತಕಲಿ ಮಲ ♦ ಸ್ಸರ್ವಸಾಕ್ಷೀ 'ಶಿವೋಽಹಂ' || ೬ ||

(ಶಂಕರಾಚಾರ್ಯ.)

"ಜಾಗ್ರದವಸ್ಥೆಯಲ್ಲಿ ದೇಹೇಂದ್ರಿಯ ವಿಷಯಗಳಿಗೆ ಸಾಕ್ಷಿಯಾದ ಪರಬ್ರಹ್ಮನೂ ನಾನೇ. ಸ್ವಪ್ನದಲ್ಲಿ ಮನೋಕಲ್ಪಿತವಾದ ಪ್ರಪಂಚಕ್ಕೆ ಸಾಕ್ಷಿಯಾದ ಪರಬ್ರಹ್ಮನೂ ನಾನೇ. ಸುಷುಪ್ತಿಯಲ್ಲಿ ಚಿತ್ತವು ಲಯಿಸಿರುವ ಕಾಲದಲ್ಲಿ ಕೇವಲ ಅಂಧಕಾರಸಾಕ್ಷಿಯಾದ ಪರಬ್ರಹ್ಮನೂ ನಾನೇ. ತುರೀಯದಲ್ಲಿ ಉಪಾಧಿರಹಿತನಾದ ಸರ್ವಸಾಕ್ಷಿಯಾದ ಪರಬ್ರಹ್ಮನೂ ನಾನೇ."

ಹೀಗೆಂಬುದೆಲ್ಲವೂ ನನಗೆ ಗುರುವಾಕ್ಯದಿಂದ ಗೋಚರವಾಗಿದೆ. ಈ ಮೇಲೆ ಹೇಳಿದ ರೀತಿಯಾಗಿ ನಾನು ತರ್ಕಿಸಿ ನೋಡಿದ್ದೇ ಆದರೆ ನಾನು ಜ್ಞಾನಸ್ವರೂಪನಾಗಿಯೂ, ಇತರರಿಗೆ ಗೋಚರಿಸದವನಾಗಿಯೂ ಇದ್ದೇನೆ. ಮತ್ತು ಬುದ್ಧಿಗೆ ನಿಲುಕದವನು, ಆಯುಧಗಳ ಏಟಿಗೆ ಸಿಕ್ಕದವನು, ಅಗ್ನಿಯಿಂದ ದಹಿಸಲ್ಪಡದವನೂ ನೀರಿನಿಂದ ನೆನೆಸಲ್ಪಡದವನೂ ಆಗಿರುತ್ತೇನೆ. ರಾಗದ್ವೇಷಾದಿಗಳೂ, ಕಾಮಕ್ರೋಧಾದಿಗಳೂ ನನ್ನನ್ನಂಟವು. ಪಂಚಭೂತಗಳ ಸೋಂಕೇ ನನಗಿಲ್ಲ. ಹಸಿವು ಬಾಯಾರಿಕೆಗಳು ನನಗಿಲ್ಲ. ಇವೆಲ್ಲವೂ ಶರೀರಕ್ಕೆ ಸಂಬಂಧಿಸಿದವುಗಳು. ನನಗೆ ಯಾವವಸ್ತುಗಳಿಂದಲೂ ಪ್ರಯೋಜನವಿಲ್ಲ. ಶರೀರಾತೀತನಾಗಿರುವುದರಿಂದಲೇ ಈ ಮೇಲೆ ಹೇಳಿದ ವಿಷಯಗಳು ನನ್ನ ಸಮೀಪಕ್ಕೆ ಬಾರವು. 'ನನ್ನದು' ಎಂಬ ವಸ್ತುವಾವುದೂ ನನಗಿಲ್ಲವು. ಹೀಗೆ ತತ್ವವಿಚಾರವನ್ನು ಮಾಡಿದಮೇಲಲ್ಲವೇ ಎಲ್ಲವೂ ನನ್ನನ್ನು ಬಿಟ್ಟು ತೊಲಗುವುದು. ಈ ತತ್ವ ವಿಚಾರಕ್ಕೆ ಮನಗೊಡದಿದ್ದಲ್ಲಿ ಇವೆಲ್ಲವೂ ನನ್ನನ್ನಂಟಿ ಸಂಸಾರ ಸಮುದ್ರವನ್ನು ದಾಟುವುದಕ್ಕೆ ಅವಕಾಶವನ್ನು ಕೊಡವು.

ಹಿಂದಿನ ಜನ್ಮದಲ್ಲಿ ಯಾವುದೋ ಕುಲದಲ್ಲಿ ಹುಟ್ಟಿದ ಯಾವುದೋ ಜೀವಿಯಾಗಿದ್ದು, ಈ ಜನ್ಮದಲ್ಲಿ ಈಕೆಯು ಹೆಂಡತಿಯಾಗುತ್ತಾಳೆ. ಹೀಗೆ

ಯೇ ಮಕ್ಕಳು ಮೊದಲಾದವೂ ನನಗೆ ಒದಗುವುವು. ಇವರೆಲ್ಲರೂ, ಕಳೆದ ಜನ್ಮದಲ್ಲಿ ಯಾರುಯಾರಿಗೆ ಯಾವಯಾವ ಸಂಬಂಧಿಗಳಾಗಿದ್ದರೋ ತಿಳಿಯದು. ಈಗ ಈ ಜನ್ಮದಲ್ಲಿ ನನಗೆ ಸಂಬಂಧಿಗಳಾಗಿ ದೊರಕುವವರಾಗಿದ್ದಾರೆ. ಇವರೇ ನನಗೆ ಮುಂದೆ ಲಭಿಸುವ ಜನ್ಮದಲ್ಲಿ ಯಾವ ತೆರನಾದ ಸಂಬಂಧಿಗಳಾಗುವರೋ ತಿಳಿಯಲು ಸಾಧ್ಯವಿಲ್ಲ. ಈ ಜನ್ಮದಲ್ಲಿ ಯಾದರೋ, ಈ ದೇಶದೊಳಗಣ ಈ ಗ್ರಾಮದಲ್ಲಿ ಈ ಮನೆಯನ್ನು ಕಟ್ಟಿ ವಾಸವಾಗಿರುತ್ತೇನೆ. ಮುಂದೆ ಬರುವ ಜನ್ಮದಲ್ಲಿ ಎಲ್ಲಿ ಯಾವ ಮನೆಯಲ್ಲಿ ವಾಸಿಸುತ್ತೇನೆಯೋ, ಇಲ್ಲವೇ ಇರುವುದಕ್ಕೇ ಮನೆಯಿಲ್ಲದೆ ನನ್ನ ಪಾಪ ಕರ್ಮಗಳಿಗೆ ತಕ್ಕಂತೆ, 'ಕರತಲಭಿಕ್ಷ ♦ ಸ್ತರುತಲವಾಸಃ' ಎಂಬಂತೆ ಬಿಕ್ಷ ಬೇಡುತ್ತ ಯಾವ ಗಿಡದ ಕೆಳಗೆ ವಾಸಮಾಡಬೇಕಾಗುವುದೋ ನಾನು ತಿಳಿಯಲಾರೆನು. ಆದುದರಿಂದಲೇ ನಶ್ವರವಾದ ಈ ಹೆಂಡತಿಮಕ್ಕಳು ಮನೆಮಠಾದಿಗಳಲ್ಲಿ ಪ್ರೇಮವನ್ನಿಡದೆ ಇರಬೇಕಾದುದೇ ನನ್ನ ಕರ್ತವ್ಯ. ಹಾಗಿಲ್ಲದೆ ಇವುಗಳಲ್ಲಿನ ಮೋಹವೆಂಬ ಪಾಶಕ್ಕೆ ಕಟ್ಟುಬಿದ್ದದ್ದೇ ಆದರೆ, ನನಗಿಂತ ಅಜ್ಞಾನಿಯು ಬೇರೊಬ್ಬನುಂಟೇ ?

ಇದುವರಿವಿಗೂ ನಾನು ತರ್ಕಿಸಿದುದರಲ್ಲಿ ಆತ್ಮವಿಚಾರಕ್ಕೆ ಸಂಬಂಧಿಸಿದ ವಿಷಯಗಳೆಲ್ಲವನ್ನೂ ತಿಳಿದುಕೊಂಡೆನೋ? ಇಲ್ಲವೇ ತಿಳಿಯಬೇಕಾದುದೇನಾದರೂ ಉಂಟೋ? ಎಂಬುದು ನನಗೆ ಗೊತ್ತಿಲ್ಲ. ಆದರೆ ಇನ್ನೊಂದು ವಿಷಯವು ಈಗ ನನ್ನ ನೆನಪಿಗೆ ಬಂದಿತು. 'ನ ಹಿ ಜ್ಞಾನೇನ ಸದೃಶಂ' ಮತ್ತು, 'ಜ್ಞಾನಮೇವ ಮೋಕ್ಷಃ' ಅಂದರೆ ಜ್ಞಾನಕ್ಕೆ ಸಮನಾದುದಾವುದೂ ಇಲ್ಲವು, ಜ್ಞಾನವೇ ಮೋಕ್ಷವು ಎಂಬ ವಿಷಯವನ್ನು ಹಿರಿಯರು ಹೇಳಿರುತ್ತಾರೆ. ಜ್ಞಾನವು ಲಭಿಸಿದರೆ ಮೋಕ್ಷವನ್ನು ಪಡೆದಂತೆಯೇ. ಆದರೆ, ಜ್ಞಾನಸಂಪಾದನೆಯಾದಮೇಲೆ ಯಾವ ಜಪತಪೋನಿಷ್ಠೆಗಳೂ ನನಗೆ ಅಗತ್ಯವಿಲ್ಲವೆಂದೂ, ನಾನು ತಿಳಿದುಕೊಳ್ಳಬೇಕಾದುದೊಂದೂ ಇಲ್ಲವೆಂಬುದೂ ಸ್ಪಷ್ಟವಾಯಿತು. ಆದರೆ ಜ್ಞಾನವನ್ನು ಸಂಪಾದಿಸಬೇಕಾದುದೇ ಮುಖ್ಯ. ಅದು ಹೇಗೆಂಬುದೇ ಪ್ರಶ್ನೆ. ಸತ್ಸಹವಾಸ, ಭಗವತ್ಕಥಾಕಾಲಕ್ಷೇಪ, ದಾರಾಪುತ್ರಾದಿಗಳಲ್ಲಿ ಮೋಹವನ್ನು ಬಿಡುವಿಕೆ, ಪರಮಾತ್ಮನಲ್ಲಿ ಮನಸ್ಸನ್ನು ಲೀನಮಾಡುವುದು ಇವೇ ಜ್ಞಾನಕ್ಕೆ ಸೋಪಾನ

ಗಳು. ಇವುಗಳನ್ನು ಹತ್ತಿದರೆ ಮುಕ್ತಿಯೆಂಬ ಫಲವು ಕೈಗೆ ಸುಲಭವಾಗಿ ಎಟುಕುತ್ತದೆ. ಶಂಕರಾಚಾರ್ಯರು 'ಭಜಗೋವಿಂದ' ಸ್ತೋತ್ರದಲ್ಲಿ ಹೇಳಿರುವಂತೆ, ಸತ್ಸಂಗದಿಂದ ದಾರಾಪುತ್ರಾದಿಗಳ ಮೇಲೆ ಆಸೆಯು ನಾಶವಾಗಿ ಮೋಹವೆಂಬ ಅಜ್ಞಾನವು ಬಿಟ್ಟು ತೊಲಗುತ್ತದೆ. ಮೋಹಪಾಶದಿಂದ ನಿಶ್ಚಲತತ್ವವೂ ಆ ನಿಶ್ಚಲತತ್ವದಿಂದ ಜೀವನ್ಮುಕ್ತಿಯೂ ದೊರಕುತ್ತದೆ. ಇದೇ ವಿಷಯವನ್ನು ಹಿಂದೆ ಹೇಳಿದ್ದಂತೆ 'ರಂಭಾ ಶುಕಸಂವಾದ'ದಲ್ಲಿ ಶುಕರು ರಂಭೆಯನ್ನು ಕುರಿತು "ಸತ್ಪುರುಷರ ಅಂದರೆ ಜ್ಞಾನಿಗಳ ಸಂಗವು ತತ್ವಚಿಂತಾನುವಾದಕ್ಕೆ ಎಡೆಗೊಟ್ಟುದರಿಂದ ಪರಮಾತ್ಮನ ಜ್ಞಾನವೂ, ಆದರಿಂದ ಪರಮಾತ್ಮನಲ್ಲಿ ಸಾಯುಜ್ಯ ಸೌಖ್ಯವೂ ದೊರಕುವುದೆಂದು ಮನದಟ್ಟುವಂತೆ ತಿಳಿಯಪಡಿಸಿರುತ್ತಾರೆ. ಸಾಧುಸಾಂಗತ್ಯದಿಂದುಂಟಾಗುವ ಫಲವನ್ನು ಕುರಿತು ಭರ್ತೃಹರಿಯು ನೀತಿಶತಕದಲ್ಲಿ ಹೀಗೆಂದು ವರ್ಣಿಸಿರುತ್ತಾನೆ.

ಶ್ಲೋ ॥ ಜಾಡ್ಯಂ ಧಿಯೋ ಹರತಿ ♦ ಸಿಂಚತಿ ವಾಚಿ ಸತ್ಯಂ ।
ಮಾನೋನ್ನತಿಂ ದಿಶತಿ ♦ ಪಾಪ ಮಪಾಕರೋತಿ ॥
ಚೇತಃ ಪ್ರಸಾದಯತಿ ♦ ದಿಕ್ಷು ತನೋತಿ ಕೀರ್ತಿಂ ।
ಸತ್ಸಂಗತಿಃ ಕಥಯ ♦ ಕಿಂ ನ ಕರೋತಿ ಪುಂಸಾಂ ॥

(ನೀತಿಶತಕ, 23ನೇ ಶ್ಲೋಕ.)

ಭಾಮಿನೀಷಟ್ಪದಿ ॥

ಮತಿಯ ಜಾಡ್ಯವ ತೊಲಗಿಪುದು ; ಸೂ-।
ನೃತವ ಮಾತೊಳು ಸುರಿಸುವುದು ; ದು-।
ಷ್ಕೃತವ ನಪಹರಿಸುವುದು ; ಮಾನೋನ್ನತಿಯ ತೋರುವುದು. ॥
ಹಿತದಿ ಚಿತ್ತದ ಮಲವ ಕಳೆಯುವು ; ।
ದತಿಯಶವ ದೆಸೆಗಳಲಿ ಬೀರ್ಪುದು ; ।
ಸುತನೆ! ನುಡಿ ಸತ್ಸಂಗ ವಾವುದ ನೆಸಗದೈ ಜನಕೆ ॥

'ಸಾಧುಸಾಂಗತ್ಯವು ಬುದ್ಧಿಯ ಜಡತ್ವವನ್ನು ಹೋಗಲಾಡಿಸುವುದು. ಯಾವಾಗಲೂ ಸತ್ಯವನ್ನೇ ನುಡಿಯುವಂತೆ ಮಾಡುವುದು, ಪಾಪವನ್ನು

ನಿರ್ಮೂಲಮಾಡುವುದು, ಹೆಚ್ಚಾದ ಗೌರವವನ್ನು ತರುವುದು, ಮನಸ್ಸಿನ ಕೊಳೆಯನ್ನು ತೆಗೆದು ನಿರ್ಮಲ ಮಾಡುವುದು, ಕೀರ್ತಿಯನ್ನು ದಿಕ್ಕು ದಿಕ್ಕುಗಳಲ್ಲಿಯೂ ಹಬ್ಬಿಸುವುದು. ಹೀಗಿರಲು ಸಾಧುಗಳ ಸಹವಾಸವು ಮನುಷ್ಯರಿಗಾಗಿ ಯಾವ ಒಳ್ಳೆಯ ಕೆಲಸವನ್ನು ತಾನೇ ಮಾಡುವುದಿಲ್ಲ? ಎಂಬುದೇ ಮೇಲಿನ ಪದ್ಯದ ತಾತ್ಪರ್ಯ. ಆದುದರಿಂದ ಸತ್ಸಂಗವು ಪ್ರತಿ ಮನುಷ್ಯನಿಗೂ ಅತ್ಯವಶ್ಯಕವೆಂದು ಭಾವವು.

ಶ್ಲೋ ॥ ಯಸ್ತು ಪರ್ಯಟತೇ ದೇಶಾ೯ ♦ ಯಸ್ತು ಸೇವೇತ ಸಜ್ಜನಾ೯ ।
ಯಸ್ಯ ವಿಸ್ತಾರಿತಾ ಬುದ್ಧಿಃ ♦ ತೈಲಬಿಂದು ರಿವಾಂಭಸಿ ॥

(ಬ್ರಹ್ಮ ಜ್ಞಾನ ಚಿಂತಾಮಣಿ.)

ಎಂಬಂತೆ ಯಾವನು ಭೂಸಂಚಾರವನ್ನು ಮಾಡಿ, ಅಲ್ಲಲ್ಲಿರುವ ಸತ್ಪುರುಷರನ್ನು ದರ್ಶನಮಾಡುತ್ತಾನೆಯೋ ಅವನಿಗೆ ಬುದ್ಧಿಯೆಂಬುದು ನೀರಿನಮೇಲೆ ಹಾಕಿದ ಎಣ್ಣೆಯ ಹನಿಯಂತೆ ವಿಸ್ತರಿಸಿ ಮೆರೆಯುತ್ತದೆ ಯಾದುದರಿಂದ ಸತ್ಪುರುಷರು ಇರುವ ಸ್ಥಳವನ್ನು ಹುಡುಕಿಕೊಂಡು ಹೋಗಿ ಅವರ ಸಹವಾಸವನ್ನು ಮಾಡಬೇಕಾದುದು ಅತ್ಯವಶ್ಯಕವೆಂದು ಅಭಿಪ್ರಾಯವು. ಇದೂ ಅಲ್ಲದೆ,

ಶ್ಲೋ ॥ ಯಥಾ ಚಿತ್ತಂ ತಥಾ ವಾಕ್ಯ ♦ ಯಥಾ ವಾಕ್ಯ ತಥಾ ಕ್ರಿಯಾಃ ।
ಚಿತ್ತೇ ವಾಚಿ ಕ್ರಿಯಾಯಾಂ ಚ ♦ ಸಾಧೂನಾ ಮೇಕರೂಪತಾ ॥

(ಚಿಂತಾಮಣಿ.)

ಸಜ್ಜನರ ಮನಸ್ಸು ಎಷ್ಟು ನಿಷ್ಕಲ್ಮಷವಾಗಿರುತ್ತದೆಯೋ, ಆ ಪ್ರಕಾರವೇ ಅವರ ಮಾತೂ ಸತ್ಯವಾಗಿಯೇ ಇರುತ್ತದೆ. ಅವರ ಸತ್ಯವಾಕ್ಕಿಗೆ ಸರಿಯಾಗಿ ಅವರ ಕರ್ಮಗಳೂ ಪರಿಶುದ್ಧವಾಗಿಯೇ ಇರುವುವು. ಹೀಗೆ ಅವರ ಮನಸ್ಸು, ಮಾತುಗಳು ಮತ್ತು ವ್ಯಾಪಾರಗಳು ಒಂದೇ ಸಮನಾಗಿರುತ್ತವೆ. ಇದೇ ವಿಷಯವನ್ನು ಭರ್ತೃಹರಿಯೂ ಹೀಗೆಂದು ಹೇಳಿರುತ್ತಾನೆ.

ಶ್ಲೋ ॥ ಮನಸ್ಯೇಕಂ ವಚಸ್ಯೇಕಂ ♦ ಕರ್ಮಣ್ಯೇಕಂ ಮಹಾತ್ಮನಾಂ ।
ಮನಸ್ಯೇಕಂ ವಚಸ್ಯೇಕಂ ♦ ಕರ್ಮಣ್ಯೇಕಂ ದುರಾತ್ಮನಾಂ ॥

ಎಂಬಂತೆ ಮಹಾತ್ಮರು ಮನೋವಾಕ್ಕಾಯ ಕರ್ಮಗಳಲ್ಲಿ ಒಂದೇ ವಿಧವಾಗಿರುತ್ತಾರೆ. ಆದರೆ ದುರಾತ್ಮರಾದರೋ ಮನಸ್ಸಿನಲ್ಲಿ ಎಣಿಸಿರುವುದೇ ಒಂದು, ಬಾಯಲ್ಲಿ ಹೇಳುವುದೇ ಒಂದು, ಮತ್ತು ಕಾರ್ಯದಲ್ಲಿ ನಡೆಸುವುದೇ ಒಂದು. ಹೀಗಿರುತ್ತದೆಯಾದುದರಿಂದ ಮಹಾತ್ಮರ ಮಾರ್ಗವನ್ನು ಅನುಸರಿಸಿದರೆ ಮನುಷ್ಯನ ಜೀವಮಾನವು ಉತ್ತಮಗೊಳ್ಳುತ್ತದೆ. ಮತ್ತು,

ಶ್ಲೋ ॥ ಕಂದಳಯ ತ್ಯಾನಂಪಂ ♦ ನಿಂದ ತ್ಯನಿಲೇಂದುಚಂದನಾನಿ ಚ ಭೃಶಂ ।
ಮಂಡಯತಿ ಮಂದಹಾಸಂ ♦ ಸಂಘತ್ತೇ ಸಂಪದೋಽಪಿ ಸತ್ಸಂಗಃ ॥

(ಬ್ರಹ್ಮ ಜ್ಞಾನ ಚಿಂತಾಮಣಿ.)

ಸತ್ಪುರುಷರ ಸಹವಾಸವು ಮನಸ್ಸಿಗೆ ಎಡೆಬಿಡದೆ ಒಂದೇ ಸಮನಾಗಿ ಆನಂದವನ್ನುಂಟುಮಾಡುತ್ತಿರುತ್ತದೆ. ಅವರ ಮೃದುಮಧುರವಾದ ಮಾತುಗಳಾದರೋ ಮಲಯಮಾರುತಕ್ಕಿಂತಲೂ ಮತ್ತು ಪೂರ್ಣಚಂದ್ರನಿಗಿಂತಲೂ ಹೆಚ್ಚು ಹಿತವಾಗಿಯೂ, ತಂಪಾಗಿಯೂ ಇರುತ್ತವೆ. ಅನೇಕ ವೇಳೆ ಅವರೊಡನೆ ಸಂಭಾಷಣೆ ಮಾಡುತ್ತಿದ್ದರೆ ಮಂದಹಾಸಗಳೆಂಬುದು ತಾನಾಗಿಯೇ ಹುಟ್ಟುತ್ತವೆ. ಇದೂ ಅಲ್ಲದೆ ಅವರ ಸಹವಾಸವೆಂಬುದು ಸಕಲಸಂಪತ್ತುಗಳನ್ನೂ ಪಡೆಯುವುದಕ್ಕೆ ಮಾರ್ಗವನ್ನು ತೋರಿಸುತ್ತದೆ. ಇಷ್ಟೇ ಅಲ್ಲ.

ಶ್ಲೋ ॥ ಗಂಗಾ ಪಾಪಂ ಶಶೀ ತಾಪಂ ♦ ದೈನ್ಯಂ ಕಲ್ಪತರು ಸ್ತಥಾ ।
ಪಾಪಂ ತಾಪಂ ಚ ದೈನ್ಯಂ ಚ ♦ ಹಂತಿ ಸಂಗೋ ಮಹಾತ್ಮನಾಂ ॥

(ಸುಗುಣ ರತ್ನಾಕರ.)

ಅಂದರೆ, ಗಂಗಾನದಿಯು ತನ್ನಲ್ಲಿ ಸ್ನಾನಮಾಡಿದವರ ಪಾಪವನ್ನು ಹೋಗಲಾಡಿಸುತ್ತದೆ. ಶರಚ್ಚಂದ್ರನು ತಾಪವನ್ನು ಹೋಗಲಾಡಿಸಿ ತಂಪನ್ನುಂಟುಮಾಡುವನು. ಕಲ್ಪವೃಕ್ಷವಾದರೋ ತನ್ನನ್ನಾಶ್ರಯಿಸಿ ಸೇವಿಸಿದವರ ಬಡತನವನ್ನು ಹೋಗಲಾಡಿಸಿ ಸುಖವನ್ನುಂಟುಮಾಡುವುದು.

ಆದರೆ ಮಹಾತ್ಮರ ಸಹವಾಸವಾದರೋ ಪಾಪ ತಾಪ ದೈನ್ಯಗಳೆಲ್ಲವನ್ನೂ ಹೋಗಲಾಡಿಸುವುದು ನಿಶ್ಚಯ.

ಶ್ಲೋ॥ "ಸತಾಂ ಸಂಗಃ ದ್ವಾರ ಮಾಹು ರ್ವಿಮುಕ್ತೇಃ" ।

(ಮನುಸ್ಮೃತಿ.)

ಎಂಬಂತೆ ಸತ್ಸಂಗವು ಮುಕ್ತಿಭವನಕ್ಕೆ ಬಾಗಿಲು ಎಂದು ಪ್ರಾಜ್ಞರು ಹೇಳುತ್ತಾರೆ. ಸತ್ಪುರುಷರ ಲಕ್ಷಣವೆಂತಹುದೆಂದರೆ,

ಶ್ಲೋ॥ ಪಾಪಾ ನ್ನಿವಾರಯತಿ ಯೋಜಯತೇ ಹಿತಾಯ ।
ಗುಹ್ಯಂ ನಿಗೂಹತಿ ಗುಣಾ್ ಪ್ರಕಟೀಕರೋತಿ ॥
ಆಪದ್ಗತಂ ಚ ನ ಜಹಾತಿ ದದಾತಿ ಕಾಲೇ ।
ಸತ್ಪುರುಷ ಲಕ್ಷಣ ಮಿದಂ ಪ್ರವದಂತಿ ಸಂತಃ ॥

(ಭರ್ತೃಹರಿ–ನೀತಿಶತಕ, 65ನೇ ಶ್ಲೋಕ.)

ಸತ್ಪುರುಷನು ತನ್ನನ್ನು ಆಶ್ರಯಿಸಿದವನಿಗೆ ಸದ್ಬೋಧೆಗಳನ್ನು ಮಾಡಿ, ಅವನ ಪಾಪಗಳನ್ನು ಹೋಗಲಾಡಿಸಿ, ಪುಣ್ಯವನ್ನುಂಟುಮಾಡುತ್ತಾನೆ. ಅವನ ಹಿತವನ್ನು ಬಯಸುತ್ತಾನೆ. ಆವನ ಗುಟ್ಟನ್ನು ಮುಚ್ಚಿಟ್ಟು ಅವನಿಗೆ ಗೌರವವನ್ನು ತರುತ್ತಾನೆ. ಅಂದರೆ ಅವನ ದುರ್ಗುಣಗಳನ್ನು ಬಹಿರಂಗಪಡಿಸದೆ ಅವನ ಸದ್ಗುಣಗಳನ್ನೇ ಎತ್ತಿ ತೋರಿಸುತ್ತಾನೆ. ಅವನಿಗೆ ಬಂದ ಆಪತ್ತುವಿಪತ್ತುಗಳಲ್ಲಿ ತಾನೂ ಭಾಗಿಯಾಗುತ್ತಾನೆ. ಸಮಯವನ್ನರಿತು ಅವನ ತಾಪವನ್ನು ಹೋಗಲಾಡಿಸುವುದಕ್ಕಾಗಿ ಅವನಿಗೆ ಬೇಕಾದುದನ್ನು ಕೊಟ್ಟು ಕಾಪಾಡುತ್ತಾನೆ. ಆ ಸತ್ಪುರುಷರ ಸ್ವಭಾವ ಮತ್ತು ಅವರ ಧರ್ಮವೆಂತಹುದೆಂದರೆ:—

ಶ್ಲೋ॥ತೃಷ್ಣಾಂ ಛಿಂಧಿ, ಭಜ ಕ್ಷಮಾಂ, ಜಹಿ ಮದಂ, ♦ ಪಾಪೇ ರತಿಂ ಮಾ ಕೃಥಾಃ,।
ಸತ್ಯಂ ಬ್ರೂ, ಹ್ಯನುಯಾಹಿ ಸಾಧುಪದವೀಂ, ♦ ಸೇವಸ್ವ ವಿದ್ವಜ್ಜನಂ, ॥
ಮಾನ್ಯಾ್ ಮಾನಯ, ವಿದ್ವಿಷೋ ऽಪ್ಯನುನಯ, ♦ ಪ್ರಖ್ಯಾಪಯ ಪ್ರಶ್ರಯಂ,।
ಕೀರ್ತಿಂ ಪಾಲಯ ,ದುಃಖಿತೇ ಕುರು ದಯಾಂ, ♦ ಮೇತ ತ್ಸತಾಂ ಚೇಷ್ಟಿತಂ, ॥

ಶ್ಲೋ ॥ ಮನಸಿ ವಚಸಿ ಕಾಯೇ ♦ ಪುಣ್ಯಪೀಯೂಷಪೂರ್ಣಾಃ ।
ತ್ರಿಭುವನ ಮುಪಕಾರಃ ♦ ಶ್ರೇಣಿಭಿಃ ಪ್ರೀಣಯಂತಃ ॥
ಪರಗುಣಪರಮಾಣೂರ್ನ್ ♦ ಪರ್ವತೀಕೃತ್ಯ ನಿತ್ಯಂ ।
ನಿಜಹೃದಿ ವಿಕಸಂತಃ ♦ ಸಂತಿ ಸಂತಃ ಕಿಯಂತಃ ॥

(ನೀತಿಶತಕ, ಶ್ಲೋಕ 69-70.)

ಸತ್ಪುರುಷನು ತನ್ನ ಸಹವಾಸವನ್ನೆಳಸಿದವನಿಗೆ ಹೀಗೆಂದು ಹೇಳುತ್ತಾನೆ:—"ಎಲೈ ಮನುಷ್ಯನೇ! ಆಸೆಯು ನಾಶವನ್ನು ತರುತ್ತದೆಯಾಗಿ ಅದನ್ನು ಬಿಟ್ಟು ಬಿಡು. ಶಾಂತಿಯಿಂದ ಸುಖವುಂಟಾಗುವುದರಿಂದ ಅದನ್ನು ವಹಿಸು. ಕುಲ ಧನ ಯೌವನ ವಿದ್ಯಾದಿಗಳ ಮದವನ್ನು ಜಯಿಸು. ಪಾಪ ಕಾರ್ಯದಲ್ಲಿ ಬುದ್ಧಿಯನ್ನಿಡಬೇಡ. ಸತ್ಯವನ್ನೇ ನುಡಿ. ಸನ್ಮಾರ್ಗವನ್ನು ಹಿಡಿ. ವಿದ್ವಜ್ಜನರ ಸೇವೆಮಾಡು. ಪೂಜ್ಯರನ್ನು ಗೌರವಿಸು. ಶತ್ರುಗಳಲ್ಲಿ ಕೂಡ ಒಳ್ಳೆಯ ಮಾತುಗಳನ್ನಾಡು. ಸದಾ ನಮ್ರಭಾವವನ್ನು ವಹಿಸು. ನಿನ್ನ ಕೀರ್ತಿಗೆ ಕಳಂಕ ಬರದಂತೆ ಎಚ್ಚರಿಕೆಯಿಂದ ನೋಡಿಕೋ. ದುಃಖಿಸುವವನಲ್ಲಿ ಕರುಣವನ್ನು ತೋರಿಸು." ಇವೇ ಮೊದಲಾದ ಬುದ್ಧಿವಾದಗಳನ್ನು ಹೇಳುವುದಲ್ಲದೆ, ತಾನೂ ಅದರಂತೆ ನಡೆದು ತೋರಿಸುತ್ತಾನೆ.

ಸತ್ಪುರುಷರೇನೋ ಪ್ರಪಂಚದಲ್ಲಿ ಅತಿವಿರಳ. ಏತಕ್ಕೆಂದರೆ, ಅವರು ಶ್ಲಾಘ್ಯವಾದ ಮತ್ತು ಬಹಳ ಅಪರೂಪವಾದ ಈ ಕೆಳಗೆ ಹೇಳುವ ಗುಣಗಳಿಂದ ಕೂಡಿರುತ್ತಾರೆ. ಆ ಸತ್ಪುರುಷರು ತಾವು ಮನೋವಾಕ್ಕಾಯಗಳಿಂದ ಮಾಡಿದ ಪುಣ್ಯವೆಂಬ ಅಮೃತದಿಂದ ಪೂರ್ಣರಾದಂಥವರಾಗಿಯೂ, ಮತ್ತು ಮೂರು ಲೋಕದ ಜನಗಳಿಗೂ ತಮ್ಮ ಸಹವಾಸದಿಂದುಂಟಾಗುವ ಉಪಕಾರ ಪರಂಪರೆಗಳಿಂದ ಸಂತೋಷಪಡಿಸುತ್ತಲೂ, ಇತರರು ಮಾಡಿದ ಅಲ್ಪ ಉಪಕಾರವನ್ನು ಬೆಟ್ಟವಾಗೆಣಿಸುವವರಾಗಿಯೂ, ಯಾವಾಗ್ಲೂ ನಿಷ್ಕಳಂಕವಾದ ಮನಸ್ಸನ್ನುಳ್ಳವರಾಗಿಯೂ ಇರುತ್ತಾರೆ. ಇಂಥವರ ಸಹವಾಸವಿದ್ದದ್ದೇ ಆದರೆ, ಲೋಕವು ಉನ್ನತಸ್ಥಿತಿಗೆ ಬರುವುದಕ್ಕೆ ಸಂಶಯವೇ ಇಲ್ಲ.

ಸತ್ಸಂಗವೆಂಬುದು, ನಾನಾ ನಟವಿಟ ಜಾರಚೋರ ಚೇಟಕ ಜೀವ ಘಾತುಕಾದಿ ದುರ್ಜನರ ಸಹವಾಸವನ್ನು ತೊಲಗಿಸುತ್ತದೆ. ಅದರಿಂದ ಕಾಮಕ್ರೋಧಾದಿ ದುರ್ಗುಣಗಳು ತಾವಾಗಿಯೇ ಬಿಟ್ಟುಹೋಗುತ್ತವೆ. ಇಂಥಹ ದುರ್ಗುಣಗಳು ಹೋದ ತಕ್ಷಣವೇ ತತ್ವವಿಚಾರ ಮಾಡುವುದಕ್ಕೆ ಬುದ್ಧಿ ಹೋಗುತ್ತದೆ. "ಜ್ಞಾತೇ ತತ್ವೇ ಕ ಸ್ಸಂಸಾರಃ" ಎಂಬಂತೆ ತತ್ವಜ್ಞಾನವುಂಟಾದರೆ ಸಂಸಾರವೆಂಬುದೆಲ್ಲಿಯದು? ಅಂದರೆ ಸಂಸಾರ ಪಾಶಗಳು ತಾವಾಗಿಯೇ ಹರಿದುಹೋಗಿ ನಿತ್ಯವಾದ ಮೋಕ್ಷವು ಲಭಿಸುವುದು.

ಶ್ಲೋ ॥ ಸಂಸಾರವಿಷವೃಕ್ಷಸ್ಯ ♦ ದ್ವೇ ಫಲೇ ಽಮೃತೋಪಮೇ ।
ಕಾವ್ಯಾಮೃತರಸಾಸ್ವಾದಃ ♦ ಸಂಗಮುಸ್ಸಜ್ಜನೈ ಸ್ಸಹ ॥

ಸಂಸಾರವೆಂಬ ವಿಷವೃಕ್ಷದಲ್ಲಿ ಬಿಡುವ ಫಲಗಳು ಸಾಧಾರಣವಾಗಿ ದುಃಖ ಮತ್ತು ಪಾಪವೆಂಬುವುಗಳು. ಆದರೂ ಅದರಲ್ಲಿ ಎರಡು ಫಲಗಳು ಮಟ್ಟಿಗೆ ಅಮೃತಮಯವಾದವುಗಳು. ಅವು ಯಾವುವೆಂದರೆ:—'ವೇದಾಂತ ಶಾಸ್ತ್ರಸಾರವೆಂಬ ಅಮೃತವನ್ನು ಸುರಿಸುವುದು, ಮತ್ತು ಸಜ್ಜನರ ಸಹವಾಸವನ್ನು ಮಾಡುವುದು'ಎಂಬುವೇ. ಅಂದರೆ ಸತ್ಸಂಗದಿಂದ, ವೇದಾಂತ ಶಾಸ್ತ್ರವನ್ನೂ ಅಭ್ಯಸಿಸಿ,ಅದರಿಂದುಂಟಾಗುವ ಜ್ಞಾನವನ್ನೂ ತತ್ಫಲವಾದ ಮೋಕ್ಷವನ್ನೂ ಪಡೆಯಬಹುದೆಂಬುದೇ ಮೇಲಿನ ಶ್ಲೋಕದ ಭಾವವು. ಇಂತಹ ಸಜ್ಜನರ ಸಹವಾಸವನ್ನು ಮಾಡುವುದಕ್ಕೆ ಬಾಲ್ಯದಿಂದಲೇ ಪ್ರಯತ್ನ ಪಡಬೇಕು. ಈ ಪ್ರಯತ್ನವನ್ನು ನಾಳೆನಾಡಿದ್ದೆಂದು ಮುಂದರಿಸಬಾರದು. ಈ ಸತ್ಸಂಗಕ್ಕೆ ಯಾವಾಗ ಯತ್ನಿಸಬೇಕೆಂದರೆ,

ಶ್ಲೋ ॥ ಯಾವತ್ಸ್ವಸ್ಥ ಮಿದಂ ಶರೀರ ಮರುಜಂ ♦ ಯಾವಜ್ಜರಾ ದೂರತೋ ।
ಯಾವಚ್ಚೇಂದ್ರಿಯಶಕ್ತಿ ರಪ್ರತಿಹತಾ ♦ ಯಾವ ತ್ಕ್ಷಯೋ ನಾಯುಷಃ ॥
ಆತ್ಮಶ್ರೇಯಸಿ ತಾವದೇವ ವಿದುಷಾ ♦ ಕಾರ್ಯಃ ಪ್ರಯತ್ನೋ ಮಹಾನ್ ।
ಸಂದೀಪ್ತೇ ಭವನೇ ತು ಕೂಪಖನನಂ ♦ ಪ್ರತ್ಯುದ್ಯಮಃ ಕೀದೃಶಃ ॥

ಈ ಶರೀರಕ್ಕೆ ಮುಪ್ಪು, ಇಂದ್ರಿಯಪಾಟವವು ಕಡಿಮೆಯಾಗುವಿಕೆ, ರೋಗ ಮತ್ತು ಮರಣಾದಿಗಳು ಸಂಭವಿಸುವುದಕ್ಕೆ ಮೊದಲೇ ಆತ್ಮಸುಖ

ವನ್ನು ಅಂದರೆ ಮೋಕ್ಷಸುಖವನ್ನು ಹೊಂದಬೇಕೆಂದು ಇಚ್ಛಿಸುವವರು ಸರಿಯಾದ ಸತ್ಸಂಗಕ್ಕೆ ಪ್ರಯತ್ನಮಾಡಬೇಕು. ಹಾಗೆ ಮಾಡದೆ ಮುದಿತನವು ಬಂದಕಾಲದಲ್ಲಿ ಮುಕ್ತಿ ಸಾಧನೆಗಾಗಿ ಸತ್ಸಂಗವನ್ನು ಬಯಿಸಿದ್ದೇ ಆದರೆ, ಮನೆಯು ಬೆಂಕಿಯಿಂದ ಉರಿಯುವ ಕಾಲದಲ್ಲಿ ಅದನ್ನಾರಿಸಲು ನೀರನ್ನು ಪಡೆಯುವುದಕ್ಕೆ ಭಾವಿಯನ್ನು ತೋಡಿಸಿದಂತಾಗುತ್ತದೆ.

ಆದುದರಿಂದ ಓ ಸ್ತ್ರೀಪುರುಷರಿರಾ! ಈಗಲಿಂದಲೇ ಸತ್ಸಂಗವನ್ನು ಮಾಡುವುದಕ್ಕೆ ಯತ್ನಿಸಿ. ಅದರಿಂದ ನೀವು ನಿಶ್ಚಯವಾಗಿಯೂ ಫಲವುಂಟು. ಆ ಫಲವೇ ಮೋಕ್ಷಪ್ರಾಪ್ತಿಯು.

ಇನ್ನು ಆತ್ಮದರ್ಶನವನ್ನು ಹೊಂದುವುದಕ್ಕಾಗಿ ಜನಗಳು ನಡೆದುಕೊಳ್ಳಬೇಕಾದ ವಿಷಯಗಳನ್ನು ಕುರಿತು ಈ ಮುಂದಿನ ಪ್ರಕರಣದಲ್ಲಿ ಹೇಳಲಾಗಿದೆ.



# ಆತ್ಮದರ್ಶನದ ಸಾಧನೆಗಾಗಿ ಉಪದೇಶಗಳು.

ಆತ್ಮದರ್ಶನವನ್ನು ಸಾಧಿಸುವುದಕ್ಕೆ ಬೇಕಾದ ಮುಖ್ಯ ಸಾಧನೆಗಳು ಯಾವುವೋ, ಅವುಗಳನ್ನು ಕುರಿತು ಈ ಕೆಳಗೆ ವಿವರಿಸುತ್ತೇವೆ. ಅದರಂತೆ ನೀವುಗಳು ಪ್ರತಿದಿನವೂ ಬೆಳಿಗ್ಗೆ ಸಾಯಂಕಾಲಗಳಲ್ಲಿ ತಪ್ಪದೆ ನಡೆದುಕೊಂಡಿದ್ದೇ ಆದರೆ, ಆಗ ನೀವು ಬಹುಸುಲಭವಾಗಿ ಆತ್ಮದರ್ಶನವನ್ನು ಹೊಂದಬಹುದು.

ಈಶ್ವರಭಕ್ತಿಯೆಂಬುದೇ ಇಲ್ಲದೆ ಶುದ್ಧ ಶೂನ್ಯಮನಸ್ಕರಾದ ಪಾಮರ ಜನಗಳು ಮೊಟ್ಟಮೊದಲು ಏನುಮಾಡಬೇಕೆಂದರೆ, ಪ್ರತಿದಿನವೂ

ಪ್ರಾತಃಕಾಲದಲ್ಲೆದ್ದು, ಸ್ನಾನಮಾಡಿ, ಮಡಿಬಟ್ಟೆಯನ್ನುಟ್ಟು ಇನ್ನು ಮುಂದೆ **"ಶಿವರಾಜಯೋಗ ಸಮಾಧಿ, ಇದನ್ನು ಜಪಮಾಡಬೇಕು"** ಎಂಬ ಪ್ರಕರಣದಲ್ಲಿ ವಿವರಿಸಿರುವಂತೆ ಶೈವ ವೈಷ್ಣವ ಮತಸ್ಥರು ತಮ್ಮ ತಮ್ಮ ಮತಾಚಾರಪದ್ಧತಿಯನ್ನನುಸರಿಸಿ ವಿಭೂತಿಯನ್ನೋ ಇಲ್ಲವೇ ಶ್ರೀಚೂರ್ಣವನ್ನೋ ತಲೆಯಿಂದ ಹಿಡಿದು ಮಣಿಕಟ್ಟಿನವರಿವಿಗೂ ಆಯಾ ಸ್ಥಳಗಳಲ್ಲಿ ಆಯಾ ಮಂತ್ರಗಳನ್ನು ಜಪಿಸುತ್ತ ಧರಿಸಬೇಕು. ಇದಾದ ಮೇಲೆ ಸ್ವಲ್ಪವೂ ಹೊರಗಿನ ಶಬ್ದವು ಕೇಳಿಸದಿರುವ ಒಂದು ಪೂಜೆಯ ಕೊಠಡಿಯೊಳಕ್ಕೆ ಹೋಗಿ ಹಸುವಿನ ತುಪ್ಪದ ದೀಪವನ್ನು ಹೊತ್ತಿಸಿ, ಸಾಂಬ್ರಾಣಿಯ ಧೂಪವನ್ನು ಹಾಕಿ ಒಳ್ಳೆಯ ವಾಸನೆಯುಳ್ಳ ಹೂವುಗಳನ್ನಿಟ್ಟು ಮತ್ತು ಸುವಾಸನೆಯುಳ್ಳ ಊದುಬತ್ತಿಗಳನ್ನು ಹಚ್ಚಿ, ಆ ಪೂಜೆಯ ಕೊಠಡಿಯಿಂದ ವಾಸನೆಯು ಹೊರಕ್ಕೆ ಹೋಗದಂತೆ ಬಾಗಿಲು ಕಿಟಕಿಗಳನ್ನು ಮುಚ್ಚಿ ತಾಳಹಾಕುತ್ತ ಪರಮಾತ್ಮನನ್ನು ಕುರಿತು ಹಾಡಬೇಕು. ಆ ಕೊಠಡಿಯು ಸುವಾಸನೆಯಿಂದ ತುಂಬಿದ್ದೇ ಆದರೆ, ಮನಸ್ಸಿಗೆ ಬಹಳ ಸೊಂಪಾಗಿ ಈ ಮುಂದೆ ತಿಳಿಸುವಂತೆ ಮನಸ್ಸು ಯಾವ ಕೋರಿಕೆಗಳೂ ಇಲ್ಲದೆ ಒಂದೇ ವಿಧವಾದ ಧ್ಯಾನದಲ್ಲಿಯೇ ನಿಂತುಹೋಗುವುದು.

ಪೂಜಾಗೃಹವನ್ನು ಈ ವಿಧವಾಗಿ ಸಿದ್ಧಪಡಿಸಿಕೊಳ್ಳುವುದಕ್ಕೆ ಬದಲಾಗಿ,ನಡುಮನೆ ಪಡಸಾಲೆ ಮೊದಲಾದ ಪ್ರತ್ಯೇಕವಾಗಿಲ್ಲದ ಬಯಲು ಪ್ರದೇಶಗಳಲ್ಲಿ ಪೂಜೆಯನ್ನು ಮಾಡುವುದಕ್ಕಾರಂಭಿಸಿದರೆ, ವಾಯುವು ಹೊರಕ್ಕೂ ಒಳಕ್ಕೂ ಚಲಿಸುತ್ತಿರುವುದರಿಂದ ಸುವಾಸನೆಯನ್ನುಂಟು ಮಾಡುವ ಧೂಪ ದೀಪಾದಿ ಪೂಜಾ ದ್ರವ್ಯಗಳ ವಾಸನೆಯೆಲ್ಲವೂ ಒಂದೇ ಕಡೆ ನಿಲ್ಲದೆ ಅತ್ತಿತ್ತ ಚದುರುವುದರಿಂದಲೂ, ಮತ್ತು ಇತರರು ಮಾತನಾಡುವ ಶಬ್ದಗಳು ಕಿವಿಗಳ ಮೇಲೆ ಬೀಳುತ್ತಿರುವುದರಿಂದಲೂ, ಮನಸ್ಸನ್ನು ಒಂದೇ ಸ್ಥಳದಲ್ಲಿ ನಿಲ್ಲಿಸುವುದಕ್ಕೆ ಸಾಧ್ಯವಿಲ್ಲದೆ ಅದನ್ನು ಪರಿಪರಿವಿಧವಾಗಿ ಓಡುವುದಕ್ಕೆ ಬಿಡಬೇಕಾಗುತ್ತದೆ. ಇಂತಹ ಸ್ಥಳಗಳನ್ನು ಬಿಟ್ಟು ಮೇಲೆ ವಿವರಿಸಿದಂತೆ ನಿರ್ಮಲವಾದ, ಸುವಾಸನೆಯಿಂದ ತುಂಬಿದ ಮತ್ತು ನಿಶ್ಶಬ್ದವಾದ ಕೊಠಡಿಯಲ್ಲಿ ಪೂಜೆಮಾಡುತ್ತ ಬಂದದ್ದೇ ಆದರೆ, ಆಗ ಪೂಜೆ ಮಾಡುವವರ ಮನಸ್ಸು ಒಂದು ಶಬ್ದವನ್ನೂ ಕೇಳದೆ ಈ ಮುಂದೆ ಹೇಳಲ್ಪ

ಡುವ ಗುರುವಾಕ್ಯೋಪದೇಶಗಳಲ್ಲಿಯೇ ನೆಲೆಗೊಳ್ಳುತ್ತದೆ. ಆ ಪೂಜಾ ಗೃಹದಲ್ಲಿ ಹೇಗೆ ಕುಳಿತುಕೊಳ್ಳಬೇಕು? ಮತ್ತು ಯಾವ ಕ್ರಮದಿಂದ ಪೂಜಾ ಕಾರ್ಯಗಳನ್ನು ನಡೆಸಬೇಕು? ಎಂಬ ವಿಷಯಗಳನ್ನು ಈ ಕೆಳಗೆ ವಿಸ್ತರಿಸಿದೆ.

ಯಾರು ಯಾರಿಗೆ ಯಾವ ಯಾವ ದೇವತೆಗಳ ಮೇಲೆ ಪ್ರೀತಿಯೋ ಅಂದರೆ ಈಶ್ವರ, ವಿಷ್ಣು, ಗಣಪತಿ, ಸುಬ್ರಹ್ಮಣ್ಯ, ರಾಮ, ಕೃಷ್ಣ, ಆಂಜನೇಯ ಮೊದಲಾದ ಪುರುಷ ದೇವತೆಗಳಲ್ಲಿ ಅಥವಾ ಲಕ್ಷ್ಮಿ, ಸರಸ್ವತಿ, ಪಾರ್ವತಿ, ಕನ್ಯಕಾಂಬ, ಕಾಳಿ ಮೊದಲಾದ ಸ್ತ್ರೀ ದೇವತೆಗಳಲ್ಲಿ ಯಾರು ಯಾರು ತಮತಮಗೆ ಇಷ್ಟವೋ, ಅವರಲ್ಲಿ ಯಾವುದಾದರೊಂದು ದೇವತೆಯ ವಿಗ್ರಹವನ್ನೋ, ಇಲ್ಲವೇ ಚಿತ್ರ ಪಠವನ್ನೋ, ತನ್ನ ಉಪಾಸನಾಮೂರ್ತಿಯಾಗಿ (ಮೋಕ್ಷಕ್ಕೆ ದಾರಿ ತೋರಿಸುವ ಭಗವಂತನೆಂದು) ಭಾವಿಸಿ, ಮೇಲೆ ಹೇಳಿದ ಕತ್ತಲು ಕೋಣೆಯಲ್ಲಿ ಅದನ್ನು ದಕ್ಷಿಣಾಭಿಮುಖವಾಗಿ ಸ್ಥಾಪಿಸಬೇಕು.

ಇದಾದ ಮೇಲೆ ಎರಡಡಿ ಉದ್ದ, ಒಂದೂವರೆ ಅಡಿ ಅಗಲ ಮತ್ತು ಒಂದಂಗುಲ ಎತ್ತರವುಳ್ಳ ಒಂದು ಮಣೆಯನ್ನು ಆ ವಿಗ್ರಹಕ್ಕೆದುರಾಗಿ ಹಾಕಿ, ಅದರ ಮೇಲೆ ದರ್ಭಾಸನವನ್ನೋ, ಕೃಷ್ಣಾಜಿನವನ್ನೋ, ಇಲ್ಲವೇ ಮಡಿತೆ ಹಾಕಿದ ಬಿಳಿಯ ಬಟ್ಟೆಯನ್ನೋ ಹಾಸಿ, ತಾನು ಆ ದೇವತಾವಿಗ್ರಹಕ್ಕೆದುರಾಗಿ ಅಂದರೆ ಉತ್ತರಾಭಿಮುಖವಾಗಿ ಕುಳಿತುಕೊಂಡು ಒಂದೇ ವಿಧವಾದ ಜಪವನ್ನೇ ಮಾಡುತ್ತಿರಬೇಕು. ಆ ಜಪವನ್ನು ಮಾಡುವುದಕ್ಕೆ ಮುಂಚೆ ಮುಂದೆ ಹೇಳುವಂತೆ ನಡೆಸಬೇಕು. ದೇವತಾ ವಿಗ್ರಹಕ್ಕೆ ಮಂತ್ರ ಪುರಸ್ಸರವಾಗಿ ಧ್ಯಾನ, ಆಸನ, ಪ್ರಾಣಪ್ರತಿಷ್ಠ, ಸ್ನಾನ, ವಸ್ತ್ರ ಗಂಧ ಮೊದಲಾದುವುಗಳನ್ನರ್ಪಿಸಿ ಸುವಾಸನೆಯುಳ್ಳ ಪುಷ್ಪಗಳಿಂದ ಒಂದೇ ಮನಸ್ಸಿನಿಂದ ಪೂಜಿಸಬೇಕು. ಅನಂತರ ಧೂಪ ದೀಪಾದಿಗಳನ್ನು ಕ್ರಮವಾಗಿ ಸಲ್ಲಿಸಿ, ಷಡ್ರಸೋಪೇತವಾದ ಭಕ್ಷ್ಯಭೋಜ್ಯಾದಿಗಳನ್ನೂ, ವಿವಿಧ ಫಲಶಾಕಾದಿಗಳನ್ನೂ ವಿಗ್ರಹದ ಮುಂದೆ ತಟ್ಟೆಗಳಲ್ಲಿರಿಸಿ ಹಿಂದೆ **“ದೇವತಾರಾಧನೆಯ ಕ್ರಮ”** ಎಂಬ ಪ್ರಕರಣದಲ್ಲಿ ವಿವರಿಸಿರುವಂತೆ ಪ್ರಾಣಾ

ಪಾನವ್ಯಾನೋದಾನ ಸಮಾನವೆಂಬ ಪಂಚ ವಾಯುಗಳ ಹೆಸರನ್ನು ಗಟ್ಟಿಯಾಗಿ ಉಚ್ಚರಿಸುತ್ತಾ ಆವಾಹನೆಯಾದ ಆ ವಿಗ್ರಹಕ್ಕೆ ಭಕ್ತಿಯಿಂದ ನಿವೇದಿಸಬೇಕು. ಆ ಮೇಲೆ ಪಂಚಪಾತ್ರೆಯಲ್ಲಿರುವ ಉದಕವನ್ನು ಉದ್ಧರಣೆಯಲ್ಲಿ ತೆಗೆದುಕೊಂಡು ಭಗವಂತನಿಗೆ ಅರ್ಘ್ಯಪಾದ್ಯಾಚಮನೀಯಗಳನ್ನು ಒಂದು ತಟ್ಟೆಯೊಳಕ್ಕೆ ಎತ್ತಿ ಎರೆಯಬೇಕು. ಇದಾದ ಮೇಲೆ ಉತ್ತರ ನೀರಾಜನ ಅಂದರೆ ಕರ್ಪೂರದಾರತಿಯನ್ನು ಆ ವಿಗ್ರಹಕ್ಕೆ ಬೆಳಗಿ, ಆ ಬೆಳಕಿನಿಂದ ಪೂಜೆಯಿಂದಲಂಕರಿಸಲ್ಪಟ್ಟ ವಿಗ್ರಹವನ್ನು ಕಣ್ಣುಗಳಿಗೆ ಆನಂದವುಂಟಾಗುವಂತೆ ನೋಡಿ, ಸಾಷ್ಟಾಂಗಪ್ರದಕ್ಷಿಣ ನಮಸ್ಕಾರಗಳನ್ನು (ಇಷ್ಟ ದೇವತೆಯನ್ನು ಕೀರ್ತಿಸುತ್ತ) ಮಾಡಿ, ಅನಂತರ ಈ ಕೆಳಗೆ ಹೇಳುವಂತೆ ಪ್ರಾರ್ಥಿಸಬೇಕು.

ಶ್ಲೋ ॥ "ಗುರು ರ್ಬ್ರಹ್ಮಾ ಗುರು ರ್ವಿಷ್ಣುಃ ♦ ಗುರು ರ್ದೇವೋ ಮಹೇಶ್ವರಃ ।
ಗುರು ಸ್ಸಾಕ್ಷಾತ್ ಪರಬ್ರಹ್ಮಾ ♦ ತಸ್ಮೈ ಶ್ರೀ ಗುರವೇ ನಮಃ ॥"

ತ್ರಿಮೂರ್ತ್ಯಾತ್ಮಕನಾದ ಮತ್ತು ಪರಮಾತ್ಮಸ್ವರೂಪನಾದ ಆ ಸದ್ಗುರುವಿಗೆ ನಮಸ್ಕರಿಸಿ, "ಓ ಗುರುವರ್ಯ! ನನಗೆ ಆತ್ಮದರ್ಶನವು ಸಿದ್ಧಿಸುವಂತೆ ಅನುಗ್ರಹವನ್ನು ದಯಪಾಲಿಸು" ಎಂದು ಮನಸ್ಸಿನಲ್ಲಿ ನೆನೆಯಬೇಕು. ಇದಾದ ಮೇಲೆ ಈ ಮುಂದೆ ಹೇಳುವಂತೆ ನಡೆದುಕೊಳ್ಳಬೇಕು.

ಹತ್ತುಸಾವಿರ ಮೈಲಿಗಳ ದೂರದಲ್ಲಿರುವ ಒಂದಾನೊಂದು ದ್ವೀಪಕ್ಕೆ ಹೋಗಿ, ಅಲ್ಲಿರುವ ಯಾವುದಾದರೂ ಒಂದು ವಸ್ತುವನ್ನು ಕಣ್ಣಿನಿಂದ ನೋಡಿ, ಅದರ ಸ್ವರೂಪವನ್ನು ಚನ್ನಾಗಿ ಗ್ರಹಿಸಿಕೊಂಡಮೇಲೆ ಅಲ್ಲಿಯೇ ಕಣ್ಣುಮುಚ್ಚಿಕೊಂಡು ಆ ವಸ್ತುಸ್ವರೂಪವನ್ನು ನೆನಸಿದ್ದೇ ಆದರೆ, ಅದು ಭ್ರೂಮಧ್ಯಭಾಗದಲ್ಲಿ ಬಂದು ನಿಂತಂತೆ ಕಾಣಬರುತ್ತದೆ. ಆ ಸ್ಥಳವನ್ನು ಬಿಟ್ಟು ಪುನಃ ತಾನು ಹೊರಟ ಸ್ಥಳಕ್ಕೆ ಬಂದು ಹಿಂದೆ ಹೇಳಿದ ವಸ್ತುವನ್ನು ಕಣ್ಣುಮುಚ್ಚಿಕೊಂಡು ನೆನೆಸಿದ್ದೇ ಆದರೆ, ಕಣ್ಣೆದುರಿಗೆ ಇದ್ದಂತೆ ಆ ವಸ್ತುಸ್ವರೂಪವು ಭ್ರೂಮಧ್ಯಪ್ರದೇಶದಲ್ಲಿ ಬಂದು ನಿಲ್ಲುತ್ತದೆ. ಪದಾರ್ಥದ ನಿಜಸ್ವರೂಪವನ್ನು ಗ್ರಹಿಸುವುದು ಮನಸ್ಸು. ಹತ್ತುಸಾವಿರ ಮೈಲಿಯೇ

ಅಲ್ಲ ; ಲೆಕ್ಕವಿಲ್ಲದಷ್ಟು ದೂರಪ್ರದೇಶದಲ್ಲಿದ್ದರೂ, ಆ ವಸ್ತುಸ್ವರೂಪವನ್ನು ಈ ಮನಸ್ಸು ಗ್ರಹಿಸಿರುವುದರಿಂದ ಯಾವಾಗ ನೆನಸಿದರೆ ಆಗ, ಭ್ರೂಮಧ್ಯ ಭಾಗದಲ್ಲಿ ಅದರ ಆಕಾರವು ವ್ಯಕ್ತವಾಗುತ್ತದೆ. ಆಹಾ ! ಏನಾಶ್ಚರ್ಯ ! ಮನೋವೇಗಕ್ಕಿಂತಲೂ ಹೆಚ್ಚು ವೇಗವಾದದ್ದು ಪ್ರಪಂಚದಲ್ಲಿ ಯಾವುದಾದರೂ ಉಂಟೇ ? ಪ್ರತಿಯೊಂದರ ವೇಗವನ್ನೂ ಇಷ್ಟೇ ಎಂದು ನಿರ್ಧರಿಸಬಹುದು. ಶಬ್ದದ ವೇಗವು ಒಂದು ಸೆಕೆಂಡಿಗೆ 1150 ಅಡಿಗಳೆಂದೂ, ಬಿರುಗಾಳಿಯ ವೇಗವು ಒಂದು ಸೆಕೆಂಡಿಗೆ 1000 ಗಜಗಳೆಂದೂ, ವಿದ್ಯುಚ್ಛಕ್ತಿ ಮತ್ತು ಬೆಳಕು ಇವುಗಳ ವೇಗಗಳು ಒಂದು ಸೆಕೆಂಡಿಗೆ 1,76,000 ಮೈಲಿಗಳೆಂದೂ ನಿರ್ಧರಿಸಲ್ಪಟ್ಟಿವೆ. ಆದರೆ ಮನೋವೇಗಕ್ಕೆ ಮಿತಿಯಿಲ್ಲ. ನೆನಸಿದ ತಕ್ಷಣವೇ ಅನೇಕ ಕೋಟಿ ಮೈಲಿಗಳ ದೂರದಲ್ಲಿರುವ ವಸ್ತುವಿನ ಆಕಾರವು ಭ್ರೂಮಧ್ಯದ ಸಮೀಪದಲ್ಲಿ ಸಿದ್ಧವಾಗುತ್ತದೆ. ಇದೂ ಅಲ್ಲದೆ, ನಮ್ಮ ಚರ್ಮಚಕ್ಷುವಿನ ಅಂದರೆ ನಮ್ಮ ಈ ಹೊರಗಿನ ಕಣ್ಣಿನ ದೃಷ್ಟಿಯು, ದಿಗಂತ (horizon) ದವರೆವಿಗೂ ಅಂದರೆ ಕೆಲವು ಮೈಲಿಗಳ ಸುತ್ತಲೂ ಪಸರಿಸುತ್ತದೆ. ಆದರೆ ಅಂತರ್ನೇತ್ರವಾದ (ಒಳಗಣ್ಣಾದ) ಮನಸ್ಸಾದರೋ ಸಮಸ್ತ ಲೋಕಗಳನ್ನೂ ಪ್ರವೇಶಿಸಬಲ್ಲುದು. ಇಷ್ಟೇ ಅಲ್ಲದೆ ಹೊರಗಣ್ಣು ಭೂಮಿಯ ಮೇಲಿರುವ ವಸ್ತುಗಳನ್ನು ಮಟ್ಟಿಗೆ ಕಾಣಬಲ್ಲುದು. ಆದರೆ ಮನಸ್ಸಿನ ಶಕ್ತಿಯು ಭೂಮಿಯ ಮೇಲಿರುವ ಮತ್ತು ಇಲ್ಲದಿರುವ ವಸ್ತು ವಿಷಯಗಳಲ್ಲೆಲ್ಲಾ ಹರಡುತ್ತದೆ. 'ರವಿಕಾಣದುದ ಕವಿ ಬಲ್ಲ' ಎಂಬ ನಾಣ್ಣುಡಿಯಂತೆ ಸೂರ್ಯರಶ್ಮಿಗೆ ಕಾಣಬರದಿರುವ ವಸ್ತುಗಳನ್ನೆಲ್ಲಾ ಕವಿಯು ತನ್ನ ಪ್ರತಿಭೆಯೆಂಬ ಮನೋವೇಗದಿಂದ ಕಾಣಬಲ್ಲನು. ಕಣ್ಣಿಲ್ಲದ ಕುರುಡನು ಹೊರಗಿನ ವಸ್ತುರೂಪವನ್ನು ಕಾಣಲಾರನು ; ಆದರೆ ಆ ಸ್ವರೂಪವರ್ಣನೆಯನ್ನು ಕೇಳಿದ ತಕ್ಷಣವೇ ಅದರ ನಿಜಸ್ವರೂಪವನ್ನು ಅವನು ಚನ್ನಾಗಿ ತಿಳಿಯುತ್ತಾನೆ; ಮತ್ತು ಕೇಳಿದವರಿಗೆ ಕಣ್ಣಿಂದ ಕಂಡವರಿಗಿಂತಲೂ ಚನ್ನಾಗಿ ವಿವರಿಸುತ್ತಾನೆ. ನೋಡಿದಿರಾ ! ಈ ಮಾಂಸದಿಂದ ಮಾಡಲ್ಪಟ್ಟ ಹೊರಗಣ್ಣಿಗೂ ಮತ್ತು ಪದಾರ್ಥ ಸಂಯೋಗವಿಲ್ಲದೆ ತಾನಾಗಿಯೇ ಸೃಷ್ಟಿಸಲ್ಪಟ್ಟ ಮತ್ತು ಆಕಾರವಿಲ್ಲದಿರುವ ಮನಸ್ಸೆಂಬ ಒಳಗಣ್ಣಿಗೂ ಇರುವ ವ್ಯತ್ಯಾಸವು. ಈ ಒಳಗಣ್ಣಿಲ್ಲದಿದ್ದರೆ

ಹೊರಗಣ್ಣಿನಿಂದೇನೂ ಪ್ರಯೋಜನವಿಲ್ಲ. ಒಂದು ವಸ್ತುವನ್ನು ಹೊರಗಿನ ಕಣ್ಣಿನಿಂದ ನೋಡಿದ ತಕ್ಷಣವೇ, ಆ ವಸ್ತುಸ್ವರೂಪವು ಮನಸ್ಸಿನಲ್ಲಿ ಫೋಟೋ ತೆಗೆದಂತೆ ರೂಢವಾಗಿ ಪ್ರತಿಬಿಂಬಿಸುತ್ತದೆ. ಆ ಪ್ರತಿಬಿಂಬವನ್ನು ಮನಸ್ಸು ಗ್ರಹಿಸದಿದ್ದಲ್ಲಿ, ಆ ಮಾಂಸನೇತ್ರವಿದ್ದೂ ಫಲವಿಲ್ಲ. ಈ ಮನಸ್ಸನ್ನು ಒಂದೇ ಸ್ಥಳದಲ್ಲಿ ನಿಲ್ಲಿಸದಿದ್ದಲ್ಲಿ, ಆ ವಸ್ತುಸ್ವರೂಪ ಪ್ರತಿಬಿಂಬವೂ ರೂಢವಾಗಿ ನಿಲ್ಲಲಾರದು. ಆದುದರಿಂದ ಮೇಲೆ ಹೇಳಿದಂತೆ ಪೂಜಾಸಾಮಗ್ರಿಗಳೊಡಗೂಡಿದ ಪೂಜಾಗೃಹದಲ್ಲಿ ಮನಸ್ಸನ್ನು ಸ್ಥಿರೀಕರಿಸಲು ಪ್ರಯತ್ನಿಸಬೇಕು. ಮನೋಸ್ಥಿತಿಯನ್ನು ಸರಿಪಡಿಸುವುದಕ್ಕೆ ಬಾಹ್ಯಸಲಕರಣೆಗಳು ಅತ್ಯವಶ್ಯಕ. ಏತಕ್ಕೆಂದರೆ, ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ವ್ಯಾಪಾರಗಳನ್ನು ತಡೆದು ನಿಲ್ಲಿಸುವುದಕ್ಕೆ ಸನ್ನಿವೇಶಗಳು ಸರಿಯಾಗಿರಬೇಕು. ಹಾಗಿದ್ದರೆ ಮನೋನೈರ್ಮಲ್ಯವನ್ನು ಪಡೆಯಬಹುದು. ಆಗ ನೆನಸುವ ವಸ್ತು ಯಾವುದೇ ಆಗಲಿ, ಅದು ಮನಸ್ಸಿನಲ್ಲಿ ಬಂದು ರೂಢವಾಗಿ ನಿಲ್ಲುವುದಕ್ಕೆ ಅವಕಾಶವು ದೊರೆಯುತ್ತದೆ. ಹೀಗೆ ಸನ್ನಿವೇಶ ಸಲಕರಣೆಗಳಿಂದ ಮನಸ್ಸನ್ನು ಹದಗೊಳಿಸಿದ ಮೇಲೆ, ಹಿಂದೆ ವಿವರಿಸಿದ ಪೂಜೆಯ ಕೋಣೆಯಲ್ಲಿ ಕುಳಿತು, ತನಗೆ ಇಷ್ಟವುಳ್ಳ ದೇವತಾವಿಗ್ರಹದ ಅಥವ ಪಠದ ಮುಖಭಾಗವನ್ನು ಮಾತ್ರ ಚನ್ನಾಗಿ ದೃಷ್ಟಿಸಿ ನೋಡಿ, ಉಳಿದ ಭಾಗಗಳಲ್ಲಿ ಅಷ್ಟು ಗಮನವಿಡದೆ ಕಣ್ಣನ್ನು ಮುಚ್ಚಿಕೊಂಡ ತಕ್ಷಣವೇ ಆ ವಿಗ್ರಹದ ಮುಖಭಾಗದ ಆಕಾರವು ಭ್ರೂಮಧ್ಯಭಾಗದಲ್ಲಿ ಬಂದು ನಿಲ್ಲುತ್ತದೆ. ಈ ರೂಪದರ್ಶನವು ಆ ಮನೋನೇತ್ರದ ಬಲಿಯದಿಂದ ಕಾಣಬರುತ್ತದೆ. ಮುಖವನ್ನು ಮಾತ್ರ ಹೊರಗಣ್ಣಿನಿಂದ ಚನ್ನಾಗಿ ನೋಡಿದ್ದರಿಂದ ಮುಖಸ್ವರೂಪವೇ ಪ್ರಾಮುಖ್ಯವಾಗಿ ನಿಂತು, ಕಂಠ ಭುಜ ಕೈಕಾಲುಗಳೊಂದೂ ಮನೋನೇತ್ರಕ್ಕೆ ಗೋಚರವಾಗುವುದಿಲ್ಲ. ಕಣ್ಣು ತೆರೆದಮೇಲೆಯೇ ವಿಗ್ರಹದ ಉಳಿದ ಅಂಗಾಂಗಗಳೆಲ್ಲವೂ ಕಾಣಬರುತ್ತವೆ.

ಮೇಲೆ ವಿವರಿಸಿದ ಪೂಜೆಯ ಕೊಠಡಿಯಲ್ಲಿ ವಿಗ್ರಹದ ಮುಖವನ್ನೇ ನೋಡಬೇಕೆಂಬ ಅಗತ್ಯವೂ ಇಲ್ಲ. ಮುಖಕ್ಕೆ ಗುರಿಯಿಟ್ಟು ಅದರಲ್ಲಿ ಮನಸ್ಸನ್ನು ನಿಲ್ಲಿಸುವುದಕ್ಕೆ ಶಕ್ತಿ ಬಂದಮೇಲೆ, ಆ ಮುಖದಲ್ಲಿರುವ ಮೂಗಿನ ಕಡೆಗೇ ದೃಷ್ಟಿಯ ಗುರಿಯನ್ನಿಟ್ಟು ಚನ್ನಾಗಿ ಒಂದುಸಾರಿ ನೋಡಿ,

ಆದರ ಸ್ವರೂಪ ಪ್ರತಿಬಿಂಬವನ್ನು ಮನಸ್ಸಿನಲ್ಲಿ ಗ್ರಹಿಸಿಕೊಂಡು, ಅನಂತರ ಕಣ್ಣು ಮುಚ್ಚಿ, ಆ ನಾಸಿಕಾಗ್ರದ ರೂಪವನ್ನೇ ಮನಸ್ಸಿನಲ್ಲಿ ನೋಡುತ್ತ ಬರಬೇಕು. ಹೀಗೆ ಮಾಡಿದರೆ ಆತನ ಮನಸ್ಸು, ಗಾಳಿಯಿಲ್ಲದೆ ಇರುವ ಕೊಠಡಿಯಲ್ಲಿ ಹೊತ್ತಿಸಿದ ದೀಪಜ್ವಾಲೆಯಂತೆ ಅತ್ತಿತ್ತ ಕದಲದೆ ಒಂದೇ ಸ್ಥಳದಲ್ಲಿ ನಿಂತು, ಆ ನಾಸಿಕಾಗ್ರವೂ ಮನಸ್ಸೂ ಒಂದಾಗಿ ಕಲೆತುಹೋಗುತ್ತವೆ. ಹೀಗೆ ಇವೆರಡೂ ಒಂದಾಗಿ ಬೆರೆತಮೇಲೆ ಆ ಸ್ಥಳದಲ್ಲಿ ಏನೊಂದೂ ಇಲ್ಲದೆ, ಬಟ್ಟಬಯಲಾಗಿ ಪರಿಣಮಿಸುತ್ತದೆ. ಅಂದರೆ ಮನೋದೃಷ್ಟಿಯನ್ನು ವಿಗ್ರಹದ ಸ್ವರೂಪವೆಂಬ ಪರಮಾತ್ಮನಲ್ಲಿ ಲೀನಮಾಡಿ ತಾನೇ ತಾನಾಗಿರುತ್ತದೆ. ಈ ಸ್ಥಿತಿಯು ಬಂದಮೇಲೆ ಮನಸ್ಸು ಆತ್ಮನೆಂಬ ವಸ್ತುವನ್ನು ನೋಡುತ್ತಿರುವುದು ಮಾತ್ರವಲ್ಲ; ಮನಸ್ಸೇ ಆತ್ಮನಲ್ಲಿ ಲಯವಾಗುತ್ತದೆ. ಹೀಗೆ ಮನಸ್ಸನ್ನು ಪರಮಾತ್ಮನಲ್ಲಿ ಐಕ್ಯ ಮಾಡುವುದಕ್ಕೆ 'ಆತ್ಮದರ್ಶನ' ವೆಂದು ಕೆಲವರು ಹೇಳುವರು. ಆತ್ಮನ ಸ್ವರೂಪವು ಈ ಚರ್ಮಚಕ್ಷುವಿಗಾಗಲಿ ಮನೋನೇತ್ರಕ್ಕಾಗಲಿ ಕಾಣಬರುವಂಥದಲ್ಲ. ಏತಕ್ಕೆಂದರೆ, ಆತ್ಮನು ವಾಯುವಿನಂತೆ ರೂಪರಹಿತನು ಮತ್ತು ನಿರ್ವಿಕಾರನು. ಜಾಗ್ರದವಸ್ಥೆಯಲ್ಲಿ ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲೆಣಿಸದೆ ಮನಸ್ಸನ್ನು ನಿರ್ಮಲವಾಗಿಟ್ಟದ್ದೇ ಆದರೆ, ಆಗ ಅಪರಿಮಿತವಾದ ಸುಖವನ್ನು ಅನುಭವಿಸಬಹುದು.

ಹಿಂದೆ ಹೇಳಿದಂತೆ ಇಷ್ಟದೇವತೆಗಳಿಗಾಗಿ ಮಾಡುವ ಷೋಡಶೋಪಚಾರಗಳು, ಮಹಾ ಮಂತ್ರಜಪಗಳು, ನಿಶ್ಚಲವಾದ ಧ್ಯಾನಗಳು ಮೊದಲಾದವುಗಳಿಂದ ಮನಸ್ಸನ್ನು ಸ್ಥಿರೀಕರಿಸಿ ಸರಿಯಾಗಿ ಹದಗೊಳಿಸಿದ ಮೇಲೆ, ಅದೇ ಪೂಜಾಗೃಹದಲ್ಲಿ ಸೇರಿ ದೇವತಾಪೂಜೆಗಳಿಗಾಗಲಿ, ಮಂತ್ರ ಜಪಗಳಿಗಾಗಲಿ ಗಮನಕೊಡದೆ ನಿರ್ಮಲವಾದ ತನ್ನ ಮನಸ್ಸನ್ನು ತನ್ನ ಉಪಾಸನಾಮೂರ್ತಿಯ ನಾಸಿಕಾಗ್ರದಲ್ಲಿ ನೆಲಸುವಂತೆ ಮಾಡಬೇಕು. ಆಗ ನಿಮ್ಮ ಮನಸ್ಸು ಬಾಹ್ಯವ್ಯಾಪಾರಗಳಲ್ಲಿ ಪ್ರವೇಶಿಸದೆ, ಒಂದೇ ಕಡೆ ನಿಂತು ಹೋಗುತ್ತದೆ. ಆಗ ನಿಮಗೆ ಒಂದು ವಿಧವಾದ ಅಪೂರ್ವ ಸುಖವು ತಲೆದೋರುತ್ತದೆ. ಇದು, ದೇವತಾಪೂಜೆಗಳು ಮತ್ತು ಮಂತ್ರಜಪಗಳು ಮೊದಲಾದವುಗಳಿಂದ ನಿಮಗೆ ಜನಿಸುವ ಸುಖದಂತಲ್ಲ. ಈ ವಿಷಯ

ವೆಲ್ಲವೂ ಈ ಗ್ರಂಥಕರ್ತರಾದ ಯೋಗೀಶ್ವರರ ಸ್ವಾನುಭವವೇ ಹೊರತು ಬೇರಲ್ಲ. ಅಂತಹ ಸ್ವಾನುಭವವನ್ನು ಅವರು ತಿಳಿಯಪಡಿಸುವವರಾಗಿರುತ್ತಾರೆ.

ಮನಸ್ಸಿನ ಸ್ವಭಾವವೆಂತಹುದೆಂದರೆ, ಅದು ರೆಪ್ಪೆ ಹೊಡೆಯುವ ಕಾಲದಷ್ಟೂ ಸುಮ್ಮನಿರದೆ ಏನೇನೋ ಕೆಲಸಕ್ಕೆ ಬಾರದ ಅನೇಕ ಕೋರಿಕೆಗಳನ್ನು ನೆನೆಯುತ್ತಾ ಇರುತ್ತದೆ. ದೇವಾಲಯದೊಳಕ್ಕೆ ಹೋಗಿ ಅಲ್ಲಿರುವ ವಿಗ್ರಹವನ್ನು ಭಕ್ತಿಶ್ರದ್ಧೆಗಳಿಂದ ಈ ಮಾಂಸನೇತ್ರದ ಮೂಲಕ ನೋಡುತ್ತಿದ್ದರೆ, ಹಾಗೆ ನೋಡುತ್ತಿರುವವರಿವಿಗೂ ಈ ಮನಸ್ಸು ಆ ಬಾಹ್ಯವ್ಯಾಪಾರಗಳಲ್ಲಿ ಪ್ರವೇಶಿಸದೆ ಆ ಉಪಾಸನಾ ವಿಗ್ರಹದಲ್ಲಿಯೇ ನಿಂತು ಬಹಳ ಸುಖವನ್ನನುಭವಿಸುತ್ತಿರುತ್ತದೆ. ಹಾಗಲ್ಲದೆ ದೃಷ್ಟಿಯನ್ನು ಆ ದೇವತಾವಿಗ್ರಹದಿಂದ ಹಿಂದಿರುಗಿಸಿದರೆ, ಮನಸ್ಸು ಅತ್ತಿತ್ತ ಅಲೆದಾಡುವುದಕ್ಕೆ ಆರಂಭಿಸಿ ತಾನು ಅನುಭವಿಸುತ್ತಿದ್ದ ಸುಖವೆಲ್ಲವನ್ನೂ ಕಳೆದು ಕೊಳ್ಳುತ್ತದೆ. ಜನಗಳಿಗೆ ಪರಿಪರಿ ವಿಧದಿಂದ ಓಡಾಡುತ್ತಿರುವ ಮನಸ್ಸನ್ನು ಒಂದೇ ಕಡೆ ನಿಲ್ಲುವಂತೆ ಮಾಡುವ ಸಲುವಾಗಿಯೇ ದೇವಾಲಯದಲ್ಲಿ ದೇವತಾವಿಗ್ರಹಾದಿಗಳನ್ನು ಪ್ರತಿಷ್ಠೆ ಮಾಡಿರುತ್ತಾರೆ. ಕಲ್ಲಿನ ವಿಗ್ರಹವು ಚಲಿಸದಂತೆಯೂ ಮತ್ತು ಮನಸ್ಸಿನಲ್ಲಿ ಏನೊಂದೂ ನೆನೆಸದೆಯೂ ಯಾವ ರೀತಿಯಿಂದಿರುತ್ತದೆಯೋ, ಅದೇ ರೀತಿಯಲ್ಲಿಯೇ ನಾವು ನಮ್ಮ ಮನಸ್ಸನ್ನು ಅಲ್ಲಿಗಿಲ್ಲಿಗೆ ಕದಲದಿರುವಂತೆ ಒಂದೆಡೆಯಲ್ಲಿ ನಿಲ್ಲಿಸುವಂತೆ ಪ್ರಯತ್ನ ಪಡಬೇಕು.

ದೇವಾಲಯ ದರ್ಶನವು, ಮಂತ್ರಜಪವು ಮೊದಲಾದುವುಗಳನ್ನು ಮಾಡುವ ಉದ್ದೇಶವೇನೆಂದರೆ, ಮನಸ್ಸು ಒಂದೇ ಕಡೆ ನಿಂತು ಆಮೇಲೆ ಆ ಸ್ಥಳವೂ ಅದಕ್ಕಿಲ್ಲದಂತೆ ಮಾಡಿ, ತನ್ನನ್ನು ತಾನು ಮರೆತು ತನ್ಮಯನಾಗಿರುವುದಕ್ಕಾಗಿಯೇ ವಿನಹ ಮತ್ತಾವುದಕ್ಕೂ ಅಲ್ಲ. ಇದನ್ನು ಸಾಧಿಸುವುದಕ್ಕಾಗಿಯೇ ದೇವತಾಪೂಜೆ ಮತ್ತು ಮಂತ್ರಜಪ ಇವುಗಳನ್ನು ಭಕ್ತಿಯಿಂದ ನಡೆಸಬೇಕು. ಹೀಗೆ ಪೂಜೆಯನ್ನು ಭಕ್ತಿಶ್ರದ್ಧೆಗಳಿಂದ ನಡೆಸುತ್ತಾ ಬಂದರೆ ನಾನಾ ವಿಧವಾದ ಕೋರಿಕೆಗಳನ್ನು ಬಯಸುತ್ತಿರುವ ಮನಸ್ಸು ಮೃತಿಹೊಂದಿ, ಬ್ರಹ್ಮಾನಂದಸುಖವು ದೊರಕುವುದಕ್ಕೆ ಅವಕಾಶ

ವುಂಟಾಗುತ್ತದೆ. ಒಟ್ಟಿನಲ್ಲಿ ಸಾವಿರ ಜನಗಳ ಮನಸ್ಸನ್ನು ಒಂದೇ ಕಡೆ ಸ್ಥಿರವಾಗಿ ನಿಲ್ಲಿಸುವುದಕ್ಕಾಗಿಯೇ, ವಿಗ್ರಹಾರಾಧನೆಗಳನ್ನು ಮಾಡಬೇಕೆಂದು ನಮ್ಮ ಹಿರಿಯರಾದ ಪೂಜ್ಯರು ದೇವತಾವಿಗ್ರಹಗಳನ್ನು ದೇವಸ್ಥಾನಗಳಲ್ಲಿ ಪ್ರತಿಷ್ಠೆಮಾಡಿ ಅಂತಹ ದೇವಾಲಯಗಳನ್ನು ಅನೇಕವಾಗಿ ಕಟ್ಟಿಸಿದರು. ಹಿಂದೆ ಹೇಳಿದಂತೆ ಮನಸ್ಸನ್ನು ಲಯಮಾಡಿ ಬ್ರಹ್ಮಾನಂದವನ್ನು ಅನುಭವಿಸುವ ಸ್ಥಿತಿಯನ್ನು ಪಡೆಯುವುದಕ್ಕೇ **"ಆತ್ಮದರ್ಶನ"** ಎಂದು ಹೆಸರು. ಮೇಲೆಹೇಳಿದ ರೀತಿಯಲ್ಲಿ ನಡೆಸಿದ್ದೇ ಆದರೆ, ಈರೀತಿಯಾದ ಆತ್ಮದರ್ಶನವನ್ನು ಬಹು ಸುಲಭವಾಗಿ ಪಡೆಯಬಹುದು.

ಜಿಂಕೆಯ ಚರ್ಮದ ಮೇಲೆ ಕುಳಿತು ಜಪಮಾಡುವ ರಹಸ್ಯಾರ್ಥವನ್ನು ಈ ಮುಂದಿನ ಪ್ರಕರಣದಲ್ಲಿ ವಿವರಿಸಿದೆ.



# ಜಿಂಕೆಯ ಚರ್ಮದಮೇಲೆ ಕುಳಿತು ಜಪಮಾಡುವ ರಹಸ್ಯಾರ್ಥ.

**ಸಹೋದರ ಸಹೋದರಿಯರೇ :—**

'ಆತ್ಮದರ್ಶನಕ್ಕಾಗಿ ಉಪದೇಶಗಳು' ಎಂಬ ಹಿಂದಿನ ಪ್ರಕರಣದಲ್ಲಿ, ಪ್ರತಿಯೊಬ್ಬ ಮನುಷ್ಯನೂ, ತಾನು ಧ್ಯಾನಮಾಡುವುದಕ್ಕೆ ಮೊದಲು ಪೂಜಾಗೃಹಕ್ಕೆ ಹೋಗಿ, ತುಪ್ಪದ ದೀವಿಗೆಯನ್ನು ಹೊತ್ತಿಸಿ, ಪೀಠದಮೇಲೆ ಜಿಂಕೆಯ ಚರ್ಮವನ್ನೂ, ಅದರ ಮೇಲೆ ಒಂದು ಬಿಳಿಯ ಬಟ್ಟೆಯನ್ನೂ ಹಾಸಿ, ಉತ್ತರಾಭಿಮುಖವಾಗಿ ಕುಳಿತು ಜಪಮಾಡಬೇಕೆಂಬ ವಿಷಯವು ವಿವರಿಸಿದೆ. ಇದೇ ವಿಷಯವನ್ನು ಮತ್ತಷ್ಟು ಇಲ್ಲಿ ವಿಶದಪಡಿಸಿದೆ.

ಹಿಂದೆ ಹೇಳಿದಂತೆ ಬ್ರಾಹ್ಮಣರು ಮೊದಲು ಪಂಚಮರವರಿವಿಗೂ ಇರುವ ಐದು ಜಾತಿಯಲ್ಲಿರುವ ಸ್ತ್ರೀಪುರುಷರು, ತಾವು ಆತ್ಮಧ್ಯಾನವನ್ನು

ಮಾಡಿ, ಆತ್ಮನನ್ನು ದರ್ಶಿಸಿ, ಆನಂದಾನುಭವವನ್ನು ಪಡೆಯಬೇಕೆಂಬ ಉದ್ದೇಶದಿಂದ, ಒಂದು ನಿಶ್ಶಬ್ದವಾದ ಕೋಣೆಯನ್ನು ಪೂಜಾಗೃಹಕ್ಕಾಗಿ ಆರಿಸಿಕೊಳ್ಳಬೇಕು. ಅನಂತರ ಅಲ್ಲಿ ದಕ್ಷಿಣಾಭಿಮುಖವಾಗಿಟ್ಟ ದೇವತಾ ವಿಗ್ರಹ ಅಥವ ಪಟದ ಮುಂಭಾಗದಲ್ಲಿ ಎರಡಡಿ ಉದ್ದ ಒಂದೂವರೆ ಅಡಿ ಅಗಲ ಮತ್ತು ಒಂದಂಗುಲ ಎತ್ತರವುಳ್ಳ ಒಂದು ಅಲುಗಾಡದಿರುವ ಪೀಠ ವನ್ನು ಹಾಕಿ, ಅದರ ಮೇಲೆ ಕೃಷ್ಣಾಜಿನವನ್ನು ಹಾಸಿ, ಆ ಚರ್ಮದಮೇಲೆ ಅಪಾನವಾಯುವು ಹೋಗಿ ಮುಟ್ಟದಿರುವಂತೆ ಒಂದು ಶುಭ್ರ ವಸ್ತ್ರವನ್ನು ಮಡತೆಹಾಕಿ ಹಾಸಿ, ಅದರ ಮೇಲೆ ಜಪಮಾಡುವವರು ಉತ್ತರಾಭಿಮುಖ ವಾಗಿ ಕುಳಿತು, ತಮ್ಮ ಉಪಾಸನಾವಿಗ್ರಹವನ್ನು ಕುರಿತು ಧ್ಯಾನ, ಅರ್ಚನೆ, ತಪ, ಜಪ ಅಥವಾ ಮಂತ್ರಪಠನೆ ಇವೇ ಮೊದಲಾದುವುಗಳನ್ನು ನಿಶ್ಚಲ ವಾದ ಮನಸ್ಸಿನಿಂದ ಮಾಡುತ್ತಿರಬೇಕು. ಮೇಲೆ ಹೇಳಿದಂತೆ ಆಸನ ವನ್ನು ಕಲ್ಪಿಸಿಕೊಳ್ಳಬೇಕೇ ಹೊರತು, ಜಿಂಕೆಯಚರ್ಮವಿಲ್ಲದ ಬರಿಯ ಮಣೆಯಮೇಲೆ ಕುಳಿತಾಗಲಿ, ಇಲ್ಲವೇ ಬರೀ ನೆಲದಮೇಲೆ ಬಟ್ಟೆಯ ಮಡತೆ ಯನ್ನು ಹಾಸಿ ಅದರಮೇಲೆ ಕುಳಿತಾಗಲಿ, ಯಾವ ಪೂಜೆ ಜಪತಪಗಳನ್ನೂ ಮಾಡಬಾರದು. ಹೀಗೆ 'ಜಪತಪಗಳಿಗೆ ಕೃಷ್ಣಾಜಿನದ ಪೀಠವು ಆತ್ಯ ವಶ್ಯಕವು ಹೇಗೆ'ಂಬ ರಹಸ್ಯವನ್ನು ಈ ಕೆಳಗೆ ವಿವರಿಸಿದೆ.

ಜಿಂಕೆಯಚರ್ಮದ ಮೇಲೆಯೇ ಕುಳಿತು ಜಪವನ್ನು ಮಾಡಬೇ ಕೆಂದು ಶ್ರೀ ಕೃಷ್ಣಪರಮಾತ್ಮನು ಅನೇಕಸಾರಿ ಒತ್ತಿ ಹೇಳಿದ್ದಾನೆ. ಹೀಗೆ ಮಾಡಬೇಕೆಂದು ಹೇಳಿದನೇ ಹೊರತು, ಏತಕ್ಕೆ ಹೀಗೆ ಮಾಡಬೇಕೆಂಬ ವಿಷಯವನ್ನು ಮಟ್ಟಿಗೆ ತಿಳಿಯಪಡಿಸಿಲ್ಲ. ಹಾಗೆ ಹೇಳದಿರುವುದಕ್ಕೆ ಕಾರಣ ವೇನೆಂದರೆ, 'ಇದು ಗುರು ರಹಸ್ಯವು; ಇದನ್ನು ಸದ್ಗುರುವಿನಿಂದಲೇ ಪಡೆಯಬೇಕಾದುದು.' ಎಂಬ ಅಭಿಪ್ರಾಯದಿಂದಲೇ ಅದನ್ನು ವಿಶದಪಡಿ ಸಿಲ್ಲ. ಆದುದರಿಂದ ಈ ರಹಸ್ಯವನ್ನು ಈ ಕೆಳಗೆ ನಾವು ತಿಳಿಸಿರುತ್ತೇವೆ.

ಮೇಲೆ ಹೇಳಿದ ಪೂಜೆ, ಜಪ, ತಪ ಮೊದಲಾದುವುಗಳನ್ನು ಮಾಡು ವುದಕ್ಕಾಗಿ ಬರಿಯ ಮಣೆಯಮೇಲಾಗಲಿ, ನೆಲದಮೇಲೆ ಇಲ್ಲವೇ ಬಟ್ಟೆಯ ಮಡತೆಯನ್ನು ಹಾಕಿಕೊಂಡಾಗಲಿ ಕುಳಿತದ್ದೇ ಆದರೆ ಆ ಜಪತಪಾದಿಗಳ

ಫಲವೆಲ್ಲವನ್ನೂ, ಭೂಮಿಯು ಸೂಜಿಗಲ್ಲು (magnet) ಸೂಜಿಯನ್ನು ತನ್ನ ಕಡೆಗೇ ಸೆಳೆಯುವಂತೆ, ತನ್ನ ಕಡೆಗೆ ಮೆಲ್ಲಮೆಲ್ಲಗೆ ಎಳೆಯುತ್ತಿರುತ್ತದೆ ಯಾದುದರಿಂದ ಆ ಕರ್ಮಗಳ ಫಲವು ಕರ್ತನಿಗೆ ಸಂಪೂರ್ಣವಾಗಿ ಸಲ್ಲುವುದಿಲ್ಲ. ಆದರೆ ಜಿಂಕೆಯ ಚರ್ಮವನ್ನು ಹಾಕಿ ಕುಳಿತದ್ದೇ ಆದರೆ, ಭೂಮಿಗೆ ಆ ಆಕರ್ಷಣಶಕ್ತಿಯು ಇಲ್ಲದೆ ಹೋಗಿ ಆ ಕರ್ಮಗಳ ಸಂಪೂರ್ಣ ಫಲವನ್ನು ಕರ್ತನೇ ಅನುಭವಿಸುತ್ತಾನೆ. ಈ ಮಾತು ಸತ್ಯ. ಆದುದರಿಂದಲೇ ಕೃಷ್ಣಾಜಿನವು ಧ್ಯಾನಮಾಡುವವನ ಆಸನಕ್ಕೆ ಮುಖ್ಯವಾದ ಸಲಕರಣೆ.

ಪುರುಷರು ಮಾತ್ರಕ್ಕೆ ಕೃಷ್ಣಾಜಿನದಮೇಲೆ ಕುಳಿತು ಜಪಮಾಡಬಹುದೆಂದೂ, ಸ್ತ್ರೀಯರಿಗೆ ಅಧಿಕಾರವಿಲ್ಲವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಈ ಅಭಿಪ್ರಾಯವು ತಪ್ಪು. ಸ್ತ್ರೀಯರು ತಾವು ಬಹಿಷ್ಠೆಯರಾದಮೇಲೆ ಮೂರು ದಿನಗಳು ಮಾತ್ರ ಜಿಂಕೆಯಚರ್ಮದಮೇಲೆ ಕೂಡಲು ಅರ್ಹರಾಗರು. ಆದರೆ ನಾಲ್ಕನೆಯದಿನ ಅಭ್ಯಂಗನಸ್ನಾನಾದಿಗಳಿಂದ ಶುದ್ಧಿಹೊಂದಿದಮೇಲೆ ಮಡಿಬಟ್ಟೆಯನ್ನುಟ್ಟು ಜಿಂಕೆಯ ಚರ್ಮವನ್ನು ಆಸನವನ್ನಾಗಿ ಮಾಡಿಕೊಂಡು ಪೂಜೆ, ಧ್ಯಾನ ಮೊದಲಾದುವುಗಳನ್ನು ಮಾಡಬಹುದು. ಇದೇ ರೀತಿಯಾಗಿ ಪುನಃ ಅವರಿಗೆ ಋತುಕಾಲಗಳು ಬರುವವರಿವಿಗೂ ಕೃಷ್ಣಾಜಿನವನ್ನು ಅವರು ಉಪಯೋಗಿಸುವುದರಲ್ಲಿ ಅಭ್ಯಂತರವಿಲ್ಲ. ಜನಗಳು ತಮ್ಮ ಕರ್ಮಾನುಸಾರವಾಗಿ ಸ್ತ್ರೀಪುರುಷ ಜನ್ಮಗಳನ್ನು ಪಡೆಯುತ್ತಾರೆಯೇ ಹೊರತು, 'ಪುರುಷರು ಮಾತ್ರಕ್ಕೆ ಕೃಷ್ಣಾಜಿನವನ್ನು ಉಪಯೋಗಿಸಬಹುದು, ಸ್ತ್ರೀಯರು ಅದರಮೇಲೆ ಕುಳಿತುಕೊಳ್ಳಲು ಅರ್ಹರಲ್ಲ' ವೆಂದು ಯಾವ ಶಾಸ್ತ್ರದಲ್ಲಿಯೂ ಹೇಳಿಲ್ಲವು. ಪುರುಷನು ಕರ್ಮಾನುಬಂಧದಿಂದ ಸ್ತ್ರೀಯಾಗಿಯೂ ಸ್ತ್ರೀಯರು ಪುರುಷರಾಗಿಯೂ ಹುಟ್ಟುವ ಸಂಭವವಿದೆ, ಎಂಬುದಕ್ಕೆ ಶಾಸ್ತ್ರಪ್ರಮಾಣಗಳುಂಟು. ಹೀಗಿರಲು, ಸ್ತ್ರೀಪುರುಷರಿಗೆ ಭೇದವನ್ನೇಕೆಣಿಸಬೇಕು. ಜೀವನು ವಾಯುರೂಪದಿಂದ ಬೇರೆಬೇರೆ ವಿಧವಾದ ಶರೀರಗಳನ್ನು ಪ್ರವೇಶಿಸಿ ತನ್ಮುಖೇನ ಬೇರೆಬೇರೆ ಕಾರ್ಯಗಳನ್ನು ಮಾಡುತ್ತಿರುತ್ತಾನೆ. ವಾಯುರೂಪದಲ್ಲಿರುವ ಆ ಜೀವನಿಗೆ ಪುರುಷರೂಪ ಅಥವಾ ಸ್ತ್ರೀರೂಪವೆಂಬ ಭೇದವೇ ಇಲ್ಲ.

ಒಬ್ಬ ಸ್ತ್ರೀಯು ತನ್ನ ಮರಣಸಮಯದಲ್ಲಿ ಒಬ್ಬ ಪುರುಷನ ರೂಪವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಪ್ರಾಣ ಬಿಟ್ಟರೆ, ಆಕೆಯು ಪುರುಷರೂಪವನ್ನು ಮುಂದಿನ ಜನ್ಮದಲ್ಲಿ ಪಡೆಯುತ್ತಾಳೆ. ಇದೇ ರೀತಿಯಲ್ಲಿ ಪುರುಷನು ಸ್ತ್ರೀ ರೂಪವನ್ನು ಮನಸ್ಸಿನಲ್ಲೆಣಿಸಿ ಪ್ರಾಣ ಬಿಟ್ಟದ್ದೇ ಆದರೆ, ಅವನು ಮುಂದಿನ ಜನ್ಮದಲ್ಲಿ ಸ್ತ್ರೀಯಾಗಿ ಜನಿಸುತ್ತಾನೆ. ಈ ವಿಷಯವನ್ನು ಹಿಂದೆಯೇ ವಿವರಿಸಿದೆ. ಹೀಗಿರಲು, ಸ್ತ್ರೀಯಾರು? ಪುರುಷನಾರು? ಆದುದರಿಂದ ಜಪ ತಪಾದಿ ಕರ್ಮಗಳನ್ನು ಮಾಡುವುದಕ್ಕೆ ಸ್ತ್ರೀಪುರುಷರೆಂಬ ಭೇದಗಳನ್ನು ಎಂದಿಗೂ ಮಾಡಬಾರದು. ಈ ವಿಷಯದಲ್ಲಿ ಪುರುಷನಿಗಿರುವ ಸ್ವಾತಂತ್ರ್ಯವು ಸ್ತ್ರೀಗೂ ಇದ್ದೇ ಇದೆ, ಎಂದು ತಿಳಿಯಬೇಕು.

ಜಿಂಕೆಯ ಚರ್ಮದಮೇಲೆ ಕುಳಿತುಕೊಂಡು ಜಪಮಾಡಬೇಕಾದ ಉದ್ದೇಶವೇನೆಂದರೆ ಜಿಂಕೆಯು ಸ್ವಭಾವತಃ ಶಾಂತಿಗುಣವುಳ್ಳದ್ದಾಗಿಯೂ ಮತ್ತು ಬಹಳ ಅಂಜಿಕೆಯುಳ್ಳದ್ದಾಗಿಯೂ ಇರುವ ಪ್ರಾಣಿ. ಇದು ಇತರರಿಗೆ ಕೇಡನ್ನು ಮಾಡದುದಾಗಿಯೂ, ಸ್ತ್ರೀಪುರುಷರನ್ನು ನೋಡಿದ ಕೂಡಲೇ ಕಾಲಿಗೆ ಬುದ್ಧಿ ಹೇಳುವ ಪ್ರಾಣಿಯಾಗಿಯೂ ಇರುವುದರಿಂದ, ಇಂತಹ ಗುಣಗಳುಳ್ಳ ಪ್ರಾಣಿಯ ಚರ್ಮದಮೇಲೆ ಕುಳಿತು ಜಪಮಾಡಿದಲ್ಲಿ, ಶಾಂತಿ ಗುಣ, ಪಾಪಭೀತಿ, ಇತರರಿಗೆ ಕೇಡನ್ನು ಬಯಸದಿರುವಿಕೆ ಮೊದಲಾದ ಗುಣಗಳು ಜಪಮಾಡುವವನಿಗೆ ಉಂಟಾಗುತ್ತವೆ. ಈ ಗುಣಗಳು ಮನಸ್ಸನ್ನು ನಿರ್ಮಲವಮಾಡುವುದಕ್ಕೆ ಸಹಕಾರಿಗಳು. ಇಂತಹ ನಿರ್ಮಲವಾದ ಮನಸ್ಸು ಧ್ಯಾನಜಪಾದಿಗಳಿಗೆ ಅತ್ಯವಶ್ಯಕ. ಆದುದರಿಂದ 'ಜಿಂಕೆಯ ಚರ್ಮದ'ಮೇಲೆ ಕುಳಿತು ಜಪಮಾಡಬೇಕೆಂದು ಕೃಷ್ಣ ಪರಮಾತ್ಮನು ಹೇಳಿದ್ದಾನೆಯೇ ಹೊರತು, ಅದಕ್ಕೆ ಬದಲು 'ದುಪ್ಪಿಯಚರ್ಮ'ವನ್ನು ಪ್ರಯೋಗಿಸಬೇಕೆಂದು ಹೇಳಲಿಲ್ಲ. ಜಿಂಕೆ ಮತ್ತು ದುಪ್ಪಿ ಇವೆರಡೂ ಸಾಧಾರಣವಾಗಿ ಒಂದೇ ಜಾತಿಗೆ ಸೇರಿದವೇ ಆದರೂ, ಜಿಂಕೆಯಲ್ಲಿರುವ ಒಳ್ಳೆಯ ಗುಣಗಳು ದುಪ್ಪಿಯಲ್ಲಿಲ್ಲ. ದುಪ್ಪಿಯು ಸಮೀಪಿಸಿದವರನ್ನು ತನ್ನ ಕೊಂಬುಗಳಿಂದ ತಿವಿಯುವುದು, ಮತ್ತು ಅದಕ್ಕೆ ರೋಷ ಮೊದಲಾದ ಗುಣಗಳುಂಟು. ಇದಕ್ಕೆ ಜಿಂಕೆಗಿರುವಷ್ಟು ಶಾಂತಿಗುಣವಿಲ್ಲ. ಆದುದರಿಂದ ಜಿಂಕೆಯ ಚರ್ಮವು ಉತ್ತಮವೇ ಹೊರತು ದುಪ್ಪಿಯದಲ್ಲ.

ಇದೇ ರೀತಿಯಲ್ಲಿ ಸ್ವಭಾವತಃ ಕ್ರೂರಿಯಾಗಿ, ಮತ್ತು ಮಾಂಸಹಾರಿಯಾದುದರಿಂದಲೇ ಪ್ರಾಣಹಿಂಸೆಯಲ್ಲಿ ಯಾವಾಗಲೂ ನಿರತವಾಗಿರುವ ಹುಲಿಯ ಚರ್ಮವು, ಮೇಲೆ ಹೇಳಿದ ಜಪತಪಾದಿ ಕಾರ್ಯಗಳಿಗೆ ಯೋಗ್ಯವಲ್ಲ. ಅದರ ಕ್ರೌರ್ಯ, ಘಾತುಕತನ, ಹಿಂಸೆ ಮೊದಲಾದ ದುರ್ಗುಣಗಳು ಜಪಿಸುವವನನ್ನು ಹೊಂದದಿರುವುದಕ್ಕಾಗಿಯೇ ವ್ಯಾಘ್ರಾಸನವು ನಿಷೇಧಿಸಲ್ಪಟ್ಟಿದೆ. ಆದರೆ ಈ ವ್ಯಾಘ್ರಾಸನವನ್ನು ಯಾರು ಉಪಯೋಗಿಸಬಹುದೆಂದರೆ, ತಮ್ಮಲ್ಲಿರುವ ಅಹಂಕಾರ ಮಮಕಾರಗಳನ್ನು ದೂರಮಾಡಿ, ಮತ್ತು ಪಂಚಪ್ರಾಣವಾಯುಗಳ ವೇಗವನ್ನು ಸಂಹರಿಸಿ, ತಮ್ಮ ಮನಸ್ಸನ್ನು ಬಟ್ಟಬಯಲುಸ್ವರೂಪನಾದ ಪರಮಾತ್ಮನಲ್ಲಿ ಐಕ್ಯಮಾಡಿರುವಂಥ ಯೋಗಿಗಳು ಮಾತ್ರ ಅದನ್ನು ತಮ್ಮ ಜಪತಪಾದಿ ಕಾರ್ಯಗಳಿಗೆ ಉಪಯೋಗಿಸಬಹುದೇ ಹೊರತು, ಇತರರಿಗೆ ಅದು ಯೋಗ್ಯವಲ್ಲ. ಹುಲಿ, ಸಿಹ್ಮ, ಆನೆ ಮೊದಲಾದ ಪ್ರಾಣಿಗಳು ತಪೋಧನರಾದ ಮಹರ್ಷಿಗಳ ತಪೋಮಹಿಮೆಯಿಂದ 'ಅನಿಗ್ರಹತ್ರಾಸವಿನೀತಸತ್ವಂ' ಎಂಬಂತೆ ಶಿಕ್ಷಾಭಯವಿಲ್ಲದೆಯೇ ಸಾಧುವಾಗಿ ಅವರಿಗೆ ತೊಂದರೆ ಕೊಡದೆ ಇರುವುದರಿಂದ ಅಂಥವರು ಆ ಕ್ರೂರಮೃಗಚರ್ಮಗಳನ್ನು ಉಪಯೋಗಿಸಬಹುದು.

'ಜಿಂಕೆಯನ್ನು ಕೊಂದು ಅದರ ಚರ್ಮವನ್ನು ಆಸನಕ್ಕಾಗಿ ಉಪಯೋಗಿಸಿಕೊಳ್ಳುವುದು ಪಾಪಕಾರ್ಯವಲ್ಲವೇ?' ಎಂದು ಕೆಲವರು ಕೇಳಬಹುದು. ಆದರೆ ಈ ಚರ್ಮಗಳನ್ನು ತಮ್ಮ ಧ್ಯಾನಾದಿಕರ್ಮಗಳಿಗಾಗಿ ಪಡೆಯಬೇಕೆಂಬ ಉದ್ದೇಶದಿಂದ ಜನಗಳು ಅವುಗಳನ್ನು ಕೊಲ್ಲುತ್ತಿಲ್ಲ. ಮಾಂಸಾಹಾರಿಗಳಾದ ಕೆಲವರು, ಜಿಂಕೆಯ ಮಾಂಸದ ಸವಿಗೆ ಆಸೆಪಟ್ಟು ಬೇಟೆಯಾಡಿ ಅದನ್ನು ಕೊಂದು, ಮಾಂಸವನ್ನು ತಿಂದು ಚರ್ಮವನ್ನು ಮಾರುತ್ತಿದ್ದಾರೆ. ಯೋಗಿಗಳು ಇದನ್ನು ನೋಡಿ ಆ ಪ್ರಾಣಿಯಲ್ಲಿರುವ ಶಾಂತಿ ಮೊದಲಾದ ಗುಣಗಳಿಗಾಗಿ ಕನಿಕರಪಟ್ಟು, ಆ ಪ್ರಾಣಿಗಳ ಶಾಂತಿ ಗುಣವನ್ನು ಸ್ಪರ್ಶಮಾಡುವುದರ ಮೂಲಕ ತಾವು ಪಡೆಯಬೇಕೆಂದು ಉದ್ದೇಶಿಸಿ, ಆ ಚರ್ಮಗಳನ್ನು ಕೊಂಡು ತಮ್ಮ ಕರ್ಮಗಳಿಗೆ ಉಪಯೋಗಿಸುವರೇ ಹೊರತು, ಯಾವವಿಧವಾದ ಪಾಪ ಬುದ್ಧಿಯಿಂದಲೂ ಅಲ್ಲ. ಕೊಲ್ಲಲ್ಪಟ್ಟ ಜಿಂಕೆಗಳಲ್ಲಿ ಹೆಚ್ಚು ಪುಣ್ಯಮಾಡಿದುದರ ಚರ್ಮವು

ಮಾತ್ರ ಯೋಗಿಗಳ ಆಸನಕ್ಕಾಗಿ ಉಪಯೋಗಿಸಲ್ಪಡುತ್ತದೆಯೇ ಹೊರತು, ಉಳಿದವುಗಳು ಈ ಸತ್ಕರ್ಮಗಳ ಉಪಯೋಗಕ್ಕೆ ಬರದು. ಪುಣ್ಯ ಮಾಡಿದ ಜಿಂಕೆಯ ಚರ್ಮದಮೇಲೆ ಕುಳಿತು ಯೋಗಿಗಳು ಜಪಮಾಡಿದ್ದೇ ಆದರೆ, ಆ ಯೋಗಿಗಳ ಪುಣ್ಯದಲ್ಲಿ ಸ್ವಲ್ಪಭಾಗವು ಜಿಂಕೆಯ ದೇಹದಲ್ಲಿದ್ದ ಜೀವನಿಗೆ ಸೇರಿ, ಆ ಜೀವನಿಗೆ ಮುಂದೆ ಉತ್ತಮವಾದ ಜನ್ಮವನ್ನುಂಟುಮಾಡುವುದಕ್ಕೆ ಸಹಕಾರಿಯಾಗುತ್ತದೆ. ಹಾಗಿಲ್ಲದೆ ಪಾಪ ಮಾಡಿದ ಜಿಂಕೆಯ ಚರ್ಮಗಳು, ಪಾದರಕ್ಷೆಗಳು, ಪೆಟ್ಟಿಗೆ, ಚೀಲ ಮೊದಲಾದುವುಗಳನ್ನು ಮಾಡುವುದಕ್ಕೂ, ಪಾಮರ ಜನಗಳು ಕೂಡುವುದಕ್ಕೂ, ಕಾಲೊರಸುವುದಕ್ಕೂ, ಓಡಾಡುವುದಕ್ಕೂ, ಮತ್ತು ಹಿಟ್ಟು ಬೀಸುವುದಕ್ಕಾಗಿ ರಾಗಿಯ ಕಲ್ಲಿನ ಕೆಳಕ್ಕೂ ಉಪಯೋಗಿಸಲ್ಪಡುತ್ತವೆ. ಆದುದರಿಂದ ಪುಣ್ಯಮಾಡಿದ ಜಿಂಕೆಯ ಚರ್ಮಗಳು ತಮ್ಮ ಜನ್ಮವು ಸಾರ್ಥಕ ಹೊಂದುವುದಕ್ಕಾಗಿಯೇ, ಯೋಗಿಗಳ, ಜ್ಞಾನಿಗಳ ಮತ್ತು ತಪಸ್ವಿಗಳ ಸಮೀಪವನ್ನು ಹೊಂದುತ್ತವೆಯೇ ಹೊರತು, ಉಳಿದವುಗಳಿಗೆ ಇಂತಹ ಸ್ಥಳಗಳಲ್ಲಿ ಅವಕಾಶ ದೊರೆಯಲಾರದು. ಪಾಪಿಗಳಾದ ಮೃಗಗಳ ಚರ್ಮಗಳು ಕೆಲಸಕ್ಕೆ ಬಾರದ ವಿಷಯಗಳಲ್ಲಿ ಉಪಯೋಗಿಸಲ್ಪಡುತ್ತವೆ. ಒಟ್ಟಿನಲ್ಲಿ ಸತ್ಕರ್ಮಗಳಿಗೆ ಅಂದರೆ ಜಪ, ತಪ, ಧ್ಯಾನ, ಅರ್ಚನೆ ಮೊದಲಾದುವುಗಳಿಗೆ ಉಪಯೋಗಿಸಲ್ಪಡುವ ಜಿಂಕೆಯ ಚರ್ಮವು ಅತಿ ಪುಣ್ಯವನ್ನು ಮಾಡಿದ ಜೀವಿಯದು. ಮತ್ತು ಜಿಂಕೆಗೆ ಸ್ವಭಾವತಃ ಇದ್ದ ಗುಣಗಳು ಅದರ ಮೇಲೆ ಕುಳಿತು ಜಪಮಾಡುವವನಿಗೆ ಸಲ್ಲುತ್ತವೆ. ಆದುದರಿಂದ ಅಂತಹ ಜಿಂಕೆಯ ಚರ್ಮವು ಮುಖ್ಯವು, ಎಂಬ ಈ ರಹಸ್ಯವನ್ನು ವಿಸ್ತಾರಪಡಿಸಿದ್ದಾಯಿತು. ಇನ್ನು ಹಸುವಿನ ತುಪ್ಪದ ದೀವಿಗೆಯನ್ನು ಏತಕ್ಕೆ ಪೂಜಾಗೃಹದಲ್ಲಿ ಹೊತ್ತಿಸಬೇಕು? ಎಂಬ ರಹಸ್ಯ ವಿಷಯವನ್ನು ಈ ಮುಂದಿನ ಪ್ರಕರಣದಲ್ಲಿ ಸ್ಪಷ್ಟಪಡಿಸಲಾಗಿದೆ.



# ಹಸುವಿನ ತುಪ್ಪದ ದೀವಿಗೆಯನ್ನು ಹೊತ್ತಿಸುವದರಿಂದುಂಟಾಗುವ ಫಲಗಳು.

---

**ಅಯ್ಯಾ !**

ಗೋವಿನ ತುಪ್ಪದ ದೀಪವನ್ನು ಪೂಜಾಗೃಹದಲ್ಲಿ ಹೊತ್ತಿಸಬೇಕೆಂದು ಹಿಂದೆಯೇ ಹೇಳಿದೆ. ಈ ದೀಪವನ್ನು ಹಚ್ಚಿಸಬೇಕಾದ ರಹಸ್ಯವನ್ನು ಈ ಕೆಳಗೆ ವಿವರಿಸಿದೆ.

ನಮ್ಮ ಪೂರ್ವಿಕರಾದ ಪೂಜ್ಯರು, ದೇವರ ಮನೆಯಲ್ಲಿ ಹಸುವಿನ ತುಪ್ಪದ ದೀಪವನ್ನು ಹೊತ್ತಿಸಬೇಕೆಂದು ಹೇಳಿದರೇ ಹೊರತು, ಅದರ ಕಾರಣವನ್ನು ಮಟ್ಟಿಗೆ ಅವರು ಹೇಳಿಲ್ಲ. ಈಗ ಉಪಯೋಗದಲ್ಲಿರುವ 'ಸೀಮೆಯೆಣ್ಣೆಯ' (Kerosine oil) ವಿಷಯವನ್ನು ಮೊದಲು ತಿಳಿಸಿ, ಅನಂತರ ಗೋವಿನ ತುಪ್ಪದ ವಿಷಯವನ್ನು ತಿಳಿಸುತ್ತೇವೆ. ಅನೇಕರ ಮನೆಯಲ್ಲಿ ಒಂದು ಬುಡ್ಡಿಗೆ ಸ್ವಲ್ಪ ಸೀಮೆಯೆಣ್ಣೆಯನ್ನು ಹಾಕಿ, ಆ ದೀಪವನ್ನು ರಾತ್ರಿಯ ಹೊತ್ತು ಹೊತ್ತಿಸಿ ಹಾಗೆಯೇ ನಿದ್ರೆ ಹೋಗುವರು. ಹೀಗೆ ಮಾಡಿದ್ದರಿಂದ ಆ ದೀಪದ ಹೊಗೆಯು ಮನೆಯೊಳಗಿರುವ ವಾಯುವಿನಲ್ಲಿ ಕಲೆತು, ಅದನ್ನು ಅಶುದ್ಧಿಮಾಡುತ್ತದೆ. ಮಲಗಿ ನಿದ್ರಿಸುವವರು ಹೊಗೆಗೂಡಿದ ಈ ವಾಯುವನ್ನು ಸೇವಿಸುತ್ತಿರುವುದರಿಂದ ಅವರ ಮೂಗಿನ ಹೊಳ್ಳೆಗಳು, ಬಾಯಿ, ಕಣ್ಣು ಮೊದಲಾದ ಸ್ಥಳಗಳಲ್ಲಿ ಆ ಧೂಮದ ಕಪ್ಪಾದ ಕಣಗಳು ನಿಂತು ಬಹಳ ಅನರ್ಥವನ್ನುಂಟುಮಾಡುತ್ತವೆ. ಈ ಅಶುದ್ಧ ವಾಯುವನ್ನು ಮೂಗಿನ ಹೊಳ್ಳೆಗಳ ಮೂಲಕ ಶ್ವಾಸಕೋಶಗಳೊಳಕ್ಕೆ ಎಳೆದಾಗ, ಕೆಲವು ಈ ಇಂಗಾಲದ ಕಣಗಳು ಅಲ್ಲೇನಿಂತು ಅನೇಕ ರೋಗಗಳನ್ನು ಉಂಟುಮಾಡುತ್ತವೆ. ಈ ದೀಪಗಳು ಕಣ್ಣಿಗೆ

ತಂಪನ್ನುಂಟುಮಾಡುವುದಕ್ಕೆ ಬದಲು ಕಣ್ಣಿಗೆ ಉರಿಯನ್ನು ತರುತ್ತವೆ. ಬೆಳಿಗ್ಗೆ ಎದ್ದು ಉಗುಳಿದರೆ ಎಂಜಲಿನೊಡನೆ ಈ ಧೂಮದ ಕಪ್ಪನ್ನು ಕಾಣ ಬಹುದು. ಮೂಗಿನೊಳಕ್ಕೆ ಬಟ್ಟೆಯನ್ನಿಟ್ಟು ತಿರುವಿದರೆ ಈ ಇಂಗಾಲದ ತೆಂಡೆತೆಂಡೆಯು ಈಚೆಗೆ ಬರುತ್ತದೆ. ಹೀಗಿರಲು ದೇಹಾರೋಗ್ಯಕ್ಕೆ ಇದು ಬಹಳ ಕೆಡುಕನ್ನುಂಟುಮಾಡುತ್ತದೆಂದು ಬೇರೆ ಹೇಳಬೇಕಾದುದೇ ಇಲ್ಲ. ಮಕ್ಕಳಿಗೆ ಇದರಿಂದ ಬಹಳ ಕೆಡುಕುಂಟು. ಆದುದರಿಂದ ಈ ತರಹ ದೀಪಗಳನ್ನು ಹೊತ್ತಿಸಿಟ್ಟು ನಿದ್ರಿಸಬಾರದೆಂದು ಇದನ್ನು ಓದಿದ ಸ್ತ್ರೀಪುರು ಷರು ತಿಳಿಯಬೇಕಾದ ಮುಖ್ಯವಿಷಯ.

ಹಸುವಿನ ತುಪ್ಪದ ದೀಪದ ಹೊಗೆಯು ಸೀಮೆಯೆಣ್ಣೆಯ ದೀಪದ ಹೊಗೆಯಂತಲ್ಲ. ಅದು ಆರೋಗ್ಯವನ್ನುಂಟುಮಾಡುತ್ತದೆ. ಆ ತುಪ್ಪದ ದೀಪದ ರಹಸ್ಯವನ್ನು ಈ ಮುಂದೆ ತಿಳಿಸಿದೆ. ಹಿಂದೆ ಹೇಳಿದಂತೆ ಪೂಜೆಯ ಕೋಣೆಯಲ್ಲಿ ಕುಳಿತುಕೊಂಡು ಹಸುವಿನ ದೀಪವನ್ನು ಹೊತ್ತಿಸಿ ಧ್ಯಾನಕ್ಕೆ ಕುಳಿತಿದ್ದೇ ಆದರೆ, ಆ ತುಪ್ಪದ ದೀಪದ ಹೊಗೆಯು ಮೂಗಿನ ಹೊಳ್ಳೆಗಳ ಮೂಲಕ ದೇಹದ ಒಳಭಾಗವನ್ನು ಪ್ರವೇಶಿಸಿ, ಅಲ್ಲಿ ನೆಲೆಸಿರುವ ಅನೇಕ ವಿಧವಾದ ರೋಗಗಳನ್ನು ಹೋಗಲಾಡಿಸುವುದಕ್ಕೆ ಸಹಕಾರಿಯಾಗುತ್ತದೆ. ರೋಗಿಗಳು ಹಸುವಿನ ತುಪ್ಪವನ್ನು ಔಷಧಿಗೂ ಮತ್ತು ಭೋಜನಕ್ಕೂ ಉಪಯೋಗಿಸಬಹುದೆಂಬುದು ಎಲ್ಲರಿಗೂ ತಿಳಿದ ವಿಷಯವೇ ಅಲ್ಲವೇ? ಇದೇ ರೀತಿಯಲ್ಲಿ ಹಸುವಿನ ತುಪ್ಪದಿಂದ ಹೊರಟ ಧೂಮವು ವಾಯುವಿ ನೊಡನೆ ಬೆರೆತು, ಉಚ್ಛ್ವಾಸದಿಂದ ದೇಹದೊಳಕ್ಕೆ ಪ್ರವೇಶಿಸಿ, ರೋಗವಿದ್ದ ವರ ರೋಗವನ್ನು ಹೋಗಲಾಡಿಸುವುದಕ್ಕೂ, ರೋಗವಿಲ್ಲದವ ರಿಗೆ ರೋಗ ಬರದಂತೆ ಮಾಡುವುದಕ್ಕೂ ತುಂಬಾ ಸಹಕಾರಿಯಾಗಿದೆ ಯೆಂದು ಹೇಳಬೇಕಾದುದೇ ಇಲ್ಲ. ಪೂಜಾಗೃಹದಲ್ಲಿ ಹೊತ್ತಿಸಿಟ್ಟ ತುಪ್ಪದ ದೀಪದಿಂದ ಹೊರಟ ಧೂಮವು, ಅಲ್ಲಿ ಪೂಜೆ ಮಾಡುತ್ತಿರುವವನ ಹೃದಯ ವನ್ನು ಪ್ರವೇಶಿಸಿ ಅವನಲ್ಲಿರುವ ಮನಃಕಲ್ಮಷಗಳನ್ನೂ, ಶರೀರದ ರೋಗ ರುಜಿನಾದಿಗಳನ್ನೂ ನಿರ್ಮೂಲಮಾಡಿ, ಅವನಿಗೆ ಶಾಂತಿಯನ್ನುಂಟುಮಾಡು ವುದಕ್ಕಾಗಿ ಈ ದೀಪವನ್ನು ಹೊತ್ತಿಸಬೇಕೆಂದು ದೊಡ್ಡವರು ಹೇಳಿರುವರೇ ಹೊರತು, ಈ ದೀಪವು ಅಲ್ಲಿರುವ ದೇವತಾವಿಗ್ರಹಗಳಿಗಲ್ಲ. ಅಲ್ಲಿರುವ

ವಿಗ್ರಹ, ಚಿತ್ರಪಟ ಮೊದಲಾದುವುಗಳು ಪ್ರಾಣವಿಲ್ಲದಿರುವವುಗಳು. ಅವುಗಳಿಗೆ ಹಸುವಿನ ತುಪ್ಪದ ದೀಪದ ಹೊಗೆಯಿಂದ ಯಾವಬಗೆಯ ಉಪಯೋಗವೂ ಇಲ್ಲ. ವಿಗ್ರಹದ ಎದುರುಭಾಗದಲ್ಲಿ ಕುಳಿತು ಅರ್ಚಿಸುತ್ತಿರುವವರು ಆ ದೀಪದ ಹೊಗೆಯನ್ನು ವಾಯುವಿನೊಡನೆ ಒಳಕ್ಕೆ ಎಳೆಯುತ್ತಿರುತ್ತಾರೆ. ಪೂಜೆಯನ್ನು ಮಾಡುವವರು ಸದಾ ಆರೋಗ್ಯವುಳ್ಳವರಾಗಿರಬೇಕೆಂಬ ಉದ್ದೇಶದಿಂದಲೇ ಈ ದೀಪವನ್ನು ಅಲ್ಲಿ ಹೊತ್ತಿಸಬೇಕೆಂಬ ಏರ್ಪಾಟನ್ನು ಹಿರಿಯರು ಮಾಡಿದರು. ಹಿಂದೆ ಹೇಳಿದಂತೆ ಈ ತುಪ್ಪದ ದೀಪದ ಹೊಗೆಯು ಜೊತೆಗೆ, ಸುವಾಸನೆಯುಳ್ಳ ಸಾಂಬ್ರಾಣಿ, ಧೂಪ, ಪರಿಮಳವಾದ ಪುಷ್ಪಗಳು ಇವುಗಳನ್ನು ಆ ಪೂಜೆಯ ಕೋಣೆಯಲ್ಲಿ ತಂದು ಸಿದ್ಧಪಡಿಸಬೇಕು. ಆಗಲೇ ಎಲ್ಲಾ ವಾಸನೆಗಳೂ ಒಟ್ಟಿಗೆ ಸೇರಿ, ಆ ಕೋಣೆಯಲ್ಲಿರುವ ವಾಯುವನ್ನು ಬಹಳ ಪರಿಮಳವುಳ್ಳದ್ದನ್ನಾಗಿ ಮಾಡುವುವು. ಇಂತಹ ಸುಖಸನ್ನಿವೇಶದಲ್ಲಿ ಕುಳಿತು ಧ್ಯಾನಮಾಡುವ ಸ್ತ್ರೀ ಪುರುಷರ ಮನಸ್ಸು ಬಹಳ ಆನಂದದಿಂದ ತುಂಬಿ ತುಳುಕಾಡುತ್ತಿರುತ್ತದೆ. ಸುವಾಸನೆಯ ಸುಖವನ್ನನ್ನುಭವಿಸುತ್ತ ಆನಂದವನ್ನು ಹೊಂದುತ್ತಿದ್ದರೆ, ಪರಮಾತ್ಮನಲ್ಲಿ ಅವರ ಮನಸ್ಸು ಹೋಗಿ ಸೇರುವುದಕ್ಕೆ ಸರಿಯಾದ ಮಾರ್ಗವಾಗುತ್ತದೆ. ಈ ರೀತಿಯಾದ ಸುಖಸನ್ನಿವೇಶಗಳನ್ನು ಬಿಟ್ಟು, ಪೂಜಾಗೃಹದಿಂದ ಜಪತಪಮಾಡುವವರು ಈಚೆಗೆ ಬರುವುದಕ್ಕೇ ಇಚ್ಛೆಪಡರು. ಈ ಗ್ರಂಥಕರ್ತರು ತಾವು ಇಂತಹ ಪೂಜಾ ಸಲಕರಣೆಗಳಿಂದ ತುಂಬಿದ ದೇವ ಗೃಹದಲ್ಲಿ ತಮ್ಮ ಬಾಲ್ಯದೆಶೆಯಲ್ಲಿ ಅನುಭವಿಸಿದ ಸುಖಪನುಭವವನ್ನು ಇತರರ ತಿಳುವಿಗಾಗಿ ಇಲ್ಲಿ ಹೊರಪಡಿಸಿರುತ್ತಾರೆ. ಸಾವಿರ ವೇತಕ್ಕೆ? ಮೇಲೆ ಹೇಳಿದಂಥ ಪೂಜಾಗೃಹದಲ್ಲಿ ಕುಳಿತು ಒಂದು ವಾರವಾದರೂ ಕಣ್ಣನ್ನು ಮುಚ್ಚಿ ನಿಮ್ಮ ಮನಸ್ಸನ್ನು ಉಪಾಸನಾಮೂರ್ತಿಯ ನಾಸಿಕಾಗ್ರದಲ್ಲಿ ಮನೋಚಕ್ಷುಸ್ಸಿನಿಂದ ನೋಡುತ್ತ ಆತ್ಮಧ್ಯಾನವನ್ನು ಮಾಡುತ್ತ ಬಂದರೆ, ಒಂದು ವಾರದೊಳಗಾಗಿ ಮೇಲೆ ಹೇಳಿದ ಸುಖಾನುಭವದ ಪರಿಚಯವು ನಿಮಗೇ ಉಂಟಾಗುತ್ತದೆ. ಅಂದರೆ ಸುವಾಸನೆಯಿಂದ ಕೂಡಿದ ಪೂಜೆಯ ಕೊಠಡಿಯಲ್ಲಿ ಒಂಟಿಯಾಗಿ ಕುಳಿತು, ದೇವತಾವಿಗ್ರಹದ ಮೂಗಿನ ಕೊನೆಯನ್ನು ಜ್ಞಾನದೃಷ್ಟಿಯ ಲಕ್ಷ್ಯದಲ್ಲಿಟ್ಟು ಧ್ಯಾನ ಮಾಡುತ್ತ

ಬಂದರೆ, ಮನಸ್ಸು ಬೇರೆ ಸುಖವನ್ನೆಳಸದೆ ಮತ್ತು ಅತ್ತಿತ್ತ ಅಲುಗಾಡದೆ ನಿಶ್ಚಲವಾಗಿ ಶಾಂತಿಯನ್ನು ಹೊಂದಿ, ಆ ಪರಮಾತ್ಮನಲ್ಲಿಯೇ ಲೀನವಾಗಿ ಹೋಗುತ್ತದೆ. ಇದೇ ಜೀವಿಯು ಬಯಸುವ ಪರಮ ಸುಖ. ಇದೇ "ಆತ್ಮದರ್ಶನ."

ಈ ಮೇಲೆ ಹೇಳಿದ ರೀತಿಯಲ್ಲಿ ಪೂಜೆ ಮಾಡುವ ಶ್ರೇಷ್ಠವಾದ ಮಾರ್ಗಗಳು ನಿಮಗೆ ಇದುವರಿವಿಗೆ ಪರಿಚಯವಿಲ್ಲದಿರಬಹುದು. ಆದುದರಿಂದ ಇಲ್ಲಿ ವಿಶದಪಡಿಸಿರುವ ವಿಷಯಗಳನ್ನು ಎಲ್ಲರೂ ಗಮನಿಸತಕ್ಕುದು. ನೀವು ಈಗ ಮಾಡುತ್ತಿರುವ ಪೂಜಾಕ್ರಮವು ಹೇಗಿದೆಯೆಂದರೆ, ದೇವಸ್ಥಾನಗಳಿಗೆ ಹೋಗಿ ಅಲ್ಲಿರುವ ವಿಗ್ರಹಗಳನ್ನು ಈ ಮಾಂಸ ನೇತ್ರಗಳಿಂದ ನೋಡಿ, ಭಕ್ತಿಯಿಂದ ಎರಡು ಕೈಗಳನ್ನು ಜೋಡಿಸಿ ಅವುಗಳಿಗೆ ನಮಸ್ಕರಿಸಿ, ನಿಮ್ಮ ಕುಟುಂಬ ಶ್ರೇಯೋಭಿವೃದ್ಧಿಗೆ ಬೇಕಾದ ವರಗಳನ್ನು ಕೇಳುತ್ತಿದ್ದೀರೇ ಹೊರತು, ನಿಮ್ಮ ಕೋರಿಕೆಗಳು ಈ ಜನ್ಮದಲ್ಲಿಯೇ ಸಲ್ಲುವುದಕ್ಕೆ ಅವಕಾಶವುಂಟಾಗಲಾರದು. ಇದರ ಫಲವು ನೀವು ಮುಂದೆ ಪಡೆಯುವ ಜನ್ಮದಲ್ಲಿ ತಪ್ಪದೆ ನಿಮಗೆ ಲಭಿಸುವುವು. ಜನಗಳು ಈಗ ಅನುಭವಿಸುವ ಸುಖಗಳೆಲ್ಲವೂ ಹಿಂದಿನ ಜನ್ಮದಲ್ಲಿ ತಾವು ಮಾಡಿದ ಸತ್ಕಾರ್ಯಗಳ ಫಲಗಳೇ ಹೊರತು, ಈ ಜನ್ಮದಲ್ಲಿ ತಾವು ಮಾಡಿದ ಕರ್ಮಫಲಗಳಲ್ಲವು. ಹೀಗೆಯೇ ಪ್ರತಿಯೊಬ್ಬ ಜೀವಿಯೂ ಅನುಭವಿಸುವ ಸುಖದುಃಖಗಳೆಲ್ಲವೂ ತಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಫಲಗಳೇ ಹೊರತು, ಈ ಜನ್ಮದ ಕರ್ಮಫಲಗಳಲ್ಲವು, ಈ ಕರ್ಮಫಲಗಳನ್ನು ಅವನು ತನಗೆ ಮುಂದೆ ಲಭಿಸುವ ಜನ್ಮದಲ್ಲಿ ಅನುಭವಿಸುವನು.

'ಆತ್ಮದರ್ಶನಕ್ಕಾಗಿ ಉಪದೇಶಗಳು' ಎಂಬ ಪ್ರಕರಣದಲ್ಲಿ ಉತ್ತರಾಭಿಮುಖವಾಗಿ ಕುಳಿತು ಪೂಜಾ ಧ್ಯಾನಾದಿಗಳನ್ನು ಮಾಡಬೇಕು, ಎಂದು ಹೇಳಿದೆ. ಹಾಗೆ ಹೇಳಲು ಕಾರಣವೇನೆಂದರೆ ಕರ್ಮಗಳಲ್ಲಿ ಕಾಮ್ಯಕರ್ಮವು, ಮತ್ತು ನಿಷ್ಕಾಮ್ಯ ಕರ್ಮವು ಎಂಬಿವೆರಡುಂಟು. ಕಾಮ್ಯ ಕರ್ಮವೆಂದರೆ ಕೋರಿಕೆಗಳನ್ನು ಪಡೆಯುವ ಸಲುವಾಗಿ ಮಾಡುವ ಕರ್ಮಗಳು. ಇಷ್ಟಾರ್ಥಗಳನ್ನು ಪಡೆಯಲುಳ್ಳವರು ಪೂರ್ವಾಭಿಮುಖವಾಗಿ ಕುಳಿತು

ಪೂಜೆ ಮಾಡಬೇಕು. ನಿಷ್ಕಾಮ್ಯ ಕರ್ಮಗಳೆಂದರೆ, ಯಾವ ಕೋರಿಕೆಯೂ ಇಲ್ಲದೆ ಅಂದರೆ ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ನಡೆಸುವ ಸತ್ಕರ್ಮಗಳು. ಮೋಕ್ಷಪ್ರಾಪ್ತಿಯಾಗಬೇಕಾದರೆ ಈ ನಿಷ್ಕಾಮ್ಯ ಕರ್ಮದಿಂದಲ್ಲದೆ ಬೇರಲ್ಲ. ನಿಷ್ಕಾಮ್ಯ ಕರ್ಮಿಗಳಾದ ಮುಮುಕ್ಷುಗಳು ಉತ್ತರಾಭಿಮುಖವಾಗಿ ಕುಳಿತು ಧ್ಯಾನವನ್ನು ಮಾಡಬೇಕು. ಆದುದರಿಂದಲೇ ಮೋಕ್ಷಾಪೇಕ್ಷಿಗಳಾದವರು ಉತ್ತರಾಭಿಮುಖದಿಂದ ಜಪವನ್ನು ಮಾಡಬೇಕೆಂದು ಧ್ಯಾನ ಕ್ರಮದಲ್ಲಿ ತಿಳಿಸಿರುತ್ತದೆ.

ಜಾತಿಭೇದಗಳ ವಿಚಾರವನ್ನು ಕುರಿತು ಈ ಮುಂದಿನ ಪ್ರಕರಣದಲ್ಲಿ ವಿವರಿಸಿದೆ.

# ವರ್ಣಭೇದಗಳ ವಿಚಾರ.

ಶಿಷ್ಯ :—ಗುರೂತ್ತಮಾ! ನಾನಿದುವರಿವಿಗೂ ಅನೇಕ ವಿಷಯಗಳನ್ನು ನಿಮ್ಮೊಡನೆ ವಿಚಾರಮಾಡಿ ಅದರ ಸಾರಾಂಶವೆಲ್ಲವನ್ನೂ ಗ್ರಹಿಸಿದೆನು. ಆದರೂ ನಾನು ಚಾತುರ್ವರ್ಣ (ನಾಲ್ಕು ಜಾತಿಗಳ) ವಿಷಯಗಳನ್ನು ಮತ್ತು ವರ್ಣ ಭೇದಗಳ ಸಮಾಚಾರಗಳನ್ನು ತಿಳಿಯಲಪೇಕ್ಷೆಯುಳ್ಳವನಾಗಿದ್ದೇನೆ. ಆದುದರಿಂದ ಆ ವಿಷಯಗಳೆಲ್ಲವನ್ನೂ ನನಗೆ ಸವಿಸ್ತಾರವಾಗಿ ತಿಳಿಸಬೇಕೆಂದು ಬೇಡುತ್ತೇನೆ, ಮಹಾಸ್ವಾಮಿ!

ಗುರು :—ಕುಮಾರಾ! ನೀನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಭಗವದ್ಗೀತ 4ನೇ ಅಧ್ಯಾಯ 13ನೇ ಶ್ಲೋಕದ ಪ್ರಮಾಣದಿಂದ ಹೇಳುತ್ತೇನೆ. ಆ ಶ್ಲೋಕವಾವುದೆಂದರೆ,

ಶ್ಲೋ॥ " ಚಾತುರ್ವರ್ಣ್ಯಂ ಮಯಾ ಸೃಷ್ಟಂ ♦ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರ ಮಪಿ ಮಾಂ ♦ ವಿದ್ಧ್ಯಕರ್ತಾರ ಮವ್ಯಯಂ ॥

ಭಾಮಿನೀಷಟ್ಪದಿ ||

ನಾಕುವರ್ಣದ ಕರ್ಮಗುಣದ ವಿ |
ವೇಕದಿಂದ ವಿಭಾಗಸಹಿತೀ |
ಲೋಕಗಳ ನಿರ್ಮಿಸಿದೆ ಜೀ ಲೋಕಂಗಳಿಗೆ ನಾನು ||
ಏಕಕರ್ತೃ ವೆನಿಸಿದರೆಯು ನಾ- |
ನೀಕೆಲಸದ ಲಕರ್ತೃವಾದ ನ- |
ಶೋಕನೆಂದೇ ತಿಳಿ ನಿಧಾನದೊಳೆಂದ ನಸುರಾರಿ || (ನಾಗರಸಕವಿ.)

ಶ್ರೀ ಕೃಷ್ಣ ಪರಮಾತ್ಮನು ಅರ್ಜುನನ್ನು ಕುರಿತು "ಚತುವರ್ಣ ಗಳೂ ನನ್ನಿಂದಲೇ ಸೃಷ್ಟಿಸಲ್ಪಟ್ಟಿವೆ. ಅವುಗಳೆಲ್ಲವೂ ಗುಣಕರ್ಮಗ ಳಿಂದಲೇ ಬೇರೆ ಬೇರೆ ವಿಂಗಡಿಸಲ್ಪಟ್ಟಿವೆ. ಅವುಗಳೆಲ್ಲರ ಕರ್ತನು ನಾನಾಗಿದ್ದರೂ, ನಾನು ಅವುಗಳನ್ನು ಮಾಡಿದವನಲ್ಲವೆಂದೂ, ಅವ್ಯಯ ನೆಂದೂ ಮನಸ್ಸಿನಲ್ಲಿ ಚನ್ನಾಗಿ ತಿಳಿದುಕೋ." ಎಂದು ಹೇಳಿದನು.

ಕೃಷ್ಣ :—ಓ ಅರ್ಜುನಾ! ಲೋಕದಲ್ಲಿರುವ ಜನಗಳೆಲ್ಲರೂ ತ್ರಿಗುಣ ಗಳಿಂದ ಕೂಡಿದವರೇ ಹೌದು. ಅವರ ವಿಷಯಗಳನ್ನು ಸ್ವಲ್ಪ ವಿವರಿಸು ತ್ತೇನೆ ಕೇಳು. ಜನಗಳು ಸತ್ವರಜಸ್ತಮೋಗುಣಗಳಲ್ಲಿ ಯಾವುದಾದ ರೊಂದು ಪ್ರಧಾನವಾಗಿದ್ದರೆ ಕ್ರಮವಾಗಿ ಅವರು ಸಾತ್ವಿಕರಾಜಸತಾಮಸ ಗುಣಗಳುಳ್ಳವರೆಂದು ಕರೆಯಲ್ಪಡುತ್ತಾರೆ. ಇದರಲ್ಲಿ ರಾಜಸ ತಾಮಸ ಗುಣಗಳು ಅತಿ ಸ್ವಲ್ಪವಾಗಿದ್ದು ಸಾತ್ವಿಕ ಗುಣವನ್ನೇ ಪ್ರಧಾನವಾಗುಳ್ಳವರು ಕೆಲವರು ಮಾತ್ರವಿದ್ದಾರೆ. ಮತ್ತೆ ಕೆಲವರು ಸಾತ್ವಿಕ ರಾಜಸ ಗುಣಗಳೆರಡ ರಿಂದಲೂ ಕೂಡಿರುವವರಾಗಿರುತ್ತಾರೆ. ಇನ್ನೂ ಕೆಲವರು ರಾಜಸತಾಮ ಸಗುಣಗಳಿಂದಲೇ ಕೂಡಿರುವವರಾಗಿರುತ್ತಾರೆ. ಮತ್ತೂ ಕೆಲವರು ಕೇವಲ ಸಾತ್ವಿಕ ರಾಜಸಗುಣಗಳ ಸೋಂಕೇ ಇಲ್ಲದೆ ತಾಮಸಗುಣವೊಂ ದನ್ನೇ ಹೊಂದಿರುವವರಾಗಿರುತ್ತಾರೆ. ಇವರಲ್ಲಿ ಸಾತ್ವಿಕಗುಣಪ್ರಧಾನ ವಾಗುಳ್ಳ ಮತ್ತು ಕಣ್ಣು ಕಿವಿ ಮೂಗು ಬಾಯಿಗಳೆಂಬ ಪಂಚೇಂದ್ರಿಯಗ ಳನ್ನು ಜಯಿಸಿ ಮನಸ್ಸನ್ನು ಸ್ವಾಧೀನಕ್ಕೆ ತಂದುಕೊಂಡು ಬ್ರಹ್ಮನಿಷ್ಠೆಯ ಲ್ಲಿರುವ ಮಹಾತ್ಮರು "ಬ್ರಾಹ್ಮಣರು." ಅಂದರೆ ಬ್ರಹ್ಮಜ್ಞಾನವನ್ನು ಸಾಧಿಸಿದವರು ಚಂಡಾಲರಾಗಲಿ ಅವರು ಬ್ರಾಹ್ಮಣರೆಂದೆನಿಸಿಕೊಳ್ಳುತ್ತಾರೆ.

ಸಾತ್ವಿಕ ರಾಜಸ ಗುಣಗಳೆಂಬ ಇವೆರಡನ್ನೂ ಹೊಂದಿದವರಾಗಿ, 'ಮಹಾಪರಾಕ್ರಮುವನ್ನುಳ್ಳ ಪಂಚೇಂದ್ರಿಯಗಳು, ಮತ್ತು ಈ ಪಂಚೇಂದ್ರಿಯಗಳಿಗೆ ಪ್ರಭುವಾದ ಮನಸ್ಸು, ಇವೆರಡೂ ಒಂದಾಗಿ ಸೇರಿ ಪುಣ್ಯ ಪಾಪಕರ್ಮಗಳನ್ನು ಮಾಡುತ್ತ ಬರುತ್ತವೆ.' ಎಂದು ತಮ್ಮ ಬುದ್ಧಿಬಲ ದಿಂದ ತಿಳಿದು, ಆ ಪಂಚೇಂದ್ರಿಯಗಳೊಡನೆ ಯುದ್ಧಮಾಡಿ, ಅವುಗಳನ್ನು ಜಯಿಸುವುದಕ್ಕೆ ಪ್ರಯತ್ನಿಸುವ ಪ್ರಜ್ಞಾಶಾಲಿಗಳೇ "**ಕ್ಷತ್ರಿಯ**" ರೆಂದೆನಿಸುತ್ತಾರೆ.

ರಾಜಸ ಮತ್ತು ತಾಮಸ ಗುಣಗಳನ್ನು ಹೊಂದಿದವರಾಗಿ, ಸುಕೃತ ದುಷ್ಕೃತಗಳ ವಿಷಯಗಳನ್ನು ಚನ್ನಾಗಿ ಪರಿಶೀಲಿಸಿ, ಸುಕೃತದಿಂದ ಪ್ರಯೋಜನವಿದೆಯೆಂದೂ, ದುಷ್ಕೃತದಿಂದ ವಿನಾಶವಿದೆಯೆಂದೂ ತಿಳಿದು, ದುಷ್ಕಾರ್ಯಗಳನ್ನು ತೊರೆದು ಸತ್ಕಾರ್ಯಗಳನ್ನು ಮಾಡುವುದಕ್ಕೆ ಪ್ರಯತ್ನಪಡುವವರೇ "**ವೈಶ್ಯ**" ರೆಂದೆನಿಸುತ್ತಾರೆ.

ಸಾತ್ವಿಕರಾಜಸಗುಣಗಳೆಂಬುದೇ ಇಲ್ಲದೆ, ತಾಮಸ ಗುಣವನ್ನೇ ಪ್ರಧಾನವಾಗುಳ್ಳವರು, ಅಜ್ಞಾನವೆಂಬ ಗಾಢಾಂಧಕಾರದಲ್ಲಿ ಬಿದ್ದು, 'ಇದು ಒಳ್ಳೆಯದು ಮತ್ತು ಇದು ಕೆಟ್ಟುದು' ಎಂಬ ವಿವೇಚನೆಯೇ ಇಲ್ಲದಿರುವ ಬುದ್ಧಿಹೀನರೇ "**ಶೂದ್ರ**" ರೆಂದೆನಿಸುತ್ತಾರೆ.

ಶ್ಲೋ॥ " ನಾಽಸತ್ಯಂ ಬ್ರಾಹ್ಮಶೌಚಂ ಚ ♦ ಬ್ರಹ್ಮ ಮಿಂದ್ರಿಯನಿಗ್ರಹಂ ।
ಸರ್ವಜೀವದಯಾಬ್ರಹ್ಮ ♦ ಏತ ದ್ಬ್ರಾಹ್ಮಣಲಕ್ಷಣಂ " ॥

ಶ್ಲೋ॥ ಸತ್ಯಂ ನಾಽಸ್ತಿ ಶುಚಿ ರ್ನಾಽಸ್ತಿ ♦ ನಾಽಸ್ತಿ ಚೇಂದ್ರಿಯನಿಗ್ರಹಂ ।
ಸರ್ವಜೀವದಯಾ ನಾಽಸ್ತಿ ♦ ಏತ ಚ್ಚಂಡಾಲಲಕ್ಷಣಂ ॥

ಅಂದರೆ, ಸತ್ಯ, ಶುಚಿ, ಇಂದ್ರಿಯನಿಗ್ರಹ, ಭೂತದಯೆ, ಪಶ್ಚಾತ್ತಾಪ ಇವುಗಳು ಬ್ರಾಹ್ಮಣರ ಲಕ್ಷಣಗಳು. ಮೇಲೆ ಹೇಳಿದ ಗುಣಗಳಲ್ಲಿ ಯಾವುದೂ ಇಲ್ಲದಿರುವುದೇ ಚಂಡಾಲ ಲಕ್ಷಣಗಳು. ಇದಕ್ಕೆ ಒಂದು ಪ್ರಮಾಣವುಂಟು. ಗುರುಮಹರ್ಷಿಯು ಪ್ರತಿಯೊಬ್ಬನ ಜೀವನದಲ್ಲಿ

ಹದಿನಾರು ವರ್ಷಗಳ ಕಾಲ ನಡೆಯುವುದು. ಒಬ್ಬನಿಗೆ ಹಿಂದಿನ ಜನ್ಮದ ಮರಣ ಸಮಯದಲ್ಲಿ ಗುರುದೆಶೆಯಲ್ಲಿ ಹತ್ತು ವರ್ಷಗಳಕಾಲ ಕಳೆದು ಹೋಗಿದ್ದರೆ, ಉಳಿದ ಆರುವರ್ಷಗಳ ಕಾಲವು ಅವನಿಗೆ ಮುಂದೆ ದೊರಕುವ ಜನ್ಮಾರಭ್ಯ ಲೆಕ್ಕಕ್ಕೆ ಬರುತ್ತದೆ. ಇದನ್ನೇ ಜ್ಯೋತಿಷ್ಕರು ಆ ಶಿಶುವಿಗೆ ಜನ್ಮ ಲಗ್ನವನ್ನು ನಿರ್ಣಯಿಸುವಾಗ 'ಗರ್ಭ ಭುಕ್ತಿ'ಯೆಂದು ಅಂದರೆ ಗರ್ಭದಲ್ಲಿ ಕಳೆದುಹೋದ ಮೇಲೆ ಉಳಿದ ಗುರುಮಹದೆಶೆಯು ಆರುವರ್ಷಗಳಿವೆಯೆಂದು ಲೆಕ್ಕಮಾಡಿ ಹೇಳುತ್ತಾರೆ.

ಮತ್ತು, ಯಾವ ಜಾತಿಯಲ್ಲಿಯೇ ಆಗಲಿ,ಪಿಂಡೋತ್ಪತ್ತಿಸಮಯದಲ್ಲಿ ಶುಕ್ರ, ಬೃಹಸ್ಪತಿ, ಈ ಎರಡು ಶುಭಗ್ರಹಗಳಿಂದ ಕೂಡಿರುವ ಲಗ್ನದಲ್ಲಿ ಶಿಶುವು ಜನಿಸಿದ್ದೇ ಆದರೆ, ಆತನು ಭೂತದಯೆ ಪಶ್ಚಾತ್ತಾಪಗಳಿಂದ ಕೂಡಿದವನಾಗಿ ಬ್ರಹ್ಮವೇತ್ತನಾಗುತ್ತಾನೆ. ಇಂತಹ ಬ್ರಹ್ಮವೇತ್ತನೇ ಬ್ರಾಹ್ಮಣನಾಗುತ್ತಾನೆ. ಅಂದರೆ "ಬ್ರಹ್ಮಜ್ಞಾನೀ ತು ಬ್ರಾಹ್ಮಣಃ" ಎಂಬಂತೆ, ಬ್ರಾಹ್ಮಣನೆಂದೆನಿಸುವುದಕ್ಕೆ ಬ್ರಹ್ಮಜ್ಞಾನವು ಮುಖ್ಯವೇ ಹೊರತು, ತಾನು ಹುಟ್ಟಿದ ಯೋನಿವಿಶೇಷವು ಮುಖ್ಯವಾದುದಲ್ಲ. ಜನ್ಮದಲ್ಲಿ ಬ್ರಾಹ್ಮಣನಾಗಿದ್ದರೂ ಕರ್ಮದಲ್ಲಿ ಚಂಡಾಲನಾಗಬಹುದು. ಅದೇ ರೀತಿಯಲ್ಲಿ ಜನ್ಮದಲ್ಲಿ ಚಂಡಾಲನಾಗಿದ್ದರೂ ಅವನು ಕರ್ಮದಿಂದ ಬ್ರಹ್ಮಜ್ಞಾನವನ್ನು ಪಡೆದು ಬ್ರಾಹ್ಮಣನಾಗಬಹುದು. ಮೇಲೆ ಹೇಳಿದ ಗುರು ಶುಕ್ರ ಗ್ರಹಗಳ ಬಲಿಯುವಿದ್ದು ಲಗ್ನವು ಶುಭಕರವಾದದ್ದೇ ಆದರೆ, ಆ ಜನ್ಮದಲ್ಲಿ ಹುಟ್ಟಿದವನಿಗೆ ಬ್ರಾಹ್ಮಣನಾಗಿರಬೇಕಾದ ಗುಣಗಳೆಲ್ಲವೂ ಇರುತ್ತವೆ. ಲಗ್ನಭೇದವಿದ್ದು ಅಂದರೆ ಶುಭಗ್ರಹಗಳ ದೃಷ್ಟಿಯಿಲ್ಲದೆ ಪಾಪಗ್ರಹ ಸಂಬಂಧವಿದ್ದದ್ದೇ ಆದರೆ, ಆತನಿಗೆ ಬ್ರಾಹ್ಮಣನಿಗಿರಬೇಕಾದ ಗುಣಗಳಿಲ್ಲದೆ ಚಂಡಾಲಗುಣಗಳು ಪ್ರಾಧಾನ್ಯವಾಗಿರುತ್ತವೆ. ಈ ವೈಶೇಷ್ಯಗಳಿಂದಲೇ, ಬ್ರಾಹ್ಮಣಯೋನಿಯಲ್ಲಿ ಜನಿಸಿದವರು ಕರ್ಮಚಂಡಾಲರಾಗಿಯೂ, ಚಂಡಾಲಯೋನಿಯಲ್ಲಿ ಜನಿಸಿದವರು ಬ್ರಹ್ಮಕರ್ಮಿಗಳಾಗಿಯೂ ಇರುವಂಥ ಪ್ರತ್ಯಕ್ಷಪ್ರಮಾಣಗಳು ಅನೇಕವಾಗಿವೆ. ಈ ವಿಷಯಗಳನ್ನು ಇಲ್ಲಿ ಹೆಚ್ಚಾಗಿ ವಿಶದಪಡಿಸುವುದು ಅನವಶ್ಯಕ.

ಗರ್ಭವು ನಿಲ್ಲುವ ಸಮಯದಲ್ಲಿ ಸೂರ್ಯ ಮತ್ತು ಅಂಗಾರಕ ಈ ಎರಡು ಗ್ರಹಗಳು ಕೂಡಿರುವುದಾದರೆ, ಆ ಗರ್ಭದಿಂದ ಹುಟ್ಟಿದ ಗಂಡು ಶಿಶುವು ಬೆಳೆದ ಮೇಲೆ ಮಹಾವೀರ್ಯಶಾಲಿಯಾಗಿಯೂ, ಯುದ್ಧಗಳಲ್ಲಿ ಧೈರ್ಯದಿಂದ ಮುಂದರಿಯುವನಾಗಿಯೂ, ರೋಷಕೋಪಗಳಿಂದ ಕೂಡಿದವನಾಗಿಯೂ ಆಗುತ್ತದೆ. ಈ ಗ್ರಹಗಳ ಸಂಬಂಧವಿರುವ ಲಗ್ನದಲ್ಲಿ ಹುಟ್ಟಿದವನು ಯಾವ ಜಾತಿಯ ಯೋನಿಯಲ್ಲಿ ಜನಿಸಿದರೂ ಅವನು ಕ್ಷತ್ರಿಯನೇ ಸರಿ.

ಗರ್ಭೋತ್ಪತ್ತಿಯಾಗುವ ಸಮಯದಲ್ಲಿ ಬುಧ ಚಂದ್ರ ಗ್ರಹಗಳು ಕೂಡಿರುವಾಗ ಶಿಶುವು ಹುಟ್ಟಿದ್ದೇ ಆದರೆ, ಅವನು ಧೈರ್ಯವಂತನಾಗದೆ ಹೆಚ್ಚಾದ ಭಯದಿಂದ ಕೂಡಿದವನಾಗಿ, ಸಾಹಸ ಕಾರ್ಯಗಳಲ್ಲಿ ತೊಡಗದೆ ಕೃಷಿ, ವಾಣಿಜ್ಯ ಮತ್ತು ಪಶುಪಾಲನೆಗಳ ಮೂಲಕ ಜೀವನವನ್ನು ಕಲ್ಪಿಸಿಕೊಳ್ಳುತ್ತಾನೆ. ಇಂಥವನು ಜನ್ಮದಲ್ಲಿ ಯಾವನೇ ಆಗಿರಲಿ, ಕರ್ಮದಲ್ಲಿ ವೈಶ್ಯನಾಗುತ್ತಾನೆ.

ಮತ್ತು, ಗರ್ಭ ಕಟ್ಟುವ ಸಮಯದಲ್ಲಿ ಶನಿಗ್ರಹವೊಂದೇ ಇದ್ದು ಶಿಶುವು ಹುಟ್ಟಿದ್ದೇ ಆದರೆ, ಅಂಥವನು ಮೇಲೆ ಹೇಳಿದ ವೈಶ್ಯನ ಗುಣಗಳಿಗಿಂತಲೂ ಕನಿಷ್ಠ ಗುಣಗಳನ್ನು ಹೊಂದಿ, ಅಂದರೆ ಧೈರ್ಯಸ್ಥೈರ್ಯಾದಿಗಳಿಲ್ಲದೆ ಸೇವಾವೃತ್ತಿಯಿಂದ ನೀಚಜೀವನವನ್ನು ಮಾಡುತ್ತಾನೆ. ಇಂತಹನು ಯಾವ ಜಾತಿಯಲ್ಲೇ ಜನಿಸಿರಲಿ, ಅವನು ಶೂದ್ರನೆಂದೆನಿಸಿಕೊಳ್ಳುತ್ತಾನೆ. ಇದಕ್ಕೆ ಮನುಸ್ಮೃತಿಯ ಪ್ರಮಾಣವು ಈ ಕೆಳಗೆ ಕೊಟ್ಟಿದೆ.

ಶ್ಲೋ ॥ ಶೂದ್ರೋ ಬ್ರಾಹ್ಮಣತಾ ಮೇತಿ ♦ ಬ್ರಾಹ್ಮಣಶ್ಚೇತಿ ಶೂದ್ರತಾಂ ।
ಕ್ಷತ್ರಿಯಾಜ್ಜಾತ ಮೇವಂ ತು ♦ ವಿದ್ಯಾ ದ್ವೈಶ್ಯಾ ತ್ತಥೈವ ಚ ॥

ಕರ್ಮ ವ್ಯತ್ಯಾಸದಿಂದ ಶೂದ್ರನು ಬ್ರಾಹ್ಮಣನೂ, ಬ್ರಾಹ್ಮಣನು ಶೂದ್ರನೂ ಆಗಬಹುದು. ಹಾಗೆಯೇ ಅವರು ತಮ್ಮ ಕರ್ಮಗುಣಗಳಿಂದ ವೈಶ್ಯ ಕ್ಷತ್ರಿಯರಾಗಿಯೂ ಆಗಬಹುದು. ಶ್ರೀ ಮಹಾಭಾರತದ ಶಾಂತಿಪರ್ವದಲ್ಲಿ ಭೃಗುಭರದ್ವಾಜ ಸಂವಾದರೂಪದಿಂದ ಈ ವಿಷಯವನ್ನು ಕುರಿತು ಹೀಗೆಂದು ಹೇಳಿದೆ.

ಭೃಗು :—

ಶ್ಲೋ ॥ ನ ವಿಶೇಷೋಽಸ್ತಿ ವರ್ಣಾನಾಂ ♦ ಸರ್ವಂ ಬ್ರಾಹ್ಮ ಮಿದಂ ಜಗತ್ ।
ಬ್ರಹ್ಮಣಾ ಪೂರ್ವಸೃಷ್ಟಂ ಹಿ ♦ ಕರ್ಮಭಿ ರ್ವರ್ಣತಾಂ ಗತಂ ॥

ಶ್ಲೋ ॥ ಕಾಮಭೋಗಪ್ರಿಯಾ ಸ್ತೀಕ್ಷ್ಣಾಃ ♦ ಕ್ರೋಧನಾಃ ಪ್ರಿಯಸಾಹಸಾಃ ।
ತ್ಯಕ್ತಸ್ವಧರ್ಮಾ ರಕ್ತಾಂಗಾಃ ♦ ತೇ ದ್ವಿಜಾಃ ಕ್ಷತ್ರತಾಂ ಗತಾಃ ॥

ಶ್ಲೋ ॥ ಗೋಭ್ಯೋ ವೃತ್ತಿಂ ಸಮಾಸ್ಥಾಯ ♦ ಪೀತಾಃ ಕೃಷ್ಯುಪಜೀವಿನಃ ।
ಸ್ವಧರ್ಮಾ ನಾನುತಿಷ್ಠಂತಿ ♦ ತೇ ದ್ವಿಜಾ ವೈಶ್ಯತಾಂ ಗತಾಃ ॥

ಶ್ಲೋ ॥ ಹಿಂಸಾಽನೃತಪ್ರಿಯಾ ಲುಬ್ಧಾಃ ♦ ಸರ್ವಕರ್ಮೋಪಜೀವಿನಃ ।
ಕೃಷ್ಣಾಃ ಶೌಚಪರಿಭ್ರಷ್ಟಾಃ ♦ ತ್ತೇ ದ್ವಿಜಾಃ ಶೂದ್ರತಾಂ ಗತಾಃ ॥

(188ನೇ ಅಧ್ಯಾಯ, 10-11-12-13ನೇ ಶ್ಲೋಕಗಳು.)

ಎಂಬಂತೆ, ಜಾತಿಗಳ ವಿಷಯದಲ್ಲಿ ಅತಿಶಯವೇನೂ ಇಲ್ಲ. ಆದಿಯಲ್ಲಿ ಬ್ರಹ್ಮಮಯವಾದ ಈ ಜಗತ್ತು, ಮೊದಲು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿತು, ಆದರೆ ಬ್ರಹ್ಮ ಕ್ಷತ್ರ ವೈಶ್ಯ ಶೂದ್ರವೆಂಬ ನಾಲ್ಕು ವರ್ಣಗಳು ಕರ್ಮಗಳಿಂದುಂಟಾದುವು. ಜನ್ಮದಲ್ಲಿ ಬ್ರಾಹ್ಮಣರಾದವರು ಕಾಮಸುಖಗಳಲ್ಲಿ ಆಸಕ್ತರೂ, ಮಹಾ ಕೋಪಿಷ್ಠರೂ, ಸಾಹಸಪ್ರಿಯರೂ ಆಗಿ ಸ್ವಧರ್ಮಗಳನ್ನು ಬಿಟ್ಟಿದ್ದೇ ಆದರೆ, ಅವರು ಕರ್ಮದಲ್ಲಿ ಕ್ಷತ್ರಿಯರೇ ಹೌದು. ಹೀಗೆಯೇ, ಆ ಬ್ರಾಹ್ಮಣರು ಪಶುಪಾಲನೆ, ಕೃಷಿ, ವಾಣಿಜ್ಯ, ಇವುಗಳನ್ನು ಅನುಸರಿಸಿ ನಡೆದದ್ದೇ ಆದರೆ, ಅವರು ವೈಶ್ಯರೆಂದೆನಿಸುತ್ತಾರೆ. ಮತ್ತು ಆ ಬ್ರಾಹ್ಮಣರು, ಹಿಂಸೆ, ಸುಳ್ಳು, ಅಪ್ರಿಯ ಇವುಗಳಲ್ಲಿಯೇ ಆಸಕ್ತರಾಗಿ, ಆ ವಿಧವಾದ ಕರ್ಮಗಳಲ್ಲಿ ಜೀವನಮಾಡುವವರಾಗಿಯೂ, ಕೃಷ್ಣವರ್ಣದವರಾಗಿಯೂ, ಶೌಚಾದಿ ಕಾರ್ಯಗಳಲ್ಲಿ ತೊಡಗದವರಾಗಿಯೂ ಇದ್ದರೆ, ಅವರು ಶೂದ್ರರೆಂದೆಣಿಸಲ್ಪಡುತ್ತಾರೆ. ಸದ್ಗುಣಿಗಳಾದವರೇ ಉತ್ತಮ ಜಾತಿಯವರು, ಎಂದು ಶ್ರುತಿಯು ಸಾರಿ ಹೇಳುತ್ತದೆ. ಬ್ರಾಹ್ಮಣ ಯೋನಿಯಲ್ಲಿ ಹುಟ್ಟಿದ ಮಾತ್ರಕ್ಕೇ ಅವನಿಗೆ ಸದ್ಗುಣಗಳಿಲ್ಲದ ಪಕ್ಷದಲ್ಲಿ, ಅವನು ಬ್ರಾಹ್ಮಣನೆಂದೆನಿಸಲಾರನು. ಶೂದ್ರ ಚಂಡಾಲ ಯೋನಿಗಳಲ್ಲಿ

ಹುಟ್ಟಿದಾಗ್ಯೂ ಸದ್ಗುಣಗಳುಳ್ಳವನಾಗಿದ್ದರೆ, ಅಂಥವನೇ ಬ್ರಾಹ್ಮಣನು. ಎಂದು ಈ ಕೆಳಗಿನ ಶ್ಲೋಕಗಳು ಹೇಳುತ್ತವೆ.

ಶ್ಲೋ ॥ "ಏಭಿಸ್ತು ಕರ್ಮಭಿ ರ್ದೇವಿ! ♦ ಶುಭೈ ರಾಚರಿತೈ ಸ್ತಥಾ ।
ಶೂದ್ರೋ ಬ್ರಾಹ್ಮಣತಾಂ ಯಾತಿ ♦ ವೈಶ್ಯಃ ಕ್ಷತ್ರಿಯತಾಂ ವ್ರಜೇತ್ ॥

ಶ್ಲೋ ॥ ನ ಯೋನಿ ರ್ನಾಽಪಿ ಸಂಸ್ಕಾರೋ ♦ ನ ಶ್ರುತಂ ನ ಚ ಸಂತತಿಃ ।
ಕಾರಣಾನಿ ದ್ವಿಜತ್ವಸ್ಯ ♦ ವೃತ್ತ ಮೇವ ತು ಕಾರಣಂ ॥

ಶ್ಲೋ ॥ ಸರ್ವೋಽಯಂ ಬ್ರಾಹ್ಮಣೋ ಲೋಕೇ ♦ ವೃತ್ತೇನ ಚ ವಿಧೀಯತೇ ।
ವೃತ್ತೇ ಸ್ಥಿತ ಸ್ತು ಶೂದ್ರೋಽಪಿ ♦ ಬ್ರಾಹ್ಮಣತ್ವಂ ನಿಯಚ್ಛತಿ" ॥

ಎಂಬುದಾಗಿ ಭಾರತದಲ್ಲಿನ ಪಾರ್ವತೀಪರಮೇಶ್ವರರ ಸಂವಾದದಲ್ಲಿ, ಪರಮೇಶ್ವರನು ಪಾರ್ವತಿಯನ್ನು ಕುರಿತು ಹೇಳಿರುತ್ತಾನೆ. "ಓ ದೇವಿ! ಶೂದ್ರವರ್ಣದಲ್ಲಿ ಜನಿಸಿದವನಾದರೂ, ಸಾತ್ವಿಕಗುಣಪ್ರಧಾನವಾದ ಶುಭ ಕರ್ಮಗಳನ್ನು ಸಾಂಗವಾಗಿ ನೆರವೇರಿಸುವುದರಿಂದ ಬ್ರಾಹ್ಮಣತ್ವವನ್ನು ಪಡೆಯುತ್ತಾನೆ. ಬ್ರಹ್ಮಯೋನಿಯಲ್ಲಿ ಹುಟ್ಟಿದಾಗ ಬ್ರಾಹ್ಮಣನಿಗೆ ತಕ್ಕ ಉಪನಯ ಸಂಸ್ಕಾರಗಳಾಗಲಿ, ನಿರ್ಮಲವಾದ ಮನಸ್ಸಿಲ್ಲದೆ ಮಾಡುವ ವೇದಾಧ್ಯಯನಾದಿ ಕರ್ಮಗಳಾಗಲಿ, ಶ್ರೇಷ್ಠವಾದ ವಂಶದಲ್ಲಿ ಜನ್ಮದೊರಕಿದರಾಗಲಿ, ಬ್ರಾಹ್ಮಣತ್ವವನ್ನು ಹೊಂದಲು ಸಾಧ್ಯವಿಲ್ಲ. ಸತ್ಪ್ರವರ್ತನೆಯೇ ಬ್ರಾಹ್ಮಣತ್ವವು ಸಿದ್ಧಿಸುವುದಕ್ಕೆ ಸಹಕಾರಿ. ಶೂದ್ರನಾದರೂ ಸತ್ಪ್ರವರ್ತನೆಯು ಇದ್ದದ್ದೇ ಆದರೆ, ಅಂಥವನಿಗೆ ಬ್ರಾಹ್ಮಣತ್ವವು ಖಂಡಿತವಾಗಿಯೂ ದೊರಕುವುದು. ಇದೇ ವಿಷಯವನ್ನು ಕುರಿತು ಮಹಾಭಾರತದ ಅರಣ್ಯಪರ್ವದಲ್ಲಿ ಹೀಗೆಂದು ಹೇಳಿದೆ.

ಶ್ಲೋ ॥ ನ ಕುಲೇನ ನ ಜಾತ್ಯಾ ಹಿ ♦ ಕ್ರಿಯಾಭಿ ರ್ಬ್ರಾಹ್ಮಣೋ ಭವೇತ್ ।
ಚಂಡಾಲೋಽಪಿ ಸು ವೃತ್ತಸ್ಥೋ ♦ ಬ್ರಾಹ್ಮಣ ಸ್ಸ ಯುಧಿಷ್ಠಿರ! ॥

ಶ್ಲೋ ॥ ಏಕವರ್ಣ ಮಿದಂ ಪೂರ್ವಂ ♦ ವಿಶ್ವ ಮಾಸೀ ದ್ಯುಧಿಷ್ಠಿರ! ।
ಕರ್ಮಕ್ರಿಯವಿಶೇಷೇಣ ♦ ಚಾತುರ್ವರ್ಣ್ಯಂ ಪ್ರತಿಷ್ಠಿತಂ ॥

ಶ್ಲೋ ॥ ಸರ್ವೇ ವೈ ಯೋನಿಜಾ ಮರ್ತ್ಯಾಃ ♦ ಸರ್ವೇ ಮೂತ್ರಪುರೀಷಣಃ ।
ಏಕೇಂದ್ರಿಯೇಂದ್ರಿಯಾರ್ಥ ಶ್ಚ ♦ ತಸ್ಮಾಚ್ಛೀಲಗುಣೈ ರ್ದ್ವಿಜಃ ॥

ಶ್ಲೋ ॥ ಶೂದ್ರೋ ಽಪಿ ಶೀಲಸಂಪನ್ನೋ ♦ ಗುಣವಾನ್ ಬ್ರಾಹ್ಮಣೋ ಭವೇತ್ ।
ಬ್ರಾಹ್ಮಣೋ ಽಪಿ ಕ್ರಿಯಾಹೀನಃ ♦ ಶೂದ್ರೋ ಪ್ರತ್ಯವರೋ ಭವೇತ್ ॥

ಶ್ಲೋ ॥ ನ ಜಾತಿ ರ್ದೃಶ್ಯತೇ ರಾಜನ್ ! ♦ ಗುಣಾಃ ಕಲ್ಯಾಣಕಾರಕಾಃ ।
ಜೀವಿತಂ ಯಸ್ಯ ಧರ್ಮಾರ್ಥಂ ♦ ಪರಾರ್ಥೇ ಯಸ್ಯ ಜೀವಿತಂ ॥

ಕರ್ಮದಿಂದ ದ್ವಿಜತ್ವ ಚಂಡಾಲತ್ವವೇ ಹೊರತು, ಕುಲದಿಂದ ಅವುಗಳನ್ನು ಮನುಷ್ಯನು ಹೊಂದಲಾರನು. ಸದ್ವೃತ್ತನಾದರೆ ಚಂಡಾಲನಾದರೂ ಬ್ರಾಹ್ಮಣನೆಂದೆನಿಸುತ್ತಾನೆ. ಪ್ರಪಂಚದಲ್ಲಿ ಮೊಟ್ಟಮೊದಲು ಒಂದೇ ಜಾತಿಯೇ ಸೃಷ್ಟಿಸಲ್ಪಟ್ಟಿದು. ಕರ್ಮಕ್ರಿಯೆಗಳ ವ್ಯತ್ಯಾಸದಿಂದ ಚತುರ್ವಿಧ ಜಾತಿಭೇದಗಳು ಏರ್ಪಟ್ಟವು. ಮನುಷ್ಯಜಾತಿಯವರೆಲ್ಲರೂ ಒಂದೇ ಯೋನಿಯಿಂದಲೇ ಜನಿಸುವರು. ಎಲ್ಲರಿಗೂ ಒಂದೇ ವಿಧವಾದ ಇಂದ್ರಿಯಗಳು ಇವೆ. ವರ್ಣವು ಕರ್ಮಕ್ರಿಯೆಗಳನ್ನನುಸರಿಸಿರುವುದರಿಂದ ಮನುಷ್ಯರಲ್ಲಿ ಸತ್ಶೀಲರೂ, ಸದ್ಗುಣಸಂಪನ್ನರೂ ಬ್ರಾಹ್ಮಣರೆಂದೆನಿಸುತ್ತಾರೆ ಶೂದ್ರನಾದರೂ ಸದ್ಗುಣಗಳುಳ್ಳವನಾದರೆ ಅವನೇ ಬ್ರಾಹ್ಮಣನೆಂದೆನಿಸುವುದರಲ್ಲಿ ಸಂದೇಹವೇ ಇಲ್ಲ. ಶೀಲಾದಿ ಸದ್ಗುಣಗಳಿಲ್ಲದಿದ್ದಲ್ಲಿ, ಬ್ರಾಹ್ಮಣ ಯೋನಿಯಲ್ಲಿ ಜನಿಸಿದರೂ, ಅವನು ಶೂದ್ರನಿಗಿಂತಲೂ ಕಡೆ. ಗುಣಗಳೇ ಕಲ್ಯಾಣವನ್ನು ತರುವವುಗಳು ಅಂದರೆ ಶುಭದಾಯಕಗಳು. ಆದುದರಿಂದ ಕುಲದಿಂದ ಏನೊಂದು ಪ್ರಯೋಜನವೂ ಇಲ್ಲ. ಧರ್ಮಪ್ರವರ್ತಕನಾಗಿಯೂ, ಪರರ ಇಷ್ಟಾರ್ಥಗಳನ್ನು ನ್ಯಾಯರೀತಿಯಲ್ಲಿ ನೆರವೇರಿಸುವವನಾಗಿಯೂ ಯಾವನಿರುತ್ತಾನೆಯೋ, ಅವನ ಜೀವಿತವೇ ಸಾರ್ಥಕವಾದದ್ದು. ಮತ್ತು ಇದೇ ವಿಷಯವನ್ನು ಕುರಿತು ಅರಣ್ಯಪರ್ವದಲ್ಲಿ ಅಜಗರ ಯುಧಿಷ್ಠಿರ ಸಂವಾದದಲ್ಲಿ ಹೀಗೆಂದು ಹೇಳಿದೆ.

ಅಜಗರಃ :—

ಶ್ಲೋ ॥ ಬ್ರಾಹ್ಮಣಃ ಕೋ ಭವೇ ದ್ರಾಜನ್! ♦ ವೇದ್ಯಂ ಕಿಂ ಚ ಯುಧಿಷ್ಠಿರ ।
ಬ್ರವೀ ಹ್ಯತಿಮತಿಂ ತ್ವಾಂ ಹಿ ♦ ವಾಕ್ಯೈ ರನುಮಿಮೀಮಹೇ ॥

(ಅಧ್ಯಾಯ, 180 ಶ್ಲೋ. 19)

'ಓ ಯುಧಿಷ್ಠಿರನೇ ! ಬ್ರಾಹ್ಮಣನೆಂಬುವನು ಯಾರು ? ಜನ್ಮವೆತ್ತಿದ್ದಕ್ಕೆ ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯವಾವುದು? ಇವಕ್ಕೆ

ಸರಿಯಾದ ಉತ್ತರಗಳನ್ನು ಹೇಳಿದ್ದೇ ಆದರೆ, ನೀನು ಬುದ್ಧಿವಂತರಲ್ಲಿ ಅಗ್ರಗಣ್ಯನೆಂದು ಪರಿಗಣಿಸುತ್ತೇನೆ' ಎಂದು ಅಗಸ್ತ್ಯರ ಶಾಪಗ್ರಸ್ತನಾಗಿ ಅಜಗರ (ಹೆಬ್ಬಶಿಲೆ ಹಾವು) ರೂಪದಿಂದ ಅರಣ್ಯಪ್ರದೇಶದಲ್ಲಿ ಬಿದ್ದಿದ್ದ ನಹುಷನು ಧರ್ಮರಾಯನನ್ನು ಕೇಳಲು, ಧರ್ಮರಾಯನು, ಆ ಅಜಗರನಿಗೆ ಸಿಕ್ಕಿಬಿದ್ದ ತನ್ನ ತಮ್ಮನಾದ ಭೀಮಸೇನನನ್ನು ಬಿಡಿಸುವ ಸಲುವಾಗಿ, ಹೀಗೆಂದು ಉತ್ತರ ಹೇಳುತ್ತಾನೆ.

ಯುಧಿಷ್ಠಿರಃ:—

ಶ್ಲೋ || ಸತ್ಯಂ ದಾನಂ ಕ್ಷಮಾ ಶೀಲಂ ♦ ಆನೃಶಂಸ್ಯಂ ತಪೋ ಘೃಣಾ |
ದೃಶ್ಯಂತೇ ಯತ್ರ ನಾಗೇಂದ್ರ ! ♦ ಸ ಬ್ರಾಹ್ಮಣ ಇತಿ ಸ್ಮೃತಃ ||

ಶ್ಲೋ || ವೇದ್ಯಂ ಸರ್ಪ ! ಪರಂ ಬ್ರಹ್ಮ ♦ ನಿರ್ದುಃಖ ಮಸುಖಂ ಚ ಯತ್ |
ಯತ್ರ ಗತ್ವಾ ನ ಶೋಚಂತಿ ♦ ಭವತಃ ಕಿಂ ವಿವಕ್ಷಿತಂ ||

(ಅರಣ್ಯಪರ್ವ, 180ನೇ ಅಧ್ಯಾಯ, ಶ್ಲೋಕ 20-21.)

"ಓ ನಾಗೇಂದ್ರ! ಸತ್ಯ, ದಾನ, ಕ್ಷಮೆ, ಸತ್ಸ್ವಭಾವ, ಕ್ರೌರ್ಯದೌರ್ಜನ್ಯಾದಿಗಳಿಲ್ಲದೆ ಭೂತದಯೆ ಪಶ್ಚಾತ್ತಾಪಗಳಿರುವಿಕೆ, ತಪಸ್ಸು, ಕರುಣೆ ಈ ಗುಣರತ್ನಗಳು ಯಾವನಲ್ಲಿ ನೆಲೆಸಿರುವುವೋ, ಅವನೇ ನಿಜವಾದ ಬ್ರಾಹ್ಮಣನೆಂದು ತಿಳಿ. ಮನುಷ್ಯನು ಜೀವಿಸಿದುದಕ್ಕೆ ಸಾರ್ಥಕವಾಗಿ ಪರಬ್ರಹ್ಮವಸ್ತುವನ್ನು ತಿಳಿಯಲೇ ಬೇಕು. ಆ ವಸ್ತುವಿಗೆ ಸುಖದುಃಖಗಳೆಂಬುವಿಲ್ಲ. ಆ ವಸ್ತುವಿರುವ ಸ್ಥಾನವನ್ನು ಕುರಿತು ಹೋದವನಿಗೆ ಶೋಕಮೋಹಗಳೆಂಬುದೇ ಇರುವುದಿಲ್ಲ. ನಿನ್ನ ಪ್ರಶ್ನೆಗಳಿಗೆ ಇವೇ ಉತ್ತರ. ಇನ್ನೇನಾದರೂ ಕೇಳಬೇಕಾಗಿದ್ದರೆ ಕೇಳಬಹುದು." ಎಂದು ಯುಧಿಷ್ಠಿರನು ಉತ್ತರ ಕೊಟ್ಟನು.

ಸರ್ಪ ಉವಾಚ ||

ಶ್ಲೋ || ಚಾತುರ್ವರ್ಣ್ಯಂ ಪ್ರಮಾಣಂ ಚ ♦ ಸತ್ಯಂ ಚ ಬ್ರಹ್ಮ ಚೈವ ಹಿ |
ಶೂದ್ರೇಷ್ವಪಿ ಚ ಸತ್ಯಂ ಚ ♦ ದಾನ ಮಕ್ರೋಧ ಏವ ಚ ||

ಶ್ಲೋ || ಆನೃಶಂಸ್ಯ ಮಹಿಂಸಾ ಚ ♦ ಘೃಣಾ ಚೈವ ಯುಧಿಷ್ಠಿರ ! |

ವೇದ್ಯಂ ಯಚ್ಚಾತ್ರ ನಿರ್ದುಃಖಂ ♦ ಅಸುಖಂ ಚ ನರಾಧಿಪ! ॥
ತಾಭ್ಯಾಂ ಹೀನಂ ಪದಂ ಚಾನ್ಯತ್ ♦ ನ ತದಸ್ತೀತಿ ಲಕ್ಷಯೇ ।

ಯುಧಿಷ್ಠಿರ ಉವಾಚ ||

ಶ್ಲೋ ॥ ಶೂದ್ರೇ ತು ಯದ್ಭವೇ ಲ್ಲಕ್ಷ್ಮ ♦ ದ್ವಿಜೇ ತಚ್ಚ ನ ವಿದ್ಯತೇ ॥
ನ ವೈ ಶೂದ್ರೋ ಭವೇತ್ ಶೂದ್ರೋ ♦ ಬ್ರಾಹ್ಮಣೋ ನ ಚ ಬ್ರಾಹ್ಮಣಃ ॥

ಶ್ಲೋ ॥ ಯತ್ರೈತ ಲ್ಲಕ್ಷ್ಯತೇ ಸರ್ಪ! ♦ ವೃತ್ತಂ ಸ ಬ್ರಾಹ್ಮಣಃ ಸ್ಮೃತಃ ।
ಯತ್ರೈತ ನ್ನಭವೇತ್ ಸರ್ಪ! ♦ ತಂ ಶೂದ್ರ ಮಿತಿ ನಿರ್ದಿಶೇತ್ ॥

(ಶ್ಲೋಕ 22 ರಿಂದ 26.)

ಯುಧಿಷ್ಠಿರನ ಉತ್ತರಕ್ಕೆ ಬಹಳ ಸಂತೋಷಪಟ್ಟ ಆ ಅಜಗರನು, 'ಓ ಯುಧಿಷ್ಠಿರ! ಚಾತುರ್ವರ್ಣ್ಯಗಳೂ ಪ್ರಮಾಣವೇ, ಪರಬ್ರಹ್ಮನು ಸತ್ಯವಾದದ್ದು ಮತ್ತು ನಿತ್ಯವಾದದ್ದು ಎಂಬ ವಿಷಯವು ಸರಿಯೇ ಹೌದು. ಸತ್ಯ, ದಾನ, ಅಕ್ರೋಧ, (ಕೋಪವಿಲ್ಲದೆ ಶಾಂತಿಯಿಂದಿರುವಿಕೆ), ಆನೃಶಂಸ್ಯ (ಘಾತುಕತನ ಅಥವ ಕ್ರೌರ್ಯವಿಲ್ಲದಿರುವಿಕೆ), ಅಹಿಂಸೆ (ಪರಪೀಡನೆಯಿಲ್ಲದಿರುವುದು), ಕರುಣೆ, ಸತ್ಪಾತ್ರದಾನ ಇವೇ ಮೊದಲಾದ ಬ್ರಾಹ್ಮಣನಿಗಿರಬೇಕಾದ ಗುಣಗಳು ಶೂದ್ರರಲ್ಲಿದ್ದದ್ದೇ ಆದರೆ, ಅವರು ಯಾವ ವರ್ಗಕ್ಕೆ ಸೇರಿದವರಾಗುತ್ತಾರೆ? ಇದೊಂದು ವಿಷಯ. ಎರಡನೆಯದು, 'ಸುಖದುಃಖಗಳಿಲ್ಲದಿರುವುದೇ ಪರಮಪದವಿ' ಎಂದು ಹೇಳಿದೆಯಲ್ಲವೇ? ಆ ಸುಖದುಃಖಗಳಿಲ್ಲದಿರುವ ಸ್ಥಳವೇ ಇಲ್ಲವೆಂದು ನನ್ನ ಮತವು. ಈ ವಿಷಯದಲ್ಲಿ ನಿನ್ನಭಿಪ್ರಾಯವೇನು'' ಎಂದು ಕೇಳಲು ಧರ್ಮರಾಯನು, 'ಸರ್ಪಾಧಿರಾಜನೇ! ಕೇಳು. ಮೇಲೆ ಹೇಳಿದ ಸದ್ಗುಣಗಳು ಶೂದ್ರನಲ್ಲಿದ್ದು ಬ್ರಾಹ್ಮಣನಲ್ಲಿಲ್ಲವಾದರೆ, ಆ ಶೂದ್ರಯೋನಿಯಲ್ಲಿ ಹುಟ್ಟಿದವನು ಬ್ರಾಹ್ಮಣನೇ ಹೊರತು, ಶೂದ್ರನಲ್ಲ. ಮತ್ತು ಆ ಗುಣಗಳಿಲ್ಲದ ಬ್ರಾಹ್ಮಣನು ಶೂದ್ರನೇ ಹೊರತು, ಬ್ರಾಹ್ಮಣನೆಂದೆನಿಸಲಾರನು. ರಾಗದ್ವೇಷಾದಿಗಳೂ, ಸುಖದುಃಖಗಳೂ, ಜನನಮರಣಗಳೂ, ಆಕಾರವಿಕಾರಗಳೂ ಎಂಬ ಈ ದ್ವಂದ್ವಗುಣಗಳು ನಿರ್ಗುಣನಾದ ಪರಬ್ರಹ್ಮನಿಗಿಲ್ಲವು. ಯಾವಾತನು ಪಂಚೇಂದ್ರಿಯ ವ್ಯಾಪಾರಗಳಿಗೆ ತುತ್ತಾಗದೆ, ದ್ವಂದ್ವಾತೀತನಾಗು

ತ್ಮಾನೆಯೋ ಅವನೇ ಪರಬ್ರಹ್ಮ; ಆ ಸ್ಥಿತಿಯೇ ಪರಮಪದವಿ; ಮತ್ತು ಅದೇ ಜೀವಿಗಳು ಹೊಂದುವ ಕಡೆಯ ಸ್ಥಿತಿ.'' ಎಂದು ಉತ್ತರ ಕೊಟ್ಟನು. ಇದೂ ಅಲ್ಲದೆ,

ಶ್ಲೋ ॥ 'ಜನ್ಮನಾ ಜಾಯತೇ ಶೂದ್ರಃ ♦ ಕರ್ಮಣಾ ತು ದ್ವಿಜಾಯತೇ' ।

ಎಂಬಂತೆ ಪ್ರತಿಯೊಬ್ಬನೂ ಹುಟ್ಟಿದಾಗ ಶೂದ್ರನಾಗಿರುತ್ತಾನೆ. ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೆ ಸಹಕಾರಿಗಳಾದ ಕರ್ಮಗಳೇ ಅವನಿಗೆ ಬ್ರಾಹ್ಮಣತ್ವವನ್ನು ಕೊಡುವವುಗಳು. ಆದುದರಿಂದ ಮನುಷ್ಯನಿಗೆ ಶ್ರೇಷ್ಠತ್ವವನ್ನು ಕೊಡಬೇಕಾದರೆ ಅವನು ಮಾಡುವ ಸತ್ಕರ್ಮಗಳೇ ಹೊರತು, ಅವನು ಹುಟ್ಟುವ ಯೋನಿವಿಶೇಷಗಳಲ್ಲ. ಮತ್ತು,

ಶ್ಲೋ ॥ "ಕಿಂ ಕುಲೇನ ವಿಶಾಲೇನ ♦ ವಿದ್ಯಾಹೀನಸ್ಯ ದೇಹಿನಃ ।
ಅಕುಲೀನೋಽಪಿ ವಿದ್ಯಾವಾನ್ ♦ ದೈವತೈರಪಿ ಪೂಜ್ಯತೇ ॥
(ನೀತಿಚಿಂತಾಮಣಿ.)

ಉತ್ತಮ ಗತಿಯನ್ನು ಕೊಡುವ ವಿದ್ಯೆಯನ್ನು ಕಲಿಯದಿರುವವನಿಗೆ, ಎಷ್ಟೇ ದೊಡ್ಡ ವಂಶದಲ್ಲಿ ಜನ್ಮ ಸಿಕ್ಕಿದರೂ ಅದರಿಂದೇನೂ ಫಲವಿಲ್ಲ. ಬ್ರಹ್ಮವಿದ್ಯಾಪಾರಂಗತನು ಹೀನಜಾತಿಯಲ್ಲುದಿಸಿದ್ದರೂ, ದೇವತೆಗಳಿಂದಲೂ ಕೂಡ ಪೂಜಿಸಲ್ಪಡುತ್ತಾನೆ. ಇಂತಹ ವಿದ್ಯೆಯು ಬರಬೇಕಾದರೆ ನಿರ್ಗುಣನಾದ ಪರಬ್ರಹ್ಮನಲ್ಲಿ ಅವಿಚ್ಛಿನ್ನವಾದ ಭಕ್ತಿಯೆಂಬುದಿರಬೇಕು. ಭಕ್ತಿಶ್ರದ್ಧೆಗಳಿದ್ದರೆ, ಜ್ಞಾನೋದಯವಾಗುತ್ತದೆ. ಆ ಜ್ಞಾನದಿಂದ ಮುಕ್ತಿಯು ದೊರಕುತ್ತದೆಯೆಂಬುದೇ ವೇದಾಂತ ಶಾಸ್ತ್ರದ ತಿರುಳು. ಅಂದರೆ ಮುಕ್ತಿಗೆ ಭಕ್ತಿಯು ಅತ್ಯವಶ್ಯಕ. ಇವುಗಳು ಒಂಭತ್ತು ವಿಧಗಳು. ಈ ನವ ವಿಧ ಭಕ್ತಿಗಳಾವುವೆಂಬುದನ್ನು ಪ್ರಹ್ಲಾದನು ಹಿರಣ್ಯಕಶಿಪುವಿಗೆ ತಿಳಿಯಹೇಳಿದ್ದಾನೆ. ಅವಾವುವೆಂದರೆ, ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಶರೀರದಿಂದಲೂ, ಪರಮಾತ್ಮನಾದ ಆ ಶ್ರೀ ಹರಿಯನ್ನೇ ನಂಬಿರುವುದಲ್ಲದೆ, ಆ ಭಗವಂತನ ದಿವ್ಯ ಚರಿತ್ರೆಗಳನ್ನು ಕೇಳುತ್ತಲೂ, ಆ ಶ್ರೀ ಹರಿಗೆ ದಾಸನಾಗಿರುತ್ತಲೂ, ಆತನನ್ನು ನಮಸ್ಕರಿಸುತ್ತಲೂ, ಪೂಜೆಮಾಡುತ್ತಲೂ, ಸೇವಿಸುತ್ತಲೂ, ಆತನನ್ನು ಮನಸ್ಸಿನಲ್ಲಿ ಅತ್ತಿತ್ತ ಕದಲದೆ

ನಿಲ್ಲಿಸಿಕೊಳ್ಳುತ್ತಲೂ, ಭಜನೆಮಾಡುತ್ತಲೂ, ಮತ್ತು ಸ್ಮರಿಸುತ್ತಲೂ ಇರುವುವೇ ನವವಿಧ ಭಕ್ತಿಮಾರ್ಗಗಳು. ಅವುಗಳನ್ನು ಅನುಸರಿಸುವುದೇ ಮುಕ್ತಿಸಾಧನೆಗೆ ಮಾರ್ಗ.

ಮತ್ತು, ಶ್ರೀ ಭಗವದ್ಗೀತೆ, 9ನೇ ಅಧ್ಯಾಯ, 32-33-34ನೇ ಶ್ಲೋಕಗಳಲ್ಲಿ ಹೀಗೆಂದು ಹೇಳಿದೆ.

ಶ್ಲೋ ॥ ಮಾಂ ಹಿ ಪಾರ್ಥ! ವ್ಯಪಾಶ್ರಿತ್ಯ ♦ ಯೇऽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಃ ತಥಾ ಶೂದ್ರಾಃ ♦ ತೇऽಪಿ ಯಾಂತಿ ಪರಾಂ ಗತಿಂ ॥

ಭಾಮಿನೀಷಟ್ಪದಿ ॥

ಆರು ಕೆಲವರು ಪಾಪಿಗಳು ಸಂ।
ಸಾರ ಭಯದಿಂ ದೆನ್ನ ನೆಟ್ಟನೆ ।
ಸಾರಿ ಭಜಿಸುತ್ತಿಹರು ಕೇಳೈ ಪಾರ್ಥ! ನಿಶ್ಚಯವ ॥
ನಾರಿಯರು ವರವೈಶ್ಯಶೂದ್ರವಿ-।
ಕಾರಿಗಳು ಮೊದಲಾಗಿ ಯೆನ್ನಯು-।
ದಾರಪದವನು ಸೇರುವರು ಕಲಿಪಾರ್ಥ! ಕೇಳೆಂದ ॥

(ಕರ್ಣಾಟ ಭಗವದ್ಗೀತೆ-ನಾಗರಸ ಕವಿ.)

ಶ್ಲೋ ॥ ಕಿಂ ಪುನ ರ್ಬ್ರಾಹ್ಮಣಾಃ ಪುಣ್ಯಾಃ ♦ ಭಕ್ತಾ ರಾಜರ್ಷಯ ಸ್ತಥಾ ।
ಅನಿತ್ಯ ಮಸುಖಂ ಲೋಕ ♦ ಮಿಮಂ ಪ್ರಾಪ್ಯ ಭಜಸ್ವ ಮಾಂ ॥

ಭಾಮಿನೀಷಟ್ಪದಿ ॥

ಧರ್ಮಿಯಹ ಬ್ರಾಹ್ಮಣನು ಭಕ್ತಿಯೆ ।
ವರ್ಮವಹ ಕ್ಷತ್ರಿಯನು ಮೊದಲಹ-।
ರುರ್ವಿಗಧಿಕದ ಪದವ ಪಡೆಯುವು ದೆಂಬು ದಚ್ಚರಿಯೇ? ॥
ಕರ್ಮ ಸಾಧನ ವೆನಿಪ ಮಾನವ ।
ಧರ್ಮವನು ನೀನೈದೆ ಮರೆಯದೆ ।
ನಿರ್ಮಲದೊಳಾತರದೊಳೆನ್ನನು ಭಜಿಸು ನೀನೆಂದ ॥ (ನಾಗರಸ ಕವಿ.)

ಶ್ಲೋ ॥ ಮನ್ಮನಾ ಭವ ಮದ್ಭಕ್ತೋ ♦ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವ ♦ ಮಾತ್ಮಾನಂ ಮತ್ಪರಾಯಣಃ ॥

ಭಾಮಿನೀ ಷಟ್ಪದಿ ||

ಎನ್ನೊಳೇ ಮನವನು ನಿಲಿಸು ನೀ-|
ನೆನ್ನನೇ ಜಪಿ ಸೆರಗು ನಿಜದಿಂ |
ದೆನ್ನೊಳತ್ಯಾಸಕ್ತಿಯಿಂದಲೆ ಭಕ್ತ ನೀನಾಗು ||
ಭಿನ್ನಭಾವವ ನುಳಿದು ಚಿತ್ತವ |
ನೆನ್ನೊಳೀಪರಿ ನಿಲಿಸಿದೊಡೆ ನೀ-|
ನೆನ್ನ ನೈದುವೆ ಸತ್ಯವಿದು ಕಲಿಪಾರ್ಥ! ಕೇಳೆಂದ || (ನಾಗರಸ ಕವಿ.)

"ಓ ಅರ್ಜುನಾ! ಸಂಸಾರಸಮುದ್ರದಲ್ಲಿ ಸಿಕ್ಕಿ ನರಳುತ್ತಿರುವ ಕೆಲವು ಪಾಪಿಗಳು 'ನೀನೇ ಗತಿ' ಯೆಂದು ನನ್ನನ್ನು ಭಜಿಸಿ ಮರೆ ಹೊಕ್ಕಿದ್ದೇ ಆದರೆ, ಅವರು ಸ್ತ್ರೀಯರಾಗಲಿ, ವೈಶ್ಯ ಶೂದ್ರ ಯೋನಿಗಳಲ್ಲಿ ಹುಟ್ಟಿದವರಾಗಲಿ ನನ್ನನ್ನು ಸೇರುವರು, ಈ ಮಾತು ನಿಜ. ಹೀಗಿರಲು ಬ್ರಾಹ್ಮಣರು, ಕ್ಷತ್ರಿಯರು, ಭಕ್ತರು, ರಾಜರ್ಷಿಗಳು ನನ್ನನ್ನೇ ಭಜಿಸಿ ದ್ದಾದರೆ, ಅಂಥವರಿಗೆ ನನ್ನ ಸಾನ್ನಿಧ್ಯ ದೊರಕುವುದು ದುರ್ಲಭವಾ ದೀತೇ? ಆದುದರಿಂದ ಈ ಪ್ರಪಂಚದ ಸುಖವನ್ನು ಅನಿತ್ಯವೆಂದೆಣಿಸಿ ನನ್ನನ್ನೇ ನೀನು ನೆರೆನಂಬು. ಮತ್ತು ನನ್ನಲ್ಲಿಯೇ ನಿನ್ನ ಮನಸ್ಸನ್ನು ನಿಲ್ಲಿಸಿ, ನನ್ನನ್ನೇ ಧ್ಯಾನಮಾಡುತ್ತ, ನನಗೇ ನಮಸ್ಕರಿಸುತ್ತ, ನನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ನೀನಿಡುವವನಾಗು. ಜೀವಾತ್ಮ ಪರಮಾತ್ಮರ ಭಿನ್ನಭಾವವನ್ನು ನೀನು ಸಂಪೂರ್ಣವಾಗಿ ತೊರೆದು ಮನಸ್ಸನ್ನು ಪರ ಮಾತ್ಮಸ್ವರೂಪವಾದ ನನ್ನಲ್ಲಿ ಐಕ್ಯಮಾಡಿದ್ದೇ ಆದರೆ, ನೀನೇ ನಾನಾಗುತ್ತಿ. ಈ ಮಾತು ಸತ್ಯ. ಆದುದರಿಂದ ಪ್ರತಿ ಜೀವಿಗೆ ಅವನ ಕರ್ಮಗಳಿಂದ ಅವ ನಿಗೆ ಪ್ರಶಸ್ತಿಯೇ ಹೊರತು, ಜನ್ಮದಿಂದಲ್ಲವೆಂಬುದನ್ನು ಚನ್ನಾಗಿ ತಿಳಿ" ಎಂದು ಶ್ರೀ ಕೃಷ್ಣ ಪರಮಾತ್ಮನು ಅರ್ಜುನನನ್ನು ಕುರಿತು ಹೇಳಿದನು.

'ಮೋಕ್ಷಸಾಧನೆಗೆ ಜಾತಿಭೇದಗಳು ಮುಖ್ಯವಲ್ಲ, ಬ್ರಹ್ಮಜ್ಞಾನವೇ ಮುಖ್ಯ. ಈ ಬ್ರಹ್ಮಜ್ಞಾನವನ್ನು ಹೊಂದಿದವನು ಚಂಡಾಲನಾದರೂ ಮುಕ್ತಿಸಾಧನೆಯನ್ನು ಮಾಡಬಹುದು' ಎಂಬ ವಿಷಯವನ್ನು ತಿಳಿಯ ಪಡಿಸುವುದಕ್ಕೆ ಒಂದು ಇತಿಹಾಸವುಂಟು. ಅದೇನೆಂದರೆ ಶ್ರೀಮತ್ಪರಮ ಹಂಸ ಪರಿವ್ರಾಜಕಾಚಾರ್ಯರಾದ ಶಂಕರಾಚಾರ್ಯರಿಗೆ ಮೊದಲು ಜಾತಿ

ಭೇದಾಭಿಮಾನವಿದ್ದಿತು. ಅದನ್ನು ಹೋಗಲಾಡಿಸುವ ಸಲುವಾಗಿಯೇ ಪರಮಾತ್ಮಸ್ವರೂಪನಾದ ಪರಮಶಿವನು ಚಂಡಾಲವೇಷಧಾರಿಯಾಗಿ ಬಂದು, ಕಾಶೀಕ್ಷೇತ್ರದಲ್ಲಿ ಆಚಾರ್ಯರಿಗೆ ಬ್ರಹ್ಮಬೋಧೆಯನ್ನು ಮಾಡುವುದರ ಮೂಲಕ ಅವರಿಗಿದ್ದ ಜಾತ್ಯಭಿಮಾನವನ್ನು ಹೋಗಲಾಡಿಸುವ ವಿಷಯವು ಶಂಕರವಿಜಯದಲ್ಲಿ ಪ್ರತಿಪಾದಿತವಾಗಿದೆ. ಅದನ್ನು ಈ ಕೆಳಗೆ ಎತ್ತಿ ಬರೆದಿದೆ.

ಗದ್ಯ ॥ " ಇಹ ಖಲು ಪರಮಕಾರುಣಿಕೋ ಭಗವಾನ್ ಪರಮಶಿವಃ ಅನರ್ಥ ಮಕರಾಕರೇ ಸಂಸಾರಸಾಗರೇ ನಿಮಗ್ನಂ ಲೋಕ ಮುದ್ಧರ್ತುಮೀಷುಃ, ಕದಾಚಿತ್ ಕಾಶೀಂ ಪ್ರತಿ ಗಚ್ಛಂತ ಮಾಚಾರ್ಯಂ ಪ್ರತಿ ಚಂಡಾಲವೇಷಧಾರೀ ಮಹೇಶ್ವರಃ ಸಮಾಜಗಾಮ ♦ ತತೋ ಜಗಾದ ಭಗವಾ ನಾಚಾರ್ಯಃ♦ 'ಹೇ ಚಂಡಾಲಾಧಮ ! ಇತೋ ಗಚ್ಛ ಗಚ್ಛ ' ಇತಿ ♦ " ತತಃ ಚಂಡಾಲ ವೇಷಮಂಡಿತಃ ಶಿವಃ ಪ್ರತ್ಯಾಹ ♦

ಮೇಲೆ ವಿವರಿಸಿದಂತೆ, ಈ ಭೂಲೋಕದಲ್ಲಿ ಅನರ್ಥಗಳೆಂಬ ಮೊಸಳೆಗಳಿಂದ ತುಂಬಿದ ಸಂಸಾರಸಾಗರದಲ್ಲಿ ತೇಲಿ ಮುಳುಗುತ್ತಲಿರುವ ಜನಸಮುದಾಯವನ್ನು ಉದ್ಧಾರಮಾಡುವ ಸಲುವಾಗಿ ಪರಮ ಕಾರುಣಿಕನಾದ ಪರಮಶಿವನು, ತಾನು ಚಂಡಾಲವೇಷಧಾರಿಯಾಗಿ ಒಂದಾನೊಂದು ದಿನ ಕಾಶೀಕ್ಷೇತ್ರದ ಒಂದು ಬೀದಿಯಲ್ಲಿ ನಡೆದುಹೋಗುತ್ತಿದ್ದ ಆ ಶ್ರೀ ಶಂಕರಾಚಾರ್ಯರಿಗೆ ಅಡ್ಡಲಾಗಿ ಬಂದನು. ಆಗ ಆಚಾರ್ಯರು ತಮಗಿರುವ ಜಾತ್ಯಭಿಮಾನ ಮತ್ತು ದೇಹಾಭಿಮಾನ ಇವುಗಳಿಂದ ಕೂಡಿದವರಾಗಿ ಆ ಚಂಡಾಲನಲ್ಲಿ ಕೋಪಗೊಂಡು, " ಓ ಚಂಡಾಲಾಧಮ ! ಇಲ್ಲಿಂದ ದೂರ ಸರಿ; ದೂರ ಸರಿ " ಎಂದು ಹೇಳಿದರು. ಅದಕ್ಕೆ ಆ ಚಂಡಾಲ ವೇಷಮಂಡಿತನಾದ ಶಿವನು ಆಚಾರ್ಯರನ್ನು ಕುರಿತು ಹೀಗೆಂದು ಹೇಳಿದನು.

ಶ್ಲೋ ॥ " ಅನ್ನಮಯಾ ದನ್ನಮಯ ♦ ಮಥವಾ ಚೈತನ್ಯ ಮೇವ ಚೈತನ್ಯಾತ್ ।
ಯತಿವರ ! ದೂರೀಕರ್ತುಂ ♦ ವಾಂಛಸಿ ಕಿಂ ಬ್ರೂಹಿ 'ಗಚ್ಛ ಗಚ್ಛೇ'ತಿ ? ॥

ಹೇ, ಯತಿವರ ! ಅತ್ರ ಬ್ರೂಹಿ ಕಿಂ ಅನ್ನಮಯಾತ್ ಶರೀರಾತ್ ಅನ್ನಮಯಂ

ಶರೀರಂ ಗಚ್ಛಗಚ್ಛೇತಿ ದೂರೀಕರ್ತುಂ ವಾಂಛಸಿ? ಅಥವಾ ಚೈತನ್ಯಮೇವ ಗಚ್ಛಗಚ್ಛೇತಿ ವಾಂಛಸಿ ? ◆

"ಓ ಯತೀಶ್ವರಾ! ಅನ್ನಮಯವಾದ ನನ್ನದೇಹವನ್ನು, ಅದೇ ಅನ್ನಮಯವಾದ ನಿನ್ನ ದೇಹದಿಂದ ದೂರಕ್ಕೆ ಹೋಗೆನ್ನುವೆಯಾ? ಅಥವಾ ನನ್ನ ಶರೀರಸ್ಥನಾದ ಚೈತನ್ಯವನ್ನು ಅಂದರೆ ಜೀವಾತ್ಮನನ್ನು ನಿನ್ನ ಶರೀರದೊಳಗಿರುವ ಚೈತನ್ಯನಿಂದ (ಜೀವಾತ್ಮನಿಂದ) ದೂರ ಹೋಗ ಬೇಕೆಂದು ಹೇಳುವೆಯಾ! ಇದನ್ನು ಸರಿಯಾಗಿ ತಿಳಿದುಕೋ. ಏಕೆಂದರೆ,

"ಉಭಯೋ ರಪ್ಯನ್ನಕಾರ್ಯತ್ವೇ ನೈಕತ್ವಾತ್"

ಎಂಬಂತೆ, ನಮ್ಮಿಬ್ಬರ ಶರೀರಗಳೂ ಅನ್ನಮಯಕೋಶದಿಂದಲ್ಲವೇ ಉತ್ಪತ್ತಿಯಾದವುಗಳು. ಈರೀತಿಯಾಗಿ ಜನ್ಮವನ್ನೈತ್ತಿದ ನಮ್ಮಿಬ್ಬರ ಶರೀರಗಳಿಗಿರುವ ವ್ಯತ್ಯಾಸವಾವುದು? ಅಲ್ಲದೆ, ನಿನ್ನ ದೇಹವು ಸಂಸ್ಕಾರ ಗಳಿಂದ ಪವಿತ್ರವಾಗಿದೆಯೆಂದೂ, ನನ್ನ ದೇಹವು ಹಾಗೆ ಪರಿಶುದ್ಧವನ್ನು ಹೊಂದಿಲ್ಲವೆಂದೂ ಹೇಳುವೆಯಾ? ಅದಕ್ಕೂ ಕಾರಣವಿಲ್ಲ. ಏಕೆಂದರೆ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ನರ ಇವುಗಳಿಂದ ಮಾಡಲ್ಪಟ್ಟ ನಮ್ಮಿಬ್ಬರ ಶರೀರಗಳು ಸ್ನಾನಾದಿ ಸಂಸ್ಕಾರಗಳಿಂದ ಪ್ರತಿನಿತ್ಯವೂ ಶುದ್ಧಿಯನ್ನು ಪಡೆಯುತ್ತಿದ್ದರೂ, ಪುನಃಪುನಃ ಅದು ಮಾಲಿನ್ಯವನ್ನು ಹೊಂದುತ್ತಲೇ ಇರುತ್ತದೆ. ಬಾಹ್ಯಶುದ್ಧಿಯನ್ನು ಹೊಂದುವ ಶರೀರ ಗಳು ನಮ್ಮಿಬ್ಬರಿಗೂ ಇರುವುವಾದುದರಿಂದ ಶರೀರ ಮಾಲಿನ್ಯಗಳನ್ನು ಕುರಿತು ದೂರ ಹೋಗೆನ್ನುವುದೂ ನ್ಯಾಯಸಮ್ಮತವಲ್ಲ. ಇದಕ್ಕೆ ಶ್ರುತಿ ಪ್ರಮಾಣಗಳುಂಟು.

ಶ್ರುತಿ ॥ "ಶ್ರೂಯತೇ ಹಿ ಶರೀರಸ್ಯ ಕಾರಣಂ ಚಾನ್ನ ಮೇವ ತು" ।

"ಓಷಧಿ ಭ್ಯೋ ಽ ನ್ನಂ ◆ ಅನ್ನಾ ತ್ಪುರುಷಃ ◆ ಸ ವಾ ಏಷ ಪುರುಷೋ ಅನ್ನರಸ– ಮಯಃ ಇತಿ ◆"

ಶರೀರೋತ್ಪತ್ತಿಗೆ ಅನ್ನವು (ಆಹಾರವು) ಅತ್ಯವಶ್ಯಕ, ಓಷಧಿಗಳಿಂ ದುಂಟಾದ ವ್ರೀಹ್ಯಾದಿ ಧಾನ್ಯಗಳನ್ನೇ ಅನ್ನವನ್ನಾಗಿ ಮಾಡಿಕೊಂಡು

ಪ್ರಾಣಿಗಳು ಭುಜಿಸಿ ಶರೀರವನ್ನು ಬೆಳೆಸುತ್ತವೆ. ದೇಹೋತ್ಪತ್ತಿಗ ಅನ್ನವು ಬೇಕು; ದೇಹವನ್ನು ಬೆಳೆಸುವುದಕ್ಕೂ ಅನ್ನ ಬೇಕು; ಆದು ರಿಂದಲೇ ಪುರುಷನು ಅನ್ನಮಯನೆನಿಸಿಕೊಳ್ಳುತ್ತಾನೆ. ಶರೀರ ರಹಸ್ಯ ಹೀಗಿರುವಾಗ, ನನ್ನ ದೇಹಕ್ಕೂ ನಿನ್ನ ದೇಹಕ್ಕೂ ಇರುವ ವ್ಯತ್ಯಾ ವೇನು? ಇಲ್ಲವೇ, ಯೋನಿಭೇದಗಳಿಂದ ಈ ಶರೀರಗಳು ಜನಿಸಿರುತ್ತ ಯೆಂದು ಹೇಳುವೆಯಾ? ಅದಕ್ಕೂ ಕಾರಣವಿಲ್ಲ. ಈ ದೇಹೋತ್ಪತ್ತಿಯು ಯಾವನ ಸಂಕಲ್ಪದಿಂದುಂಟಾಗುತ್ತದೆಯೋ, ಅಂತಹ ಪರಮಾತ್ಮ ಸಂಬಂಧವು ನಮ್ಮಿಬ್ಬರಿಗೂ ಒಂದೇ. ಆತನಿಗೆ ಜಾತಿಭೇದಗಳಿಲ್ಲ. ಪರಮಾತ್ಮನು ಪ್ರತಿ ಶರೀರವನ್ನೂ ವ್ಯಾಪಿಸಿರುತ್ತಾನೆ. ಆದುದರಿಂ ಆ ಪರಮಾತ್ಮನ ಸಾನ್ನಿಧ್ಯದಿಂದ ಚೈತನ್ಯವನ್ನು ಪಡೆದ ಈ ನನ್ನ ಮತ್ತು ನಿನ್ನ ಶರೀರಗಳಿಗಿರುವ ವ್ಯತ್ಯಾಸವೇನು? ಆ ಪರಮಾತ್ಮನು ತಾನ ಆಶ್ರಯಿಸಿರುವ ದೇಹವೆಂಬ ಗೂಡುಗಳನ್ನು ಬಿಟ್ಟುಬಿಟ್ಟರೆ ನಮ್ಮಿಬ್ಬ ಶರೀರಗಳೂ ಪ್ರೇತಭಾವನ್ನು ಹೊಂದುತ್ತವೆ. ಕಡೆಗೆ ಎರಡು ದೇಹಗಳಿಗೂ ಒಂದೇ ಸಂಸ್ಕಾರ. ಒಟ್ಟಿನಲ್ಲಿ ನಮ್ಮಿಬ್ಬರ ದೇಹಗಳು ಜನ್ಮಿಸಿದುದು ಒಂದೇ ಯೋನಿಯಲ್ಲಿ, ಬೆಳೆದುದು ಒಂದೇ ಅನ್ನದಿಂದ, ಅಂತ್ಯದಲ್ಲಿ ನಶಿಸುವುದು ಒಂದೇ ಅಗ್ನಿಯಿಂದ. ಈ ಸಮಾನಗುಣಗಳಿಂದ ಕೂಡಿರುವ ಮತ್ತು ಒಂದೇ ವಿಧವಾದ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ಹೊಂದಿ, ಅವಕ್ಕನುಗುಣಗಳಾದ ಕರ್ಮಗಳನ್ನು ಮಾಡುತ್ತಿರುವ ಈ ನಮ್ಮಿಬ್ಬರ ದೇಹಗಳ ವಿಷಯದಲ್ಲಿ ಭೇದವನ್ನೆಣಿಸುವುದಕ್ಕೆ ಪ್ರಬಲವಾದ ಕಾರಣವಾವುದು?

ಅಥವಾ, ನನ್ನಲ್ಲಿ ಮತ್ತು ನಿನ್ನಲ್ಲಿ ಆವರಿಸಿರುವ ಚೈತನ್ಯಗಳನ್ನು ಕುರಿತು ಭೇದವೆಣಿಸುವೆಯಾ? ಅದಕ್ಕೂ ಕಾರಣವಿಲ್ಲ. ಹೇಗೆಂದರೆ,

ಶ್ರುತಿ ॥ "ಚೈತನ್ಯಸ್ಯ ಸರ್ವತ್ರೈಕರೂಪತ್ವಾತ್"

ಶ್ಲೋ ॥ "ಏಕೋ ದೇವಃ ಸರ್ವಭೂತೇಷು ಗೂಢಃ ।
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ" ॥

ಇತ್ಯಾದಿ ಶ್ರುತಿವಾಕ್ಯಗಳ ಪ್ರಮಾಣದಿಂದ ಚೈತನ್ಯಸ್ವರೂಪನಾದ ಪರಮಾತ್ಮನು ಸರ್ವದಾ ಒಂದೇ ರೂಪದಿಂದ ಮೆರೆಯುತ್ತಿರುತ್ತಾನೆ; ಮತ್ತು ಸರ್ವಭೂತಗಳಲ್ಲಿಯೂ ಈ ಒಬ್ಬ ಪರಮಾತ್ಮನೇ ಗೂಢವಾಗಿಯೂ ಸಾಕ್ಷಿಭೂತನಾಗಿಯೂ ನೆಲೆಸಿರುತ್ತಾನೆ.

ಶ್ರುತಿ ॥ "ಅಣೋ ರಣೀಯಾ಼ನ್ ಮಹತೋ ಮಹೀಯಾ಼ನ್ ।
ಆತ್ಮಾಸ್ಯ ಜಂತೋ ರ್ನಿಹಿತೋ ಗುಹಾಯಾಂ" ॥

(ನಾರಾಯಣೋಪನಿಷತ್ತು.)

ಕಣ್ಣಿಗೆ ಕೂಡ ಕಾಣಬರದ ಸಣ್ಣಸಣ್ಣ ಕ್ರಿಮಿಕೀಟಾದಿ ಪ್ರಾಣಿಗಳಲ್ಲಿಯೂ, ಮತ್ತು ಅತಿ ದೊಡ್ಡವಾದ ಆನೆ ಮೊದಲಾದ ಪ್ರಾಣಿಗಳಲ್ಲಿಯೂ, ಆ ಪರಬ್ರಹ್ಮನಾದ ಆತ್ಮನು ಒಂದೇ ವಿಧವಾಗಿ ವ್ಯಾಪಿಸಿರುತ್ತಾನೆ. ಅಂದರೆ ದೊಡ್ಡ ಪ್ರಾಣಿಗಳಲ್ಲಿ ದೊಡ್ಡವನಾಗಿಯೂ ಸಣ್ಣ ಪ್ರಾಣಿಗಳಲ್ಲಿ ಸಣ್ಣವನಾಗಿಯೂ ಆತ್ಮನಿರುವನೆಂದೆಣಿಸದೆ ಎಲ್ಲೆಲ್ಲಿಯೂ ಒಂದೇ ವಿಧವಾಗಿರುತ್ತಾನೆಂಬುದೇ ಮೇಲಿನ ಶ್ರುತಿಯ ಭಾವಾರ್ಥ. ಎಲ್ಲೆಲ್ಲಿಯೂ ಪರಿಪೂರ್ಣವಾಗಿ ಆವರಿಸಿರುವ ಒಂದು ಆಕಾಶವೇ ಭಾಂಡದೊಳಗಿರುವಾಗ 'ಭಾಂಡಾಕಾಶ' ವೆಂದೂ, ಉಪಾಧಿರಹಿತವಾಗಿರುವ ಆಕಾಶಕ್ಕೆ 'ಮಹಾಕಾಶ' ವೆಂದೂ ನಾಮಗಳುಂಟು. ಆದರೆ ಭಾಂಡಕ್ಕೆ ಉಪಾಧಿಯಾಗಿರುವ ಹೆಂಚು ಒಡೆದೊಡನೆಯೇ ಭಾಂಡಾಕಾಶವು ಮಹಾಕಾಶದಲ್ಲಿ ಕಲೆತುಹೋಗುತ್ತದೆ. ಅದರಂತೆಯೇ ಜೀವಿಗಳಿಗೆ ಉಪಾಧಿಗಳಾಗಿರುವ ಈ ಶರೀರವೆಂಬ ಗೂಡು ನಶಿಸಿದ ತಕ್ಷಣವೇ ಜೀವಾತ್ಮನು ಪರಮಾತ್ಮನಲ್ಲೈಕ್ಯವಾಗುತ್ತಾನೆ. ಹೀಗಿರಲು ಪರಮಾತ್ಮನ ಅಂಶಗಳಾದ ಜೀವಾತ್ಮನು ನನ್ನ ದೇಹದಲ್ಲಿ ಮತ್ತು ನಿನ್ನ ದೇಹದಲ್ಲಿರುವುದರಿಂದ ಚೈತನ್ಯಗಳಿಗೆ ವ್ಯತ್ಯಾಸವುಂಟೇ? ಎಂದಿಗೂ ಇಲ್ಲ. ಏಕೆಂದರೆ,

ಶ್ಲೋ॥ "ಕಿಂ ಗಂಗಾಂಬುನಿ ಬಿಂಬಿತೇಽಂಬರಮಣೌ ♦ ಚಂಡಾಲವಾಟೀಪಯಃ ।
ಪೂರೇವಾಂತರ ಮಸ್ತಿ ಕಾಂಚನಘಟೀ ♦ ಮೃತ್ಕುಂಭಯೋ ರ್ವಾಂಬರೇ ॥
ಪ್ರತ್ಯಗ್ವಸ್ತುನಿ ನಿಸ್ತರಂಗ ಸಹಜಾ ♦ ನಂದಾವಬೋಧಾಂಬುಧೌ ।
ವಿಪ್ರೋಽಯಂ ಶ್ವಪಚೋಽಯ ಮಿತ್ಯಪಿ ಮಹಾನ್♦ಕೋಽಯಂ ವಿಭೇದಭ್ರಮಃ"

ಓ ಯತಿವರಾ !

ಅಹಂಕಾರಕ್ಕೆ ದೂರಸ್ಥನಾಗಿದ್ದು, ಪ್ರತ್ಯಗಾತ್ಮನಲ್ಲಿ ಕಲತಿದ್ದೇ ಆದರೆ ಆಗ, ಅಲೆಗಳಿಲ್ಲದ ಸಮುದ್ರಗಳು ಹೇಗಿರುವವೋ ಹಾಗೆಯೇ, ನೀನು ಬ್ರಹ್ಮಾನಂದವೆಂಬ ಸಮುದ್ರದಲ್ಲಿ ಮುಳುಗಿರುವವನಾಗಿರುತ್ತಿ. ಅಂತಹ ಸಮಯದಲ್ಲಿ ಬ್ರಾಹ್ಮಣನೆಂಬುದಾಗಿಯೂ ಚಂಡಾಲನೆಂಬುದಾಗಿಯೂ ಭೇದಭಾವವು ನಿನಗುಂಟಾಗುತ್ತದೆಯೇ? ಎಂದಿಗೂ ಈ ಭೇದವಿರಲಾರದು. ಹೇಗೆಂದರೆ, ಗಂಗಾನದಿಯಲ್ಲಿರುವ ಜಲದಲ್ಲಿಯೂ, ಚಂಡಾಲರ ಬೀದಿಯಲ್ಲಿನ ಭಾವಿಯ ನೀರಿನಲ್ಲಿಯೂ ಒಬ್ಬ ಸೂರ್ಯನೇ ಪ್ರತಿಬಿಂಬಿಸುತ್ತಿರುವುದು ಸಹಜ. ಆ ಸೂರ್ಯನಿಗೆ 'ಇದು ಗಂಗೋದಕ, ಇದು ಹೊಲೆಯನ ನೀರು' ಎಂಬ ಭೇದವಿಲ್ಲದಿರುವಂತೆ, ಚಂಡಾಲಯೋನಿಯಲ್ಲಿ ಜನಿಸಿರುವ ನನ್ನಲ್ಲಿಯೂ, ಯತೀಶ್ವರನಾದ ನಿನ್ನಲ್ಲಿಯೂ ಪ್ರಕಾಶಿಸುತ್ತಿರುವ ಪ್ರತ್ಯಗಾತ್ಮನಿಗೆ ಎಂದಿಗೂ ಭೇದವಿಲ್ಲ. ಇದೂ ಅಲ್ಲದೆ, ಭಂಗಾರದ ಕೊಡದಲ್ಲಿಯೂ, ಮಣ್ಣಿನ ಮಡಕೆಯಲ್ಲಿಯೂ ವ್ಯಾಪಿಸಿರುವ ಆಕಾಶಕ್ಕೆ ಯಾವ ರೀತಿಯಲ್ಲಿ ಭೇದವೆಂಬುದಿಲ್ಲದೆ ಒಂದೇ ಆಗಿರುತ್ತದೆಯೋ, ಹಾಗೆಯೇ ನಮ್ಮಿಬ್ಬರಲ್ಲಿಯೂ ವ್ಯಾಪಿಸಿರುವ ಪ್ರತ್ಯಗಾತ್ಮನ ಅಂಶವಾದ ಜೀವಾತ್ಮರಿಗೆ ಎಷ್ಟು ಮಾತ್ರವೂ ವ್ಯತ್ಯಾಸವಿಲ್ಲ. ಈ ವಿಧವಾದ ನಿದರ್ಶನಗಳಿಂದ ನನಗೂ ನಿನಗೂ ಯಾವ ಭೇದವೂ ಇರಲಾರದೆಂದು ತಿಳಿ." ಎಂದು ಚಂಡಾಲವೇಷಧಾರಿಯಾದ ಪರಶಿವನು ಶ್ರೀ ಶಂಕರಾಚಾರ್ಯರಿಗೆ ಬೋಧಿಸಿದನು.

ಗದ್ಯ ॥ "ಇತ್ಥಂ ವಿಶ್ವೇಶ್ವರವಾಕ್ಯಂ ನಿಶಮ್ಯ, ಸರ್ವಜ್ಞೋ ಭಗವಾನಾಚಾರ್ಯಃ ಸಕಲಸಾಧನಕಲಾಪೈಃ ಆಶ್ರಿತಾಧ್ಯಾತ್ಮಶಾಸ್ತ್ರಃ, ನಿರಂತರ ನಿರತಿಶಯ ನಿಜಾನಂದಾನುಸಂಧಾನತಯಾ ಉಪಶಾಂತಸ್ವಾಂತಃ, ಅತ ಏವ ವಿಗಳಿತಾಭಿಮಾನಃ, ಪುರುಷವಿಶೇಷಾಕಾಂಕ್ಷಿ ದುಪಲಕ್ಷ್ಯ, ತೇಷಾಂ ವಿನೈವ ಯೋಗ ಸಮಾಧಿಂ ಬ್ರಾಹ್ಮಣಾದ್ಯಭಿಮಾನಾಪನುತ್ತಯೇ ಸ್ವಪದವಿಶ್ರಾಂತಯೇ ಚ ಪಂಚಭಿಃ ಶ್ಲೋಕೈಃ ಸ್ವಾನುಭೂತಿ ಮಾವಿಷ್ಕರೋತಿ ♦ ತತ್ರಾಽಪಿ ಜಾಗ್ರದಾದ್ಯವಸ್ಥಾ ಪ್ರತಿಭಾಸಕತ್ವೇನ ಚ ಬ್ರಹ್ಮಾಽಭೇದಂ ದರ್ಶಯತಿ"

(ಶಂಕರವಿಜಯ.)

ಹೀಗೆಂದು ಹೇಳಿದ ಚಂಡಾಲವೇಷಧಾರಿಯಾದ ಪರಮಶಿವನ ವಾಕ್ಯಗಳನ್ನು ಕೇಳಿ, ಜ್ಞಾನೋದಯವುಂಟಾಗಿ ಸಕಲಶಾಸ್ತ್ರ ಪಾರಂಗತರಾದ ಶ್ರೀಮದಾಚಾರ್ಯರು ಪರಮಾನಂದಭರಿತರಾಗಿ ಮನಸ್ಸಿನಲ್ಲಿ ಶಾಂತಿಯನ್ನು ಪಡೆದು, ತಮಗಿದ್ದ ಜಾತ್ಯಭಿಮಾನವನ್ನು ಬಿಟ್ಟು ಮುಮುಕ್ಷುಗಳನ್ನು ಕಡೆಹಾಯಿಸುವುದಕ್ಕಾಗಿ ಸ್ವಾನುಭವವನ್ನು 'ಮನೀಷಾಪಂಚಕ' ವೆಂಬ ಐದು ಶ್ಲೋಕಗಳ ಮೂಲಕ ತಿಳಿಯಪಡಿಸಿರುತ್ತಾರೆ. ಆ ಶ್ಲೋಕರತ್ನಗಳನ್ನು ಈ ಕೆಳಗೆ ಎತ್ತಿ ಬರೆದಿದೆ.

ಶ್ಲೋ॥ 'ಜಾಗ್ರತ್ಸ್ವಪ್ನಸುಷುಪ್ತಿಷು ಸ್ಫುಟತರಾ ♦ ಯಾ ಸಂವಿ ದುಜ್ಜೃಂಭತೇ ।
ಯಾ ಬ್ರಹ್ಮಾದಿಪಿಪೀಲಿಕಾಂತತನುಷು ♦ ಪ್ರೋತಾ ಜಗತ್ಸಾಕ್ಷಿಣೀ ॥
ಸೈವಾ ಽಹಂ ನ ಚ ದೃಶ್ಯವಸ್ತ್ವಿತಿ'ದೃಢ ♦ ಪ್ರಜ್ಞಾ ಽಪಿ ಯಸ್ಯಾಸ್ತಿ ಚೇತ್।
ಚಂಡಾಲೋ ಽಸ್ತು ಸ ತು ದ್ವಿಜೋ ಽಸ್ತು ಗುರುರಿ♦ತ್ಯೇಷಾ ಮನೀಷಾ ಮಮ॥

ಅಂದರೆ, "'ಯಾವುದು ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳಲ್ಲಿಯೂ ಒಂದೇ ಸಮನಾಗಿ ಬೆಳಗುತ್ತಿರುತ್ತದೆಯೋ ಮತ್ತು ಯಾವುದು ಇರುವೆಯಿಂದ ಬ್ರಹ್ಮನವರಿವಿಗೂ ಇರುವ ಜೀವಕೋಟಿಗಳ ಶರೀರಗಳಲ್ಲಿ ವ್ಯಾಪಿಸಿ ಮೆರೆಯುತ್ತಿರುತ್ತದೆಯೋ, ಮತ್ತು ಯಾವುದು ಸಮಸ್ತಪ್ರಪಂಚಕ್ಕೂ ಸಾಕ್ಷಿಭೂತವಾಗಿರುತ್ತದೆಯೋ ಅಂತಹ ಪರಂಜ್ಯೋತಿಯೇ ನಾನು, ಕಣ್ಣಿಗೆ ಕಾಣ್ಬರುವ ವಸ್ತುವು ನಾನಲ್ಲ.' ಎಂಬ ದೃಢವಾದ ಪ್ರಜ್ಞೆಯು ಯಾವ ಮಹಾಪುರುಷನಿಗಿರುತ್ತದೆಯೋ, ಅಂಥವನು ಚಂಡಾಲನೇ ಆಗಿರಲಿ, ಅಥವಾ ಬ್ರಾಹ್ಮಣನೇ ಆಗಿರಲಿ, ನನಗೆ ಆತನೇ ಗುರುವು" ಎಂಬುದೇ ನನ್ನ ಮತವು.

ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ಈ ಐದೂ ಜ್ಞಾನೇಂದ್ರಿಯಗಳು, ಬಾಯಿ, ಕೈಕಾಲು, ಗುದ ಮತ್ತು ಮರ್ಮಸ್ಥಾನ ಈ ಐದೂ ಕರ್ಮೇಂದ್ರಿಯಗಳು; ಮತ್ತು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬಿವು ಅಂತಃಕರಣ ಚತುಷ್ಟಯಗಳು. ಈ ಮೇಲೆ ಹೇಳಿದವುಗಳಿಂದ ವಸ್ತುತಃ ವ್ಯಾಪಾರಗಳು ಯಾವ ಅವಸ್ಥೆಯಲ್ಲಿ ನಡೆಯುವುವೋ, ಅದಕ್ಕೆ ಜಾಗ್ರದವಸ್ಥೆಯೆಂದು ಹೆಸರು. ವಸ್ತುತಃ ವ್ಯಾಪಾರಗಳು ನಡೆಯದಿದ್ದರೂ,

ನಿದ್ರೆಮಾಡುತ್ತಿರುವಾಗ ಅವುಗಳು ನಡೆದಂತೆ ತೋರಿಬರುವುದೇ ಸ್ವಪ್ನಾವಸ್ಥೆಯೆಂದು ಕರೆಯಲ್ಪಡುವುದು. ಯಾವುದೊಂದು ವ್ಯಾಪಾರವೂ ನಡೆಯದೆ, ಅನಾದಿಯಿಂದ ಬಂದಂಥ ಜ್ಞಾನದೊಡನೆ ಮನಸ್ಸು ಯಾವಾಗ ಲೀನವಾಗುತ್ತದೆಯೋ, ಅದಕ್ಕೇ ಸುಷುಪ್ತ್ಯವಸ್ಥೆಯೆಂದು ಹೆಸರು. ಜಾಗ್ರದವಸ್ಥೆಯಲ್ಲಿ ಸುಷುಪ್ತಿಯನ್ನು ಪ್ರಕಾಶಿಸುವಂತೆ ಮಾಡಿದ್ದೇ ಆದರೆ, ಅಂದರೆ ಯಾವ ಕೋರಿಕೆಗಳನ್ನೂ ಮನಸ್ಸಿನಲ್ಲೆಣಿಸದೆ ಸರ್ವದಾ ಬಟ್ಟಬಯಲುಸ್ವರೂಪನಾದ ಪರಮಾತ್ಮನಲ್ಲಿಯೇ ಮನಸ್ಸನ್ನು ಲೀನಮಾಡಿದ್ದೇ ಆದರೆ, ಜನನಮರಣಗಳಿಲ್ಲದ ಪರಮಾತ್ಮಸ್ವರೂಪವು ಹೊಳೆಯುತ್ತಿರುತ್ತದೆ. ಹಾಗಂದರೆ, ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರವಸ್ಥೆಗಳಲ್ಲಿಯೂ ಸಾಕ್ಷಿಮಾತ್ರನಾಗಿರುವ ಪರಮಾತ್ಮನೇ 'ನಾನ' ಎಂದು ಯಾವನು ಮನಸ್ಸಿನಲ್ಲೆಣಿಸಿಕೊಂಡು ಹಾಗೆಯೇ ಇರುತ್ತಾನೆಯೋ, ಅವನು ತಾನೇತಾನಾಗಿ ಪ್ರಕಾಶಿಸುತ್ತಿರುತ್ತಾನೆ.

"ಈರೀತಿಯಾಗಿ ಜ್ಞಾನಸ್ವರೂಪನಾದ ಪರಮಾತ್ಮನು, ಜೀವಿಗಳಿಗೆ ಬ್ರಹ್ಮಭಾವವನ್ನು ಬೋಧಿಸಿ, ವ್ಯಷ್ಟಿ ಸಮಷ್ಟಿ ದೇಹೇಂದ್ರಿಯಗಳನ್ನು ಭಿನ್ನವಾಗಿ ಮಾಡಿ, ಅವುಗಳನ್ನು ಪ್ರಕಾಶಗೊಳಿಸಿ, ಆ ಜೀವಿಗಳಿಗೆ ಬ್ರಹ್ಮತ್ವವನ್ನುಂಟುಮಾಡುತ್ತಿದ್ದಾನೆ. ಪರಮಾತ್ಮನು ದೇಹೇಂದ್ರಿಯಗಳನ್ನು ಪ್ರಕಾಶಗೊಳಿಸುವುದು ಮಾತ್ರವಲ್ಲದೆ, ಜಡವಾದ ಈ ಪ್ರಪಂಚವನ್ನೂ ಹೊಳೆಯುವಂತೆ ಮಾಡುತ್ತಾನೆ. ಅಂದರೆ ಕಣ್ಣಿಗೆ ಕಾಣ್ಬರುವ ಈ ಪ್ರಪಂಚವೆಲ್ಲವೂ ವ್ಯಕ್ತವಾಗುತ್ತಿರುವುದು ಆ ಪರಮಾತ್ಮನ ಮಹಿಮೆಯಿಂದಲೇ ಎಂದು ಭಾವವು. 'ಇಂತಹ ಪರಮಾತ್ಮನು ಜೀವಿಗಳಿಗೆ ಏತಕ್ಕಾಗಿ ಕಾಣ್ಬರುವುದಿಲ್ಲ?' ಎಂದರೆ, ಆ ಜೀವಾತ್ಮನನ್ನು ಮಾಯೆಯು ಮುಚ್ಚಿಕೊಂಡಿರುವುದೇ ಇದಕ್ಕೆ ಕಾರಣವೆಂದು ತಿಳಿಯಬೇಕು. ಆತ್ಮವು ವಸ್ತುಗಳೊಳಗೆ ಸೇರಿ ಅವುಗಳೆಲ್ಲವನ್ನೂ ಪ್ರಕಾಶಿಸುವಂತೆ ಮಾಡುತ್ತದೆ. ಜ್ಞಾನಸ್ವರೂಪನಾಗಿಯೂ, ಸಾಕ್ಷಿಮಾತ್ರನಾಗಿಯೂ ಇರುವ ಪರಮಾತ್ಮನಾವನೋ ಅವನೇ ನಾನು. ಶರೀರವೂ ನಾನಲ್ಲ; ಅಂತಃಕರಣಗಳೂ ನಾನಲ್ಲ. ದೇಹ, ಇಂದ್ರಿಯಗಳು ಮತ್ತು ಈ ಇಂದ್ರಿಯಗಳಿಂದ ಮಾಡಲ್ಪಡುವ ವ್ಯಾಪಾರಗಳು ಇವುಗಳೆಂದಿಗೂ ಶಾಶ್ವತವಾದವುಗಳಲ್ಲ; ನಶ್ವರವಾದವುಗಳೇ—ಹೌದು.

ಅನೇಕ ಕೋಟಿ ಜನ್ಮಗಳಿಂದಲೂ ಸಂಸಾರ ವಿಷಯಕಗಳಾದ ಕಾರ್ಯಗಳನ್ನೇ ನಾವು ಮಾಡುತ್ತ ಬರುತ್ತಿರುವುದರಿಂದ, ಆ ಸಾಂಸಾರಿಕ ಕರ್ಮವಾಸನೆಯ ದೆಸೆಯಿಂದ ಈ ಜನ್ಮದಲ್ಲಿಯೂ ಜೀವಿಗಳಿಗೆ, ಯಾರು ಹೇಳದಿದ್ದರೂ, ಹಿಂದೆ ವಿಶದಪಡಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯವೆಂಬ ಅರಿಷಡ್ವರ್ಗಗಳು ತಾವಾಗಿಯೇ ಹೇಗೆ ಅಭಿವೃದ್ಧಿಯಾಗಿ ಬರುತ್ತಿವೆಯೋ, ಹಾಗೆಯೇ ಜನ್ಮಜನ್ಮಗಳಲ್ಲಿಯೂ ಮಾಡುತ್ತ ಬರುತ್ತಿರುವ ಈಶ್ವರಾರ್ಪಣ ಮೊದಲಾದ ಸತ್ಕರ್ಮಗಳಿಂದ 'ನಾನೇ ಬ್ರಹ್ಮನು' ಎಂದು ಮನಸ್ಸಿನಲ್ಲಿ ಭಾವಿಸಿ ಬರುತ್ತಿರುವವನಿಗೆ ಗುರುವಿಲ್ಲದಿದ್ದರೂ, ಶಾಸ್ತ್ರ ವಿಚಾರಣಸಾಧನವು ಇಲ್ಲದಿದ್ದರೂ ಅತಿ ತೀವ್ರವಾಗಿ ಬ್ರಹ್ಮಸ್ವರೂಪವನ್ನೇ ಪಡೆಯುವನಾಗುತ್ತಾನೆ. ಇಂಥವನು ಚಂಡಾಲನಾಗಿದ್ದರೂ ಶ್ರೇಷ್ಠನಾದ ಬ್ರಾಹ್ಮಣನೆನಿಸುವನು. ಇಂತಹ ಬ್ರಾಹ್ಮಣನೇ ನನಗೆ ಗುರುವು" ಎಂಬ ತಮ್ಮ ಅಭಿಪ್ರಾಯವನ್ನು ಶ್ರೀ ಶಂಕರಾಚಾರ್ಯರು ಮೇಲೆ ಹೇಳಿದ ಶ್ಲೋಕದಲ್ಲಿ ವ್ಯಕ್ತಪಡಿಸಿರುತ್ತಾರೆ. ಆದರೆ ಆಚಾರ್ಯರು ಚಂಡಾಲನನ್ನು ಹೇಗೆ ಗುರುವನ್ನಾಗಿ ಮಾಡಿಕೊಂಡರು ? ಎಂದು ನೆನೆಸುವಿರಾ ಏನು? ಹಾಗೆ ಅಭಿಪ್ರಾಯಪಡಬಾರದು. ಏಕೆಂದರೆ, ನಿತ್ಯನಾದ ಪರಿಶುದ್ಧವಾದ ಮತ್ತು ಚಲಿಸದೆ ಸ್ಥಿರನಾದ ಆ ಪರಮಾತ್ಮನಿಗೆ ಜಾತಿ ಕುಲವೆಂಬ ಯಾವ ಅಭಿಮಾನವೂ ಇಲ್ಲವು. ಇಂತಹ ಅಭಿಮಾನವೆಂಬುದು ಯಾವನಿಗೆ ನಶಿಸಿ ಹೋಗುತ್ತದೆಯೋ, ಅಂಥವನು ಚಂಡಾಲನಾಗಿದ್ದರೂ ಅವನು ಪರಿಶುದ್ಧನೇ ಎಂದು ಶ್ರುತಿಗಳು ಸಾರುತ್ತಿವೆ. ಒಟ್ಟಿನಲ್ಲಿ ಜೀವೇಶರಿಗೆ ಯಾವ ಅಭಿಮಾನ ಭೇದಗಳೂ ಇಲ್ಲವೆಂಬುದೇ ಶ್ರೀ ಶಂಕರಾಚಾರ್ಯರ ಅಭಿಪ್ರಾಯವು.

"ಜಾಗ್ರತ್ಸ್ವಪ್ನ ಸುಷುಪ್ತಿಯೆಂಬ ಮೂರವಸ್ಥೆಗಳಲ್ಲಿಯೂ ಯಾವ ಆತ್ಮನು ಸ್ಪಷ್ಟವಾಗಿ ಪ್ರಕಾಶಿಸುತ್ತ ಇರುವೆಯಿಂದ ಬ್ರಹ್ಮನ ವರಿವಿಗೂ ಇರುವ ಸಕಲ ಜಂತುಜಾಲಗಳಲ್ಲಿಯೂ ಚರಾಚರಗಳಲ್ಲಿಯೂ ವ್ಯಾಪಿಸಿ ಸಮಸ್ತಕ್ಕೂ ಯಾರು ಸಾಕ್ಷಿಸ್ವರೂಪನಾಗಿರುವನೋ ಅಂತಹ ಜ್ಞಾನಸ್ವರೂಪನಾದ ಪರಮಾತ್ಮನೇ ನಾನು; ಉಳಿದವುಗಳಾವುವೂ ನಾನಲ್ಲ ಎಂಬ ದೃಢಜ್ಞಾನವು ಯಾರಿಗುಂಟೋ ಆತನು ಚಂಡಾಲನಾದರೂ,

ಇಲ್ಲವೇ ಬ್ರಾಹ್ಮಣನಾದರೂ ನನಗೆ ಆತನೇ ಕಾರಣ ಗುರುವು" ಎಂಬುದೇ ಆಚಾರ್ಯರ ಮತ.

ಶ್ರುತಿ॥ "ತತ್ಸೃಷ್ಟ್ವಾ ತದೇವಾನು ಪ್ರಾವಿಶತ್" ಇತ್ಯಾದಿ ಶ್ರುತೇಃ

ಶ್ಲೋ॥ಬ್ರಹ್ಮೈವಾಹ ಮಿದಂ ಜಗಚ್ಚ ಸಕಲಂ ♦ ಚಿನ್ಮಾತ್ರವಿಸ್ತಾರಿತಂ ।
ಸರ್ವಂ ಚೈತ ದವಿದ್ಯಯಾ ತ್ರಿಗುಣಯಾ ♦ ಶೇಷಂ ಮಯಾ ಕಲ್ಪಿತಂ ॥
ಇತ್ಥಂ ಯಸ್ಯ ದೃಢಾ ಮತಿ ಸ್ಸುಖತರೇ ♦ ನಿತ್ಯೇ ಪರೇ ನಿರ್ಮಲೇ ।
ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿ♦ತ್ಯೇಷಾ ಮನೀಷಾ ಮಮ॥೨॥

'ಪರಮಾತ್ಮನು ಪ್ರಪಂಚವೆಲ್ಲವನ್ನೂ ಮೊದಲು ಸೃಷ್ಟಿಮಾಡಿ ಅದರಲ್ಲಿ ತಾನು ಪ್ರವೇಶಿಸುತ್ತಾನೆ' ಎಂಬುದೇ ಮೇಲಿನ ಶ್ರುತಿ ವಾಕ್ಯದ ಅರ್ಥ.

'ನಾನೇ ಬ್ರಹ್ಮನು. ಸಮಸ್ತ ಜಗತ್ತೂ ಚಿತ್ಸ್ವರೂಪನಾದ ಪರಮಾತ್ಮನಿಂದ ವಿಸ್ತರಿಸಲ್ಪಟ್ಟಿತು. ಈ ಬಾಹ್ಯದಲ್ಲಿ ಕಾಣ್ಬರುವ ಸತ್ವ ರಜಸ್ತಮೋಗುಣಗಳಿಂದ ಕೂಡಿದ ವಸ್ತುಗಳೆಲ್ಲವೂ ಅವಿದ್ಯೆಯೆಂಬುವ ಮಾಯೆಯಿಂದ ಕಲ್ಪಿತವಾದದ್ದು.' ಹೀಗೆಂಬ ದೃಢ ಪ್ರಜ್ಞೆಯು ಇದ್ದು ನಿತ್ಯ ಸುಖದಾಯಕನಾದ ಪರಬ್ರಹ್ಮನಲ್ಲಿ ತನ್ನ ಮನಸ್ಸನ್ನು ಯಾವನು ಲೀನ ಮಾಡುತ್ತಾನೆಯೋ, ಆ ಬ್ರಹ್ಮಜ್ಞಾನಿಯು ಚಂಡಾಲ ಯೋನಿಯಲ್ಲಿ ಜನಿಸಿದವನಾಗಲಿ, ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನಾಗಲಿ ಆತನೇ ನನಗೆ ಪರಮ ಗುರುವು' ಎಂಬುದೇ ಶ್ರೀ ಶಂಕರಾಚಾರ್ಯರ ಅಭಿಪ್ರಾಯ.

ಶ್ಲೋ॥ ಶಶ್ವ ನ್ನಶ್ವರ ಮೇವ ವಿಶ್ವ ಮಖಿಲಂ ♦ ನಿಶ್ಚಿತ್ಯ ವಾಚಾ ಗುರೋಃ ।
ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ♦ ನಿರ್ವ್ಯಾಜ ಶಾಂತಾತ್ಮನಾ ।
ಭೂತಂ ಭಾವಿ ಚ ದುಷ್ಕೃತಂ ಪ್ರದಹತಾ ♦ ಸಂವಿನ್ಮಯೇ ಪಾವಕೇ ।
ಪ್ರಾರಬ್ಧಾಯ ಸಮರ್ಪಿತಂ ಸ್ವವಪು ರಿ ♦ ತ್ಯೇಷಾ ಮನೀಷಾ ಮಮ ॥೩॥

'ಈ ಪ್ರಪಂಚವು ನಶ್ವರವೆಂದೂ, ಪರಮಾತ್ಮನೊಬ್ಬನೇ ನಿತ್ಯನೆಂದೂ ಗುರೂಪದೇಶದಿಂದ ತಿಳಿದು ಶಾಂತವಾದ ಮನಸ್ಸುಳ್ಳವನಾಗಿ ಸರ್ವದಾ ಆ ಪರಬ್ರಹ್ಮನಲ್ಲಿ ಮನಸ್ಸನ್ನು ಲೀನಮಾಡಿ ಆನಂದ ಸುಖವನ್ನನುಭವಿಸುತ್ತಿರುವವನು, ತಾನು ಸಂಚಿತವೆಂಬ ಕರ್ಮದ ಹೊರೆಗಳನ್ನು ನಾಶ

ಮಾಡಿ ಪ್ರಾರಬ್ಧ ಕರ್ಮಗಳ ಫಲಗಳನ್ನು ಮಟ್ಟಿಗೆ ಅನುಭವಿಸಿದ ನಂತರ, ಮೋಕ್ಷವನ್ನು ಪಡೆಯುತ್ತಾನೆ. ಅಂದರೆ ಇಂಥವನು ಜೀವನ್ಮುಕ್ತನಾಗುತ್ತಾನೆಂಬುದೇ ನನ್ನ ಅಭಿಪ್ರಾಯವು.'

ಆದಕಾರಣ ಗುರುವಿನಿಂದ ಈ ಪ್ರಪಂಚವು ಅನಿತ್ಯವೆಂದು ತಿಳಿದುಕೊಂಡು ನಿರಂತರವೂ ಅಂದರೆ ಸರ್ವದಾ ಸರ್ವಾವಸ್ಥೆಗಳಲ್ಲಿಯೂ ಬೆಳಗುತ್ತಿರುವ, ಪ್ರಪಂಚಕ್ಕಿಂತಲೂ ಬೇರೆಯಾದ ಮತ್ತು ಅಧಿಕವಾದ, ಮತ್ತು ಸ್ವಯಂಪ್ರಕಾಶವಾದ ಯಾವ ಪರಬ್ರಹ್ಮವೆಂಬ ವಸ್ತುವಿದೆಯೋ, ಆ ಪರಬ್ರಹ್ಮವೇ ನಾನು. ಎಂದು ಸರ್ವದಾ ಚಿಂತನೆ ಮಾಡುತ್ತಲೇ ಇರಬೇಕು. ಇದರಿಂದ ಶಾಶ್ವತವಾದ ಬ್ರಹ್ಮಪದವಿಯನ್ನು ಪಡೆಯಬಹುದು. ಇಂತಹ ಪರಬ್ರಹ್ಮ ಪದವಿಯನ್ನು ಹೊಂದುವುದಕ್ಕೆ ಬಹುಕಾಲವು ಹಿಡಿಯುತ್ತದೆ. ಈ ವಿಷಯವನ್ನು ಕುರಿತು ಪತಂಜಲಿ ಋಷಿಯು ಹೀಗೆಂದು ಹೇಳಿದ್ದಾನೆ.

" ಸ ತು ದೀರ್ಘಕಾಲ ನೈರಂತರ್ಯ ಸತ್ಕಾರ ಸೇವಿತೋ ದೃಢಭೂಮಿಃ "

(ಯೋಗಸೂತ್ರ.)

ಅನೇಕ ಜನ್ಮಗಳಿಂದಲೂ ಸರ್ವದಾ ಪರಬ್ರಹ್ಮವನ್ನೇ ಜಪಿಸುತ್ತಾ ಬರುತ್ತಿರುವವನಿಗೆ ಬ್ರಹ್ಮಪದವಿಯು ದೊರಕುವುದು ಖಂಡಿತ. ಸರ್ವ ಕರ್ಮ ಪರಿತ್ಯಾಗಮಾಡಿ ಪ್ರಾಪಂಚಿಕ ಸಂಸರ್ಗವನ್ನು ತೊರೆದು ಯೋಗ ಸನ್ಯಾಸವನ್ನು ಕೈಕೊಂಡು ಬ್ರಹ್ಮಧ್ಯಾನದಲ್ಲಿಯೇ ಆಸಕ್ತನಾದ ಮನುಷ್ಯನಿಗೆ ಪೂರ್ವಜನ್ಮ ಕರ್ಮವಾಸನೆಗಳೆಲ್ಲವೂ ನಶಿಸಿಹೋಗಿ ಅಖಂಡಾನಂದವು ತನಗೆ ತಾನೇ ಉಂಟಾಗುತ್ತದೆ. ಆದುದರಿಂದ ಸಮಸ್ತರೂ, ನಶ್ವರವಾದ ಹೆಂಡತಿ ಮಕ್ಕಳು, ಮನೆಮಠ ಮೊದಲಾದ ಈ ಪ್ರಪಂಚದ ಸಂಗವನ್ನು ತೊಲಗಿಸಿ ಭಗವದ್ಧ್ಯಾನದಲ್ಲಿ ಕಾಲವನ್ನು ನೂಕಬೇಕೆಂಬುದೇ ಶ್ರೀ ಶಂಕರಾಚಾರ್ಯರ ಅಭಿಮತವು.

" ನಿವ್ರ್ಯಾಜೇತ್ಯಾದಿನಾ ವಿದುಷಃ ತೇನೇದ್ಯರ್ಥಃ "

(ಪತಂಜಲಿಯ ಯೋಗಸೂತ್ರ.)

ಎಂಬಂತೆ, ಅಹಂಕಾರ, ಕಪಟ, ಆಸುರಗುಣಗಳು ಅಂದರೆ ಕಾಮ ಕ್ರೋಧಾದಿ ಅರಿಷಡ್ವರ್ಗಗಳು ಮೊದಲಾದವುಗಳಿಲ್ಲದ ಜ್ಞಾನಿಗಳು, ತಮ್ಮ ಶರೀರಗಳನ್ನು ಪ್ರಾರಬ್ಧ ಕರ್ಮಕ್ಕೆ ಸಮರ್ಪಿಸುತ್ತಾರೆ. ಅವರು ಯಾವ ವಿಕಾರಗಳೂ ಇಲ್ಲದೆ ಸುಖದುಃಖಗಳನ್ನನುಭವಿಸುತ್ತಲಿರುತ್ತಾರೆ. ಅಂದರೆ ಸುಖ ಬಂದಾಗ ಹಿಗ್ಗದೆಯೂ ದುಃಖವುಂಟಾದಾಗ ತಗ್ಗದೆಯೂ ಇರುತ್ತಾರೆಂದು ಭಾವವು. "ಏತೌ ವಾಸನಾಮನೋನಾಶೌ ಕೀದೃಶೌ?" ಅಂದರೆ ಕರ್ಮನಾಶ ಮತ್ತು ಮನೋನಾಶ ಇವುಗಳನ್ನು ಪಡಿಯುವುದಂದರೇನು? ಎಂಬ ಪ್ರಶ್ನೆಗೆ ಈ ಕೆಳಗೆ ಸದುತ್ತರವನ್ನು ಹೇಳಿದೆ.

ಡಂಭ ಮೊದಲಾದವುಗಳು ಅಕಸ್ಮಾತ್ತಾಗಿ ತಮಗೆ ತಾವೇ ಮನಸ್ಸಿಗೊದಗುವುದಕ್ಕೆ ಕಾರಣವು, ಪೂರ್ವ ಜನ್ಮಗಳ ವಾಸನಾ ಫಲವೇ ಹೊರತು, ಮತ್ತೆ ಬೇರಲ್ಲ. ಅಂದರೆ ಅನೇಕ ಜನ್ಮಗಳಿಂದ ಕಾಮಕ್ರೋಧಾದಿಗಳ ಮಾಲಿನ್ಯವು ಮನಸ್ಸನ್ನು ಹಿಂಬಾಲಿಸಿ ಬರುವುದೇ 'ವಾಸನೆ'ಯೆಂದು ಕರೆಯಲ್ಪಡುವಂಥದು. ಇಂತಹ ವಾಸನೆಗಳು ಹೇಗೆ ನಾಶವಾಗುತ್ತವೆಂದರೆ, ಆತ್ಮಾನಾತ್ಮ ವಿವೇಚನೆಯಿಲ್ಲದಿರುವುದರಿಂದ ಉಂಟಾದ ಕಾಮ ಕ್ರೋಧಾದಿ ಅರಿಷಡ್ವರ್ಗಗಳೂ,ತತ್ಫಲವಾದ ಅಹಂಕಾರ ಮಮಕಾರಗಳೂ, ಈಶ್ವರಧ್ಯಾನವೆಂಬ ವಾಸನೆಯುಂಟಾದ ಒಡನೆಯೇ ಎಲ್ಲವೂ ನಾಶವಾಗುವುವು. ಒಂದು ದೀವಿಗೆಯಿಂದ ಅನೇಕ ದೀಪಗಳನ್ನು ಹತ್ತಿಸುವ ರೀತಿಯಲ್ಲಿ, ಈಶ್ವರಧ್ಯಾನವೆಂಬ ವಾಸನೆಯಿಂದ ಹುಟ್ಟಿದ ಸಾತ್ವಿಕ ಸಮೂಹಗಳಿಂದ ಅಂತಃಕರಣಗಳು ಶುದ್ಧಿಹೊಂದುತ್ತವೆ. ಅಂದರೆ ಇತರ ವಿಷಯಗಳಲ್ಲಿ ಮನಸ್ಸನ್ನು ಹೋಗಲೀಯದೆ ಅದನ್ನು ಒಂದೇ ಸ್ಥಳದಲ್ಲಿ ನಿಲ್ಲಿಸುವಂತೆ ಮಾಡುತ್ತವೆ. ಈ ಅಂತಃಕರಣ ಪರಿಣಾಮದಿಂದ ಆಶಾ ಪಾಶಗಳೆಲ್ಲವೂ ತಾವಾಗಿಯೇ ನಶಿಸಿಹೋಗುವುವು. ಇದೇ ಬ್ರಹ್ಮನಿಷ್ಠೆ. ಇದನ್ನೇ ಮುಮುಕ್ಷುಗಳು ಸಾಧನೆ ಮಾಡಬೇಕಾದುದು. ಈ ಬ್ರಹ್ಮನಿಷ್ಠಾ ಸಾಧನೆಯನ್ನು ಕುರಿತೇ ಈ ಗ್ರಂಥವು ಅನೇಕ ವಿಧವಾಗಿ ಉಪದೇಶಿಸುತ್ತಿರುವುದು.

"ಈ ವಿಧವಾದ ತತ್ತ್ವೋಪದೇಶಗಳಿಂದಾಗುವ ಪ್ರಯೋಜನವೇನು?" ಎಂಬ ಪ್ರಶ್ನೆಗೆ "ಈ ಉಪದೇಶಗಳು ಮೊದಲು ಈಶ್ವರ ವಾಸನೆಯನ್ನುಂಟುಮಾಡುವುವು ಅಂದರೆ ಕಾಮಕ್ರೋಧಾದಿಗಳೆಲ್ಲವನ್ನೂ ನಾಶಮಾಡಿ ಭಗವಧ್ಯಾನಕ್ಕೆ ಅವಕಾಶವನ್ನು ಕಲ್ಪಿಸುವುವು" ಎಂಬುದೇ ಉತ್ತರ. ಈಶ್ವರ ವಾಸನೆಯು ತತ್ತ್ವಜ್ಞಾನಕ್ಕೆ ಸಾಧನೆಯೆಂದು ಶ್ರುತಿಗಳು ಸಾರಿ ಹೇಳುತ್ತಿವೆ. ತನಗೂ ದೇಹೇಂದ್ರಿಯಗಳಿಗೂ ವ್ಯತ್ಯಾಸಗಳಿರುವಾಗ 'ದೇಹೇಂದ್ರಿಯಗಳೇ ನಾನು' ಎಂದು ನೆನೆಸುವುದೇ 'ಅಭಿಮಾನ.' ಇಂತಹ ಅಭಿಮಾನವನ್ನು ಬಿಡುವಿಕೆಯೇ 'ಜ್ಞಾನ.' ಈ ಅಭಿಮಾನವನ್ನು ಬಿಟ್ಟು ಪರಿಶುದ್ಧನಾದ ಪರಮಾತ್ಮನನ್ನು ನಿಶ್ಚಲವಾದ ಮನಸ್ಸಿನಿಂದ ಧ್ಯಾನ ಮಾಡುವವನೇ ಆತ್ಮವನ್ನು ದರ್ಶಿಸುವವನು. "ಇದಂ ವಾಸನ ಕ್ಷಯಾದೇಃ ತತ್ವಜ್ಞಾನ ಸಾಧನತ್ವಂ ಪ್ರದರ್ಶ್ಯೇನಾಃ ಶ್ರುತಯಃ" ಎಂಬಂತೆ, ವಾಸನೆಗಳ ನಾಶವೇ ತತ್ವಜ್ಞಾನಕ್ಕೆ ಮುಖ್ಯ ಸಹಕಾರಿ. ಎಂದು ಶ್ರುತಿಗಳು ಒತ್ತಿ ಹೇಳುತ್ತವೆ. ಆಯಾ ಜನ್ಮಗಳಲ್ಲಿ ಮಾಡುತ್ತ ಬಂದ ಪುಣ್ಯ ಪಾಪಗಳ ಕರ್ಮಗಳೇ 'ಆಗಾಮ್ಯ' ಎಂದು ಕರೆಯಲ್ಪಡುತ್ತವೆ. ಇಂತಹ ಆಗಾಮ್ಯ ಕರ್ಮಗಳು ಕೋಟ್ಯಂತರವಾಗಿ ಹೊರೆಹೊರೆಯಾಗಿ ಬಂದು ಸೇರುವುದೇ 'ಸಂಚಿತ'ವೆಂದು ಕರೆಯಲ್ಪಡುವುದು. ಈ ಸಂಚಿತ ಪ್ರಾರಬ್ಧ ಆಗಾಮ್ಯ ಕರ್ಮಗಳ ವಿಷಯಗಳೆಲ್ಲವೂ ಹಿಂದಿನ ಪ್ರಕರಣದಲ್ಲಿ ವಿಶದಪಡಿಸಿದೆ. 'ಸಂಚಿತ' ವೆಂಬ ಕರ್ಮಗಳನ್ನು ಅಂದರೆ ಪುಣ್ಯ ಪಾಪಗಳನ್ನು ಬ್ರಹ್ಮನಿಷ್ಠೆಯಲ್ಲಿ ಭಸ್ಮಮಾಡಿದ ಪುರುಷನು, 'ತನ್ನನ್ನು ಬಿಟ್ಟರೆ ಬೇರೆ ವಸ್ತುವೇ ಈ ಪ್ರಪಂಚದಲ್ಲಿಲ್ಲವು' ಎಂದು ಭಾವಿಸುತ್ತಾನೆ. ಈ ಭಾವವು ಮನಸ್ಸಿನಲ್ಲುಂಟಾದುದೇ ಆದರೆ, ಬ್ರಹ್ಮಜ್ಞಾನಿಯಾದವನಿಗೆ ಪಾಪಸಂಬಂಧವೇ ಬರದು. ಆದರೆ ಜ್ಞಾನಿಯಾಗಿರುವವನು ತನಗೆ ಕರ್ಮವಶದಿಂದ ದೊರಕಿದ ಶರೀರವು ನಶಿಸುವ ವರಿವಿಗೂ ಪ್ರಾರಬ್ಧ ಕರ್ಮವನ್ನು ಮಾತ್ರ ಅನುಭವಿಸಿಯೇ ತೀರಬೇಕು.

"ಮಮೇದಂ ಶರೀರಂ * * * * ಅನುಭೂಯಂತೇ"

ಎಂಬಂತೆ, 'ಇದು ನನ್ನದು, ಈ ಶರೀರವು ನನ್ನದು, ಈ ದೇಹವನ್ನಾಶ್ರಯಿಸಿರುವ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳೂ ನನ್ನವೇ, ಈ

ಅಂತಃಕರಣಚತುಷ್ಟಯಗಳೂ ನನ್ನವೇ' ಎಂಬುದಾಗಿ ಎಣಿಸುವುದು ಪ್ರತಿ ಪುರುಷನಿಗೂ ಸ್ವಭಾವ ಸಿದ್ಧವೇ ಹೌದು. ದೇಹೇಂದ್ರಿಯಗಳೆಲ್ಲವನ್ನೂ 'ಇದು, ಅದು,' ಎಂದು ಬೇರ್ಪಡಿಸಿ ಹೇಳುವುದರಿಂದ 'ಆತ್ಮನು ದೇಹೇಂದ್ರಿಯಗಳಿಗಿಂತಲೂ ಬೇರೆಯಾದದ್ದು' ಎಂದು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

"ಆತ್ಮಾನು * * * * * * * ಅನುಭೂಯಂತೇ"

'ನಾನು' ಎಂಬುವ ಆತ್ಮವು ದೇಹೇಂದ್ರಿಯ ಮನೋಬುದ್ಧಿಗಳಿಗಿಂತ ಬೇರೆಯಾದ ವಸ್ತುವು. ಎಂದು ದೇವಮನುಷ್ಯಾದಿ ಪ್ರಾಣಿಗಳೆಲ್ಲಕ್ಕೂ ತಮ್ಮ ತಮ್ಮ ಮನಸ್ಸಿಗೇ ಪ್ರತ್ಯಕ್ಷವಾಗಿ ಗ್ರಾಹ್ಯವಾಗುತ್ತದೆ.

"ಅದ ಇದಂ ಕಾರಾತ್ ಪದತ್ವೇನ"

'ಇದು, ಅದು' ಎಂದು ಬೇರೆಬೇರೆ ಪದಾರ್ಥಗಳಾಗಿ ತಿಳಿದುಕೊಳ್ಳುವುದರಿಂದ,

"ದೇಹಾದೀನಾಂ * * * * ಅಭಾವೇನ"

ಘಟವೇ ಮೊದಲಾದ ಪದಾರ್ಥಗಳನ್ನೂ,ಬೇರೆಬೇರೆ ಪದಾರ್ಥಗಳನ್ನೂ ಉದ್ದೇಶಿಸಿ, "ಇದು, ಅದು" ಎಂಬುದಾಗಿ ಹೇಗೆ ನಾವು ಹೇಳುತ್ತೇವೆಯೊ, ಹಾಗೆಯೇ ದೇಹೇಂದ್ರಿಯಗಳನ್ನೂ ಕೂಡ "ಅದು, ಇದು" ಎಂದು ಬೇರೆ ಬೇರೆ ವಸ್ತುಗಳಾಗಿಯೇ ಎಣಿಸುತ್ತಿದ್ದೇವೆ. ದೇಹೇಂದ್ರಿಯಗಳಲ್ಲಿ ಆತ್ಮನು ಎಂದಿಗೂ ಬೆರೆಯದೆ ಬೇರೆಯಾಗಿಯೇ ಇರುತ್ತಾನೆಂಬುದನ್ನು ಇದರಿಂದ ತಿಳಿದುಕೊಳ್ಳಬಹುದು.

"ಚಿತ್ತಂ ಬ್ರಹ್ಮತ್ವಂ"

'ನಾನು' ಎಂದು ಹೇಳುವಂಥ ಆತ್ಮವು, ಸಚ್ಚಿದಾನಂದಸ್ವರೂಪನಾದ ಬ್ರಹ್ಮನೆಂದೇ ನಿಶ್ಚೈಸಬೇಕು. ಆದರೆ 'ನಾನು' ಎಂದು ಹೇಳಲ್ಪಡುವ ದೇಹೇಂದ್ರಿಯಗಳೆಂದಿಗೂ 'ನಾನು' ಅಲ್ಲ. ಇವೆಲ್ಲವೂ ಆತ್ಮನಲ್ಲ ಅಂದರೆ ಅನಾತ್ಮ ಎಂದು ತಿಳಿಯಬೇಕು.

"ಚಿತ್ಭಾಸತ್ವ * * * ಭ್ರಾಂತಿರೇವ"

ಸಮಸ್ತ ಶರೀರಗಳೂ ಪರಬ್ರಹ್ಮನಾದ ಆತ್ಮನ ಸಹಾಯದಿಂದ ಪ್ರಕಾಶಿಸುತ್ತವೆಯೇ ಹೊರತು, ಆ ಸಹಾಯವಿಲ್ಲದೆ ಅವು ಬೆಳಗಲಾರವು. ಆದುದರಿಂದಲೇ ಶರೀರಗಳಿಗಿಂತ ಆತ್ಮನು ಬೇರೆಯೆಂಬುದು ಸ್ಪಷ್ಟವಾಗುತ್ತದೆ. ಇಂತಹ ಶರೀರಗಳಲ್ಲಿ ಆತ್ಮನು ಯಾವ ರೀತಿಯಲ್ಲಿರುತ್ತಾನೆಂದರೆ, ಶುದ್ಧಸ್ಫಟಿಕ ಲಿಂಗದ ಮುಂಭಾಗದಲ್ಲಿ ಕೆಂಪು ಬಣ್ಣದ ಹೂವನ್ನಿರಿಸಿದರೆ ಆ ಹೂವಿನ ಪ್ರತಿಬಿಂಬವು ಆ ಸ್ಫಟಿಕಲಿಂಗದಲ್ಲಿ ಕೆಂಪಾಗಿ ಕಾಣುವ ಬಗೆಯಲ್ಲಿ ಕಾಣಬರುತ್ತಾನೆ. ಅದರಂತೆಯೇ,

"ಪ್ರತ್ಯಗಾತ್ಮಾನಂ * * * ಸ್ವಯಮೇವ ಪ್ರಕಾಶತೇ"

ನಮ್ಮಲ್ಲಿರುವ ಮನಸ್ಸು ಬುದ್ಧಿ ಚಿತ್ತ ಅಹಂಕಾರಗಳೆಂಬ ಅಂತಃಕರಣ ಚತುಷ್ಟಯಗಳು ನೇತ್ರೇಂದ್ರಿಯಗಳ ಮೂಲಕ ಹೊರಟು, ಹೊರಭಾಗದಲ್ಲಿ ಕಾಣ್ಬರುವ ವಸ್ತುಗಳ ಮೇಲೆ ಬಿದ್ದು, ಆ ಪದಾರ್ಥಗಳ ಪ್ರತಿಬಿಂಬವನ್ನು ತನ್ನಲ್ಲಿ ನಿಲ್ಲುವಂತೆ ಮಾಡುತ್ತವೆ. ಈ ಪ್ರತಿಬಿಂಬವು ತನ್ನಲ್ಲಿ ನಿಂತ ಬಳಿಕ ಆ ಪದಾರ್ಥಗಳು ತನ್ನೆದುರಿಗಿರದಿದ್ದರೂ ತನ್ನ ಮನಸ್ಸು ಮಾತ್ರ ಅದನ್ನೇ ಸ್ಮರಿಸುತ್ತಿರುತ್ತದೆ. ಅಂದರೆ ಹೊರಗಿರುವ ಒಂದು ವಸ್ತುವನ್ನು ಕಂಡ ತಕ್ಷಣವೇ ಅದರ ಸ್ವರೂಪವು ಮನಸ್ಸಿನಲ್ಲಿ ಪ್ರತಿಬಿಂಬಿಸಿ ಮೇಲೆ ಹೇಳಿದ ಅಂತಃಕರಣ ಚತುಷ್ಟಯಗಳು ಪ್ರತಿಫಲಿಸುತ್ತಲೇ ಇರುವುವು. ಈ ವಿಷಯವು ಪ್ರತಿಯೊಬ್ಬರಿಗೂ ಅನುಭವಸಿದ್ಧವಾದುದೇ. ಬಾಹ್ಯದಲ್ಲಿ ಕಾಣ್ಬರುವ ಪದಾರ್ಥಗಳ ರೂಪವನ್ನು ತಮಗೆ ತಾವೇ ಗ್ರಹಿಸುವಷ್ಟು ಶಕ್ತಿಯು ಅಂತಃಕರಣಗಳಿಗಿಲ್ಲವು. ಆತ್ಮನ ಸಹಾಯವನ್ನು ಪಡೆದ್ದದೇ ಆದರೆ, ಅಂತಃಕರಣಗಳು ಆ ಗ್ರಹಣ ಶಕ್ತಿಯನ್ನು ಪಡೆಯುತ್ತವೆ. ಆತ್ಮಚೈತನ್ಯವೇ ಅಂತಃಕರಣಗಳನ್ನು ಬೆಳಗುವಂತೆ ಮಾಡುತ್ತಿರುವುದು. ಈ ಅಂತಃಕರಣವನ್ನೇ ಇದುವರಿವಿಗೂ 'ನಾನು, ನಾನು' ಎಂದು ಹೇಳುತ್ತ ಬರುತ್ತಿದ್ದೇವೆ. ಅಂತಃಕರಣವೆಂದಿಗೂ ನಾನಲ್ಲ, 'ಆತ್ಮನೇ ನಾನು' ಎಂದು ತಿಳಿಯಬೇಕು. ಅಜ್ಞಾ

ನಿಗೆ ಅಂತಃಕರಣಗಳು ನಾನೆಂಬುದಾಗಿ ತೋರಿದರೂ ಜ್ಞಾನಿಗಳಿಗೆ ಹಾಗೆ ತೋರದು.

ಗುರುವಾದವನು ಶಿಷ್ಯನಿಗೆ ಬ್ರಹ್ಮಜ್ಞಾನವನ್ನು ಬೋಧಿಸುವಾಗ ಒಂದೊಂದು ಮೆಟ್ಟಿಲಾಗಿ ಹೇಳುವುದಕ್ಕಾಗಿಯೇ ಮೊದಮೊದಲು "ಅನ್ನಂ ಚ ಬ್ರಹ್ಮಾ ♦ ಭೋಕ್ತಾ ಚ ಬ್ರಹ್ಮಾ * * * ಸರ್ವಂಖಲ್ವಿದಂ ಬ್ರಹ್ಮಾ ♦ " ಎಂಬಂತೆ ಅನ್ನವು ಬ್ರಹ್ಮಮಯವಾದುದು, ಭುಜಿಸುವವನು ಬ್ರಹ್ಮಮಯನಾದವನು, ಇದೇ ರೀತಿಯಲ್ಲಿ ಪ್ರಾಣಗಳು ಮತ್ತು ಅಂತಃಕರಣಗಳೂ ಬ್ರಹ್ಮವೇ ಎಂಬುದಾಗಿ ಸ್ಥಾಪಿಸಿ, 'ನಾನು' ಎಂಬುವ ಜ್ಞಾನವು ಅಂತಃಕರಣಗಳಿಗೆ ಮಾತ್ರ ಉಂಟೆಂದೂ, ಆ ಅಂತಃಕರಣಗಳ ಮೂಲಕ ಆತ್ಮನನ್ನು ತಿಳಿಯಬೇಕೆಂದೂ, ಇವುಗಳಿಗೆಲ್ಲಾ ಸಾಕ್ಷಿಭೂತನಾದ ಆತ್ಮನೇ ಕಾರಣವಾಗಿರುವನೆಂದೂ, ಅಂತಃಕರಣಗಳ ಸಹಾಯದಿಂದ ಈ ಆತ್ಮ ಸ್ವರೂಪವನ್ನು ತಿಳಿಯಬಹುದೆಂದೂ, ಇಂತಹ ಆತ್ಮನು ಎಲ್ಲೆಲ್ಲಿಯೂ ತುಂಬಿರುವನೆಂದೂ, ಅಂದರೆ ಸಮಸ್ತವೂ ಬ್ರಹ್ಮಮಯವೇ ಎಂದೂ ಗುರುವು ಶಿಷ್ಯನಿಗುಪದೇಶಿಸುತ್ತಾನೆ.

ಆತ್ಮನು ಸ್ವಯಂಪ್ರಕಾಶನಾಗಿರುವವನು. ಇಂತಹ ಆತ್ಮನನ್ನು ತಿಳಿಯಬೇಕಾದರೆ ಅಂತಃಕರಣಗಳ ಸಹಾಯವೇತಕ್ಕೆಂದರೆ, ಆತ್ಮನನ್ನು ಮಾಯೆಯೆಂಬ ಅಜ್ಞಾನವು ಕವಿದಿರುವುದು. ಆದುದರಿಂದ ಆತ್ಮಸ್ವರೂಪವನ್ನು ತಿಳಿಯಬೇಕಾದರೆ ಈ ಜ್ಞಾನವೆಂಬ ಮುಸುಕನ್ನು ತೆರೆಯಬೇಕು.

ಶ್ಲೋ ॥ ಯಾ ತಿರ್ಯಙ್ನರದೇವತಾಭಿರಹ ಮಿ ♦ ತ್ಯಂತಸ್ಫುಟಾ ಗೃಹ್ಯತೇ ।
ಯದ್ಭಾಸಾ ಹೃದಯಾಕ್ಷದೇಹವಿಷಯಾ ♦ ಭಾಂತಿ ಸ್ವತೋಽಚೇತನಾಃ ॥
ತಾಂ ಭಾಸ್ಯೈಃ ಪಿಹಿತಾರ್ಕಮಂಡಲನಿಭಾಂ ♦ ಸ್ಫೂರ್ತಿಂ ಸದಾ ಭಾವಯ-
ಯೋಗೀ ನಿರ್ವೃತಮಾನಸೋ ಹಿ ಗುರು ರಿ♦ತ್ಯೇಷಾ ಮನೀಷಾ ಮಮ ॥೪॥

"ಮೃಗ ಪಕ್ಷಿ ಕೀಟಗಳೆಂಬ ತಿರ್ಯಗ್ಜಂತುಗಳು, ಮನುಷ್ಯರು, ದೇವತೆಗಳೆಂಬ ಸಮಸ್ತ ಅಂತಃಕರಣಗಳಲ್ಲಿಯೂ ಸಾಕ್ಷಿಭೂತವಾದ ಒಂದು ವಸ್ತುವು ಇದ್ದೇ ಇರುತ್ತದೆಯೆಂದೂ, ಮತ್ತು ಇಂದ್ರಿಯವ್ಯಾಪಾರಗಳೆಲ್ಲವನ್ನೂ ಸಾಕ್ಷಿಭೂತನಾದ ಆತ್ಮನು ನಡೆಸುತ್ತಿದ್ದಾನೆಂದೂ, ಅಂತಹ

ಆತ್ಮವೇ ಸ್ವಯಂಜ್ಯೋತಿಸ್ವರೂಪನೆಂದೂ ತಿಳಿದುಕೊಂಡು ಅದರಿಂದ ಪರಮಾನಂದ ಸುಖವನ್ನು ಯಾವನು ಅನುಭವಿಸುತ್ತಿರುತ್ತಾನೆಯೋ, ಅವನೇ ನನಗೆ ಪರಮಗುರುವು, ಎಂಬುದೇ ನನ್ನ ಭಾವನೆಯು''. ಎಂದು ಶ್ರೀಮದಾಚಾರ್ಯರು ಸಾರಿ ಹೇಳಿರುತ್ತಾರೆ. ಇದರ ವಿವರಣೆಯೇನೆಂದರೆ:—

ಮೃಗಗಳು ಪಕ್ಷಿಗಳು ಕೀಟಗಳು ಮೊದಲಾದುವುಗಳು ಯಾವುವುಂಟೋ, ಅವುಗಳಿಗೆಲ್ಲಕ್ಕೂ 'ನಾನು' ಎಂಬ ಅಂತಃಕರಣ ವೃತ್ತಿಗಳೇ ಕಾರಣವಾಗಿದ್ದು, ಮತ್ತು ಸಮಸ್ತ ಭೂತಗಳಿಗಿಂತಲೂ ಬೇರೆಯಾಗಿದ್ದು, ಇತರ ಸಹಾಯವಿಲ್ಲದೆ ತನ್ನಷ್ಟಕ್ಕೆ ತಾನೇ ಪ್ರಕಾಶಿಸುತ್ತಿರುವ ಮತ್ತು ಇತರ ವಸ್ತುಗಳನ್ನು ತನ್ನ ಮಹಿಮೆಯಿಂದ ಪ್ರಕಾಶಿಸುವಂತೆ ಮಾಡುವ ವಸ್ತುವೇ 'ಆತ್ಮನು' ಎಂದು ತಿಳಿಯಬೇಕು. ಕೀಟಾದಿಗಳಿಗೆ 'ನಾನು' ಎಂಬಭಿಮಾನವು ಎಲ್ಲಿಯದು ಎಂದು ತಿಳಿದಿರುವಿರಾ ಏನು? ಆ ಅಭಿಮಾನವು ಅವಕ್ಕುಂಟು ಎಂಬುದಕ್ಕೆ ಕಾರಣಗಳುಂಟು. ಒಂದು ಸರ್ಪವು ಮನುಷ್ಯನನ್ನು ನೋಡಿದೊಡನೆಯೇ 'ತನ್ನನ್ನು ಕೊಲ್ಲು' ವರೆಂಬ ಪ್ರಾಣಭಯದಿಂದ ಓಡುತ್ತದೆ. 'ನಾನು' ಎಂಬ ದೇಹಾಭಿಮಾನವು ಅದಕ್ಕಿಲ್ಲದಿದ್ದರೆ ಅದು ಓಡಿಹೋಗುವುದಕ್ಕೆ ಕಾರಣವೇ ಇಲ್ಲ. ಆತ್ಮನ ಸಹಾಯದಿಂದಲೇ ಅಂತರಿಂದ್ರಿಯಗಳ, ಅಂದರೆ ಮನೋಬುದ್ಧಿ ಚಿತ್ತಾಹಂಕಾರಗಳ ಮತ್ತು ಬಾಹ್ಯೇಂದ್ರಿಯಗಳ ವ್ಯಾಪಾರಗಳನ್ನು ಆತ್ಮನು ತಿಳಿಯುತ್ತಾನೆ. ಹೀಗೆ ಆತ್ಮನು ಸಮಸ್ತ ಪದಾರ್ಥಗಳ ತತ್ವವನ್ನು ತಿಳಿಯುವುದರಿಂದಲೇ ಈ ಆತ್ಮನು ಸಮಸ್ತ ಪ್ರಪಂಚದ ಒಳಗೂ ಹೊರಗೂ ತುಂಬಿರುತ್ತಾನೆ, ಎಂದು ಶ್ರುತಿಯು ಸಾರುತ್ತದೆ.

ಸೂರ್ಯನು ಎಲ್ಲಾ ಕಡೆಯಲ್ಲಿ ಪ್ರಕಾಶಿಸುತ್ತಿದ್ದರೂ, ಆ ಸೂರ್ಯನನ್ನು ಮೇಘಗಳು ಅಲ್ಲಲ್ಲಿ ಕವಿದಿರುವಾಗ ಮಾತ್ರ, ಸೂರ್ಯನ ಬೆಳಕು ಕಾಣಬರುವುದಿಲ್ಲ. ಸೂರ್ಯಪ್ರಕಾಶವು ಕಾಣಬರದಿರುವುದು ಮಾನವರಾದ ನಮಗೇ ಹೊರತು ಸೂರ್ಯನಿಗಲ್ಲ. ಅದರಂತೆಯೇ 'ನಾನು' ಎಂಬ ಆತ್ಮಜ್ಞಾನವು ಲಭಿಸುವವರಿವಿಗೂ ಅಂದರೆ ಬ್ರಹ್ಮಸಾಕ್ಷಾತ್ಕಾರದ ಪ್ರತ್ಯ

ಕ್ಷಾನುಭವವುಂಟಾಗುವವರಿವಿಗೂ ಅಜ್ಞಾನವೆಂಬುದು ನೆಲೆಸಿರುತ್ತದಾಗಿ ಜ್ಞಾನವುಂಟಾಗದು.

'ದೇಹೇಂದ್ರಿಯಗಳಿಗಿಂತಲೂ ಬೇರೆಯಾಗಿ, ಸ್ವಯಂಪ್ರಕಾಶನಾಗಿರುವ ಆತ್ಮನೇ ನಾನು' ಎಂದು ತಿಳಿದುಕೊಂಡಿರುವ ಯೋಗಿಯು ಸದಾ ದೃಢಚಿತ್ತನಾಗಿಯೇ ಇರುವನು. ಹೀಗೆ ದೃಢಚಿತ್ತನಾಗಿರುವುದಕ್ಕೆ ಸಂಪ್ರಜ್ಞಾತಸಮಾಧಿಯೆಂದು ಹೆಸರು. 'ಮನಸ್ಸನ್ನು ಒಂದೇ ಸ್ಥಳದಲ್ಲಿ ನಿಲ್ಲಿಸುವುದೇ ಧ್ಯಾನವು, ಎಂದು ಪತಂಜಲಿಯು ತನ್ನ ಯೋಗಸೂತ್ರದಲ್ಲಿ ಹೇಳಿರುತ್ತಾನೆ.

ಒಟ್ಟನಲ್ಲಿ ಮಂತ್ರಗಳನ್ನು ಬಾಯಿಯಲ್ಲಿ ಉಚ್ಚರಿಸದೆಯೇ ಜಪವನ್ನು ಮಾಡುವುದಕ್ಕೆ 'ಧ್ಯಾನ' ವೆಂದೂ, ಯಾವಾಗಲೂ ಮಂತ್ರಗಳನ್ನು ಜಪಿಸದೆ ಸುಮ್ಮನಿದ್ದು, ತನ್ನನ್ನು ತಾನು ಮರೆತಿರುವ ಸ್ಥಿತಿಗೆ 'ಸಮಾಧಿ' ಯೆಂದೂ, ಹೇಳಲ್ಪಡುತ್ತವೆ. ಈ ಧ್ಯಾನಸಮಾಧಿಗಳ ವಿಷಯಗಳನ್ನು ಕುರಿತು ಈ ಕೆಳಗೆ ವಿವರಿಸಿದೆ.

"ಚಿತ್ತೈಕಾಕ್ರಿಯಾತ್ * * * ಉಪತಿಷ್ಯತೇ"

ಮನಸ್ಸನ್ನು ಒಂದೇ ಸ್ಥಳದಲ್ಲಿ ನಿಲ್ಲಿಸಿದ್ದೇ ಆದರೆ, ಜ್ಞಾನೋದಯವಾಗುತ್ತದೆ. ಹೀಗೆ ಮನಸ್ಸನ್ನು ಒಂದೇ ಸ್ಥಳದಲ್ಲಿ ನಿಲ್ಲಿಸುವ ಶಕ್ತಿಯುಳ್ಳ ಪುರುಷನ ತಾರತಮ್ಯವನ್ನು ಚನ್ನಾಗಿ ತಿಳಿದು, ಅಂಥವನಿಗೆ ಗುರುವಾದವನು ಜ್ಞಾನೋಪದೇಶವನ್ನು ಮಾಡುತ್ತಾನೆ.

"ವಿಲಾಪ್ಯ ವಿಕೃತಿಂ * * * ಚಿದಾನಂದ ಚಿಂತಯೇತ್"

ಯೋಗಾಭ್ಯಾಸವನ್ನು ಮಾಡುವವನು ಮನಸ್ಸನ್ನು ಅತ್ತಿತ್ತ ಕದಲದಂತೆ ಒಂದೇ ಕಡೆ ನಿಲ್ಲಿಸಿ, ಮನೋವಿಕಾರಗಳೆಲ್ಲವನ್ನೂ ಅಣಗಿಸಿ, ಅನಂತರ ಯೋಗಾಭ್ಯಾಸಕ್ಕೆ ತೊಡಗಬೇಕು. ಸಂಪ್ರಜ್ಞಾತಸಮಾಧಿಯೆಂತಹು ದೆಂದರೆ :—

"ಬ್ರಹ್ಮಾಕಾರ * * * ಧ್ಯಾನಾಭ್ಯಾಸಪ್ರಕರ್ಷತಃ"

ಎಂಬಂತೆ, ಅಹಂಕಾರವಿಲ್ಲದೆ ಅಂದರೆ "ನಾನು" ಎಂಬ ಅಂತಃಕರಣ ಭಾವಗಳ ಸಂಬಂಧವನ್ನು ಹೊಂದದೆ, ತನ್ನನ್ನೇ ಮರೆತು ಕೇವಲ ಬ್ರಹ್ಮಸ್ವರೂಪನಾಗಿರುವುದೇ 'ಸಂಪ್ರಜ್ಞಾತಸಮಾಧಿ' ಯೆಂದು ಹೇಳಲ್ಪಡುತ್ತದೆ. ಈ ಸ್ಥಿತಿಯು ಯೋಗಾಭ್ಯಾಸದಿಂದ ಉಂಟಾಗುತ್ತದೆ.

"ಜ್ಞಾನಸಾಧನ ಮುಪತಿಶ ನ್ನಾಹಃ"

"ಅಹಂ ಬ್ರಹ್ಮಾಽಸ್ಮಿ" ಎಂದರೆ 'ನಾನೇ ಬ್ರಹ್ಮನು' ಎಂಬ ಉಪದೇಶವನ್ನು ಮೊದಲು ಮಾಡುವರು. ಅನಂತರ 'ನಾನೆಂಬುದು ಬ್ರಹ್ಮನಲ್ಲವು, ಅದು ಅಂತಃಕರಣವೃತ್ತಿಯೆಂದೂ, ಆ ವೃತ್ತಿಯಿಂದ ಆತ್ಮಜ್ಞಾನವು ಲಭಿಸುವುದೆಂದೂ, ಆ ಆತ್ಮಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರವು ಉಂಟಾಗುವುದೆಂದೂ,' ತಿಳಿಯಹೇಳುತ್ತಾರೆ. ಅಂದರೆ 'ನಾನು' ಎಂಬ ಭಾವನೆಯನ್ನು ಬಿಟ್ಟು ತನ್ನನ್ನು ತಾನು ಮರೆತು, ಬ್ರಹ್ಮಾನುಸಂಧಾನವನ್ನು ಮಾಡುತ್ತಿರಬೇಕೆಂದು ಉಪದೇಶಿಸುತ್ತಾರೆ. "ಯೋಗೀತಿ * * ಉಪಲಕ್ಷಣಂ" ಮನಸ್ಸನ್ನು ಹೊರಕ್ಕೆ ಸಿಕ್ಕದಂತೆ ಓಡದಿರುವಂತೆ ತಡೆದಿರುವುದೇ ಯೋಗವು. ಈರೀತಿಯಾಗಿ ಮನೋವೇಗವನ್ನು ತಡೆದಿರುವವನೇ ಯೋಗಿಯು. ಯೋಗಿಯ ಈ ಯೋಗವೇ ಮೌನವೆಂಬುದು. "ಮೌನಂ * * ಏಕದಂಡಿನಃ" ಎಂಬಂತೆ ಯೋಗಕ್ಕೆ ಸಾಧನವೇನೆಂದರೆ, ಮನಸ್ಸಿನ ಕೋರಿಕೆಗಳೆಲ್ಲವನ್ನೂ ಅಣಗಿಸಿ ಶಾಂತವಾಗಿದ್ದು, ನಿರ್ಮಲವಾದ ಮನಸ್ಸುಳ್ಳವನಾಗಿ ಸರ್ವವನ್ನು ಸಮದೃಷ್ಟಿಯಿಂದ ನೋಡುವವನೇ ಯೋಗಿಯು ಮತ್ತು ನಿಜವಾದ ಮನೋಸನ್ಯಾಸಿಯು. ಇಂತಹ ಸನ್ಯಾಸಿಗೆ ದೊರಕುವಂಥ ಫಲಗಳಾವುವೆಂದರೆ,

"ತದಾ ಚ * * * ಭವತೀತಿ ಭಾವಃ"

ಬ್ರಹ್ಮಜ್ಞಾನಿಯಾದ ಸನ್ಯಾಸಿಗೆ ವಾಗ್ವ್ಯಾಪಾರವೂ ಮನೋವ್ಯಾಪಾರವೂ ಇಲ್ಲದಿರುವುದರಿಂದ, ಸರ್ವದಾ ಆತನು ಬ್ರಹ್ಮಭಾವವನ್ನು ಹೊಂದಿ ಸ್ವಯಂಪ್ರಕಾಶಚಿದ್ರೂಪದಲ್ಲಿಯೇ ನೆಲೆಸಿರುತ್ತಾನೆ.

"ಪರಿಪ್ರಾಪ್ತ * * * ಆನಂದೋ ಹಿ ವಿವರ್ಧತೇ"

ಆತ್ಮಾನಾತ್ಮ ವಿವೇಕವುಂಟಾಗಿ, ಸಂಸಾರಬಂಧಗಳನ್ನು ತೊಲಗಿಸಿ, ಮನೋವ್ಯಾಪಾರಗಳಿಂದ ಸಂಕಲ್ಪಗಳೆಲ್ಲವನ್ನೂ ಹೋಗಲಾಡಿಸಿರುವ ಯೋಗಿಗೆ ಬ್ರಹ್ಮಾನಂದವುಂಟಾಗುತ್ತದೆಯೆಂದು ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ.

ಯೋಗಿಯಾದವನು, ಈ ಬ್ರಹ್ಮಾನಂದಾನುಭವದಿಂದ ಶಾಂತಚಿತ್ತನಾಗಿರುವ ಕಾರಣ, ಜೀವಬ್ರಹ್ಮೈಕ್ಯ ಸಂಧಾನದಲ್ಲಿಯೇ, ಅಂದರೆ ಜೀವಾತ್ಮಪರಮಾತ್ಮರೈಕ್ಯಭಾವವನ್ನು ಹೊಂದಿಯೇ ಇರುವನು. 'ಇಂತಹ ಮಹಾನುಭಾವನೇ ನನಗೆ ಪರಮಗುರುವು' ಎಂದು ಆಚಾರ್ಯರು ಅಭಿಪ್ರಾಯಪಡುತ್ತಾರೆ.

ಶ್ಲೋ ॥ ಯತ್ಸೌಖ್ಯಾಂಬುಧಿಲೇಶಲೇಶತ ಇಮೇ ♦ ಶಕ್ರಾದಯೋ ನಿರ್ವೃತಾ ।
ಯಚ್ಚಿತ್ತೇ ನಿತರಾಂ ಪ್ರಶಾಂತಕಲನೇ ♦ ಲಬ್ಧ್ವಾ ಮುನಿ ರ್ನಿರ್ವೃತಃ ॥
ಯಸ್ಮಿನ್ ನಿತ್ಯಸುಖಾಂಬುಧೌ ಗಳಿತಧೀ ♦ ರ್ಬ್ರಹ್ಮೈವ ನ ಬ್ರಹ್ಮವಿತ್ ।
ಯಃ ಕಶ್ಚಿತ್ ಸ ಸುರೇಂದ್ರವಂದಿತಪದೋ ನೂನಂ ಮನೀಷಾ ಮಮ ॥೩॥

'ಗು' ಎಂದರೆ ಅಂಧಕಾರವು ಅಂದರೆ ಅಜ್ಞಾನ, 'ರು' ಎಂದರೆ ಅದನ್ನು ಹೋಗಲಾಡಿಸುವವನು. ಹಾಗೆಂದರೆ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನೋದಯವನ್ನುಂಟುಮಾಡುವವನು ಗುರುವು. ಇಂತಹ ಗುರುವಿನ ದೆಸೆಯಿಂದ ಉಪದೇಶಗಳನ್ನು ಪಡೆದ ಪುರುಷನು, ಸದಾ ಪರಬ್ರಹ್ಮನ ದರ್ಶನಸುಖವನ್ನು ಅನುಭವಿಸುತ್ತ, ಮನಸ್ಸಿನಲ್ಲಿ ಯಾವ ವಿಧವಾದ ಕೋರಿಕೆಗಳೂ ಇಲ್ಲದೆ, ಆತ್ಮಸುಖದಲ್ಲಿ ತೇಲಿ ಮುಳುಗುತ್ತಿರುತ್ತಾನೆ. ಇಂತಹ ಸುಖದೊಡನೆ ಹೋಲಿಸಿದರೆ, ಇಂದ್ರಾದಿಗಳು ಅನುಭವಿಸುವ ಸ್ವರ್ಗಾಧಿಪತ್ಯ ಸುಖವೂ ಕೂಡ ಬಹಳ ಅಲ್ಪವಾದದ್ದು. ಈರೀತಿಯಾದ ಬ್ರಹ್ಮಾನಂದಸುಖವನ್ನನುಭವಿಸುವವನು ಕಡೆಗೆ ಆ ಪರಬ್ರಹ್ಮಸ್ವರೂಪನೇ ಆಗುತ್ತಾನೆ. ಇಂತಹ ಬ್ರಹ್ಮಜ್ಞಾನವನ್ನು ಪಡೆದಿರುವವನು ಚಂಡಾಲನಾಗಲಿ ಅಥವಾ ಬ್ರಾಹ್ಮಣನಾಗಲಿ ಆತನೇ ಗುರುವೆನ್ನಿಸಿಕೊಳ್ಳುವುದಕ್ಕೆ ತಕ್ಕವನು.

ಸ್ವಯಂಪ್ರಕಾಶವುಳ್ಳದ್ದಾಗಿಯೂ, ಜ್ಞಾನಸ್ವರೂಪವುಳ್ಳದ್ದಾಗಿಯೂ ಇರುವ ಆತ್ಮಸುಖಸಂಬಂಧವೆಂಥದೋ, ಅದೇ ನಿತ್ಯಸುಖ. ಈ ಸುಖ ಸ್ವರೂಪವು ಎಲ್ಲೆಲ್ಲಿಯೂ ತುಂಬಿರುವುದರಿಂದ, ಅದನ್ನು ಸಾಧಾರಣವಾಗಿ ಸಮುದ್ರಕ್ಕೆ ಹೋಲಿಸಬಹುದು. ಈ ಬ್ರಹ್ಮದ ಅಣುಮಾತ್ರದ ಸಹಾಯ ದಿಂದ ಈ ಪ್ರಪಂಚದಲ್ಲಿರುವ ಜಂತುಜಾಲವೆಲ್ಲವೂ ಬದುಕಿರುತ್ತದೆ. ಆ ಪರ ಮಾತ್ಮನ ಅಣ್ವಂಶಕ್ಕೆ ಜೀವಾತ್ಮನೆಂದು ಹೆಸರು. ಈ ಜೀವಾತ್ಮನನ್ನು ಮಾಯೆಯೆಂಬುದು ಮುಚ್ಚಿರುತ್ತದೆ. ಆದುದರಿಂದಲೇ ಜನನಮರಣ ಗಳೆಂಬ ಉಪಾಧಿಗಳು ಕರ್ಮಕ್ಕನುಗುಣವಾಗಿ ಈ ಆತ್ಮನಿಗೆ ಉಂಟಾಗು ತ್ತಲೇ ಇರುತ್ತವೆ.

ಈ ಮಾಯೆಯು ತೊಲಗಿತೆಂದರೆ ಜೀವಾತ್ಮನು ಪರಮಾತ್ಮಸ್ವರೂಪ ನಾಗಿ, ಜೀವಿಯು ನಿತ್ಯಾನಂದ ಸುಖದಲ್ಲಿ ಮುಳುಗಾಡುತ್ತಿರುತ್ತಾನೆ. ನಿತ್ಯಾ ನಂದ ಸುಖದಲ್ಲಿ ಮಗ್ನವಾಗಿರುವ ಸ್ಥಿತಿಗೆ "ಅಸಂಪ್ರಜ್ಞಾತಸಮಾಧಿ" ಎಂದು ಹೆಸರು. ಹೀಗೆ ಬ್ರಹ್ಮಾನಂದದಲ್ಲಿ ಲೀನವಾಗಿರುವವನು ಪರಿ ಪೂರ್ಣನಾದ ಆನಂದಸ್ವರೂಪನೇ ತಾನಾಗುತ್ತಾನೆ. ಅಂದರೆ ಅವನಿಗೂ ಮತ್ತು ಪರಬ್ರಹ್ಮನಿಗೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲವು. ಆತನೇ ಪರಮಾತ್ಮಸ್ವರೂಪಿ. ಆತನು ಅದುವರಿವಿಗೆ ಎಷ್ಟೋ ಜನ್ಮಗಳನ್ನೆತ್ತಿ, ತನ್ನ ಕರ್ಮ ಸವೆದಂತೆಲ್ಲ ಮೋಕ್ಷಮಾರ್ಗಾವಲಂಬಿಯಾಗಿ, ಕಡೆಗೆ ಮುಕ್ತಿ ಭವನವನ್ನು ಸೇರಿದ ಶಿವಜ್ಞಾನಿಯಾಗಿದ್ದಾನೆ. ಮುಮುಕ್ಷುಗಳೆಲ್ಲರಿಗೂ ಇವನು ಮಾರ್ಗದರ್ಶಿಯು.

'ಶಿವಸಾಯುಜ್ಯವನ್ನು ಪಡೆಯುವವನು ನೀನೇ ಹೌದು. ಇಂಥವ ನಿಗೆ ಭಿಕ್ಷವಿಟ್ಟವರು, ಅಂದರೆ ಇಂಥವನನ್ನು ಆತಿಥ್ಯಾದಿಗಳಿಂದ ತೃಪ್ತಿಪಡಿಸಿ ದವರು ಶಿವನ ಕಾರುಣ್ಯಕ್ಕೀಡಾಗುತ್ತಾರೆ. ಈತನ ದೂಷಕರು ಶಿವದ್ವೇಷಿ ಗಳಾಗುತ್ತಾರೆ. ಈತನನ್ನು ಸ್ತುತಿಮಾಡಿದವರು ಶಿವನ ಪರಮಭಕ್ತರೆಂ ದೆನಿಸುತ್ತಾರೆ. ಈಶ್ವರಕೃಪೆಯು ದೊರಕಿತೆಂದರೆ ಜೀವಿಗಳು ಜೀವನ್ಮುಕ್ತ ರಾಗುತ್ತಾರೆ,' ಎಂದು ಸೂತಮಹರ್ಷಿಗಳು ನೈಮಿಶಾರಣ್ಯವಾಸಿಗಳಾದ ಇತರ ಮುನಿಗಳಿಗೆ ಸ್ಪಷ್ಟವಾಗಿ ಹೇಳಿರುತ್ತಾರೆ. ಈರೀತಿಯಾದ ಪರಬ್ರಹ್ಮನ

ನಿಶ್ಚಯಜ್ಞಾನವನ್ನು ಹೊಂದಿದವರು ಬ್ರಾಹ್ಮಣರೆಂದೆನಿಸುವುದರಲ್ಲಿ ಸಂಶಯವಿಲ್ಲ. ಮನುಷ್ಯನೂ ದೇವತೆಗಳೂ ಇಂತಹ ಬ್ರಾಹ್ಮಣನಿಗೆ ಪೂಜೆಯನ್ನು ಮಾಡುತ್ತಾರೆ. ಒಟ್ಟಿನಲ್ಲಿ ಧನಧಾನ್ಯ ವಸ್ತುವಾಹನಾದಿಗಳನ್ನು ಬಯಸುವವರು, ಮೇಲೆಹೇಳಿದ ಬ್ರಾಹ್ಮಣನ ಸೇವೆಯನ್ನು ಮಾಡುತ್ತ ಆತನ ಪ್ರೀತಿಗೆ ಪಾತ್ರರಾದದ್ದೇ ಆದರೆ, ಅದರಿಂದ ಪರಮಾತ್ಮನು ತೃಪ್ತಿಪಟ್ಟು ಅವರ ಕೋರಿಕೆಗಳನ್ನು ನೆರವೇರಿಸುತ್ತಾನೆ. ಸ್ವರ್ಗಾಧಿಪತ್ಯವನ್ನು ಪಡೆಯುವುದು ಕೂಡ ಅವರಿಗೆ ಅತಿಶಯವಾಗಲಾರದು. ಹೆಚ್ಚೇಕೆ? ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತರಾದ ಬ್ರಹ್ಮ ವಿಷ್ಣು ಮಹೇಶ್ವರರನ್ನು ಕೂಡ ತನ್ನ ಸ್ವಾಧೀನಮಾಡಿಕೊಳ್ಳಬಹುದು.

ಇದುವರಿವಿಗೂ ಹೇಳುತ್ತಬಂದ ಬ್ರಹ್ಮಜ್ಞಾನವನ್ನು ಸಾಧನೆಮಾಡುವವರಿಗೆ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಚಂಡಾಲಾದಿ ಜಾತಿಭೇದಗಳೆಂಬುವೇ ಇಲ್ಲವು. ಈ ಸ್ಥಿತಿಯು ಮನಸ್ಸು ಪರಿಪಕ್ವವಾಗಿರುವ ಬ್ರಹ್ಮಜ್ಞಾನಿಗಳು ಹೊಂದಿರುವರೇ ಹೊರತು, ಇತರರಿಗೆ ದೊರಕದು. ಈ ವಿಷಯವನ್ನು ಕುರಿತು ಹುಟ್ಟುಸನ್ಯಾಸಿಯಾದ, ಅಯೋನಿಜನಾದ ಅಂದರೆ ಅರಣೀಗರ್ಭಸಂಜಾತನಾದ, ವ್ಯಾಸಪುತ್ರನಾಗಿ ಹುಟ್ಟಿ ಬ್ರಹ್ಮಜ್ಞಾನವನ್ನು ಪಡೆದು, ಪರೀಕ್ಷಿದ್ರಾಜನಿಗೆ ಭಾಗವತ ಮಹಾ ಪುರಾಣವನ್ನು ಸಾಂಗವಾಗಿ ಹೇಳಿ ಆತನಿಗೆ ಮೋಕ್ಷವನ್ನು ಸೆಳೆದುಕೊಟ್ಟಂಥ, ಬ್ರಹ್ಮಜ್ಞಾನಿಗಳಲ್ಲಿ ಅಗ್ರಗಣ್ಯನೆಂದು ಪ್ರಸಿದ್ಧಿಪಡೆದಿರುವ ಶುಕಮಹರ್ಷಿಯು, 'ಶುಕಾಷ್ಟಕ' ವೆಂಬ ಪದ್ಯಮಾಲಿಕೆಯಲ್ಲಿ ಹೀಗೆಂದು ಹೇಳಿರುತ್ತಾರೆ.

ಶ್ಲೋ॥ ಭೇದಾಭೇದೌ ♦ ಸಪದಿ ಗಳಿತೌ ♦ ಪುಣ್ಯಪಾಪೇ ವಿಶೀರ್ಣೇ ।
ಮಾಯಾಮೋಹೌ ♦ ಕ್ಷಯ ಮಧಿಗತೌ ♦ ನಷ್ಟಸಂದೇಹವೃತ್ತೀ ॥
ಶಬ್ದಾತೀತಂ ♦ ತ್ರಿಗುಣರಹಿತಂ ♦ ಪ್ರಾಪ್ಯ ತತ್ವಾವಬೋಧಂ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥

ಸತ್ವರಜಸ್ತಮೋಗುಣಗಳೆಂಬ ತ್ರಿಗುಣಗಳ ಸಂಬಂಧವೇ ಇಲ್ಲದಿರುವ ಮಾರ್ಗವನ್ನು ಅನುಸರಿಸಿ ನಡೆಯುವವರಿಗೆ, ಭೇದಾಭೇದಗಳೆಂಬುವೇ ಇಲ್ಲ. ಅಂದರೆ 'ಈ ಎರಡರಲ್ಲಿ ಇದಕ್ಕೆ ಭೇದವುಂಟು ಇದಕ್ಕೆ

ಭೇದವಿಲ್ಲ' ಎಂಬ ಭೇದ ವ್ಯವಹಾರಗಳೇ ಪ್ರವರ್ತಿಸುವುದಿಲ್ಲ. ಪುಣ್ಯಪಾಪಗಳೆಂಬುವು ತಾವಾಗಿಯೇ ಬಾಡಿ ಹೋಗುತ್ತವೆ. ಮಾಯಾಮೋಹಗಳು ನಶಿಸಿಹೋಗುತ್ತವೆ. ಮತ್ತು ಅವರ ವ್ಯಾಪಾರಗಳು ಸಂದೇಹಕ್ಕೆ ಎಡೆಯೇ ಕೊಡುವುದಿಲ್ಲ. ಅಂದರೆ ನಿಷ್ಕಲ್ಮಷವಾದ, ಮತ್ತು ಸಂಶಯರಹಿತವಾದ ಮನಸ್ಸಿನಿಂದ ಅವರು ಕರ್ಮಗಳನ್ನು ಮಾಡುತ್ತಿರುತ್ತಾರೆ. ಇವರು, ಶಬ್ದಾತೀತನಾದ ಮತ್ತು ತ್ರಿಗುಣರಹಿತನಾದ ಪರಮಾತ್ಮನ ನಿಶ್ಚಯಜ್ಞಾನವನ್ನು ಪಡೆದಿರುವುದರಿಂದ ಇಂತಹ ಜೀವನ್ಮುಕ್ತರಿಗೆ ವಿಧಿಯಾವುದು? ನಿಷೇಧವಾವುದು?

ಶ್ಲೋ ॥ ಯಸ್ಸ್ವಾತ್ಮಾನಂ ♦ ಸಕಲವಪುಷಾ ♦ ಮೇಕ ಮಂತ ರ್ಬಹಿಸ್ಥಂ ।
ದೃಷ್ಟ್ವಾ ಪೂರ್ಣಂ ♦ ಖ ಮಿವ ಸತತಂ ♦ ಸರ್ವಭಾಂಡಸ್ಥ ಮೇಕಂ ॥
ನಾನ್ಯತ್ಕಾರ್ಯಂ ಕಿ ಮಪಿ ಚ ತಥಾ ♦ ಕಾರಣಾದ್ಭಿನ್ನರೂಪಂ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೨ ॥

ಒಂದೇ ಆಕಾಶವು ಅನೇಕ ಭಾಂಡಗಳ ಹೊರಗೂ ಒಳಗೂ ವ್ಯಾಪಿಸಿದ್ದು, ಬೇರೆಬೇರೆ ಭಾಂಡಗಳೊಳಗಿರುವ ಆಕಾಶವು ಬೇರೆಬೇರೆಯಾಗಿಯೇ ಕಂಡುಬಂದರೂ, ಸ್ವಭಾವತಃ ಆಕಾರವೇ ತನಗಿಲ್ಲದಿರೋಣದರಿಂದ ವಿಭಾಗವಿಲ್ಲದೆ ಅಖಂಡವಾಗಿ ಹೇಗೆ ಮೆರೆಯುತ್ತದೆಯೋ ಹಾಗೆಯೇ, ಒಬ್ಬ ಪರಮಾತ್ಮನೇ ಸ್ಥಾವರಜಂಗಮಾತ್ಮಕವಾದ ಸಮಸ್ತ ಭೂತಗಳ ಹೊರಗೂ ಒಳಗೂ ಆವರಿಸಿ ಬೇರೆಬೇರೆಯಾಗಿ ಕಂಡುಬಂದರೂ, ತಾನು ಅಖಂಡ ಸಚ್ಚಿದಾನಂದ ಸ್ವರೂಪನಾಗಿಯೂ, ನಿರ್ವಿಕಾರನಾಗಿಯೂ, ಜ್ಯೋತಿರ್ಮಯನಾಗಿಯೂ, ಪರಿಪೂರ್ಣನಾಗಿಯೂ ಮೆರೆಯುತ್ತಿರುವನು. ಆ ಆತ್ಮನೇ ಸರ್ವ ಪ್ರಪಂಚಕ್ಕೂ ಮೂಲಕಾರಣನು. ಆತನಿಗಿಂತ ಭಿನ್ನವಾದ ಪದಾರ್ಥಗಳಾವುವೂ ಇಲ್ಲವು. ದೇಹಾದಿಗಳು ಕಾರಣದಿಂದ ಭಿನ್ನರೂಪಗಳನ್ನು ಹೊಂದಿದರೂ, ದೇಹಿಗಳು ಮಾಡುವ ಕರ್ಮಗಳಿಗೆ ಆತನು ಸಾಕ್ಷಿಭೂತನಾಗಿಯೇ ಇರುವನು. ಇಂತಹ ಪರಬ್ರಹ್ಮನ ತತ್ವವನ್ನು ತಿಳಿದ ಮಹಾನುಭಾವರಿಗೆ ವಿಧಿಯಾವುದು ? ನಿಷೇಧವಾವುದು ?

ಶ್ಲೋ ॥ ಯದ್ವನ್ನದ್ಯೋ ♦ ಽಂಬುಧಿ ಮಧಿಗತ ♦ ಸ್ಸಾಗರತ್ವಂ ಪ್ರಪನ್ನಾಃ ।
ತದ್ವ ಜ್ಜೀವಾಃ ♦ ಸಮರಸಗತಾಃ ♦ ಚಿತ್ಸ್ವರೂಪಂ ಪ್ರಪನ್ನಾಃ ॥

ವಾಚಾತೀತೇ ♦ ಸಮರಸಘನೇ ♦ ಸಚ್ಚಿದಾನಂದರೂಪೇ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೩ ॥

ಭ್ರಾಂತಿಯಿಂದ ಅನೇಕ ಜೀವರಿರುವಂತೆ ಕಾಣುತ್ತಾರೆಯೇ ಹೊರತು, ಅವರೆಲ್ಲರೂ ಜ್ಞಾನಸ್ವರೂಪಿಗಳಾದುದರಿಂದ ಪರಬ್ರಹ್ಮ ಮಾತ್ರರೇ ಹೌದು. ಭ್ರಾಂತಿಯಿಂದ ಕೂಡಿದ ವ್ಯವಹಾರವನ್ನು ಆಚರಿಸುತ್ತ, ತಾವೇ ಕರ್ತರೆಂದು ಅಹಂಕರಿಸುತ್ತ, ಏಕರೂಪಿಗಳಾಗಿದ್ದರೂ ಭಿನ್ನರೂಪಿಗಳೆಂದು ಭಾವಿಸುತ್ತ, ಮೋಹದಿಂದ ಕೂಡಿರುವಾಗ ಯಾವಯಾವ ನಾಮಗಳನ್ನು ಹೊಂದಿದ್ದರೂ, ಆ ಜೀವಿಗಳೆಲ್ಲರೂ ತತ್ವವಿಚಾರ ಮಾಡಿದಮೇಲೆ ಆ ಪರಬ್ರಹ್ಮ ಮಾತ್ರರೇ ಆಗುವರು. ಹೇಗೆಂದರೆ, ಎಲ್ಲಾ ನದಿಗಳೂ ತಾವು ಬೇರೆಬೇರೆ ಹೆಸರು ಆಕಾರಗಳನ್ನು ಪಡೆದಿದ್ದರೂ ಅವು ಸಮುದ್ರವನ್ನು ಸೇರಿ ಆ ಸಮುದ್ರದ ರೂಪವನ್ನೇ ಹೊಂದುತ್ತವೆ. ಅಂದರೆ ನದಿಗಳ ಜಲವೂ ಸಮುದ್ರದ ಜಲವೂ ಕಲೆತು ಹೋಗಿ ಒಂದೇ ರೂಪವನ್ನು ಹೊಂದುತ್ತವೆ. ಹೀಗಿರುವಾಗ ಬಾಹ್ಯದಲ್ಲಿ ನದಿಗಳು ಮತ್ತು ಸಮುದ್ರಗಳೆಂಬ ಭೇದವು ತೋರಿದರೂ, ವಾಸ್ತವದಲ್ಲಿ ಒಂದಾಗಿ ಕಲೆತಾಗ ಭೇದವೆಂಬುದೇ ತೋರುವುದಿಲ್ಲ. ಪ್ರಕೃತ ಜೀವಿಗಳೂ ಕೂಡ ಹೀಗೆಯೇ ತಮ್ಮ ಜೀವಮಾನವೆಂಬ ಮಾರ್ಗವನ್ನು ಹಿಡಿದವುಗಳಾಗಿ ಅವವುಗಳ ಕರ್ಮಗಳಿಗನುಗುಣವಾಗಿ ದೇಹಾದಿ ಸಂಬಂಧಗಳನ್ನು ಪಡೆದು ಬೇರೆಬೇರೆ ಆಕಾರ ವಿಕಾರಗಳಿಂದ ಕೂಡಿದ್ದಾಗಿ ಕಂಡುಬಂದರೂ, ಕಡೆಗೆ ಅವೆಲ್ಲವೂ ಆ ಪರಬ್ರಹ್ಮನಲ್ಲಿಯೇ ಐಕ್ಯವಾಗಿ ಭೇದವೆಂಬುದೇ ಕಾಣುವುದಿಲ್ಲ. ಒಟ್ಟಿನಲ್ಲಿ ಭ್ರಾಂತಿಯಿದ್ದಾಗ ಭೇದವು ಕಾಣ್ಬರುತ್ತದೆ. ಆ ಭ್ರಾಂತಿ ಕಳೆಯಿತೆಂದರೆ ಆ ಭೇದವು ನಾಶವಾಗುತ್ತದೆ. ಹೀಗಿರಲು ವಾಚಾತೀತನಾದ, ಸರ್ವ ಸಮರಸನಾದ, ಸಚ್ಚಿದಾನಂದಸ್ವರೂಪನಾದ ಮತ್ತು ತ್ರಿಗುಣರಹಿತನಾದ ಆ ಪರಮಾತ್ಮನನ್ನು ಸೇರುವ ಮಾರ್ಗವನ್ನು ಹಿಡಿದಿರುವ ಜ್ಞಾನಿಗಳಿಗೆ ವಿಧಿನಿಷೇಧಗಳೆಂಬುವುಂಟೇ ? ಎಂದಿಗೂ ಇಲ್ಲವೆಂದು ತಾತ್ಪರ್ಯ.

ಶ್ಲೋ ॥ ಹೇಮ್ನಃ ಕಾರ್ಯಂ ♦ ಹುತವಹಗತಂ ♦ ಹೇಮತಾ ಮೇತಿ ತದ್ವತ್ ।
ಕ್ಷೀರಂ ಕ್ಷೀರೇ ♦ ಸಮರಸಗತಂ ♦ ತೋಯ ಮೇವಾಂಬುಮಧ್ಯೇ ॥

ಏವಂ ಸರ್ವಂ ♦ ಸಮರಸಗತಂ ♦ ತ್ವಂ ಪದಂ ತತ್ಪದಾರ್ಥೇ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೪ ॥

ಬೇರೆಬೇರೆ ಆಕಾರಗಳುಳ್ಳ ಭಂಗಾರದ ಒಡವೆಗಳನ್ನು ಕರಗಿಸಿದರೆ ಭಂಗಾರವೇ ಆಗುತ್ತದೆ. ಹಾಗೆಯೇ ಬೇರೆಬೇರೆ ಬಣ್ಣಗಳುಳ್ಳ ಹಸುಗಳು ಕೊಟ್ಟ ಹಾಲು ಸಮರಸವಾಗಿ ಬೆರೆಯುತ್ತವೆ. ವಾಪೀ, ಕೂಪ, ತಟಾಕ, ಸರೋವರ, ಸಮುದ್ರ, ನದಿ ಮೊದಲಾದುವುಗಳಲ್ಲಿರುವ ನೀರು ಬೇರೆಯಾಗಿರುವಂತೆ ಕಂಡುಬಂದರೂ, ಅವೆಲ್ಲವೂ ಒಂದರಲ್ಲೊಂದು ಬೆರೆಯುತ್ತವೆ. ಇವು ಹೇಗೋ ಹಾಗೆಯೇ, 'ತ್ವಂ' ಅಂದರೆ ಜೀವಾತ್ಮನಾದ ನೀನೂ 'ತತ್' ಅಂದರೆ ಪರಮಾತ್ಮಸ್ವರೂಪವುಳ್ಳ ಆ ಪರಬ್ರಹ್ಮವಸ್ತುವೂ ಬೇರೆಬೇರೆಯಾಗಿ ಕಂಡುಬಂದರೂ, ಅವೆರಡೂ ಒಂದೇ ಹೊರತು ಬೇರಲ್ಲ. ಈ ವಿಧವಾದ ತತ್ವ ರಹಸ್ಯವನ್ನು ತಿಳಿದು ತ್ರಿಗುಣಾತೀತವಾದ ಮಾರ್ಗದಲ್ಲಿ ವರ್ತಿಸುವವರಿಗೆ ವಿಧಿನಿಷೇಧಗಳೆಂಬ ಭೇದಭಾವವೇ ಇಲ್ಲವು.

ಶ್ಲೋ ॥ ಕ ಶ್ಯಾತ್ರಾಽಹಂ ♦ ಕ ಮಪಿ ಚ ಭವಾನ್ ♦ ಕೋಽಯ ಮತ್ರ ಪ್ರಪಂಚಃ ।
ಸ್ವಾಂತರ್ವೇದ್ಯೇ ♦ ಗಗನಸದೃಶೇ ♦ ಪೂರ್ಣತತ್ವಪ್ರಕಾಶೇ ॥
ಆನಂದಾಖ್ಯೇ ♦ ಸಮರಸಘನೇ ♦ ಬಾಹ್ಯ ಅಂತ ರ್ವಿಲೀನೇ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೫ ॥

ಏಕಸ್ವರೂಪನಾಗಿ, ಜ್ಞಾನಸ್ವರೂಪವಾಗುಳ್ಳ, ಆಕಾಶದಂತೆ ಬಟ್ಟಬಯಲುಸ್ವರೂಪನಾದ, ಪೂರ್ಣತತ್ವಪ್ರಕಾಶನಾದ, ಪರಮಾನಂದವೇ ಸ್ವರೂಪವಾಗುಳ್ಳ, ಸ್ವಪ್ರಕಾಶನಾದ ಮತ್ತು ಪ್ರಪಂಚದ ಒಳಗೂ ಹೊರಗೂ ತುಂಬಿತುಳುಕಾಡುತ್ತಿರುವ ಆ ಪರಮಾತ್ಮನಲ್ಲಿ, ನಾನು ಯಾರು? ನೀನು ಯಾರು, ಈ ಪ್ರಪಂಚಯಾವುದು? 'ಸರ್ವಂ ಬ್ರಹ್ಮಮಯಂ ಜಗತ್' ಎಂಬಂತೆ 'ಸಮಸ್ತವೂ ಬ್ರಹ್ಮಮಯವಾಗಿರುವ ಆ ಪರಬ್ರಹ್ಮನಲ್ಲಿ ಅದು ನಾನು, ಇದು ನೀನು, ಇದು ಪ್ರಪಂಚ ಎಂಬ ಭೇದಭಾವವೆಂದಿಗೂ ಇಲ್ಲ' ಎಂದು ತಿಳಿದಂಥ ಜೀವನ್ಮುಕ್ತರಿಗೆ 'ಇದು ಬೇಕು, ಇದು ಬೇಡ' ಎಂಬ ಭೇದಬುದ್ಧಿಯೆಂದಿಗೂ ಇರದು.

ಶ್ಲೋ ॥ ದೃಷ್ಟ್ವಾ ಸರ್ವಂ ♦ ಪರಮ ಮಮೃತಂ ♦ ಸ್ವಪ್ರಕಾಶಸ್ವರೂಪಂ ।
ಬುಧ್ವಾತ್ಮಾನಂ ♦ ವಿಮಲ ಮಚಲಂ ♦ ಸಚ್ಚಿದಾನಂದರೂಪಂ ॥
ಬ್ರಹ್ಮಾಧಾರಂ ♦ ಸಕಲಜಗತಾಂ ♦ ಸಾಕ್ಷಿಣಂ ನಿರ್ವಿಶೇಷಂ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥೬॥

'ನಮ್ಮ ಕಣ್ಮನಗಳಿಗೆ ಗೋಚರವಾಗುವ ಚರಾಚರಾತ್ಮ ಪ್ರಪಂಚವೆಲ್ಲವೂ ಪರಮಾತ್ಮನೇ ಹೌದು. ಆ ಪರಬ್ರಹ್ಮನು ನಾಶರಹಿತನು, ಸ್ವಪ್ರಕಾಶಸ್ವರೂಪನು, ನಿತ್ಯನಿರ್ಮಲನು, ಸಚ್ಚಿದಾನಂದಸ್ವರೂಪಿಯು, ಬ್ರಹ್ಮಾಂಡವೆಲ್ಲಕ್ಕೂ ಆಧಾರಭೂತನು, ಅಚಲನು ಮತ್ತು ಸಮಸ್ತ ಜಗತ್ತಿಗೂ ಸಾಕ್ಷಿಭೂತನು,' ಎಂದು ಯಾರು ತಿಳಿದು ತ್ರಿಗುಣಾತೀತವಾದ ಮಾರ್ಗದಲ್ಲಿ ನಡೆಯುತ್ತಾರೆಯೋ, ಅವರಿಗೆ ಬೇಕು ಬೇಡೆಂಬ ವಿಧಿನಿಷೇಧಗಳಿಲ್ಲ.

ಶ್ಲೋ ॥ ಕಾರ್ಯಾಽಕಾರ್ಯಂ ♦ ಕಿ ಮಪಿ ಚರತೋ ♦ ನೈವ ಕರ್ತೃತ್ವ ಮಸ್ತಿ ।
ಜೀವನ್ಮುಕ್ತಿ ♦ ಸ್ಥಿತಿ ರಿಹ ಗತಾ ♦ ದಗ್ಧವಸ್ತ್ರಾವಭಾಸಾ ॥
ಏವಂ ದೇಹೇ ♦ ಪ್ರಚಲಿತತಯಾ ♦ ದೃಶ್ಯಮಾನ ಸ್ಸ ಮುಕ್ತೋ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೭ ॥

ಬ್ರಹ್ಮಜ್ಞಾನಿಗೆ 'ನಾನು ಕರ್ತನು' ಎಂಬ ಬುದ್ಧಿಯೇ ಹುಟ್ಟದು. ಏಕೆಂದರೆ ಈ ಭಾವನೆಯು ಭ್ರಾಂತಿಯಿಂದುಂಟಾದುದು, ಭ್ರಾಂತಿಯು ಹರಿಯಿತೆಂದರೆ ಕರ್ತೃತ್ವ ಬುದ್ಧಿಯೂ ತೊಲಗುತ್ತದೆ. 'ಕರ್ತನು ನಾನಲ್ಲ' ಎಂಬ ಭಾವನೆಯಿರುವವನಿಗೆ ಕಾರ್ಯಾಕಾರ್ಯಗಳೆಂಬುದುಂಟೇ? ಅಂದರೆ ಈ ಕಾರ್ಯವನ್ನು ಮಾಡಬೇಕು, ಈ ಕಾರ್ಯವನ್ನು ಮಾಡಬಾರದೆಂಬ ಭೇದಬುದ್ಧಿಯೆಂದಿಗೂ ಇರುವುದಿಲ್ಲ. ಒಂದು ವಸ್ತ್ರವನ್ನು ಒಂದು ಸ್ಥಳದಲ್ಲಿ ಅಲುಗದಂತಿಟ್ಟು ಅದಕ್ಕೆ ಬೆಂಕಿಯನ್ನು ಹಚ್ಚಿಬಿಟ್ಟರೆ, ಸುಟ್ಟಮೇಲೆಯೂ ಅದು ವಸ್ತ್ರದಂತೆಯೇ ಕಂಡುಬಂದರೂ, ಅದು ನಿಜವಾಗಿಯೂ ವಸ್ತ್ರವಲ್ಲ. ಅದು ಹೇಗೋ ಹಾಗೆಯೇ ಬ್ರಹ್ಮಜ್ಞಾನಿಗಳು ಯಾವುದಾದರೊಂದು ಕೆಲಸವನ್ನು ಮಾಡುವಂತೆ ಕಂಡುಬಂದರೂ ವಾಸ್ತವದಲ್ಲಿ ಕೆಲಸವನ್ನು ಅವರು ಮಾಡಿದವರಲ್ಲ, ಎಂಬ ಈ ಬುದ್ಧಿಯನ್ನುಳ್ಳ ಜೀವನ್ಮುಕ್ತರಿಗೆ ವಿಧಿನಿಷೇಧಗಳ ಸೋಂಕೆಂಬುದೇ ಇಲ್ಲ.

ಶ್ಲೋ ॥ ಯಸ್ಮಿನ್ ವಿಶ್ವಂ ♦ ಸಕಲಭುವನಂ ♦ಸೈಂಧವಂ ಸಿಂಧುಮಧ್ಯೇ ।
ಪೃಥ್ವ್ಯಂಬ್ವಗ್ನಿ ♦ ಶ್ವಸನಗಗನಂ ♦ ಜೀವಭಾವಕ್ರಮೇಣ ॥
ಯದ್ಯಲ್ಲೀನಂ ♦ ತದಿದ ಮಖಿಲಂ ♦ ಸಚ್ಚಿದಾನಂದರೂಪಂ ।
ನಿಸ್ತ್ರೈಗುಣ್ಯೇ ♦ ಪಥಿ ವಿಚರತಾಂ ♦ ಕೋ ವಿಧಿಃ ಕೋ ನಿಷೇಧಃ ॥ ೮ ॥

ಚನ್ನಾಗಿ ವಿಚಾರಮಾಡಿದಲ್ಲಿ ಈ ಕಣ್ಣಿಗೆ ಕಾಣ್ಬರುವ ಪ್ರಪಂಚವೆಲ್ಲವೂ ಯಾವನಲ್ಲಿ ಹುದುಗಿರುವುವೋ, ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಈ ಐದೂ ಯಾವನಿಂದ ಚೈತನ್ಯವನ್ನು ಪಡೆದು ಕಡೆಗೆ ಅವನಲ್ಲಿಯೇ ಎಲ್ಲವೂ ಲೀನವಾಗಿ ಹೋಗುತ್ತವೆಯೋ, ಅಂತಹ ಸಚ್ಚಿದಾನಂದರೂಪನಾದ ಪರಮಾತ್ಮನ ತತ್ವವನ್ನು ತಿಳಿದು ತ್ರಿಗುಣರಹಿತವಾದ ಕರ್ಮಗಳಲ್ಲಿ ಯಾರು ವರ್ತಿಸುತ್ತಾರೆಯೋ, ಅಂತಹ ಜೀವನ್ಮುಕ್ತರಿಗೆ ವಿಧಿಯಾವುದು? ಮತ್ತು ನಿಷೇಧವಾವುದು? ಎಂಬುದೇ ತಾತ್ಪರ್ಯ.

ಮೇಲೆ ಹೇಳಿದ ಎಂಟು ಶ್ಲೋಕಗಳಲ್ಲಿ ಶುಕಮಹರ್ಷಿಗಳು, ಪರಮಾತ್ಮನ ಸ್ವರೂಪವನ್ನು ಸ್ಪಷ್ಟಪಡಿಸಿ ಆ ಪರಬ್ರಹ್ಮನ ನಿಜತತ್ವವನ್ನು ತಿಳಿದವರು ಆ ಪರಮಾತ್ಮನ ಸ್ವರೂಪಿಗಳೇ ಆಗುತ್ತಾರೆಂದು ಒತ್ತಿ ಹೇಳಿ, ಇಂತಹ ಜೀವನ್ಮುಕ್ತರಾದ ಜ್ಞಾನಿಗಳಿಗೆ ಪಾಪಪುಣ್ಯಗಳು, ಮಾಯಾಮೋಹಗಳು, ಭೇದಾಭೇದಗಳು ಮೊದಲಾದುವು ಇಲ್ಲವು, ಎಂಬ ರಹಸ್ಯವನ್ನು ಚನ್ನಾಗಿ ತಿಳಿಯಪಡಿಸಿರುತ್ತಾರೆ. ಆದುದರಿಂದ ಮುಮುಕ್ಷುಗಳಾಗಿ ಬ್ರಹ್ಮಜ್ಞಾನವನ್ನು ಪಡೆಯಬೇಕೆಂದು ಉದ್ದೇಶಿಸುವರು ಎಂದಿಗೂ ಜಾತಿಭೇದಗಳೇ ಮೊದಲಾದ ವಿಷಯಗಳನ್ನು ಮನಸ್ಸಿನಲ್ಲಿ ಯೋಚಿಸರು; ಮತ್ತು ಈ ವಿಧವಾದ ಭೇದಗಳನ್ನು ಕಾರ್ಯತಃ ತೋರಿಸರು. ಓ ಸ್ತ್ರೀ ಪುರುಷರಿರಾ! ಜಾತಿಭೇದಗಳೆಂಬ ಕಟ್ಟನ್ನು ತೊಡೆದು, ಎಲ್ಲರೂ ಪರಮಾತ್ಮಸ್ವರೂಪವೆಂದೇ ಭಾವಿಸಿ, ಸನ್ಮಾರ್ಗಪ್ರವರ್ತಕರಾಗಿ ಪರಮಾತ್ಮ ನಿಶ್ಚಯಜ್ಞಾನವನ್ನು ತಿಳಿಯುವುದಕ್ಕೆ ಪ್ರಯತ್ನಿಸಿ. ಹೀಗೆ ಮಾಡುವುದರಿಂದ ಜ್ಞಾನವು ನಿಮಗೆ ಲಭಿಸಿ ನೀವು ಸುಲಭವಾಗಿ ಮೋಕ್ಷವನ್ನು ಪಡೆಯಬಹುದು.

ಶ್ರುತಿ ॥ ಜಾತಿ ರಿತಿ ನ ಚರ್ಮಣೋ ನ ರಕ್ತಸ್ಯ ನ ಮಾಂಸಸ್ಯ ನ ಚಾಸ್ಥಿನಃ ♦
ನ ಜಾತಿ ರಾತ್ಮನೋ ಜಾತಿಃ ♦ ವ್ಯವಹಾರಪ್ರಕಲ್ಪಿತಃ ॥

ಎಂಬಂತೆ ಲೋಕದಲ್ಲಿ ಸಕಲ ಜೀವಿಜಂತುಗಳ ಶರೀರಗಳು, ರಕ್ತ, ಮಾಂಸ, ಮಜ್ಜ, ನರ, ಎಲುಬು ಮತ್ತು ಚರ್ಮ ಇವುಗಳಿಂದ ಮಾಡಲ್ಪಟ್ಟಿವೆಯಾದುದರಿಂದ ಇಂತಹ ಶರೀರಗಳಿಗೆ ಜಾತಿ ಭೇದಗಳೆಂಬುದಿಲ್ಲ. ಒಬ್ಬನೇ ಸೂರ್ಯನು ಬೇರೆಬೇರೆ ಸ್ಥಳಗಳಲ್ಲಿರುವ ಜಲಗಳಲ್ಲಿ ಹೇಗೆ ಪ್ರತಿಫಲಿಸಿತ್ತಾನೆಯೋ, ಅದೇ ರೀತಿಯಲ್ಲಿ ಆತ್ಮನು ಒಬ್ಬನೇ ಆದರೂ ಸಮಸ್ತ ಪ್ರಾಣಿಕೋಟಿಗಳಲ್ಲಿಯೂ ಚೈತನ್ಯಮೂರ್ತಿಯಾಗಿ ಪಸರಿಸಿದ್ದಾನಾದುದರಿಂದ, ಅಂತಹ ಆತ್ಮನಿಗೆ ಜಾತಿಬೇಧಗಳಿಲ್ಲವು. ಲೋಕ ವ್ಯವಹಾರಿಗಳಿಗೆ ಮಾತ್ರ ಜಾತಿಭೇಡಗಳೆಂಬುದು ಏರ್ಪಟ್ಟಿವೆಯೇ ಹೊರತು, ವಸ್ತುತಃ ಜಾತಿಬೇಧಗಳೆಂಬುವೇ ಇಲ್ಲವು. ಜೀವಿಯು ಯಾವ ಯೋನಿಯಲ್ಲಿಯೇ ಹುಟ್ಟಿರಲಿ, ಅವನು ಮನಸ್ಸನ್ನು ಹದಗೊಳಿಸಿ ಸನ್ಮಾರ್ಗ ಪ್ರವರ್ತಕನಾಗಿದ್ದದ್ದೇ ಆದರೆ, ಅವನು ಭಗವಂತನ ಕರುಣೆಗೆ ಪಾತ್ರನೇ ಆಗುತ್ತಾನೆ. ಕಡೆಗೆ ನೀಚ ಯೋನಿಯಲ್ಲಿ ಉದಿಸಿದ್ದರೂ ಮುಕ್ತಿ ಮಾರ್ಗವನ್ನು ಹಿಡಿದು ನಡೆದದ್ದೇ ಆದರೆ, ಆತನಿಗೆ ಸಾಯುಜ್ಯ ಸುಖವನ್ನು ಕೊಟ್ಟೇ ಕೊಡುತ್ತಾನೆ. ಈ ವಿಧವಾದ ಭಾವನೆಗೆ ಒಂದು ಪ್ರತ್ಯೇಕ ಪ್ರಮಾಣವುಂಟು. ಈಗ್ಗೆ ಕೆಲವು ವರ್ಷಗಳ ಕೆಳಗೆ ದಕ್ಷಿಣ ಹಿಂದೂಸ್ಥಾನದಲ್ಲಿ ಒಂದಾನೊಂದು ಹಳ್ಳಿಯಲ್ಲಿ ಒಬ್ಬನು ಚಂಡಾಲ ಯೋನಿಯಲ್ಲಿ ಹುಟ್ಟಿ, ಅವನಿಗೆ ಮೂವತ್ತು ವರ್ಷಗಳು ತುಂಬುವುದರೊಳಗಾಗಿ 'ಚಿದಂಬರಂ'ನಲ್ಲಿರುವ ನಟರಾಜನಲ್ಲಿ ಐಕ್ಯವಾದನೆಂಬ ವಿಷಯವು ಅನೇಕರಿಗೆ ತಿಳಿದೇ ಇದೆ. ಈ ಮಹಾನುಭಾವನ ಹೆಸರು 'ನಂದನಾರ್' ಎಂದು. ಇವನ ಸಂಕ್ಷೇಪವಾದ ಕಥೆಯೇನೆಂದರೆ :—

ಕಡುಬಡತನದಿಂದ ಜೀವನ ಮಾಡುತ್ತಿದ್ದ ಒಬ್ಬ ಪರಯನ ಸಂಸಾರ. ಅದರಲ್ಲಿನ ಮನೆಮಕ್ಕಳೆಲ್ಲರೂ ಒಬ್ಬ ಬ್ರಾಹ್ಮಣನ ಹೊಲಗದ್ದೆಗಳನ್ನತ್ತು ಬೇಸಾಯಮಾಡಿ ಅದರಿಂದ ತಮ್ಮ ಪಾಲಿಗೆ ಬಂದ ಕಾಳುಕಡಿಗಳಲ್ಲಿ ಜೀವನ ಮಾಡಿಕೊಳ್ಳುತ್ತಿದ್ದರು. 'ನಂದ' ನೆಂಬ ಹುಡುಗನು ಇನ್ನೂ ಎಂಟು ವರ್ಷದವನಾಗಿರುವಾಗಲೇ ಯಜಮಾನನ ದನಗಳನ್ನು ಕಾಯುವುದೇ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದನು. ಇವನ ತಂದೆ

ತಾಯಿಗಳು ಮದ್ಯಪಾನ ಮಾಂಸಾಹಾರ ಮೊದಲಾದುವುಗಳಲ್ಲಿ ಆಸಕ್ತರಾಗಿರುತ್ತಿದ್ದರು. 'ನಂದನು' ಚಿಕ್ಕವನಾಗಿದ್ದರೂ ಅವನಿಗೆ ಪ್ರಾಣಿದಯೆಯೆಂಬುದು ಸ್ವಭಾವಜನ್ಯವಾದುದರಿಂದ ಮಾಂಸಾಹಾರದಲ್ಲಿ ಆಸೆಯಿನ್ನಿಡದೆ, ತಂದೆತಾಯಿಗಳು ಬಲಾತ್ಕರಿಸಿದರೂ ಅದನ್ನು ತಿನ್ನುವುದಕ್ಕೊಪ್ಪದೆ, ಅನೇಕ ದಿನಗಳು ಉಪವಾಸ ಮಾಡುತ್ತಿದ್ದನು. ಮದ್ಯದ ಹೆಸರೇ ಅವನಿಗೆ ಅಸಹ್ಯವನ್ನು ತರುತ್ತಿದ್ದಿತು. ಹೀಗಿರಲು ಅವನ ತಂದೆತಾಯಿಗಳಿಬ್ಬರೂ ತೀರಿಹೋದರು. ನಂದನಿಗೂ ವಯಸ್ಸು ಬಲಿಯುತ್ತ ಬಂದಿತು. ಕೆಲಸಗಳನ್ನೆಲ್ಲಾ ಇವನೇ ನೋಡಿಕೊಳ್ಳಬೇಕಾಗಿಯೂ ಬಂದಿತು. ಒಂದಾನೊಂದು ದಿನ, ನಂದನ ಯಜಮಾನನಾದ ಬ್ರಾಹ್ಮಣನ ಮಗನು ಚಿಣ್ಣಿಕೋಲು ಆಡುತ್ತಿರುವಾಗ ಎಡವಿಬಿದ್ದು ರಕ್ತದಿಂದ ತೊಯ್ದನು. ದೂರದಲ್ಲಿ ನಿಂತು ನೋಡುತ್ತಿದ್ದ ನಂದನು, ಬೇಗದಿಂದ ಬಂದು ಆ ಬ್ರಾಹ್ಮಣಬಾಲಕನನ್ನು ಹಿಡಿದು ಮೇಲಕ್ಕೆತ್ತಿದನು. ಇದೇ ಅವನ ತಪ್ಪು. 'ಚಂಡಾಲನಾದ ಇವನು ಬ್ರಾಹ್ಮಣನಾದ ನನ್ನನ್ನು ಮುಟ್ಟಬಹುದೇ?' ಎಂದು ಬ್ರಾಹ್ಮಣಬಾಲಕನು ಬಹಳ ರೋಷದಿಂದ ಒಂದು ಕಲ್ಲನ್ನು ಇವನ ಕಡೆಗೆ ಬಿಸುರಿದನು. ಅದು ತಗುಲಿ ಇವನಿಗೆ ರಕ್ತ ಸುರಿಯಿತು. ಆಗ ನಂದನು ದುಃಖಿಸುವುದಕ್ಕೆ ಬದಲು ಹೀಗೆಂದು ಯೋಚಿಸ ತೊಡಗಿದನು. 'ಆಹಾ ಏನಾಶ್ಚರ್ಯ! ಇದುವರಿವಿಗೂ, ಜಾತಿಗೆ ತಕ್ಕಂತೆ ರಕ್ತಮಾಂಸಾದಿಗಳಿಗೆ ಗುಣಗಳಲ್ಲಿ ವ್ಯತ್ಯಾಸವನ್ನು ಹೊಂದುತ್ತವೆಯೆಂದು ನಾನು ತಿಳಿದಿದ್ದೆನು. ಈಗ ಇಬ್ಬರ ರಕ್ತವೂ ಕೆಂಪುಬಣ್ಣವೇ; ಏಟುಬಿದ್ದಾಗ ಇಬ್ಬರಿಗೂ ನೋವುಂಟಾಗಿದೆ. ಇಬ್ಬರಿಗೂ ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಒಂದೇ ವಿಧವಾಗಿ ಏರ್ಪಟ್ಟಿವೆ. ಈ ಶರೀರಪೋಷಣೆಗೆ ಇಬ್ಬರಿಗೂ ಆಹಾರವು ಬೇಕು. ಹೀಗಿರಲು, ನಮ್ಮಿಬ್ಬರಿಗೂ ಇರುವ ವ್ಯತ್ಯಾಸವಾವುದು? ಕಾರಣಾಂತರದಿಂದ ನಾವು ಬೇರೆಬೇರೆ ಯೋನಿಗಳಲ್ಲಿ ಜನಿಸಿರುತ್ತೇವೆಯೇ ಹೊರತು, ಸೃಷ್ಟಿಕರ್ತನಾದವನು ನಮ್ಮನ್ನು ಬೇರೆಬೇರೆ ವಿಧವಾಗಿ ಸೃಷ್ಟಿಸಿಲ್ಲ. ಸರ್ವ ಸಮದೃಷ್ಟಿಯುಳ್ಳ ಆ ಪರಮಾತ್ಮನು ಎಲ್ಲಿರುವನು? ಅವನನ್ನು ನಾನು ಕಣ್ಣಾರೆ ಕಂಡು ನನ್ನ ಜನ್ಮವನ್ನು ಸಾರ್ಥಕಗೊಳಿಸುವೆನು' ಎಂದು ಆಲೋಚಿಸುತ್ತಿರುವ ಹೊತ್ತಿಗೆ ಸರಿಯಾಗಿ,

ದೂರದಲ್ಲಿ ಒಬ್ಬ ಬ್ರಾಹ್ಮಣನು, 'ಚಿದಂಬರೇಶ್ವರನಾದ ನಟರಾಜನೇ ಪರಮಾತ್ಮನು, ಆತನಿಗೆ ಜಾತಿ ಭೇದಗಳೆಂಬುದಿಲ್ಲ. ಪ್ರಾಣಿಗಳೆಲ್ಲರೂ ತಮ್ಮ ಜೀವಯಾತ್ರೆಗಳನ್ನು ಕಳೆದ ಮೇಲೆ ಆತನಲ್ಲಿ ಐಕ್ಯವಾಗುತ್ತಾರೆ' ಎಂದು ಜನಗಳಿಗೆ ಬೋಧಿಸುತ್ತಿದ್ದುದು ನಂದನ ಕಿವಿಗೆಬಿದ್ದಿತು. ನಂದನು ಈ ಉಪದೇಶಗಳನ್ನು ಗ್ರಹಿಸಿ ಚಿದಂಬರಂ ಎಂಬ ಯಾತ್ರಾಸ್ಥಳಕ್ಕೆ ಹೋಗಿ, ತನ್ನ ಅಪರಿಮಿತವಾದ ಭಕ್ತಿಯ ಮಹಿಮೆಯಿಂದ ಬ್ರಾಹ್ಮಣ ಶ್ರೇಣಿಯಲ್ಲಿರುವ ನಟರಾಜನ ದೇವಾಲಯಕ್ಕೆ ಪ್ರವೇಶವನ್ನು ಹೊಂದಿ, ಅಲ್ಲಿ ಎಲ್ಲರ ಸಮಕ್ಷಮದಲ್ಲಿಯೂ ಪರಮಾತ್ಮನಾದ ನಟರಾಜನಲ್ಲಿ ಐಕ್ಯವನ್ನು ಹೊಂದಿದನು. ಈಗಲೂ ಆ ನಂದನ ವಿಗ್ರಹವು ಆ ದೇವಸ್ಥಾನದಲ್ಲಿದೆ. ನಟರಾಜನ ಭಕ್ತರು ಆ 'ನಂದನಾರ್' ಎಂಬುವನಿಗೆ ಪ್ರಥಮ ಪೂಜೆಯನ್ನು ಸಲ್ಲಿಸಿ, ಅನಂತರ ಈಶ್ವರನ ದರ್ಶನವನ್ನು ಮಾಡುತ್ತಾರೆ.

ಹೀಗಿರುವಲ್ಲಿ ಜಾತಿ ಭೇದಗಳೆಂಬುದು ಎಲ್ಲಿಯದು. ಖಂಡಿತವಾಗಿಯೂ ಮೋಕ್ಷಮಾರ್ಗಾವಲಂಬಿಗಳಿಗೆ ಜಾತಿ ಭೇದಗಳೆಂಬುದೇ ಇಲ್ಲವೆಂದು ತಿಳಿಯಬೇಕು. ವ್ಯವಹಾರಕ್ಕಾಗಿ ಏರ್ಪಟ್ಟಿರುವ ಈ ವರ್ಣಾಶ್ರಮ ಧರ್ಮಗಳನ್ನು ದೊಡ್ಡದಾಗೆಣಿಸಿ ಜನಗಳು ವರ್ತಿಸಬಾರದೆಂಬುದೇ ಈ ಪ್ರಕರಣದ ಉದ್ದೇಶ.

ಶಿಷ್ಯ :—ಓ ಸದ್ಗುರುನಾಥಾ ! ಕರ್ಮವೆಂಬುದೆಂಥದು ?

ಗುರು :—ಕರ್ಮವೆಂದರೆ ಒಂದು ಕೆಲಸ, ಅದೇನೆಂದರೆ, ನೋಡುವುದು, ನಡೆಯುವುದು, ಕೇಳುವುದು, ಮಾತನಾಡುವುದು ಮೊದಲಾದುವೆಲ್ಲವೂ ಕರ್ಮಗಳೇ. ಈ ಕರ್ಮಗಳಲ್ಲಿ ಸಾಮಾನ್ಯ ಕರ್ಮ, ಪಾಪಕರ್ಮ, ಸತ್ಕರ್ಮ, ಮತ್ತು ನಿವೃತ್ತಿ ಕರ್ಮವೆಂದು ನಾಲ್ಕು ಬಗೆಯುಂಟು. ಇದರಲ್ಲಿ ಸಾಮಾನ್ಯಕರ್ಮವೆಂಥದೆಂದರೆ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಸಾಧಾರಣವಾಗಿ ಮಾಡುವ ಕರ್ಮಗಳು. ಅವು ಯಾವುವೆಂದರೆ,

ಕಿವಿಗಳು :—ಇವುಗಳ ವಿಷಯಕವಾದ ಶಬ್ದಗಳನ್ನು ಕೇಳುವಂತೆ ಮಾಡುತ್ತವೆ. ಕಣ್ಣುಗಳು:—ಇವುಗಳು ದೃಶ್ಯವಸ್ತುಗಳ ಸ್ವರೂಪವೆಂಥ

ದೆಂದು ತಿಳಿಯಹೇಳುತ್ತವೆ. ನಾಲಿಗೆ:—ಇದು ರಸವಿಶೇಷಗಳ ರಹಸ್ಯವನ್ನು ತಿಳಿಸುವುದಕ್ಕೂ ಮತ್ತು ಮಾತನಾಡುವುದಕ್ಕೂ ಸಹಕಾರಿಯಾಗಿದೆ. ಮೂಗು:—ಇದು ಸುಗಂಧ ದುರ್ಗಂಧಗಳ ವಾಸನೆಯನ್ನು ತಿಳಿಸುತ್ತದೆ. ಬಾಯಿ:—ಇದು ಆಹಾರವನ್ನು ಸೇವಿಸುವುದಕ್ಕೂ ಮತ್ತು ಮಾತನಾಡುವುದಕ್ಕೂ ಅವಕಾಶವನ್ನು ಕೊಡುತ್ತದೆ. ಕೈಗಳು:—ಕೊಡುವುದು, ತೆಗೆದುಕೊಳ್ಳುವುದು, ಮೊದಲಾದ ಕೆಲಸಗಳನ್ನು ಮಾಡುತ್ತವೆ. ಗುಹ್ಯವು:—ಇದು ಮೂತ್ರ ಮತ್ತು ಶುಕ್ಲಶೋಣಿತಗಳ ವಿಸರ್ಜನೆಗೆ ಅನುಕೂಲಿತವಾಗಿದೆ. ಇದು ಜೀವಿಕೋಟಿಗಳ ಜನ್ಮಗಳಿಗೆ ಸಹಕಾರಿ ಮತ್ತು ಇದರ ಸಹಾಯದಿಂದ ಜೀವಿಗಳು ರತಿಸುಖವನ್ನನುಭವಿಸುವರು. ಗುದಸ್ಥಾನ:—ಇದು ಮಲವಿಸರ್ಜನೆಯನ್ನು ಮಾಡಿಸುತ್ತದೆ. ತ್ವಗಿಂದ್ರಿಯವು ಅಂದರೆ ಚರ್ಮವು:—ಇದು ಸ್ಪರ್ಶಗುಣವುಳ್ಳದುದರಿಂದ ಅದರಿಂದ ಪದಾರ್ಥಗಳ ಸ್ವರೂಪಜ್ಞಾನವನ್ನು ಕೊಡುವುದಕ್ಕೆ ಸಹಕಾರಿಯಾಗಿದೆ. ಪಾದಗಳು:—ನಡೆವುದು, ಓಡುವುದು ಮೊದಲಾದ ಕಾರ್ಯಗಳನ್ನು ನಡೆಸುತ್ತವೆ.

ಈ ಮೇಲೆ ಹೇಳಿದ ದಶೇಂದ್ರಿಯಗಳು ಮಾಡುವಂಥ ಕಾರ್ಯಗಳನ್ನು, ಆತ್ಮವು ಅಜ್ಞಾನದಿಂದ ಮುಚ್ಚಲ್ಪಟ್ಟಿರುವುದರಿಂದ, 'ನಾನು ಮಾಡುತ್ತಿದ್ದೇನೆ' ಎಂದು ಪುರುಷನು ಹೇಳಿಕೊಳ್ಳುತ್ತಾನೆ. ಈ ದಶೇಂದ್ರಿಯಗಳು ಮಾಡುವ, ಮೇಲೆ ಹೇಳಿದ ಕರ್ಮಗಳಿಗೆ ದೇಹ ಕರ್ಮಗಳೆಂದೂ, ಸಾಧಾರಣ ಕರ್ಮಗಳೆಂದೂ ಹೆಸರು. ಈ ಇಂದ್ರಿಯಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿರುವುದರಿಂದ, ಅವು ಮನಸ್ಸನ್ನು ಬೇರೆ ಬೇರೆ ವಿಷಯಗಳ ಮೇಲೆ ಓಡುತ್ತಿರುವಂತೆ ಮಾಡುತ್ತವೆ. ಹೀಗೆ ಮನಸ್ಸು ವಿಷಯಾಂತರಗಳಲ್ಲಿ ಓಡದೆ ಇದ್ದ ಕಡೆಯೇ ಇದ್ದು, ಕಡೆಗೆ ಪರಬ್ರಹ್ಮ ವಸ್ತುವಿನಲ್ಲಿ ಲೀನವಾದದ್ದೇ ಆದರೆ, ಮೋಕ್ಷವೆಂಬ ಪದವಿಯು ತಾನಾಗಿಯೇ ದೊರಕುತ್ತದೆ. ಹೇಗೆಂದರೆ, ಇಂದ್ರಿಯಗಳು ಶಬ್ದಾದಿವಿಷಯಗಳಲ್ಲಿ ಓಡುತ್ತಿದ್ದುದೇ ಆದರೆ, ಆ ವಿಷಯಗಳಲ್ಲಿ ಪುರುಷನಿಗೆ ಒಂದು ವಿಧವಾದ ಆಶೆಯು ತಲೆದೋರುತ್ತದೆ; ಅಂದರೆ, ಆ ವಿಷಯಗಳಲ್ಲಿ ಹೆಚ್ಚಾಗಿ ಆಸಕ್ತಿಯುಂಟಾಗುತ್ತದೆ. ಆ ಆಸಕ್ತಿಯಿಂದ ಇಚ್ಛೆಯೂ, ಆ ಇಚ್ಛೆಯಿಂದ ಕೋಪವೂ, ಉಂಟಾಗುತ್ತವೆ. ಈ ಕೋಪದಿಂದ ಹೊಡೆಯು

ವುದು, ದೂಷಿಸುವುದು ಮೊದಲಾದ ಪಾಪಹೇತುವಾದ ಕಾರ್ಯಗಳಲ್ಲಿ ಮನಸ್ಸನ್ನು ತಿರುಗಿಸಿ ದುಸ್ಥಿತಿಯಲ್ಲಿ ಅದನ್ನು ಬಿಡುವುದು. ಅನರ್ಥಕಾರಕವಾದ ಕೋಪವನ್ನುಳ್ಳವನು, ಇಂದ್ರಿಯಗಳನ್ನು ಎಂದಿಗೂ ಜಯಿಸಲಾರನು. ಆ ಕೋಪಿಷ್ಠನಿಗೆ ಪ್ರಜ್ಞೆಯೆಂಬುದೇ ಇರುವುದಿಲ್ಲ. ಹೀಗಿರುವವನಿಗೆ ಆತ್ಮಜ್ಞಾನವು ಎಂದಿಗೂ ಲಭಿಸಲಾರದು. ಈ ಆತ್ಮಜ್ಞಾನೋದಯಕ್ಕೆ ಭಂಗವು ಬಂದಿತೆಂದರೆ ಪುರುಷನು ಸಂಸಾರಸಾಗರದಲ್ಲಿ ಮುಳುಗಿ ತೇಲಬೇಕಾಗುತ್ತದೆ.

ಶ್ಲೋ ॥ ಇಂದ್ರಿಯಾಣಾಂ ತು ಸರ್ವೇಷಾಂ ♦ ಯದ್ಯೇಕಂ ಕ್ಷರ ತೀಂದ್ರಿಯಂ ।
ತೇನಾಸ್ಯ ಕ್ಷರತಿ ಪ್ರಜ್ಞಾ ♦ ಧೃತೇಃ ಪಾತ್ರಾದಿವೋದಕಂ ॥

ಎಂಬ ಮನುಸ್ಮೃತಿ ವಾಕ್ಯರೀತಿಯಾಗಿ, ಇಂದ್ರಿಯಗಳಲ್ಲಿ ಯಾವುದಾದರೊಂದು ಇಂದ್ರಿಯವು ಸ್ವಾಧೀನವಾಗದ ಪಕ್ಷದಲ್ಲಿ, ಸಣ್ಣ ರಂಧ್ರವನ್ನುಳ್ಳ ಗಡಿಗೆಯೊಳಗಿನ ನೀರು ಮೆಲ್ಲಮೆಲ್ಲಗೆ ಸೋರಿಹೋಗಿ, ಆ ಭಾಂಡವು ಬರಿಯದಾಗುವಂತೆ, ಜ್ಞಾನವು ದಿನೇದಿನೇ ಕಡಿಮೆಯಾಗುತ್ತ ಕಡೆಗೆ ನಿಶ್ಶೇಷವಾಗಿ ಹೋಗುವುದು. ಆದುದರಿಂದ ಇಂದ್ರಿಯಗಳನ್ನು ವಿಷಯವ್ಯಾಪಾರಗಳಲ್ಲಿ ಹೋಗಗಲೀಯದೆ ಕ್ರಮಕ್ರಮವಾಗಿ ಅಂದರೆ ಮೆಲ್ಲಮೆಲ್ಲಗೆ ವಶಮಾಡಿಕೊಂಡದ್ದೇ ಆದರೆ, ತನ್ನ ದೇಹಕ್ಕೆ ಸ್ವಲ್ಪವೂ ಆಯಾಸವುಂಟಾಗದಂತೆ ಜ್ಞಾನನಿಷ್ಠೆಯನ್ನು ಸಂಪಾದಿಸುತ್ತ ಬರಬಹುದು.

ಸದಾ ವಿಷಯವ್ಯಾಪಾರಗಳಲ್ಲಿಯೇ ಓಡುತ್ತಿರುವ ಇಂದ್ರಿಯಗಳನ್ನು ನಿಗ್ರಹಮಾಡುವುದು ಯೋಗಿಗಳಿಗೂ ಕಷ್ಟಸಾಧ್ಯ. ಜ್ಞಾನಾನುಷ್ಠಾನದಿಂದ ಮನಸ್ಸನ್ನು ಅಣಗಿಸಿದ್ದೇ ಆದರೆ, ಇಂದ್ರಿಯನಿಗ್ರಹವು ಅತಿ ಸುಲಭ. ಇಂದ್ರಿಯನಿಗ್ರಹವನ್ನು ಮಾಡಬೇಕೆಂದು ಮನಸ್ಸಿನಲ್ಲಿ ಎಣಿಸಿದ ಮಾತ್ರಕ್ಕೇ ಫಲವಿಲ್ಲ. ಮನಸ್ಸನ್ನು ನಿಗ್ರಹಿಸದೆ ಯಾವ ಕೋರಿಕೆಯನ್ನು ಹೊಂದಿದ್ದರೂ, ಆ ವಿಧವಾದ ಪ್ರಯತ್ನವಿಲ್ಲದಿದ್ದಲ್ಲಿ ಏನೊಂದು ಪ್ರಯೋಜನವೂ ಇಲ್ಲ. ಕಾರಣವೇನೆಂದರೆ ಪ್ರತಿ ಇಂದ್ರಿಯವೂ ತನ್ನತನ್ನ ಕೆಲಸವನ್ನು ಮಾಡುತ್ತಲೇ ಇರುತ್ತದೆ. ಮನೋವೇಗವನ್ನು ಕುಗ್ಗಿಸದೆ ಇಂದ್ರಿಯನಿಗ್ರಹವನ್ನು ಮಾಡುವವನು ಮೂಢನೇ ಸರಿ. ಆದರೆ ಇಂದ್ರಿಯಗಳು

ತಮತಮಗೆ ನಿಯಮಿತವಾದ ಕಾರ್ಯಗಳನ್ನು ಮಾಡದ ಭಾಗದಲ್ಲಿ ಶರೀರವೇ ನಿಲ್ಲಲಾರದು.

ಶ್ಲೋ ॥ " ಶ್ರುತ್ವಾ ಸ್ಪೃಷ್ಟ್ವಾ ಚ ಭುಕ್ತ್ವಾ ಚ ♦ ಹೃಷ್ಟ್ವಾ ಜ್ಞಾತ್ವಾ ಶುಭಾಽಶುಭಂ।
ನ ಹೃಷ್ಯತಿ ಗ್ಲಾಯತಿ ನೋ ♦ ಯ ಶ್ಶಾಂತ ಇತಿ ಗದ್ಯತೇ " ॥

ಶ್ಲೋ ॥ " ಶ್ರುತ್ವಾ ಸ್ಪೃಷ್ಟ್ವಾ ಚ ದೃಷ್ಟ್ವಾ ಚ ♦ ಭುಕ್ತ್ವಾ ಘ್ರಾತ್ವಾ ಚ ಯೋ ನರಃ।
ನ ಹೃಷ್ಯತಿ ಗ್ಲಾಯತಿ ವಾ ♦ ಸ ವಿಜ್ಞೇಯೋ ಜಿತೇಂದ್ರಿಯಃ ॥ "

ಎಂಬ ಮಹೋಪನಿಷತ್ತು ಮತ್ತು ಮನುಸ್ಮೃತಿ ವಾಕ್ಯಗಳರೀತಿಯಾಗಿ, ಕಣ್ಣುಗಳು ರೂಪವನ್ನು ಗ್ರಹಿಸುತ್ತವೆ. ನಾಲಗೆಯು ರುಚಿ ನೋಡುತ್ತದೆ. ಮೂಗು ವಾಸನೆಯನ್ನು ತಿಳಿಯುತ್ತದೆ, ಬಾಯಿ ಮಾತನಾಡುತ್ತದೆ. ಕೈಗಳು ದಾನಪ್ರತಿಗ್ರಹಾದಿ ಕಾರ್ಯಗಳನ್ನು ನಡೆಸುತ್ತವೆ, ಪಾದಗಳು ನಡೆಯುವುದು ಓಡುವುದು ಮೊದಲಾದ ಕರ್ಮಗಳನ್ನು ಮಾಡುತ್ತವೆ. ಮರ್ಮಸ್ಥಾನವು ಮೂತ್ರ ಮತ್ತು ಶುಕ್ಲಶೋಣಿತಗಳನ್ನು ಹೊರಕ್ಕೆ ಸುರಿಸುತ್ತದೆ. ಗುದವು ಮಲವಿಸರ್ಜನೆಯನ್ನು ಮಾಡುತ್ತದೆ, ಎಂಬ ಈ ವಿಧವಾದ ಕಾರ್ಯಗಳನ್ನು ಆಯಾ ಇಂದ್ರಿಯಗಳು ಮಾಡುತ್ತಲೇ ಇರುತ್ತವೆ. ಇವು ತಮ್ಮತಮ್ಮ ಈ ಕಾರ್ಯಗಳನ್ನು ಮಾಡದಿದ್ದಲ್ಲಿ ದೇಹಕ್ಕೆ ತುಂಬಾ ಬಾಧೆಯುಂಟಾಗಿ ಕಡೆಗೆ ದೇಹಧಾರಣೆಗೆ ಅವಕಾಶ ದೊರೆಯದಂತಾಗುತ್ತದೆ. ಈ ವಿಧವಾದ ಕರ್ಮಗಳೇ ಶರೀರಕರ್ಮಗಳು.

ಮೇಲೆ ಹೇಳಿದ ಶರೀರಕರ್ಮಗಳ ಜೊತೆಗೆ ಪುಣ್ಯಕರ್ಮ ಪಾಪಕರ್ಮಗಳೆಂಬುವೂ ಉಂಟು. ಜೀವಹಿಂಸೆಯನ್ನು ಮಾಡುವುದು, ಅಸತ್ಯವನ್ನು ನುಡಿಯುವುದು, ಕಳ್ಳತನ, ಪರದೂಷಣೆ, ತಾಡನಪೀಡನಗಳು, ಇತರರ ಮನಸ್ಸಿಗೆ ನೋವನ್ನುಂಟುಮಾಡುವಂತೆ ಮಾತಾಡುವುದು, ಪರಸ್ತ್ರೀಯನ್ನು ಮೋಹಿಸುವುದು, ಮೋಸಮಾಡುವುದು, ಜಾರತನ ಮೊದಲಾದ ನೀತಿ ವಿರುದ್ಧವಾದ ಕರ್ಮಗಳೆಲ್ಲಾ ಪಾಪಕರ್ಮಗಳು. ಇಂತಹ ಪಾಪಕರ್ಮಗಳನ್ನು ಮಾಡಿ ಮೃತಿಹೊಂದಿದವರು ತಾವು, ಮಾಡಿದ ಕರ್ಮಫಲಗಳಿಗೆ ತಕ್ಕಂತೆ ಕಲ್ಲು, ಗಿಡ, ಬೆಟ್ಟ, ಮೊದಲಾದ ಸ್ಥಾವರಗಳಾಗಿಯೋ, ಮೃಗಪಕ್ಷಿ

ಕ್ರಿಮಿಕೀಟಾದಿ ನೀಚಜನ್ಮವನ್ನುಳ್ಳವರಾಗಿಯೋ ಹುಟ್ಟುತ್ತಾರೆ. ಪುರುಷನು ಅಹಂಕಾರದಿಂದ ಬಾಯಿಯಲ್ಲಿ ನುಡಿದ ಪಾಪಕರ್ಮದ ಫಲವಾಗಿ ಪಕ್ಷಿಮೃಗಜನ್ಮಗಳನ್ನು ಪಡೆಯುವನು. ಅಹಂಭಾವದಿಂದ ತುಂಬಿದವನಾಗಿ ಮನಸ್ಸಿನಿಂದ ಕೂಡಿದ ಪಾಪಕರ್ಮಗಳನ್ನು ಮಾಡಿದ್ದೇ ಆದರೆ, ತತ್ಫಲವಾಗಿ ಮನುಷ್ಯ ಜಾತಿಯಲ್ಲಿ ಅಧಮವೆನಿಸುವ ಚಂಡಾಲಯೋನಿಯಲ್ಲಿ ಜನಿಸುವನು. ವೇದವಿರುದ್ಧವಾಗಿ ಪಾಪಕರ್ಮಗಳನ್ನು ಮಾಡುವುದಕ್ಕೆ ಸ್ವಪ್ನದಲ್ಲಿಯೂ ಎಡೆಗೊಡಬಾರದು. ಅಂದರೆ ಪಾಪಕರ್ಮಾಚರಣೆಗೆ ಮನಸ್ಸನ್ನು ಎಂದಿಗೂ ತಿರುಗಿಸಬಾರದು, ಎಂದು ತಿಳಿದುಕೊಳ್ಳಬೇಕೆಂದು, ಗುರುವು ಶಿಷ್ಯನ ಪ್ರಶ್ನೆಗೆ ಉತ್ತರಕೊಟ್ಟನು.

ಶಿಷ್ಯ:—ಸ್ವಾಮಿ! ಪೂಜ್ಯರು ಅಪ್ಪಣೆ ಕೊಡಿಸದಂತೆ ಇನ್ನು ಮುಂದೆ ಪಾಪಕರ್ಮಗಳನ್ನು ಮಾಡುವುದಕ್ಕೆ ನಾನು ಎಂದಿಗೂ ಪ್ರಯತ್ನಪಡುವುದಿಲ್ಲ. ಆದರೆ ಹಿಂದಿನ ಜನ್ಮಗಳಲ್ಲಿ ನಾನು ಮಾಡಿದ ಪಾಪಕರ್ಮಗಳನ್ನು ತಪ್ಪಿಸಿಕೊಳ್ಳುವ ಬಗೆ ಹೇಗೆ? ಎಂಬುದನ್ನು ದಯವಿಟ್ಟು ತಿಳಿಸಬೇಕು.

ಗುರು:—ಓ ಶಿಷ್ಯ! ನೀನು ಇನ್ನು ಮುಂದೆ 'ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತವೆಂಬ' ಈ ಗ್ರಂಥದಲ್ಲಿ ಶ್ರೀ ಪರಮಹಂಸ ಸಚ್ಚಿದಾನಂದರು ತಮ್ಮ ಅನುಭವಗಳನ್ನು ತಿಳಿಸುವುದರ ಮೂಲಕ ಜನಗಳ ಉಪಯೋಗಕ್ಕಾಗಿ ಅನೇಕ ಉಪದೇಶಗಳನ್ನು ಮಾಡಿದ್ದಾರೆ. ಆದುದರಿಂದ ಈ ಗ್ರಂಥವನ್ನು ಚನ್ನಾಗಿ ಪಠಿಸಿ, ಆ ಉಪದೇಶಗಳ ತತ್ವವನ್ನು ತಿಳಿದು, ಅದರಂತೆ ಆಚರಿಸುತ್ತಾ ಬರುವುದಲ್ಲದೆ, "ಇದುವರಿವಿಗೂ ನಾನು ತಿಳಿದೋ ತಿಳಿಯದೆಯೋ ಅನೇಕ ಪಾಪಕಾರ್ಯಗಳನ್ನು ಮಾಡಿರುತ್ತೇನೆ. ಇನ್ನುಮೇಲೆ ಸತ್ಯವಾಗಿಯೂ ಅಂತಹ ಪಾಪಕರ್ಮಗಳನ್ನು ಮಾಡುವುದಕ್ಕೆ ತೊಡಗುವುದಿಲ್ಲ" ಎಂದು ಪ್ರತಿನಿತ್ಯವೂ ಭಗವಂತನನ್ನು ಧ್ಯಾನಿಸುತ್ತ ಬಂದದ್ದೇ ಆದರೆ, ಅದು ಹತ್ತಿಗೆ ಬೆಂಕಿ ಬಿದ್ದಂತೆ, ಹಿಂದೆ ಮಾಡಿದ ಪಾಪಕರ್ಮಗಳ ಫಲಗಳನ್ನೆಲ್ಲಾ ಭಸ್ಮವನ್ನಾಗಿ ಮಾಡುತ್ತದೆ. ಅಂದರೆ, ಸದ್ಬುದ್ಧಿ, ಸದ್ಗುರು ಸೇವೆ, ಸತ್ಸಹವಾಸ, ಇಂದ್ರಿಯನಿಗ್ರಹ ಮತ್ತು

ಈಶ್ವರಭಕ್ತಿ ಇವುಗಳಿದ್ದದ್ದೇ ಆದರೆ, ನಾವು ಹಿಂದೆಮಾಡಿದ ಪಾಪಕರ್ಮ ರಾಶಿಗಳನ್ನೂ ಅವು ನಿರ್ಮೂಲಮಾಡುವುದಲ್ಲದೆ ಜ್ಞಾನೋದಯವಾಗಿ ಮುಕ್ತಿಭವನಕ್ಕೆ ನಮ್ಮನ್ನು ಸೇರಿಸುತ್ತವೆ. ಮತ್ತು,

ಶ್ರುತಿ ॥ ‘ ಅಕರ್ಮೇತಿ ಚ ಕರ್ತೃತ್ವಭೋಕ್ತೃತ್ವಾದ್ಯಹಂಕಾರಾದಯೋ ಬಂಧ ರೂಪಂ ಜನ್ಮಾದಿಕಾರಣಂ ◆ ನಿತ್ಯನೈಮಿತ್ತಿಕಯಾಗವ್ರತತಪೋದಾನಾದಿಷು ಫಲಾನುಸಂಧಾನಂ ಯತ್ತತ್ ಅಕರ್ಮ ”

ಎಂಬ ಶ್ರುತಿವಾಕ್ಯರೀತಿಯಾಗಿ, ಸ್ನಾನ ಶೌಚ,ಸಂಧ್ಯಾವಂದನ,ಶ್ರಾದ್ಧ ತರ್ಪಣಾದಿ ನಿತ್ಯನೈಮಿತ್ತಿಕ ಕರ್ಮಗಳೂ, ಯಾಗ, ವ್ರತ, ತಪೋದಾನಾದಿ ಕಾಮ್ಯಕರ್ಮಗಳೂ ಅಕರ್ಮಗಳೆಂದು ಕರೆಯಲ್ಪಡುತ್ತವೆ. ಹೇಗೆಂದರೆ, ವೇದೋಕ್ತ ಕರ್ಮಗಳಾದ ನಿತ್ಯನೈಮಿತ್ತಿಕ ಕಾಮ್ಯಕರ್ಮಗಳನ್ನು ಪ್ರತಿ ಪುರುಷನು ಫಲಾಪೇಕ್ಷೆಯಿಂದ ಮಾಡುವುದರಿಂದಲೇ, ಅದರ ಫಲವನ್ನು ಅನುಭವಿಸುವ ಸಲುವಾಗಿ, ಅವನು ಮರುಜನ್ಮವನ್ನು ಪಡೆಯಬೇಕಾಗು ವುದು. ಫಲಾಪೇಕ್ಷೆಯಿಂದ ನಡೆಸಿದ ಕರ್ಮಗಳು ಉತ್ತಮ ಕರ್ಮಗಳೇ ಆಗಲಿ, ನೀಚ ಕರ್ಮಗಳೇ ಆಗಲಿ, ಅವುಗಳ ಫಲವನ್ನು ಕರ್ತನು ಅನು ಭವಿಸಲೇ ಬೇಕು. ಅವುಗಳು ಅವನಿಗೆ ಪುನರ್ಜನ್ಮಗಳಿಗೆ ಬೀಜಭೂತ ವಾಗಿದ್ದು, ಜೀವನನ್ನು ಬಂಧನದಲ್ಲಿ ಬೀಳಿಸುವುವೇ ಹೊರತು, ಮೋಕ್ಷ ಸಾಮ್ರಾಜ್ಯಪದವಿಯನ್ನು ಅವನಿಗೆ ಕೊಡಲಾರದು. ಒಟ್ಟಿನಲ್ಲಿ ಫಲಾ ಪೇಕ್ಷೆಯಿಂದ ಮಾಡುವಂತಹ ನಿತ್ಯನೈಮಿತ್ತಿಕ ಕರ್ಮಗಳು ಮತ್ತು ವ್ರತ ಯಜ್ಞ ತಪೋದಾನಾದಿ ಕಾಮ್ಯಕರ್ಮಗಳು ವೇದೋಕ್ತವಾದ ಸತ್ಕರ್ಮಗ ಳಾಗಿದ್ದರೂ, ಅವುಗಳುಎಂದಿಗೂ ಕರ್ತನಿಗೆ ಮೋಕ್ಷವನ್ನು ದೊರಕಿಸಲಾರವು.

ಶ್ಲೋ॥ ಪ್ರವೃತ್ತಿಂ ಚ ನಿವೃತ್ತಿಂ ಚ ◆ ದ್ವಿವಿಧಂ ಕರ್ಮ ವೈದಿಕಂ ।

ಎಂಬ ಮನುಸ್ಮೃತಿ ವಾಕ್ಯಕ್ಕನುಗುಣವಾಗಿ, ವೇದೋಕ್ತವಾದ ಕರ್ಮಗಳಲ್ಲಿ ಪ್ರವೃತ್ತಿ ಕರ್ಮವೆಂದೂ, ನಿವೃತ್ತಿ ಕರ್ಮವೆಂದೂ ಎರಡು ಬಗೆ. ಸ್ವರ್ಗಪದವಿಯನ್ನು ಹೊಂದಿ ಅಲ್ಲಿ ದೇವಭೋಗಗಳನ್ನು ಅನುಭ ವಿಸುವುದು ಪ್ರವೃತ್ತಿಕರ್ಮವೆಂದೆನಿಸುವುದು. ಜನನ ಮರಣಗಳೆಂಬ

ಸಂಸಾರ ಸಮುದ್ರವನ್ನು ದಾಟಿ ಮುಕ್ತಿಯನ್ನು ಪಡೆಯಬಹುದಾ
ಕರ್ಮಕ್ಕೆ 'ನಿವೃತ್ತಿ' ಕರ್ಮವೆಂದು ಹೆಸರು.

ಶ್ಲೋ ॥ ಇಹ ವಾಽಮುತ್ರ ವಾ ಕಾಮ್ಯಂ ♦ ಪ್ರವೃತ್ತಿಃ ಕರ್ಮ ಕೀರ್ತ್ಯತೇ
ನಿಷ್ಕಾಮಂ ಜ್ಞಾನಪೂರ್ವಂ ತಂ ♦ ನಿವೃತ್ತಿ ರಿತಿ ಕಥ್ಯತೇ ॥

(ಮನಸ್ಮೃತಿ.

ಎಂಬಂತೆ ಧನಧಾನ್ಯ ದಾರಾಪುತ್ರಾದಿ ಅಷ್ಟೈಶ್ವರ್ಯಗಳೂ, ಅಷ್ಟ
ಭೋಗಗಳೂ ಭೂಲೋಕದ ಸುಖಗಳಾಗಿರುವುದರಿಂದ ಇವುಗಳು ಪ್ರವೃತ್ತಿ
ಕರ್ಮಗಳೆಂದು ಕರೆಯಲ್ಪಡುತ್ತವೆ. ಹಾಗೆಯೇ ಸ್ವರ್ಗ ಲೋಕದಲ್ಲಿರುವ
ದೇವಭೋಗಗಳಲ್ಲಿ ಇಚ್ಛೆಯನ್ನಿಟ್ಟು ಅದನ್ನು ಪಡೆಯುವುದಕ್ಕಾಗಿ
ಮಾಡುವಂಥ ತಪಸ್ಸು, ವ್ರತ, ಯಾಗ, ದಾನವೇ ಮೊದಲಾದ ಪುಣ್ಯ
ಕರ್ಮಗಳು ಕಾಮ್ಯಕರ್ಮಗಳಾಗಿರುವುದರಿಂದ, ಇವುಗಳೂ ಪ್ರವೃತ್ತಿ
ಕರ್ಮಗಳೆಂದೇ ಕರೆಯಲ್ಪಡುವುವು. ಹಾಗಲ್ಲದೆ ಇಹಪರಲೋಕಗಳ ಸುಖ
ವನ್ನೆಳಸದೆ ಸಂಸಾರದಲ್ಲಿ ಆಸಕ್ತಿಯನ್ನು ತೊರೆದು, ಸದಾ ಬ್ರಹ್ಮನಿಷ್ಠೆಯಲ್ಲಿ
ಮನಸ್ಸನ್ನು ನಿಲ್ಲಿಸುವುದಕ್ಕೆ ನಿವೃತ್ತಿಕರ್ಮ ಎಂದು ಹೆಸರು.

ಶ್ಲೋ ॥ ಪ್ರವೃತ್ತಿಂ ಕರ್ಮ ಸಂಸೇವ್ಯಂ ♦ ದೇವಾನಾ ಮೇತಿ ಸಾಮ್ಯತಾಂ।
ನಿವೃತ್ತಿಂ ಸೇವ್ಯಮಾನ ಸ್ತು ♦ ಭೂತಾ ನತ್ಯೇತಿ ಪಂಚ ವೈ ॥

ಎಂಬ ಮನುಸ್ಮೃತಿವಾಕ್ಯಾನುಸಾರವಾಗಿ ಪ್ರವೃತ್ತಿ ಕರ್ಮಗಳನ್ನು
ಅಂದರೆ ಫಲಾಪೇಕ್ಷೆಯಿಂದ ಮಾಡುವ ಕರ್ಮಗಳನ್ನು ಆಚರಿಸುವವರು
ಮರಣಾನಂತರ ದೇವಲೋಕವನ್ನು ಸೇರಿ, ಸ್ವರ್ಗಾದಿ ಸುಖಗಳನ್ನು
ಅನುಭವಿಸಿ, ತಮ್ಮ ಪುಣ್ಯಫಲಗಳು ತೀರಿದ ಒಡನೆಯೇ, "ಕ್ಷೀಣೇ ಪುಣ್ಯೇ
ಮರ್ತ್ಯಲೋಕಂ ವಿಶಂತಿ" ಎಂಬಂತೆ, ಮಿಕ್ಕ ಪುಣ್ಯಗಳಿಂದ ಭೂಲೋಕ
ದಲ್ಲಿ ರಾಜರುಗಳ ಅಥವಾ ಶ್ರೀಮಂತರ ಮನೆಯಲ್ಲಿ ಹುಟ್ಟಿ ಸುಖವನ್ನನು
ಭವಿಸುತ್ತಾರೆ. ಇದನ್ನು ಬಿಟ್ಟು, ಫಲಾಪೇಕ್ಷೆಯಿಲ್ಲದೆ ಅಂದರೆ ನಿಷ್ಕಾಮ್ಯ
ರಾಗಿಯೂ, ಬ್ರಹ್ಮನಿಷ್ಠಾತತ್ಪರರಾಗಿಯೂ ಇದ್ದು, ನಿಷ್ಕಳಂಕವಾದ ಮನ
ಸ್ಸಿನಿಂದ ಈಶ್ವರಧ್ಯಾನದಲ್ಲಿ ನಿರತರಾದುದೇ ಆದರೆ, ಜನನಮರಣ ರಹಿತ
ವಾದ ನಿತ್ಯಪದವಿಯನ್ನು ಪಡೆಯುತ್ತಾರೆ.

ಶ್ಲೋ ॥ ಯಥಾ ಪಂಕೇನ ಪಂಕಾಪಃ ♦ ಸುರಯಾ ವಾ ಸುರಾವೃತಃ ।
ಭೂತಹತ್ಯಾಂ ತದೈವೈನಂ ♦ ನ ಯಜ್ಞೈ ರ್ಮಾರ್ಷ್ಟು ಮರ್ಹತಿ ॥

ಎಂಬಂತೆ ಕೆಸರುಮಣ್ಣಿನಿಂದ ಮಲಿನವಾದ ಪಾತ್ರೆಯು ಬುರುದೆಯ ನೀರಿನಿಂದ ಯಾವ ರೀತಿಯಲ್ಲಿ ಶುದ್ಧಿಯಾಗಲಾರದೋ, ಮದ್ಯದ ಮಡಕೆಯು, ಮದ್ಯದಿಂದ ತೊಳೆದರೆ ಯಾವ ರೀತಿಯಲ್ಲಿ ಅದರ ವಾಸನೆಯನ್ನು ಕಳೆಯಲಾರದೋ, ಅದೇ ರೀತಿಯಲ್ಲಿ ಭೂತಹತ್ಯಾದಿಗಳಿಂದುಂಟಾದ ಪಾಪವು ಯಜ್ಞ ಯಾಗಾದಿಗಳಿಂದ ಕಳೆಯಲಾರದು. ಅಂದರೆ ಪ್ರವೃತ್ತಿ ಕರ್ಮಗಳು ನಿವೃತ್ತಿ ಕರ್ಮಗಳಾಗಲಾರವು ಎಂದರ್ಥ.

ಫಲಾಪೇಕ್ಷೆಯಿಂದ ಮಾಡುವ ಜಪತಪ ಯಜ್ಞಯಾಗ ವ್ರತಾದಿಗಳೆಲ್ಲವನ್ನೂ ಬಿಟ್ಟು, ಇಂದ್ರಿಯನಿಗ್ರಹವನ್ನು ಮಾಡಿ, ತತ್ವ ವಿಚಾರಕ್ಕೆ ಮನಗೊಟ್ಟು, ಈ ಗ್ರಂಥದಲ್ಲಿ ಉಪದೇಶಿತವಾದ ರಾಜಯೋಗ ರಹಸ್ಯವನ್ನು ಗ್ರಹಿಸಿ, ಸದಾ ಜಪಾನುಷ್ಠಾನಗಳನ್ನು ಮಾಡುತ್ತ ಬರಬೇಕು.

ಶ್ಲೋ ॥ ಏತ ದ್ಧಿ ಜನ್ಮ ಸಾಫಲ್ಯಂ ♦ ಬ್ರಾಹ್ಮಣಸ್ಯ ವಿಶೇಷತಃ ।
ಪ್ರಾಪ್ಯೈತತ್ ಪುರುಷೋ ಕೃತ್ಯ ♦ ಕೃತ್ಯೋ ಭವತಿ ನಾಽನ್ಯಥಾ ॥

ಎಂಬ ಮನಸ್ಮೃತಿ ವಾಕ್ಯರೀತಿಯಾಗಿ ಮೇಲೆ ಹೇಳಿದ ವೇದಾಂತ ವಿಚಾರ, ಇಂದ್ರಿಯ ನಿಗ್ರಹ, ಜ್ಞಾನಾನುಷ್ಠಾನ ಈ ಮೂರೂ ಇಲ್ಲದಿದ್ದಲ್ಲಿ ಬ್ರಾಹ್ಮಣಯೋನಿಯಲ್ಲಿ ಹುಟ್ಟಿದರೂ, ಆತನು ವಸ್ತುತಃ ಬ್ರಾಹ್ಮಣನೇ ಅಲ್ಲ.

ಶ್ಲೋ ॥ ಅನಂತಕರ್ಮ ಶೌಚಂ ಚ ♦ ಜಪೋ ಯಜ್ಞ ಸ್ತಥೈವ ಚ ।
ತೀರ್ಥಯಾತ್ರಾದಿ ಗಮನಂ ♦ ಯಾಪತ್ತತ್ವಂ ನ ವಿಂದತಿ ॥
(ಪೈಂಗಳೋಪನಿಷತ್ತು.)

ಎಂಬ ಶ್ರುತಿ ವಾಕ್ಯಾನುಸಾರವಾಗಿ ಶೌಚಸ್ನಾನ, ಜಪತಪ, ದಾನ ಯಜ್ಞ, ತೀರ್ಥಯಾತ್ರಾದಿಗಳು ಮೊದಲಾಗಿ ಎಲ್ಲವೂ ಕಾಮ್ಯಕರ್ಮಗಳು. ಅವುಗಳಿಂದ ಜನನಮರಣ ರೂಪವಾದ ಸಂಸಾರವು ಲಭಿಸುವುದೇ ಹೊರತು, ಮೋಕ್ಷವು ಬರಲಾರದು. ಜ್ಞಾನನಿಷ್ಠೆಯ ವಿಷಯವನ್ನು ತಿಳಿದುಕೊಳ್ಳದವರೇ ಕಾಮ್ಯಕರ್ಮವನ್ನು ಆಚರಿಸುವವರು.

ಶ್ರುತಿ ॥ ಪರಮಾತ್ಮ ನೋ ರೇಕತ್ವಜ್ಞಾನೇನ ತಯೋ ರ್ಭೇದ ಏವ ವಿಪಘ್ನಃ ಸಾ
ಸಂಧ್ಯಾ ♦ ॥ (ಪರಮಹಂಸೋಪನಿಷತ್ತು.

'ಎಂಬ ಶ್ರುತಿವಾಕ್ಯಾನುಸಾರವಾಗಿ ಈಶ್ವರನಾದ ಪರಮಾತ್ಮನಲ್ಲಿ ಜೀವಾತ್ಮನನ್ನು ಐಕ್ಯಮಾಡುವುದೇ ಅಂದರೆ, ಜೀವ ಬ್ರಹ್ಮೈಕ್ಯವಾದ ಬ್ರಹ್ಮನಿಷ್ಠೆಯಲ್ಲಿರುವುದೇ ಜ್ಞಾನಿಗಳಿಗೆ ಸಂಧ್ಯಾವಂದನೆಯು, ಎಂದು ಹೇಳಲ್ಪಡುತ್ತದೆ.

ಶ್ರುತಿ ॥ ಜ್ಞಾತ್ವಾ ಸ್ವಯಂ ಪ್ರತ್ಯಗಾತ್ಮಾನಂ ♦ ಬುದ್ಧಿಃ ತದ್ವೃತ್ತಿ ಸಾಕ್ಷಿಣಂ
ಸೋऽಹ ಮಿತ್ಯೇವ ತದ್ವೃತ್ತ್ಯಾ ♦ ಸ್ವಾನ್ಯಧ್ಯಾತ್ಮ ಮತಿಂ ತ್ಯಜೇತ್
(ಅಧ್ಯಾತ್ಮೋಪನಿಷತ್ತು.)

ಎಂಬಂತೆ ಆತ್ಮನೇ ಪರಬ್ರಹ್ಮವೆಂದು ಬೋಧಿಸುತ್ತಿರುವ 'ಸೋऽಹಂ' ಮಂತ್ರಧ್ಯಾನವೇ ಜ್ಞಾನಿಗಳಿಗೆ 'ಗಾಯತ್ರೀ' ಮಂತ್ರವೆಂದು ಹೇಳಲ್ಪಟ್ಟಿದೆ. ಇಂತಹ 'ಜ್ಞಾನ ಗಾಯಿತ್ರಿ'ಯೇ 'ಅಜಪಗಾಯತ್ರಿಯು' ಎಂದು ಕರೆಯಲ್ಪಡುತ್ತದೆ. ಅಂದರೆ ಶ್ವಾಸವು ದೇಹದೊಳಕ್ಕೆ ಪ್ರವೇಶಿಸುವಾಗಲೂ, ಪುನಃ ಮೂಗಿನ ಹೊಳ್ಳೆಗಳ ಮೂಲಕ ಹೊರಕ್ಕೆ ಬರುವಾಗಲೂ, ಆ ಶ್ವಾಸವು ತನ್ನಷ್ಟಕ್ಕೆ ತಾನೇ ಜೀವಾತ್ಮ ಪರಮಾತ್ಮರೈಕ್ಯವನ್ನು ಬೋಧಿಸುವ 'ಸೋऽಹಂ' ಮಂತ್ರವನ್ನು ಸದಾ ಜಪಿಸುತ್ತಲೇ ಇರುತ್ತದೆ. ಈ ಹಿಂದಿನ ಪ್ರಕರಣದಲ್ಲಿ ವಿವರಿಸಿರುವಂತೆ ಈ ಶ್ವಾಸಗಳು ದಿನವೊಂದಕ್ಕೆ ಇಪ್ಪತ್ತೊಂದು ಸಾವಿರದ ಆರನೂರು ಸಾರಿ ನಡೆಯುತ್ತಿರುತ್ತಾಗಿ, ಪ್ರತಿ ಶ್ವಾಸವೂ 'ಸೋऽಹಂ' ಮಂತ್ರವನ್ನು ಬಿಡದೆ ಜಪಿಸುತ್ತಿರುವುದರಿಂದ ಇದಕ್ಕೆ 'ಅಜಪಗಾಯತ್ರಿ' ಎಂಬ ಹೆಸರು ಬಂದಿದೆ. ಯಾವ ಜ್ಞಾನದ ಬಲಿಯುದಿಂದ. ಜನನ ಮರಣಗಳಿಂದ ಕೂಡಿದ ಈ ಸಂಸಾರಸಾಗರವನ್ನು ದಾಟಿ, ಮೋಕ್ಷವೆಂಬ ದಡವನ್ನು ಹತ್ತಿ, ಜೀವಿಗಳು ಮುಕ್ತಿಯನ್ನು ಪಡೆಯುತ್ತಿದ್ದಾರೋ, ಆ ಜ್ಞಾನವೆಂಬುದು ನಿಜವಾದ ತೀರ್ಥ ಅಂದರೆ ಪವಿತ್ರೋದಕವೇ ಹೊರತು, ಗಂಗಾದಿ ನದಿಗಳ ತೀರ್ಥವು ತೀರ್ಥವಲ್ಲ.

ಶ್ಲೋ ॥ ಅದ್ಭಿ ರ್ಗಾತ್ರಾಣಿ ಶುಧ್ಯಂತಿ ♦ ಮನ ಸ್ಸತ್ಯೇನ ಶುಧ್ಯತಿ ।
ವಿದ್ಯಾತಪೋಭ್ಯಾಂ ಭೂತಾತ್ಮಾ ♦ ಬುದ್ಧಿ ರ್ಜ್ಞಾನೇನ ಶುಧ್ಯತಿ ॥

ಎಂಬ ಮನುಸ್ಮೃತಿ ವಾಕ್ಯಾನುಸಾರವಾಗಿ ಶರೀರವು ನಿರ್ಮಲವಾದ ನೀರಿನಿಂದಲೂ, ಮನಸ್ಸು ಸತ್ಯದಿಂದಲೂ, ಜೀವಾತ್ಮನು ನಿಷ್ಕಾಮ್ಯವಾದ ಬ್ರಹ್ಮನಿಷ್ಠೆಯಿಂದಲೂ, ಬುದ್ಧಿಯು ತತ್ವಜ್ಞಾನದಿಂದಲೂ ಪರಿಶುದ್ಧಿಯಾಗುತ್ತವೆ. ಲೋಕದಲ್ಲಿರುವ ಜನರೆಲ್ಲರೂ ತಮ್ಮ ದೇಹಗಳನ್ನು ನಿರ್ಮಲೋದಕಗಳಲ್ಲಿ ತೊಳೆದದ್ದೇ ಆದರೆ, ಆ ದೇಹಗಳು ಮಾತ್ರ ಶುದ್ಧಿಹೊಂದುವುವೇ ಹೊರತು ಅವರ ಬುದ್ಧಿ, ಮನಸ್ಸು, ಅಂತಃಕರಣ ಮೊದಲಾದುವುಗಳು ಎಂದಿಗೂ ಶುದ್ಧಿಯನ್ನು ಹೊಂದವು.

ಶ್ರುತಿ ॥ ಯಸ್ಯ ವಾಙ್ಮನಸೀ ಶುದ್ಧೇ ♦ ಸಮ್ಯಗುಪ್ತೇ ಚ ಸರ್ವದಾ ।
ಸ ವೈ ಸರ್ವ ಮವಾಪ್ನೋತಿ ♦ ವೇದಾಂತೋಪಗತಂ ಫಲಂ ॥

(ನಾರದಪರಿವ್ರಾಜಕೋಪನಿಷತ್ತು.)

'ಯಾವಾತನಿಗೆ ವಾಕ್ಶುದ್ಧಿಯೂ, ಮನಶ್ಶುದ್ಧಿಯೂ ಇರುತ್ತವೆಯೋ, ಆತನು ಸ್ನಾನಾದಿಗಳಿಂದ ಶರೀರಶುದ್ಧಿಯನ್ನು ಎಂದಿಗೂ ಬಯಸುವುದಿಲ್ಲ. ಹೀಗೆ ಜ್ಞಾನಜಲದಲ್ಲಿ ಮನಃಪೂರ್ತಿಯಾಗಿ ಸ್ನಾನಮಾಡಿದ ಈ ಮಹಾನುಭಾವನು, ಖಂಡಿತವಾಗಿಯೂ ವೇದಾಂತ ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಫಲಗಳೆಲ್ಲವನ್ನೂ ಪಡೆಯುತ್ತಾನೆ, ಎಂಬುದೇ ಮೇಲಿನ ಶ್ರುತ್ಯರ್ಥ.

ಶ್ಲೋ ॥ ಸರ್ವೇಷಾ ಮಪಿ ದಾನಾನಾಂ ♦ ಬ್ರಹ್ಮ ದಾನಂ ವಿಶೇಷ್ಯತೇ ।
ವಾರ್ಯನ್ನ ಗೋ ಮಹೀ ವಾಸ ♦ ಸ್ತಿಲ ಕಾಂಚನ ಸರ್ಪಿಷಾಂ ॥

ಎಂಬ ಮನುಸ್ಮೃತಿ ವಾಕ್ಯದಂತೆ, ಸಮಸ್ತ ದಾನಗಳಲ್ಲಿಯೂ ಯೋಗ್ಯನಾದ ಶಿಷ್ಯನಿಗೆ ಸದ್ಗುರುವು ಕೊಡುವಂಥ ಜ್ಞಾನದಾನವೇ ಮಹಾಶ್ರೇಷ್ಠವಾದದ್ದು. ಉಳಿದ ಜಲ, ಅನ್ನ, ಗೋ, ಭೂಮಿ, ಬಟ್ಟೆ, ಎಳ್ಳು, ಭಂಗಾರ, ತುಪ್ಪ ಮೊದಲಾದ ದಾನಗಳು, ಎಷ್ಟು ಮಾತ್ರವೂ ಜ್ಞಾನದಾನಕ್ಕೆ ಸಮವೆನಿಸಲಾರವು. ಆದುದರಿಂದಲೇ ಮಹಾತ್ಮರಾದ ಜ್ಞಾನಿ

ಗಳು ತಮ್ಮ ಉಪದೇಶವಾಕ್ಯಗಳಿಂದ ಸದಾ ಜ್ಞಾನದಾನವನ್ನೇ ಮಾಡುತ್ತ ಬರುವರು.

ಶ್ರುತಿ ॥ ಯಜತೇ ಪುರುಷೋ ಯಜಮಾನಃ ಬುದ್ಧಿಂ ಪತ್ನೀಂ ಪರಿಗೃಹ್ಯ, ದೀಕ್ಷಾಂ ಸಂತೋಷಂ, ಧೀಂದ್ರಿಯಾಣಿ ಯಜ್ಞಪಾತ್ರಾಣಿ, ಕರ್ಮೇಂದ್ರಿಯಾಣಿ ಉಪಕರಣಾನಿ, ಸತ್ರೇ ಶಾರೀರಕೇ ತತ್ತತ್ ದೇವತೈವ ತದ್ವಿಜಃ ತುಸ್ತಾ ಏವ ಯಥಾದೇಶಂ ಯಜಮಾನ ಮನುಯುಜಂತೇ ♦ ”

(ಗರ್ಭೋಪನಿಷತ್ತು.

ಶ್ಲೋ ॥ ಓ ಮಿತ್ಯಾತ್ಮಾನ ಮವ್ಯಗ್ರೋ ♦ ಬ್ರಹ್ಮ ಣ್ಯಗ್ನೌ ಜುಹೋತಿ ತತ್ ।
ಜ್ಞಾನಯಜ್ಞ ಸ್ಸ ವಿಜ್ಞೇಯಃ ♦ ಸರ್ವಯಜ್ಞೋ ತ್ತಮೋತ್ತಮಃ ॥

ಶ್ಲೋ ॥ ಜ್ಞಾನದಂಡಾಃ ಜ್ಞಾನಶಿಖಾಃ ♦ ಜ್ಞಾನಯಜ್ಞೋಪವೀತಿನಃ ।
ಶಿಖಾ ಜ್ಞಾನಮಯೀ ಯಸ್ಯ ♦ ಉಪವೀತಂ ಚ ತನ್ಮಯಂ ॥
ಬ್ರಹ್ಮಣ್ಯಂ ಸಕಲಂ ತಸ್ಯ ♦ ಇತಿ ವೇದಾನುಶಾಸನಂ ॥

(ಶಾಟ್ಯಾಯನೀ ಉಪನಿಷತ್ತು, ಶ್ಲೋಕ 15–16–17.)

ಎಂಬಂತೆ ಜ್ಞಾನವೆಂಬ ಯಜ್ಞಕ್ಕೆ ಈ ದೇಹವೇ ಒಂದು ಯಜ್ಞಶಾಲೆ, ಜೀವಾತ್ಮನೇ ಯಜ್ಞಮಾಡುವವ, ಬುದ್ಧಿಯೇ ಯಜಮಾನನ ಪತ್ನಿ, ಸಂತೋಷವೇ ಯಜ್ಞದೀಕ್ಷೆ, ಜ್ಞಾನೇಂದ್ರಿಯಗಳೇ ಯಜ್ಞ ಪಾತ್ರೆಗಳು, ಕರ್ಮೇಂದ್ರಿಯಗಳೇ ಉಪಕರಣಗಳು. ಆಯಾ ಇಂದ್ರಿಯಾಭಿಮಾನಿ ದೇವತೆಗಳೇ ಬ್ರಾಹ್ಮಣ ಋತ್ವಿಕ್ಕುಗಳು, ಕೋಪವೇ ಯಜ್ಞಪಶು ಹೀಗಿರುತ್ತವೆ. ಆದುದರಿಂದ, ‘ಸೋऽಹಂ’, ಎಂಬ ಮಂತ್ರವನ್ನು ಜಪ ಮಾಡಿ, ಪರಬ್ರಹ್ಮನೆಂಬ ಯೋಗಾಗ್ನಿಯಲ್ಲಿ ಜೀವಸ್ವರೂಪಿಯಾದ ಅಂದರೆ, ಜೀವಾತ್ಮನಾದ ತನ್ನನ್ನು ಸೇರಿಸಿ ಹೋಮವನ್ನು ಮಾಡುತ್ತ ಬಂದದ್ದೇ ಆದರೆ, ತನ್ನ ಜೀವಸ್ವರೂಪವು ನಾಶವಾಗಿ ಪರಬ್ರಹ್ಮನೇ ತಾನಾಗು ತ್ತಾನೆ. ಇಂತಹ ಜ್ಞಾನಯಜ್ಞವೇ ಯಜ್ಞಗಳಲ್ಲೆಲ್ಲಾ ಶ್ರೇಷ್ಠವಾದುದು. ಜ್ಞಾನದಂಡ, ಜ್ಞಾನಶಿಖೆ, ಜ್ಞಾನಯಜ್ಞೋಪವೀತ, ಇವು ಗಳು ಯಾವನಿಗಿರುತ್ತವೆಯೋ ಆತನೇ ವೇದೋಕ್ತವಾದ ಬ್ರಾಹ್ಮಣನೇ ಹೊರತು, ಉಳಿದವರು ಬ್ರಾಹ್ಮಣರೆಂದೆನಿಸಲಾರನು.

ಶ್ರುತಿ ॥ ಜ್ಞಾನಾಮೃತತೃಪ್ತಯೋಗಿನೋ ನ ಕಿಂಚಿತ್ ಕರ್ತವ್ಯ ಮಸ್ತಿ ♦ ತದಸ್ತಿ ಚೇತ್ ನ ಸ ತತ್ವವಿತ್ ಭವತಿ ♦ ದೂರಸ್ಥೋಽಪಿ ನ ದೂರಸ್ಥಃ ♦ ಪಿಂಡವರ್ಜಿತಃ ಪಿಂಡಸ್ಥೋಽಪಿ ಪ್ರತ್ಯಗಾತ್ಮಾ ಸರ್ವವ್ಯಾಪೀ ಭವತಿ ॥

(ಪೈಂಗಳೋಪನಿಷತ್ತು, 9ನೇ ವಾಕ್ಯ.)

ಎಂಬಂತೆ ದೇವಾಮೃತವನ್ನು ಪಾನಮಾಡಿ ತೃಪ್ತಿಹೊಂದಿದವನಿಗೆ ಉಳಿದ ಯಾವ ಮಧುರಪದಾರ್ಥಗಳೂ ರುಚಿಸವು; ಆತನು ಪುನಃ ಯಾವ ಪದಾರ್ಥಗಳನ್ನೂ ಅಪೇಕ್ಷಿಸನು. ಜ್ಞಾನವೆಂಬ ಅಮೃತವನ್ನು ಪಾನ ಮಾಡಿ ತೃಪ್ತಿಹೊಂದಿದ ಜ್ಞಾನಿಯು, ಸರ್ವ ಸಂಕಲ್ಪವನ್ನೂ ಬಿಟ್ಟವನಾ ದುದರಿಂದಲೇ, ಆತನು ಬ್ರಹ್ಮರುದ್ರೇಂದ್ರಾದಿ ಪದವಿಗಳ ಸೌಖ್ಯಗಳನ್ನೂ, ಇಹಲೋಕ ಭೋಗಗಳನ್ನೂ ಮನಸ್ಸಿನಲ್ಲಿ ಕೋರನು. ಮತ್ತು ಅಂಥ ಇಹಲೋಕಪರಲೋಕಸುಖಗಳನ್ನು ಅನುಭವಿಸುವುದಕ್ಕಾಗಿ ಬೇಕಾದ ಯಜ್ಞಯಾಗ ತಪೋದಾನ ವ್ರತಗಳನ್ನು ಮಾಡನು. ಇಂತಹ ಜ್ಞಾನಿ ಗಳನ್ನು ಬಿಟ್ಟರೆ, ಉಳಿದವರೆಲ್ಲರೂ ಮೇಲೆಹೇಳಿದ ಯಜ್ಞಯಾಗಾದಿ ಸತ್ಕರ್ಮಗಳನ್ನು ಭೂಲೋಕ ದೇವಲೋಕ ಸುಖಗಳನ್ನು ಹೊಂದುವುದ ಕ್ಕಾಗಿ, ಭಕ್ತಿಶ್ರದ್ಧೆಗಳಿಂದ ಆಚರಿಸಬೇಕು.

ಶ್ರುತಿ ॥ ಸತ್ಕರ್ಮಪರಿಪಾಕತೋ ಬಹೂನಾಂ ಜನ್ಮನಾ ಮಂತೇ ನೃಣಾಂ ಮೋಕ್ಷೇಚ್ಛಾ ಜಾಯತೇ ♦ ತದಾ ಸದ್ಗುರು ಮಾಶ್ರಿತ್ಯ ಚಿರಕಾಲಸೇವಯಾ ಬಂಧಾತ್ ಮೋಕ್ಷಂ ಕಶ್ಚಿತ್ ಪ್ರಯಾತಿ ♦ ಅವಿಚಾರಕೃತೋ ಬಂಧೋ ವಿಚಾರಾತ್ ಮೋಕ್ಷೋ ಭವತಿ ♦ (ಪೈಂಗಳೋಪನಿಷತ್ತು, ವಾಕ್ಯ 1.)

ಎಂಬ ಶ್ರುತಿವಾಕ್ಯಕ್ಕನುಗುಣವಾಗಿ ಈ ಪ್ರಪಂಚದಲ್ಲಿರುವ ಮಾನ ವರು, ತಾವು ಪಡೆಯುತ್ತ ಬಂದ ಲೆಕ್ಕವಿಲ್ಲದಷ್ಟು ಜನ್ಮಗಳಲ್ಲಿ ಉತ್ತಮ ಫಲಾಪೇಕ್ಷೆಯಿಂದ ಯಜ್ಞಯಾಗ, ತಪಸ್ಸು, ದಾನ ಇವೇ ಮೊದಲಾದ ಸತ್ಕರ್ಮಗಳನ್ನು ನಡೆಸುತ್ತ ಬರಬೇಕು. ಹೀಗೆ ಮಾಡುತ್ತ ಬಂದರೆ, ತತ್ಫಲವಾಗಿ ದೊರಕಿದ ಜನ್ಮಗಳಲ್ಲಿ, ಈ ಸತ್ಕರ್ಮ ಪರಿಪಾಕವು ಲಭಿಸಿದ ಮೇಲೆ, ಅವರಿಗೆ ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯುಂಟಾಗುತ್ತದೆ. ಹೀಗೆ ಮುಕ್ತಿಸಾಧನೆಗಾಗಿ ಮನಸ್ಸು ತಿರುಗಿದಾಗ ಸದ್ಗುರುವನ್ನು

ಸೇವೆಮಾಡಿ ತಾನು ಭಕ್ತಿಶ್ರದ್ಧೆಗಳಿಂದ ಮಾಡಿದ ಸೇವೆಯ ಫಲವಾ
ಆ ಸದ್ಗುರುವಿನ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ. ಆದರಿಂದ ಜ್ಞಾನೋ
ದಯವುಂಟಾಗಿ ಸಮಸ್ತ ಕರ್ಮಬಂಧಗಳಿಂದಲೂ ಬಿಡುಗಡೆ ಹೊಂ
ಆತನು ನಿತ್ಯಾನಂದಪದವಿಯನ್ನು ಹೊಂದುವುದರಲ್ಲಿ ಅಭ್ಯಂತರವಿಲ್ಲ.

ಶ್ರುತಿ ॥ "ತಮೇದಂ ವೇದಾನುವಚನೇನ ವಿವಿದಿಷಂತಿ ಬ್ರಹ್ಮಚರ್ಯೇಣ ತಪಸಾ
ಶ್ರದ್ಧಯಾ ಯಜ್ಞೇನ ನಾಶಕೇನ"

ಎಂಬ ಬೃಹದಾರಣ್ಯಕೋಪನಿಷದ್ವಾಕ್ಯದಂತೆ ಪರಮಾತ್ಮನಲ್ಲಿ
ನಿಶ್ಚಲ ಭಕ್ತಿಯುಂಟಾಗುವುದರಿಂದ, ಮೋಕ್ಷಾಪೇಕ್ಷೆಯುಂಟಾದವರಾಗಿ
ತಾವು ಮಾಡುವಂತಹ ಜಪ, ತಪ, ಯಜ್ಞ, ದಾನಾದಿ ಸತ್ಕರ್ಮಗಳೆಲ್ಲ
ನ್ನೂ ಫಲಾಪೇಕ್ಷೆಯಿಲ್ಲದೆಯೇ ಈಶ್ವರಾರ್ಪಣವಾಗಿ ಮಾಡಿ, ಆದರಿಂ
ಭಕ್ತಿಯು ಅಧಿಕವಾಗಿ, ತಾವು ಆ ಈಶ್ವರನಲ್ಲಿಯೇ ಲೀನವಾಗುತ್ತಾರೆ
ಹೀಗೆ ಲೀನವಾದ ತರುವಾಯ,

ಶ್ರುತಿ ॥ ತಂಡುಲಸ್ಯ ಯಥಾ ಚರ್ಮ ♦ ಯಥಾ ತಾಮ್ರಸ್ಯ ಕಾಳಿಮಾ ।
ನಶ್ಯತಿ ಕ್ರಿಯಯಾ ವಿಪ್ರ! ♦ ಪುರುಷಸ್ಯ ತಥಾ ಮಲಂ ॥

(ಮಹೋಪನಿಷತ್ತು, ಶ್ಲೋಕ 185.

ಎಂಬ ಶ್ರುತಿವಾಕ್ಯದಂತೆ ಭತ್ತವು, ತನಗಿರುವ ಹೊಟ್ಟನ್ನು ಚನ್ನಾ
ಕುಟ್ಟಿದ್ದರಿಂದ ಹೇಗೆ ಕಳೆದುಕೊಂಡು ಅಕ್ಕಿಯಾಗುತ್ತದೆಯೋ, ತಾಮ್ರ
ವೆಂಬ ಲೋಹಕ್ಕೆ ಆದರಲ್ಲಿ ಮಿಶ್ರವಾಗಿರುವ ಲೋಹವನ್ನು ಚನ್ನಾಗಿ ಅಗ್ನಿ
ಯಲ್ಲಿ ಪುಟವಿಟ್ಟದ್ದರಿಂದ ಯಾವ ರೀತಿಯಲ್ಲಿ ಕಳೆದುಕೊಂಡು ಶುದ್ಧ
ವಾಗುತ್ತದೆಯೋ, ಅದೇ ರೀತಿಯಲ್ಲಿ ಮನುಷ್ಯನಾದವನು ತನ್ನಲ್ಲಿರುವ
ಪಾಪಾದಿ ಮಲಗಳನ್ನು ಸತ್ಕರ್ಮಗಳಿಂದ ಕಳೆದುಕೊಂಡು ಪರಿಶುದ್ಧನಾಗು
ತ್ತಾನೆ.

ಶ್ರುತಿ ॥ ಕುರ್ವನ್ನೇವೇಹ ಕರ್ಮಾಣಿ ♦ ಜಿಜೀವಿಷೇತ್ ಶತಗ್ಂ ಸಮಾಃ ।
ಏವಂ ತ್ವಯಿ ನಾನ್ಯಥೇತೋ ♦ ऽಸ್ತಿ ನ ಕರ್ಮ ಲಿಪ್ಯತೇ ನರೇ ॥

(ಈಶಾವಾಸ್ಯೋಪನಿಷತ್ತು, ವಾಕ್ಯ 2.

ಶ್ಲೋ ॥ ನಿಷ್ಕಾಮಕರ್ಮಾಣಿ ತು ಯಾವ ದಾಯುಃ ।
ತ್ವ ಮಿಚ್ಛಕರ್ತುಂ ಖಲು ಯನ್ಮು ಮುಕ್ಷುಃ ॥
ಏವಂ ತವ ಸ್ಯಾ ನ್ನ ಫಲೇನ ಲೇಪೋ ।
ನ ಚಿತ್ತಶುದ್ಧಾ ವಿತರಃ ಪ್ರಕಾರಃ ॥

ಪುರುಷನಿಗೆ ಸಂಪೂರ್ಣಾಯುವು ನೂರು ವರ್ಷಗಳು, ಎಂದು ಶಾಸ್ತ್ರನಿರ್ಣಯವು. ಈ ಪ್ರಪಂಚದಲ್ಲಿ ಈ ಜನ್ಮದಲ್ಲಿ, ಪೂರ್ವಕರ್ಮಾನು ಸಾರವಾಗಿ ಎಷ್ಟು ಸಂವತ್ಸರಗಳು ಜೀವಿಸಿರಬೇಕೆಂದು ಏರ್ಪಟ್ಟಿದೆಯೋ, ಅಷ್ಟು ಸಂವತ್ಸರಗಳು, ಶಾಸ್ತ್ರಪ್ರಕಾರವಾಗಿ ಈತನು ಈ ಕರ್ಮಗಳನ್ನು ಮಾಡತಕ್ಕುದೆಂದು ವಿಧಿಸಲ್ಪಟ್ಟಿರುವ ಅಗ್ನಿಹೋತ್ರಾದಿ ಕರ್ಮಗಳನ್ನು, ಚಿತ್ತಶುದ್ಧಿಗೋಸ್ಕರ ಫಲಾಪೇಕ್ಷೆಯಿಲ್ಲದೆ ಮಾಡಬೇಕು. ಶರೀರಾಭಿ ಮಾನವನ್ನುಳ್ಳ ನಿನ್ನ ವಿಷಯದಲ್ಲಿ ಶಾಸ್ತ್ರವಿಹಿತ ವರ್ಣಾಶ್ರಮ ಧರ್ಮ ಕರ್ಮಗಳನ್ನು, ಫಲಗಳನ್ನಪೇಕ್ಷಿಸದೆ ಮಾಡಬೇಕಾದುದಕ್ಕೆ ಇದನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ. ಫಲವನ್ನು ಕೋರದೆ ಕರ್ಮವನ್ನಾಚ ರಿಸುವ ಮನುಷ್ಯನಾದ ನಿನ್ನನ್ನು, ಮೇಲೆಹೇಳಿದ ಅಗ್ನಿಹೋತ್ರಾದಿ ಕರ್ಮಗಳು ಎಂದಿಗೂ ಬಂಧಿಸವು. ಅಂದರೆ ಮುಕ್ತಿಮಾರ್ಗಕ್ಕೆ ಅಡ ಚಣೆಯು ಎಂದಿಗೂ ಉಂಟಾಗದು. ಮೋಕ್ಷಾಪೇಕ್ಷಿಗಳಾದ ಮುಮುಕ್ಷು ಗಳಿಗೆ ಈಶ್ವರಭಕ್ತಿಯು ಅಧಿಕವಾಗಿ ಅವರು ಫಲಾಪೇಕ್ಷೆಯನ್ನು ಬಿಟ್ಟು, ಈಶ್ವರಾರ್ಪಣವಾಗಿ ಪ್ರವೃತ್ತಿಮಾರ್ಗವಾದ ಸತ್ಕರ್ಮಗಳನ್ನೇ ಮಾಡುತ್ತ ಬರುತ್ತಾರೆ. ಹೀಗೆ ಮಾಡುತ್ತ ಬಂದರೆ ಚಿತ್ತಶುದ್ಧಿಯುಂಟಾಗುತ್ತದೆ.

ಶ್ಲೋ ॥ "ಈಶ್ವರಾನುಗ್ರಹಾದೇವ ♦ ಪುಂಸಾ ಮದ್ವೈತವಾಸನಾ" ॥

ಚಿತ್ತಶುದ್ಧಿಯಿಂದ ಈಶ್ವರಾನುಗ್ರಹವುಂಟಾಗುತ್ತದೆ. ಈಶ್ವರಾನು ಗ್ರಹವು ಲಭಿಸಿತೆಂದರೆ, ದೇವಾಲಯಗಳನ್ನು ಕಟ್ಟಿಸುವರು. ಹಿರಿಯರಲ್ಲಿನ ಪೂಜ್ಯಬುದ್ಧಿಯಿಂದ ಅವರ ಪ್ರೀತಿಗೆ ಪಾತ್ರರಾಗಿ, ರುದ್ರಾಕ್ಷಿ ತುಲಸೀ ಮಾಲೆಗಳನ್ನು ಧರಿಸಿ, ವಿಭೂತಿ ಶ್ರೀಚೂರ್ಣಗಳನ್ನು ಧಾರಣೆಮಾಡಿ ಕೊಂಡು, ಆ ಸದ್ಗುರುವಿನಿಂದ ಉಪದೇಶವನ್ನು ಹೊಂದಿ, 'ಓಂ ನಮೋ ನಾರಾಯಣಾಯ' ಎಂಬ ನಾರಾಯಣ ಮಂತ್ರವನ್ನೋ ಇಲ್ಲವೇ, 'ಓಂ

ನಮ ಶ್ಶಿವಾಯ' ಎಂಬ ಶಿವ ಪಂಚಾಕ್ಷರಿಯನ್ನೋ ಸದಾ ಧ್ಯಾನವನ್ನು ಮಾಡುತ್ತ ಇರಬೇಕೆಂಬ ಮನಸ್ಸು ಹುಟ್ಟುತ್ತದೆ. ಇಂಥವರು ಜ್ಞಾನಾಚಾರ್ಯರನ್ನು ಆಶ್ರಯಿಸಿ, ಅವರ ಮೂಲಕ ಜ್ಞಾನಧನವನ್ನು ಸಂಪಾದಿಸಿ, ತನ್ಮೂಲಕ ಮೋಕ್ಷವನ್ನು ಪಡೆದು, ಆ ಸುಖವನ್ನನುಭವಿಸುವರು. ಈ ಗ್ರಂಥದಲ್ಲಿ ಅಲ್ಲಲ್ಲಿ ವಿಶೇಷವಾಗಿ ಪುನಃಪುನಃ ಒತ್ತಿ ಹೇಳಿರುವ ಉಪದೇಶಗಳು ಜ್ಞಾನಾಚಾರ್ಯರು ಹೇಳಿದುವೇ ಎಂದು ನೆನೆಸಿ, ಅವುಗಳಂತೆ ನಡೆಯುತ್ತ ಬಂದರೆ, ಮೋಕ್ಷವೆಂಬ ದೊಡ್ಡ ಸಾಮ್ರಾಜ್ಯಪದವಿಯನ್ನು ತಪ್ಪದೆ ಪಡೆಯಬಹುದು.

ಶ್ಲೋ ॥ ದೇಹೋಽಯಂ ಮಾನುಷೋ ಜಂತೋಃ ♦ ಬಹುಕರ್ಮೈಕಸಾಧನಂ ।
ಸದಾ ಸತ್ಕರ್ಮ ಸೇವೇತ ♦ ದುಷ್ಕರ್ಮ ಸತತಂ ತ್ಯಜೇತ್ ॥

ಎಂಬ ಶ್ಲೋಕರೀತಿಯಾಗಿ ಫಲಾಪೇಕ್ಷೆಯನ್ನು ತೊರೆದು ಮಾಡತಕ್ಕಂಥ ಸತ್ಕರ್ಮಗಳು ಈಶ್ವರನಿಗೆ ಪ್ರೀತಿಯನ್ನುಂಟುಮಾಡುತ್ತವೆ. ಈ ಈಶ್ವರಪ್ರೀತಿಯಿಂದ ಜ್ಞಾನವು ಲಭಿಸುತ್ತದೆ. ನಿಷ್ಕಾಮ್ಯಕರ್ಮಗಳೇ ಈಶ್ವರಾನುಗ್ರಹಕ್ಕೆ ಮಾರ್ಗಗಳು.

ಶ್ರುತಿ ॥ ಅಂಧಂ ತಮಃ ಪ್ರವಿಶಂತಿ ♦ ಯೇಽವಿದ್ಯಾ ಮುಪಾಸತೇ ।
ತತೋ ಭೂಯ ಇವ ತೇ ತಮೋ ♦ ಯ ಉ ವಿದ್ಯಾಯಾಗ್ಂ ರತಾಃ ॥

(ಈಶಾವಸ್ಯೋಪನಿಷತ್ತು, ವಾಕ್ಯ 9.)

ಶ್ಲೋ ॥ ಉಪಾಸತೇ ಕೇವಲಕರ್ಮಜಾಲಂ ♦ ಯೇ ಸಂಸರಂತೀಹ ಪುನಃ ಪುನ ಸ್ತೇ ।
ತೇಭ್ಯೋಽಧಿಕಂ ಯಾಂತಿ ಗತಾಗತಂ ತೇ ♦ ಉಪಾಸತೇ ಕೇವಲದೈವತಾನಿ ॥

ಎಂಬಂತೆ, ಯಾರು ಜ್ಞಾನಕ್ಕೆ ವಿರೋಧವಾಗಿರುವ ಕಾಮಕ್ರೋಧಾದಿಗಳನ್ನೂ, ಅಹಂಕಾರ ಮಮಕಾರಗಳನ್ನೂ ಅಭಿವೃದ್ಧಿಮಾಡುವಂಥ, ತನ್ಮೂಲಕ ಜನನಮರಣರೂಪವಾದ ಸಂಸಾರಪರಂಪರೆಗೆ ಹೇತುವಾದ ಅವಿದ್ಯಾಸ್ವರೂಪವಾಗಿರುವ ಕಾಮ್ಯಕರ್ಮಗಳನ್ನು ಅನುಷ್ಠಿಸುತ್ತಿರುವರೋ, ಅಂಥವರು ಶಾಸ್ತ್ರಗಳಿಂದಾಗಲಿ, ಸದ್ಗುರುವಿನಿಂದಾಗಲಿ ಹಿಂದಿರುಗಿಸುವುದಕ್ಕೆ ಕಷ್ಟಸಾಧ್ಯವಾದ ಈ ಸಂಸಾರದಲ್ಲಿ ಎಡೆಬಿಡದೆ, ಹುಟ್ಟುಸಾವು

ಗಳಿಂದ ಕೂಡಿದ ಅವಿವೇಕಸ್ಥಿತಿಯನ್ನು ಹೊಂದುವರು. ತಾವಾಗಿಯೇ ವಿಷಯಾಸಕ್ತರಾದವರು, ಯಾರಾದರೂ ಬೇರೆಬೇರೆ ದೇವತೆಗಳನ್ನು ಆರಾಧಿಸುತ್ತಿರುವುದರಿಂದ ಪ್ರತ್ಯೇಕ ಪ್ರತ್ಯೇಕ ಫಲಗಳು ಉಂಟಾಗುತ್ತವೆಯೆಂಬ ಶಾಸ್ತ್ರಗಳನ್ನು ಪಠಿಸುವುದರಿಂದಾಗಲಿ, ಕೇಳುವುದರಿಂದಾಗಲಿ ತಾವು ನಿಯಮದಿಂದ ಮಾಡಬೇಕಾದ ನಿತ್ಯಕರ್ಮಗಳನ್ನೂ, ಸ್ವರ್ಗಾದಿ ಫಲಗಳನ್ನು ಕೊಡುವ ನಿತ್ಯನೈಮಿತ್ತಿಕ ಕರ್ಮಗಳನ್ನೂ ಬಿಟ್ಟು, ಈ ಪ್ರಪಂಚಸುಖದ ಕೋರಿಕೆಗಳನ್ನೂ; ಸ್ವರ್ಗಕ್ಕಿಂತಲೂ ಹೀನವಾದ ದೇವತಾಸುಖಕ್ಕೋಸ್ಕರ ಆಯಾಯಾ ದೇವತೆಗಳನ್ನು ಆರಾಧಿಸುತ್ತಿದ್ದಾರೋ ಅಂಥವರು, ಈ ಮಂತ್ರದಲ್ಲಿ ಹೇಳಿದ ವಿದ್ಯೋಪಾಸಕರಾದ ಕರ್ಮಠರಿಗಿಂತ ಅಧಿಕವಾದ ಅವಿವೇಕಸ್ಥಿತಿಯನ್ನು ಹೊಂದುವರು. ಆದುದರಿಂದ ಜ್ಞಾನನಿಷ್ಠಾಭ್ಯಾಸಕ್ಕೆ ಅಸಮರ್ಥನಾದವನು, ನಿಷ್ಕಾಮ ಕರ್ಮಾನುಷ್ಠಾನಗಳನ್ನು ಮಾಡುವುದಕ್ಕೆ ಪ್ರಯತ್ನವನ್ನು ಮಾಡಬೇಕೇ ಹೊರತು, ಕಾಮ್ಯಕರ್ಮಾನುಷ್ಠಾನವನ್ನು ಅವಲಂಬಿಸುವುದಕ್ಕೆ ಎಂದಿಗೂ ನೆನೆಸಕೂಡದೆಂದು ಕಾಮ್ಯಕರ್ಮಗಳನ್ನು ಈ ಉಪನಿಷತ್ತಿನ ವಾಕ್ಯವು ನಿಂದಿಸುತ್ತದೆ.

ಶ್ಲೋ ॥ ಅಹಂ ಬ್ರಹ್ಮೇತಿ ನಿಶ್ಚಿತ್ಯ ♦ ಅಹಂಭಾವಂ ಪರಿತ್ಯಜ ।
ಸರ್ವ ಮೇವ ಲಯಂ ಯಾತಿ ♦ ಸುಪ್ತಹಸ್ತಸ್ಥ ಪುಷ್ಪವತ್ ॥

ಶ್ಲೋ ॥ ನ ದೇಹೋ ನ ಚ ಕರ್ಮಾಣಿ ♦ ಸರ್ವಂ ಬ್ರಹ್ಮೈವ ಕೇವಲಂ ।
ನ ಭೂತಂ ನ ಚ ಕಾರ್ಯಂ ಚ ♦ ನ ಚಾವಸ್ಥಾ ಚತುಷ್ಟಯಂ ॥

ಶ್ಲೋ ॥ ಲಕ್ಷಣತ್ರಯವಿಜ್ಞಾನಂ ♦ ಸರ್ವಂ ಬ್ರಹ್ಮೈವ ಕೇವಲಂ ।
ಸರ್ವವ್ಯಾಪಾರ ಮುತ್ಸೃಜ್ಯ ♦ ಹ್ಯಹಂ ಬ್ರಹ್ಮೇತಿ ಭಾವಯ ॥

ಶ್ಲೋ ॥ ಅಹಂ ಬ್ರಹ್ಮ ನ ಸಂದೇಹೋ ♦ ಹ್ಯಹಂ ಬ್ರಹ್ಮ ಚಿದಾತ್ಮಕಂ ।
ಸಚ್ಚಿದಾನಂದಮಾತ್ರೋಽಹಂ ♦ ಇತಿ ನಿಶ್ಚಿತ್ಯ ತತ್ ತ್ಯಜ ॥

(ತೇಜೋಬಿಂದೂಪನಿಷತ್ತು, 104 ರಿಂದ 107.)

ಎಂಬಂತೆ 'ನಾನೇ ಬ್ರಹ್ಮನು' ಎಂದು ನಿಶ್ಚೈಸಿ, ಅಹಂಭಾವವನ್ನು ಬಿಟ್ಟುಬಿಡು. ಹೀಗೆ ಮಾಡಿದರೆ ಮಲಗಿ ನಿದ್ರಿಸುವವನ ಕೈಯಲ್ಲಿರುವ ಹೂವಿನಂತೆ ಎಲ್ಲವೂ ಲಯವನ್ನು ಹೊಂದುತ್ತವೆ. ದೇಹವೂ

ಇಲ್ಲ, ಕರ್ಮಗಳೂ ಇಲ್ಲ, ಎಲ್ಲವೂ ಬ್ರಹ್ಮಮಯವೇ ಸರಿ. ಪಂಚಭೂತಗಳೂ ಇಲ್ಲ, ಅವುಗಳಿಂದ ಮಾಡಲ್ಪಡುವ ಕೆಲಸಗಳೂ ಇಲ್ಲ, ಮತ್ತು ಅವಸ್ಥಾಚತುಷ್ಟಯಗಳೂ ಇಲ್ಲವು, ಲಕ್ಷಣತ್ರಯಗಳಿಂದ ಕೂಡಿದ ವಿಜ್ಞಾನವೂ ಇಲ್ಲ, ಸಮಸ್ತವೂ ಕೇವಲ ಬ್ರಹ್ಮಮಯವಾದದ್ದು. ಆದುದರಿಂದ ಸಮಸ್ತ ವ್ಯಾಪಾರಗಳನ್ನೂ ಬಿಟ್ಟು 'ನಾನೇ ಬ್ರಹ್ಮನು' ಎಂದು ಮನಸ್ಸಿನಲ್ಲಿ ಭಾವಿಸು. 'ನಾನೇ ಬ್ರಹ್ಮನು.' ಇದರಲ್ಲಿ ಸಂದೇಹವಿಲ್ಲ. 'ಚಿತ್ಸ್ವರೂಪನಾದ ಪರಮಾತ್ಮನೂ ನಾನೇ, ಸಚ್ಚಿದಾನಂದಮಾತ್ರನಾದ ಈಶ್ವರನೂ ನಾನೇ' ಎಂದು ನಿಶ್ಚೈಸಿ ಎಲ್ಲವನ್ನೂ ಬಿಟ್ಟುಬಿಡು ಎಂಬುದೇ ಮೇಲಿನ ಶ್ರುತ್ಯರ್ಥ.

ಇದೇ ವಿಷಯವನ್ನು ಕುರಿತು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಹೀಗೆಂದು ಹೇಳಿರುತ್ತಾನೆ. "ಸರ್ವಧರ್ಮಾ ಪರಿತ್ಯಜ್ಯ ♦ ಮಾ ಮೇಕಂ ಶರಣಂ ವ್ರಜ" ಅಂದರೆ, 'ಎಲೈ ಅರ್ಜುನಾ! ಫಲಾಪೇಕ್ಷೆಯುಳ್ಳ ನಿತ್ಯನೈಮಿತ್ತಿಕಾದಿ ಕಾಮ್ಯಕರ್ಮಗಳನ್ನು ಬಿಟ್ಟು, ನನ್ನನ್ನೇ ಆಶ್ರಯಿಸು' ಅಂದರೆ, ನಿಷ್ಕಾಮ್ಯಕರ್ಮಗಳನ್ನು ಮಾಡಿದ್ದೇ ಆದರೆ, ನೀನು ನನ್ನಲ್ಲಿ ಐಕ್ಯನಾಗುತ್ತಿ, ಎಂದು ಭಾವವು.

ಶ್ರುತಿ " ಯತ್ಪರಂ ವಿಮಲತ್ವಂ ಶಿವಂ ತತ್ ಸದಾऽಹಮಿತಿ ಮೌನ ಮಾಶ್ರಯಃ "

ಎಂಬ ಶ್ರುತಿರೀತಿಯಾಗಿ ಸಮಸ್ತ ಕೋರಿಕೆಗಳನ್ನೂ ಶೂನ್ಯವಾಗಿ ಮಾಡಿ, ಅಂದರೆ 'ಸೋऽಹಂ' ಮಂತ್ರವನ್ನು ಕೂಡ ಮರೆತು, ಶಿಲಾವಿಗ್ರಹದಂತೆ ಮೌನನಿಷ್ಠೆಯಿಂದಿರಬೇಕು.

ಶ್ರುತಿ ॥ 'ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾ ನಿಬೋಧತ' ।

ಶ್ಲೋ ॥ ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ।
ದುರ್ಗಂ ಪಥಸ್ತ ತ್ಕವಯೋ ವದಂತಿ ॥

(ಕಠೋಪನಿಷತ್ತು, 3ನೇ ಅಧ್ಯಾಯ, 14ನೇ ವಾಕ್ಯ.)

ಓ! ಮನುಷ್ಯನೇ, ಏಳು, ಆತ್ಮನ ವಿಚಾರವನ್ನು ತಿಳಿದುಕೊಳ್ಳುವುದಕ್ಕೆ ಯತ್ನಿಸು. ಇದಕ್ಕಾಗಿ ಸದ್ಗುರುಗಳನ್ನು ಆಶ್ರಯಿಸು. 'ಆತ್ಮ

ಸ್ವರೂಪವನ್ನು ತಿಳಿದುಕೊಳ್ಳುವುದಕ್ಕಾಗಿರುವ ಮಾರ್ಗವು, ಕತ್ತಿಯ ಹರಿತವಾದ ಧಾರೆಯಂತೆ, ಪ್ರವೇಶಿಸಲು ಅಸಾಧ್ಯವಾದದ್ದು' ಎಂದು ಕವಿವರ್ಯರು ಹೇಳಿರುತ್ತಾರೆ. ಅಂದರೆ ಜ್ಞಾನಿಯಿಂದ ಸದ್ಬೋಧೆಯನ್ನು ಪಡೆದ ಹೊರತು, ಆತ್ಮವಿಚಾರವು ಸರಿಯಾಗಿ ತಿಳಿಯುವುದಿಲ್ಲ ಎಂದರ್ಥ.

ಓ ಸಹೋದರ ಸಹೋದರಿಯರೇ ! ಈ ಮೇಲೆ ಹೇಳಿದ ಉಪನಿಷದ್ವಾಕ್ಯದಂತೆ, ನೀವುಗಳು ಸದ್ಗುರುವನ್ನು ಸೇವಿಸಿ, ಆತನ ಕೃಪೆಗೆ ಪಾತ್ರರಾಗಿ, ಆತನಿಂದ ಆತಾನಾತ್ಮ ವಿವೇಕಜ್ಞಾನವನ್ನು ತಿಳಿದು, ಜಾತಿಭೇದಗಳು ಶರೀರಕ್ಕೇ ಹೊರತು ಆತ್ಮನಿಗಿಲ್ಲವು, ಎಂದು ಚನ್ನಾಗಿ ನಿಶ್ಚೈಸಿ, ಪರಮಾತ್ಮಧ್ಯಾನ ತತ್ಪರರಾಗಿ ನಿಷ್ಕಾಮ್ಯ ಕರ್ಮಗಳನ್ನು ಮಾಡುತ್ತ ಬಂದರೆ, ನಿಮಗೆ ಮೋಕ್ಷವು ಬಹಳ ಸುಲಭವಾಗಿ ದೊರಕುವುದು. ಈ ಮಾತು ಸತ್ಯವೆಂದು ದೃಢವಾಗಿ ನಂಬಿ.

ಈ ಮುಂದಿನ ಅಧ್ಯಾಯದಲ್ಲಿ ಅವಧೂತರ ಲಕ್ಷಣಗಳನ್ನು ವಿಶದಪಡಿಸಿದೆ.

# ಅವಧೂತ ಲಕ್ಷಣಗಳು.

ಶ್ರುತಿ ॥ ಸಾಙ್ಕೃತಿ ರ್ಭಗವಂತ ಮವಧೂತಂ ದತ್ತಾzzತ್ರೇಯಂ ಪರಿಸಮೇತ್ಯ ಪಪ್ರಚ್ಛ ♦, "ಭಗವನ್ ! ಕೋzವಧೂತಃ ? ತಸ್ಯ ಕಾ ಸ್ಥಿತಿಃ ? ಕಿಂ ಲಕ್ಷ್ಮ ? ಕಿಂ ಸಂಸರಣಂ ?" ಇತಿ ♦ ತಂ ಹೋವಾಚ ಭಗವೋ ದತ್ತಾz-zತ್ರೇಯಃ ಪರಮಕಾರುಣಿಕಃ ♦

ಶ್ಲೋ॥ **ಅ**ಕ್ಷರತ್ವಾತ್ **ವ**ರೇಣ್ಯತ್ವಾತ್ ♦ **ಧೂ**ತಸಂಸಾರಬಂಧನಾತ್ ।
**ತ**ತ್ವಮಸ್ಯಾದಿ ಲಕ್ಷ್ಯತ್ವಾತ್ ♦ **ಅವಧೂತ** ಇತೀರ್ಯತೇ ॥

(ಅವಧೂತೋಪನಿಷತ್ತು, ವಾಕ್ಯ 1.)

ಒಂದಾನೊಂದುದಿನ 'ಸಾಂಕೃತಿ' ಯೆಂಬ ಒಬ್ಬ ಮುಮುಕ್ಷುವು, ಭಗವಂತನಾದ ಅವಧೂತಾಶ್ರಮವನ್ನನುಕರಿಸಿದ 'ದತ್ತಾತ್ರೇಯ' ರ ಸಮೀಪಕ್ಕೆ ಹೋಗಿ ಹೀಗೆಂದು ಕೇಳಿದನು. "ಓ ಷಡ್ಗುಣೈಶ್ವರ್ಯ ಸಂಪನ್ನನಾದ ಸ್ವಾಮಿಯೇ! ಅವಧೂತನೆಂಬುವನು ಯಾರು? ಆತನ ಸ್ಥಿತಿಯೆಂಥದು? ಆತನ ಲಕ್ಷಣಗಳಾವುವು? ಸಂಸಾರವೆಂದರೇನು?" ಎಂದು ಕೇಳಲು, ಅದಕ್ಕೆ ಪರಮಕಾರುಣಿಕನಾದ 'ದತ್ತಾತ್ರೇಯ' ಭಗವಂತನು ಹೀಗೆಂದು ಉತ್ತರಕೊಟ್ಟನು. "'ಅವಧೂತ' ಎಂಬ ಪದ ದಲ್ಲಿ **ಅ-ವ-ಧೂ-ತ** ಎಂಬ ನಾಲ್ಕಕ್ಷರಗಳಿವೆ. ಅವುಗಳಲ್ಲಿ 'ಅ' ಎಂದರೆ ನಾಶರಹಿತನೆಂದರ್ಥ. 'ವ' ಎಂದರೆ ಪುರುಷೋತ್ತಮನೆಂದು ಭಾವ. ಅಂದರೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸವೆಂಬ ನಾಲ್ಕು ಆಶ್ರಮಗಳಲ್ಲಿರುವವರಲ್ಲಿ 'ಸನ್ಯಾಸಿ' ಯೇ ಶ್ರೇಷ್ಠನು. 'ದೇಹವೇ ನಾನು' ಎಂಬ ಅಭಿಮಾನವೇ ಸಂಸಾರ. ಅಂತಹ ಅಭಿಮಾನವಿಲ್ಲದಿರು ವುದೇ ಸಂಸಾರವಿಚ್ಛಿತ್ತಿ, ಮತ್ತು ಕೋರಿಕೆಗಳಿಲ್ಲದೆ ನಿಷ್ಕಳಂಕವಾದ ಮನಸ್ಸಿನಿಂದಿರುವುದೂ ಈ ಸಂಸಾರವಿಚ್ಛಿತ್ತಿಗೆ ಕಾರಣ. ಇಂತಹ ಸಂಸಾರಬಂಧವಿಮೋಚನೆಯನ್ನು ಹೊಂದಿದ ಸನ್ಯಾಸಿಗಿಂತಲೂ ಉತ್ತ ಮನು ಎಂಬುದೇ 'ವ' ಎಂಬ ಅಕ್ಷರದ ಅಭಿಪ್ರಾಯ. 'ಧೂ' ಎಂದರೆ, ಅಂತಹ ಅಭಿಮಾನವೆಂಬ ಸಂಸಾರ ವಿಷಯಗಳೆಲ್ಲವನ್ನೂ ಬಿಟ್ಟುಬಿಡುವ ವನು ಎಂದು ತಾತ್ಪರ್ಯ, ಕಡೆಗೆ 'ತ' ಎಂದರೆ 'ಆ ಪರಮಾತ್ಮನೇ ನಾನು, ನಾನೇ ಆ ಪರಮಾತ್ಮ' ಎಂಬ ಜೀವಾತ್ಮ ಪರಮಾತ್ಮರ ಐಕ್ಯಭಾವವನ್ನು ಹೊಂದಿರುವವನು. ಒಟ್ಟಿನಲ್ಲಿ ನಾಶರಹಿತನೂ, ಪುರುಷಶ್ರೇಷ್ಠನೂ, ಸಂಸಾರಬಂಧಗಳನ್ನು ಕಳೆದುಬಿಟ್ಟಿರುವವನೂ ಮತ್ತು ಜೀವ ಬ್ರಹ್ಮೈಕ್ಯ ಜ್ಞಾನವನ್ನು ಹೊಂದಿರುವವನೂ ಯಾವನೋ, ಅವನೇ **ಅವಧೂತನು** ಎಂದು ತಿಳಿ. ಮತ್ತು,

ಶ್ರುತಿ ॥ ಯೋ ವಿಲಂಘ್ಯಾಽಽಶ್ರಮಾನ್ ವರ್ಣಾನ್ ♦ ಆತ್ಮನ್ಯೇವ ಸ್ಥಿತ ಸ್ಸದಾ
ಅತಿವರ್ಣಾಽಽಶ್ರಮೀ ಯೋಗೀ ♦ 'ಅವಧೂತ' ಸ್ಸ ಕಥ್ಯತೇ ॥

(ಅವಧೂತೋಪನಿಷತ್ತು ಶ್ಲೋ॥ 2.)

ಯಾವಾತನು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕು ಆಶ್ರಮಗಳನ್ನೂ, ಬ್ರಹ್ಮ ಕ್ಷತ್ರಿಯ, ವೈಶ್ಯ, ಶೂದ್ರಗಳೆಂಬ ನಾಲ್ಕು ವರ್ಣಗಳನ್ನೂ ಅಂದರೆ, ಎಲ್ಲಾ ವರ್ಣಾಶ್ರಮ ಧರ್ಮಗಳನ್ನೂ ದಾಟಿದವನಾಗಿ, ಸದಾ ಈ ವರ್ಣಾಶ್ರಮಗಳ ಬಂಧವೇ ಇಲ್ಲದ ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರೀಕರಿಸಿ, ಸದಾ ಯೋಗಾಭ್ಯಾಸ ರತನಾಗಿರುತ್ತಾನೆಯೋ, ಅವನೇ 'ಅವಧೂತ' ನೆಂದು ಕರೆಯಲ್ಪಡುವವನು. ಈತನಿಗೆ "ಅತಿವರ್ಣಾಶ್ರಮಿ" ಅಂದರೆ, 'ಜಾತಿಭೇದಗಳೆಂಬ ಕಟ್ಟುಗಳನ್ನು ಹರಿದವನು' ಎಂಬ ಹೆಸರೂ ಉಂಟು. 'ಅತಿವರ್ಣಾಶ್ರಮಿ' ಎಂಥವನೆಂದರೆ,

ಶ್ರುತಿ ॥ " ಯ ಶ್ಶರೀರೇಂದ್ರಿಯಾದಿಭ್ಯೋ ♦ ವಿಹೀನಂ ಸರ್ವಸಾಕ್ಷಿಣಂ ।  
ಪಾರಮಾರ್ಥಿಕವಿಜ್ಞಾನಂ ♦ ಸುಖಾತ್ಮಾನಂ ಸ್ವಯಂಪ್ರಭಂ ॥  
ಪರತತ್ವಂ ವಿಜಾನಾತಿ ♦ ಸೋ ಽ ತಿವರ್ಣಾಶ್ರಮೀ ಭವೇತ್ । "

(ನಾರದ ಪರಿವ್ರಾಜಕೋಪನಿಷತ್ತು, ಶ್ಲೋ॥ 8-9.)

ಎಂಬ ಶ್ರುತಿವಾಕ್ಯಾನುಸಾರವಾಗಿ, " ಯಾವಾತನು, ಶರೀರ ಮತ್ತು ಇಂದ್ರಿಯಗಳು ಇವುಗಳಿಲ್ಲದಿರುವ, ಸರ್ವಸಾಕ್ಷಿಯಾದ, ಪಾರಮಾರ್ಥಿಕ ಜ್ಞಾನವನ್ನುಳ್ಳ, ಮಾಯಾರಹಿತನಾಗಿ ಸದಾ ಆನಂದವೆಂಬ ಸುಖವನ್ನನುಭವಿಸುತ್ತಿರುವ, ಜ್ಞಾನಸ್ವರೂಪಿಯಾದ ಮತ್ತು ಸ್ವಯಂ ಪ್ರಕಾಶಿಸುತ್ತಿರುವ ಪರಮಾತ್ಮನ ನಿಶ್ಚಯಜ್ಞಾನವನ್ನು ಹೊಂದಿರುತ್ತಾನೆಯೋ, ಆತನೇ 'ಅತಿವರ್ಣಾಶ್ರಮಿ' ಎಂದು ಕರೆಯಲ್ಪಡುವವನು." ಇದೂ ಅಲ್ಲದೆ, ಆ 'ಅತಿವರ್ಣಾಶ್ರಮಿ' ಯ ಲಕ್ಷಣವೆಂತಹುದೆಂದರೆ,

ಶ್ರುತಿ ॥ ವರ್ಣಾಶ್ರಮಾದಯೋ ದೇಹೇ ♦ ಮಾಯಯಾ ಪರಿಕಲ್ಪಿತಾಃ ।  
ನಾಽತ್ಮನೋ ಬೋಧರೂಪಸ್ಯ ♦ ಮಮ ತೇ ಸಂತಿ ಸರ್ವದಾ ।  
ಇತಿ ಯೋ ವೇದ ವೇದಾಂತ್ಯೈಃ ♦ ಸೋ 'ಽತಿವರ್ಣಾಶ್ರಮೀ' ಭವೇತ್ ॥

ಶ್ಲೋ ॥ ಯೋಽತೀತ್ಯ ಸ್ವಾಶ್ರಮಾ ವರ್ಣಾ ♦ ಆತ್ಮನ್ಯೇವ ಸ್ಥಿತಃ ಪುಮಾ ।  
ಸೋ'ಽತಿವರ್ಣಾಶ್ರಮೀ' ಪ್ರೋಕ್ತಃ ♦ ಸರ್ವವೇದಾರ್ಥವೇದಿಭಿಃ ॥

(ನಾರದ ಪರಿವ್ರಾಜಕೋಪನಿಷತ್ತು, ಶ್ಲೋ॥ 11-12-13.)

ಎಂಬ ಶ್ರುತಿವಾಕ್ಯದಂತೆ, 'ಈ ವರ್ಣಾಶ್ರಮಾದಿಗಳು ದೇಹಕ್ಕೆ ಮಾಯೆಯಿಂದ ಕಲ್ಪಿತವಾದವುಗಳು. ಇವುಗಳು ಪರಮಾತ್ಮನ ನಿಶ್ಚಯ ಜ್ಞಾನಸ್ವರೂಪವನ್ನುಳ್ಳ ನನಗೆ ಎಂದೆಂದಿಗೂ ಇಲ್ಲವು' ಎಂಬ ವೇದಾಂತ ವಾಕ್ಯಗಳ ಸಾರವನ್ನು ಯಾವಾತನು ತಿಳಿದಿರುತ್ತಾನೆಯೋ, ಆತನೇ 'ಅತಿ ವರ್ಣಾಶ್ರಮಿ' ಯು. ಮತ್ತು ಯಾವ ಪುರುಷನು ಆಶ್ರಮಧರ್ಮಗಳನ್ನೂ ಜಾತಿಭೇದಗಳ ಕಟ್ಟುಗಳನ್ನೂ ಮೀರಿದವನಾಗಿ, ಯಾವಾಗಲೂ ಜ್ಞಾನಸ್ವರೂಪಿಯಾದ ಪರಮಾತ್ಮನಲ್ಲಿ ತನ್ನ ಮನಸ್ಸನ್ನು ಸ್ಥಿರೀಕರಿಸುತ್ತಾನೆಯೋ, ಅವನನ್ನೇ ವೇದಾರ್ಥವನ್ನು ಬಲ್ಲವರು 'ಅತಿವರ್ಣಾಶ್ರಮಿ' ಎಂದು ಕರೆಯುತ್ತಾರೆಂಬುದೇ ಮೇಲಿನ ಶ್ರುತಿ ವಾಕ್ಯಗಳ ತಾತ್ಪರ್ಯ.

ಮೇಲೆ ಹೇಳಿದುವೆಲ್ಲವೂ 'ಅವಧೂತ' ನ ಲಕ್ಷಣಗಳು. ಈ ಲಕ್ಷಣಗಳುಳ್ಳವನೇ 'ಅವಧೂತ' ನೆಂದು ಕರೆಯಲ್ಪಡುವವನು.

ಶ್ಲೋ॥ "ಆನಂದ ಮಂತರ್ನಿಜಮಾಶ್ರಯಂತಂ ♦ ಆಶಾಪಿಶಾಚೀ ಮವಮಾನಯಂತಂ ।
ಆಲೋಕಯಂತಂ ಜಗ ದಿಂದ್ರಜಾಲಂ ♦ ಆಪತ್ಕಥಂ ಮಾಂ ಪ್ರವಿಶೇ ದಸಂಗಂ॥

ಶ್ಲೋ॥ ವರ್ಣಾಶ್ರಮಾಚಾರಯುತಾ ವಿಮೂಢಾಃ♦ಕರ್ಮಾನುಸಾರೇಣ ಫಲಂ ಲಭಂತೇ।
ವರ್ಣಾದಿಧರ್ಮಂ ಹಿ ಪರಿತ್ಯಜಂತಃ♦ಸ್ವಾನಂದತೃಪ್ತಾಃ ಪುರುಷಾ ಭವಂತಿ ॥

ಶ್ಲೋ॥ವರ್ಣಾಶ್ರಮಂಸಾವಯವಂಸ್ವರೂಪಂ♦ಆದ್ಯಂತಯುಕ್ತಂಹ್ಯತಿಕೃಚ್ಛ್ರಮಾತ್ರಂ।
ಪುತ್ರಾದಿದೇಹೇ ಷ್ವಭಿಮಾನಶೂನ್ಯಂ♦ಭೂತ್ವಾವಸೇತ್ಸೌಖ್ಯತಮೇಹ್ಯನಂತಃ॥"

(ಇತಿ ಮೈತ್ರೇಯೋಪನಿಷತ್ತು, ಶ್ಲೋ॥ 12-13-14.)

ಎಂಬಂತೆ, ಚಿನ್ಮುದ್ರೆಯನ್ನು ಕೈಯಲ್ಲಿ ಹಿಡಿದು, ಶರೀರವನ್ನು ಸಮವಾಗಿ ನಿಲ್ಲಿಸಿ ಕುಳಿತುಕೊಂಡು, ಕಣ್ಣುಗಳನ್ನು ಮುಚ್ಚಿ, ಅಂತರ್ಮುಖಿಯಾಗಿ ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಲೀನಮಾಡಿ, ಆಶಾಪಾಶವೆಂಬ ಪಿಶಾಚವನ್ನು ಅವಮಾನಪಡಿಸುತ್ತ, ಈ ಜಗತ್ತನ್ನು ಐಂದ್ರಜಾಲಿಕವೆಂದು ಅಂದರೆ, ಮಾಯಾಕಲ್ಪಿತವಾದದ್ದೇ ಹೊರತು, ನಿತ್ಯವಾದುದಲ್ಲವೆಂದು ನೆನೆಸುತ್ತಾ, ಸಕಲ ವಿಧವಾದ ಸುಖ ದುಃಖಗಳೂ ಈ ನಶ್ವರವಾದ ದೇಹಕ್ಕೇ ಹೊರತು, ಶರೀರವಿಲ್ಲದ ನನಗಲ್ಲ.

ಎಂದು ತಿಳಿಯುವವನೇ 'ಅವಧೂತ'ನು. ಮತ್ತು ಆತನು ಬ್ರಹ್ಮಾನಂದ ವೆಂಬ ಸಮುದ್ರದಲ್ಲಿ ಮುಳುಗಿ ನಿರ್ಭಯನಾಗಿರುವ 'ನಾನೇ ಪರಬ್ರಹ್ಮನು' ಎಂಬ ನಿಶ್ಚಯಜ್ಞಾನವುಳ್ಳವನು. ಹಾಗಿಲ್ಲದೆ, ಕುಲಗೋತ್ರಭೇದಗಳ ನ್ನೆಣಿಸುವವರೇ ವಿಚಾರಮೂಢರು ಮತ್ತು ಅಜ್ಞಾನಿಗಳು. ಇವರು ತಾವು ಮಾಡಿದ ಸತ್ಕರ್ಮ ದುಷ್ಕರ್ಮಗಳ ಶುಭಾಶುಭಫಲಗಳನ್ನು ಅನುಭವಿಸು ವುದಕ್ಕಾಗಿ ಅನೇಕ ಜನ್ಮಗಳನ್ನೆತ್ತುತ್ತಿದ್ದಾರೆ. ಇದು ಅವರ ಕಾಮ್ಯ ಕರ್ಮದ ಫಲ. ಈ ವಿಧವಾದ ಜಾತಿಭೇದಗಳೆಂಬ ಭಾವನೆಯೇ ಇಲ್ಲದೆ ಸರ್ವಸಮದೃಷ್ಟಿಯುಳ್ಳವರಾಗಿ, ಸರ್ವಸಂಗಪರಿತ್ಯಾಗಮಾಡಿ, ತಮ್ಮ ಮನ ಸ್ಸನ್ನು ಪರಮಾತ್ಮನಲ್ಲಿ ಲೀನಮಾಡಿ ನೋಡಿದವರಿಗೆ ಹುಚ್ಚರಂತೆ ಕಾಣು ವವರೇ 'ಅವಧೂತರು.' ಜಡಭರತನು ಈ ವರ್ಗಕ್ಕೆ ಸೇರಿದವನು. ಬ್ರಹ್ಮಜ್ಞಾನದ ಸ್ವರೂಪವನ್ನು ತಿಳಿಯದೆ ಕೌಪೀನವನ್ನಿಟ್ಟುಕೊಂಡು ತಿರುಗುವವನು ಅವಧೂತನೆಂದೆನಿಸಲಾರನು. ಈ ಅವಧೂತಾಶ್ರಮವನ್ನು ಆಶ್ರಯಿಸಿದವನು, ಮೇಲೆ ಹೇಳಿದ ಕುಲಗೋತ್ರಗಳ ಕಟ್ಟನ್ನು ಹರಿದು, ತಾರತಮ್ಯಜ್ಞಾನವೆಂಬುದೇ ಇಲ್ಲದೆ, ಸರ್ವವೂ ಬ್ರಹ್ಮಮಯವೇ ಎಂದು ತಿಳಿದು, ಭಾರ್ಯಾಪುತ್ರಾದಿಗಳಲ್ಲಿ ಅಭಿಮಾನವನ್ನು ತೊರೆದು, ಸರ್ವದಾ ಜ್ಯೋತಿಸ್ವರೂಪನಾದ 'ಆತ್ಮಾನ ಮಾತ್ಮನ್ಯವಲೋಕಯಂತಂ' ಎಂಬಂತೆ ಪರಮಾತ್ಮನನ್ನು ತನ್ನಲ್ಲಿಯೇ ಅಂತರ್ದೃಷ್ಟಿಯಿಂದ ನೋಡುತ್ತ ನಿತ್ಯ ಸುಖವನ್ನು ಅನುಭವಿಸುತ್ತಿರುವನು.

ಶ್ಲೋ ॥ ನಾಽಹಂ ದೇಹೋ ಜನ್ಮಮೃತ್ಯೂ ಕುತೋ ಮೇ ।
ನಾಽಹಂ ಪ್ರಾಣಃ ಕ್ಷುತ್ಪಿಪಾಸೇ ಕುತೋ ಮೇ ।
ನಾಽಹಂ ಚಿತ್ತಂ ಶೋಕಮೋಹೌ ಕುತೋ ಮೇ ।
ನಾಽಹಂ ಕರ್ತಾ ಬಂಧಮೋಕ್ಷೌ ಕುತೋ ಮೇ ॥

(ಶಂಕರಾಚಾರ್ಯ.)

ಎಂಬಂತೆ, "ನಾನು ದೇಹವಲ್ಲ, ನನಗೆ ಹುಟ್ಟುಸಾವುಗಳೆಲ್ಲಿಯವು, (ಅಂದರೆ ಹುಟ್ಟುಸಾವುಗಳು ಈ ದೇಹಕ್ಕೇ ಹೊರತು ಆತ್ಮನಿಗಿಲ್ಲವು ಎಂದು ಭಾವವು.) ನಾನು ಪ್ರಾಣವಲ್ಲ, ಆದುದರಿಂದ ನನಗೆ ಹಸಿವು ಬಾಯಾರಿಕೆ

ಗಳಿಲ್ಲಿಯವು, ಚಿತ್ತವು ನಾನಲ್ಲ, ಹೀಗಿರಲು ನನಗೆ ಶೋಕಮೋಹಗಳೆ
ಯದು. ನಾನು ಕರ್ತನಲ್ಲ, ಬಂಧಮೋಕ್ಷಗಳೆಂಬುವು ನನಗೆ ಹೇ
ಉಂಟಾಗುವುವು?'' ಎಂಬ ಭಾವವನ್ನಿಟ್ಟುಕೊಂಡು, ಉನ್ಮತ್ತನಂತೆ ತಿರು
ಗುತ್ತಾ ಸದಾ ಪರಮಾತ್ಮನಲ್ಲಿ ಮನಸ್ಸನ್ನು ಯಾವನು ಲೀನಮಾಡುತ್ತಾ
ನೆಯೋ, ಅವನೇ ಅವಧೂತ. ಇದೂ ಅಲ್ಲದೆ, ಶಂಕರಾಚಾರ್ಯರ
ನಿರ್ವಾಣ ಷಟ್ಕವೆಂಬುದರಲ್ಲಿ ನಿಜವಾದ ಅವಧೂತಲಕ್ಷಣಗಳನ್ನು ಹೇಳಿರು
ತ್ತಾರೆ. ಅವುಗಳನ್ನು ಈ ಕೆಳಗೆ ಕೊಟ್ಟಿವೆ.

## ನಿರ್ವಾಣ ಷಟ್ಕಂ.

ಶ್ಲೋ ॥ ಮನೋಬುದ್ಧ್ಯಹಂಕಾರಚಿತ್ತಾದಿ ನಾಽಹಂ ।
ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರಂ ।
ನ ಚ ವ್ಯೋಮ ಭೂಮಿ ರ್ನ ತೇಜೋ ನ ವಾಯುಃ ।
ಚಿದಾನಂದರೂಪ ಶ್ಶಿವೋಽಹಂ ಶಿವೋಽಹಂ ॥ ೧ ॥

'ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣ ಚತು
ಷ್ಟಯಗಳು ನಾನಲ್ಲ, ಕಣ್ಣು, ಕಿವಿ, ಮೂಗು, ಬಾಯಿ, ಚರ್ಮ ಎಂಬ
ಜ್ಞಾನೇಂದ್ರಿಯಗಳೂ ನಾನಲ್ಲ. ಪೃಥಿವ್ಯಾಪಸ್ತೇಜೋವಾಯುರಾಕಾಶ
ಗಳೆಂಬ ಪಂಚಭೂತಗಳೂ ನಾನಲ್ಲ, ಚಿದಾನಂದಸ್ವರೂಪಿಯಾದ ಶಿವನೇ
ನಾನು' ಎಂದು ಯಾವಾತನು ತಿಳಿದು ಅದರಂತೆ ನಡೆಯುತ್ತಾನೆಯೋ,
ಅವನೇ ನಿಜವಾದ 'ಅವಧೂತ'ನು.

ಶ್ಲೋ ॥ ಅಹಂ ಪ್ರಾಣಸಂಜ್ಞೋ ನ ವಾ ಪಂಚವಾಯುಃ ।
ನ ವಾ ಸಪ್ತಧಾತುಃ ನ ವಾ ಪಂಚಕೋಶಃ ॥
ನ ವಾಕ್ಪಾನಿ ಪಾದೋ ನ ಚೋಪಸ್ಥ ಪಾಯೂ ।
ಚಿದಾನಂದರೂಪ ಶ್ಶಿವೋಽಹಂ ಶಿವೋಽಹಂ ॥ ೨ ॥

'ನಾನು ಪ್ರಾಣಾದಿ ಪಂಚವಾಯುಗಳಲ್ಲ. ಚರ್ಮ, ತ್ವಕ್ಕು, ರಕ್ತ,
ಮಾಂಸ, ಮಜ್ಜ, ಮೆದಳು, ಎಲುಬು ಎಂಬ ಸಪ್ತ ಧಾತುಗಳೂ ನಾನಲ್ಲ.
ಪಂಚಕೋಶಗಳೂ ನಾನಲ್ಲ. ವಾಕ್ಪಾಣಿ ಪಾದ ಪಾಯೂಪಸ್ಥಗಳೆಂಬ

ಕರ್ಮೇಂದ್ರಿಯಗಳೂ ನಾನಲ್ಲ,' ಎಂದು ತಿಳಿದು ನಡೆಯುವವನೇ 'ಅವಧೂತ'ನು.

ಶ್ಲೋ ॥ ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ ।
ನ ಮಂತ್ರಂ ನ ತೀರ್ಥಂ ನ ವೇದಾ ನ ಯಜ್ಞಾಃ ।
ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ ।
ಚಿದಾನಂದರೂಪ ಶ್ಶಿವೋಽಹಂ ಶಿವೋಽಹಂ ॥ ೩ ॥

'ಪುಣ್ಯಪಾಪಗಳು ನಾನಲ್ಲ, ಸುಖದುಃಖಗಳು ನಾನಲ್ಲ, ಮಂತ್ರಜಪತಪಗಳೂ ನಾನಲ್ಲ, ತೀರ್ಥವೇದ ಯಜ್ಞ ಇವುಗಳಲ್ಲಿ ಯಾವುದೂ ನಾನಲ್ಲ, ಭೋಜ್ಯಭೋಜನಗಳು ನಾನಲ್ಲ, ಮತ್ತು ಭೋಕ್ತನೂ ನಾನಲ್ಲ. ಆದರೆ ಚಿದಾನಂದಸ್ವರೂಪಿಯಾದ ಆ ಪರಮಾತ್ಮನೇ ನಾನು' ಎಂದು ಭಾವಿಸಿ ಅದರಂತೆ ಆಚರಿಸುವವನೇ 'ಅವಧೂತ'ನು.

ಶ್ಲೋ ॥ ನ ಮೇ ದ್ವೇಷರಾಗೌ ನ ಮೇ ಲೋಭಮೋಹೌ ।
ಮದೋ ನೈವ ಮೇ ನೈವ ಮಾತ್ಸರ್ಯಭಾವಃ ॥
ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ ।
ಚಿದಾನಂದ ರೂಪ ಶ್ಶಿವೋಽಹಂ ಶಿವೋಽಹಂ ॥ ೪ ॥

'ರಾಗದ್ವೇಷಾದಿಗಳು ನನಗಿಲ್ಲ ಅಂದರೆ, ಒಂದು ಪದಾರ್ಥವನ್ನು ಕಂಡರೆ ಇಚ್ಛೆಯೂ, ಒಂದನ್ನು ಕಂಡರೆ ಅಸಹ್ಯವೂ ನನಗಿಲ್ಲ. ಕಾಮಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳು ನನಗಿಲ್ಲ. ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳೂ ನನಗಿಲ್ಲ. ನನಗೆ 'ಚಿದಾನಂದಸ್ವರೂಪಿಯೇ ನಾನು' ಎಂಬ ನಿಶ್ಚಯಜ್ಞಾನವು ಮಟ್ಟಿಗೆ ಇದೆ,'' ಎಂದು ಯಾವನಿಗೆ ಅಭಿಪ್ರಾಯ ನಡೆವಳಿಗಳೆರಡೂ ಇರುತ್ತವೆಯೋ, ಅವನೇ 'ಅವಧೂತ'ನು.

ಶ್ಲೋ ॥ ನ ಮೃತ್ಯು ರ್ನ ಶಂಕಾ ನ ಮೇ ಜಾತಿಭೇದಾಃ ।
ಪಿತಾ ನೈವ ಮೇ ನೈವ ಮಾತಾ ನ ಜನ್ಮ ॥
ನ ಬಂಧು ರ್ನ ಮಿತ್ರಂ ಗುರು ರ್ನೈವ ಶಿಷ್ಯಃ ।
ಚಿದಾನಂದರೂಪ ಶ್ಶಿವೋಽಹಂ ಶಿವೋಽಹಂ ॥ ೫ ॥

ಎಂಬಂತೆ ‘ ನನಗೆ ಜನನಮರಣಗಳಿಲ್ಲ, ಸಂದೇಹಗಳೆಂಬುದು ಗಿಲ್ಲ. ಜಾತಿಭೇದಗಳೆಂಬ ಭಾವನೆಯು ನನ್ನಲ್ಲಿ ಹುಟ್ಟದು. ನ ತಂದೆ ತಾಯಿ ಬಂಧು ಮಿತ್ರರೆಂಬುವರೇ ಇಲ್ಲ. ನನಗೆ ಗುರುವೂ ಇ ನನಗೆ ಶಿಷ್ಯನೂ ಇಲ್ಲ. ಏತಕ್ಕೆಂದರೆ ಚಿದಾನಂದಸ್ವರೂಪನಾದ ಆ ಮಾತ್ಮನೇ ನಾನು,” ಎಂಬ ನಿಶ್ಚಯಜ್ಞಾನವು ಯಾರಿಗಿರುತ್ತದೆಯೆ ಅವನೇ ‘ ಅವಧೂತ’ ನು.

ಶ್ಲೋ || ಅಹಂ ನಿರ್ವಿಕಲ್ಪೋ ನಿರಾಕಾರರೂಪೋ |
ವಿಭು ರ್ವ್ಯಾಪಿ ಸರ್ವತ್ರ ಸರ್ವೇಂದ್ರಿಯಾಣಾಂ ||
ನ ವಾ ಬಂಧನಂ ನೈವ ಮುಕ್ತಿ ರ್ನ ಭೀತಿಃ |
ಚಿದಾನಂದರೂಪ ಶ್ಶಿವೋಽಹಂ ಶಿವೋಽಹಂ || ೬ ||

‘ ನಾನು ಷಡ್ಭಾವ ವಿಕಾರರಹಿತನು, ಆಕಾರ ರೂಪಗಳು ಇ ದವನು, ವಿಭುವು, ಸರ್ವವ್ಯಾಪಿ (ಎಲ್ಲೆಲ್ಲಿಯೂ ತುಂಬಿ ತುಳುಕಾಡುವವನು ನಾನು ಸಕಲೇಂದ್ರಿಯಗಳಿಗೂ ಪ್ರಭುವು. ನನಗೆ ಸಂಸಾರಬಂಧ ವೆಂಬುದೇ ಇಲ್ಲ. ಹೀಗಿರಲು ನನಗೆ ಮುಕ್ತಿಯೆಂಬುದೆಲ್ಲಿಯದು ನನಗೆ ಯಾವುದರಿಂದಲೂ ಭೀತಿಯು ಇಲ್ಲ. ಮೇಲೆ ಹೇಳಿದವುಗಳೆಲ್ಲ ನಶ್ವರವಾದ ದೇಹಕ್ಕೇ ಹೊರತು, ನಿತ್ಯಮುಕ್ತನಾದ ನನಗಿಲ್ಲ. ಹೆಚ್ಚೇಕೆ ನಿರ್ಮಲಜ್ಞಾನಾನಂದಸ್ವರೂಪಿಯಾದ, ಪರಿಪೂರ್ಣನಾದ ಆ ಪರಮಾ ತ್ಮನೇ ನಾನು,” ಎಂಬ ಭಾವವನ್ನು ನಿರಂತರವೂ ಹೊಂದಿ ನಶ್ವರವಾ ಪ್ರಪಂಚದ ವಸ್ತುಗಳಲ್ಲಿ ಗಮನವಿಡದೆ, ನೋಡುವವರಿಗೆ ಹುಚ್ಚನಂ ತಿರುಗುತ್ತಾ, ಕಡೆಯಲ್ಲಿ ಪರಮಾತ್ಮನೊಳಗೆ ಐಕ್ಯವನ್ನು ಹೊಂದುವವನೇ ನಿಜವಾದ ಅವಧೂತ. ಶುಕಮಹರ್ಷಿಗಳು, ಸನಕಸನಂದನ ಸನತ್ಕುಮಾ ಸನತ್ಸುಜಾತರೆಂಬ ನಾಲ್ವರು ಬ್ರಹ್ಮಮಾನಸ ಪುತ್ರರು, ದತ್ತಾತ್ರೇಯ ಇವರೇ ಮೊದಲಾದವರು ಈ ಅವಧೂತ ವರ್ಗಕ್ಕೆ ಸೇರಿದವರು.

ಮೇಲೆ ಹೇಳಿದ ಅವಧೂತರು ಕೌಪೀನವಂತರಾದರೂ, ಮಹಾ ಭಾಗ್ಯವಂತರೇ ಸರಿ. ಹೇಗೆಂದರೆ,

ಶ್ಲೋ॥ವೇದಾಂತವಾಕ್ಯೇಷು ಸದಾ ರಮಂತಃ♦ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ।
ವಿಶೋಕವಂತಃ ಕರಣೇ ರಮಂತಃ ♦ ಕೌಪೀನವಂತಃ ಖಲು ಭಾಗ್ಯವಂತಃ ॥

ಶ್ಲೋ॥ದೇಹಾದಿಭಾವಂ ಪರಿಮಾರ್ಜಯಂತಃ♦ಆತ್ಮಾನ ಮಾತ್ಮನ್ಯವಲೋಕಯಂತಃ ।
ನಾಂತಂ ನ ಮಧ್ಯಂ ನ ಬಹಿ ಸ್ಸ್ಮರಂತಃ♦ಕೌಪೀನವಂತಃ ಖಲು ಭಾಗ್ಯವಂತಃ ॥

ಶ್ಲೋ॥ಸ್ವಾನಂದಭಾವೇ ಪರಿತುಷ್ಟಿಮಂತಃ♦ಸಶಾಂತಸರ್ವೇಂದ್ರಿಯ ತುಷ್ಟಿಮಂತಃ ।
ಅಹರ್ನಿಶಂ ಬ್ರಹ್ಮಣಿ ಯೇ ರಮಂತಃ♦ಕೌಪೀನವಂತಃ ಖಲು ಭಾಗ್ಯವಂತಃ ॥

(ಶಂಕರಾಚಾರ್ಯ.)

ವೇದಾಂತ ವಾಕ್ಯಗಳನ್ನೇ ಸದಾ ಯಾರು ಜಪಿಸುತ್ತಿರುತ್ತಾರೆಯೋ, ಹೊತ್ತಿಗೆ ಸರಿಯಾಗಿ ಸಿಕ್ಕಿದ ಭಿಕ್ಷಾನ್ನಮಾತ್ರದಿಂದಲೇ ಯಾರು ತೃಪ್ತಿಪಡೆಯುತ್ತಾರೆಯೋ, ಶೋಕರಹಿತರಾಗಿ ಸದಾ ನಿರ್ಮಲವಾದ ಮನಸ್ಸಿನಿಂದ ಪರಮಾತ್ಮನನ್ನು ಯಾರು ಧ್ಯಾನಿಸುತ್ತಿರುತ್ತಾರೆಯೋ, ಅವರು ಕೌಪೀನವಂತರಾದರೂ ಭಾಗ್ಯವಂತರು. ಮತ್ತು ದೇಹಾದಿಭಾವವನ್ನು ತೊಡೆದು, ಪರಮಾತ್ಮನನ್ನು ತನ್ನಲ್ಲಿಯೇ ನೋಡುತ್ತ, ಒಳಗೆ ಹೊರಗೆ ಎಂಬುದಿಲ್ಲದೆ ಎಲ್ಲೆಲ್ಲಿಯೂ ತುಂಬಿರುವ ಮತ್ತು ಆದಿಮಧ್ಯಾಂತಗಳಿಲ್ಲದ ಆ ಪರಮಾತ್ಮನನ್ನು ಧ್ಯಾನಿಸುವ ಯತಿಗಳು, ಕೌಪೀನವಂತರಾದರೂ ಭಾಗ್ಯವಂತರು. ಯಾವಾಗಲೂ ಆನಂದಭಾವದಲ್ಲಿಯೇ ಮಗ್ನರಾಗಿ, ನಿತ್ಯತೃಪ್ತಿಯನ್ನನುಭವಿಸುತ್ತಿರುವ, ಸರ್ವೇಂದ್ರಿಯ ಸೌಖ್ಯಗಳನ್ನೂ ಧಿಕ್ಕರಿಸಿ ಶಾಂತವಾದ ಮನಸ್ಸನ್ನುಳ್ಳ ಮತ್ತು ಹಗಲಿರುಳೂ ಆ ಪರಬ್ರಹ್ಮನಲ್ಲಿಯೇ ನಟ್ಟ ಮನಸ್ಸುಳ್ಳ ಮಹಾನುಭಾವರು, ಕೌಪೀನವಂತರಾದರೂ ಮಹಾ ಭಾಗ್ಯವಂತರೆಂಬುದು ನಿಜ. ಅಂದರೆ ಈ ಪ್ರಾಪಂಚಿಕ ಐಶ್ವರ್ಯವೆಲ್ಲವೂ ನಶ್ವರವಾದದ್ದು. ಜ್ಞಾನಧನವೇ ನಿಜವಾದ ಐಶ್ವರ್ಯ. ಅದನ್ನುಳ್ಳವರೇ ಜೀವನ್ಮುಕ್ತಿಯನ್ನು ಪಡೆಯಲು ಅರ್ಹರು. ಈ ಮೇಲೆ ಹೇಳಿದ ಗುಣಗಳುಳ್ಳ ಅವಧೂತರೇ ಧನ್ಯರು. ಹೇಗೆಂದರೆ,

ಶ್ಲೋ ॥ ತ್ಯಕ್ತ್ವಾ ಗೃಹೇ ರತಿ ಮನೋಗತಿಹೇತು ಭೂತಾಂ ।
ಆತ್ಮೇಚ್ಛ ಯೌಪನಿಷದರ್ಥರಸಂ ಪಿಬಂತಃ ॥

ವೀತಸ್ಪೃಹಾಃ ವಿಷಯಭೋಗಪದೇ ವಿರಕ್ತಾಃ ।
ಧನ್ಯಾ ಶ್ಚರಂತಿ ವಿಜನೇಷು ವಿರಕ್ತಸಂಗಾಃ ॥

ಶ್ಲೋ॥ ಅಹಿ ಮಿವ ಜನಯೋಗಂ ♦ ಸರ್ವದಾ ವರ್ಜಯೇ ದ್ಯಃ ।
ಕುಣಪ ಮಿವ ಸುನಾರೀಂ ♦ ತ್ಯಕ್ತಕಾಮೋ ವಿರಾಗೀ ॥
ವಿಷ ಮಿವ ವಿಷಯಾ ನ್ಯೋ ♦ ಮನ್ಯಮಾನೋ ದುರಂತಾ ।
ಜಯತಿ ಪರಮಹಂಸೋ ♦ ಮುಕ್ತಿಭಾವಂ ಸಮೇತಿ ॥

(ಶಂಕರಾಚಾರ್ಯ, ಧನ್ಯಾಷ್ಟಕ.)

ಯಾವ ಮಹಾನುಭಾವರು, ಮನೆಯನ್ನು ಬಿಟ್ಟು ಶರೀರಕ್ಕೆ ಸಂಬಂಧಿಸಿದ ಬಂಧುವರ್ಗಗಳನ್ನು ತ್ಯಜಿಸಿ, ಆತ್ಮಜ್ಞಾನವನ್ನು ಹೊಂದುವ ಸಲುವಾಗಿ ಉಪನಿಷದ್ರಸವನ್ನು ನಿರಂತರವೂ ಪಾನಮಾಡುತ್ತ, ಅರಿಷಡ್ವರ್ಗಗಳನ್ನು ಜಯಿಸಿ ಯಾವುದರಲ್ಲಿಯೂ ಇಚ್ಛೆಯೆಂಬುದಿಲ್ಲದೆ ವಿಷಯಸುಖಗಳಲ್ಲಿ ಪರಾಙ್ಮುಖರಾಗಿ ಇರುತ್ತಾರೆಯೋ, ಅಂತಹ ಅವಧೂತರೇ ಧನ್ಯರು.

ಯಾವ ಮಹಾತ್ಮರು ಜನಸಮುದಾಯವನ್ನು ಸರ್ಪವೆಂದೂ, ಕಾಮೇಚ್ಛೆಯನ್ನು ಜಯಿಸಿ ವೈರಾಗ್ಯವನ್ನು ಹೊಂದಿದವರಾಗಿ ಸ್ತ್ರೀಯನ್ನು ಭತ್ತದ ಹೊಟ್ಟಿಗಿಂತಲೂ ತುಚ್ಛವೆಂದೂ, ಮತ್ತು ಅಪರಿಮಿತವಾದ ವಿಷಯಸುಖಗಳನ್ನು ಘೋರವಾದ ವಿಷವೆಂದೂ ಭಾವಿಸಿ, ಪರಮಾತ್ಮಧ್ಯಾನದಲ್ಲಿಯೇ ಸದಾ ಕಾಲಯಾಪನೆಯನ್ನು ಮಾಡುತ್ತಾರೆಯೋ, ಅವರೇ ಧನ್ಯರು. ಅವರೇ ಪರಮಹಂಸರೆಂದೆನಿಸುವ ಅವಧೂತರು ಮತ್ತು ಅವರೇ ಜೀವನ್ಮುಕ್ತರು ಎಂದು ತಿಳಿಯಬೇಕು.

ಈ ಮುಂದಿನ ಪ್ರಕರಣದಲ್ಲಿ 'ಎಂಥವನು ಜೀವನ್ಮುಕ್ತನು' ಎಂಬ ವಿಷಯವನ್ನು ಕುರಿತು ತಿಳಿಯಹೇಳಿದೆ.



# ಜೀವನ್ಮುಕ್ತನು ಯಾರು?

---

ಶ್ರುತಿ ॥ ಕ್ರಿಯಾನಾಶಾತ್ ಭವೇತ್ ಚಿಂತಾ ♦ ನಾಶೋಽಸ್ಮಾದ್ವಾಸನಕ್ಷಯಃ ।
ವಾಸನಾಪ್ರಕ್ಷಯೋ ಮೋಕ್ಷಃ ♦ ಸಾ ಜೀವನ್ಮುಕ್ತಿರಿಷ್ಯತೇ ॥

(ಅಧ್ಯಾತ್ಮೋಪನಿಷತ್ತು, ಶ್ಲೋಕ 12.)

ಜೀವನು, ಮುಕ್ತಿಯನ್ನು ಹೊಂದಬೇಕೆಂದಪೇಕ್ಷಿಸಿದಲ್ಲಿ, ಮೊದಲು ತನಗಿರುವ ಸಕಲ ಮನೋವ್ಯಾಪಾರಗಳನ್ನು ನಶಿಸುವಂತೆ ಮಾಡಬೇಕು. ಹೀಗೆ ಅವುಗಳನ್ನು ನಾಶಮಾಡಿದರೆ, ಯಾವ ಕೋರಿಕೆಗಳೂ ಹುಟ್ಟವು. ಹಾಗೆ ಯಾವ ಕೋರಿಕೆಗಳೂ ಇಲ್ಲದಿದ್ದಲ್ಲಿ, ಸಂಚಿತ-ಪ್ರಾರಬ್ಧ-ಆಗಾಮಿ ಯೆಂಬ ವಾಸನಾತ್ರಯ ಕರ್ಮಗಳು ನಾಶವಾಗುತ್ತವೆ. ಇವೆಲ್ಲವೂ ನಶಿಸಿದಮೇಲೆ, ಜೀವನು ಮುಕ್ತಿಯನ್ನು ಹೊಂದುತ್ತಾನೆ. ಜೀವನು ಹೊಂದತಕ್ಕ ಈ ಸ್ಥಿತಿಗೆ 'ಜೀವನ್ಮುಕ್ತಿ' ಯೆಂದು ಹೆಸರು.

ಶ್ರುತಿ ॥ "ಬ್ರಹ್ಮಣ್ಯೇವ ವಿಲೀನಾತ್ಮಾ ♦ ನಿರ್ವಿಕಾರೋ ವಿನಿಷ್ಕ್ರಿಯಃ ।
ಬ್ರಹ್ಮಾತ್ಮನೋಃ ಶೋಧಿತಯೋಃ ♦ ಏಕಭಾವಾವಗಾಹಿನೀ ॥ 43 ॥

ಶ್ಲೋ ॥ ನಿರ್ವಿಕಲ್ಪಾ ಚ ಚಿನ್ಮಾತ್ರ ♦ ವೃತ್ತಿಃ ಪ್ರಜ್ಞೇತಿ ಕಥ್ಯತೇ ।
ಸಾ ಸರ್ವದಾ ಭವೇದ್ಯಸ್ಯ ♦ ಸ ಜೀವನ್ಮುಕ್ತ ಇಷ್ಯತೇ ॥ 44 ॥

ಶ್ಲೋ ॥ ದೇಹೇಂದ್ರಿಯೇ ಷ್ವಹಂಭಾವಃ ♦ ಇದಂ ಭಾವ ಸ್ತದನ್ಯಕೇ ।
ಯಸ್ಯ ನೋ ಭವತಃ ಕ್ವಾಪಿ ♦ ಸ ಜೀವನ್ಮುಕ್ತ ಇಷ್ಯತೇ ॥ 45 ॥

ಶ್ಲೋ ॥ ನ ಪ್ರತ್ಯಗ್ಬ್ರಹ್ಮಣೋ ರ್ಭೇದಂ ♦ ಕದಾಽಪಿ ಬ್ರಹ್ಮಸರ್ಗಯೋಃ ।
ಪ್ರಜ್ಞಯಾ ಯೋ ವಿಜಾನಾತಿ ♦ ಸ ಜೀವನ್ಮುಕ್ತ ಇಷ್ಯತೇ ॥ 46 ॥

ಶ್ಲೋ ॥ ಸಾಧುಭಿಃ ಪೂಜ್ಯಮಾನೇಽಸ್ಮಿನ್ ♦ ಪೀಡ್ಯಮಾನೇಽಪಿ ದುರ್ಜನೈಃ ।
ಸಮಭಾವೋ ಭವೇದ್ಯಸ್ಯ ♦ ಸ ಜೀವನ್ಮುಕ್ತ ಇಷ್ಯತೇ ॥ 47 ॥

(ಅಧ್ಯಾತ್ಮೋಪನಿಷತ್ತು 43-47.)

'ವಿಕಾರರಹಿತನಾದ ಮತ್ತು ಕರ್ಮಕ್ರಿಯಾತೀತನಾದ ಪರಬ್ರಹ್ಮ ವಸ್ತುವೇ ಜೀವಾತ್ಮಸ್ವರೂಪವು ಮತ್ತು ಜೀವಾತ್ಮನೇ ಪರಬ್ರಹ್ಮಸ್ವರೂಪವು, ಎಂಬ ಬ್ರಹ್ಮಜ್ಞಾನವನ್ನು ತತ್ವವಿಚಾರದಿಂದಲೂ ಗುರುಮುಖದಿಂದಲೂ ತಿಳಿದವನಾಗಿ, ಸರ್ವಸಮದೃಷ್ಟಿಯಿಂದ ಕೂಡಿ ಸಮಸ್ತ ಕೋರಿಕೆಗಳನ್ನೂ ತೊಡೆದುಬಿಟ್ಟು, ತಾನೇ ತಾನಾಗಿ ಕೇವಲ ಸಾಕ್ಷಿಸ್ವರೂಪನಾಗಿ ಆನಂದವನ್ನನುಭವಿಸುತ್ತಿರುವವನೇ 'ಬ್ರಹ್ಮವೇತ್ತ' ನು. ಇಂತಹ ಬ್ರಹ್ಮಜ್ಞಾನಿಯೇ ಜೀವನ್ಮುಕ್ತನಾಗುತ್ತಾನೆ. ಪಂಚಭೂತಗಳಿಂದ ಉಂಟಾದ ಶರೀರವನ್ನು 'ನಾನು' ಎಂದು ನೆನೆಸುವ 'ಅಹಂಕಾರ' ವೇ ಅಜ್ಞಾನ. ಇಂತಹ ಅಜ್ಞಾನವು ಎಂದಿಗೆ ಕಳೆದುಹೋಗುತ್ತದೆಯೋ ಆಗಲೇ ಅವನು ಜೀವನ್ಮುಕ್ತನಾಗುತ್ತಾನೆ. ಜೀವಾತ್ಮನಿಗೂ ಪರಬ್ರಹ್ಮನಿಗೂ ಎಳ್ಳಷ್ಟಾದರೂ ಭೇದವಿಲ್ಲ. ಈ ಜೀವಬ್ರಹ್ಮರ ಐಕ್ಯಭಾವವು ಯಾವನಿಗೆ ತಿಳಿದಿದೆಯೋ, ಅವನೇ ಜೀವನ್ಮುಕ್ತನು. ಮತ್ತು ದುಷ್ಟರು ತನ್ನನ್ನು ನಿಂದಿಸಿದರೂ, ಶಿಷ್ಟರು ತನ್ನನ್ನು ಹೊಗಳಿದರೂ, ಇವುಗಳಿಗಾಗಿ ತಾನು ಕುಗ್ಗದೆ ಹಿಗ್ಗದೆ ಸಮರಸವಾಗಿರುವವನೇ ಜೀವನ್ಮುಕ್ತನು, ಎಂದು ತಿಳಿಯಬೇಕು. ಇದೂ ಅಲ್ಲದೆ,

ಶ್ಲೋ ॥ ಜೀವ ಶ್ಶಿವ ಸ್ಸರ್ವ ಮೇವ ♦ ಭೂತೇ ಭೂತೇ ವ್ಯವಸ್ಥಿತಃ ।
ಏವ ಮೇವಾಭಿಪಶ್ಯಂತಿ ♦ ಜೀವನ್ಮುಕ್ತ ಸ್ಸ ಉಚ್ಯತೇ ॥

ಶ್ಲೋ ॥ ಏಕಧಾ ಬಹುಧಾ ಚೈವ ♦ ದೃಶ್ಯತೇ ಜಲಚಂದ್ರವತ್ ।
ಆತ್ಮಜ್ಞಾನೀ ತಥೈವೈಕೋ ♦ ಜೀವನ್ಮುಕ್ತ ಸ್ಸ ಉಚ್ಯತೇ ॥

ಶ್ಲೋ ॥ ಕರ್ಮೇಂದ್ರಿಯಪರಿತ್ಯಾಗೀ ♦ ಧ್ಯಾನವರ್ಜಿತಚೇತನಃ ।
ಆತ್ಮಜ್ಞಾನೀ ತಥೈವೈಕೋ ♦ ಜೀವನ್ಮುಕ್ತ ಸ್ಸ ಉಚ್ಯತೇ ॥

ಶ್ಲೋ ॥ ಶರೀರಂ ಕೇವಲಂ ಕರ್ಮ ♦ ಶೋಕಮೋಹಾದಿವರ್ಜಿತಂ ।
ಶುಭಾಽಶುಭಪರಿತ್ಯಾಗೀ ♦ ಜೀವನ್ಮುಕ್ತ ಸ್ಸ ಉಚ್ಯತೇ ॥

ಶ್ಲೋ ॥ ಅನಾದಿವರ್ತೀ ಭೂತೇಷು ♦ ಶಿವೋ ಜೀವೋ ನ ಹನ್ಯತೇ ।
ನಿರ್ವೈರ ಸ್ಸರ್ವಭೂತೇಷು ♦ ಜೀವನ್ಮುಕ್ತ ಸ್ಸ ಉಚ್ಯತೇ ॥

ಶ್ಲೋ || ಆತ್ಮಾ ಗುರು ಸ್ತ್ವಂ ವಿಶ್ವಂ ಚ ♦ ಚಿದಾಕಾಶೋ ನ ಲಿಪ್ಯತೇ |
ಗತಾಗತಂ ದ್ವಯಂ ನಾಸ್ತಿ ♦ ಜೀವನ್ಮುಕ್ತ ಸ್ಸ ಉಚ್ಯತೇ ||

ಶ್ಲೋ || ಹೃದಿ ಧ್ಯಾನೇನ ಯತ್ಪಶ್ಯೇತ್ ♦ ಮನಸಾ ತತ್ಪ್ರಕಾಶಯೇ |
ಸೋಽಹಂ ಹಂಸೇತಿ ಪಶ್ಯಂಶ್ಚ ♦ ಸ ಜೀವನ್ಮುಕ್ತ ಉಚ್ಯತೇ ||

ಶ್ಲೋ || ಯೋಗಾಭ್ಯಾಸಮನಾಃಶ್ರೇಷ್ಠೋ ♦ ಽಪ್ಯಂತಸ್ತ್ಯಾಗೀ ಬಹಿರ್ಜಡಃ |
ಅಂತರ್ಯೋಗೀ ಬಹಿಸ್ತ್ಯಾಗೀ ♦ ಜೀವನ್ಮುಕ್ತ ಸ್ಸ ಉಚ್ಯತೇ ||

(ದತ್ತಾತ್ರೇಯವಿರಚಿತ ಜೀವನ್ಮುಕ್ತಿ ಗೀತ.)

'ಜೀವನೆಂದು ಕರೆಯಲ್ಪಡುವ ಪರಮಾತ್ಮನು ಎಲ್ಲಾ ಭೂತಗಳಲ್ಲಿಯೂ ವಾಸಿಸುತ್ತಾನೆ. ಅವನೇ ಜೀವನ್ಮುಕ್ತನು. ಚಂದ್ರನು ಒಬ್ಬನಾದರೂ ಅನೇಕ ಭಾಂಡಗಳಲ್ಲಿರುವ ನೀರಿನಲ್ಲಿ ಬೇರೆಬೇರೆಯಾಗಿ ಪ್ರತಿಫಲಿಸುವಂತೆ, ಪರಮಾತ್ಮನೊಬ್ಬನಾದರೂ ಸಮಸ್ತ ಜೀವರಾಶಿಗಳಲ್ಲಿ ಚೈತನ್ಯಸ್ವರೂಪವಾಗಿರುವನು,' ಎಂಬ ಆತ್ಮಜ್ಞಾನವುಳ್ಳವನು ಜೀವನ್ಮುಕ್ತನು. ಕರ್ಮಗಳು, ಇಂದ್ರಿಯಗಳು ಇವುಗಳ ವಿಷಯಗಳನ್ನು ಬಿಟ್ಟು, ಧ್ಯಾನಿಸಲ್ಪಡುವ ವಸ್ತು, ಧ್ಯಾನಿಸುವವ ಎಂಬ ಈ ಧ್ಯೇಯ ಧ್ಯಾತಗಳು ಬೇರೆಬೇರೆಯಲ್ಲ. ಇವೆರಡೂ ಒಂದೇ ಆಗಿರುತ್ತದೆ. 'ಸ್ವಸ್ವರೂಪನಾದಆತ್ಮನಿಗಿಂತಲೂ ಪರಮಾತ್ಮನು ಬೇರೆಯಲ್ಲ,' ಎಂದು ನೆನೆಸುತ್ತ ಏಕಭಾವವನ್ನುಳ್ಳವನು ಜೀವನ್ಮುಕ್ತನು. 'ಶೋಕಮೋಹಗಳೇ ಮೊದಲಾದವಿಲ್ಲದಿರುವ ಶರೀರವು ಮಾತ್ರ ಕರ್ಮಸ್ವರೂಪವಾದದ್ದು. ಶುಭಾಶುಭ ಕರ್ಮಗಳು ದೇಹಗಳಿಗೇ ಹೊರತು ಪರಮಾತ್ಮನಿಗಿಲ್ಲವು' ಎಂದು ಭಾವಿಸಿ ಮನೋವಿಕಾರವನ್ನು ಹೊಂದದಿರುವವನು ಜೀವನ್ಮುಕ್ತನು. 'ಸಕಲಭೂತಗಳಲ್ಲಿ ನಿತ್ಯನಾಗಿರುವ ಜೀವಾತ್ಮನು ಪರಮಾತ್ಮನಿಗಿಂತ ಬೇರೆಯಲ್ಲವು; ಎಲ್ಲಾ ಪದಾರ್ಥಗಳೂ ಒಂದೇ; ರಾಗದ್ವೇಷಾದಿಗಳು ಯಾವ ಪದಾರ್ಥಗಳಲ್ಲಿಯೂ ಆ ಪರಮಾತ್ಮನಿಗಿಲ್ಲವು,' ಎಂದು ಯಾವನು ತಿಳಿದಿರುತ್ತಾನೆಯೋ, ಅವನೇ ಜೀವನ್ಮುಕ್ತನು. 'ಆತ್ಮನೆಂದೂ ಗುರುವೆಂದೂ, 'ತ್ವಂ' ಪದವಾಚ್ಯನೆಂದೂ, ವಿಶ್ವಾಕಾರನೆಂದೂ ಹೇಳಲ್ಪಡುವ, ಜ್ಞಾನಾಕಾಶ ರೂಪಕ್ಕೂ ನಶ್ವರವಾದ ಪ್ರಪಂಚಕ್ಕೂ ಯಾವ ಸಂಬಂಧವೂ ಇಲ್ಲ.

ಆ ಪರಮಾತ್ಮನಿಗೆ ಗಮನಾಗಮನಗಳಿಲ್ಲವು. ಆತನು ಲಾಭನಷ್ಟ, ಶೀತೋಷ್ಣ, ಸುಖದುಃಖಾದಿ ದ್ವಂದ್ವಾತೀತನು,' ಎಂದು ಯಾವನು ತಿಳಿದಿದ್ದಾನೆಯೋ ಅವನೇ ಜೀವನ್ಮುಕ್ತನು. ಹೃದಯದಲ್ಲಿ ಧ್ಯಾನದಿಂದ ಯಾವುದನ್ನು ನೋಡುತ್ತಾನೆಯೋ ಅದನ್ನೇ ಮನಸ್ಸಿನಲ್ಲಿ ಪ್ರಕಾಶಿಸುವಂತೆ ಮಾಡುತ್ತಾ, "ಸೋಽಹಂ=ಆತನೇ ನಾನು, ಅಹಂ ಸಃ=ನಾನೇ ಆತನು," ಎಂದು ಆ ಪರಮಾತ್ಮನ ನಿಜಸ್ವರೂಪವನ್ನು ಯಾವನು ತಿಳಿಯುತ್ತಾನೆಯೋ ಅವನೇ ಜೀವನ್ಮುಕ್ತನು. ಕಡೆಯಲ್ಲಿ ಶ್ರೇಷ್ಠನಾದ ಯಾವ ಪುರುಷನು, ಯೋಗಾಭ್ಯಾಸದಲ್ಲಿಯೇ ಕೋರಿಕೆಗಳನ್ನು ನಾಶಮಾಡಿ, ಅಂತಃಕರಣದಲ್ಲಿ ಸಮಸ್ತ ಕಾಮಗಳನ್ನೂ ತೊಲಗಿಸಿ ಬಿಟ್ಟು, ಬಹಿರಿಂದ್ರಿಯಗಳನ್ನೂ ಆ ವಿಷಯಗಳಿಂದ ಹಿಂದಿರುಗಿಸಿ, ಮನಸ್ಸಿನಲ್ಲಿ ಯೋಗಾಭ್ಯಾಸವನ್ನು ಮಾಡುತ್ತ, ಅಂದರೆ ಪರಮಾತ್ಮನ ನಿಶ್ಚಲಸ್ವರೂಪವನ್ನು ನೆನೆಯುತ್ತಾ, ಹೊರಭಾಗದಲ್ಲಿ ಸರ್ವಸಂಗವನ್ನು ಪರಿತ್ಯಾಗಮಾಡಿದವನೇ ಜೀವನ್ಮುಕ್ತನೆಂದೆನಿಸುತ್ತಾನೆ.

ತೇ ॥ ನಿರ್ವಿಕಾರನು ನಿಷ್ಕ್ರಿಯಂ ತಾ ♦ ನಿರತನಾಗಿ ।
ಕೋರಿಕೆಗ ಳಿಲ್ಲವನು ಮರೆತು ♦ ತನಗೆ ತಾನು ॥
ಸಾಕ್ಷಿಸ್ವರೂಪನೆಂದು ವಿ ♦ ಜ್ಞಾನಿ ಯೆನಿಸಿ ।
ಬ್ರಹ್ಮನನು ತಿಳಿದವನು ತಾ ♦ 'ಬ್ರಹ್ಮವೇತ್ತ' ॥

ತೇ ॥ ಗೀ ॥ ತನ್ನನುಂ ದುಷ್ಟನಾದವನು ♦ ದೂಷಿಸಿದರು,
ತನ್ನನುಂ ಶಿಷ್ಟನಾದವನು ♦ ಭೂಷಿಸಿದರು,
ಸಮರಸದಿ ತಾ ಖೇದಮೋ ♦ ದಗಳ ತೊರೆದು
ಭೇದವಿಲ್ಲ ದವನು ಜೀವ ♦ ನ್ಮುಕ್ತ ನಹನು ॥ (ಕನ್ನಡ ಪರಿವರ್ತನೆ.)

ಶ್ರೀರಾಮಃ ಮಾರುತಿಂ ಪ್ರಾಹ ॥

ಶ್ರುತಿ ॥ "ಪ್ರಮಾತೃಸ್ಯ ಕರ್ತೃತ್ವ ಭೋಕ್ತೃತ್ವ ಸುಖದುಃಖಾದಿಲಕ್ಷಣಚಿತ್ತ-
ಧರ್ಮಾಃ ಕ್ಲೇಶರೂಪತ್ವಾತ್ ಬಂಧೋ ಭವತಿ ♦ ತನ್ನಿರೋಧನಂ ಜೀವನ್ಮುಕ್ತಿಃ ♦"
(ಮುಕ್ತಿಕೋಪನಿಷತ್ತು, 1ನೇ ವಾಕ್ಯ.)

ಪುರುಷನಿಗೆ ಕರ್ತೃತ್ವ ಮತ್ತು ಭೋಕ್ತೃತ್ವವೆಂಬ ಎರಡು ವಿಧಗಳುಂಟು. ಅದರಲ್ಲಿ 'ಕಾರ್ಯಗಳೆಲ್ಲವನ್ನೂ ನಾನೇ ಮಾಡುತ್ತಿದ್ದೇನೆ, ಅವೆಲ್ಲಕ್ಕೂ ನಾನೇ ಯಜಮಾನನು,' ಎಂಬ ಅಹಂಕಾರವನ್ನು ಹೊಂದುವಿಕೆಯು ಕರ್ತೃತ್ವವೆಂದೆನಿಸುತ್ತದೆ. ಈ ಕರ್ತೃತ್ವದಿಂದುಂಟಾದ ಫಲವನ್ನನುಭವಿಸುವುದಕ್ಕೆ ಭೋಕ್ತೃತ್ವವೆಂದು ಹೆಸರು. ಮನಸ್ಸೇ ಸಮಸ್ತ ಕರ್ಮಗಳನ್ನೂ ಮಾಡಿಸುತ್ತ, ಸುಖವನ್ನು ಕೊಡದಿರುವ ವಸ್ತುಗಳನ್ನೆಲ್ಲಾ ಸುಖದಾಯಕಗಳು ಎಂದು ತಿಳಿಯುತ್ತಾ, ಮೋಹಭ್ರಾಂತಿಯನ್ನು ಹೊಂದಿ ಸದಾ ದುಃಖವನ್ನೇ ತಾನನುಭವಿಸುತ್ತಿರುತ್ತದೆ. 'ಮನ ಏವ ಮನುಷ್ಯಾಣಾಂ ♦ ಕಾರಣಂ ಬಂಧಮೋಕ್ಷಯೋಃ॥' ಅಂದರೆ "ಮನಸ್ಸೇ ಬಂಧಮೋಕ್ಷಗಳಿಗೆ ಕಾರಣವು. ನಾನು ಯಾವುದೂ ಮಾಡುವುದಿಲ್ಲ. ನಾನು ಯಾವುದನ್ನೂ ಅನುಭವಿಸುವವನಲ್ಲವು, ನಾನು ಸದಾ ಸಾಕ್ಷಿಮಾತ್ರನಾಗಿ ಬೆಳಗುತ್ತಿರುವವನು" ಎಂದು ಮನಸ್ಸಿನಲ್ಲಿ ಎಣಿಸುತ್ತ ಮೇಲೆ ಹೇಳಿದ ಕರ್ತೃತ್ವ ಭೋಕ್ತೃತ್ವವೆಂಬ ಅಹಂಕಾರಗಳು ಇಲ್ಲದೆ ಇರುವವರೇ ಜೀವನ್ಮುಕ್ತರು.

ಶ್ರುತಿ ॥ ದೃಶ್ಯಂ ನಾಸ್ತೀತಿ ಬೋಧೇನ ♦ ಮನಸೋ ದೃಶ್ಯಮಾರ್ಜನಂ ।
ಸಂಪನ್ನಂ ಚೇತ್ ತದುತ್ಪನ್ನಾ ♦ ಪರಾ ನಿರ್ವಾಣ ನಿರ್ವೃತಿಃ ॥

(ಮಹೋಪನಿಷತ್ತು.)

ಕಣ್ಣುಗಳಿಗೆ ಕಾಣ್ಬರುವ ವಸ್ತುಗಳೆಲ್ಲವೂ ಅಸತ್ಯವೆಂದೂ, ನಶ್ವರವಾದವುಗಳೆಂದೂ ತಿಳಿದು, ಕಣ್ಣಿಗೆ ಕಾಣ್ಬರುವ ಸಕಲ ವಸ್ತುಗಳನ್ನೂ, ಮನೋಬುದ್ಧಿ ಚಿತ್ತ ಅಹಂಕಾರಗಳೆಂಬ ಅಂತಃಕರಣಚತುಷ್ಟಯಗಳನ್ನೂ ಸಂಪೂರ್ಣವಾಗಿ ಮರೆತು, ಕೇವಲ ಚಿನ್ಮಾತ್ರನಾಗಿ ನಿಂತಿರುವವನೇ ಜೀವನ್ಮುಕ್ತನು.

ಶ್ರುತಿ ॥ ನ ಮೋಕ್ಷೋ ನಭಸಃ ಪೃಷ್ಠೇ ♦ ಪಾತಾಳೇ ನ ಚ ಭೂತಲೇ ।
ಸರ್ವಾಶಾ ಸಂಕ್ಷಯೇ ಚೇತಃ ♦ ಕ್ಷಯೋ ಮೋಕ್ಷ ಇತೀಷ್ಯತೇ ॥

(ಅನ್ನಪೂರ್ಣೋಪನಿಷತ್ತು, ಶ್ಲೋಕ 23.)

ಅತಲ ವಿತಲ ಸುತಲ ರಸಾತಲ ಪಾತಾಳ ಲೋಕಗಳಲ್ಲಿಯಾಗಲಿ, ಇಲ್ಲವೇ ಆಕಾಶದಲ್ಲಿಯಾಗಲಿ ಮೋಕ್ಷವೆಂಬುದಿಲ್ಲವು. ಮೋಕ್ಷವು ಎಂತಹದೆಂದರೆ, ಭಾರ್ಯಾಪುತ್ರ ಧನಧಾನ್ಯವಸ್ತುವಾಹನಾದಿಗಳಲ್ಲಿರುವ ಸಕಲ ಆಶೆಗಳನ್ನು ನಶಿಸುವಂತೆ ಮಾಡಿ, ಯಾವ ಕೋರಿಕೆಗಳನ್ನೂ ಮನಸ್ಸಿಗೆ ತರದೆ, ತನ್ನ ದೇಹವನ್ನೇ ತಾನು ಮರೆತಿರುವುದೇ. ಇದೇ ಜೀವನ್ಮುಕ್ತಿಯು. ಇಂತಹ ಜೀವನ್ಮುಕ್ತಿ ಪದವಿಯನ್ನು ಮನುಷ್ಯನು ಎಂದು ಸೇರುತ್ತಾನೆಯೋ ಆಗಲೇ ಅವನು ಮೋಕ್ಷವನ್ನು ಹೊಂದುತ್ತಾನೆ ಎಂದು ತಿಳಿಯಬೇಕು.

ಶ್ರುತಿ ॥ ಅಧ್ಯಾತ್ಮ ರತಿ ರಾಶಾಂತಃ ♦ ಪೂರ್ಣಪಾವನಮಾನಸಃ ।
ಪ್ರಾಪ್ತಾ ನುತ್ತಮವಿಶ್ರಾಂತಿಃ ♦ ನ ಕಂಚಿ ದಿಹ ವಾಂಛತಿ ॥

ಶ್ಲೋ ॥ ಸರ್ವಾಧಿಷ್ಠಾನಸನ್ಮಾತ್ರೇ ♦ ನಿರ್ವಿಕಲ್ಪೇ ಚಿದಾತ್ಮನಿ ।
ಯೋ ಜೀವತಿ ಗತಸ್ನೇಹಃ ♦ ಸ ಜೀವನ್ಮುಕ್ತ ಉಚ್ಯತೇ ॥

(ಅನ್ನಪೂರ್ಣೋಪನಿಷತ್ತು, ಶ್ಲೋ॥ 26-27.)

ಸಂಕಲ್ಪವಿಕಲ್ಪಗಳೆಂಬುದಿಲ್ಲದೆ ನಿಶ್ಚೇಷ್ಟಿತನಾಗಿ, ನಿರ್ವಿಕಾರನಾಗಿ ಮನಸ್ಸನ್ನು ಬ್ರಹ್ಮದಲ್ಲಿ ಲಯಮಾಡಿ ಸಮಾಧಿನಿಷ್ಠೆಯಲ್ಲಿರುವವನು 'ಬ್ರಹ್ಮನಿಷ್ಠ'ನೆಂಬುದಾಗಿಯೂ 'ಜೀವನ್ಮುಕ್ತ'ನೆಂದೂ ಹೇಳಲ್ಪಡುವನು.

ಶ್ರುತಿ ॥ ಅಶೇಷೇಣ ಪರಿತ್ಯಾಗೋ ♦ ವಾಸನಾಯಾಂ ಯ ಉತ್ತಮಃ ।
ಮೋಕ್ಷ ಇತ್ಯುಚ್ಯತೇ ಸದ್ಭಿಃ ♦ ಸ ಏವ ವಿಮಲಕ್ರಮಃ ॥

(ಮಹೋಪನಿಷತ್ತು, 39ನೇ ಶ್ಲೋಕ.)

ದಾರೇಷಣ, ಪುತ್ರೇಷಣ, ಧನೇಷಣಗಳೆಂಬ ಈ ವಾಸನಾತ್ರಯಗಳನ್ನು ನಶಿಸುವಂತೆ ಮಾಡಿ ಕೇವಲಚಿನ್ಮಾತ್ರಸ್ವರೂಪದಿಂದಿರುವವನೇ ಜೀವನ್ಮುಕ್ತನು. ನರನು ಇಂತಹ ಸ್ಥಿತಿಗೆ ಯಾವಾಗ ಬರುತ್ತಾನೆಯೋ ಆಗಲೇ ಅವನು ಮೋಕ್ಷವನ್ನು ಪಡೆಯುವನು.

ಶ್ರುತಿ ॥ ಯೇ ಶುದ್ಧವಾಸನಾ ಭೂಯೋ ♦ ನ ಜನ್ಮಾಽನರ್ಥಭಾಗಿನಃ ।
ಜ್ಞಾತಜ್ಞೇಯಾ ಸ್ತ ಉಚ್ಯಂತೇ ♦ ಜೀವನ್ಮುಕ್ತಾ ಮಹಾಧಿಯಃ ॥

(ಮಹೋಪನಿಷತ್ತು, ಶ್ಲೋಕ 40.)

ವಾಸನೆಗಳಲ್ಲಿ ಶುದ್ಧವಾಸನೆ ಮತ್ತು ಅಶುದ್ಧವಾಸನೆಯೆಂಬ ಎರಡು ವಿಧಗಳುಂಟು. ಶುದ್ಧವಾಸನೆಯೆಂದರೆ ಪುನರ್ಜನ್ಮವುಂಟಾಗದಂತೆ, ಅಪರೋಕ್ಷಜ್ಞಾನಸಾಕ್ಷಾತ್ಕಾರವನ್ನು ಹೊಂದಿ, ತನ್ನಲ್ಲಿರುವ ಸಕಲ ದುರ್ಗುಣಗಳನ್ನು ತೊರೆದು, ನೋಡುವವರಿಗೆ ಮಾತ್ರ ಅನೇಕ ಬಂಧಗಳಲ್ಲಿ ಸಿಕ್ಕಿಬಿದ್ದಿರುವಂತೆ ಕಾಣ್ಬರುತ್ತಾ, ತನ್ನಲ್ಲಿ ಯಾವ ಬಂಧಗಳೆಂಬುದೂ ಇಲ್ಲದೆ ನಿರ್ವಿಕಾರನಾಗಿ ನಿಂತಿರುವಿಕೆ. ಅನೇಕ ಜನ್ಮಗಳಿಂದ ತನ್ನನ್ನಂಟಿಬಂದಿರುವ ಕಾಮಕ್ರೋಧಾದಿಗಳೇ ಅಶುದ್ಧವಾಸನೆಯೆಂದು ಕರೆಯಲ್ಪಡುವುವು. ಈ ಅಶುದ್ಧವಾಸನೆಯು ಮಲಮೂತ್ರಗಳಂತೆ ಅಸಹ್ಯಕರವಾದುದು. ಇಂಥವುಗಳು ಲೋಕದಲ್ಲಿರುವ ಅಜ್ಞಾನಿಗಳ ವರ್ಗಕ್ಕೆ ಮಹಾ ಶುದ್ಧವಾಸನೆಯೆಂದು ತೋರಿಬರುವುವು. ಇದೇನು ಚೋದ್ಯ! ಈ ಶುದ್ಧ ಮತ್ತು ಅಶುದ್ಧವಾಸನೆಗಳೆಲ್ಲವೂ ಎಂದಿಗೆ ನಶಿಸಿಹೋಗುತ್ತವೆಯೋ, ಆಗಲೇ ಪುರುಷನು ಬ್ರಹ್ಮಸ್ವರೂಪನಾಗುತ್ತಾನೆ. ಇಂತಹ ಬ್ರಹ್ಮಸ್ವರೂಪಸ್ಥಿತಿಗೆ ಬಂದವನೇ ಜೀವನ್ಮುಕ್ತನು ಎಂದು ಭಾವವು.

ಶ್ರುತಿ ॥ ಸರ್ವತ್ರ ವಿಗತಸ್ನೇಹೋ ♦ ಯ ಸ್ಸಾಕ್ಷಿವ ದವಸ್ಥಿತಃ ।
ನಿರಿಚ್ಛೋ ವರ್ತತೇ ಕಾರ್ಯೇ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, 51ನೇ ಶ್ಲೋಕ.)

ಸ್ನಾನ, ಸಂಧ್ಯಾವಂದನೆ, ಜಪ, ತಪ ಮತ್ತು ಹೋಮ ಮೊದಲಾದ ಸತ್ಕರ್ಮಗಳೆಲ್ಲವನ್ನೂ ತೊಲಗಿಸಿ, ದಂತಧಾವನ ಶೌಚಾದಿ ಕರ್ಮಗಳನ್ನು ಮರೆತು, ಏಕಾಂತಸ್ಥಳದಲ್ಲಿ ಕುಳಿತುಕೊಂಡು, ಯಾವ ಕೋರಿಕೆಯೂ ಇಲ್ಲದೆ ತನ್ನ ಮನಸ್ಸನ್ನು ಆ ಪರಮಾತ್ಮನಲ್ಲಿ ಐಕ್ಯಮಾಡುವವನೇ ಜೀವನ್ಮುಕ್ತನು.

ಶ್ರುತಿ ॥ ಯೇನ ಧರ್ಮ ಮಧರ್ಮಂ ಚ ♦ ಮನೋ ಮನನ ಮೀಹಿತಂ ।
ಸರ್ವ ಮಂತಃ ಪರಿತ್ಯಕ್ತಂ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, 52ನೇ ಶ್ಲೋಕ.)

ವೇದಗಳಿಂದಲೂ, ಧರ್ಮಶಾಸ್ತ್ರಗಳಿಂದಲೂ, ಇತರ ಶಾಸ್ತ್ರಗಳ ಪಠನೆಯಿಂದಲೂ ಮತ್ತು ಧರ್ಮ ಮತ್ತು ಅಧರ್ಮ ಕರ್ಮಗಳನ್ನು ಆಚ ರಿಸುವುದರಿಂದಲೂ, ತನಗೆ ಯಾವ ಪ್ರಯೋಜನವೂ ಇಲ್ಲವೆಂದು ತನ್ನಲ್ಲಿ ತಾನು ತಿಳಿದು, ಮತ್ತು ಆ ವಿಧವಾದ ಎಲ್ಲಾ ಕೋರಿಕೆಗಳನ್ನೂ ಮರೆತು, ತದೇಕನಿಷ್ಠಾಪರನಾಗಿದ್ದು ಸರ್ವದಾ ಬ್ರಹ್ಮಾನಂದದಲ್ಲಿ ಮುಳುಗಿರುವವನೇ ಜೀವನ್ಮುಕ್ತನು.

ಶ್ರುತಿ ॥ ಯಾವತೀ ದೃಶ್ಯಕಲನಾ ♦ ಸಕಲೇಯಂ ವಿಲೋಕ್ಯತೇ ।
ಸಾ ಯೇನ ಸುಷ್ಠು ಸಂತ್ಯಕ್ತಾ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, ಶ್ಲೋಕ 53.)

ತಾನೇ ತಾನಾಗಿದ್ದು ಸದಾ ಆತ್ಮಧ್ಯಾನವನ್ನು ಮಾಡುತ್ತ, ಈ ಪ್ರಾಪಂಚಿಕ ವಸ್ತುಗಳಲ್ಲಿ ಆಸೆಯನ್ನು ತೊರೆದುಬಿಟ್ಟು, ಅನೇಕ ವಿಧ ವಾದ ರೂಪಗಳಿಂದಲೂ, ನಾಮ (ಹೆಸರು) ಗಳಿಂದಲೂ ಕಾಣಿಸುತ್ತಿರುವ ಈ ಜಗತ್ತು ಮಿಥ್ಯವೆಂದೂ ಅಶಾಶ್ವತವೆಂದೂ ತಿಳಿದು, ಸಮಾಧಿನಿಷ್ಠೆಯ ಲ್ಲಿರುವವನೇ ಜೀವನ್ಮುಕ್ತನು.

ಶ್ರುತಿ ॥ ಕಟ್ವಾಮ್ಲಲವಣಂತಿಕ್ತ ♦ ಮಮೃಷ್ಟಂ ಮೃಷ್ಟ ಮೇವ ಚ ।
ಸಮ ಮೇವ ಚ ಯೋ ಭುಂಕ್ತೇ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, ಶ್ಲೋಕ 54.)

ಯಾವಾತನು ಯಾವಾಗಲೂ ಆತ್ಮಧ್ಯಾನದಲ್ಲಿ ನೆಲೆಸಿದ್ದು, ಭಗವ ದನುಗ್ರಹದಿಂದ ತನಗೊದಗಿದ, ಒಗರು, ಕಹಿ, ಸಿಹಿ, ಹುಳಿ, ಉಪ್ಪು ಕಾರವೆಂಬ ಷಡ್ರಸಗಳಿಂದ ಕೂಡಿದ ಅನ್ನವನ್ನಾಗಲಿ ಅಥವಾ ಯಾವ ರುಚಿಯೂ ಇಲ್ಲದ ತಿಂಡಿಯ ಪದಾರ್ಥಗಳನ್ನಾಗಲಿ, ಹೆಚ್ಚು ಕಡಿಮೆಯೆಂಬ ಭಾವನೆಯಿಲ್ಲದೆ ಭುಜಿಸುತ್ತಾನೆಯೋ ಅವನೇ ಜೀವನ್ಮುಕ್ತನು.

ಶ್ರುತಿ ॥ ಜರಾಮರಣ ಮಾಪ ಚ್ಚ ♦ ರಾಜ್ಯಂ ದಾರಿದ್ರ್ಯ ಮೇವ ಚ ।
ರಮ್ಯ ಮಿತ್ಯೇವ ಯೋ ಭುಂಕ್ತೇ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, ಶ್ಲೋಕ 55.)

'ಆತ್ಮಸ್ವರೂಪಿಯಾದ ನನಗೆ ದೇಹಸಂಬಂಧವಾದ ರಾಜ್ಯ, ಸಂಪತ್ತು, ಭೋಗ, ಪ್ರಭುತ್ವ, ಕಷ್ಟ, ಮುದಿತನ, ಸಾವು ಮೊದಲಾದವುಗಳು ಎಂದಿಗೂ ಅಂಟವು,' ಎಂದು ಮನಸ್ಸಿನಲ್ಲೆಣಿಸಿ ಇವುಗಳಲ್ಲಿ ಯಾವುದು ಉಂಟಾದರೂ ಅದಕ್ಕೆ ಭಯಪಡದೆ, ಧೈರ್ಯದಿಂದಿರುವವನೇ ಜೀವನ್ಮುಕ್ತನು.

ಶ್ರುತಿ ॥ ಸರ್ವೇಚ್ಛಾ ಸಕಲಾ ಶ್ಯಂಕಾಃ ♦ ಸರ್ವೇಹಾ ಸ್ಸರ್ವನಿಶ್ಚಯಾಃ ।
ಧಿಯಾ ಯೇನ ಪರಿತ್ಯಕ್ತಾಃ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, ಶ್ಲೋಕ 58.)

ಯಾವನು ಸದಾ ಆತ್ಮಾನುಸಂಧಾನವನ್ನು ಮಾಡುತ್ತಿದ್ದು, ಲೋಕವಾಸನೆ, ಶಾಸ್ತ್ರವಾಸನೆ, ದೇಹವಾಸನೆಯೆಂಬ ಮೂರು ಬಗೆಯಾದ ವಾಸನೆಗಳನ್ನು ಕಳೆದುಬಿಟ್ಟು, ಸಮಸ್ತ ವಿಷಯೇಚ್ಛೆಗಳನ್ನೂ, ತನಗಿರುವ ಸಂದೇಹಾನುಮಾನಗಳನ್ನೂ, ಈ ಜಗತ್ತಿನ ಸಂಬಂಧವಾದ ಎಲ್ಲಾ ವಿಧವಿಷಯಗಳನ್ನೂ ಮತ್ತು ವೇದಾಂತ ಸಿದ್ಧಾಂತಶಾಸ್ತ್ರಗಳೆಲ್ಲವನ್ನೂ ಬಿಟ್ಟು, ಆತ್ಮನಿಷ್ಠೆಯಲ್ಲಿ ನೆಲೆಸಿರುವವನೇ ಜೀವನ್ಮುಕ್ತನು.

ಶ್ರುತಿ ॥ ಶಾಂತಸಂಸಾರಕಲನಃ ♦ ಕಲಾವಾ ನಪಿ ನಿಷ್ಕಳಃ ।
ಯ್ಸ ಸಚಿತ್ತೋಽಪಿ ನಿಶ್ಚಿತ್ತಃ ♦ ಸ ಜೀವನ್ಮುಕ್ತ ಉಚ್ಯತೇ ॥

(ಮಹೋಪನಿಷತ್ತು, ಶ್ಲೋಕ 61.)

ಯಾವನು, ಪರಿಶುದ್ಧಮನಸ್ಕನಾಗಿ ಸಂಸಾರವೆಂಬ ದುಃಖಸಮುದ್ರದಲ್ಲಿ ಸಿಕ್ಕಿ ಬೀಳದೆ, ನೋಡುವವರಿಗೆ ಮಾತ್ರ ಸಂಸಾರ ಲಂಪಟನಾಗಿರುವಂತೆ ತೋರಿಬಂದು, ಮಹಾ ವಿದ್ವಾಂಸನಾದರೂ ಏನೂ ತಿಳಿಯದವನಂತೆ ನಟಿಸುತ್ತಾ, ಜೀವನ್ಮುಕ್ತಿ ಪದವಿಯನ್ನು ತಾನು ಪಡೆದಿದ್ದರೂ ಸಿದ್ಧಿ ಹೊಂದದವನಂತೆ ಇರುತ್ತಾನೆಯೋ ಅವನೇ ಜೀವನ್ಮುಕ್ತನು.

ಶ್ರುತಿ ॥ ಜಾಗ್ರತ್ಯೇವ ಸುಷುಪ್ತಿಸ್ಥಃ ♦ ಕುರು ಕರ್ಮಾಣಿ ವೈ ದ್ವಿಜ ! ।
ಅಂತ ಸ್ಸರ್ವಪರಿತ್ಯಾಗೀ ♦ ಬಹಿಃ ಕುರು ಯಥಾಗತಂ ॥

(ಅನ್ನಪೂರ್ಣೋಪನಿಷತ್ತು.)

ತನ್ನ ಹೃದಯದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯವೆಂಬ ಅರಿಷಡ್ವರ್ಗಗಳಿಗೆ ಎಡೆಗೊಡದೆ ಇದ್ದರೂ, ಜನಗಳಿ ಅವುಗಳ ಆಧೀನಕ್ಕೆ ಒಳಪಟ್ಟವನಂತೆ ತೋರ್ಪಡಿಸುತ್ತ, ಯಾವುದ ಲ್ಲಿಯೂ ಇಚ್ಛೆಯಿಲ್ಲದೆ ಸಕಲ ಕಾರ್ಯಗಳನ್ನು ಮಾಡುತ್ತ, ತಾನು ಜಾಗ್ರ ದವಸ್ಥೆಯಲ್ಲಿದ್ದರೂ ಸುಷುಪ್ತ್ಯವಸ್ಥೆಯನ್ನು ಹೊಂದಿ ಆ ಸುಖವನ್ನ ನಿರಂತರವೂ ಅನುಭವಿಸುತ್ತಿರುವವನೇ ಜೀವನ್ಮುಕ್ತನು.

ಶ್ರುತಿ ॥ ದೇಹೇಂದ್ರಿಯೇ ಷ್ವಹಂ ಭಾವಃ ♦ ಇದಂ ಭಾವ ಸ್ತದನ್ಯಕೇ ।
ಯಸ್ಯ ನೋ ಭವತಃ ಕ್ವಾಪಿ ♦ ಸ ಜೀವನ್ಮುಕ್ತ ಇಷ್ಯತೇ ॥
(ಅಧ್ಯಾತ್ಮೋಪನಿಷತ್ತು

ಆತ್ಮನೇ ನಾನೆಂದೂ, ನಾನೇ ಆತ್ಮನೆಂದೂ ತಿಳಿದು, ದೇಹ ಮತ್ತು ಇಂದ್ರಿಯಗಳು ನಾನೆಂಬ ಅಹಂಕಾರಮಮಕಾರಗಳನ್ನು ತೊಲಗಿ ಬ್ರಹ್ಮನಿಷ್ಠಾತತ್ಪರನಾಗಿರುವವನೇ ಜೀವನ್ಮುಕ್ತನು.

ಶ್ರುತಿ ॥ ರಾಗದ್ವೇಷಭಯಾಧೀನಾ ♦ ಮನುರೂಪಂ ಚರನ್ನಪಿ ।
ಯೋಽಂತರ್ವ್ಯೋಮ ವದತ್ಯಚ್ಛ ♦ ಸ ಜೀವನ್ಮುಕ್ತ ಉಚ್ಯತೇ ॥
(ಮಹೋಪನಿಷತ್ತು

ಯಾವ ಪುರುಷನು, ಆಕಾರರಹಿತನಾಗಿದ್ದು, ಪರಬ್ರಹ್ಮನಲ್ಲಿ ಬೆರೆತ ಒಳಗೂ ಹೊರಗೂ ತಾನೇತಾನಾಗಿ ಮೆರೆಯುತ್ತಿರುವನೋ, ಆತನ ಜೀವನ್ಮುಕ್ತನು.

ಶ್ರುತಿ ॥ ಅಹಂಕಾರಮಯೀಂ ತ್ಯಕ್ತ್ವಾ ♦ ವಾಸನಾಂ ಲೀಲಯೈವ ಯಃ ।
ತಿಷ್ಠತಿ ಧ್ಯೇಯಸಂತ್ಯಾಗೀ ♦ ಸ ಜೀವನ್ಮುಕ್ತ ಉಚ್ಯತೇ ॥
(ಮಹೋಪನಿಷತ್ತು, 45ನೇ ಶ್ಲೋಕ

ವಿಗ್ರಹಾರಾಧನೆ ಮೊದಲಾದ ಸಗುಣಾರಾಧನೆಯನ್ನು ಬಿಟ್ಟು, ಅಹ ಕಾರ ರೂಪವಾದ ಸಕಲ ಮಲಿನವಾಸನೆಗಳನ್ನೂ ಕಳೆದು, ಬ್ರಹ್ಮಜ್ಞಾ ತ್ಯಾಗಶೀಲನಾಗಿ, ಪರಮಾತ್ಮನೊಡನೆ ಕೂಡಿಕೊಂಡಿರುವ ಮಹಾನುಭ ವನೇ ಜೀವನ್ಮುಕ್ತನು, ಎಂದು ತಿಳಿಯಬೇಕು.

ಶ್ರುತಿ ॥ ಯಸ್ಯ ನೇಚ್ಛಾ ತಥಾಽನಿಚ್ಛಾ ♦ ಜ್ಞಸ್ಯ ಕರ್ಮಣಿ ತಿಷ್ಠತಃ ।
ನ ತಸ್ಯ ಲಿಪ್ಯತೇ ಪ್ರಜ್ಞಾ ♦ ಪದ್ಮಪತ್ರ ಮಿವಾಂಬುಭಿಃ ॥

(ಮಹೋಪನಿಷತ್ತು, ಶ್ಲೋಕ 173.)

ತಾವರೆಯ ಎಲೆಯಮೇಲೆ ಬಿದ್ದ ನೀರಿನ ಹನಿಯು ಆ ಎಲೆಯನ್ನು ಅಂಟಿ ಅಂಟದೆ ಯಾವ ಬಗೆಯಲ್ಲಿರುತ್ತದೆಯೋ, ಅದೇ ರೀತಿಯಲ್ಲಿಯೇ ಜ್ಞಾನಿಯು ತಾನು ಸಂದರ್ಭಾನುಸಾರವಾಗಿ ಅನೇಕ ಕರ್ಮಗಳನ್ನು ಮಾಡುತ್ತಿದ್ದರೂ, ಆ ಕರ್ಮಫಲಗಳ ವಿಷಯದಲ್ಲಿ ಗಮನವಿಡದಿದ್ದರೆ, ಆ ಕರ್ಮಫಲಗಳಾದ ಸುಖದುಃಖಗಳು ಎಂದಿಗೂ ಆತನನ್ನಂಟವು. ಆಯಾ ವಿಷಯಗಳಿಂದ ಉಂಟಾಗುವ ಈ ಸುಖದುಃಖಗಳು ಶರೀರಕ್ಕೇ ಹೊರತು ನನಗಿಲ್ಲ, ಎಂದು ಮನಸ್ಸಿನಲ್ಲೆಣಿಸಿ, ಅತ್ತಿತ್ತ ಅಲುಗದೆ ಇರುವ ದೀಪದಂತೆ ತನ್ನ ಮನಸ್ಸನ್ನು ಒಂದೆಡೆಯಲ್ಲಿ ನಿಲ್ಲಿಸುವ ಮಹಾತ್ಮನೇ ಜೀವನ್ಮುಕ್ತನು.

ಶ್ರುತಿ ॥ ಜ್ಞಾನಾಮೃತತೃಪ್ತಯೋಗಿನೋ ನ ಕಿಂಚಿತ್ ಕರ್ತವ್ಯ ಮಸ್ತಿ ♦ ।
ತದಸ್ತಿ ಚೇತ್ ನ ಸ ತತ್ವವಿ ದ್ಭವತಿ ॥

(ಪೈಂಗಳೋಪನಿಷತ್ತು, ವಾಕ್ಯ 9.)

ಎಂಬ ಶ್ರುತಿವಾಕ್ಯದಂತೆ, ಜ್ಞಾನಾಮೃತವನ್ನು ಪಾನಮಾಡಿದ ಮಹಾನುಭಾವನಿಗೆ ಯಾವ ಕಾಲದಲ್ಲಿಯೂ ಹಸಿವು ಬಾಯಾರಿಕೆ ಮೊದಲಾದವುಗಳುಂಟಾಗವಾದುದರಿಂದ, ಅಂದರೆ ಸುಖದುಃಖಗಳನುಭವವು ಅವನಿಗೆ ಉಂಟಾಗವಾದುದರಿಂದ, ಆತನು ಮಾಡಬೇಕಾದ ಕರ್ತವ್ಯವೇ ಇಲ್ಲವು. ಹಾಗೆಂದರೆ ಜ್ಞಾನಿಗೆ ಕರ್ಮಫಲಗಳ ಸೋಂಕೇ ಇಲ್ಲದಿರುವಾಗ ಅವನಿಗೆ ಕರ್ಮಗಳಿಂದಾಗುವ ಪ್ರಯೋಜನವಾವುದು? ಹಾಗಿಲ್ಲದೆ ಕರ್ಮಫಲಕ್ಕಾಗಿ ಕರ್ಮವನ್ನು ಮಾಡುವವನು 'ತತ್ವವಿತ್' ಅಂದರೆ ಬ್ರಹ್ಮಜ್ಞಾನಿಯು ಆಗುವುದಿಲ್ಲ.

ಶ್ರುತಿ ॥ ಪ್ರಾರಬ್ಧಕರ್ಮಪರ್ಯಂತ ♦ ಮಹಿನಿರ್ಮೋಕವತ್ ವ್ಯವಹರತಿ ।
ಚಂದ್ರವತ್ ಚರತೇ ದೇಹೀ ♦ ಸ ಮುಕ್ತಶ್ಚಾಽನಿಕೇತನಃ ॥

(ಪೈಂಗಳೋಪನಿಷತ್ತು, ವಾಕ್ಯ 4.)

ಜ್ಞಾನಿಯೆಂಬುವನ ಪ್ರಾರಬ್ಧ ಕರ್ಮವು ನಶಿಸುವವರಿಗೂ ಜನ್ಮಗಳ ನ್ನೆತ್ತುತ್ತಲೇ ಇರಬೇಕು. ಪ್ರಾರಬ್ಧ ಕರ್ಮವು ನಶಿಸಿದಮೇಲೆ ಹುಟ್ಟು ಸಾವು ಮೊದಲಾದವುಗಳುಂಟಾಗವು. ಜ್ಞಾನಾಗ್ನಿಯಿಂದ ಸಂಚಿತಕರ್ಮ ಗಳನ್ನೆಲ್ಲಾ ಭಸ್ಮಮಾಡಿದ ಬಳಿಕ, ಕತ್ತರಿಸಲ್ಪಟ್ಟ ಪೈರು ಹೇಗೆ ಪುನಃ ತಲೆ ಯೆತ್ತದೋ ಹಾಗೆಯೇ, ಅವನ ಕರ್ಮವು ನಶಿಸಿದಮೇಲೆ ಪುನಃ ಅವನು ತಾಯಿಯ ಹೊಟ್ಟೆಯಲ್ಲಿ ಹುಟ್ಟನು. ಸಂಸಾರದಲ್ಲಿರುವ ಜ್ಞಾನಿಯು ಯಾವ ರೀತಿಯಲ್ಲಿರುತ್ತಾನೆಂದರೆ:—ಕೆಸರಿನಲ್ಲಿದ್ದ ಕುಂಬಾರಹುಳುವು ಆ ಕೆಸ ರನ್ನಂಟದೆ ಇರುವಂತೆ, ಜ್ಞಾನಿಯು ಸಂಸಾರಬಂಧಗಳಿಂದ ಕಟ್ಟಲ್ಪಡದೆ ಅಂದರೆ, ಆದರಲ್ಲಿ ಉಂಟಾಗುವ ಸುಖದುಃಖಗಳ ಸಂಬಂಧವೇ ಇಲ್ಲದೆ, ಮನಸ್ಸು, ಇಂದ್ರಿಯಗಳು ಇವುಗಳನ್ನು ತನ್ನ ವಶಮಾಡಿಕೊಂಡು, ಸಮಸ್ತ ಜನಗಳಿಗೂ ಮಿತ್ರನಾಗಿಯೂ, ಬಹು ದಯಾಶೀಲನಾಗಿಯೂ, ಇತರರು ತನ್ನ ವಿಷಯದಲ್ಲಿ ಮಾಡುವ ದೂಷಣ ಭೂಷಣಗಳಿಂದ ವ್ಯತ್ಯಾಸವನ್ನು ಹೊಂದದವನಾಗಿಯೂ, ಕೋಪ ತಾಪ ಭಯ ಮೋಹಗಳಿಲ್ಲದಿರುವವನಾಗಿ ಯೂ ಮತ್ತು ಆಗಾಗ್ಗೆ ತಾನಾಗಿಯೇ ಲಭಿಸಿದ ಪದಾರ್ಥಗಳಲ್ಲಿಯೇ ತೃಪ್ತಿ ಪಡುತ್ತ ಎಲ್ಲವನ್ನೂ ತಾರತಮ್ಯವಿಲ್ಲದೆ ಒಂದೇ ಸಮನಾಗಿ ಭಾವಿಸಿಕೊಂಡು ಸದಾ ಬ್ರಹ್ಮಾನುಸಂಧಾನವನ್ನು ಮಾಡುತ್ತಿರುವವನಾಗಿಯೂ ಇರುವ ಪುರುಷನೇ ಜೀವನ್ಮುಕ್ತನು.

ಶ್ರುತಿ॥ ಸರ್ವಪರಿಪೂರ್ಣ ತುರೀಯಾತೀತ ಬ್ರಹ್ಮಭೂತೋ ಯೋಗೀ ಭವತಿ♦ ತಂ ಬ್ರಹ್ಮೇತಿ ಸ್ತುವಂತಿ ♦ ಸರ್ವಲೋಕಸ್ತುತಿಪಾತ್ರಃ ಸರ್ವದೇಶಸಂಚಾರ-ಶೀಲಃ ಪರಮಾತ್ಮ ಗಗನೇ ಬಿಂದುಂ ವಿಕ್ಷಿಪ್ಯ, ಶುದ್ಧಾಽದ್ವೈತಾಽಜಾಡ್ಯಸಹ-ಜಾಽಮನಸ್ಕಯೋಗನಿದ್ರಾಖಂಡಾನಂದಪದಾನುವೃತ್ಯಾ ಜೀವನ್ಮುಕ್ತೋ ಭವತಿ ♦ ತಚ್ಚಾನಂದಸಮುದ್ರಮಗ್ನಾಃ ಯೋಗಿನೋ ಭವಂತಿ ♦ ತದಪೇ-ಕ್ಷಯಾ ಇಂದ್ರಾದಯಃ ಸ್ವಲ್ಪಾನಂದಾಃ ♦ ಏವಂ ಪ್ರಾಪ್ತಾನಂದಃ ಪರಮ-ಯೋಗೀ ಭವತೀತ್ಯುಪನಿಷತ್♦ ॥

(ಮಂಡಲಬ್ರಾಹ್ಮಣೋಪನಿಷತ್ತು, ದ್ವಿತೀಯಬ್ರಾಹ್ಮಣಂ, 5ನೇ ವಾಕ್ಯ.)

ಎಂಬ ಮೇಲಿನ ಶ್ರುತಿವಾಕ್ಯದಂತೆ, 'ತುರೀಯಾತೀತನಾಗಿ ಸರ್ವ ಪರಿಪೂರ್ಣನಾದ, ಪರಬ್ರಹ್ಮನನ್ನೇ ಧ್ಯಾನಿಸುತ್ತಿರುವವನು ಯೋಗಿಯೆಂ

ದೆನಿಸುವನು. ಅವನನ್ನೇ ಪರಬ್ರಹ್ಮನೆಂದು ಸ್ತುತಿಸುತ್ತಾರೆ. ಹೀಗೆ ಎಲ್ಲರಿಂದಲೂ ಹೊಗಳಿಸಿಕೊಳ್ಳಲ್ಪಡುವ, ಸರ್ವದೇಶಗಳಲ್ಲಿ ಸಂಚಾರ ಮಾಡುವ ಸ್ವಭಾವವುಳ್ಳ, ಆಕಾಶಸ್ವರೂಪಿಯಾದ ಆ ಪರಬ್ರಹ್ಮನಲ್ಲಿಯೇ ತನ್ನ ನಿಶ್ಚಲವಾದ ಮನಸ್ಸನ್ನು ನಿಲ್ಲಿಸಿ ಸದಾ ಧ್ಯಾನಮಾಡುತ್ತಿರುವ, ಮತ್ತು ಶುದ್ಧ ಅದ್ವೈತಜ್ಞಾನದಿಂದ ಅಖಂಡಬ್ರಹ್ಮಾನಂದದಲ್ಲಿ ಮಗ್ನ ನಾಗಿರುವ ಆ ಮಹಾತ್ಮನೇ ಜೀವನ್ಮುಕ್ತನು. ಹೀಗೆ ಬ್ರಹ್ಮಾನಂದಸಾಗರ ದಲ್ಲಿ ಮುಳುಗಿ ನಿರಂತರವಾದ ಸುಖವನ್ನನುಭವಿಸುತ್ತಿರುವವರು ಯೋಗಿ ಗಳಾಗುತ್ತಾರೆ. ಈರೀತಿಯಾದ ಯೋಗಿಗಳಾಗಿ ಇತರರಿಂದ ಹೊಗಳಿಸಿ ಕೊಳ್ಳಲ್ಪಡಬೇಕೆಂಬ ಆಸೆಯುಳ್ಳ ಇಂದ್ರಾದಿಗಳು ಅಲ್ಪಾನಂದವುಳ್ಳ ವರು. ಆದರೆ ಸಂಪೂರ್ಣಾನಂದವನ್ನು ಪಡೆದವರೇ ಪರಮಯೋಗಿಗಳು. ಅವರೇ ಜೀವನ್ಮುಕ್ತರು ಎಂಬುದೇ ಈ ಉಪನಿಷದ್ವಾಕ್ಯದ ತಾತ್ಪರ್ಯ.

ಶ್ರುತಿ ॥ ತೀರ್ಥೇ ಶ್ವಪಚಗೃಹೇ ವಾ ತನುಂ ವಿಹಾಯ ಯಾತಿ ಕೈವಲ್ಯಂ ♦ ।
ಪ್ರಾಣಾ ನವಕೀರ್ಯ ಯಾತಿ ಕೈವಲ್ಯಂ ॥

(ಪೈಂಗಳೋಪನಿಷತ್ತು, ವಾಕ್ಯ 5.)

ಜ್ಞಾನಿಯಾದವನು, ಪ್ರಾರಬ್ಧಕರ್ಮವು ನಶಿಸಿದ ಬಳಿಕ, ತಾನು ಕಾಶೀ ರಾಮೇಶ್ವರವೇ ಮೊದಲಾದ ಯಾತ್ರಾಸ್ಥಳಗಳಲ್ಲಿಯಾಗಲಿ ಅಥವ ಇನ್ನಾವುದಾದರೂ ಪುಣ್ಯತೀರ್ಥಗಳುಳ್ಳ ಸ್ಥಳಗಳಲ್ಲಿಯಾಗಲಿ, ಇಲ್ಲವೇ ಚಂಡಾಲನ ಮನೆಯಲ್ಲಿಯಾಗಲಿ ಇದ್ದು ಮರಣಹೊಂದಿದ್ದೇ ಆದರೆ, ಅವನಿಗೆ ಕೈವಲ್ಯವು ತಪ್ಪದೆ ದೊರಕುವುದು. ಏಕೆಂದರೆ ಜ್ಞಾನಿಗೆ ಜಾತಿ ಭೇದವೆಂಬುದೇ ಇಲ್ಲ ಮತ್ತು ಬ್ರಹ್ಮಜ್ಞಾನಕ್ಕೆ ನೀಚೋಚ್ಚಗಳೆಂಬುವೇ ಇಲ್ಲ.

ಶ್ರುತಿ ॥ ಯತ್ರ ಯತ್ರ ಮೃತೋ ಜ್ಞಾನೀ ♦ ಯೇನ ವಾ ಕೇನ ಮೃತ್ಯುನಾ ।
ಯಥಾ ಸರ್ವಗತಂ ವ್ಯೋಮ ♦ ತತ್ರ ತತ್ರ ಲಯಂ ಗತಃ ॥

ಶ್ಲೋ ॥ ಘಟಾzzಕಾಶ ಮಿವಾzzತ್ಮಾನಂ ♦ ವಿಲಯಂ ವೇತ್ತಿ ತತ್ವತಃ ।
ಸ ಗಚ್ಛತಿ ನಿರಾಲಂಬಂ ♦ ಜ್ಞಾನಾzzಲೋಕಂ ಸಮಂತತಃ ॥

(ಪೈಂಗಳೋಪನಿಷತ್ತು, ಶ್ಲೋಕ 13-14.)

ಜ್ಞಾನಿಯಾದವನು, ಉತ್ತಮವಾದ ತಿಳಿವಳಿಕೆಯುಳ್ಳವನಾಗಲಿ ಇಲ್ಲವೇ ಬುದ್ಧಿಯಿಲ್ಲದವನಾಗಲಿ, ರೋಗಪೀಡಿತನಾಗಿರಲಿ ಇಲ್ಲವೇ ರೋಗ ರಹಿತನಾಗಿರಲಿ, ಆತನು ಬ್ರಾಹ್ಮಣರ ಅಗ್ರಹಾರದಲ್ಲಿಯಾಗಲಿ ಇಲ್ಲವೇ ಚಂಡಾಲನ ಮನೆಯಲ್ಲಿಯಾಗಲಿ ವಾಸಿಸುತ್ತಿದ್ದು, ನಿಶ್ಚಲವಾದ ಮನಸ್ಸಿನಿಂದ ಪರಮಾತ್ಮಧ್ಯಾನತತ್ಪರನಾಗಿ ಪ್ರಾಣಗಳನ್ನು ಬಿಟ್ಟದ್ದೇ ಆದರೆ, ಆತನಿಗೆ ದೋಷವೆಂಬುದೇ ಇಲ್ಲ. ತನ್ನನ್ನೇ ಬ್ರಹ್ಮನೆಂದು ತಿಳಿದುಕೊಂಡಿರುವುದರಿಂದ, ಈತನು ಕುಲಗೋತ್ರ ಸುಖದುಃಖ ರೋಗ ರುಜಿನ ಮೊದಲಾದುವುಗಳು ನಶ್ವರವಾದ ಈ ದೇಹಕ್ಕೆ ಹೊರತು, ಆತ್ಮನಿಗಿಲ್ಲವು, ಎಂಬ ನಿಶ್ಚಯಜ್ಞಾನವನ್ನು ತಿಳಿದುಕೊಂಡಿರುತ್ತಾನೆ. ಆದುದರಿಂದ ತಾನು ಪ್ರಾಣಬಿಟ್ಟೊಡನೆಯೇ ಭಾಂಡದಲ್ಲಿರುವ ಆಕಾಶವು ಭಾಂಡವು ಒಡೆದಮೇಲೆ ಮಹಾಕಾಶದಲ್ಲಿ ಯಾವ ಬಗೆಯಲ್ಲಿ ಕಲೆತುಹೋಗುತ್ತದೆಯೋ ಹಾಗೆಯೇ, ಅಜ್ಞಾನಿಯು ಈ ಶರೀರವನ್ನು ಬಿಟ್ಟೊಡನೆಯೇ ಈ ಶರೀರದಲ್ಲಿರುವ ಜೀವಾತ್ಮನು ಪರಮಾತ್ಮನಲ್ಲಿ ಕಲೆತುಹೋಗುತ್ತಾನೆ. ಅಂದರೆ ಆತನಿಗೆ ಕೈವಲ್ಯವು ಸಿದ್ಧಿಸುತ್ತದೆ ಎಂದರ್ಥ.

ಜೀವಿಗಳಿಗೆ ಹೆಂಡತಿಮಕ್ಕಳು ಹಣಕಾಸು ಇವುಗಳಲ್ಲಿಯೂ, ಇತರ ವಿಷಯಗಳಲ್ಲಿಯೂ, ಆಸೆಯಿದ್ದದ್ದೇ ಆದರೆ, ಈ ಆಶೆಗಳೇ ಜನ್ಮಗಳಿಗೆ ಬೀಜಗಳಾಗಿದ್ದು ಮತ್ತೆಮತ್ತೆ ಜನ್ಮಗಳನ್ನುಂಟುಮಾಡುತ್ತಿರುತ್ತವೆ. ಮಾನವರು, ಹೆಂಡತಿಮಕ್ಕಳನ್ನೂ ಸಕಲ ಭೋಗಗಳನ್ನೂ ಹೊಂದಬೇಕೆಂದು ಕೋರುವರೇ ಹೊರತು, ಮೋಕ್ಷವನ್ನು ಅಂದರೆ ಜನನಮರಣ ರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದುವುದಕ್ಕೆ ಎಂದಿಗೂ ಇಚ್ಛೆಪಡರು. ಆದುದರಿಂದ ಅವರಿಗೆ ಮೋಕ್ಷವೆಂಬುದು ಹೇಗೆ ದೊರಕುತ್ತದೆ?

ಆಶಾಪಾಶಗಳಿಂದ ಬಿಡುಗಡೆಯೆಂಬುದು 'ಮೋಕ್ಷ' ವೆಂದು ಹೇಳಿದೆಯಷ್ಟೆ. ಈ ಆಶಾಪಾಶಗಳು ಸ್ತ್ರೀಪುರುಷರನ್ನು ಲೆಕ್ಕವಿಲ್ಲದಷ್ಟು ಜನ್ಮಗಳಿಂದ ಹಿಂಬಾಲಿಸಿ ಬಂದಿರುವವು. ಪರಮಾತ್ಮಧ್ಯಾನವಿಲ್ಲದೆ ಇದ್ದರೆ, ಈ ಆಶೆಗಳು ಜನ್ಮಜನ್ಮಕ್ಕೂ ವೃದ್ಧಿಯಾಗುತ್ತ ಬರುತ್ತವೆಯೇ ಹೊರತು,

ಅದರಿಂದ ಪ್ರಾಣಿಗಳಿಗೆ ಬಿಡುಗಡೆಯೆಂಬುದೇ ಇಲ್ಲವು. ಆದರೆ, ಪ್ರಾಣಾಯಾಮವನ್ನು ಅಭ್ಯಾಸ ಮಾಡುತ್ತ ಬಂದಲ್ಲಿ, ಈ ಆಶಾಬಂಧಗಳ ಕಟ್ಟು ಕ್ರಮೇಣ ಸಡಿಲವಾಗುತ್ತ ಬರುತ್ತದೆ. ಇದು ಸ್ವಾನುಭವದಿಂದ ಹೇಳಿದ ಮಾತು. ಈ ಗ್ರಂಥಕರ್ತರಾದ ಪರಮಹಂಸ ಸಚ್ಚಿದಾನಂದ ಯೋಗೀಶ್ವರರು, ಮೊದಮೊದಲು ಇತರ ಜನಗಳಂತೆಯೇ ಅಪರಿಮಿತ ಆಸೆಗಳಿಂದ ಕೂಡಿದವರಾಗಿದ್ದರು. ಆದರೆ ಅವರು ಪ್ರಾಣಾಯಾಮದಿಂದ ಯೋಗಾಭ್ಯಾಸವನ್ನು ಮಾಡುತ್ತ ಮಾಡುತ್ತ ತಮಗೆ ಇದ್ದ ಆಸೆಗಳು ಕ್ರಮೇಣ ಕಡಿಮೆಯಾಗುತ್ತ ಬಂದಿವೆ. ಪ್ರಾಣಾಯಾಮದಿಂದುಂಟಾದ ಈ ಫಲವನ್ನು ತಿಳಿದೇ, ಮೇಲೆ ಹೇಳಿದ ಯೋಗೀಶ್ವರರು ಆಶಾಪೀಡಿತರಾದ ಸ್ತ್ರೀಪುರುಷರಿಗೆ ಪ್ರಾಣಾಯಾಮ ಕ್ರಮವನ್ನುಪದೇಶಿಸಿ, ಅವರಿಗಿರುವ ಆಶಾಬಂಧಗಳನ್ನು ಹರಿಯುವಂತೆ ಮಾಡುತ್ತ, ಅವರನ್ನು ಉತ್ತಮಮಾರ್ಗದಲ್ಲಿ ತಂದುಬಿಡುತ್ತಿದ್ದಾರೆ. ಸ್ವಾನುಭವವೇ ಇದಕ್ಕೆ ಪ್ರಮಾಣವಾದುದರಿಂದ ಈ ವಿಷಯವನ್ನು ಇಲ್ಲಿ ಉಚ್ಚಸ್ವರದಿಂದ ಒತ್ತಿ ಹೇಳಿದೆ. ಗ್ರಂಥಕರ್ತರ ಜನ್ಮಚರಿತ್ರೆಯನ್ನು ಸಾಂಗವಾಗಿ ಪಠಿಸಿದ್ದೇ ಆದರೆ, ಪ್ರಾಣಾಯಾಮದಿಂದ ಅವರಿಗುಂಟಾದ ಫಲವೆಂಥದೆಂಬುದನ್ನು ತಿಳಿಯಬಹುದು. ಹೆಚ್ಚೇಕೆ, ಈ ಗ್ರಂಥದಲ್ಲಿ ಉಪದೇಶಿಸಿರುವ ಪ್ರಕಾರ ಪ್ರಾಣಾಯಾಮವನ್ನು ಅಭ್ಯಾಸ ಮಾಡುತ್ತ ಬಂದರೆ, ಹಾಗೆ ಮಾಡುವವನಿಗೆ ಅದರನುಭವವು ಸಂಪೂರ್ಣವಾಗಿ ಗೊತ್ತಾಗುತ್ತದೆ. ಆದುದರಿಂದ ಓ ಸ್ತ್ರೀಪುರುಷರಿರಾ! ನೀವು ಉತ್ತಮವಾದ ಗತಿಯನ್ನು ಹೊಂದಬೇಕೆಂದಪೇಕ್ಷಿಸುವಿರಾದರೆ, ಮೊದಲು ಪ್ರಾಣಾಯಾಮವನ್ನು ಅಭ್ಯಾಸಮಾಡಿರಿ. ಅದರಿಂದ, ನಿಮ್ಮನ್ನು ಬಹು ಜನ್ಮಗಳಿಂದ ಬೆನ್ನಂಟಿಬಂದಿರುವ ಆಶೆಗಳನ್ನು ತೊಲಗಿಸಿಬಿಟ್ಟು ಶುದ್ಧರಾದಮೇಲೆ ಮನಸ್ಸನ್ನು ಸ್ಥಿರೀಕರಿಸಿ ಬ್ರಹ್ಮನಿಷ್ಠೆಯಲ್ಲಿ ನಿರತರಾದರೆ, ನೀವು ಪರಮಪದವನ್ನು ಹೊಂದುವುದಕ್ಕೆ ಯಾವ ಅಡಚಣೆಯೂ ಇರಲಾರದು.

ಶ್ಲೋ॥ ದಗ್ಧಸ್ಯ ದಹನಂ ನಾಸ್ತಿ ♦ ಪಕ್ವಸ್ಯ ಪಚನಂ ಯಥಾ ।
ಜ್ಞಾನಾಗ್ನಿದಗ್ಧದೇಹಸ್ಯ ♦ ನ ಚ ಶ್ರಾದ್ಧಂ ಸ ಚ ಕ್ರಿಯಾ ॥

(ಪೈಂಗಳೋಪನಿಷತ್ತು, ಶ್ಲೋ॥ 7.)

ಎಂಬಂತೆ ಚನ್ನಾಗಿ ಸುಟ್ಟ ಪದಾರ್ಥವನ್ನು ಪುನಃ ಸುಡುವುದೆಂದ ರೇನು? ಹಾಗೆಯೇ ಪಕ್ವಪದಾರ್ಥಕ್ಕೆ ಪುನಃ ಪಚನವೆಂಬುದೂ ಇಲ್ಲ. ಜ್ಞಾನಾಗ್ನಿಯಿಂದ ಸುಡಲ್ಪಟ್ಟ ದೇಹಕ್ಕೆ ದಹನಾದಿ ಸಂಸ್ಕಾರಗಳೂ, ಉತ್ತರಕ್ರಿಯಗಳು ಮತ್ತು ಶ್ರಾದ್ಧಾದಿ ಕರ್ಮಗಳೂ ಎಂದಿಗೂ ಇಲ್ಲವು. ಈ ರಹಸ್ಯವನ್ನನುಸರಿಸಿ ಯೋಗಿಗಳಾದವರು ದೇಹತ್ಯಾಗಮಾಡಿದರೆ, ಅವರ ದೇಹವು ಜ್ಞಾನಾಗ್ನಿಯಿಂದ ಮೊದಲೇ ದಗ್ಧವಾಗಿದೆಯೆಂದು ತಿಳಿದು, ಆ ದೇಹಕ್ಕೆ ದಹನಕಾರ್ಯಗಳನ್ನು ಮಾಡದೆ ಆ ದೇಹವನ್ನು ಭೂಸ್ಥಾಪನೆ ಮಾಡಿ ಸಮಾಧಿಯನ್ನು ಮಾಡುವ ಪದ್ಧತಿಯು ಆಚರಣೆಯಲ್ಲಿದೆ.

ಶ್ರುತಿ ॥ ತತ್ರ ಕೋ ಮೋಹಃ ? ♦ ಕ ಶ್ಶೋಕಃ ? ಏಕತ್ವಮನುಪಶ್ಯತಃ♦ ತರತಿ
ಶೋಕ ಮಾತ್ಮ ವಿತ್ ॥

ಶ್ಲೋ ॥ ಭಿದ್ಯತೇ ಹೃದಯಗ್ರಂಥಿ ♦ ಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಽನ್ಯಕರ್ಮಾಣಿ♦ತಸ್ಮಿ ನ್ ದೃಷ್ಟೇ ಪರಾವರೇ ॥

(ಉಪನಿಷದ್ವಾಕ್ಯ ಶ್ಲೋ॥ 4.)

ಎಲ್ಲೆಲ್ಲಿಯೂ ಪರಮಾತ್ಮನೊಬ್ಬನೇ ಆವರಿಸಿರುವನು, ಎಂಬ ಅಭೇದ ಭಾವವನ್ನು ಯಾವನು ಹೊಂದಿರುವನೋ ಅವನಿಗೆ ಮೋಹವೆಂಬುದೆಲ್ಲಿಯದು? ಶೋಕವೆಂಬುದೆಲ್ಲಿ? ಇಂತಹ ಆತ್ಮಜ್ಞಾನಿಯು ಶೋಕಮೋಹಗಳನ್ನು ತೊಲಗಿಸಿ ಬಿಟ್ಟು, ಸರ್ವಸಂಶಯಗಳನ್ನೂ ಕಳೆದುಬಿಟ್ಟು, ಉಳಿದ ಇತರ ಯಾವ ಕರ್ಮಗಳಲ್ಲಿಯೂ ಆಸೆಯನ್ನಿಡದೆ, ಸದಾ ಬ್ರಹ್ಮಜ್ಞಾನಾನಂದದಲ್ಲಿಯೇ ಮಗ್ನನಾಗಿರುವನು. ಇವನು ತನಗಿಂತಲೂ ಬೇರೆ ಪದಾರ್ಥವಿದೆಯೆಂದೆಣಿಸದೆ ಸರ್ವವೂ ತಾನೇ ಎಂದು ಭಾವಿಸಿ, ಸದಾ ತನ್ನಲ್ಲಿಯೇ ತನ್ನನ್ನು ನೋಡುತ್ತ, ಶೋಕಮೋಹಾದಿಗಳೆಂಬುವಿಲ್ಲದೆ ಇರುವನು. ಈತನು ಜನನಮರಣಗಳೆಂಬ ದುಃಖಸಮುದ್ರವನ್ನು ದಾಟಿ ನಿತ್ಯಾನಂದದಲ್ಲಿ ಮುಳುಗಿರುತ್ತಾನೆ. ಹೀಗಿರುವ ಮಹಾನುಭಾವನಿಗೆ ಸಮಸ್ತ ಕರ್ಮಗಳೂ ಸರ್ವಸಂಶಯಗಳೂ ನಾಶಹೊಂದಿ, ಬ್ರಹ್ಮಸ್ವರೂಪದಲ್ಲಿ ಐಕ್ಯವಾಗುವ ಪದವಿಯು ಸಿದ್ಧಿಸುತ್ತದೆ.

ಶ್ರುತಿ ॥ " ನ ಕರ್ತಾ ನೈವ ಭೋಕ್ತಾ ಚ ♦ ನ ಚ ಭೋಜಯಿತಾ ತಥಾ " ॥

(ವರಾಹೋಪನಿಷತ್ತು ಶ್ಲೋ॥ 19.)

"ನಾನು ಕೇವಲ ಸಾಕ್ಷಿಮಾತ್ರನಾಗಿರುವುದರಿಂದ, ಯಾವ ಕಾರ್ಯವನ್ನೂ ಮಾಡುವವನಲ್ಲವು. ಆಯಾಯಾ ಇಂದ್ರಿಯಗಳು ಮಾಡುವ ಕರ್ಮಗಳ ಫಲಗಳನ್ನು ಅನುಭವಿಸುವವನೂ ನಾನಲ್ಲವು. ಅವುಗಳ ಕರ್ಮಗಳಿಗೆ ನಾನು ಕರ್ತನಲ್ಲ. ನಾನು ಆ ಇಂದ್ರಿಯಗಳ ಕಾರ್ಯಗಳಿಗೆಲ್ಲಾ ಸಾಕ್ಷಿಮಾತ್ರನೇ ಹೊರತು, ಬೇರಲ್ಲ." ನಿಶ್ಚಯಜ್ಞಾನವನ್ನುಳ್ಳ ಮಹಾತ್ಮರು ಬ್ರಹ್ಮಾನಂದ ಸುಖದಲ್ಲಿರುವರು. ಇಂಥವರೇ ಜೀವನ್ಮುಕ್ತರು.

ಶ್ರುತಿ ‖ ಯ ಸ್ಸಮಸ್ತಾಽರ್ಥಜಾಲೇಷು ♦ ವ್ಯವಹಾರ್ಯಪಿ ಶೀತಲಃ ।
ಪರಾರ್ಥೇಷ್ವಿವ ಪೂರ್ಣಾತ್ಮಾ ♦ ಸ ಜೀವನ್ಮುಕ್ತ ಉಚ್ಯತೇ ‖

(ಮಹೋಪನಿಷತ್ತು ಶ್ಲೋ‖ 27.)

ಜಗತ್ತನ್ನು ಸ್ವಪ್ನದಂತೆ ಮಿಥ್ಯೆಯೆಂದು ತಿಳಿದು, ಯಾವ ವಸ್ತುವಿನಲ್ಲಿಯೂ ಭ್ರಾಂತಿಯೆಂಬುದಿಲ್ಲದೆ ಇರುವನು. ಅಂದರೆ, ತಾನು ಮಾಡುವ ಕರ್ಮದಲ್ಲಿ ಫಲಾಪೇಕ್ಷೆಯನ್ನಿಟ್ಟು ಅದರಿಂದುಂಟಾಗುವ ಸುಖದುಃಖಕ್ಕೆ ಭಾಗಿಯಾಗನು. ಲೋಕದಲ್ಲಿ ತಮ್ಮ ಕಾರ್ಯಗಳನ್ನು ಆಸಕ್ತಿಯಿಂದಲೂ, ಇತರ ಕಾರ್ಯಗಳನ್ನು ಅಶ್ರದ್ಧೆಯಿಂದಲೂ ಮಾಡುವ ಪದ್ಧತಿ. ಯಾವನಿಗೆ ತನ್ನ ಮತ್ತು ಇತರ ಕಾರ್ಯಗಳೆಂಬ ಭೇದವಿಲ್ಲವೋ ಮತ್ತು ಅನಾಸಕ್ತಿಯಿಂದ ಅಂದರೆ, ನಿಷ್ಕಾಮನಾಗಿ ಅವನ್ನು ಮಾಡುತ್ತಾನೆಯೋ, ಆತನೇ ಜೀವನ್ಮುಕ್ತನು.

ಶ್ರುತಿ ‖ "ಜೀವನ್ಮುಕ್ತಿಪದಂ ತ್ಯಕ್ತ್ವಾ ♦ ಸ್ವದೇಹೇ ಕಾಲಸಾತ್ಕೃತೇ ।
ವಿಶ ತ್ಯದೇಹಮುಕ್ತತ್ವಂ ♦ ಪಾವನೋ ಽಸ್ಯಂದತಾಮಿವ ‖

ಶ್ಲೋ ‖ ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ ।
ಯಥಾ ರಸಂ ನಿತ್ಯ ಮಗಂಧವ ಚ್ಚ ಯತ್ ‖
ಅನಾ ದ್ಯನಂತಂ ಮಹತಃ ಪರಂ ಧ್ರುವಂ ।
ತದೇವ ಶಿಷ್ಯ ತ್ಯಮಲಂ ನಿರಾಮಯಂ" ‖

(ಪೈಂಗಳೋಪನಿಷತ್ತು, 3ನೇ ಅಧ್ಯಾಯ, 3-4ನೇ ಶ್ಲೋಕ.)

ಹಿಂದೆ ಹೇಳಿದ ಗುಣಗಳನ್ನುಳ್ಳ ಮಹಾತ್ಮನಿಗೆ ಜೀವಿಸಿರುವಂತೆಯೇ ಮುಕ್ತಿಸ್ಥಾನವು ಒಂದುವೇಳೆ ದೊರಕದಿದ್ದಲ್ಲಿ, ಅವನು ಧರಿಸಿದ ದೇಹವು,

ಕಾಲವಶವಾದಮೇಲೆ, ಅವನಿಗೆ ವಿದೇಹಕೈವಲ್ಯವು ತಪ್ಪದೆ ದೊರಕುವುದು. ಇಂಥವನು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವೇ ಮೊದಲಾದ ಗುಣ ಗಳಿಲ್ಲದಿರುವ, ಆದ್ಯಂತರಹಿತವಾದ, ನಿರ್ಮಲವಾದ, ನಾಶರಹಿತವಾದ ಮತ್ತು ಉಪಾಧಿರಹಿತವಾದ ಆ ಪರಮಪದವನ್ನು ತಪ್ಪದೆ ಪಡೆಯುತ್ತಾನೆ' ಎಂಬುದೇ ಮೇಲಿನ ಶ್ರುತಿಯ ಭಾವಾರ್ಥ.

ಇನ್ನು ಮುಂದೆ ಈ ಗ್ರಂಥಕರ್ತರ ಪಠದಲ್ಲಿ ಅವರ ಕೈ ಬೆರಳು ಗಳಿಂದ ತೋರಿಸಲ್ಪಡುವಂಥ ಚಿನ್ಮುದ್ರೆಯಲ್ಲಿ ಸ್ಥೂಲ ಸೂಕ್ಷ್ಮ ಕಾರಣ ಗಳೆಂಬ ಶರೀರತ್ರಯಗಳ ರಹಸ್ಯಾರ್ಥಗಳನ್ನು ವಿಶದವಾಗಿ ತಿಳಿದುಕೊಳ್ಳ ಬಹುದು. ಆದುದರಿಂದ ಜ್ಞಾನಿಯಾದವನು ಪ್ರಾರಬ್ಧಕರ್ಮದ ಫಲ ವನ್ನು ಈ ಜನ್ಮದಲ್ಲಿ ಅನುಭವಿಸಿದ ನಂತರ, ಅಂದರೆ ಆ ಪ್ರಾರಬ್ಧಕರ್ಮ ಫಲಗಳೆಲ್ಲವೂ ಈ ಜನ್ಮದಲ್ಲಿ ಸವೆದಮೇಲೆ ಈ ಸ್ಥೂಲಸೂಕ್ಷ್ಮಕಾರಣ ಗಳೆಂಬ ಮೂರು ಬಗೆ ಶರೀರಗಳೂ ನಾಶಹೊಂದಿ, ಪುನಃ ದೇಹವು ದೊರಕ ದಿರುವ ವಿದೇಹ ಕೈವಲ್ಯವನ್ನು ಹೊಂದುತ್ತಾನೆ.

ಶ್ರುತಿ ॥ ತಸ್ಮಾತ್ ಭಾವಾಽಭಾವೌ ಪರಿತ್ಯಜ್ಯ, ಪರಮಾತ್ಮಧ್ಯಾನೇನ ಮುಕ್ತೋ ಭವತಿ ♦ ॥ (ಮಂಡಲಬ್ರಾಹ್ಮಣೋಪನಿಷತ್ತು, 5ನೇ ವಾಕ್ಯ.)

ಒಂದು ವಸ್ತುವನ್ನು ಮನಸ್ಸಿನಲ್ಲಿ ಕೋರುವುದು; ಅನಂತರ ಆ ಕೋರಿದ ವಸ್ತುವನ್ನು ಮರೆತುಬಿಡುವುದು. ನೆನಪು ಮರವು ಎಂಬ ಈ ಎರಡವಸ್ಥೆಗಳೂ ಇಲ್ಲದೆ ಸದಾ ತಾನೇತಾನಾಗಿ ಮೆರೆಯುತ್ತಿರುವವನೇ ನಿತ್ಯಮುಕ್ತನು. ಅಂದರೆ ವಿದೇಹಕೈವಲ್ಯವು ಅವನಿಗೆ ಹಸ್ತಗತವು ಎಂದರ್ಥ.

ಶ್ರುತಿ ॥ ದ್ವೇ ಪದೇ ಬಂಧಮೋಕ್ಷಾಯ ♦ ನಿರ್ಮಮೇತಿ ಮಮೇತಿ ಚ ।
ಮಮೇತಿ ಬಧ್ಯತೇ ಜಂತುಃ ♦ ನಿರ್ಮಮೇತಿ ವಿಮುಚ್ಯತಿ ॥

(ಪೈಂಗಳೋಪನಿಷತ್ತು, ಶ್ಲೋಕ 29.)

ಬಂಧಮೋಕ್ಷಗಳಿಗೆ ಕಾರಣಗಳಾದ ಪದಗಳು ಎರಡುಂಟು. 'ಮಮ ಅಂದರೆ ನನ್ನದು, 'ನಿರ್ಮಮ' ಅಂದರೆ ನನ್ನದಲ್ಲ' ಎಂಬುವೇ ಆ ಪದಗಳು.

ಇದರಲ್ಲಿ 'ಇದು ನನ್ನದು, ಇದು ನನಗೆ ಬೇಕು, ಸಮಸ್ತವೂ ನನಗೆ ಸೇರಿದುದೇ. ಮನೆ, ಮಠ, ಹಣ, ಕಾಸು, ಹೆಂಡತಿಮಕ್ಕಳು, ಹೊಲ, ಗದ್ದೆ ಮೊದಲಾದವುಗಳೆಲ್ಲವೂ ನನ್ನದೇ.' ಎಂದು ಹೇಳುವುದಕ್ಕೆ ಅವಕಾಶವನ್ನು ಕೊಡುವ 'ಮಮ' ಎಂಬ ಪದವು ಜೀವಿಗೆ ಬಂಧವನ್ನುಂಟುಮಾಡುತ್ತದೆ. 'ಹಾಗಲ್ಲದೆ ಮೇಲೆ ಹೇಳಿದ ದಾರಾಪುತ್ರಧನಧಾನ್ಯಗೃಹಾರಾಮಾದಿಗಳು ನನಗೆ ಸೇರಿದವಲ್ಲವು. ನಿತ್ಯನಾದ ನನಗೂ ನಶ್ವರವಾದ ಉಳಿದ ಪ್ರಾಪಂಚಿಕ ವಸ್ತುಗಳಿಗೂ ಯಾವ ಸಂಬಂಧವೂ ಇಲ್ಲ. ಏಕೆಂದರೆ ಹೆಂಡತಿಮಕ್ಕಳಾದಿಯಾಗಿ ಇತರರ ಸಂಬಂಧವು ದೇಹಕ್ಕೇ ಹೊರತು, ಜೀವಿಯು ಮಾಡುವ ಕರ್ಮಗಳಿಗೆ ಸಾಕ್ಷಿಭೂತನಾದ ನನಗಿಲ್ಲ.' ಎಂಬ ನಿಶ್ಚಯಜ್ಞಾನಕ್ಕೆ ಸಹಕಾರಿಯಾದ 'ನಿರ್ಮಮ' ಎಂಬ ಪದವು ಜೀವಿಗೆ ಜನನಮರಣರೂಪವಾದ ಸಂಸಾರದಿಂದ ಮೋಕ್ಷವನ್ನು ಪಡೆಯುವುದಕ್ಕೆ ಅವಕಾಶವನ್ನು ಕಲ್ಪಿಸುತ್ತದೆ.

ಶ್ರುತಿ ॥ "ಅಹಂ ಬ್ರಹ್ಮೇತಿ ನಿಯತಃ ♦ ಮೋಕ್ಷಹೇತು ರ್ಮಹಾತ್ಮನಾಂ" ♦

(ಪೈಂಗಳೋಪನಿಷತ್ತು, ಶ್ಲೋಕ 19.)

'ಅಹಂ ಬ್ರಹ್ಮಾಸ್ಮಿ' ಅಂದರೆ 'ನಾನೇ ಪರಬ್ರಹ್ಮನು, ಪರಬ್ರಹ್ಮನೇ ನಾನು,' ಎಂಬ ಜೀವಾತ್ಮ ಪರಮಾತ್ಮರ ಐಕ್ಯಜ್ಞಾನವು ಯಾವ ಮಹಾತ್ಮರಿಗಿರುತ್ತದೆಯೋ ಅವರೇ, ಮುಕ್ತರು.

ಈ ಗ್ರಂಥವನ್ನು ಪಠಿಸುವವರೆಲ್ಲರೂ, ಈ ಅಧ್ಯಾಯದಲ್ಲಿ ಉಪನಿಷದ್ವಾಕ್ಯಗಳ ಪ್ರಮಾಣದಿಂದ ವಿಶದಪಡಿಸಿರುವ ಜೀವನ್ಮುಕ್ತಿರಹಸ್ಯಾರ್ಥವೆಲ್ಲವನ್ನು ಚನ್ನಾಗಿ ತಿಳಿದು, ಮೋಕ್ಷವನ್ನು ಪಡೆಯಬೇಕೆಂಬ ಉದ್ದೇಶದಿಂದಲೇ ಅಬ್ಬಯಾಮಾತ್ಯಕವಿಯು ಆಂಧ್ರಭಾಷೆಯಲ್ಲಿ ಬರೆದಿರುವ ಕೆಲವು ಪದ್ಯಗಳನ್ನು ಕನ್ನಡಿಸಿ ಈ ಕೆಳಗೆ ಕೊಟ್ಟಿದೆ.

ಸೀ ॥ ಸತಿಸುತರು ಬಂಧುಸಖ ♦ ರೊಡಗೂಡಿ ಬಾಳ್ದ ಸಂ
ಯಮಿ ವಶಿಷ್ಠನ ಬ್ರಹ್ಮ ♦ ನಿಷ್ಠೆ ಕೇಳಿ ;
ಕರ್ಮಠನು ತಾನಾಗಿ ♦ ರಾಜಧರ್ಮದಿ ನಡೆದ
ಜನಕನ ವಿಜ್ಞಾನ ♦ ಚರ್ಯೆ ಕೇಳಿ ;

ವಾಣಿಜ್ಯವೃತ್ತಿಯಿಂ ♦ ಜೀವಿಸುತ್ತಿಹ ತುಲಾ
ಧಾರನಾ ಪೂರ್ಣಬೋ ♦ ಧವನೆ ಕೇಳಿ ;
ಮಾಂಸವಿಕ್ರಯದಿಂದ ♦ ಕಾಲವನು ಕಳೆದ ಧ-
ರ್ಮವ್ಯಾಧವಿಜ್ಞಾನ ♦ ಮಹಿಮೆ ಕೇಳಿ ;

ಗೀ ॥ ತಮ್ಮ ಪ್ರಾರಬ್ಧ ವನುಸರಿಪ ♦ ತತ್ವವಿದರು ।
ಯಾಪ ವ್ಯವಹಾರ ದೊಳಗಿರ್ದ ♦ ರೇನು ಕೊರತೆ ? ॥
ಜ್ಞಾನವೈರಾಗ್ಯನಿಶ್ಚಲಾ ♦ ನಂದ ಪೂರ್ಣ-।
ರೆನಿಸುವರು ಜೀವನ್ಮುಕ್ತ ♦ ರಹರು ನಿಜವು ॥

ಕಂದ ॥ ಇದು ನಗರ ಮಿದು ವಿಪಿನ ಮೇ ।
ಣಿದು ಸೌಖ್ಯ ತಾ ನಿದಸೌಖ್ಯ ♦ ವೀತನು ಪುರುಷಂ ॥
ಇದು ಸತಿ ಯೆಂಬು ವೆಲ್ಲಿ ? ನೋ-।
ಡಿದುದೆಲ್ಲವು ಬ್ರಹ್ಮಮಯ ♦ ಮಾರೂಢನಿಗಂ ॥

ಗೀ ॥ ಸಕಲ ಸಂಗಗಳೊಂದಿ ತಾ ♦ ಸಂಗಿ ಯೆನಿಸಂ ।
ಸರ್ವಭೋಗಗಳಾಂತು ತಾ ♦ ಭೋಕ್ತನೆನಿಸಂ ॥
ನಿಖಿಲಕಾರ್ಯಗಳೆಸಗಿ ತಾ ♦ ಕರ್ತನೆನಿಸಂ ।
ವಿಗತಸಂಕಲ್ಪನಹ ಬ್ರಹ್ಮ ♦ ವೇತ್ತ ನವನು ॥

ಗೀ ॥ ಇಚ್ಛೆಯಿಲ್ಲದ ಯೋಗಿ ವರ್‍ಯ ♦ ಗಿಂದ್ರಿಯಗಳು ।
ಕರ್ಮವಶದಿಂ ನೈಜ ವೃತ್ತಿ ♦ ಗಳನೆ ಪೊಂದಿ ॥
ಮೆರೆಯುತ್ತಿರಲಿಕೇನು ? ಧರೆಯ ♦ ಪುಣ್ಯಪಾಪ ।
ಗಳು ಸೋಂಕ ದಾತನಂ ಕರ್ತ ♦ ನಲ್ಲದಿರಲು ॥

ಗೀ ॥ ನಿರ್ವಿಷಯಚಿತ್ತನಹ ಬ್ರಹ್ಮ ♦ ತತ್ಪರನಿಗುಂ ।
ತನುಸುಖಂಗಳು ಪ್ರಾರಬ್ಧ ♦ ದಿಂ ಘಟಿಪುದು ॥
ಇಸಿತಲ್ಲ ದಾತನನು ತಾ ♦ ವಂಟದಿಹವು ।
ತಾವರೆಯ ಯೆಲೆಯೊಳಿಹ ಜಲ ♦ ಕಣಿಕ ದಂತೆ ॥

ಉ ॥ ಮಾಡ ಸುಕರ್ಮಗಳ್ ಹೊರಗೆ ♦ ಮಾಡಿದನಂ ತೊಳ ಗೊಂದುವಂ ಸುಖಂ ।
ಮಾಡುವ ಕರ್ಮಗಳ್ ಹೊರಗೆ ♦ ಮಾಡದನಂ ತೊಳ ಗೊಂದುವಂ ಸುಖಂ ।
ಮಾಡನು ಕೃತ್ಯವ ನ್ನಿರದೆ ♦ ಮಾಳ್ಪ ನ ಕೃತ್ಯ ವೆನುತ್ತ ಭಾವಿಸ ।
ಲ್ಕಾಡದು ಬ್ರಹ್ಮವಿದ್ಯೆ ತುದಿ ♦ ಗೇರಿಸಿದಂಥ ಮಹಾನುಭಾವನೋಳ್ ॥

ಚ॥ಅಮಿತಸುಖಂಗ ಳೊಂದಿ ವಿಷ ♦ ಯಾನುಭವಂಗಳ ಭೋಗಿಯಾಗಿಯು ।
ತ್ತಮನಹ ಯೋಗಿ ಬ್ರಹ್ಮಮಯ ♦ ದಿಂ ಮನದೋಳ್ ಸುಖಿಪಂ ಸುಗೀತ ಮೇ ॥
ಳ್ಸಮರಸ ತಾಳನೃತ್ಯ ವಶ ♦ ನಾಗಿ ಶಿರಸ್ಥಿತ ಪೂರ್ಣಕುಂಭವಂ ।
ಸಮಧಿಕಯುಕ್ತಿಯಿಂ ನಿಲಿಸಿ ♦ ಕೊಳ್ಳುವ ನಾಟ್ಯಧುರೀಣ ರೀತಿಯೋಳ್ ॥

ಶಾ ॥ ಪ್ರಾರಬ್ಧಾಖಿಲಕರ್ಮಕಿ ರ್ಪನುಭವಂ ♦ ನಾನೊಂದೆ ತತ್ಸಾಕ್ಷಿಯಾ-।
ಗಾರೂಢಸ್ಥಿತಿ ಸರ್ವಮುಂ ಮರೆತು ಸ ♦ ರ್ವಾವಸ್ಥೆಯೋಳ್ ಚಿತ್ಸುಧಾ-॥
ಧಾರಾಪಾನ ಸುಖಾಪ್ತಿ ಸರ್ವಗತ ಶು ♦ ದ್ಧಬ್ರಹ್ಮ ನಾನೆಂದು ಶಂ-।
ಕಾರಾಹಿತ್ಯವ ಪೊಂದು ನೀ ಮದುವೆ ಮೋ ♦ ಕ್ಷ ಪ್ರಾಪ್ತಿ ಭೂಮೀಶ್ವರಾ ! ॥

ಸೀ ॥ ಆಸಕ್ತಿ ಯಿಡದೆ ಯ ♦ ತ್ನಾಯತ್ನ ದಿಂ ಘಟಿಸು-
ವನಿಷಿದ್ಧಸುಖಗಳನು ♦ ಭವಿಸು ನೀನು ;
ಪ್ರಾರಬ್ಧವಶದಿಂದ ♦ ಸಂಪದಾಪತ್ತುಗಳು
ಬರಲಿ ಕವುಗಳ ಸೆರೆ ♦ ನೆನೆಸಬೇಡ ;
ಕರ್ತನಾಗದೆ ಲೌ ♦ ಕ್ಯಗಳು ಶಾಸ್ತ್ರೀಯಂಗ-
ಳೆಂದೆನಿಸು ವುಚಿತ ಕಾ ♦ ರ್ಯಗಳ ಮಾಡು ;
ಆತ್ಮದೊಳಗದ್ವೈತ ♦ ಭಾವ ವೊಂದಿಯು ಹೊರಗೆ
ಕೃತ್ರಿಮ ದ್ವೈತದಾ ♦ ಕ್ರೀಡೆ ತೋರು ;

ಗೀ ॥ ಯತ್ನದಿಂ ದಜ್ಞಾನವನೆ ♦ ದೂರದೂಡು ।
ನಿಖಿಲ ಸಂಸಾರವನು ಮಿಥ್ಯೆ ♦ ಯೆಂದು ತಿಳಿಯ ॥
ಸಚ್ಚಿದಾನಂದ ವಿದು ಯುವ ♦ ಸ್ಥಾತ್ರಯೈಕ-।
ಸಾಕ್ಷಿ ನೀ ನೆಂದು ಭಾವಿಸು ♦ ಮೋಕ್ಷ ಮದುವೆ ॥

(ಕನ್ನಡ ಪರಿವರ್ತನೆ.



# ವಾಸನಾತ್ರಯಗಳು.

---

ಶ್ರುತಿ ॥ ದೃಢಭಾವನಯಾ ತ್ಯಕ್ತ ♦ ಪೂರ್ವಾಪರವಿಚಾರಣಂ ।
ಯದಾದಾನಂ ಪದಾರ್ಥಸ್ಯ ವಾಸನಾ ಸಾ ಪ್ರಕೀರ್ತಿತಾ ॥

(ಮುಕ್ತಿಕೋಪನಿಷತ್ತು, 57ನೇ ಶ್ಲೋಕ.

ಪ್ರಪಂಚಸೃಷ್ಟಿಕಾಲದಲ್ಲಿ ಪರಮೇಶ್ವರನು ಸಕಲ ರಾಶಿಗಳನ್ನೂ ಸೃಷ್ಟಿಮಾಡಿದನು. ಜೀವಿಗಳು ಆ ದಿನದವೊದಲು ಇಂದಿನವರಿವಿಗೂ ಲೆಕ್ಕವಿಲ್ಲದಷ್ಟು ಜನ್ಮಗಳನ್ನೆತ್ತಿ ಮಾಯಾಸಂಸಾರದಲ್ಲಿ ತಗಲಿಕೊಂಡ ದಡವನ್ನು ಕಾಣದೆ ಪ್ರತಿ ಜನ್ಮದಲ್ಲಿಯೂ ಪುಣ್ಯಪಾಪ ಕರ್ಮಗಳನ್ನು ಮಾಡುತ್ತ ಬರುವುದರಿಂದ, ಆ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಪುನಃಪುನಃ ಜನ್ಮಗಳನ್ನೆತ್ತುತ್ತ ಮಾಯಾಧೀನರಾಗುತ್ತಾರೆ. ಇಂತಹ ಸಂಸಾರವೆಂಬ ಮಾಯಾಸಮುದ್ರದಲ್ಲಿ ವಿಷಯಭೋಗಗಳನ್ನನುಭವಿ ಸುತ್ತ, ಮರಣಕಾಲದಲ್ಲಿ ಸಹ ಅವುಗಳನ್ನೇ ಸ್ಮರಿಸುತ್ತ ಪ್ರಾಣವನ್ನು ಬಿಡುತ್ತಿದ್ದಾರೆ. ಆದುದರಿಂದ ಅವುಗಳ ಫಲಗಳನ್ನು ಅನುಭವಿಸುವುದ ಕ್ಕಾಗಿಯೇ ಪುನಃಪುನಃ ಜನ್ಮವೆತ್ತುತ್ತಿದ್ದಾರೆ. ಇದಕ್ಕೇ 'ಪೂರ್ವವಾ ಸನೆಯೆಂಬ' ಹೆಸರು. ಈ ವಾಸನೆಗಳು ನಶಿಸುವವರಿವಿಗೂ ಜೀವಿಗಳು ಮೋಕ್ಷವನ್ನು ಹೊಂದಲಾರರು. ಈ ವಾಸನೆಗಳು ನಶಿಸುವುದಕ್ಕೆ ಮಾರ್ಗ ವೇನೆಂದರೆ :—

ಶ್ರುತಿ ॥ ಜನ್ಮಾಂತರಶತಾಭ್ಯಸ್ತಾ ♦ ಮಿಥ್ಯಾ ಸಂಸಾರವಾಸನಾ ।
ಸಾ ಚಿರಾಭ್ಯಾಸಯೋಗೇನ ♦ ವಿನಾ ನ ಕ್ಷೀಯತೇ ಕ್ವಚಿತ್ ॥

(ಮುಕ್ತಿಕೋಪನಿಷತ್ತು, ಶ್ಲೋಕ 14

ಜನ್ಮಜನ್ಮಗಳಿಂದ ಅನುಸರಿಸಿಬಂದ ಮಿಥ್ಯವಾದ ಮಾಯಾಸಂಸಾ ವಾಸನೆಯು, ಚಿರಕಾಲ ಯೋಗಾಭ್ಯಾಸಮಾಡುವುದರವಿನಹ, ಉಳಿದ ಯಾ ವಿಧವಾದ ಸಾಧನೆಗಳಿಂದಲೂ ಸ್ವಲ್ಪಮಟ್ಟಿಗೂ ನಶಿಸದು. ಮೋಕ್ಷಾ

ಲಾಷೆಯನ್ನುಳ್ಳ ಪ್ರತಿ ಮಾನವನೂ ಯೋಗಾಭ್ಯಾಸವನ್ನು ತಪ್ಪದೆ ಅನುಷ್ಠಾನ ಮಾಡಬೇಕು. ಇಲ್ಲವಾದರೆ ಸಂಸಾರವಾಸನೆಯು ನಾಶವನ್ನು ಹೊಂದದು. ಈ ಸಂಸಾರವಾಸನೆಯು ನಶಿಸದಿದ್ದಲ್ಲಿ ಪುನಃಪುನಃ ಜನ್ಮಗಳನ್ನೆತ್ತಬೇಕಾಗಿಯೇ ಬರುವುದು. ಆದರೆ ಕೆಲವು ಮಹರ್ಷಿಯರು ಯೋಗಾಭ್ಯಾಸವಿಲ್ಲದೆಯೇ ಮುಕ್ತಿಯನ್ನು ಹೊಂದಲಿಲ್ಲವೇ ? ಎಂದು ಸಂಶಯಪಡಬಹುದು. ಆದರೆ ಇದಕ್ಕೆ ಸಮಾಧಾನವುಂಟು. ಏನೆಂದರೆ ಇಂಥವರು, ಪೂರ್ವಜನ್ಮದಲ್ಲಿ ಯೋಗಸಿದ್ಧಿಯನ್ನು ಪಡೆದಿರಬೇಕು. ಆದುದರಿಂದ ಈ ಜನ್ಮದಲ್ಲಿ ಯೋಗಾಭ್ಯಾಸವಿಲ್ಲದೆಯೇ, ಅದಕ್ಕೆ ಮೇಲ್ಮಟ್ಟಲಾದ ಜ್ಞಾನಕ್ಕೆ ಅರ್ಹರಾಗಿ ಅದನ್ನು ಅನುಷ್ಠಾನಮಾಡಿ ಜ್ಞಾನಸಿದ್ಧಿಯನ್ನು ಪಡೆದು ಮುಕ್ತಿಯನ್ನು ಹೊಂದುತ್ತಿದ್ದಾರೆ. ಸಾಮಾನ್ಯ ಜನಗಳಿಗೆ ಹೀಗೆ ಎಂದಿಗೂ ನಡೆಯದು. ವಾಸನೆಗಳಲ್ಲಿ ಮೂರು ವಿಧಗಳುಂಟು. ಅವು ಯಾವುವೆಂದರೆ:—

ಶ್ರುತಿ ॥ ಲೋಕವಾಸನಯಾ ಜಂತೋಃ ♦ ಶಾಸ್ತ್ರವಾಸನಯಾಽಪಿ ಚ ।
ದೇಹವಾಸನಯಾ ಜ್ಞಾನಂ ♦ ಯಥಾವನ್ನೈವ ಜಾಯತೇ ॥

(ಮುಕ್ತಿಕೋಪನಿಷತ್ತು, ಶ್ಲೋಕ 2.)

ಅಂದರೆ ಲೋಕವಾಸನಾ, ಶಾಸ್ತ್ರವಾಸನಾ ಮತ್ತು ದೇಹವಾಸನಾ ಎಂದು ವಾಸನಾತ್ರಯಗಳುಂಟು. ಅವುಗಳಲ್ಲಿ,

1. **ಲೋಕವಾಸನಾ**:—ತಾನು ಮಾಡುವ ಒಳ್ಳೆಯ ಕೆಲಸಗಳನ್ನು ನೋಡಿ ಜನಗಳು ತನ್ನನ್ನು ಹೊಗಳಬೇಕೆಂಬ ಇಚ್ಛೆಯನ್ನು ಹೊಂದಿರುವುದು.

2. **ಶಾಸ್ತ್ರವಾಸನಾ**:—'ನಾನೇ ಸಮಸ್ತ ಶಾಸ್ತ್ರಗಳನ್ನೂ ಪರಿಶೀಲಿಸಿದವನು. ನನಗಿಂತ ಅಧಿಕರು ಮತ್ತಾರೂ ಇರರು.' ಎಂಬ ಗರ್ವವನ್ನು ಹೊಂದಿ ಇತರರೊಡನೆ ವ್ಯರ್ಥವಾಗಿ ವಾದಮಾಡುತ್ತಿರಬೇಕೆಂಬ ಇಚ್ಛೆಯನ್ನು ಹೊಂದಿರುವುದು.

**3. ದೇಹವಾಸನಾ :—** ವೈಷ್ಣವಮತಸ್ಥರು ವಿಷ್ಣುವು ಅಧಿಕನೆಂದೂ, ಶೈವರು ಶಿವನೇ ದೊಡ್ಡವನೆಂದೂ, ಶಾಕ್ತೇಯರು ಶಕ್ತಿದೇವತೆಯೆ ಸಮಸ್ತರಿಗಿಂತಲು ದೊಡ್ಡವಳೆಂದೂ, ಹೀಗೆ ಜನ್ಮವನ್ನೆತ್ತಿದ ಮತವನ್ನು ಕುರಿತು ಜನವು ವಾದವಿವಾದವನ್ನು ಮಾಡಬೇಕೆಂಬ ಅಪೇಕ್ಷೆಯಿಂದಿರುವುದು. ಇಂತಹ ಶಿವ ವಿಷ್ಣು ದೇವತೆಗಳನ್ನು ಕುರಿತು, ಉಪನಿಷತ್ತುಗಳು ಈ ಕೆಳಗೆ ಹೇಳುವ ರೀತಿಯಲ್ಲಿ ಉದ್ಘೋಷಿಸುತ್ತವೆ.

" ರಾಮ ಏವ ಪರಂ ಬ್ರಹ್ಮ " (ರಾಮರಹಸ್ಯೋಪನಿಷತ್ತು.)

" ಶಿವ ಏವ ಸ್ವಯಂ ಸಾಕ್ಷಾ ದಯಂ ಬ್ರಹ್ಮಾ " (ಮಹೋಪನಿಷತ್ತು.)

" ಯೋ ಹವೈ ನೃಸಿಹ್ಮೋ ದೇವೋ ಭಗವಾ಼ ಯಶ್ಚ ಬ್ರಹ್ಮಾ ಯಶ್ಚ ವಿಷ್ಣುಃ
ಯಶ್ಚ ಮಹೇಶ್ವರಃ " ‖ (ನೃಸಿಹ್ಮತಾಪಿನ್ಯುಪನಿಷತ್ತು.)

" ಯೋ ಹವೈ ರುದ್ರ ಸ್ಸ ಭಗವಾ಼ ಯಶ್ಚ ಬ್ರಹ್ಮಾ ಯಶ್ಚ ವಿಷ್ಣುಃ ಯಶ್ಚ ಮಹೇ-
ಶ್ವರಃ " ‖ (ಅಥರ್ವಶಿಖೋಪನಿಷತ್ತು.)

" ಶಿವಾಯ ವಿಷ್ಣುರೂಪಾಯ ♦ ಶಿವರೂಪಾಯ ವಿಷ್ಣವೇ ।
ಶಿವಶ್ಚ ಹೃದಯಂ ವಿಷ್ಣುಃ ♦ ವಿಷ್ಣೋಶ್ಚ ಹೃದಯಂ ಶಿವಃ " ‖
(ಸ್ಕಂದೋಪನಿಷತ್ತು.)

ಹೀಗಿರಲು, ಶಿವನಿಗೂ ವಿಷ್ಣುವಿಗೂ ಭೇದವೆಂಬುದೆಲ್ಲಿಯದು? ಇವರಿಬ್ಬರೂ ಪರಮಾತ್ಮಸ್ವರೂಪರೇ ಹೌದು. ಈ ಒಂದು ಪರಬ್ರಹ್ಮಸ್ವರೂಪವೇ ಆಯಾ ಸಮಯದಲ್ಲಿ ಶಿವನಾಗಿಯೂ, ವಿಷ್ಣುವಾಗಿಯೂ ಅವತರಿಸುತ್ತಿರುತ್ತಾನೆ. ಶಿವನ ಹೃದಯಕಮಲದಲ್ಲಿರುವವನೇ ವಿಷ್ಣುವಿನ ಹೃದಯಕಮಲದಲ್ಲಿರುವವನು. ಈ ವಿಷಯದಲ್ಲಿ ಶಂಕರಾಚಾರ್ಯರು ಗಂಗಾಸ್ತೋತ್ರ ಮಾಡುವ ಕಾಲದಲ್ಲಿ ಹೀಗೆಂದು ಹೇಳಿರುತ್ತಾರೆ.

ಶ್ಲೋ ‖ " ಮಾತ ರ್ಜಾಹ್ನವಿ ! ಶಂಭುಸಂಗಮಿಳಿತೇ ♦ ಮೌಳೌ ನಿಧಾ ಯಾಂಜಲಿಂ ।
ತ್ವತ್ತೀರೇ ವಸತೋ ಽವಸಾನಸಮಯೇ ♦ ನಾರಾಯಣಾಂಘ್ರಿದ್ವಯಂ ‖
ಸಾನಂದಂ ಸ್ಮರತೋ ಭವಿಷ್ಯತಿ ಮಮ ♦ ಪ್ರಾಣಪ್ರಯಾಣೋತ್ಸವೇ ।
ಭೂಯಾ ದ್ಭಕ್ತಿ ರವಿಚ್ಯುತಾ ' ಹರಿಹರೇ ' ♦ ತ್ವದ್ವೈತಾತ್ಮ ಕಾ ಶಾಶ್ವತೀ ‖

"ಅಮ್ಮಾ, ಗಂಗಾದೇವಿಯೇ! ನೀನು ಪರಮಾತ್ಮಸ್ವರೂಪಿಯಾದ ಮಹೇಶ್ವರನ ಸಂಗಸುಖವನ್ನನುಭವಿಸುತ್ತಿರುವವಳು. ಅಂಜಲಿಬದ್ಧನಾಗಿ ನಿನ್ನನ್ನು ನಾನು ಬೇಡಿಕೊಳ್ಳುವುದಿದೇ. ಏನೆಂದರೆ, ಮರಣ ಸಮಯದಲ್ಲಿ ನಿನ್ನ ದಡದಮೇಲೆ ವಾಸಮಾಡುತ್ತ, ಸದಾ ನಾರಾಯಣ ಧ್ಯಾನವನ್ನು ಮಾಡುತ್ತಿರುವ ನನಗೆ ವಿಷ್ಣು ಶಿವರಲ್ಲಿ ಭೇದವಿಲ್ಲದಿರುವ ಶಾಶ್ವತವಾದ ಭಕ್ತಿಯನ್ನು ದಯಪಾಲಿಸು"

ಇದೇ ವಿಷಯವನ್ನು ಕುರಿತು ಅಂದರೆ, ವಿಷ್ಣುಶಿವರಿಗಿರುವ ಅಭೇದ ಭಾವವನ್ನು ಕುರಿತು ಸೋಮನ ಕವಿಯು ಆಂಧ್ರಭಾಷೆಯಲ್ಲಿ ಹೇಳಿರುವ ಪದ್ಯಗಳನ್ನು ಕನ್ನಡಿಸಿ ಪಾಠಕರ ಅವಗಾಹನೆಗಾಗಿ ಈ ಕೆಳಗೆ ಕೊಟ್ಟಿದೆ.

ಸೀ ॥ ನಿನ್ನಲ್ಲಿ ಜನ್ಮಿಸಿತು ♦ ನಿನ್ನಲ್ಲಿ ಯೆಲ್ಲ ಲಯ-।
ವಾಯ್ತು ನೀ ನಾದಿಮ ♦ ಧ್ಯಾಂತನಾಗೆ ।
ನಾನೆ ನೀಂ ನೀನೆನಾ ♦ ನೆಂದು ವರ್ಣಿಪೆವು ನ ।
ಮ್ಮಿರ್ವರ ಶಬ್ದಾರ್ಥ ♦ ವೊಂದೆರೀತಿ ॥
ನಿನ್ನ ಪೆಸರುಗಳೆನಗೆ ♦ ನಿನಗೆನ್ನ ನಾಮಗಳು,
ನಿನಗೆ ಮಾಡಿದ ಪೂಜೆ ♦ ನನಗೆ ಪೂಜೆ ।
ನಿನ್ನ ನೊಲ್ಲದ ಜನರು ♦ ನನಗಹಿತ ರೆನಿಸುವರು,
ನಿನಗೆಲ್ಲಿ ವಾಸ ವೆನ ♦ ಗಲ್ಲಿ ನೆಲೆಯು ॥

ಗೀ ॥ ಮಾಡುವುದು ಮಾಡಿದುದು ಮಾಡಿ ♦ ಸುತ್ತಿರುವುದು ।
ಎಲ್ಲವುಂ ನೀನೆ ಶಿವ! ನಿನ ♦ ಗನಭಿಗಮ್ಯ-॥
ಮಾವುದಿಲ್ಲೈ ವೇದಗಳು ♦ ತಿಳಿಯುತಿಹವು ।
ನಿನ್ನನೇ ಸಾರುವುದು ನಿನ ♦ ಗೆನ್ನ ನತಿಯು ॥

'ಸರ್ವವೂ ನಿನ್ನಲ್ಲಿಯೇ ಉತ್ಪತ್ತಿಯಾಗಿ ನಿನ್ನಲ್ಲಿಯೇ ಅಡಗುವುವು. ನಿನಗೆ ತುದಿಮೊದಲು ನಡುಭಾಗವೆಂಬುವಿಲ್ಲ. ನೀನೇ ನಾನು, ನಾನೇ ನೀನು. ನಮ್ಮಿಬ್ಬರಿಗೂ ಯಾವ ವಿಧವಾದ ಭೇದವೂ ಇಲ್ಲ. ನಿನ್ನ ನಾಮಗಳೇ ನನ್ನವು; ನನ್ನ ಹೆಸರುಗಳೇ ನಿನ್ನವು. ನಿನಗೆ ಮಾಡುವ ಪೂಜೆಯು ನನಗೆ ಸಲ್ಲುತ್ತದೆ. ನಿನಗೆಲ್ಲಿ ವಾಸವೋ ನನಗಲ್ಲಿ ನೆಲೆ. ನೀನು ವೇದವೇದ್ಯನು. ನಾನು ಮಾಡುವ ನಮಸ್ಕಾರವು ನಿನಗೆ ಸೇರುತ್ತದೆ' ಎಂಬುದೇ ಮೇಲಿನ ಶ್ಲೋಕದ ತಾತ್ಪರ್ಯ.

ಇದರಂತೆಯೇ ಧರ್ಮರಾಜನೆಂಬಾತನು ಹರಿಹರಾಭೇದವ
ತೋರಿಸುವ ಸಲುವಾಗಿ 'ಶ್ರೀ ಹರಿಹರಾತ್ಮಕ ಸ್ತೋತ್ರ' ವೆಂಬುದ
ಬರೆದಿರುತ್ತಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿವೆ.

ಶ್ಲೋ ॥ ಗೋವಿಂದ ಮಾಧವ ಮುಕುಂದ ಮುರಾರೇ! ।
ಶಂಭೋ ಶಿವೇಶ ಶಶಿಶೇಖರ ಶೂಲಪಾಣೇ! ॥
ದಾಮೋದ ರಾಚ್ಯುತ ಜನಾರ್ದನ ವಾಸುದೇವ! ।
ತ್ಯಾಜ್ಯಾಭಟಾಯ ಇತಿ ಸಂತತ ಮಾಮನಂತಿ ॥

ಶ್ಲೋ ॥ ಮೃತ್ಯುಂಜ ಯೋಗ್ರ ವಿಷಮೇಕ್ಷಣ ಕಾಮಶತ್ರೋ! ।
ಶ್ರೀಕಾಂತ ಪೀತವಸನಾಂಬರ ನೀಲಶೌರೇ! ॥
ಈಶಾನ ಕೃತ್ತಿವಸನ ತ್ರಿದಶೈಕನಾಥ! ।
ತ್ಯಾಜ್ಯಾ ಭಟಾಯ ಇತಿ ಸಂತತ ಮಾಮನಂತಿ ॥

ಶ್ಲೋ ॥ ಶ್ರೀರಾಮ ರಾಘವ ರಮೇಶ್ವರ ರಾವಣಾರೇ! ।
ಭೂತೇಶ ಮನ್ಮಥರಿಪೋ ಪ್ರಮಥಾಧಿನಾಥ! ॥
ಚಾಣೂರಮರ್ದನ ಹೃಷೀಕಪತೇ ಮುರಾರೇ! ।
ತ್ಯಾಜ್ಯಾ ಭಟಾಯ ಇತಿ ಸಂತತ ಮಾಮನಂತಿ ॥

(ಸ್ಕಾಂದಪುರಾಣ, ಕಾಶೀಖಂ

ಲೋಕದಲ್ಲಿ ರಾಮನಾಮಸ್ಮರಣೆಯನ್ನು ವಿಶೇಷವಾಗಿ ಪ್ರತಿ
ಬ್ಬರೂ ಮಾಡುವರು. ಆ ರಾಮನಾಮದರ್ಥವೇನೆಂದರೆ 'ಯೋಗಿ
ಮನಾಂಸಿ ರಮತೀತಿ ರಾಮಃ' ಅಂದರೆ ಯೋಗಿಗಳ ಮನಸ್ಸನ್ನು ರವಿ
ವಂತೆ ಮಾಡುವವನೇ ರಾಮನು. ಇದೂ ಅಲ್ಲದೆ,

ಶ್ರುತಿ ॥ "ಆದ್ಯೋ **ರಾ** 'ತತ್ಪ' ದಾರ್ಥಸ್ಯಾತ್ ♦ ಮಕಾರ 'ಸ್ತ್ವಂ' ಪದಾರ್ಥವಾ
ತಯೋಸ್ಸಂಯೋಜನಮಸಿ ♦ ತ್ಯರ್ಥೇ ತತ್ವವಿದೋ ವಿದುಃ ॥

(ರಾಮರಹಸ್ಯೋಪನಿಷತ್ತು, ಶ್ಲೋಕ 1

'**ರಾ**' ಅಂದರೆ, 'ತತ್' ಪದಾರ್ಥವು; **ಮ** ಅಂದರೆ 'ತ್ವ
ಪದಾರ್ಥವು; 'ತತ್' ಅಂದರೆ ಪರಮಾತ್ಮ, 'ತ್ವಂ' ಅಂದರೆ ಜೀವಾ
ಆದುದರಿಂದ ಪರಮಾತ್ಮವೆಂಬ ಅರ್ಥವನ್ನು ಕೊಡುವ 'ರಾ' ಎಂಬ ಅ

ವನ್ನೂ, ಜೀವಾತ್ಮನೆಂಬ ಅರ್ಥವನ್ನು ಕೊಡುವ 'ಮ' ಎಂಬ ಅಕ್ಷರವನ್ನೂ ಸೇರಿಸಿದರೆ, ಪರಮಾತ್ಮ ಜೀವಾತ್ಮರ ಐಕ್ಯವನ್ನು ತೋರಿಸುವುದೇ ರಾಮ ಶಬ್ದಾರ್ಥದ ರಹಸ್ಯವು. 'ರಾಮಃ ಪರಾತ್ಮಾ ಪ್ರಕೃತೇ ರನಾದಿಃ ♦ ಆನಂದ ಏಕಃ ಪುರುಷೋತ್ತಮೋ ಹಿ' ಎಂಬ ಅಧ್ಯಾತ್ಮರಾಮಾಯಣ ದಲ್ಲಿನ ವಾಕ್ಯವು, ಮೇಲೆಹೇಳಿದ ಉಪನಿಷದ್ವಾಕ್ಯವನ್ನನುಸರಿಸಿ "ಜೀವಾತ್ಮಪರಮಾತ್ಮರೈಕ್ಯವನ್ನುಳ್ಳ ಪರಬ್ರಹ್ಮವಸ್ತುವೇ ರಾಮನೆಂದು ಕರೆಯಲ್ಪಡುವುದು' ಎಂದು ಹೇಳುತ್ತದೆ. ಸಮಸ್ತ ಜೀವಿಗಳಲ್ಲಿಯೂ ಈ ಪರಮಾತ್ಮನು ಸಾಕ್ಷಿಯಾಗಿರುವುದರಿಂದಲೇ, ಇವನಿಗೆ 'ಆತ್ಮಾರಾಮ' ನೆಂಬ ಹೆಸರು ಬಂದಿದೆ. ಇದು ಜ್ಞಾನಕಾಂಡದಲ್ಲಿ ಹೇಳಬೇಕಾದ ಅರ್ಥವು. ಆದರೆ ಕರ್ಮಕಾಂಡದಲ್ಲಿ 'ಶ್ರೀರಾಮನು ರಾವಣನನ್ನು ಸಂಹರಿಸಿ ಸೀತೆಯನ್ನು ಪಡೆದನು' ಎಂದು ಹೇಳುತ್ತದೆ. ಇದರ ರಹಸ್ಯಾರ್ಥವೇನೆಂದರೆ:—ಆತ್ಮನೇ ರಾಮನು, ಮನಸ್ಸೇ ಸೀತೆ. ಇದುವರಿವಿಗೂ ಈ ಗ್ರಂಥದಲ್ಲಿ ವಿವರಿಸಲ್ಪಟ್ಟ ಕಾಮಕ್ರೋಧಾದಿ ದಶಗುಣಗಳೇ ಹತ್ತು ತಲೆಗಳುಳ್ಳ ರಾವಣನು. ಈ ಕಾಮಕ್ರೋಧಾದಿ ದಶಗುಣಗಳನ್ನು ಸಂಪೂರ್ಣವಾಗಿ ಜಯಿಸಿ ಮನಸ್ಸನ್ನು ಆತ್ಮಾರಾಮನಲ್ಲಿ ಸೇರಿಸುವುದೇ, ರಾಮಾಯಣದ ಅಂತರಾರ್ಥವೆಂದು ತಿಳಿಯಬೇಕು. ಪರಮಾತ್ಮಸ್ವರೂಪಿಯಾದ ಈ ರಾಮ ಭಕ್ತಿಯೆಂಥದೆಂದರೆ,

ಸೀ॥ ಸಂಸಾರದಾವಾಗ್ನಿ ♦ ಸಂತಪ್ತರಿಗೆ ಸುಧಾ—
ಸ್ತೋಮವರ್ಷ ನಿಯುಕ್ತಿ ♦ ರಾಮಭಕ್ತಿ ;
ತಾಪತ್ರಯಾಮಯದ ♦ ತಾಪಪೀಡಿತರಿಂಗೆ
ರಮ್ಯಭೇಷಜಯುಕ್ತಿ ♦ ರಾಮಭಕ್ತಿ ;
ಪಂಚಮಹಾಪಾಪ ♦ ಪಟಲಸರ್ಪಂಗಳಿಗೆ
ರಚಿತ ಗಾರುಡಶಕ್ತಿ ♦ ರಾಮಭಕ್ತಿ ;
ಭವವಿಪದ್ವಾರಾಶಿ ♦ ಸಾಪಭೀತರಿಗೆಲ್ಲ
ಪ್ರಬಲತರೀ ಯುಕ್ತಿ ♦ ರಾಮಭಕ್ತಿ;

ಗೀ ॥ ಪ್ರೇಮಬೋಧಿತ ಗುರುಸೂಕ್ತಿ ♦ ರಾಮಭಕ್ತಿ;
ಕಾಮಿತಾತ್ಮ ಜನಾಸಕ್ತಿ ♦ ರಾಮಭಕ್ತಿ ;

ಶ್ರೀಮದುರುಸಂಪದನುರಕ್ತಿ ♦ ರಾಮಭಕ್ತಿ ;
ಸಾಮರಸ್ಯೋದಿತವಿಮುಕ್ತಿ ♦ ರಾಮಭಕ್ತಿ.

(ತೆಲುಗು) ಕಾ. ಪೆ. ಸೋಮಯಾಜಿ ಕವಿ.

**ಮೇಲೆ ಹೇಳಿದ ಪದ್ಯದ ತಾತ್ಪರ್ಯ:—**ಶ್ರೀರಾಮಭಕ್ತಿಯು ಎಂತಹುದೆಂದರೆ, ಸಂಸಾರವೆಂಬ ದಾವಾಗ್ನಿಯಿಂದ ಸುಡಲ್ಪಡುತ್ತಿರುವವರಿಗೆ ಅಮೃತವರ್ಷವು. ದಾರೇಷಣ ಪುತ್ರೇಷಣ ಧನೇಷಣವೆಂಬ ಈಷಣತ್ರಯಗಳಿಂದ ಪೀಡಿತರಾದವರಿಗೆ ದಿವ್ಯೌಷಧಿಯು. ಪಂಚಮಹಾಪಾಪಗಳೆಂಬ ಸರ್ಪಗಳಿಗೆ ಗರುಡಮಣಿಯು, ಸಂಸಾರಸಮುದ್ರದಲ್ಲಿ ಭಯದಿಂದ ಮುಳುಗುತ್ತಿರುವವರಿಗೆ ನಾವೆಯು. ಇದು ಶಿಷ್ಯನ ವಿಷಯದಲ್ಲಿ ಪ್ರೇಮದಿಂದ ಹೇಳಿದ ಸದ್ಗುರುವಾಕ್ಯೋಪದೇಶವು. ಇದು ಕೋರುವವರ ಕೋರಿಕೆಯನ್ನು ಸಲ್ಲಿಸುವ ಕಲ್ಪವೃಕ್ಷ. ಇದು ಮೋಕ್ಷಲಕ್ಷ್ಮಿಯನ್ನು ಕೈವಶಮಾಡಿಕೊಳ್ಳುವ ಮಂತ್ರವು. ಇದು ಕಡೆಗೆ ಪರಮಾತ್ಮನಲ್ಲಿ ಸಾಯುಜ್ಯಸುಖವನ್ನು ಭಕ್ತರಿಗೆ ದಯಪಾಲಿಸುವಂಥದು. ಆದುದರಿಂದ,

ಶ್ಲೋ ॥ " ಆಪದಾ ಮಪಹರ್ತಾರಂ ♦ ದಾತಾರಂ ಸರ್ವಸಂಪದಾಂ ।
ಲೋಕಾಭಿರಾಮಂ ಶ್ರೀರಾಮಂ ♦ ಭೂಯೋ ಭೂಯೋ ನಮಾಮ್ಯಹಂ " ॥

ಎಂಬಂತೆ ಆಪತ್ತುಗಳನ್ನು ಹೋಗಲಾಡಿಸಿ, ಮುಕ್ತಿಸಂಪತ್ತನ್ನು ದಯಪಾಲಿಸುವ, ಶ್ರೀರಾಮನನ್ನು ಹಗಲೆಲ್ಲಾ ನಮಸ್ಕರಿಸಬೇಕು ಮತ್ತು ರಾಮಮಂತ್ರವನ್ನು ಜಪಿಸುತ್ತಿರಬೇಕು.

ಶ್ಲೋ ॥ ಶ್ರೀರಾಮ ರಾಮ ರಾಮೇತಿ ♦ ರಮೇ ರಾಮೇ ಮನೋರಮೇ ।
ಸಹಸ್ರ ನಾಮತ ಸ್ತುಲ್ಯಂ ♦ ರಾಮನಾಮ ! ವರಾನನೇ ! ॥

" ಓ ಪ್ರಾಣಕಾಂತೇ ! ಮಹಾ ಶ್ರೇಷ್ಠವಾದ 'ಶ್ರೀರಾಮ ! ರಾಮ ! ರಾಮ !' ಎಂಬ ರಾಮ ಮಂತ್ರವನ್ನು ಜಪಿಸುತ್ತಿರು. ಈ ನಾಮವು ಉಳಿದ ಸಹಸ್ರನಾಮಗಳಿಗೆ ಸಮವಾದದ್ದು ' ಎಂದು ಮಹೇಶ್ವರನು ಪಾರ್ವತಿಯನ್ನು ಕುರಿತು ರಾಮನಾಮದ ಮಹಿಮೆಯನ್ನು ಹೇಳಿರುತ್ತಾನೆ. ಏತಕ್ಕಾಗಿ ರಾಮನಾಮವನ್ನು ಜಪಿಸಬೇಕೆಂದರೆ,

" ಪುಂಖಾನುಪುಂಖ ವಿಷಯೇಕ್ಷಣ ತತ್ಪರೂಪಿಣಾಂ "

ಎಂಬಂತೆ ಪ್ರಪಂಚದಲ್ಲಿರುವ ಮಾನವರ ಮನಸ್ಸು, ಕ್ಷಣಮಾತ್ರವೂ ಒಂದೆಡೆ ನಿಲ್ಲದೆ, ಸದಾ ಯಾವುದೋ ಒಂದು ಕಾರ್ಯದಲ್ಲಿಯೇ ಓಡುತ್ತಿರುತ್ತದೆ. ಅಂತಹ ಚಂಚಲವಾದ ಮನಸ್ಸನ್ನು ರಾಮಧ್ಯಾನದಲ್ಲಿ ನಿಲಿಸಿದ್ದೇ ಆದರೆ, ಅದು ಆ ರಾಮಧ್ಯಾನದಲ್ಲಿಯೇ ಲೀನವಾಗುತ್ತದೆ. ಇದಕ್ಕೇ 'ಚಿತ್ತೈಕಾಗ್ರತೆ' ಎಂದು ಹೆಸರು. ಹೀಗೆ ಚಿತ್ತೈಕಾಗ್ರತೆಯಿಂದ ರಾಮಧ್ಯಾನವನ್ನು ಮಾಡಿದ್ದೇ ಆದರೆ, ಧ್ಯಾನಮಾಡುವವನು ತಾನೇ ಬ್ರಹ್ಮನಾಗುತ್ತಾನೆ. ಆದುದರಿಂದಲೇ ಮಾನವನು ರಾಮಮಂತ್ರವನ್ನು ಜಪಿಸಬೇಕೆಂದು ಪೂಜ್ಯರು ನಿರ್ಣೈಸಿರುತ್ತಾರೆ. ಈ ಪ್ರಕರಣದಲ್ಲಿ ಹೇಳಿರುವ ವಾಸನಾತ್ರಯಗಳನ್ನು ನಾಶಪಡಿಸಿ, ಮನಸ್ಸನ್ನು ನಾಶಮಾಡುವುದಕ್ಕಾಗಿಯೇ 'ಸೋಽಹಂ' ಮಂತ್ರ, 'ರಾಮ ತಾರಕ' ಮಂತ್ರ ಮೊದಲಾದುವುಗಳ ರಹಸ್ಯವನ್ನು ವಿಶದವಾಗಿ ತಿಳಿಯಪಡಿಸಿದೆ. ಮತ್ತು,

ಶ್ಲೋ॥ " ರಮಂತೇ ಯೋಗಿನೋಽನಂತೇ ♦ ನಿತ್ಯಾನಂದೇ ಚಿದಾತ್ಮನಿ ।
ಇತಿ ರಾಮಪದೇನಾಽಸೌ ♦ ಪರಂಬ್ರಹ್ಮಾಽಭಿಧೀಯತೇ ॥

ಶ್ಲೋ॥ ಚಿನ್ಮಯಸ್ಯಾಽದ್ವಿತೀಯಸ್ಯ ♦ ನಿಷ್ಕಳಸ್ಯಾಽಶರೀರಿಣಃ " ।
(ರಾಮತಾಪಿನ್ಯುಪನಿಷತ್ತು, ಶ್ಲೋ॥ 6-7.)

"ನಿತ್ಯಾನಂದಮಯವಾದ, ಚಿತ್ಸ್ವರೂಪವಾದ ನನ್ನ ಸ್ವರೂಪವನ್ನು, ಯೋಗಿಗಳು ಅವರವರ ಸ್ವರೂಪವು ಅಂದರೆ ಆತ್ಮಸ್ವರೂಪವೆಂದು ತಿಳಿದು, ಸದಾ ತಮ್ಮ ಅಂತರಂಗದಲ್ಲಿ ನನ್ನನ್ನು ಧ್ಯಾನಿಸಿ ಆನಂದದಿಂದ ಕ್ರೀಡಿಸುತ್ತಿರುವುದರಿಂದಲೇ ನನಗೆ 'ರಾಮ' ನೆಂಬ ಹೆಸರು ಬಂದಿದೆ. ನನ್ನ ಸ್ವರೂಪವನ್ನು ವಿಚಾರದಿಂದ ತಿಳಿದುಕೊಂಡಿದ್ದೇ ಆದರೆ ಮೋಕ್ಷವು ಬಹು ಸುಲಭವಾಗಿ ದೊರಕುವುದು. ಈ ಮಾತು ಸತ್ಯ." ಎಂದು ಪರಮಾತ್ಮನೇ ಉಪನಿಷದ್ವಾಕ್ಯ ಮುಖದಿಂದ ಹೇಳಿರುತ್ತಾನೆ.

ಈ ಮುಂದೆ ಪರಬ್ರಹ್ಮನಿಗೂ ಮತ್ತು ವಿಗ್ರಹದಲ್ಲಿ ಆವಾಹಿಸಲ್ಪಡುವ ದೇವತೆಗಳಿಗೂ ಇರುವ ವ್ಯತ್ಯಾಸವನ್ನು ಕುರಿತು ಹೇಳಲಾಗಿದೆ.

ಹಿಂದೆ 240ನೇ ಪುಟದಲ್ಲಿ "ಯಂಶೈವಾ ಸ್ಸಮುಪಾಸತೇ ಶಿವ ಇತಿ * * * * ತ್ರೈಲೋಕ್ಯನಾಥೋ ಹರಿಃ" ಎಂಬ ಶ್ಲೋಕದಲ್ಲಿ ವಿವರಿಸಿರುವಂತೆ, ಪರಮಾತ್ಮನು ಒಬ್ಬನೇ ಆದರೂ, ಹಿಂದೂಗಳಿಗೆ ಶಿವಕೇಶವಾದಿ ನಾಮಗಳಿಂದಲೂ, ಮಹಮ್ಮದೀಯರಿಗೆ 'ಅಲ್ಲಾ, ಖುದಾ' ಎಂಬ ಹೆಸರುಗಳಿಂದಲೂ ಕ್ರೈಸ್ತರಿಗೆ 'ಯೇಸುಕ್ರಿಸ್ತ' ಎಂಬ ಹೆಸರಿನಿಂದಲೂ ಆತನು ಬೇರೆಬೇರೆ ಅವತಾರಗಳನ್ನೆತ್ತಿ ನೋಡಿಸುತ್ತಿದ್ದಾನೆ. ಆದುದರಿಂದ ಯಾವ ಮನುಷ್ಯನೇ ಆಗಲಿ, ತನಗೆ ಇಷ್ಟವಾದ ದೇವತಾಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿ, ತದೇಕಧ್ಯಾನದಲ್ಲಿದ್ದದ್ದೇ ಆದರೆ, ಪರಮಾತ್ಮನು ಅವನಿಗೆ ಇಷ್ಟವಾದ ರೂಪದಿಂದಲೇ ಪ್ರತ್ಯಕ್ಷನಾಗುತ್ತಾನೆ. ಇದಕ್ಕೆ ಶ್ರೀ ಭಗವದ್ಗೀತೆ ಅಧ್ಯಾಯ 4 ಶ್ಲೋಕ 11 ಪ್ರಮಾಣವು.

ಶ್ಲೋ ॥ ಯೇ ಯಥಾ ಮಾಂ ಪ್ರಪದ್ಯಂತೇ ♦ ತಾಂ ಸ್ತಥೈವ ಭಜಾಮ್ಯಹಂ ।
ಮಮ ವರ್ತ್ಮಾನುವರ್ತಂತೇ ♦ ಮನುಷ್ಯಾಃ ಪಾರ್ಥ ! ಸರ್ವಶಃ ॥

ಕೃಷ್ಣ :—ಅರ್ಜುನಾ ! ಮನುಷ್ಯರು ನನ್ನ ನಿಜಸ್ವರೂಪವನ್ನು ತಿಳಿಯಲಾರರು. ನಾನು ಆಯಾಯಾ ಕಾಲದಲ್ಲಿ ಎತ್ತುತ್ತಿರುವ, ಆಯಾಯಾ ಅವತಾರಸ್ವರೂಪವೇ ನನ್ನ ನಿಜಸ್ವರೂಪವೆಂದು ಮನಸ್ಸಿನಲ್ಲಿ ಭಾವಿಸುತ್ತಾರೆ. ಆದರೆ ನಾನು ನಿರಾಕಾರನೆಂದು ಅವರು ತಿಳಿದುಕೊಳ್ಳಲಾರದೆ ರಾಮಕೃಷ್ಣಾದ್ಯವತಾರಗಳೇ ನನ್ನ ನಿಜಸ್ವರೂಪಗಳೆಂದು ತಿಳಿದು, ಅವರು ಯಾವಯಾವ ಫಲಗಳನ್ನು ಕೋರುತ್ತಾರೆಯೋ, ಅವುಗಳನ್ನು ಅವರಿಗೆ ಕೊಡುತ್ತಿದ್ದೇನೆ. ಇದೂ ಅಲ್ಲದೆ ಮತ್ತೆ ಕೆಲವರು ಕ್ಷುದ್ರದೇವತೆಗಳನ್ನೇ ನನ್ನ ಸ್ವರೂಪವೆಂದೆಣಿಸಿ ನನ್ನನ್ನಾರಾಧಿಸುತ್ತಾರೆ. ಅಂಥವರಿಗೂ ಅವರ ಮನಸ್ಸಿನ ಇಷ್ಟಕ್ಕೆ ತಕ್ಕಂತೆ ಫಲಗಳನ್ನು ಕೊಡುತ್ತಿದ್ದೇನೆ. ಪರಲೋಕದಲ್ಲಿಯೂ ಈ ಲೋಕದಲ್ಲಿಯೂ ಬ್ರಹ್ಮ ಮೊದಲು ಇರುವೆಯುವರಿವಿಗೂ ಇರುವ ಚರಾಚರ ವಸ್ತುಗಳೆಲ್ಲವೂ ನನ್ನ ಸ್ವರೂಪಗಳೇ ಹೌದು. ಅಂದರೆ ಅವುಗಳಲ್ಲೆಲ್ಲವೂ ನಾನು ವ್ಯಾಪಿಸಿ ನನ್ನ ಸ್ವರೂಪವನ್ನು ಬೇರೆಬೇರೆ ವಿಧದಲ್ಲಿ ವ್ಯಕ್ತಪಡಿಸುತ್ತಿರುತ್ತೇನೆ.

ಶ್ಲೋ ॥ ಆಕಾಶಾತ್ ಪತಿತಂ ತೋಯಂ ♦ ಯಥಾ ಗಚ್ಛತಿ ಸಾಗರಂ ।
ಸರ್ವದೇವನಮಸ್ಕಾರಃ ♦ ಕೇಶವಂ ಪ್ರತಿಗಚ್ಛತಿ ॥ (ಉಪನಿಷದ್ವಾಕ್ಯ.)

ಎಂಬಂತೆ ಅಂತರಿಕ್ಷದಿಂದ ವೃಷ್ಟಿರೂಪವಾಗಿ ಭೂಮಿಯಮೇಲೆ ಬಿದ್ದ ನೀರೆಲ್ಲವೂ ಯಾವ ರೀತಿಯಲ್ಲಿ ಸಮುದ್ರವನ್ನು ಸೇರುತ್ತದೆಯೋ, ಅದೇ ರೀತಿಯಲ್ಲಿ ಜೀವಿಗಳು ತಾವು ತಮ್ಮತಮ್ಮ ಇಷ್ಟದೇವತೆಗಳಿಗೆ ಮಾಡುವ ನಮಸ್ಕಾರಗಳೆಲ್ಲವೂ ಪರಮಾತ್ಮಸ್ವರೂಪಿಯಾದ ನನ್ನನ್ನೇ ಸೇರುತ್ತವೆ. ಹೀಗೆ ಅವರು ಭಕ್ತಿಶ್ರದ್ಧೆಗಳಿಂದ ಆರಾಧಿಸುತ್ತಿದ್ದರೆ, ಅವರ ಇಷ್ಟಾರ್ಥಗಳನ್ನು ನಾನು ತಪ್ಪದೆ ಸಲ್ಲಿಸುತ್ತೇನೆ.

ಶ್ರುತಿ ॥ " ತಸ್ಮಾತ್ಸಾಕಾರ ಮನಿತ್ಯಂ ನಿತ್ಯಂ ನಿರಾಕಾರಮಿತಿ " ॥
(ಮಹಾ ನಾರಾಯಣೋಪನಿಷತ್ತು.)

ನಿರಾಕಾರನಾದ ನನಗೆ ವಿಗ್ರಹರೂಪಗಳು ನಿತ್ಯವಾದವುಗಳಲ್ಲ. ಜ್ಯೋತಿಸ್ವರೂಪನಾದ ನನಗೆ ಆಕಾರವೆಲ್ಲಿಯದು? ಅವರವರ ಮನಸ್ಸಿಗೆ ತಕ್ಕಂತೆ ಮಾಡಿದ ವಿಗ್ರಹಗಳ ಆಕಾರಗಳು ಪ್ರಳಯಕಾಲದಲ್ಲಿ ನಶಿಸುವುವು. ಆದರೆ ನನ್ನ ಸ್ವರೂಪಕ್ಕೆ ಚ್ಯುತಿಯೇ ಇಲ್ಲ. ಪ್ರಳಯಕಾಲದಲ್ಲಿ ಉಕ್ಕುವ ಸಮುದ್ರಜಲವೆಲ್ಲವೂ ಆಕಾಶಸ್ವರೂಪನಾದ ನನ್ನಲ್ಲಿಯೇ ಐಕ್ಯವಾಗುವುದು. ಆದುದರಿಂದ, ನಿರ್ಗುಣವಾದ ನಿರಾಕಾರವೇ ನನ್ನ ಸ್ವರೂಪವೆಂದು ತಿಳಿಯುವುದೇ ಜ್ಞಾನಿಗಳ ಲಕ್ಷಣ.

ಶ್ರುತಿ ॥ ಯತ್ರ ನಾಽನ್ಯತ್ಪಶ್ಯತಿ ನಾಽನ್ಯತ್ ಶೃಣೋತಿ ನಾಽನ್ಯ ದ್ವಿಜಾನಾತಿ ಸ
ಭೂಮಾ ♦ ಅಥ ಯತ್ರಾಽನ್ಯತ್ ಪಶ್ಯತಿ ಅನ್ಯತ್ ಶೃಣೋತಿ ಅನ್ಯ ದ್ವಿಜಾ-
ನಾತಿ ತದಲ್ಪಂ " ♦ ॥

"ಯೋ ವೈ ಭೂಮಾ ತದಮೃತ ಮಥ ಯದಲ್ಪಂ ತನ್ಮರ್ತ್ಯಂ ಸ ಭಗವಃ " ♦ ॥
(ಛಾಂದಾಗ್ಯೋಪನಿಷತ್ತು, 24ನೇ ಖಂಡ.)

" ಸಂಪೂರ್ಣ ಮನ್ಯತ್ ನ್ಯೂನ ಮನ್ಯತ್ ಸ್ಥಾನಂ ♦ " ॥
(ಬೃಹದಾರಣ್ಯಕೋಪನಿಷತ್ತು.)

ಎಂಬ ಶ್ರುತಿವಾಕ್ಯಗಳಂತೆ, ನಿರಾಕಾರವಾದ ನನ್ನ ನಿಜಸ್ವರೂಪ ಖಂಡಗಳಾಗಿಲ್ಲದೆ ಅಖಂಡಸ್ವರೂಪವಾದುದು, ಅಂದರೆ ಈ ಬ್ರಹ್ಮಾಂಡ ಹೊರಗೂ ಒಳಗೂ ತುಂಬಿ ತುಳುಕಾಡುತ್ತಿರುವಂಥದು. ಹಾಗಲ್ಲ ಸಾಕಾರವಾದ ವಿಗ್ರಹಾದಿಗಳು ಕೆಲವು ಕಾಲದಲ್ಲಿಯೇ ನಾಶವನ್ನು ಹೊಂದ ವವುಗಳು.

ಶ್ರುತಿ ॥ " ಯೋ ವೈ ಭೂಮಾ ತತ್ಸುಖಂ ನಾಽಲ್ಪೇ ಸುಖ ಮಸ್ತಿ ♦ ಭೂಮೈವ
ಸುಖಂ ಭೂಮಾತ್ವೇವ ವಿಜಿಜ್ಞಾಸಿತವ್ಯ ಇತಿ ♦ " ॥

(ಛಾಂದಾಗ್ಯೋಪನಿಷತ್ತು, 23ನೇ ಖಂಡ.

ಮುಮುಕ್ಷುವಾದವನು, ವಿಗ್ರಹಾರಾಧನೆಯನ್ನು ಮಾಡದೆಯೇ, ನನ್ನ ನಿಜಸ್ವರೂಪವನ್ನು ಅಂದರೆ ನನ್ನನ್ನು ನಿರಾಕಾರನೆಂದು ಮನಸ್ಸಿನಲ್ಲಿ ಭಾವಿಸಿ ನಿಶ್ಚಲಭಕ್ತಿಯಿಂದ ನನ್ನಲ್ಲಿ ಅವನ ಮನಸ್ಸನ್ನು ಲೀನಮಾಡಿದ್ದ ಆದರೆ, ಅವನೇ ನಾನಾಗಿ ನಾನೇ ಅವನಾಗಿ ಏಕವಾಗಿ ಹೋಗುತ್ತೇವೆ ಇದೇ ಸಾಯುಜ್ಯವು. ಈ ಸಾಯುಜ್ಯವೇ ವೇದಗಳ ತತ್ವಾರ್ಥದ ಫಲ ಈ ಕೆಳಗಿನ ಶ್ರುತಿಪ್ರಮಾಣವು ಹಿಂದೆಯೇ ಹೇಳಿದೆ.

ಶ್ರುತಿ ॥ ಯಸ್ಯ ವಾಙ್ಮನಸೀ ಶುದ್ಧೇ ♦ ಸಮ್ಯ ಗುಪ್ತೇ ಚ ಸರ್ವದಾ ।
ಸ ವೈ ಸರ್ವ ಮವಾಪ್ನೋತಿ ♦ ವೇದಾಂತೋಪಗತಂ ಫಲಂ ॥

(ನಾರದಪರಿವ್ರಾಜಕೋಪನಿಷತ್ತು, ಶ್ಲೋಕ 39.

ಯಾವನ ಇಂದ್ರಿಯಗಳು ಅವನ ಇಷ್ಟಾನುಸಾರವಾಗಿ ಹೋಗ ನಿಂತು, ಮಾತಾಡುವುದು ಬಯಸುವುದು ಮೊದಲಾದವು ಉಡುಗಿ, ಮನಸ್ಸ ಹೊರಗಿನ ವ್ಯಾಪಾರದಲ್ಲಿ ಪ್ರವೇಶಿಸದೆ ನಿಂತು ಮೌನವಾಗಿ ಯಾವ ಗಿರುತ್ತದೆಯೋ, ಅವನೇ ವೇದಾಂತದಲ್ಲಿ ಹೇಳಿದ ಆತ್ಮಾನುಭವವನ್ನು ಹೊಂದುವವನಾಗುತ್ತಾನೆಂದು ತಿಳಿಯಬೇಕು. ಇಂತಹ ಮಹಾ ರಹಸ ವಾದ ಪರಮಾತ್ಮಸ್ವರೂಪವನ್ನು ತಿಳಿದುಕೊಳ್ಳದೆ ಶೈವರು, ವೈಷ್ಣವರು ಮೊದಲಾದವರು ಒಬ್ಬರಿಗೊಬ್ಬರು ಭೇದಭಾವಗಳಿಂದ ಶುಷ್ಕವಾದವನ್ನು ಮಾಡುತ್ತ ಕಂಠಶೋಷಣೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಇಂಥವರ

ಉಪನಿಷದ್ವಾಕ್ಯಗಳ ರಹಸ್ಯವನ್ನು ತಿಳಿದುಕೊಳ್ಳದಿರುವ ಮೂಢರೆಂದೆನಿಸು ತ್ತಾರೆ.

ದೇಹವು ಶುಷ್ಕವಾಗದೆಯೂ, ತಲೆಕೂದಲು ಬೆಳ್ಳಗಾಗದೆಯೂ, ಯಾವ ವಿಧವಾದ ರೋಗಗಳು ದೇಹಕ್ಕೆ ಉಂಟಾಗದಂತೆಯೂ ಇರಬೇಕೆಂದು ಯೋಚಿಸಿ ಬೆಟ್ಟಗಳಲ್ಲಿರುವ ಮೂಲಿಕೆಗಳಿಂದ ಶರೀರವನ್ನು ಸ್ಥಿರವಾಗಿ ನಿಲ್ಲಿಸಿಕೊಳ್ಳಬೇಕೆಂಬ ಆಸೆಯೇ ದೇಹವಾಸನೆಯೆಂದೆನಿಸುವುದು. ಇಂತಹ ದೇಹವಾಸನೆಯಿರುವವರಿಗೂ ಆತ್ಮಜ್ಞಾನವನ್ನು ಹೊಂದಲು ಸಾಧ್ಯವಿಲ್ಲ. ಮೇಲೆ ಹೇಳಿದ ವಾಸನಾತ್ರಯಗಳು ಜ್ಞಾನಿಗಳಿಗೆ ಮಾತ್ರ ನಶಿಸುವುವೇ ಹೊರತು, ಉಳಿದವರಿಗೆ ನಶಿಸುವುದಿಲ್ಲ.

ಶ್ರುತಿ ॥ ನಾನಾಯೋನಿಶತಂ ಗತ್ವಾ ♦ ಶೇತೇऽಸೌ ವಾಸನಾವಶಾತ್ ॥

(ತ್ರಿಶಿಖಿ ಬ್ರಾಹ್ಮಣೋಪನಿಷತ್ತು.)

ಮೇಲೆ ಹೇಳಿದ ಮೂರು ಬಗೆಯ ವಾಸನೆಗಳಿಂದಲೇ ಅವರವರ ಕರ್ಮಾನುಸಾರವಾಗಿ ಅನೇಕ ವಿಧವಾದ ಯೋನಿಗಳಲ್ಲಿ ಹುಟ್ಟಿ ಆಯಾಯಾ ಕರ್ಮಫಲಗಳನ್ನು ಅನುಭವಿಸುತ್ತಿದ್ದಾರೆ.

ಶ್ರುತಿ ॥ ವಾಸನಾ ದ್ವಿವಿಧಾ ಪ್ರೋಕ್ತಾ ♦ ಶುದ್ಧಾ ಚ ಮಲಿನಾ ತಥಾ ।
ಮಲಿನಾ ಜನ್ಮಹೇತುಃ ಸ್ಯಾತ್ ♦ ಶುದ್ಧಾ ಜನ್ಮವಿನಾಶಿನೀ ॥

ಶ್ಲೋ ॥ ಅಜ್ಞಾನ ಸುಘನಾಕಾರಾ ♦ ಘನಾಹಂಕಾರಶಾಲಿನೀ ।
ಪುನರ್ಜನ್ಮಕರೀ ಪ್ರೋಕ್ತಾ ♦ ಮಲಿನಾ ವಾಸನಾ ಬುಧೈಃ ॥

(ಮುಕ್ತಿಕೋಪನಿಷತ್ತು, ಶ್ಲೋಕ 61–62.)

ವಾಸನೆಗಳಲ್ಲಿ ಶುದ್ಧವಾಸನೆಯೆಂದೂ ಮಲಿನವಾಸನೆಯೆಂದೂ ಎರಡು ಬಗೆ. ಅದರಲ್ಲಿ ಮಲಿನವಾಸನೆಯು ಜನ್ಮಕ್ಕೆ ಕಾರಣಭೂತವು, ಶುದ್ಧವು ಜನ್ಮವಿನಾಶಕ್ಕೆ ಕಾರಣವು ಎಂದು ಹೇಳಲ್ಪಟ್ಟಿದೆ. ಮಲಿನವಾಸನೆಯು ಮಹಾ ಅಜ್ಞಾನಾಕಾರವುಳ್ಳದ್ದಾಗಿಯೂ, ಅಪರಿಮಿತವಾದ ಅಹಂಕಾರದಿಂದ ಕೂಡಿದುದಾಗಿಯೂ, ಪುನರ್ಜನ್ಮವನ್ನು ತರುವುದಾಗಿಯೂ ಹೇಳಲ್ಪಟ್ಟಿದೆ.

ಶ್ರುತಿ ॥ ವಾಸನಾಂ ಸಂಪರಿತ್ಯಜ್ಯ ♦ ಮೋಕ್ಷಾರ್ಥಿತ್ವ ಮಪಿ ತ್ಯಜ ।
ಮಾನಸೀ ರ್ವಾಸನಾಃ ಪೂರ್ವಂ ♦ ತ್ಯಕ್ತ್ವಾ ವಿಷಯವಾಸನಾಃ ॥

ಶ್ಲೋ ॥ ಅಂತ ಶ್ಶಾಂತ ಸ್ಸಮಸ್ನೇಹೋ ♦ ಭವ ಚಿನ್ಮಾತ್ರವಾಸನಾಃ ।
ತಾಮಪ್ಯಥ ಪರಿತ್ಯಜ್ಯ ♦ ಮನೋಬುದ್ಧಿಸಮನ್ವಿತಾಂ ॥

ಶ್ಲೋ ॥ ಶೇಷಸ್ಥಿರಸಮಾಧಾನೋ ♦ ಮಯಿ ತ್ವಂ ಭವ ಮಾರುತೇ ।

ಶ್ಲೋ ॥ ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ ।
ತಥಾ ರಸಂ ನಿತ್ಯ ಮಗಂಧವಚ್ಚ ಯತ್ ॥ ಇತ್ಯಾದಿ ॥

(ಮುಕ್ತಿಕೋಪನಿಷತ್ತು, ಶ್ಲೋಕ 69-71-7

ಶ್ರೀರಾಮನು ಹನುಮಂತನನ್ನು ಕುರಿತು, ' ಓ ಮಾರುತಿ! ವಾ ಗಳನ್ನು ಮೊದಲು ತೊರೆದುಬಿಟ್ಟು, ಅನಂತರ ' ಮೋಕ್ಷಾರ್ಥಿತ್ವ' ಅಂ ಮುಕ್ತಿಯನ್ನು ಪಡೆಯಬೇಕೆಂಬ ಕೋರಿಕೆಯನ್ನು ಬಿಡು. ಮೊದ ವಿಷಯವಾಸನೆಗಳನ್ನೂ ಅನಂತರ ಮಾನಸಿಕವಾದ ವಾಸನೆಗಳನ್ನೂ ಬ ಬೇಕು. ಇದಾದಮೇಲೆ ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿ, ಸಮಸ್ನೆ ನಾಗಿ ಅಂದರೆ ಎಲ್ಲಾ ವಸ್ತುಗಳಲ್ಲಿಯೂ ಒಂದೇ ವಿಧವಾದ ಆಸಕ್ತಿ ನ್ನಿಟ್ಟು, ಚಿನ್ಮಾತ್ರವಾಸನೆಯನ್ನು ಮಟ್ಟಿಗೆ ಹೊಂದಿರು. ಅಂದರೆ ಮಾತ್ರವೇ ಸ್ಥಿರವೆಂದೂ ಉಳಿದ ಎಲ್ಲಾ ಪ್ರಾಪಂಚಿಕ ವಸ್ತುಗಳೆಲ್ಲ ಅಸ್ಥಿರವೆಂದೂ ಮನಸ್ಸಿನಲ್ಲಿ ತಿಳಿದು, ಸದಾ ಆ ಪರಮಾತ್ಮಧ್ಯಾನವನ ಮಾಡುತ್ತ, ಮನೋಬುದ್ಧಿ ವ್ಯಾಪಾರಗಳು ಯಾವುವೂ ಇಲ್ಲದಂತೆ ಮಾ ವವನಾಗಿ, ಹೀಗೆ ನಿಶ್ಚಲವಾದ ಮನಸ್ಸಿನಿಂದ ಪರಮಾತ್ಮಸ್ವರೂಪನ ನಿನ್ನ ಮನಸ್ಸನ್ನು ಲೀನಮಾಡಿದ್ದೇ ಆದರೆ, ನೀನು ಕೋರದಿದ್ದರೂ, ನಿ ಸಾಯುಜ್ಯಪದವಿಯು, ಅದಾಗಿಯೇ ಲಭಿಸುವುದು. ಹಿಂದೆ ವಿವ ದಂತೆ ನನ್ನ ಸ್ವರೂಪವು ಶಬ್ದ ಸ್ಪರ್ಶ ರೂಪ ರಸ ಗಂಧಾತ್ಮಕಗಳ ಪಾಂಚಭೌತಿಕಗಳಿಂದ ಮಾಡಲ್ಪಡದಿರುವ ನಿರ್ಗುಣ ನಿರಾಕಾರವಾದು ಈ ವಿಧವಾದ ನನ್ನ ಸ್ವರೂಪವನ್ನು ನೀನು ಮನಸ್ಸಿನಲ್ಲಿ ನೆನೆಯಬೇ ಹೊರತು, ನಿನ್ನ ಎದುರುಭಾಗದಲ್ಲಿ ಸಾಕಾರದಿಂದಿರುವ ಈ ' ರಾಮ' ನೆ ಹೆಸರುಳ್ಳ ಶರೀರವು ' ನಾನು ' ಅಲ್ಲ. ಎಂದು ತಿಳಿ.'' ಇದೂ ಅಲ್ಲ

" ಹೃದಯಂ ನಿರ್ಮಲಂ ಕೃತ್ವಾ ♦ ಚಿಂತಯಿತ್ವಾ ಽಪ್ಯನಾಮಯಂ ♦ ।
ಅಹ ಮೇವ ಪದಂ ಸರ್ವ ♦ ಮಿತಿ ಪಶ್ಯೇತ್ ಪರಂ ಸುಖಂ ॥

(ಪೈಂಗಳೋಪನಿಷತ್ತು, ಶ್ಲೋಕ 9.)

ಹೃದಯವನ್ನು ನಿರ್ಮಲವಾಗಿ ಮಾಡಿಕೊಂಡು, 'ನಾನೇ ಆ ಪರಬ್ರಹ್ಮನು; ಆ ಪರಬ್ರಹ್ಮನೇ ನಾನು,' ಎಂದು ಮನಸ್ಸಿನಲ್ಲೆಣಿಸಿ ಆ ಪರಬ್ರಹ್ಮನನ್ನೇ ಸದಾ ಜಪಿಸುತ್ತ ಬಂದರೆ, ವಾಸನಾತ್ರಯದಿಂದ ಬಿಡುಗಡೆ ಹೊಂದಿ ಪರಮಸುಖವನ್ನು ಹೊಂದುತ್ತಾನೆ. ಹೀಗೆ ವಾಸನಾತ್ರಯಗಳನ್ನು ಬಿಡದಿದ್ದ ಪಕ್ಷದಲ್ಲಿ ಪುನಃ ತಾಯಿಯ ಗರ್ಭದಲ್ಲಿ ಹುಟ್ಟಿ, ಆಯಾಯಾ ಕಾಲಗಳಲ್ಲಿ ಈ ಶರೀರಗಳನ್ನು ಬದಲಾಯಿಸುತ್ತ, ಕಡೆಯಲ್ಲಿ ಮುದಿತನವನ್ನು ಹೊಂದಿ ಮೃತಿಹೊಂದಬೇಕಾಗಿ ಬರುತ್ತದೆ. ಹೀಗೆ ಶರೀರವು ಆಯಾಯಾ ಕಾಲಗಳಲ್ಲಿ ವ್ಯತ್ಯಾಸ ಹೊಂದುತ್ತಿರುವುದಕ್ಕಾಗಿ ಶ್ರೀ ಭಗವದ್ಗೀತೆ, ಅಧ್ಯಾಯ 2, ಶ್ಲೋಕ 13, ಪ್ರಮಾಣಕ್ಕಾಗಿ ಈ ಕೆಳಗೆ ಕೊಟ್ಟಿದೆ.

ಶ್ಲೋ॥ ದೇಹಿನೋಽಸ್ಮಿನ್ ಯಥಾ ದೇಹೇ ♦ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿಃ ♦ ಧೀರ ಸ್ತತ್ರ ನ ಮುಹ್ಯತಿ ॥

ಕೃಷ್ಣ :—ಅರ್ಜುನಾ! ಮೊಟ್ಟಮೊದಲು ತಾಯಿಯ ಗರ್ಭದಿಂದ ಶಿಶುವಾಗಿ ಜನ್ಮಿಸಿದಮೇಲೆ, ಅದು ಕೊಂಚಕಾಲದ ವರಿವಿಗೆ ಏನೂ ತಿಳಿಯದಿರುವ ಶುದ್ಧ ಬ್ರಹ್ಮಸ್ವರೂಪವಾಗಿಯೇ ಇರುವುದು. ಹೀಗಿದ್ದು ಕೆಲವು ತಿಂಗಳುಗಳು ಕಳೆದಮೇಲೆ ಆ ಶಿಶುವು ಸ್ವಲ್ಪ ಬೆಳೆದು ನೆಲದಮೇಲೆ ಹರಿದಾಡುವುದಕ್ಕೆ ಪ್ರಾರಂಭಿಸಿ, ಮತ್ತಷ್ಟು ಬೆಳೆದ ಮೇಲೆ ಮೆಲ್ಲಮೆಲ್ಲಗೆ ತಪ್ಪು ಹೆಜ್ಜೆಗಳನ್ನಿಡುವುದಕ್ಕೆ ಮೊದಲುಮಾಡುತ್ತದೆ. ಇದಾದ ಕೆಲವು ತಿಂಗಳು ಕಳೆದಮೇಲೆ ತನ್ನ ಓರಗೆಯ ಮಕ್ಕಳೊಡನೆ ಕೂಡಿ ಆಡುವುದಕ್ಕಾರಂಭಿಸುತ್ತದೆ. ಹೀಗೆ ಬಾಲ್ಯದೆಸೆಯು ಕೆಲವು ವರ್ಷಗಳು ಕಳೆದನಂತರ ಆ ಹುಡುಗನು ಕೌಮಾರದೆಸೆಯನ್ನು ಹೊಂದಿ ವಿದ್ಯಾಭ್ಯಾಸ, ಆಟಪಾಟಗಳು ಮೊದಲಾದುವುಗಳಲ್ಲಿ ಆಸಕ್ತನಾಗಿ ಪುಣ್ಯಪಾಪ ವಿವೇಚನೆಯೇ ಇಲ್ಲದೆ ತಂದೆತಾಯಿಗಳ ಪೋಷಣೆಯಲ್ಲಿರುತ್ತಾನೆ. ಇದಾದ ಕೆಲವು ದಿನಗಳು

ಕಳೆದ ಬಳಿಕ, ಯೌವನದೆಸೆಯನ್ನು ಹೊಂದಿ, ಕಾಮಾಸಕ್ತನಾಗಿರುವು
ರಿಂದಲೇ ಹೂವು, ಗಂಧ, ತಾಂಬೂಲ ಹೆಂಗಸು ಮೊದಲಾದುವುಗಳ
ಹೆಚ್ಚು ಆಸಕ್ತಿಯನ್ನಿಟ್ಟು ವಿವಾಹಿತನಾಗಿ ಹೆಂಡತಿಯೊಡನೆ ರತಿಕ್ರೀಡೆ
ಳನ್ನಾಡುತ್ತ ಮಕ್ಕಳು ಮರಿಗಳನ್ನು ಪಡೆದು ಸಂಸಾರ ತಾಪತ್ರಯದ
ಕಾಲವನ್ನು ಕಳೆಯುತ್ತಾನೆ. ಇಹಲೋಕ ಪರಲೋಕ ಜ್ಞಾನವೆಂಬುದ
ಕಾಮಾಂಧನಾಗಿರುವ ಈ ಯುವಕನಿಗೆ ಇರುವುದಿಲ್ಲವಾಗಿ, ಪರಮಾ
ಧ್ಯಾನವೆಂಬುದೂ ಆದರಿಂದುಂಟಾಗುವ ತತ್ವಜ್ಞಾನವೆಂಬುದೂ ಎಲ್ಲಿಯು
ಇದಾದ ಕೆಲವು ದಿನಗಳು ಕಳೆದ ನಂತರ ನಡುಪ್ರಾಯವುಳ್ಳವನಾ
ಕಾಮೇಚ್ಛೆಯು ಕುಗ್ಗುತ್ತ ಬಂದು ಮಕ್ಕಳು ದೊಡ್ಡವರಾಗಿ ಸಂಸಾ
ತಾಪತ್ರಯದಲ್ಲಿ ಹೆಚ್ಚು ಮಗ್ನನಾಗುತ್ತಾನೆ. ಇನ್ನೂ ಕೆಲವು ವರ್ಷಗ
ಕಳೆದ ನಂತರ ಮುದಿತನವು ತಲೆದೋರುತ್ತದೆ. ಈ ದೆಸೆಯಲ್ಲಿ ಶರೀರ
ಅವಯವಗಳ ಪಟುತ್ವವು ಕಡಮೆಯಾಗುತ್ತ ಬಂದು ಅಂದರೆ ದೃಷ್ಟಿ
ಮಂಜು, ಕಿವಿಯಕಿವುಡು, ಕೈನಡುಗು, ಚರ್ಮದ ಸುಕ್ಕುಮೊದಲಾದುವು
ಳೆಲ್ಲಾ ಉಂಟಾಗುವುದಲ್ಲದೆ, ಹಲ್ಲುಬಿದ್ದು, ಕೂದಲು ನರೆತು, ಬುದ್ಧಿಯ
ಸಡಿಲುವುದಕ್ಕೆ ಪ್ರಾರಂಭವಾಗುತ್ತದೆ. ಬರುತ್ತ ಬರುತ್ತ ಸಂಚಾರ
ಕೂಡ ಅವಕಾಶವಿಲ್ಲದೆ, ಶಕ್ತಿಯುಡುಗಿಕೈಯಲ್ಲಿ ಕಟ್ಟಿಗೆಯನ್ನು ಊ
ಕೊಂಡು ಊಗಲಾಡುತ್ತ ನಡೆಯುತ್ತಾನೆ ಅಲ್ಲವೇ? ಹೀಗಾಗುವುದ
ಕಾರಣವೇನು?

ಶರೀರವು ಎಷ್ಟುಬಗೆಯಾದ ವ್ಯತ್ಯಾಸವನ್ನು ಹೊಂದುತ್ತದೆ ಎಂಬ
ದನ್ನು ತೋರಿಸುವ ಸಲುವಾಗಿ ಶಿಶು ಮೊದಲ್ಗೊಂಡು ಮುದಿತನದಿಂ
ಮರಣ ಪಡೆಯುವವರಿವಿಗೂ ಜೀವಿಯು ಯಾವ ಯಾವ ಅವಸ್ಥೆಯನ
ಯಾವ ಯಾವ ವಯಸ್ಸಿನಲ್ಲಿ ಪಡೆಯುತ್ತಾನೆಂಬುದನ್ನು ಒಂದು ಚಿ
ಪಠದ ಮೂಲಕವಾಗಿ ☞ ಇಗೋ ಈ ಮುಂಭಾಗದಲ್ಲಿ ಕಾಣಿಸಿ
ಈ ಚಿತ್ರಪಠದಲ್ಲಿ, ಚಕ್ರವನ್ನು ಹಿಡಿದುಕೊಂಡು ಓಡಿಸುತ್ತಿರುವ ಹುಡುಗ
ಪಾದದ ಕೆಳಗೆ ನಾಲ್ಕು ಚಕ್ರಗಳ ನೂಕುವ ಗಾಡಿಯಲ್ಲಿ ಮಲಗಿರುವ ಶಿ
ವನ್ನು ನೋಡಿರಿ. ಇದು 1ನೇ ಚಿತ್ರ. ಈ ಶಿಶುವು ಹಾಲನ್ನು ಕುಡಿ
ವೃದ್ಧಿಯಾದಮೇಲೆ ಕ್ರಮಕ್ರಮವಾಗಿ ಅನ್ನವನ್ನು ಭುಜಿಸುತ್ತ, ಹತ್

ವರ್ಷಗಳ ವಯಸ್ಸು ಬಂದಮೇಲೆ, ಆ ಬಾಲಕನು ಯಾವ ವ್ಯಸನವೂ ಇಲ್ಲದೆ ಮಹದಾನಂದದಿಂದ ಆಟಪಾಟಗಳಲ್ಲಿ ಕಾಲವನ್ನು ಕಳೆಯುತ್ತಿರುವುದು. ನಾಲ್ಕುಚಕ್ರವುಳ್ಳ ಗಾಡಿಯಲ್ಲಿ ಮಲಗಿರುವ ಮಗುವು ಹತ್ತು ವರ್ಷಗಳೊಳಗಾಗಿ ಕಬ್ಬಿಣದ ಚಕ್ರವನ್ನು ಕೋಲಿನಿಂದ ಹೊಡೆದುಕೊಂಡು ಓಡುತ್ತಿರುವುದನ್ನು 2ನೇ ಚಿತ್ರದಲ್ಲಿ ತೋರಿಸಿದೆ.

ಈ ಬಾಲನು ಇನ್ನು ತನಗೆ ಇಪ್ಪತ್ತು ವಯಸ್ಸು ಬಂದ ತಕ್ಷಣವೇ ಯೌವನವನ್ನು ಹೊಂದಿ, ಆ ದೆಸೆಗೆ ತಕ್ಕಂತೆ ಗುಣಗಳನ್ನೂ ಪಡೆದು, ಮೊದಲು ಆಡುತ್ತಿದ್ದ ಆಟಗಳಲ್ಲಿ ವಿರಕ್ತಿಯುಂಟಾಗಿ, ಅವನ ಮನಸ್ಸು ಕಾಮೋದ್ರೇಕವಾದ ವಸ್ತುಗಳಲ್ಲಿ ಅಂದರೆ ಸ್ರಕ್ಚಂದನ ವನಿತಾದಿಗಳಲ್ಲಿ ನಿಂತುಹೋಗುತ್ತದೆ. ಸ್ತ್ರೀ ಮೇಲಿನ ಮೋಹ ಮೊದಲಾದುವುಗಳನ್ನು ಸಫಲ ಮಾಡುವುದಕ್ಕಾಗಿ ಮದುವೆ ಮಾಡಿಕೊಂಡು ತನ್ನ ಕರ್ಮಫಲಕ್ಕೆ ಸರಿಯಾಗಿ ದೊರೆತ ಹೆಂಡತಿಯೊಡನೆ ರತಿ ಕ್ರೀಡೆ ಸಲ್ಲಾಪಗಳಲ್ಲಿ ಕಾಲವನ್ನು ಕಳೆಯುತ್ತಾನೆ. ಇದನ್ನು 3ನೇ ಚಿತ್ರದಲ್ಲಿ ತೋರಿಸಿದೆ.

ಹೀಗೆ ಮೋಹಾಂಧಕಾರದಲ್ಲಿ ಮುಳುಗಿದ್ದು ತನ್ನ ಮೂವತ್ತನೇ ಸಂವತ್ಸರದಿಂದ ಮಕ್ಕಳಾಗುವುದಕ್ಕೆ ಪ್ರಾರಂಭವಾಗಿ ತನ್ನ ಪ್ರೇಮದ ಹೆಂಡತಿಯಲ್ಲಿರುವ ಪ್ರೀತಿಯನ್ನು ಮಕ್ಕಳ ಕಡೆಗೆ ತಿರುಗಿಸಿ, ಆಕೆಯಲ್ಲಿ ಲೌಲ್ಯವನ್ನು ಕಡಮೆಮಾಡುತ್ತ ಬರುತ್ತಾನೆ. ಪತ್ನೀಪ್ರೇಮವನ್ನು ಪುತ್ರರಕಡೆಗೆ ತಿರುಗಿಸಿರುವ ವಿಷಯವನ್ನು 4ನೇ ಪಟವು ತೋರಿಸುತ್ತದೆ. ಹೀಗಿರುವಾಗ, ವಯಸ್ಸು ನಲವತ್ತು ವರ್ಷಗಳಾದಮೇಲೆ ಕುಟುಂಬ ವಿಷಯಗಳಲ್ಲಿ ಹೆಚ್ಚಾಗಿ ವ್ಯಾಕುಲವನ್ನು ಹೊಂದಿದವನಾಗಿ, ಹೆಂಡತಿ ಮಕ್ಕಳನ್ನು ಪೋಷಿಸುವುದಕ್ಕೆ ಶಕ್ತಿಸಾಲದೆ ದುಃಖಿಸುತ್ತ ಇರುವ ಸಮಯದಲ್ಲಿ, ತನ್ನ ಮಕ್ಕಳಿಗೆ ಯೌವನವು ಪ್ರಾಪ್ತವಾಗಿ ಅವರ ಸಂಪಾದನೆಯಿಂದ ತಾನು ಸುಖವನ್ನು ಪಡೆಯುತ್ತಿರುತ್ತಾನೆ. ಹೀಗೆ ಮಕ್ಕಳ ಸಂಪಾದನೆಯಲ್ಲಿ ತಾನು ಅನುಭವಿಸುತ್ತಿದ್ದ ಸುಖದುಃಖಗಳನ್ನು ಕುರಿತು ತನ್ನ ಐವತ್ತನೆಯ ವಯಸ್ಸಿನಲ್ಲಿ ಯೋಚನೆಯನ್ನು ಮಾಡುತ್ತಿದ್ದಾನೆ. ಇದನ್ನು 5ನೆಯ ಪಟವನ್ನು ನೋಡಿ ತಿಳಿದುಕೊಳ್ಳಬೇಕು.

ಹೀಗೆ ಸಂಸಾರದ ಸುಖದುಃಖಗಳನ್ನು ಕುರಿತು ಯೋಚಿಸುತ್ತಿರ ವಾಗ ಅರವತ್ತನೆಯ ವರ್ಷವು ಪ್ರಾರಂಭಿಸಿದ ತಕ್ಷಣವೇ ಶರೀರದ ಬಲ ತಗ್ಗುತ್ತ ಬಂದು, ಆ ವೊದಲು ಕೈಲಿ ಒಂದು ಊರುಕಟ್ಟಿಗೆಯನ್ನು ಹಿಡಿದ ಕೊಂಡು ತಿರುಗುವುದಕ್ಕೆ ಆರಂಭಿಸುವನು. ಅರವತ್ತನೆಯ ವಯಸ್ಸಿನಿಂ ತೊಂಭತ್ತನೇ ವಯಸ್ಸಿನವರಿವಿಗೂ ಆಗಾಗ ಶರೀರವು ಬದಲಾಯಿಸುತ್ತ ಯಾವಯಾವ ಅವಸ್ಥೆಯನ್ನು ಹೊಂದಿ ಊರಕಟ್ಟಿಗೆಯ ಸಹಾಯದಿಂ ಯಾವ ರೀತಿಯಲ್ಲಿ ಸಂಚಾರಗಳನ್ನು ಮಾಡುತ್ತಿರುವನೆಂಬುದೆಲ್ಲವೂ 6-7 8-9-10 ಈ ಚಿತ್ರಗಳಲ್ಲಿ ಕಾಣಿಸಿದೆ. ಇವುಗಳನ್ನು ಗಮನವಿಟ್ಟು ನೋಡಿ. ಕರ್ಮಫಲದಿಂದ ಆ ಜೀವಿಯು ನೂರು ವರ್ಷಗಳು ಜೀವಿ ಬೇಕಾಗಿದ್ದಲ್ಲಿ, ಶತಮಾನ ವಯಸ್ಸು ಸಮಾಪಿಸುತ್ತ ಬರಲು, ನಡೆಯಲ ಶಕ್ತಿಯಿಲ್ಲದೆ ತಲೆಯು ಬಗ್ಗಿಹೋಗಿ, ಇದ್ದ ಕಡೆಯಲ್ಲಿಯೇ ಇರುತ್ತಾನ ಕುರ್ಚಿಯಲ್ಲಿ ಕುಳಿತುಕೊಂಡಿರುವ ಈತನ ಚಿತ್ರವನ್ನು 11ನೇ ಚಿತ್ರಪ ದಲ್ಲಿ ತೋರಿಸಿದೆ.

ನಾಲ್ಕು ಚಕ್ರಗಳುಳ್ಳ ನೂಕುವ ಬಂಡಿಯಲ್ಲಿ ಮಲಗಿರುವ ಶಿಶುವಿ ಶರೀರವು ಎಷ್ಟು ವಿಧ ವ್ಯತ್ಯಾಸಗಳನ್ನು ಹೊಂದಿ ಕಡೆಯಲ್ಲಿ ತಲೆ ತಗ್ಗಿಹೋ ಶರೀರದ ಅಂಗಾಂಗಳ ಪಾಟವವೂ ಸಂಪೂರ್ಣವಾಗಿ ಹೊರಟುಹೋ ಅಸ್ಥಿ, ಚರ್ಮ ಮತ್ತು ಉಸಿರು ಈ ಮೂರು ಮಟ್ಟಿಗೆ ಇದ್ದು, ಜೀವಿಯ ಮರಣಕ್ಕೆ ಸಿದ್ಧವಾಗಿರುತ್ತಾನೆ ಈ ವಿಷಯವನ್ನು ಪ್ರತಿ ಮನುಷ್ಯನ ಮುಖ್ಯವಾಗಿ ಗಮನಿಸಿ, ತಾನು ಮುಂದಿನ ಜನ್ಮಕ್ಕೆ ಬೇಕಾದ ಒಳ್ಳೆ ಕಾರ್ಯಗಳನ್ನೇ ಮಾಡುತ್ತ ಬರಬೇಕು. ಅಂದರೆ ಎಂತಹ ಪಾಪಕಾರ್ಯ ಗಳನ್ನೂ ಮಾಡುವುದಕ್ಕೆ ಅವಕಾಶಕೊಡದೆ ಪುಣ್ಯಕಾರ್ಯಗಳನ್ನೇ ಮಾ ವುದಕ್ಕೆ ಮನಗೊಡಬೇಕು, ಎಂದಭಿಪ್ರಾಯವು.

ಅರ್ಜುನ :—ಓ ಸ್ವಾಮಿ ! ನೀವು ಹೇಳಿದ ವಿಷಯವು ನಿಶ್ಚಯವಾ ಹೌದು. ಆದರೆ ಶರೀರವು ಇಷ್ಟು ಬಗೆಯಾಗಿ ವ್ಯತ್ಯಾಸಗಳನ್ನು ಹೊಂ ವುದು ಮನುಷ್ಯನಿಗೆ ಮಾತ್ರವೇ ಅಲ್ಲ. ಪ್ರತಿ ಜೀವಿಗೂ ಈ ವಿ ವಾದ ಸ್ಥಿತಿಯು ಸಹಜವೇ ಆಗಿದೆ.

ಕೃಷ್ಣ :—ನಿನ್ನ ನುಡಿ ಸತ್ಯ. ದೇಹವು ಇಷ್ಟು ವಿಧವಾಗಿ ಬದಲಾವಣೆಯನ್ನು ಹೊಂದುವುದರಿಂದ ಇದಕ್ಕೆ 'ದೇಹಧರ್ಮ' ವೆಂದು ಹೇಳುತ್ತಾರೆ. ಆದರೆ ಇಂತಹ ದೇಹಧರ್ಮಗಳು ಆತ್ಮನಿಗಿಲ್ಲವು. ಯಾವನೇ ಆಗಲಿ ಮೃತಿಹೊಂದಿದ್ದೇ ಆದರೆ, 'ದೇಹಧರ್ಮವಾಯಿತು' ಎಂದು ಹೇಳುವ ಪದ್ಧತಿ. ಆತ್ಮನಿಗೆ ಬಾಲ್ಯ, ಕೌಮಾರ, ಯೌವನ, ಮುದಿತನ ಮೊದಲಾದ ಅವಸ್ಥೆಗಳೆಂಬುವಿಲ್ಲದೆ ಸದಾ ಒಂದೇ ವಿಧವಾಗಿ ಬೆಳಗುತ್ತಿರುತ್ತಾನೆ. ಆದುದರಿಂದ ಅರ್ಜುನಾ! ಭೀಷ್ಮಾದಿಗಳಾದ ನಿಮ್ಮ ಹಿರಿಯರನ್ನು ಕೊಲ್ಲಬೇಕಾಗುತ್ತದಲ್ಲಾ ಎಂದು ದುಃಖಪಡುವುದಕ್ಕೆ ಅವಕಾಶ ಕೊಡಬೇಡ. ಏಕೆಂದರೆ, ಜೀವಿಗಳು ತಮ್ಮ ಕರ್ಮಗಳಿಗೆ ತಕ್ಕಂತೆ ಈ ದಿನ ಯುದ್ಧದಲ್ಲಿ ಸತ್ತು ನಾಳೆಯದಿನ ನಿದ್ರೆಯಿಂದೆದ್ದವರಂತೆ ಹುಟ್ಟುವವರಾಗಿದ್ದಾರೆ. ಆದುದರಿಂದ ಇಂತಹ ಶರೀರವನ್ನು ಕುರಿತು ನೀನೇ ಆಗಲಿ ಮತ್ತಾರಾದರೂ ಆಗಲಿ ದುಃಖಿಸಬಾರದು. ಜ್ಞಾನಿಯಾದವನು ನಿನ್ನಂತೆ ಶರೀರನಾಶಕ್ಕಾಗಿ ಇಷ್ಟು ದುಃಖಿಸನು. ಆದುದರಿಂದ ಈ ಮನಃಕಳಂಕಗಳನ್ನೆಲ್ಲಾ ಬಿಟ್ಟು ಯುದ್ಧವನ್ನು ಮಾಡುವುದಕ್ಕೆ ಮನಸ್ಸು ಮಾಡು.

ಮನುಷ್ಯನು ತಾನು ಹುಟ್ಟಿದಂದಿನಿಂದ ಸಾಯುವವರಿವಿಗೂ ಯಾವ ಯಾವ ಅವಸ್ಥೆಯನ್ನು ಹೊಂದುವನು ಎಂಬ ವಿಷಯವನ್ನು ಕುರಿತು ಷೇಕ್ಸ್‌ಪಿಯರ್ ಎಂಬ ಆಂಗ್ಲಕವಿಯು ಈ ವಿಧವಾಗಿ ವರ್ಣಿಸಿರುತ್ತಾನೆ. ಆತನು ಇಲ್ಲಿ ಹೇಳಿರುವುದು ಏಳವಸ್ಥೆಗಳು. ಇದಕ್ಕೆ 'Seven Ages of Man' 'ಮಾನವನ ಏಳವಸ್ಥೆಗಳು' ಎಂದು ಹೆಸರು. ಇದನ್ನು 'AS YOU LIKE IT' ಎಂಬ ತನ್ನ ನಾಟಕದಲ್ಲಿ ಹೇಳಿರುತ್ತಾನೆ.

## 'Seven Ages of Man'

**All the world is a stage,**

And all the men and women merely players;
They have their exits and their entrances,
And one man in his time plays many parts,
His acts being 'Seven Ages', At first the infant,
Mewling and puking in the nurse's arms;

Then the whining school boy, with his satchel
And shining morning face, creeping like snail
Unwillingly to school. And then the lover,
Sighing like furnace, with a woeful ballad
Made to his mistress' eyebrow. Then a soldier,
Full of strange oaths, and bearded like the bard,
Jealous in honour, sudden, and quick in quarrel,
Seeking the bubble reputation,
Even in the Cannon's mouth. And then the Justice,
In fair round belly with good capon lined,
With eyes severe and beard of formal cut,
Full of wise saws and modern instances ;
And so he plays his part. The sixth age shifts
Into the lean and slippered pantaloon,
With spectacles on nose and pouch on side;
His youthful hose, well served, a world too wide
For his shrunk shank ; and his big manly voice,
Turning again toward childish treble, pipes
And whistles in his sound. Last scene of all,
That ends this strange eventual history,
Is second childishness and mere oblivion,
Sans teeth, sans eyes, sans taste, sans everything.

(As you like it, II act, 7th Scene.)

ಈರೀತಿಯಾದ ಅವಸ್ಥೆಗಳನ್ನು ಮನುಷ್ಯನು ಅನುಭವಿಸಬೇಕಾಗಿ ಬರುತ್ತದೆ. ಇದು ಪ್ರತಿಯೊಬ್ಬರ ಅನುಭವದಲ್ಲಿರುವ ವಿಷಯು. ಇವುಗಳು ಬಂಧಕಗಳನ್ನು ಉಂಟುಮಾಡುತ್ತವೆ. ಇಂತಹ ಬಂಧಕಗಳಲ್ಲಿ ತಗುಲಿಕೊಂಡು ಅಲ್ಲಾಡುತ್ತಿರುವ ವಿಷಯವನ್ನು ಕುರಿತು, ಶ್ರುತಿಪ್ರಮಾಣದಿಂದ 'ಬಂಧ ಮೋಕ್ಷಗಳ ವಿಷಯ' ವೆಂಬ ಮುಂದಿನ ಪ್ರಕರಣದಲ್ಲಿ ತಿಳಿಸಿದೆ.



# ಬಂಧಮೋಕ್ಷಗಳೆಂದರೇನು?

---

ಶ್ರುತಿ ॥ "ಅನಾದ್ಯವಿದ್ಯಾ ವಾಸನಯಾ ಜಾತೋಽಹ ಮಿತ್ಯಾದಿ ಸಂಕಲ್ಪೋ ಬಂಧಃ ♦ ಪಿತೃ ಮಾತೃ ಸಹೋದರ ದಾರಾಽಪತ್ಯ ಗೃಹಾಽಽರಾಮ ಕ್ಷೇತ್ರ ಮಮತಾ ಸಂಸಾರಾವರಣ ಸಂಕಲ್ಪೋ ಬಂಧಃ ♦ ಕರ್ತೃತ್ವಾದ್ಯಹಂಕಾರ ಸಂಕಲ್ಪೋ ಬಂಧಃ ♦ ಅಣಿಮಾದ್ಯಷ್ಟೈಶ್ವರ್ಯ ಆಶಾಸಿದ್ಧಸಂಕಲ್ಪೋ ಬಂಧಃ ♦ ದೇವಮನುಷ್ಯಾದಿ ಉಪಾಸನಾಕಾಮಸಂಕಲ್ಪೋ ಬಂಧಃ ♦ ಯಮಾದ್ಯಷ್ಟಾಂಗಯೋಗಸಂಕಲ್ಪೋ ಬಂಧಃ ♦ ವರ್ಣಾಶ್ರಮಧರ್ಮ ಕರ್ಮಸಂಕಲ್ಪೋ ಬಂಧಃ ♦ ಆಜ್ಞಾ ಭಯಸಂಶಯಾತ್ಮ ಗುಣಸಂಕಲ್ಪೋ ಬಂಧಃ ♦ ಯಜ್ಞ ವ್ರತತಪೋದಾನ ವಿಧಿವಿಧಾನಜ್ಞಾನಸಂಭವೋ ಬಂಧಃ ♦ ಕೇವಲ ಮೋಕ್ಷಾಪೇಕ್ಷಾಸಂಕಲ್ಪೋ ಬಂಧಃ ♦ ಸಂಕಲ್ಪಮಾತ್ರಸಂಭವೋ ಬಂಧಃ ♦ ॥ (ನಿರಾಲಂಬೋಪನಿಷತ್ತು.)

ಎಲ್ಲರ ಶರೀರಗಳಲ್ಲಿಯೂ ಸಾಕ್ಷಿಯಾಗಿ ನಿಂತಿರುವ ಆತ್ಮನೇ ತಾನೆಂದು ತಿಳಿದುಕೊಳ್ಳದೆ, ತಾಯಿತಂದೆಗಳು, ಹೆಂಡತಿಮಕ್ಕಳು, ಸಹೋದರರು, ಧನಧಾನ್ಯ ವಸ್ತುವಾಹನ ಹೊಲಗದ್ದೆ ಮೊದಲಾದುವುಗಳೆಲ್ಲವೂ ತನ್ನವೆಂದು ಭಾವಿಸಿ ಮೋಸಹೋಗುವುದೇ '**ಬಂಧ**'ವು. ಯಾವ ಸಂಬಂಧವೂ ಇಲ್ಲದಿರುವ ಆತ್ಮನಿಗೆ '**ನಾನು, ನನ್ನದು,**' ಎಂಬ ಅಹಂಕಾರ ಮಮಕಾರಗಳು ಉಂಟಾಗಿರುವುವಲ್ಲದೆ, ನನ್ನ ಮನೆಗೆ ನಾನೇ ಯಜಮಾನನಾಗಿದ್ದು ನನ್ನ ಹೆಂಡತಿಮಕ್ಕಳನ್ನು ನಾನೇ ಪೋಷಿಸುತ್ತಿದ್ದೇನೆಂಬ ಅಹಂಕಾರವನ್ನು ಹೊಂದಿರುವುದೇ '**ಬಂಧ**'ವು. ಜನನಮರಣಗಳಿಲ್ಲದ ಪರಿಶುದ್ಧಾತ್ಮನೇ ತಾನೆಂದು ತಿಳಿದುಕೊಳ್ಳದೆ ತನಗೆ ಹುಟ್ಟುಸಾವುಗಳಿವೆಯೆಂದು ತಿಳಿದು ಭಯಪಟ್ಟು, ಅಡವಿಯ ಮೂಲಿಕೆಗಳನ್ನು ಭುಜಿಸಿ, ಕಾಯಸಿದ್ಧಿಯನ್ನು ಹೊಂದಿ ಮರಣವುಂಟಾಗದಂತೆ ಇರಬೇಕೆಂಬ ಸಂಕಲ್ಪವೇ '**ಬಂಧ**'ವು. ಸತ್ಯಜ್ಞಾನಾನಂದಸ್ವರೂಪವಾದ ಪರಬ್ರಹ್ಮವೇ ತಾನೆಂದು ತಿಳಿಯದೆ, ಅನಾದಿಯಾಗಿ ಬರುತ್ತಿರುವ ಮಾಯೆಯೊಡಗೂಡಿರುವ ಜೀವಾತ್ಮನೇ ತಾನೆಂಬ ಸಂಕಲ್ಪವೇ '**ಬಂಧ**'ವು. ಯಾವ ನಾಮರೂಪ

ಗಳನ್ನೂ ಕುಲಗೋತ್ರಗಳನ್ನೂ ಹೊಂದದೆ, ಇರುವ ಪರಮಾತ್ಮನೇ ತಾನೆಂದು ತಿಳಿಯದೆ, ವರ್ಣಾಶ್ರಮಗಳು, ಕುಲಗೋತ್ರಗಳು ಇವೆಲ್ಲವೂ ತನ್ನ ಜನ್ಮಸಿದ್ಧವಾದ ಹಕ್ಕು ಎಂಬ ಸಂಕಲ್ಪವೇ '**ಬಂಧ**'ವು. ಎಲ್ಲಕ್ಕೂ ಆಧಾರವಾಗಿರುವ ಪರಬ್ರಹ್ಮನೇ ತಾನೆಂದು ತಿಳಿದುಕೊಳ್ಳದೆ ತನಗಿಂತಲೂ ಬೇರೆಯವರಾದ ಹರಿಹರಾದಿ ದೇವತೆಗಳಿರುವರೆಂದು ತಿಳಿದು, ಅವರನ್ನು ಧ್ಯಾನಿಸಿ, ಅವರಿಂದ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಬೇಕೆಂಬ ಸಂಕಲ್ಪವೇ '**ಬಂಧ**'ವು. ಯಾವ ಭಯವೂ ಇಲ್ಲದೆ ನಿರ್ಭಯನಾಗಿರುವ ತನಗೆ ಭಯವೂ ಸಂಶಯವೂ ಇವೆಯೆಂಬುವ ಸಂಕಲ್ಪವೇ '**ಬಂಧ**'ವು. ನಿತ್ಯನಾಗಿ, ನಿರ್ವಿಕಾರನಾಗಿ, ಕೇವಲ ಅದ್ವಿತೀಯನಾಗಿ ಮೆರೆಯುತ್ತಿರುವ ಪರಬ್ರಹ್ಮವೇ ತಾನೆಂದು ತಿಳಿದು, ಪ್ರಪಂಚ ವ್ಯವಹಾರಗಳೆಲ್ಲವನ್ನೂ ಮರೆತು, ತಾನು ಸಾಕ್ಷಿಮಾತ್ರನಾಗಿ ಆನಂದಿಸದೆ ತನಗಿಂತಲೂ ಬೇರೊಬ್ಬ ಬ್ರಹ್ಮನಿದ್ದಾನೆಂದು ಮನಸ್ಸಿನಲ್ಲೆಣಿಸಿ ಅಷ್ಟಾಂಗಯೋಗಗಳನ್ನನುಷ್ಠಾನಮಾಡಿ, ಭ್ರೂಮಧ್ಯದಲ್ಲಿ ದೃಷ್ಟಿಯನ್ನು ನಿಲ್ಲಿಸಿ, ಪಂಚಮುದ್ರೆಗಳನ್ನು ಅನುಷ್ಠಿಸಿ, ಅದರಿಂದುಂಟಾಗುವ ದಶವಿಧ ನಾದಗಳು, ಚಿತ್ಕಳೆಗಳು, ಆ ಚಿತ್ಕಳೆಗಳಲ್ಲಿರುವ ಮಂಡಲಗಳು ಮೊದಲಾದುವುಗಳನ್ನು ನೋಡುತ್ತ, ಅವುಗಳೇ ಬ್ರಹ್ಮವೆಂಬ ಸಂಕಲ್ಪವೇ '**ಬಂಧ**'ವು. ದೇಹಕ್ಕಿಂತಲೂ, ಇಂದ್ರಿಯಗಳಿಗಿಂತಲೂ ಬೇರೆಯಾದ ಪರಬ್ರಹ್ಮನೇ ತಾನೆಂದು ತಿಳಿದುಕೊಳ್ಳದೆ, ದೇಹೇಂದ್ರಿಯಗಳನ್ನುಳ್ಳ ಜೀವನೇ ತಾನೆಂದು ತಿಳಿದು ಮೋಕ್ಷವನ್ನು ಪಡೆಯಬೇಕೆಂಬ ಸಂಕಲ್ಪವೇ '**ಬಂಧ**'ವು. ಕರ್ಮಶೂನ್ಯನಾದ ಪರಬ್ರಹ್ಮನೇ ತಾನೆಂದು ತಿಳಿಯದೆ, ಜಪತಪಯಜ್ಞಯಾಗಾದಿಗಳನ್ನು ಕರ್ಮಕಾಂಡದಲ್ಲಿ ಹೇಳಿರುವಂತೆ ತಪ್ಪದೆ ನಡೆಸುತ್ತಿರಬೇಕೆಂಬ ಸಂಕಲ್ಪವೇ '**ಬಂಧ**'ವು. ಮಾಯೆಯಿಂದ ಕೂಡಿರುವ ಆತ್ಮವು, ತನಗೆ ಸಂಬಂಧವಿಲ್ಲದ ದೇಹೇಂದ್ರಿಯಗಳನ್ನು ತನ್ನದೇ ಎಂದು ತಿಳಿಯುವುದೇ '**ಬಂಧ**'ವು. ಈ ಮೇಲೆ ಹೇಳಿದವುಗಳೆಲ್ಲವೂ '**ಬಂಧ**'ಗಳೆಂದು ಕರೆಯಲ್ಪಡುವಂಥವುಗಳು.

ಮೋಕ್ಷವೆಂಬುದೆಂತಹುದೆಂದರೆ :—

ಶ್ರುತಿ ॥ " ಆತ್ಮಾಽನಾತ್ಮನೋ ದೇಹಾದಿರ್ಷ್ವೇಧ್ಯಸ್ಯಾತ್ಮತ್ವೇ ನಾಭಿಮನ್ಯತೇ ಸಾಭಿಮಾನಃ ಆತ್ಮನೋ ಬಂಧಃ ♦ ತನ್ನಿವೃತ್ತಿ **ರ್ಮೋಕ್ಷಃ** "

ಶ್ರುತಿ ॥ ನಿತ್ಯಾಽನಿತ್ಯವಸ್ತುವಿಚಾರಾ ದನಿತ್ಯಸಂಸಾರ ಸುಖದುಃಖವಿಷಯಸಮಸ್ತ ಕ್ಷೇತ್ರಮಮತಾದಿಬಂಧಕ್ಷಯೋ ' **ಮೋಕ್ಷಃ** ' ♦

(ನಿರಾಲಂಬೋಪನಿಷತ್ತು.)

ಮೇಲೆ ಹೇಳಿದ ಬಂಧಗಳಿಂದ ಬಿಡುಗಡೆಯೇ ' **ಮೋಕ್ಷ** 'ವು. ಕೆಲವು ದಿನಗಳಲ್ಲೇ ನಶಿಸಿಹೋಗುವಂಥ ಹೆಂಡತಿಮಕ್ಕಳು, ಹಣಕಾಸು, ಕಾಳುಕಡಿ, ಹೊಲತೋಟ, ಮನೆಮಠ, ವಸ್ತುವಾಹನ, ತಂದೆತಾಯಿ, ಅಣ್ಣತಮ್ಮ ಮೊದಲಾದುವುಗಳಲ್ಲಿರುವ ಆಸೆಗಳೆಲ್ಲವನ್ನೂ ತ್ಯಜಿಸಿ, ಸುಖ ದುಃಖಗಳು ಶರೀರಕ್ಕೇ ಹೊರತು ಆತ್ಮಸ್ವರೂಪನಾದ ನನಗಿಲ್ಲವು, ಎಂದು ಬ್ರಹ್ಮಜ್ಞಾನದಿಂದ ತಿಳಿದುಕೊಂಡು, ಆತ್ಮಸ್ವರೂಪಿಯಾದ ನಾನೇ ಬ್ರಹ್ಮ ನೆಂದು ಭಾವಿಸಿ, ಮತ್ತೆ ಕೋರಿಕೆಗಳೆಲ್ಲವನ್ನೂ ಮರೆತು, ಸದಾ ಬ್ರಹ್ಮಾ ನಂದದಲ್ಲಿ ಮುಳುಗಿರುವಿಕೆಯೇ ' **ಮೋಕ್ಷ** 'ವು.

ಶ್ರುತಿ ॥ ಯತ್ತು ಚಂಚಲತಾಹೀನಂ ♦ ತನ್ಮನೋಽಮೃತ ಮುಚ್ಯತೇ ।
ತದೇವ ಚ ತಪಶ್ಶಾಸ್ತ್ರ ♦ ಸಿದ್ಧಾಂತೇ ಮೋಕ್ಷ ಉಚ್ಯತೇ ॥

(ಮಹೋಪನಿಷತ್ತು ಶ್ಲೋ॥ 102.)

ಚಾಂಚಲ್ಯಹೀನವಾದ ಮನಸ್ಸು ಯಾವುದುಂಟೋ, ಅದೇ ಮೋಕ್ಷ ವೆಂದು ಕರೆಯಲ್ಪಡುವಂಥದು. ಅಂದರೆ ಮನೋವ್ಯಾಪಾರಗಳೆಲ್ಲಾ ನಿಂತು ಅದು ಪರಮಾತ್ಮನಲ್ಲಿ ಲಯಹೊಂದಿದ್ದೇ ಆದರೆ, ಆ ಸ್ಥಿತಿಯೇ 'ಅಮೃತ' ಅಥವಾ ' **ಮೋಕ್ಷ** 'ವು. ಈ ಸ್ಥಿತಿಯನ್ನೇ ಎಲ್ಲಾ ಶಾಸ್ತ್ರ ಗಳೂ ' **ಮೋಕ್ಷ** 'ವೆಂದು ಸಿದ್ಧಾಂತ ಮಾಡಿರುತ್ತವೆ.

ಶ್ರುತಿ ॥ " ತಸ್ಮಾತ್ ಭಾವಾಭಾವೌ ಪರಿತ್ಯಜ್ಯ ಪರಮಾತ್ಮಧ್ಯಾನೇನ ಮುಕ್ತೋ ಭವತಿ ♦ ॥

ಆದುದರಿಂದಲೇ, ಯಾವನು ಭಾವಾಭಾವವನ್ನು ಸಂಪೂರ್ಣವಾಗಿ ತೊರೆದು,ಪರಮಾತ್ಮಧ್ಯಾನದಲ್ಲಿ ಸದಾ ನೆಲೆಸುತ್ತಾನೆಯೋ,ಅವನು ಖಂಡಿತ

ವಾಗಿಯೂ ಮೋಕ್ಷವನ್ನು ಪಡೆಯುತ್ತಾನೆ. ಅಂದರೆ ಎಲ್ಲಾ ಕೋರಿಕೆಗಳನ್ನೂ ಮರವುಗಳನ್ನೂ ಶೂನ್ಯವಾಗಿ ಮಾಡಿ, ಸದಾ ಆಕಾಶದಂತೆ ಬಯಲು ಸ್ವರೂಪದಿಂದಿರುವಿಕೆಯೇ '**ಮೋಕ್ಷ**'ವು.

ಶ್ರುತಿ ॥ "ದ್ವೇ ಪದೇ ಬಂಧಮೋಕ್ಷಾಯ ♦ ನಿರ್ಮಮೇತಿ ಮಮೇತಿ ಚ ।
ಮಮೇತಿ ಬಧ್ಯತೇ ಜಂತುಃ ♦ ನಿರ್ಮಮೇತಿ ವಿಮುಚ್ಯತೇ ॥

(ಮಹೋಪನಿಷತ್ತು, ಶ್ಲೋ॥ 73.)

**ಯಾವುದೋ ಕೆಲಸಕ್ಕೆಬಾರದ ವಸ್ತುಗಳನ್ನ ನೋಡಿ 'ಇವು ನನ್ನವು, ಇವು ನನಗೆ ಬೇಕು' ಎಂದು ಇಚ್ಛೆಪಡುವಿಕೆಯೇ ಮಮಕಾರವು. ಎಲ್ಲೆಲ್ಲಿಯೂ ತುಂಬಿತುಳುಕಾಡುತ್ತಿರುವ ಪರಬ್ರಹ್ಮಸ್ವರೂಪಿಯೇ ನಾನಾಗಿರುವುದರಿಂದ ಯಾವ ವಸ್ತುವೂ ನನ್ನದಲ್ಲ, ಯಾವುದೂ ನನಗೆ ಬೇಕಾದುದಿಲ್ಲ,' ಎಂದು ತಿಳಿದುಕೊಂಡಿರುವುದೇ 'ನಿರ್ಮಮ'ವು. ಮೇಲೆ ಹೇಳಿದ ಮಮಕಾರವಿರುವುದೇ 'ಬಂಧ'ವು, ಅದಿಲ್ಲದಿರುವಿಕೆಯೇ 'ಮೋಕ್ಷ'ವು.**

ಶ್ರುತಿ ॥ ಕೃಶೋಽಹಂ ದುಃಖಬದ್ಧೋಽಹಂ ♦ ಹಸ್ತಪಾದಾದಿಮಾ ನಹಂ ।
ಇತಿ ಭಾವಾನುರೂಪೇಣ ♦ ವ್ಯವಹಾರೇಣ ಬಧ್ಯತೇ ॥

(ಮಹೋಪನಿಷತ್ತು, ಶ್ಲೋ॥ 125.)

'ನಾನು ಅನೇಕ ಜನ್ಮಗಳಿಂದ ಕರ್ಮವೆಂಬ ಬಂಧಗಳಿಂದ ಕಟ್ಟಲ್ಪಟ್ಟಿದ್ದೇನೆ. ನಾನು ಹಸ್ತಪಾದಾದಿ ಅವಯವಗಳನ್ನುಂಟಾಗಿದ್ದೇನೆ. ಸಂಸಾರವೆಂಬ ಹಗ್ಗದಿಂದ ಬಂಧಿಸಲ್ಪಟ್ಟಿದ್ದೇನೆ. ಮತ್ತು ನಾನು ಹುಟ್ಟು ಸಾವುಗಳನ್ನು ಹೊಂದುವವನಾಗಿದ್ದೇನೆ' ಎಂಬ ದುರಭಿಮಾನದಿಂದ ಆತ್ಮನಾದ ತಾನು, ತನಗೆ ಸಂಬಂಧವಿಲ್ಲದ ಪ್ರತಿಯೊಂದನ್ನೂ ತನ್ನದೆಂದೆಣಿಸಿ ವಿಚಾರಪಡುತ್ತಿರುತ್ತಾನೆ. ಆದುದರಿಂದ ಶರೀರವೂ ಇಂದ್ರಿಯಗಳೂ ನಾನೆಂಬ ದುರಭಿಮಾನವೇ 'ಬಂಧ'ವೆಂದು ಗಣಿಸಲ್ಪಡುವುದು. ಇಂತಹ ಅಭಿಮಾನವನ್ನು ಬಿಡುವಿಕೆಯೇ '**ಮೋಕ್ಷ**'ವೆಂದೆನಿಸುವುದು.

ಶ್ರುತಿ ॥ "ನಾಽಹಂ ಮಾಂಸಂ ನ ಚಾಽಸ್ಥೀನಿ ♦ ದೇಹಾದನ್ಯಃ ಪರೋಽಸ್ಮ್ಯಹಂ ।
ಇತಿ ನಿಶ್ಚಿತವಾ ನಂತಃ ♦ ಕ್ಷೀಣವಿದ್ಯೋ ವಿಮುಚ್ಯತೇ ॥

ಶ್ಲೋ ॥ ನಾಽಹಂ ದುಃಖೀ ನ ಮೇ ದೇಹೋ ♦ ಬಂಧಃ ಕೋಽಸ್ಯಾತ್ಮನಿ ಸ್ಥಿತಃ ।
ಇತಿ ಭಾವಾನುರೂಪೇಣ ♦ ವ್ಯವಹಾರೇಣ ಮುಚ್ಯತೇ ॥

(ಮಹೋಪನಿಷತ್ತು ಶ್ಲೋ॥ 126-127.)

'ಅಸ್ಥಿಮಾಂಸಾದಿಗಳಿಂದ ಮಾಡಲ್ಪಟ್ಟ ಈ ದೇಹವು ನಾನಲ್ಲ. ನನಗೆ ಅದರ ಸಂಬಂಧವಾವುದೂ ಇಲ್ಲ. ನಾನು ದೇಹಕ್ಕಿಂತಲೂ ಬೇರೆಯಾಗಿದ್ದೇನೆ' ಎಂಬ ನಿಶ್ಚಿತವಾದ ಬುದ್ಧಿಯು ಏರ್ಪಡಿಸಿದ ತಕ್ಷಣವೇ ಅಜ್ಞಾನವು ನಶಿಸುತ್ತದೆ. ಇಂತಹ ಅಜ್ಞಾನವು ನಶಿಸುವಿಕೆಯೇ 'ಮೋಕ್ಷ'ವೆನಿಸುವುದು. ಮತ್ತು ನಾನು ದುಃಖವನ್ನು ಅನುಭವಿಸುವನೆಂಬುದಿಲ್ಲವು. ದೇಹಸಂಬಂಧವಾದ ಬಂಧಗಳಿಂದ ನನಗೆ ನಿರ್ಬಂಧವೂ ಇಲ್ಲವು. ನನಗೆ ಕರ್ಮವೆಂಬುದೇ ಇಲ್ಲವು. ನಾನು ನಿರ್ಗುಣ ನಿರಾಕಾರ ಪರಬ್ರಹ್ಮನಾಗಿರುತ್ತೇನೆ. ನಾನು ನಿತ್ಯನಾಗಿಯೂ, ಮಾಯೆಗೆ ಒಳಪಡದವನಾಗಿಯೂ ಇದ್ದೇನೆ' ಎಂದು ತಿಳಿದು ತಾನೇತಾನಾಗಿ ಮರೆಯುವ ಸ್ಥಿತಿಯೇ '**ಮೋಕ್ಷ**'ವು. ಇದೂ ಅಲ್ಲದೆ,

ಸೀ ॥ ಹೊರಗೆ ಸಂರಂಭದಿಂ ♦ ದೊಳಗ ಸಂರಂಭದಿಂ
ಕಾರ್ಯತಂತ್ರಂಗಳಂ ♦ ನಡೆಸುವಾತ;
ಸಫಲಪ್ರಯತ್ನವುಂ ♦ ವಿಫಲಪ್ರಯತ್ನವುಂ,
ತನಗವು ಸಮಾನವೆಂ ♦ ದೆಣಿಸುವಾತ;
ಅನಿವಾರ್ಯಕರ್ಮದಿಂ ♦ ತನಗೆ ಬಹ ಸುಖವನ್ನು,
ವರ್ಜಿಸುವ ತೆರದಿಂದ ♦ ಭೋಗಿಪಾತ;
ಸುಖಗಳುಂ ದುಃಖಗಳು ♦ ಸಂಪ್ರಾಪ್ತವಾಗಲಿಕೆ,
ಹಿಗ್ಗುತಗ್ಗುಗಳಿರದೆ ♦ ನಡೆಯುವಾತ;

ಗೀ ॥ ಜೀವಪರಮೇಶ್ವರೈಕ್ಯಸ ♦ ಚ್ಚಿತ್ಸುಖಾನು-
ಭೂತಿ ನಿಶ್ಶಂಶಯಾತ್ಮನಾ ♦ ಗೆಸೆಯುವಾತ;
ಅವನು ಪ್ರಾರಬ್ಧದಿಂದ ವ್ಯವ ♦ ಹಾರಿಯಾದ
ಮುಕ್ತಿಸಾಮ್ರಾಜ್ಯ ಪಟ್ಟಾಭಿ ♦ ಷಿಕ್ತನಹನು ॥

ತೆಲುಗು ಅಬ್ಬಯಮಾತ್ಯಕವಿ--(ಕನ್ನಡ ಪರಿವರ್ತನೆ.)

ಶ್ರುತಿ ॥ “ ಗವಾ ಮನೇಕವರ್ಣಾನಾಂ ♦ ಕ್ಷೀರಸ್ಯಾಪ್ಯೇಕವರ್ಣತಾ ।
ಕ್ಷೀರವತ್ಪಶ್ಯತೇ ಜ್ಞಾನಂ ♦ ಲಿಂಗಿನಸ್ತು ಗವಾಂ ಯಥಾ ॥

ಅನೇಕ ಬಣ್ಣಗಳುಳ್ಳ ಹಸುಗಳ ಹಾಲೆಲ್ಲವೂ ಒಂದೇ (ಬಿಳುಪು) ಬಣ್ಣವುಳ್ಳದ್ದಾಗಿರುತ್ತದೆ. ಹೀಗೆ ಬಾಹ್ಯ ಚಿಹ್ನೆಗಳು ಹಸುಗಳ ಬಣ್ಣಗಳಂತೆಯೂ, ಜ್ಞಾನವೆಂಬುದು ಕ್ಷೀರದಂತೆಯೂ ಸವರ್ಣವಾಗಿ ಕಂಡು ಬರುತ್ತದೆ. ಇದು ಹೇಗೋ ಹಾಗೆಯೇ ಸ್ತ್ರೀಪುರುಷರ ಬುದ್ಧಿಗಳು ಅನೇಕ ವಿಧಗಳಾಗಿರುತ್ತವೆ. ಇಂಥವರು ಸದ್ಗುರುವನ್ನಾಶ್ರಯಿಸಿ, ಅವರಿಂದ ಉಪದೇಶವನ್ನು ಹೊಂದಿ, ಅದನ್ನು ಮನನ ನಿದಿಧ್ಯಾಸಗಳೊಡನೆ ಮಾಡುತ್ತ ಬಂದಿದ್ದೇ ಆದರೆ, ಅವರಿಗಿರುವ ನಾನಾಬಗೆಯಾದ ಬುದ್ಧಿಗಳೆಲ್ಲವೂ ತೊಲಗಿಹೋಗಿ ಭೇದಭಾವವೆಂಬುದೇ ಇಲ್ಲದೆ, ಎಲ್ಲೆಲ್ಲಿಯೂ ಜ್ಞಾನಸ್ವರೂಪನಾದ ಪರಬ್ರಹ್ಮನೊಬ್ಬನೇ ವ್ಯಾಪಿಸಿರುತ್ತಾನೆಂದು ತಿಳಿದುಕೊಳ್ಳುತ್ತಾರೆ.

ಶ್ರುತಿ ॥ “ ಘೃತಮಿವ ಪಯಸಿ ನಿಗೂಢಂ ♦ ಭೂತೇ ಭೂತೇ ಚ ವಸತಿ ವಿಜ್ಞಾನಂ ।
ಸತತಂ ಮಂದಯಿತವ್ಯಂ ♦ ಮನಸಾ ಽನುಸಂಧಾನಭೂತೇನ ” ॥

ಹಾಲಿನಲ್ಲಿ ತುಪ್ಪವು ಕಾಣ್ಬರದೆ ಅದರಲ್ಲಿಯೇ ಹೇಗೆ ಅಡಗಿರುತ್ತದೆಯೋ ಹಾಗೆಯೇ, ಸಕಲ ಪ್ರಾಣಿಗಳಲ್ಲಿರುವ ಆತ್ಮನು ಮಾಯೆಯಿಂದ ಮುಚ್ಚಲ್ಪಟ್ಟು ಕಣ್ಮರೆಯಾಗಿರುತ್ತಾನೆ.

ಶ್ರುತಿ ॥ “ ಗವಾಂ ಸರ್ಪಿ ಶ್ಶರೀರಸ್ಥಂ ♦ ನ ಕರೋ ತ್ಯಂಗಪೋಷಣಂ ।
ತದೇವ ಕರ್ಮ ರಚಿತಂ ♦ ಪುನ ಸ್ತಸ್ಯೈವ ಭೇಷಜಂ ” ॥

ಶ್ರುತಿ ॥ ಏವಂ ಸರ್ವಶರೀರಸ್ಥಃ ♦ ಸರ್ಪಿವ ತ್ಪರಮೇಶ್ವರಃ ।
ವಿನಾಶೋ ವಾಸನಾಂ ದೇವಃ ♦ ನ ಕರೋತಿ ಹಿತಂ ನೃಷು ॥

ತುಪ್ಪವು ಹಸುಗಳ ಶರೀರದಲ್ಲಿದ್ದರೂ ಅದು ಅವುಗಳ ಅಂಗಪೋಷಣೆಯನ್ನು ಮಾಡಲಾರದು. ಹಾಗಲ್ಲದೆ ಅದೇ ತುಪ್ಪವನ್ನು ಆ ಹಸುಗಳ ಹಾಲಿನಿಂದ ಬೇರ್ಪಡಿಸಿದ್ದೇ ಆದರೆ, ಅದು ಆ ದೇಹ ಸುಖಗಳಿಗೆ ಔಷಧಿಯಂತೆ ರೋಗಗಳನ್ನು ಹೋಗಲಾಡಿಸಿ ಪುಷ್ಟಿಯನ್ನು ಕೊಡತಕ್ಕದ್ದಾಗಿದೆ.

ಹೀಗೆಯೇ ಅಂದರೆ, ತುಪ್ಪವು ಶರೀರವನ್ನು ವ್ಯಾಪಿಸಿಕೊಂಡಿರುವಂತೆ ಪರಮಾತ್ಮನು ಸಕಲ ಜೀವರಾಶಿಗಳಲ್ಲಿ ವ್ಯಾಪಿಸಿಕೊಂಡಿದ್ದರೂ, ತಾವು ಮಾಯೆಯಿಂದ ಮುಚ್ಚಲ್ಪಟ್ಟಿರುವುದರಿಂದ, ಜೀವಿಗಳು ಆ ಪರಮಾತ್ಮನ ನಿಶ್ಚಯಜ್ಞಾನವನ್ನು ತಿಳಿದುಕೊಳ್ಳಲಾರರು. ಅಂದರೆ ಜೀವಿಗಳ ಹೃದಯದಲ್ಲಿ ಪರಮಾತ್ಮನು ನೆಲೆಸಿದ್ದಾಗ್ಗೂ, ಅಂತಶ್ಶುದ್ಧಿಯಾಗುವವರಿವಿಗೂ ಆ ಪರಮಾತ್ಮನಿಂದ ಆ ಜೀವಿಗಳಿಗೆ ಯಾವ ಲಾಭವೂ ಉಂಟಾಗದು. ಆದರೆ ಸದ್ಗುರುವಿನ ಸಹಾಯದಿಂದ, ಅಂತರಾತ್ಮನಾಗಿರುವ ಆ ಮಹಾನುಭಾವನ ನಿಶ್ಚಯಜ್ಞಾನವನ್ನು ಪಡೆದದ್ದೇ ಆದರೆ, ಆಗ ಜನನಮರಣರೂಪವಾದ ಈ ಸಂಸಾರವಾಸನೆಗಳೆಂಬ ರೋಗಕ್ಕೆ ಅದು ಒಳ್ಳೆಯ ಔಷಧಿಯಾಗಿ ಪರಿಣಮಿಸುತ್ತದೆ. ಒಟ್ಟಿನಲ್ಲಿ ಗುರೂಪದೇಶವಿಲ್ಲದೆ ಸ್ತ್ರೀಪುರುಷರು ಪರಮಾನಂದಪ್ರಾಪ್ತಿಯನ್ನು ಅಂದರೆ, 'ಮೋಕ್ಷ'ವನ್ನು ಎಂದಿಗೂ ಹೊಂದಲಾರರು.

ಶ್ರುತಿ ॥ "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ♦ ॥"

ಶ್ರುತಿ ॥ "ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃಹದಾರಣ್ಯಕೋಪನಿಷತ್ತು, ವಾಕ್ಯ 7 ಮತ್ತು 22.)

ಆತ್ಮನ ಸ್ವರೂಪವೆಂತಹುದೆಂದರೆ "ಸಕಲ ಶರೀರಗಳ ಹೃದಯಕಮಲದಲ್ಲಿ ಚೇತನಸ್ವರೂಪವಾಗಿ ನೆಲೆಸಿರುವ ಮತ್ತು 'ಅಹಂ, ಅಹಂ' ಅಂದರೆ 'ನಾನು, ನಾನು' ಎಂದು ಹೇಳುತ್ತಿರುವ ಜ್ಞಾನಜ್ಯೋತಿಸ್ವರೂಪವಾದ ವಸ್ತುವೇ ಆತ್ಮನೆಂದು ಕರೆಯಲ್ಪಡುವುದು.

ಶ್ರುತಿ ॥ "ಕೋಽಯ ಮಾತ್ಮೇತಿ ವಯ ಮುಪಾಸ್ಮಹೇ? ಕತರಸ್ಸ ಆತ್ಮಾ? ♦ ಯೇನ ವಾ ಪಶ್ಯತಿ, ಯೇನ ವಾ ಶೃಣೋತಿ, ಯೇನ ವಾ ಗಂಧಾನಾಜಿಘ್ರತಿ, ಯೇನ ವಾ ವಾಚಂ ವ್ಯಾಕರೋತಿ, ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ, ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ ♦" (ಐತ್ತರೇಯೋಪನಿಷತ್ತು, ಅ. 3 ವಾಕ್ಯ 5.)

"ಆತ್ಮನು ಯಾರೆಂಬುದನ್ನು ನಾವು ತಿಳಿಯಬೇಕು; ಆ ಆತ್ಮನ ಸ್ವರೂಪವೆಂಥದು?" ಎಂದು, ಕೇಳಿದರೆ ಅದಕ್ಕೆ ಉತ್ತರವು ಈ ಕೆಳಗೆ ಹೇಳಿದೆ. ಅದೇನೆಂದರೆ, ನಾಲ್ಕು ಜನ ಒಟ್ಟಿಗೆ ಒಂದು ಕೊಠಡಿಯಲ್ಲಿ ಸೇರಿ ಬಾಗಿಲನ್ನು ಮುಂದಕ್ಕೆ ಸರಿದು ತಾವು ಶಾಸ್ತ್ರವಿಚಾರದಲ್ಲಿ ಆಸಕ್ತ ರಾಗಿರುವ ಸಮಯದಲ್ಲಿ, ಹೊರಗಡೆ ಇರುವವನು ಅವರ ಕಂಠಧ್ವನಿಗಳನ್ನು ಗುರ್ತಿಸಿ, ಓಹೋ! ಇದು ನರಸಿಹ್ಮನ ಧ್ವನಿ, ಇದು ಶಂಕರನ ಮಾತಿನ ಶಬ್ದ, ಇದು ಸೂರ್ಯನಾರಾಯಣನು ಆಡಿದ ಮಾತು ಮತ್ತು ಇದು ವೆಂಕಟೇಶ್ವರನ ಕಂಠಸ್ವರವು ಎಂದು ಗುರುತಿಸಬಲ್ಲನು. ಅವನು ಹೀಗೆ ಬೇರೆಬೇರೆ ಕಂಠಧ್ವನಿಗಳ ಸಹಾಯದಿಂದ ವ್ಯಕ್ತಿಗಳನ್ನು ಗುರುತಿಸುವಂತೆ ಮಾಡುವಶಕ್ತಿಯನ್ನು ಯಾವುದರಿಂದ ಪಡೆದನೋ ಅದೇ 'ಆತ್ಮ.' ನೀರಿನಲ್ಲಿ ಕಲೆತಿರುವ ಹುಳಿ, ಕಾರ, ಉಪ್ಪು, ವಗರು, ಕಹಿ, ಸಿಹಿ ಎಂಬ ಷಡ್ರಸಗಳನ್ನು ಬೇರ್ಪಡಿಸುವುದಕ್ಕೆ ಸಾಧ್ಯವಿಲ್ಲವಾದರೂ ನಾಲಗೆಯ ಸಹಾಯದಿಂದ ಆ ರುಚಿಗಳನ್ನು ತಿಳಿದುಕೊಳ್ಳುವುದಕ್ಕೆ ಯಾವುದು ಸಹ ಕಾರಿಯಾಗಿದೆಯೋ ಅದೇ 'ಆತ್ಮ.' ಮೂಗಿನ ಮೂಲಕ ಸುಗಂಧ ದುರ್ಗಂ ಧಗಳನ್ನು ತಿಳಿಯುವ ಶಕ್ತಿಯುಳ್ಳದ್ದಾವುದೋ ಅದೇ 'ಆತ್ಮ.' ಚಿತ್ರಪಟ ಗಳಲ್ಲಿರುವ ಆಕೃತಿಯನ್ನು ಕಣ್ಣಿನಿಂದ ನೋಡಿ ಇದು ಇಂಥಿಂಥ ದೇವತೆಯ ರೂಪಗಳು ಎಂದು ತಿಳಿದುಕೊಳ್ಳುವ ಶಕ್ತಿಯು ಯಾವುದಕ್ಕಿದೆಯೋ ಅದೇ 'ಆತ್ಮ.' ಸ್ಪರ್ಶಮಾತ್ರದಿಂದ ಶೀತೋಷ್ಣಗುಣಗಳನ್ನು ತಿಳಿದು ಕೊಳ್ಳುವುದು ಯಾವುದೋ ಅದೇ 'ಆತ್ಮ.' ಬಾಯಿ ತೆಗೆದು ಮಾತನಾಡು ವಂತೆ ಮಾಡುವುದೂ 'ಆತ್ಮ,' ಸಮಸ್ತ ಇಂದ್ರಿಯಗಳಿಂದಲೂ ಸರ್ವ ವಿಷಯಗಳನ್ನು ಗ್ರಹಿಸುವುದೂ 'ಆತ್ಮ.' ಇಷ್ಟೇ ಅಲ್ಲದೆ ಜಾಗ್ರತ್ತಿನಲ್ಲಿ ತಾನನುಭವಿಸುವ ಸುಖದುಃಖಗಳನ್ನೂ, ಸ್ವಪ್ನದಲ್ಲಿ ತಾನನುಭವಿಸುವ ಸುಖದುಃಖಗಳನ್ನೂ ಯಾವುದು ತಿಳಿದುಕೊಳ್ಳಬಲ್ಲುದೋ ಆ ವಸ್ತುವೇ 'ಆತ್ಮ.' ಶರೀರವು ಜಡಪದಾರ್ಥವಾದುದರಿಂದ ಹಿಂದೆ ಹೇಳಿದವುಗಳೆಲ್ಲ ವನ್ನೂ ತಿಳಿದುಕೊಳ್ಳಲು ಸಾಧ್ಯವಾಗದು. ದೇಹಕ್ಕಿಂತಲೂ ಬೇರೆಯಾದ ಒಂದು ವಸ್ತುವು ಈ ಶರೀರದಲ್ಲಿ ನೆಲಸಿದ್ದು ಸಕಲಕಾರ್ಯಗಳನ್ನೂ ಮಾಡಿ ಸುತ್ತಿದೆಯೆಂದು ಹೇಳುವುದಕ್ಕೆ ಸಂದೇಹವೇ ಇಲ್ಲ. ಇಂತಹ ವಿಲಕ್ಷಣ

ವಾದ ವಸ್ತುವೇ 'ಆತ್ಮ' ನೆಂದು ಕರೆಯಲ್ಪಡುತ್ತದೆ. ಇಂತಹ ಆತ್ಮನಿಗೆ ಪಂಚವರ್ಣಗಳಾಗಲಿ, ಹುಟ್ಟು ಸಾವುಗಳಾಗಲಿ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರಗಳಾಗಲಿ ಇಲ್ಲವು. ಈ ಆತ್ಮವು ಆಕಾಶದಂತೆ ನಿರಾಕಾರವಾದದ್ದು; ಪರಿಶುದ್ಧವಾದದ್ದು; ಚಲನವಿಲ್ಲದುದು; ಸ್ವಯಂಪ್ರಕಾಶವುಳ್ಳದ್ದು; ನಿರ್ಗುಣವಾದದ್ದು; ಪರಂಜ್ಯೋತಿಯಾಗಿರುವಂಥದು; ಸತ್ಯಜ್ಞಾನಾನಂದಸ್ವರೂಪವಾಗಿರುವಂಥದು; ಎಲ್ಲೆಲ್ಲಿಯೂ ತುಂಬಿತುಳುಕಾಡುವಂಥದು ಮತ್ತು ಆದಿಮಧ್ಯಾಂತರಹಿತವಾದದ್ದು; ಎಂದು ತಿಳಿಯಬೇಕು.

ಜೀವಿಗಳ ದೇಹಗಳಾದರೋ ಅಂತಹುದಲ್ಲವು. ಈ ದೇಹವು ಮಾಯೆಯಿಂದುಂಟಾದುದು. ಇದು ನಶ್ವರವಾದದ್ದು. ಆದುದರಿಂದ ಇಂತಹ ಮಾಯಾದೇಹಕ್ಕೆ ಸಂಬಂಧಿಸಿ ಬಂದಂಥವರಿಗೆಲ್ಲಾ ಮರಣವು ತಪ್ಪದೆ ಉಂಟಾಗುವುದು. ಏಕೆಂದರೆ ಈ ದೇಹವನ್ನು ಆಯುಧಗಳಲ್ಲಿ ಕತ್ತರಿಸಬಹುದು, ಅಗ್ನಿಯಿಂದ ದಹಿಸಬಹುದು, ನೀರಿನಲ್ಲಿ ನೆನೆಸಬಹುದು, ಗಾಳಿಯಿಂದ ಅಲ್ಲಾಡುವಂತೆ ಮಾಡಬಹುದು. ಈ ಶರೀರಗಳು ಪಂಚಭೂತಾತ್ಮಕವಾದುದು. ಇಂತಹ ಶರೀರಗಳಿಗೆ ಸದಾ ಸುಖದುಃಖಗಳು ಬರುತ್ತಲೇ ಇರುತ್ತವೆ. ಈ ಶರೀರವು ನಶ್ವರವಾದುದರಿಂದಲೇ ಇದು ಅಸತ್ಯವಾದುದು, ಮತ್ತು ಸತ್ವ ರಜಸ್ತಮೋಗುಣಗಳಿಂದ ಕೂಡಿ ಅಶುದ್ಧವಾದುದು. ಇದಕ್ಕೆ ಆದಿಮಧ್ಯಾಂತಗಳುಂಟು. ಇದಕ್ಕೆ ಕೈಕಾಲು ಮೊದಲಾದ ಅಂಗಗಳುಂಟು. ಸದಾ ಹಸಿವು ಬಾಯಾರಿಕೆ, ರೋಗರುಜಿನಾದಿ ಪೀಡಿಗಳಿಗೆ ಈಡಾಗಿರುವಂಥದು. ಈ ಮೇಲೆ ಹೇಳಿದವುಗಳೆಲ್ಲವೂ ನಿರ್ಗುಣ ನಿರಾಕಾರನಾದ ಆ ಆತ್ಮನಿಗಿಲ್ಲವು. ಇದಕ್ಕೆ ಶ್ರುತಿ ಪ್ರಮಾಣವುಂಟು ಏನಂದರೆ,

ಶ್ರುತಿ ॥ ನ ನಭೋ ಘಟಯೋಗೇನ ♦ ಸುರಾಗಂಧೇನ ಲಿಪ್ಯತೇ ।
ತದಾತ್ಮೋಪಾಧಿಯೋಗೇನ ♦ ತದ್ಧರ್ಮೈರ್ನೈವ ಲಿಪ್ಯತೇ ॥

(ಅಧ್ಯಾತ್ಮೋಪನಿಷತ್ತು, ಶ್ಲೋ॥ 52.)

ಮದ್ಯದ ಮಡಿಕೆಯಲ್ಲಿ ಇರುವ ಆಕಾಶಕ್ಕೆ, ಆ ಮದ್ಯದ ವಾಸನೆಯು ಯಾವ ರೀತಿಯಲ್ಲಿ ಅಂಟುವುದಿಲ್ಲವೋ, ಮತ್ತು ಭಾಂಡದ ಆಕಾರ ವಿಕಾರ

ಗಳು ಆ ಆಕಾಶಕ್ಕೆ ಹೇಗೆ ಉಂಟಾಗುವುದಿಲ್ಲವೋ ಹಾಗೆಯೇ ಸಮಸ್ತ ಜೀವರಾಶಿಗಳ ಹೃದಯಗಳಲ್ಲಿ ನೆಲೆಸಿರುವ ಆತ್ಮನಿಗೆ, ಆಯಾ ಜೀವಿಗಳು ಮಾಡುವ ಪುಣ್ಯಪಾಪಕರ್ಮಗಳ ಸೋಂಕೆಂಬುದಿಲ್ಲದೆ, ಆ ಆತ್ಮನು ಕೇವಲ ಸಾಕ್ಷಿಮಾತ್ರನಾಗಿ ಕೇವಲ ಜ್ಞಾನಾನಂದಸ್ವರೂಪವುಳ್ಳವನಾಗಿ ಪ್ರಕಾಶಿಸುತ್ತಿರುತ್ತಾನೆ.

ಶ್ರುತಿ ॥ "ಯಾ ತದಭಿಮಾನಂ ಕಾರಯತಿ ಸಾ ಅವಿದ್ಯಾ ♦
ಸ್ವಾಭಿಮಾನೋ ಯಯಾ ನಿವರ್ತತೇ ಸಾ ವಿದ್ಯಾ" ♦ ॥

(ಸರ್ವಸಾರೋಪನಿಷತ್ತು, ಪದ್ಯ 15.)

ದೇಹವೇ ನಾನೆಂದೂ, ಇಂದ್ರಿಯವ್ಯಾಪಾರಗಳೆಲ್ಲವನ್ನೂ ನಾನು ಮಾಡುತಿದ್ದೇನೆಂದೂ ತಿಳಿಯುವ 'ಸ್ವಾಭಿಮಾನವೇ' ಅವಿದ್ಯೆ. ಈ ಅವಿದ್ಯೆಯೇ ಅಜ್ಞಾನವೆಂಬುದು. ಹಾಗಿಲ್ಲದೆ ಅಂದರೆ 'ಸ್ವಾಭಿಮಾನ' ವಿಲ್ಲದೆ ಇರುವಿಕೆಯೇ ವಿದ್ಯೆಯು. ಇದೇ ಜ್ಞಾನ. 'ಆತ್ಮ ಮತ್ತು ಅನಾತ್ಮ' ಎಂಬ ಶಬ್ದಗಳಿಗೆ ಅರ್ಥವೇನೆಂದರೆ,

ಶ್ರುತಿ ॥ "ಅತತಿ ತತ್ ವಸ್ತುರೂಪೇಣ ವ್ಯಾಪ್ನೋತೀತಿ 'ಆತ್ಮಾ" ♦ "

ಶ್ರುತಿ ॥ "ಅನಾತ್ಮಾ ತು ಸಜೀವೋ ವಿಯದಾದಿ ಪ್ರಪಂಚಃ ಅನಾತ್ಮ ಮೂಲಂ ಮಾಯಾ ♦ "

ಶ್ರುತಿ ॥ "ದೇಹೇಂದ್ರಿಯ ಪ್ರಾಣ ಮನೋ ಮಹಾಧಿಯ ।
ಸ್ಸರ್ವೇ ವಿಕಾರಾಃ ವಿಷಯಾ ಸುಖಾದಯಃ ॥
ವ್ಯೋಮಾದಿಭೂತಾ ನ್ಯಖಿಲಂ ಚ ವಿಶ್ವ ।
ಮವ್ಯಕ್ತ ಪರ್ಯಂತ ಮಿದಂ ಹ್ಯನಾತ್ಮಾ ♦ ॥"

ವಸ್ತುರೂಪವಾದ ಸಮಸ್ತಗಳಲ್ಲಿಯೂ ವ್ಯಾಪಿಸಿ ಅವುಗಳಿಗಿಂತಲೂ ಅತೀತನಾಗಿರುವುದು ಎಂಬುದೇ 'ಆತ್ಮ' ಪದದ ಅರ್ಥ. ಪ್ರಪಂಚವೆಲ್ಲವನ್ನೂ ವಿಷಯವಿಕಾರಗಳಿಗೆ ಒಳಪಡಿಸುವಂಥ ದೇಹೇಂದ್ರಿಯಗಳು, ಪಂಚಪ್ರಾಣಗಳು, ಅಂತಃಕರಣಚತುಷ್ಟಯಗಳು ಇವೇ ಮೊದಲಾದುವುಗಳು 'ಅನಾತ್ಮ'' ಎಂದು ಕರೆಯಲ್ಪಡುವುವು. ಈ 'ಅನಾತ್ಮ' ಕ್ಕೆ ಮಾಯೆಯೇ ಮೂಲಕಾರಣವು.

ಶ್ಲೋ ॥ " ಮಾಯಾ ಮಾಯಾಕಾರ್ಯಂ ಸರ್ವಂ ♦ ಮಹದಾದಿ ದೇಹಪರ್ಯಂತಂ ।
ಅಪತಿತ ಮನಾತ್ಮಕಂ ತ್ವಂ ವಿದ್ಧಿ ♦ ಮರುಮರೀಚಿಕಾಕಲ್ಪಂ ॥

ಬಹಳವಾಗಿ ದಾಹಗೊಂಡ ಒಂದಾನೊಂದು ಜಿಂಕೆಯು, ಮರುಭೂಮಿಯಲ್ಲಿನ ಬಿಸಿಲ್ಗುದುರೆಯನ್ನು ನೋಡಿ ನೀರೆಂದು ಭ್ರಾಂತಿಪಟ್ಟು ತನ್ನ ಬಾಯಾರಿಕೆಯನ್ನು ತೀರಿಸಿಕೊಳ್ಳುವ ಸಲುವಾಗಿ ಆ ಮರೀಚಿಕೆಯ ಹಿಂದೆಯೇ ಓಡುತ್ತದೆ. ಈ ಓಟವು ನೀರಿದೆಯೆಂಬ ಭ್ರಮೆಯಿರುವವರಿವಿಗೂ ಇರುತ್ತದೆ. ಆದರೆ ಆ ಭ್ರಾಂತಿಯು ತೊಲಗಿದಮೇಲೆ ತನ್ನ ಓಟವನ್ನು ನಿಲ್ಲಿಸುತ್ತದೆ. ಹೀಗೆಯೇ ಜೀವಿಗಳು 'ಈ ಜಗತ್ತೆಲ್ಲವೂ ಮಾಯಾಕಲ್ಪಿತವಾದದ್ದು,' ಎಂದು ತಿಳಿದುಕೊಳ್ಳಲಾರದೆ ಅದನ್ನು ಸತ್ಯವಾದದ್ದೆಂದೆಣಿಸಿ, ಸಂಸಾರಬಂಧದಲ್ಲಿ ಸಿಕ್ಕಿಕೊಂಡು ಅನೇಕ ಜನ್ಮಗಳನ್ನೆತ್ತುತ್ತ, ಆಯಾ ಜನ್ಮಗಳಲ್ಲಿ ಪ್ರತಿದಿನವೂ ಮಾಡುತ್ತಬಂದ ಕಾರ್ಯಗಳನ್ನೇ ಹೊಸಕಾರ್ಯಗಳೆಂದು ಭಾವಿಸಿ, ಅವುಗಳನ್ನೇ ಪುನಃಪುನಃ ಮಾಡುತ್ತ ಬರುವರೇ ಹೊರತು, ಇವರು ಹೊಸದಾಗಿ ಆಚರಿಸುತ್ತಿರುವುದಾವುದೂ ಇಲ್ಲವು. ಈ ಪ್ರಪಂಚವನ್ನು ಸತ್ಯವೆಂದು ತಿಳಿದು ಕರ್ಮಗಳನ್ನು ಮಾಡಿ, ಒಂದು ಚಕ್ರದ ಅಂಚಿನಲ್ಲಿ ತಗುಲಿಕೊಂಡ ಎಲೆಯು ಮೇಲಕ್ಕೂ ಕೆಳಕ್ಕೂ ತಿರುಗುತ್ತಿರುವಂತೆ, ಇಹಪರಲೋಕಗಳಿಗೆ ತಿರುಗುತ್ತಿರುತ್ತಾರೆ. ಅಂದರೆ ತಮ್ಮ ಪುಣ್ಯಪಾಪಕರ್ಮಫಲಗಳಿಗೆ ತಕ್ಕಂತೆ ದೇವಲೋಕ ಭೂಲೋಕಗಳನ್ನು ಕ್ರಮವಾಗಿ ಸೇರುತ್ತಿರುತ್ತಾರೆ. ಇಂತಹರು ಅಕಸ್ಮಾತ್ತಾಗಿ ಸದ್ಗುರುಪ್ರಸಾದವನ್ನು ಹೊಂದಿ ಯಾವುದೋ ಒಂದು ಜನ್ಮದಲ್ಲಿ ಜ್ಞಾನವನ್ನು ಪಡೆದು ಮೋಕ್ಷವನ್ನು ಪಡೆಯುತ್ತಾರೆ.

ಶ್ರುತಿ ॥ " ಸಾ ಚ ಆಕಾಶೇ ಮೇಘಾದಿ ರಿವ ದೃಶ್ಯತೇ ಮಾಯಾ ನಾಮ ಅನಾದಿ
ರಂತವತೀ ಪ್ರಮಾಣಾ ಽ ಪ್ರಮಾಣಾ ಸಾಧಾರಣಾ ನಸತೀ ನಾ ಽ ಸತೀ ನ
ಸದಸತೀ ಅಸಿರ್ವಾಚ್ಯಾಽಧಿಷ್ಠಾನಏವಾಽವಿದ್ಯಮಾನಾಂತರ್ವಾಣಿ ವಿಕಲ್ಪ-
ನಿರೂಪ್ಯಮಾಣೋಚ್ಚಾ ವಚ ವ್ಯವಹಾರಭೇದವತೀ ಯಾ ನ ವಿದ್ಯತೇ,
ವಸ್ತುತ ಸ್ಸಾ ಮಾಯಾ ತತ್ಸ್ವರೂಪ ಮಜ್ಞಾನಂ ತದೇವ ಮೂಲಪ್ರ-
ಕೃತಿ ಗುಣಸಾಮ್ಯಾ ಅವಿದ್ಯೇತ್ಯಾದ್ಯನೇಕಾಕಾರಾ ಜಗದಾಕಾರೇಣ
ಪರಿಣತಾ ತದೇವಂ ಭೂತಾ ಬ್ರಹ್ಮ ವಿಜ್ಞಾನಾನಂದ ಮನುಭೂಯತೇ ಚ ♦ " ॥

ಎಂಬ ಶ್ರುತಿವಾಕ್ಯದಂತೆ, ಶುದ್ಧ ನಿರ್ಗುಣನಿರಾಕಾರನಾದ ಪರಮಾತ್ಮನಲ್ಲಿ, ರೂಪರಹಿತವಾಗಿಯೂ, ಅಖಂಡವಾಗಿಯೂ ಮತ್ತು ವರ್ಣವಿಲ್ಲದುದಾಗಿಯೂ ಇರುವ ಆಕಾಶದಲ್ಲಿ ನೀಲವರ್ಣವು ಕಾಣುವಂತೆ ಮಾಡುವ ಮಾಯೆಯು, ಪರಮಾತ್ಮನಲ್ಲಿಯೂ ಈ ಮೇಲೆ ಹೇಳಿದ ವಿಕಾರಗಳಿರುವಂತೆ ತೋರಿಸುತ್ತಿರುತ್ತದೆ. ಈ ಮಾಯೆಯು ಸತ್ತಾದುದಲ್ಲ. ನಾಶವನ್ನು ಹೊಂದುವಂಥದು, ಆದರೆ ಇದು ಅನಾದಿಯಿಂದ ಬಂದಿರುವಂಥದು. ಶಿವಕೇಶವರಿಗೂ ಕೂಡ ಈ ಮಾಯಾಸ್ವರೂಪವೆಂಥದೆಂಬುದು ತಿಳಿಯಲು ಸಾಧ್ಯವಿಲ್ಲ. ಪರಮಾತ್ಮನಲ್ಲಿ ಕಾಣುತ್ತಿರುವ ಈ ಮಾಯೆಯು ಆ ಪರಮಾತ್ಮನಲ್ಲಿಯೇ ಬೆರೆತು, ಆತನಿಗೆ ಅನೇಕವಿಧವಾದ ನಾಮರೂಪಭೇದಗಳು ಇವೆಯೆಂಬ ಭ್ರಾಂತಿಯನ್ನುಂಟುಮಾಡಿರುತ್ತದೆ. ಈ ಮಾಯೆಯು ತ್ರಿಕಾಲದಲ್ಲಿಯೂ ಇರುವಂಥದು. ಭ್ರಾಂತಿರೂಪವಾದದ್ದು. ಈ ಮಾಯೆಯನ್ನೇ ಮೂಲಪ್ರಕೃತಿಯೆಂದು ಕರೆಯುತ್ತಾರೆ. ಈ ಚರಾಚರ ಜಗತ್ತೆಲ್ಲವೂ ಮಾಯಾಸ್ವರೂಪವಾದದ್ದೇ. ಈ ಮಾಯಾಸ್ವರೂಪವನ್ನು ಮಿಥ್ಯೆಯೆಂದು ತಿಳಿದು, ಅದನ್ನು ತ್ಯಜಿಸುವುದಕ್ಕೆ ಯತ್ನಿಸಬೇಕು. ಹಾಗೆ ಅದರ ಕಟ್ಟನ್ನು ಹರಿದಮೇಲೆ ಸಚ್ಚಿದಾನಂದಸ್ವರೂಪನಾದ ಪರಮಾತ್ಮನ ಲಕ್ಷಣಗಳನ್ನು ಚನ್ನಾಗಿ ತಿಳಿದುಕೊಂಡು ಆ ಪರಮಾತ್ಮನನ್ನೇ ಸದಾ ಧ್ಯಾನಿಸುತ್ತ ಬರುವುದೇ ಬ್ರಹ್ಮಜ್ಞಾನವೆಂದೂ, ಬ್ರಹ್ಮನಿಷ್ಠೆಯೆಂದೂ ಕರೆಯಲ್ಪಡುವುದು. ಇಂತಹ ಬ್ರಹ್ಮನಿಷ್ಠಾಪರನನ್ನು 'ಬ್ರಹ್ಮಜ್ಞಾನಿ' ಯೆಂದೂ, 'ಬ್ರಹ್ಮವೇತ್ತ' ನೆಂದೂ ಕರೆಯುತ್ತಾರೆ. ಸ್ತ್ರೀಪುರುಷರು ಈ ವಿಷಯಗಳೆಲ್ಲವನ್ನು ಚನ್ನಾಗಿ ಗ್ರಹಿಸಿ ಮಾಯೆಯನ್ನು ತೊಲಗಿಸಿ ಬ್ರಹ್ಮಜ್ಞಾನವನ್ನು ಹೊಂದುವುದಕ್ಕೆ ಪ್ರಯತ್ನಪಡಬೇಕೆಂಬುದೇ ಈ ಗ್ರಂಥಕರ್ತರ ಮುಖ್ಯ ಉದ್ದೇಶವು.

ಈಶ್ವರನು ದೇವತಾಶರೀರವನ್ನು ಧರಿಸಿ ಯುಗ ಮೊದಲಾದುವುಗಳನ್ನು ಸೃಷ್ಟಿಮಾಡಿದ ವಿಷಯವನ್ನು ಕುರಿತು ಈ ಗ್ರಂಥಕರ್ತರು ಮುಂದಿನ ಪ್ರಕರಣದಲ್ಲಿ ವಿವರಿಸುತ್ತಾರೆ.



# ಭಗವಂತನು ದೇವತಾಶರೀರವನ್ನು ಧರಿಸಿ ಯುಗಗಳನ್ನು ಸೃಷ್ಟಿಮಾಡಿದ ವಿಷಯ.

ಈ ಗ್ರಂಥದ ಆದಿಭಾಗದಲ್ಲಿ ಹೇಳಿರುವಂತೆ 'ಯಸ್ಯಾಂತರ್ನಾದಿ ಮಧ್ಯಂ' ಎಂಬ ಪ್ರಕಾರ ಎಲ್ಲೆಲ್ಲಿಯೂ ಪರಿಪೂರ್ಣನಾಗಿರುವ ಮತ್ತು ಮೊದಲು ಮಧ್ಯ ಕೊನೆಗಳಿಲ್ಲದ ಆ ಭಗವಂತನು, ಒಂದು ಸೂಜಿಯು ನಾಟುವ ಸ್ಥಳವನ್ನೂ ಬಿಡದೆ ಒಂದು ದೊಡ್ಡ ಬಯಲಿನಲ್ಲಿ ಬಯಲಾಗಿಯೇ ಅಣಗಿರುವುದು ಮಾತ್ರವಲ್ಲದೆ, ತನ್ನ ಲೀಲಾವಿನೋದಗಳೆಲ್ಲವನ್ನೂ ಸರ್ವರಿಗೂ ತೋರಿಸುವುದಕ್ಕಾಗಿ ಈ ಕೆಳಗೆ ಹೇಳಿರುವ ರೀತಿಯಲ್ಲಿ ಮಾಡುತ್ತಾನೆ. 'ಅಪ ಏವ ಸಸರ್ಜಾzದಾ' ಎಂಬಂತೆ ಮೊದಲು ಜಲಭಾಗವನ್ನು ಸೃಷ್ಟಿಸಿದನಂತರ ಪೃಥಿವಿ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳನ್ನು ಸೃಷ್ಟಿಸಿದನು. ಈ ಪಂಚಭೂತಗಳೆಲ್ಲವೂ ನಮ್ಮೆದುರಿಗೆ ಕಾಣ್ಬರುವ ಬಯಲಿನಲ್ಲಡಗಿವೆಯೇ ಹೊರತು, ಮತ್ತೆಲ್ಲಿಯೂ ಅಲ್ಲವು. ಬಟ್ಟಬಯಲುರೂಪವುಳ್ಳ ಭಗವಂತನು ಈ ಬಯಲಿನಲ್ಲಿ ಅಡಗಿರುವ ಪಂಚಭೂತಗಳನ್ನು ಬೇರೆಬೇರೆಯಾಗಿ ಹೊರತೆಗೆದು, ತಾನು ಶರೀರವನ್ನು ಧರಿಸುವುದಕ್ಕಾಗಿ ಆ ಪಂಚಭೂತಗಳನ್ನು 'ಸಮಷ್ಟಿ, ವ್ಯಷ್ಟಿ' ಎಂಬ ಎರಡು ಭಾಗಗಳಾಗಿ ಮಾಡಿ ಅವುಗಳನ್ನು ಒಂದರಲ್ಲೊಂದನ್ನು ಬೆರಸಿ, ಅನಂತರ ತೇಜೋಮಯವಾದ ಶುಭ್ರವರ್ಣವುಳ್ಳ ಮತ್ತು ದಿವ್ಯಮಂಗಳಕರವಾದ ಒಂದು ಶರೀರವನ್ನು ತನಗೆ ತಾನೇ ಕಲ್ಪಿಸಿಕೊಂಡನು.

ತಾನು ಇಂತಹ ಬಿಳುಪಾದ ಶುಭ್ರ ಶರೀರವನ್ನು ಸೃಷ್ಟಿಸಿಕೊಳ್ಳುವುದಕ್ಕೆ ಕಾರಣವೇನೆಂದರೆ:—ಆ ಪರಮಾತ್ಮನಲ್ಲಿ ಭೂತದಯೆ, ಪಶ್ಚಾತ್ತಾಪ ಮತ್ತು ಜೀವಕಾರುಣ್ಯ ಮೊದಲಾದ ಸದ್ಗುಣಗಳು ತುಂಬಿದ್ದು, ದುರ್ಗುಣಗಳೆಂಬುವು ಲೇಶಮಾತ್ರವೂ ಇಲ್ಲದೆ, ಮನಸ್ಸೆಂಬುದು ಶುದ್ಧ

ಸ್ಫಟಿಕದಂತೆ ಇರುವುದರಿಂದ, ಆ ಪರಮಾತ್ಮನಿಗೆ ಹೊರಭಾಗದ ಚರ್ಮವು ಸ್ಫಟಿಕದಂತೆ ಬಿಳುಪಾಯಿತು. ಯಾವಾತನು ಮೇಲೆ ಹೇಳಿದಂತೆ ಭೂತ ದಯೆ ಪಶ್ಚಾತ್ತಾಪ ಮೊದಲಾದ ಸದ್ಗುಣಗಳಿಂದ ಕೂಡಿ ಮನಸ್ಸಿನಲ್ಲಿ ದುರ್ಗುಣಗಳಿಗೆ ಎಡೆಗುಡದೆ ಮಹಾ ಪರಿಶುದ್ಧನಾಗಿರುತ್ತಾನೋ ಆತ ನನ್ನು ಸಾಮಾನ್ಯಮನುಷ್ಯನೆಂದೆಣಿಸದೆ, ಸಾಕ್ಷಾತ್ ಈಶ್ವರಸ್ವರೂಪನೇ ಎಂದು ತಿಳಿಯಬೇಕು. ಆತನು ಆ ಶರೀರವನ್ನು ಬಿಟ್ಟ ತರುವಾಯ ಈಶ್ವರನಲ್ಲಿ ಐಕ್ಯನಾಗುತ್ತಾನೆ. ಬಟ್ಟಬಯಲಾಗಿರುವ ಭಗವಂತನು ಹಿಂದೆ ಹೇಳಿದಂತೆ ಒಂದು ಶರೀರವನ್ನು ಧರಿಸಿರುವುದರಿಂದ, ಆತನಿಗೆ 'ಈಶ್ವರ' ಎಂಬ ಒಂದು ಹೆಸರು ಈ ಮಧ್ಯೆ ಉಂಟಾಯಿತೇ ಹೊರತು, ಆತನಿಗೆ ಯಾವ ನಾಮರೂಪ ಭೇದಗಳೂ ಇಲ್ಲವು. ಹೀಗೆ ಒಂದು ದೈವಿಕ ವಾದ ಶರೀರವನ್ನು ತನಗೆ ತಾನೇ ಸೃಷ್ಟಿಮಾಡಿಕೊಂಡಮೇಲೆ, ಈಶ್ವರನು ಎಂಭತ್ತನಾಲ್ಕು ಲಕ್ಷ ಜೀವರಾಶಿಗಳನ್ನು ಸೃಷ್ಟಿಮಾಡಿದನು.

ಪ್ರಪಂಚದಲ್ಲಿರುವ ಮಾನವರು ಪ್ರಪಂಚದಲ್ಲಿ ವೃಕ್ಷವು ಮೊದ ಲಾಯಿತೇ? ಇಲ್ಲವೇ ಬೀಜವು ಮೊದಲಾಯಿತೇ? ಎಂಬ ಪ್ರಶ್ನೆ ಕೇಳು ವುದು ಸಹಜ. ಬೀಜವೇ ಮೊದಲು ಹುಟ್ಟಿತೆಂದರೆ ವೃಕ್ಷವಿಲ್ಲದೆ ಬೀಜವು ಹೇಗೆ ಬಂದಿತು? ಎಂಬ ಪ್ರಶ್ನೆ ಬರುತ್ತದೆ. ಹಾಗಿಲ್ಲದೆ ವೃಕ್ಷವೇ ಮೊದಲು ಹುಟ್ಟಿತೆಂದರೆ,ಬೀಜವಿಲ್ಲದೆ ವೃಕ್ಷವು ಯಾವ ರೀತಿಯಲ್ಲುಂಟಾಯಿತು? ಎಂಬ ಪ್ರಶ್ನೆಯುಂಟಾಗುತ್ತದೆ. ಈ ಬೀಜವೃಕ್ಷಗಳ ವಿಷಯದಲ್ಲಿ ಯಾವುದು ಮೊದಲು ಹುಟ್ಟಿತು ಎಂದು ಹೇಳಲು ಕಷ್ಟಸಾಧ್ಯ. ಆದರೂ ಈ ಗ್ರಂಥ ಕರ್ತರು ವೃಕ್ಷವೇ ಮೊದಲು ಹುಟ್ಟಿತೆಂದು ಹೇಳುತ್ತಿದ್ದಾರೆ. ಅದು ಹೇ ಗೆಂದರೆ, ಸೃಷ್ಟಿಗೆ ತತ್ಪೂರ್ವದಲ್ಲಿ ತನಗೆ ತಾನೆ ಧವಳದೇಹವನ್ನು ಕಲ್ಪಿಸಿ ಕೊಂಡ ಆ ಪರಮಾತ್ಮನು ತನ್ನ ಮನಸ್ಸಿನಲ್ಲಿ ಕೆಲವು ಸಂಕಲ್ಪಗಳನ್ನು ಮಾಡಿ ದನು. ಆ ಪರಮಾತ್ಮನ ಸಂಕಲ್ಪಗಳೇ ಸೃಷ್ಟಿಗೆ ಬೀಜಗಳು ಅಂದರೆ ಆ ಪರಮಾತ್ಮನು ಅರಳಿ, ಆಲ, ಮಾವು, ತೆಂಗು, ಹಲಸು ಮೊದಲಾದ ವೃಕ್ಷ ಗಳನ್ನೂ, ಮಲ್ಲಿಗೆ, ಜಾಜಿ, ಸಂಪಿಗೆ, ವಕುಳ, ಸೇವಂತಿಗೆ ಮೊದಲಾದ ಪುಷ್ಪಗಳ ಗಿಡಗಳನ್ನೂ ಮನಸ್ಸಿನಲ್ಲಿ ಸಂಕಲ್ಪಮಾಡಿದ ತಕ್ಷಣವೇ ಅವು ಗಳು ಉದ್ಭವಿಸಿದವು. ಈ ವೃಕ್ಷಗಳಿಂದ ಉತ್ಪತ್ತಿಯಾದವೇ ಮುಂದೆ

ಬೆಳೆಯುವ ಗಿಡಗಳಿಗೆ ಬೀಜಗಳು. ಇದಕ್ಕೆ 'ಬೀಜವೃಕ್ಷನ್ಯಾಯ' ವೆಂದು ಹೆಸರು ಬಂದಿದೆ. ಈ ವಿಷಯಗಳೆಲ್ಲವನ್ನೂ ಪ್ರಪಂಚಸೃಷ್ಟಿಯೆಂಬ ಹಿಂದಿನ ಅಧ್ಯಾಯದಲ್ಲಿ ವಿಶದಪಡಿಸಿದೆ. ಎಂಭತ್ತನಾಲ್ಕು ಲಕ್ಷ ಜೀವರಾಶಿಗಳ ಸಂಖ್ಯಾಪ್ರಮಾಣಗಳನ್ನು ಹಿಂದೆ ಈ ಗ್ರಂಥದ 334ನೇ ಪುಟದಲ್ಲಿ ಪಿಂಡೋತ್ಪತ್ತಿ ಪ್ರಕರಣದಲ್ಲಿ ತಿಳಿಸಿದೆ. ಹೀಗೆ ಈಶ್ವರನು ಎಂಭತ್ತ ನಾಲ್ಕು ಲಕ್ಷ ಜೀವರಾಶಿಗಳನ್ನು ಸೃಷ್ಟಿಸಿದಮೇಲೆ ಕೃತ, ತ್ರೇತ, ದ್ವಾಪರ ಮತ್ತು ಕಲಿಯೆಂಬ ನಾಲ್ಕು ಯುಗಗಳನ್ನು ಕಾಲದ ಲೆಕ್ಕಕ್ಕಾಗಿ ಏರ್ಪಡಿಸಿದನು. ಇದರಲ್ಲಿ ಮೊದಲನೆಯದೇ ಕೃತಯುಗ. ಆ ಕೃತಯುಗದ ಧರ್ಮವು ಈ ಕೆಳಗೆ ವಿವರಿಸಲ್ಪಟ್ಟಿದೆ.

## ಕೃತಯುಗ ಧರ್ಮವು.

ಮೊದಲನೆಯದಾದ ಈ ಕೃತಯುಗದಲ್ಲಿ ಧರ್ಮದೇವತೆಯು ವೃಷಭ ರೂಪವನ್ನು ಹೊಂದಿ ತನ್ನ ನಾಲ್ಕು ಕಾಲುಗಳನ್ನೂ ಭೂಮಿಯಮೇಲೆ ಊರಿ ನಡೆಯುತ್ತಿದ್ದಿತು. ಅಂದರೆ ಅಧರ್ಮಕ್ಕೆ ಎಡೆಗುಡದೆ ಸಮಸ್ತ ಜೀವ ರಾಶಿಗಳೂ ಧರ್ಮದಿಂದಲೇ ನಡೆದುಕೊಳ್ಳುತ್ತಿದ್ದವು. ಆದುದರಿಂದಲೇ ಸಮಸ್ತ ಜೀವಜಾಲದಲ್ಲಿ ಉತ್ತಮವಾದ ಮನುಷ್ಯಕುಲದಲ್ಲಿ ಜನಿಸಿದ ಸ್ತ್ರೀ ಪುರುಷರು ವಿಶೇಷ ಪುಣ್ಯಾತ್ಮರಾಗಿದ್ದು, 'ಹಂಸ' ಸ್ವರೂಪನಾದ ಪರ ಮಾತ್ಮನನ್ನು ನಿರಂತರವೂ ಧ್ಯಾನಿಸುತ್ತ, ಧರ್ಮಪಥವನ್ನು ಬಿಡದೆ ನಡೆಯುತ್ತಿದ್ದುದರಿಂದ ಅವರಿಗೆ ಮುಕ್ತಿಭವನವು ಬಹು ಸುಲಭವಾಗಿ ದೊರಕುತ್ತಿತ್ತು. ಈ ಯುಗದಲ್ಲಿದ್ದ ಜನರು ಕೃತಕೃತ್ಯರಾಗಿದ್ದುದರಿಂದ ಇದಕ್ಕೆ 'ಕೃತ ಯುಗ' ಎಂಬ ಹೆಸರು ಬಂದಿತು. ಈ ಯುಗದಲ್ಲಿ ವಿಗ್ರಹಾರಾಧನೆಗಳು ಮೊದಲಾದುವಿಲ್ಲವು. ಈ ಮುಂದೆ ತ್ರೇತಾಯುಗ ಧರ್ಮವನ್ನು ವಿವರಿಸಿದೆ.

## ತ್ರೇತಾಯುಗ ಧರ್ಮವು.

ಶ್ರುತಿ ॥ ನಿಶ್ವಾಸಭೂತಾಃ ಮೇ ವಿಷ್ಣೋಃ ♦ ಜಾತಾ ವೇದಾ ಸ್ಸುವಿಸ್ತರಾಃ ॥

ಎಂಬ ಶ್ರುತಿಪ್ರಮಾಣಾನುಸಾರವಾಗಿ, ಈ ತ್ರೇತಾಯುಗದಲ್ಲಿ ಯುಗ ಧರ್ಮಕ್ಕೆ ತಕ್ಕಂತೆ ಕಾಮಕ್ರೋಧಾದಿ ದುರ್ಗುಣಗಳು ಹುಟ್ಟಿ ಧರ್ಮ

ವನ್ನು ತಗ್ಗಿಸುತ್ತ ಬಂದವು. ಆಗ ವೃಷಭರೂಪಿಯಾದ ಧರ್ಮದೇವತೆಯು ಒಂದು ಪಾದವನ್ನೆತ್ತಬೇಕಾಗಿ ಬಂದಿತು. ಈ ಧರ್ಮಾಧರ್ಮಗಳ ಭೇದಗಳನ್ನು ತೋರಿಸುವ ಸಲುವಾಗಿಯೇ ಶ್ರೀ ಮಹಾವಿಷ್ಣುವಿನ ನಿಶ್ವಾಸದಿಂದ ಚತುರ್ವೇದಗಳು ಹುಟ್ಟಿದವು. ಈ ವೇದಗಳಿಂದ ವೇದಾಂಗಗಳೂ ಅವುಗಳಿಂದ 'ಶ್ರುತೇರಿವಾರ್ಥಂ ಸ್ಮೃತಿ ರನ್ವಗಚ್ಛತ್' ಎಂಬಂತೆ ಶ್ರುತಿಗಳ ಅರ್ಥಗಳನ್ನು ತಿಳಿಸುವ ಧರ್ಮಶಾಸ್ತ್ರಗಳೂ ಹುಟ್ಟಿದವು. ಅವುಗಳ ಆಧಾರದಿಂದಲೇ ನೀತಿಬೋಧಕವಾದ ಪುರಾಣಗಳೂ ಹೊರಬಿದ್ದವು. ಇವುಗಳ ಮುಖೇನ ಋಷಿಗಳು, ಜನಗಳಲ್ಲಿನ ಅಧರ್ಮವನ್ನು ಕಡಿಮೆಮಾಡುವವ ಸಲುವಾಗಿ ವಿಗ್ರಹಾರಾಧನೆ ಮೊದಲಾದ ಪೂಜಾಕ್ರಮಗಳನ್ನು ತಿಳಿಯಪಡಿಸಿದರು. ಇದೂ ಅಲ್ಲದೆ, ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ಚತುರ್ವರ್ಣಗಳೂ, ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಮತ್ತು ಸನ್ಯಾಸವೆಂಬ ನಾಲ್ಕು ಆಶ್ರಮಗಳೂ ಮತ್ತು ಈ ವರ್ಣಾಶ್ರಮ ಧರ್ಮಗಳೂ ಏರ್ಪಟ್ಟವು. ಈ ಯುಗದಲ್ಲಿದ್ದ ಜನರು ಈ ವಿಧವಾದ ವಿಧಾನಗಳನ್ನು ಕೈಕೊಂಡು ಧರ್ಮವನ್ನು ಹೆಚ್ಚಾಗಿಯೂ ಅಧರ್ಮವನ್ನು ಕಡಿಮೆಯಾಗಿಯೂ ಮಾಡುತ್ತಿದ್ದರು. ಈ ಯುಗದಲ್ಲಿ ನಡೆದ ರಾಮಾಯಣ ಕಥೆಯಲ್ಲಿ ರಾವಣನೆಂಬುವನು ಪರಸ್ತ್ರೀ ಅಪಹರಣ ಮೊದಲಾದ ಅಧರ್ಮಗಳನ್ನು ಸ್ವೀಕರಿಸಿದ್ದಕ್ಕಾಗಿ, ರಾಮಾವತಾರದಿಂದ ವಿಷ್ಣುವು ಆ ರಾವಣನನ್ನು ಕೊಲ್ಲುವುದರ ಮೂಲಕ ಅಧರ್ಮವನ್ನು ಹೋಗಲಾಡಿಸಿ ಧರ್ಮಸ್ಥಾಪನೆಯನ್ನು ಮಾಡಿದನೆಂಬ ರಹಸ್ಯವನ್ನು ತೋರ್ಪಡಿಸಿದೆ. ಈ ಕೆಳಗೆ ದ್ವಾಪರಯುಗದ ಧರ್ಮವನ್ನು ಹೇಳಿದೆ.

## ದ್ವಾಪರಯುಗದ ಧರ್ಮವು.

ಈ ಯುಗದಲ್ಲಿ ತ್ರೇತಾಯುಗದಲ್ಲಿದ್ದುದಕ್ಕಿಂತಲೂ ಕಾಮಕ್ರೋಧಾದಿಗಳು ಮತ್ತಷ್ಟು ಹೆಚ್ಚಾಗಿ ಆಚರಣೆಗೆ ಬಂದಿತಾಗಿ, ಧರ್ಮದೇವತೆಯು ಎರಡು ಪಾದಗಳಲ್ಲಿ ನಿಲ್ಲಬೇಕಾಗಿ ಬಂದಿತು. ಆಗ ಧರ್ಮಾಧರ್ಮಗಳ ಪ್ರಮಾಣವು ಸಮನಾಗಿದ್ದಿತು. ಈ ಯುಗದಲ್ಲಿ ಜನಗಳಿಗೆ ಧರ್ಮವಿಚಾರದಲ್ಲಿ ಸಂದೇಹವು ಅಧಿಕವಾಗಿ, ಬುದ್ಧಿಯು ಚಾಂಚಲ್ಯವನ್ನು ಹೊಂದಿ

ಕಾಮ್ಯಕರ್ಮಗಳಲ್ಲಿ ಆಸೆಯು ಹೆಚ್ಚಿತು. ಈ ಯುಗದಲ್ಲಿ ಮಹಾಭಾರತದ ಕಥೆಯು ನಡೆಯಿತು. ಇದರ ರಹಸ್ಯವೇನೆಂದರೆ:— ಪಾಂಡವರಿಗೂ ಕೌರವರಿಗೂ ನಡೆದ ಯುದ್ಧವು ಧರ್ಮ ಮತ್ತು ಅಧರ್ಮಗಳಿಗೆ ನಡೆದ ಯುದ್ಧ, ಕೃಷ್ಣಪರಮಾತ್ಮನು ಪಾಂಡವರಿಗೆ ಸಹಾಯಕನಾಗಿದ್ದು ಕೌರವರನ್ನು ಕೊಲ್ಲಿಸಿದನು ಎಂದರೆ, ಶ್ರೀ ಭಗವಂತನು ಯಾವಾಗಲೂ ಧರ್ಮಪಕ್ಷವನ್ನು ವಹಿಸಿ ಅಧರ್ಮವನ್ನು ನಾಶಮಾಡಿದನು. ಎಂಬುದೇ ಆ ಕಥೆಯ ಅಭಿಪ್ರಾಯ. ಈ ಯುಗದಲ್ಲಿ ಶ್ರೀ ಪರಮಾತ್ಮನು ಕೃಷ್ಣಾವತಾರವನ್ನೆತ್ತಿ ಧರ್ಮಸಂಸ್ಥಾಪನೆ ಮಾಡಿ ಕಾಮ್ಯಕರ್ಮಗಳನ್ನು ಮಾಡುವವರನ್ನು ನಿಂದಿಸಿದನು. ಇದಕ್ಕೆ ಶ್ರೀ ಭಗವದ್ಗೀತೆ ಅಧ್ಯಾಯ 2 ಶ್ಲೋ|| 42-43-44 ಪ್ರಮಾಣವು.

ಶ್ಲೋ|| ಯಾ ಮಿಮಾಂ ಪುಷ್ಪಿತಾಂ ವಾಚಂ ♦ ಪ್ರವದಂ ತ್ಯವಿಪಶ್ಚಿತಃ |
ವೇದವಾದರತಾಃ ಪಾರ್ಥ! ♦ ನಾऽನ್ಯದಸ್ತೀತಿ ವಾದಿನಃ ||೪೨||

ಶ್ಲೋ|| ಕಾಮಾತ್ಮಾನ ಸ್ಸ್ವರ್ಗಪರಾಃ ♦ ಜನ್ಮಕರ್ಮಫಲಪ್ರದಾಂ |
ಕ್ರಿಯಾವಿಶೇಷಬಹುಳಾಂ ♦ ಭೋಗೈಶ್ವರ್ಯಗತಿಂ ಪ್ರತಿ ||೪೩||

ಶ್ಲೋ|| ಭೋಗೈಶ್ವರ್ಯಪ್ರಸಕ್ತಾನಾಂ ♦ ತಯಾ ऽಪಹೃತಚೇತಸಾಂ |
ವ್ಯವಸಾಯಾತ್ಮಿಕಾ ಬುದ್ಧಿಃ ♦ ಸಮಾಧೌ ನ ವಿಧೀಯತೇ ||೪೪||

ಕೃಷ್ಣ:—ಓ ಅರ್ಜುನಾ! ನೀನು ಹೇಳುವ ರೀತಿಯಲ್ಲಿಯೇ ಅನೇಕರು ಹೇಳಿರುವುದನ್ನು ನಾನೂ ಕೇಳಿದ್ದೇನೆ. ಹಾಗೆ ಹೇಳುವವರು ನಿಜವಾಗಿಯೂ ವಿದ್ವಾಂಸರಲ್ಲ. ವೇದಗಳಲ್ಲಿ ಹೇಳಿರುವ ಫಲಗಳನ್ನು ಕೇಳಿ ತೃಪ್ತಿಹೊಂದುತ್ತ, 'ಸ್ವರ್ಗಸುಖವನ್ನು ಬಿಟ್ಟರೆ ಬೇರೆ ಸುಖವೇ ಇಲ್ಲವು,' ಎಂದು ಹೇಳುತ್ತ, ಹೆಂಡತಿ ಮಕ್ಕಳು, ಮನೆಮಠಗಳು, ಹೊಲಗದ್ದೆಗಳು ಮೊದಲಾದುವುಗಳಲ್ಲಿ ವಿಶೇಷ ಆಸಕ್ತಿಯುಳ್ಳವರಾಗಿರುತ್ತಾರೆ. ಇದೂ ಇಲ್ಲದೆ ಈ ಭೋಗೈಶ್ವರ್ಯಗಳು, ಸ್ವರ್ಗಾದಿಸುಖಗಳು ಇವೇ ಪರಮಪುರುಷಾರ್ಥವೆಂದು ಇತರರಿಗೆ ಬೋಧಿಸುತ್ತ, ತಾವು ಹೇಳುವ ಮಾತುಗಳು ಸತ್ಯವಾದವುಗಳು ಎಂದು ನಿರ್ಧರಿಸುವುದಕ್ಕಾಗಿ ಬುದ್ಧಿಚಾತುರ್ಯದಿಂದ ಅದಕ್ಕೆ ತಕ್ಕ ಶ್ರುತಿಪ್ರಮಾಣಗಳನ್ನು ಎತ್ತಿ ಹೇಳುತ್ತಿದ್ದಾರೆ.

ಇವುಗಳೆಲ್ಲವೂ ಜನಗಳನ್ನು ತಮ್ಮ ದಾರಿಗೆ ತರುವುದಕ್ಕಾಗಿಯೇ ಹೊರತು, ಮತ್ತೆ ಬೇರೆಯಲ್ಲ. ಪರಮಾತ್ಮ ತತ್ವವು ತಮಗೇ ತಿಳಿಯದಿರುವಾಗ ಇತರರಿಗೆ ಬೋಧಿಸುವ ರೀತಿಯಾದರೂ ಹೇಗೆ? ಶುಷ್ಕವಾದಗಳೆಲ್ಲವೂ ವೇದಾಂತದ ಸಾರವನ್ನು ಹೊರಗೆಡವಲಾರವು. ಮುಮುಕ್ಷುವಿಗೆ ಇದು ಮಾರ್ಗವಲ್ಲವು. ಇಂತಹರು 'ವೇದಾಂತರಹಸ್ಯವು,' 'ತತ್ವಬೋಧೆ' ಎಂದು ಹೆಸರನ್ನಿಟ್ಟು ವಾದವಿವಾದದಿಂದ ತಮ್ಮಭಿಪ್ರಾಯವನ್ನು ಸ್ಥಾಪಿಸುವುದಕ್ಕೆ ಹೊರಟಿದ್ದೇ ಆದರೆ, ಅದರಿಂದ ಪ್ರಯೋಜನವೂ ಇಲ್ಲ. ಅವರ ಜನ್ಮವೂ ವ್ಯರ್ಥ. ಈ ವಿಚಾರವಾಗಿ ತೆಲುಗು ಭಾರತದ ಶಾಂತಿಪರ್ವ ಆರನೆಯ ಅಧ್ಯಾಯದಲ್ಲಿ ಹೇಳಿರುವುದರ ಕನ್ನಡಾನುವಾದವನ್ನು ಇಲ್ಲಿ ಕೊಟ್ಟಿದೆ.

ಗೀ ॥ ವೇದವೇದಾಂತದಿಂದಲೆ ♦ ವೇದ್ಯವಾದ
ಪರಮಾತ್ಮ ತತ್ವವನು ತಿಳಿ ♦ ಯದೆಯೆ ಮತ್ತೆ
ಸದ್ಗುರುವಿ ನುಪದೇಶವನು ♦ ಪಡೆಯದಂತೆ
ಆತ್ಮ ಬೋಧೆಗೆ ತೊಡಗುವನ ♦ ಜನ್ಮ ವ್ಯರ್ಥ ॥

ಅಂದರೆ ವೇದವೇದಾಂತ ಪಠನೆಯಿಂದ ಮಾತ್ರವೇ ತಿಳಿಯುವುದಕ್ಕೆ ಸಾಧ್ಯಸಾದ ಪರಮಾತ್ಮನ ನಿಜಸ್ವರೂಪವನ್ನು ತಾನು ತಿಳಿಯದೆ, ಮತ್ತು ಸದ್ಗುರುವಿನ ಉಪದೇಶವನ್ನು ಹೊಂದದಂತೆ, ಪರಮಾತ್ಮಸ್ವರೂಪವು ಇಂಥದಂಥದೆಂದು ಇತರರಿಗೆ ಬೋಧಿಸುವುದಕ್ಕೆ ಯತ್ನಿಸುವವನ ಜೀವನವೇ ನಿಷ್ಫಲವಾದದ್ದು. ಇಂತಹ ಶುಷ್ಕವಾದಿಗಳ ಉಪದೇಶಗಳು ಹೇಗಿರುತ್ತವೆಯೆಂದರೆ,

ಗೀ ॥ ಪೂರ್ವಶಾಸ್ತ್ರಗಳರ್ಥವಂ ♦ ದೂರಮಾಡಿ,
ತತ್ವಬೋಧಾಮೃತವ ಸವಿ ♦ ಯರಿಯದಂತೆ
ಜನಗಳಿಗೆ ಶುಷ್ಕಬೋಧೆಯ ♦ ಮಾಡಿ ಧನವ
ಗಳಿಸಿ ಶಾಂತಿಯ ನೊಂದದಯೆ ♦ ಮೋಸಗೈವರ್ ॥

(ಕನ್ನಡ ಪರಿವರ್ತನೆ.)

ಎಂದು ಭಾರತದ ಶಾಂತಿಪರ್ವ 1ನೇ ಅಧ್ಯಾಯದಲ್ಲಿ ಹೇಳಿರುವಂತೆ ಅವರ ಉಪದೇಶವಾಕ್ಯಗಳು ಶಾಸ್ತ್ರಗಳ ಮುಖ್ಯ ತತ್ವವನ್ನು ದೂರಮಾಡಿ

ತತ್ವಬೋಧಾಮೃತದ ಸಾರವನ್ನು ತಿಳಿಯದಂತೆ ಧನವನ್ನು ಸಂಪಾದಿಸು ವುದಕ್ಕಾಗಿ ಜನಗಳಿಗೆ ಶುಷ್ಕವೇದಾಂತವನ್ನು ಬೋಧಿಸುತ್ತಿರುವುವು. ಇದ ರಿಂದ ಅಂತಹ ಉಪದೇಶಕರಿಗೆ ಶಾಂತಿಯುಂಟಾಗದು. ಮತ್ತು ಇವರ ಕರ್ತವ್ಯವು ಜನಗಳನ್ನು ಮೋಸಗೊಳಿಸುವುದಕ್ಕೇ ಹೊರತು, ಅವರನ್ನು ಉದ್ಧಾರಮಾಡುವುದಕ್ಕಲ್ಲವು. ಇಂಥವರ ಮಾತು ಹೇಗಿದೆಯೆಂದರೆ:—

ಕಂ ॥ ಮುಂದಿ ಕೆಲರ್ ಕರ್ಮವ ನಭಿ
ನಂದಿಸು ತಿಹ ರವರು ತಾ ಜ ◆ ನನ ಮರಣಗಳಂ ॥
ಪೊಂದದೆ ಮಾಣರು ಮುಹದಾ-।
ನಂದವ ಪೊಂದುವರು ನಿತ್ಯ ◆ ನೈಷ್ಕರ್ಮ್ಯಪರರ್ ॥

ಎಂಬುದಾಗಿ ಭಾರತದ ಶಾಂತಿಪರ್ವ ಐದನೇ ಅಧ್ಯಾಯದಲ್ಲಿ ಹೇಳಿದೆ. ಕೆಲವು ಜನರು ಕರ್ಮವೇ ಶ್ರೇಷ್ಠವೆಂದು ನಂಬಿ ಜನಗಳನ್ನು ತಮ್ಮ ಸವಿ ಮಾತುಗಳಿಂದ ಆನಂದಗೊಳಿಸುತ್ತಾರೆ. ತಾವೂ ಆ ಕರ್ಮಾಚರಣೆಯಿಂದ ಸುಖಸಂತೋಷಗಳನ್ನು ಪಡೆಯುತ್ತಾರೆ. ಇಂಥವರು ಜನನಮರಣ ವೆಂಬ ಸಮುದ್ರವನ್ನು ದಾಟಬಲ್ಲರೇ? ಅಂದರೆ ಮೋಕ್ಷವನ್ನು ಎಂದಿಗೂ ಹೊಂದಲಾರರೆಂದರ್ಥ. ಇವರು ಇತರ ಜನಗಳನ್ನು ಮೆಚ್ಚಿಸಲು ಬಣ್ಣ ಕಟ್ಟಿದ ತಮ್ಮ ಮಾತುಗಳಿಂದ ಸೌಂದರ್ಯವನ್ನು ಕಲ್ಪಿಸಿ, ಅವರನ್ನು ಆಕರ್ಷಿಸಿದರೂ, ಆ ಬಣ್ಣ ಕಳೆದಮೇಲೆ ಮಿಥ್ಯಾ ಸೌಂದರ್ಯವು ಹೋಗಿ ನಿಜಸ್ಥಿತಿಯು ವ್ಯಕ್ತವಾಗಿ ನಂಬಿಕೆಯನ್ನು ಹೋಗಲಾಡಿಸಿಕೊಳ್ಳುವರು. ಇವರೇ ಶುಷ್ಕವೇದಾಂತಿಗಳು. ಇವರು ಧನದಾಸೆಗಾಗಿ ತಾವು ಆಚರಿಸ ದಿರುವ ಅನೇಕ ಉಪದೇಶಗಳನ್ನು ಮಾಡುತ್ತಾರೆ. ಇದರಿಂದೇನು ಫಲ. ಮಾನವರು ಇಂದ್ರಾದಿದೇವತೆಗಳಿಗೆ ಯಜ್ಞಯಾಗಾದಿಗಳಿಂದ ತೃಪ್ತಿಪಡಿಸಿ ಅವರಿಂದ ತಮಗೆ ಬೇಕಾದ ಫಲಗಳನ್ನು ಕೋರುತ್ತ ಬಂದರೆ, ಇಂಥವರಿಗೆ ಮನೋಲಯವೆಂಬುದು ಎಂದಿಗೆ ಲಭಿಸುವುದು? ಎಂದಿಗೂ ಇಲ್ಲ. ಇದಕ್ಕೆ ಒಂದು ದೃಷ್ಟಾಂತವುಂಟು. ಏನೆಂದರೆ:—ಪೂರ್ವದಲ್ಲಿ ಅನೇಕ ಯಜ್ಞ ಗಳನ್ನಾಚರಿಸಿದ್ದ ಪ್ರಾಚೀನಬರ್ಹಿಯೆಂಬ ಒಬ್ಬ ರಾಜನ ಸಮೀಪಕ್ಕೆ ನಾರದಮಹರ್ಷಿಗಳು ಹೋಗಿ ಆತನಿಗೆ ಜ್ಞಾನೋಪದೇಶವನ್ನು ಮಾಡುವ ಸಲುವಾಗಿ ಹೀಗೆಂದು ಆತನೊಡನೆ ಹೇಳುತ್ತಿದ್ದಾರೆ.

"ಓ ರಾಜ! ಈ ಕರ್ಮಗಳನ್ನು ಮಾಡಿ ಯಾವ ಬಗೆಯಾ ಶ್ರೇಯಸ್ಸನ್ನು ಹೊಂದಲು ಕೋರುತ್ತಿದ್ದೀಯೋ, ಅಂತಹ ಅರಿಷ್ಟನಾಶ ವಾದ ಮತ್ತು ನಿನ್ನ ಅಭೀಷ್ಟವನ್ನು ಸಲ್ಲಿಸುವ ಶ್ರೇಯಸ್ಸು ಈ ವಿಧವಾ ಕರ್ಮಗಳಿಂದುಂಟಾಗದು," ಎಂದು ಹೇಳಲು ಆ ಪ್ರಾಚೀನ ಬರ್ಹಿಯ ನಾರದರನ್ನು ಕುರಿತು ಹೀಗೆಂದು ಕೇಳಿಕೊಂಡನು.

ಸೀ ॥ "ಅನಘಮುನೀಂದ್ರ! ಮಹಾಭಾಗ! ನಾನು ಕ-
ರ್ಮೋಪಹತಜ್ಞಾನಿ ♦ ಯಾಗಿ ಮೋಕ್ಷ-
ಮಾರ್ಗವನು ತಿಳಿಯದಿಹೆ ♦ ನೆನಗೀಗ ಕರುಣದಿಂ
ವಿಮಲತರವಾದ ಮೋ ♦ ಕ್ಷಕರ್ಮಬಂಧ-
ನಾಶವನು ತಾ ತರುವ ♦ ಜ್ಞಾನೋಪದೇಶವನು
ಮಾಡಬೇಕತಿದಯಾ ♦ ಕಾರ ನೀನು
ಕೂಟಧರ್ಮಗಳಾದ ♦ ಸತಿಸುತರು ಭವನಧನ
ತತಿಗಳಲಿ ನಾಂ ಸೇರಿ ಯವುಗಳನ್ನೆ

ಗೀ ॥ ಪರಮಪುರುಷಾರ್ಥವೆಂದೆನುತ ♦ ಮನದೊಳೆಣಿಸಿ ।
ಮಂದಮತಿ ಯಹೆನು ಸಂಸಾರ ♦ ಮಾರ್ಗದಲ್ಲಿ ॥
ಬಿಡದೆ ಸುತ್ತಿರುಗವವ ನಿಜ ♦ ವಾದ ಮೋಕ್ಷ- ।
ಪದವನೆಂದಿಗು ಪಡೆಯನೈ ♦ ಭವ್ಯಚರಿತ!"

(ಪರಿವರ್ತನೆ, ಆಂಧ್ರಭಾಗವತ, 4ನೇ ಸ್ಕಂದ, 25ನೇ ಅಧ್ಯಾಯ.)

ಕಂದ ॥ "ಎನಲವ ಗೊರೆದನು ನಾರದ
ನನಘನೆ! ನಿನ್ನೀ ಯಜ್ಞಗ ಳೊಳಗುಂ ದಯೆಯಿಂ ।
ನೆನೆಯದೆ ನಿನ್ನಿಂ ಹತನಹ
ಮಣಿಪಶುಗಳು ನಿನ್ನ ಕೊಲ್ಲೆ ಸಾಸಿರವಿರ್ಕುಂ ॥"

(ಆಂಧ್ರ ಭಾಗವತಂ, 25ನೇ ಅಧ್ಯಾಯ.)

"ಅಂದರೆ ರಾಜಾ! ನೀನು ಯಜ್ಞದಲ್ಲಿ ದಯೆಯಿಲ್ಲದೆ ಕೊಂದಂಥ ಪಶುಗಳು ನಿನ್ನನ್ನು ಕೊಲ್ಲುವುದಕ್ಕಾಗಿ ಪರಲೋಕದಲ್ಲಿ ಸಾವಿರಸಂಖ್ಯೆ ಯಿಂದ ನಿನಗಾಗಿ ಕಾದಿರುವವು. ಜೀವಹಿಂಸೆಗಳ ಮೂಲಕ ಮಾಡಿದ

ಯಜ್ಞಗಳಿಂದ ದೇವತೆಗಳು ತೃಪ್ತಿಪಡುವರೇ? ಇಂತಹ ಪಾಪಕಾರ್ಯಗಳಿಂದ ಮುಮುಕ್ಷುಗಳು ತಮ್ಮ ಇಷ್ಟಾರ್ಥವನ್ನು ಪಡೆಯುವರೇ? ಎಂದಿಗೂ ಇಲ್ಲವೆಂದು ತಿಳಿ.

ಮ ॥ "ಘನವಿಸ್ತಾರನ ಪಾರನ ದ್ವಯನು ತಾ ♦ ನಾಗಿರ್ಪ ವೇ ಜ್ಞೇದದೋ-।
ಳ್ಮನಗೊಂಡಿ ರ್ದತಿ ಮಂತ್ರಯುಕ್ತಿವಿವಿಧಂ ♦ ತಾನೆಂದು ದೇವಾಖ್ಯಶೋ-॥
ಭನಸಾಮರ್ಥ್ಯಗಳಿಂದ ಲಿಂದ್ರಮುಖರೂ ♦ ಪಂ ತನ್ನ ದೈವಂ ನಿಜ-।
ಮ್ಮೆ ನುತಾ ರ್ಬೇಡುತಲಿರ್ಪರೋ ಅವರುಗಳ್ ♦ ತಾವ್ಕಾಂಬರೇ ನಾತ್ಮನಂ ॥"

(ಆಂಧ್ರಭಾಗವತ, 4ನೇ ಸ್ಕಂಧ, 29ನೇ ಅಧ್ಯಾಯ 873 ಶ್ಲೋ.)

(ಪರಿವರ್ತನೆ.)

ಕಂದ ॥ "ಮನದೊಳ ಗಾತ್ಮನ ರೂಪವ।
ನೆನೆವನ ಭಗವಂತ ನೆಂದು ♦ ತನ್ನಯ ಕೃಪೆಯಿಂ ॥
ನೆನೆಯಿಪನೋ ಆತ ನಂದು।
ಮನುಜೇಶ್ವರ! ಮಹಿತಾತ್ಮನೆ ♦ ನಿಸುವನು ನಿಜವ್ಮೆ ॥"

(ಶ್ಲೋ॥ 874.)

"ಆ ಪರಮಾತ್ಮನು ಅನಂತನು, ಅಪಾರಮಹಿಮನು, ಅದ್ವಯನು, ಅನಂತವಾಗಿಯೂ ದುರವಗಾಹವಾಗಿಯೂ ಇರುವ ವೇದದಲ್ಲಿ ಹೇಳಲ್ಪಟ್ಟ ಅಲ್ಪಸುಖಗಳಿಗಾಗಿ ಆಸೆಪಟ್ಟು, ಇಂದ್ರಾದಿದೇವತೆಗಳನ್ನು ಭಜಿಸತಕ್ಕ ನಿನ್ನಂಥವರು ಅವನನ್ನು ಹೇಗೆತಾನೇ ಕಾಣಬಲ್ಲರು? ಭಗವಂತನು ಯಾವ ಯಾವ ಚೇತನದಲ್ಲಿ ಅನುಗ್ರಹವನ್ನಿಟ್ಟು ಅವನನ್ನು ಸ್ಮರಿಸಬೇಕೆಂದು ಸಂಕಲ್ಪಮಾಡುವನೋ, ಆ ಕ್ಷಣವೇ ಆ ಮನುಷ್ಯನಿಗೆ ಇಹಲೋಕದ ಮತ್ತು ಸ್ವರ್ಗಾದಿ ಲೋಕಗಳ ಸುಖಕ್ಕೆ ಸಾಧನವಾದ ಕರ್ಮಗಳಲ್ಲಿ ಆಸೆಯು ಬಿಟ್ಟುಹೋಗಿ ಅವನ ಮನಸ್ಸು ಭಗವಂತನಲ್ಲಿ ಮಾತ್ರ ನೆಲೆಗೊಳ್ಳುವುದು. ಆದುದರಿಂದ ಎಲೈ ಪ್ರಾಚೀನಬರ್ಹಿರಾಜೇಂದ್ರನೇ! ನೀನು ಭಗವದನುಗ್ರಹವೇ ಭಗವಂತನ ಮುಖ್ಯವಾದ ಅನುಗ್ರಹವೆಂದು ಚನ್ನಾಗಿ ನಂಬು. ಸ್ವರ್ಗಾದಿ ಸಾಧನೆಗೆ ಅವಕಾಶವನ್ನು ಕಲ್ಪಿಸುವ ಕರ್ಮಗಳು ಪುರುಷಾರ್ಥವನ್ನು ಕೊಡುತ್ತವೆ, ಎಂಬ ಆಶೆಯನ್ನು ತ್ಯಜಿಸು. ಆ ಸುಖ

ಗಳು ಪುರುಷಾರ್ಥಗಳೆಂದೆನಿಸಲಾರವು. ಅಧಿಕಾಯಾಸಗಳಿಂದ ಸ್ವಲ್ಪ ಫಲಗಳನ್ನು ಕೊಡತಕ್ಕ ಅವುಗಳಿಂದ ನಿನ್ನ ಕಷ್ಟಕ್ಕೆ ಸರಿಯಾದ ಸುಖ ವುಂಟಾಗದು. ರಾಜಸ ತಾಮಸ ಗುಣಪ್ರಧಾನರು ವೇದದಲ್ಲಿ ಭಗವದಾ ರಾಧನರೂಪವಾಗಿಯೇ ಹೇಳಲ್ಪಟ್ಟ ಕರ್ಮಕಾಂಡವನ್ನು ಕೇವಲ ಕರ್ಮ ಪ್ರಧಾನವೆಂದು ತಿಳಿಯುವರು. ಅವರು ವೇದದ ತಾತ್ಪರ್ಯವನ್ನೂ ಸ್ವ ಸ್ವರೂಪವನ್ನೂ ತಿಳಿಯದ ಅಜ್ಞಾನಿಗಳಲ್ಲದೆ ಬೇರೆಯಲ್ಲ. ಆದುದರಿಂದ ನೀನು ಇನ್ನುಮೇಲೆ ಕರ್ಮದಲ್ಲಿಯೇ ಹೆಚ್ಚಾದ ಆಸಕ್ತಿಯನ್ನಿಡಬೇಡ. ಭೂಮಿಯುಗಲಕ್ಕೂ ಪೂರ್ವಾಭಿಮುಖವಾಗಿ ದರ್ಭೆಯನ್ನು ಹರಡಿ, ಅನೇಕ ಪಶುಗಳನ್ನು ಕೊಲ್ಲುವುದರಿಂದ ನಾನೇ ದೊಡ್ಡ ಯಜಮಾನನೆಂದು ಗರ್ವಿಸಿ ಹಿಂದುಮುಂದಾಲೋಚನೆಯಿಲ್ಲದೆ, ಉತ್ತಮ ಪುರುಷಾರ್ಥವಾದ ಮೋ ಕ್ಷೋಪಾಯವನ್ನು ಮರೆತು ಜಡನಾಗಿರುವೆ. ಇನ್ನು ಈ ವಿಧವಾದ ಕರ್ಮಗಳನ್ನು ನಿಲ್ಲಿಸಿಬಿಟ್ಟು ಭಗವಂತನನ್ನು ಧ್ಯಾನಿಸುವುದಕ್ಕೆ ಯತ್ನಿಸು. ದೇಹಗಳಿಗೆಲ್ಲವೂ ಆತ್ಮನಾಗಿಯೂ ಈಶ್ವರನಾಗಿಯೂ ಇರುವಂಥ ಆತನು ಸ್ತ್ರೀಪುರುಷರಿಗೆಲ್ಲರಿಗೂ ಕ್ಷೇಮವನ್ನು ಕೊಡುತ್ತಿರುತ್ತಾನೆ. ಆತನಿಗೆ ಸ್ವಲ್ಪವೂ ದುಃಖವೆಂಬುದಿಲ್ಲ. ಇಂತಹ ಆತ್ಮಸ್ವರೂಪವನ್ನು ಯಾವನು ತಿಳಿದುಕೊಳ್ಳುತ್ತಾನೆಯೋ ಅವನೇ ವಿದ್ವಾಂಸನೂ, ಗುರುವೂ ಹೆಚ್ಚೇಕೆ, ಸಾಕ್ಷಾತ್ ಹರಿಯೇ ಆಗುತ್ತಾನೆ.'' ಹೀಗೆಂದು ಆಂಧ್ರಭಾಗವತದ 4 ನೇ ಸ್ಕಂದದಲ್ಲಿ ಹೇಳಿದೆ.

''ಇದೂ ಅಲ್ಲದೆ, ಓ ಅರ್ಜುನಾ! ಶ್ರೀರಾಮಚಂದ್ರನ ಅಂತರಂಗ ಭಕ್ತನಾದ ಆಂಜನೇಯನಿಗೆ ಸೀತಾದೇವಿಯು ತತ್ವೋಪದೇಶವನ್ನು ಮಾ ಡಿದ ವಿಚಾರವಾಗಿ ಹಿಂದೆ ಹೇಳಿದಂತೆ ಶುಷ್ಕವೇದಾಂತಿಗಳೆಲ್ಲರೂ ಕುತರ್ಕ ದಿಂದ ವೇದಾಂತವನ್ನು ಬೋಧಿಸುತ್ತ, ತಾವೂ ಕೆಡುವುದಲ್ಲದೆ ಇತರರಿಗೂ ಮೋಕ್ಷಮಾರ್ಗವು ದೊರಕದಿರುವಂತೆ ಅವರನ್ನು ಕೆಡಿಸುತ್ತಿರುವುದು ಬಹು ಶೋಚನೀಯವಾದ ವಿಷಯವು.'' ಈ ವಿಷಯವನ್ನು ಕುರಿತು 'ಸೀತಾ ರಾಮಾಂಜನೇಯ' ವೆಂಬ ಆಂಧ್ರಗ್ರಂಥಲ್ಲಿ ಹೇಳಿರುವುದರ ಕನ್ನಡಾನು ವಾದವನ್ನು ಈ ಕೆಳಗೆ ಕೊಟ್ಟಿದೆ.

ಕಂ ॥ ತಾರಕ ಯೋಗವ ತಿಳಿಯದೆ
ಮೀರಿದ ವೇದಾಂತ ವಾಕ್ಯ ♦ ನಿವಹಗಳಿಂದಂ ॥
ತೋರಿದ ತೆರದೊಳು ವಾದಿಸು
ವಾರಿಗೆ ಮುಕ್ತಿಯು ಸಲ್ಲುದು ♦ ಪೇಳ್ವಾಯುಸುತಾ ! ॥

ಗೀ ॥ ರಾಜಯೋಗವ ನೆರೆ ತಿಳಿದು ♦ ಸರ್ವಕಾಲ
ಬಿಡ ದವುಗಳ ಭ್ಯಸಿಸೆ ತಾ ♦ ಮನವ ಕೊಡದೆ,
ಕೆಲವು ವೇದಾಂತ ದುಕ್ತಿಗಳ ♦ ಸೇರಿಸಿಟ್ಟು
ಮಾತ ಕಲಿತರೆ ಬ್ರಹ್ಮಾನು ♦ ಭವವು ಬಹುದೇ ? ॥

ಸೀ ॥ ಕವಿದ ಕಗ್ಗತ್ತಲೆಯು ♦ ತೊಲಗುವುದೆ ? ಭೂಮಿಯೋಳ್,
ದೀಪವನು ಹೊತ್ತಿಸುವ ♦ ಮಾತಿನಿಂದ ;
ಹಸಿದಿರುವ ಮಾನವನ ♦ ಹಸಿವು ತಾ ನಡಗುವುದೆ ?
ಪೇಳಿ ವ್ಯಷ್ಟಾನ್ನ ವ ♦ ರ್ಣನೆಗಳಿಂದ ;
ಕಡುಬಡವ ನಾದವನ ♦ ಬಡತನವು ನೀಗುವುದೆ ?
ಹಣದ ಮಹಿಮೆಯನು ಹೊಗ♦ಳುವುದರಿಂದ ;
ರೋಗದಿಂ ನರಳುವನ ♦ ರೋಗ ಬಿಟ್ಟೋಡುವುದೆ ?
ದಿವ್ಯೌಷಧಗಳ ಪ್ರ ♦ ಸಂಗದಿಂದ ;

ಗೀ ॥ ಆದರಂತೆ ಬುದ್ಧಿಯನು ತಾ ♦ ತುಂಬಿಕೊಂಡು
ದಟ್ಟವಾ ದಜ್ಞಾನತಮವ ♦ ಕಳೆಯ ಲಹುದೆ ?
ತರ್ಕಿತ ವಿಚಿತ್ರಶಬ್ದ ಬೋ ♦ ಧನೆಗಳಿಂದ
ಫಲಿತ ಯೋಗಾನುಭವದೃಷ್ಟಿ ♦ ಯಿಂದ ಹೊರತು. ॥

ತೇ ॥ ರಾಜಿತಾನಂದ ತಾರಕ ♦ ರಾಜಯೋಗ
ಪಾವನ ಸಮಾಧಿ ಯಿಲ್ಲದಿರೆ ♦ ಪರಮಶುಷ್ಕ-
ತರ್ಕವೇದಾಂತವಾದತ ♦ ತ್ಪರರ ಕೈಲಿ
ಇಂದ್ರಿಯ ಮನಂಗಳನು ನಿ ♦ ಗ್ರಹಿಸ ಲಹುದೆ ?

(ಸೀತಾರಾಮಾಂಜನೇಯ, ತೆಲುಗು.)

ಎಂದು ಸೀತಾದೇವಿಯು ಆಂಜನೇಯನನ್ನು ಕುರಿತು ಹೇಳಿದಳು. 'ಅರ್ಜುನಾ ! ತಿಳಿ' ಎಂದು ಕೃಷ್ಣನು ಹೇಳಿದನು.

ಅರ್ಜುನ :—ಸ್ವಾಮಿಾ ! ನೀವು ಈಗ ಹೇಳಿದುದೆಲ್ಲವನ್ನೂ ಆಲೋ ಚಿಸಿ ನೋಡಿದರೆ, ವೇದವಾದಿಗಳು ಹೇಳಿದ ಮಾತನ್ನು ನಂಬಬಾರದು ಎಂದು ತಿಳಿಯಬರುತ್ತದೆ. ಆದರೆ ವೇದಪ್ರಮಾಣಗಳು ಅಬದ್ಧವೇನು (ಕೃಷ್ಣಾರ್ಜುನರ ಸಂವಾದವನ್ನು ಇಲ್ಲಿಗೇ ನಿಲ್ಲಿಸಿದೆ. ಮುಂದಿನ ವಿಷಯ ಗಳನ್ನು ಈ ಗ್ರಂಥಕರ್ತರು ಬರೆದು ಕನ್ನಡಿಸಲ್ಪಡುವ ಶ್ರೀ ಭಗವದ್ಗೀತೆ ಯಲ್ಲಿ ತಿಳಿದುಕೊಳ್ಳಬಹುದು.)

ಅರ್ಜುನಾ ! ಮತ್ತೂ ಹೇಳುತ್ತಿದ್ದೇನೆ, ಕೇಳು. ಯಾರು ಮೂರು ವೇದಗಳಲ್ಲಿಯೂ ಹೇಳಲ್ಪಟ್ಟಿರುವ ಕರ್ಮಗಳನ್ನು ಅನುಷ್ಠಾನಮಾಡಿ (ಆಚರಿಸಿ) ಯಜ್ಞಮಾಡುವುದರ ಮೂಲಕ ನನ್ನನ್ನು ಪೂಜಿಸಿ, ಆ ಯಜ್ಞ ಶೇಷವನ್ನು ಭುಜಿಸುವರೋ, ಅವರು ಅದರಿಂದುಂಟಾಗುವ ಪುಣ್ಯದಿಂದ ಸ್ವರ್ಗಲೋಕಕ್ಕೆ ಹೋಗಿ ದೇವಭೋಗಗಳನ್ನು ಅನುಭವಿಸಿ, ಆ ಪುಣ್ಯವು ಕಡಿಮೆಯಾದ ಮೇಲೆ ಪುನಃ ಈ ಭೂಲೋಕವಲ್ಲಿ ಹುಟ್ಟುತ್ತಾರೆ. ಹೀಗೆ ವೇದದಲ್ಲಿ ಹೇಳಿರುವ ಕರ್ಮಗಳನ್ನು ಆಚರಿಸುತ್ತ, ಕೋರಿಕೆಗಳನ್ನು ಕೋರುತ್ತ, ಆ ಕೋರಿಕೆಗಳ ಫಲದಿಂದ ಪುನಃ ಈ ಲೋಕದಲ್ಲಿ ಹುಟ್ಟುತ್ತ ಸಾಯುತ್ತಲಿರುವರು. ಈರೀತಿಯಾಗಿ ಹುಟ್ಟುಸಾವುಗಳಿಂದ ಇದುವರಿ ಗೂ ಹೇಳಿದ ಕೃತಯುಗದಲ್ಲಿನ ಧರ್ಮವು, ಸ್ವಲ್ಪಸ್ವಲ್ಪವಾಗಿ ಆಯಾಯಾ ಯುಗಗಳಲ್ಲಿ ನಶಿಸುತ್ತಾ ಬರುತ್ತದೆಂದು ಸ್ಪಷ್ಟವಾಗಿ ತಿಳಿಯಬರುತ್ತದೆ. ಇನ್ನು ಮುಂದೆ ಕಲಿಯುಗ ಧರ್ಮವು ಹೇಳಲಾಗಿದೆ.

## ಕಲಿಯುಗ ಧರ್ಮವು.

ಶ್ಲೋ ॥ ಸರ್ವೇ ಬ್ರಹ್ಮ ವಿದಿಷ್ಯಂತಿ ♦ ಸಂಪ್ರಾಪ್ತೇ ತು ಕಲೌ ಯುಗೇ ।
ನಾಽನುತಿಷ್ಠಂತಿ ಮೈತ್ರೇಯ ! ♦ ಶಿಶ್ನೋದರ ಪರಾಯಣಾಃ ॥

ಎಂಬ ಪ್ರಮಾಣಕ್ಕೆ ತಕ್ಕಂತೆ ಕಲಿಯುಗವು ಪ್ರಾರಂಭಿಸಿದ ಮೊದಲು, ಜನಗಳೆಲ್ಲರೂ ಪರಬ್ರಹ್ಮಸ್ವರೂಪದಲ್ಲಿ ಹೋಗಿ ಸೇರಬೇಕೆಂದು ಹೇಳು ತ್ತಿರುವರೇ ಹೊರತು, ಅದಕ್ಕೆ ಬೇಕಾದ ಜ್ಞಾನಾನುಭವ ಮತ್ತು ಅನು ಷ್ಠಾನ ಇವುಗಳಿಲ್ಲದೆ, ಸ್ತ್ರೀಸಂಭೋಗ, ಹೊಟ್ಟೆಹೊರೆಯುವುದು ಇವುಗಳಲ್ಲಿ

ಆಸಕ್ತಿಯುಳ್ಳವರಾಗಿಯೇ ಇರುತ್ತಾರೆ. ಇದಕ್ಕೆ ಸಹಾಯವಾಗಿ ಅವರಲ್ಲಿ ಕಾಮಕ್ರೋಧಾದಿ ಗುಣಗಳು ಪೂರ್ತಿಯಾಗಿ ತುಂಬಿರುತ್ತವೆ. ಆದುದರಿಂದ ಈ ಕಲಿಯುಗದಲ್ಲಿ ಧರ್ಮದ ಮೂರು ಪಾದಗಳು ನಾಶವಾಗಿ, ಒಂದು ಪಾದವು ಮಾತ್ರವೇ ನಿಂತಿರುತ್ತದೆ. ಈ ಯುಗದಲ್ಲಿ ಧರ್ಮದ ಒಂದು ಪಾದ ಅಂದರೆ, ಒಟ್ಟಿನ ನಾಲ್ಕನೇ ಒಂದು ಭಾಗದ ಮಟ್ಟಿಗೆ ಇರುವುದರಿಂದಲೇ ಯೋಗಿಗಳೂ, ಜ್ಞಾನಿಗಳೂ ಅತಿ ವಿರಳವಾಗಿ ಅಲ್ಲಲ್ಲಿ ಇರುತ್ತಾರೆ. ಈ ಕಲಿಯುಗದಲ್ಲಿರುವ ಸ್ತ್ರೀಪುರುಷರೇ ಕೃತ ತ್ರೇತ ದ್ವಾಪರವೆಂಬ ಮೂರು ಯುಗಗಳಲ್ಲಿಯೂ ಇದಕ್ಕೆ ಹಿಂದೆಯೇ ಹುಟ್ಟಿ, ಆಯಾಯಾ ಯುಗಗಳಿಗೆ ತಕ್ಕಂತೆ ಆಯಾ ಬುದ್ಧಿಗಳಿಂದಿದ್ದು, ಈ ಕಲಿಯುಗದಲ್ಲಿ ಅವರೇ ಪುನಃ ಹುಟ್ಟಿ, ಅವರುಗಳ ಬುದ್ಧಿಯು ಮತ್ತಷ್ಟು ಕೆಟ್ಟಿರುತ್ತದೆ. ಮತ್ತೆ ಈ ಕಲಿಯುಗದಲ್ಲಿರುವ ಸ್ತ್ರೀಪುರುಷರೇ ಇನ್ನು ಮುಂದೆ ಬರುವಂಥ ಕೃತ ತ್ರೇತ ದ್ವಾಪರ ಯುಗಗಳಲ್ಲಿಯೂ ಹುಟ್ಟುತ್ತಿರುವರೇ ಹೊರತು, ಬೇರೆ ಹೊಸದಾಗಿ ಸ್ತ್ರೀಪುರುಷ ವ್ಯಕ್ತಿಗಳನ್ನು, ಮೇಲೆ ಹೇಳಿದ ಯುಗಗಳಲ್ಲಿ ಈಶ್ವರನು ಸೃಷ್ಟಿಮಾಡನು. ಮೊದಲಿನಲ್ಲಿ ಅಂದರೆ ಪ್ರಪಂಚ ಸೃಷ್ಟಿಕಾಲದಲ್ಲಿ, ಈಶ್ವರನು ಸ್ತ್ರೀಪುರುಷರನ್ನು ಒಂದು ಬಾರಿ ಮಾತ್ರ ಸೃಷ್ಟಿಸಿದನು. ಇದರ ಮೇಲೆ ಅವರವರಿಗಿರುವ ಸಂಕಲ್ಪದಿಂದ ಪುನಃ ತಮಗೆ ತಾವೇ ಶರೀರಗಳನ್ನು ಕಲ್ಪನೆಮಾಡಿಕೊಳ್ಳುತ್ತಿದ್ದಾರೆ. ಅಂದರೆ ಜೀವಿಗಳು ಈ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ತಕ್ಕಂತೆ ಬೇರೆಬೇರೆ ವಿಧವಾದ ಶರೀರಗಳನ್ನು ಪಡೆಯುತ್ತಿರುತ್ತಾರೆ. ಈ ಶರೀರಗಳು ಒದಗುವುದಕ್ಕೆ ಸಂಕಲ್ಪವೇ ಬೀಜವಾಗುತ್ತದೆ. ಅದು ಹೇಗೆಂದರೆ,

ಭತ್ತ ರಾಗಿ ಜೋಳ ಎಳ್ಳು ನವಣೆ ಮೊದಲಾದ ಓಷಧಿಗಳಿಗೂ, ಮಾವು ತೆಂಗು ಹಲಸು ಮೊದಲಾದ ವೃಕ್ಷ ವರ್ಗಗಳಿಗೂ ಬೀಜವು ಹೇಗಿರುತ್ತದೆಯೋ ಹಾಗೆಯೇ, ನಮ್ಮ ಶರೀರವೆಂಬ ವೃಕ್ಷಕ್ಕೂ ಬೀಜಭೂತವಾದುದೊಂದುಂಟು. ಆ ಬೀಜವೇ ಸಂಕಲ್ಪವು. ಜೀವಿಗಳು ಪ್ರಾಣಪ್ರಯಾಣ ಕಾಲದಲ್ಲಿ ಯಾವ ಸಂಕಲ್ಪವನ್ನು ಮನಸ್ಸಿನಲ್ಲಿ ನೆನೆಯುತ್ತಾರೆಯೋ ಅಂದರೆ, ಯಾವ ವಿಷಯವನ್ನು ಮನಸ್ಸಿನಲ್ಲಿ ನೆನೆಯುತ್ತಾರೆಯೋ, ಅದನ್ನು ಅನುಭವಿಸುವುದಕ್ಕಾಗಿ ಮತ್ತೆ ಬೇರೊಂದು ಶರೀರವನ್ನು ಪಡೆಯುತ್ತಿರುತ್ತಾರೆ.

ಮರಣಸಮಯದಲ್ಲಿ ಯಾವ ಸಂಕಲ್ಪವನ್ನೂ ಹೊಂದದೆ ಪ್ರಾಣವನ್ನು
ಬಿಟ್ಟಿದ್ದೇ ಆದರೆ, ಪುನಃ ಶರೀರವನ್ನು ಪಡೆಯುವುದಕ್ಕೆ ಬೀಜವೇ ಇಲ್ಲ
ಶರೀರವುಂಟಾಗುವುದಕ್ಕೆ ಸಂಕಲ್ಪವೆಂಬ ಬೀಜವು ಎಂದು ಇರುವುದಿಲ್ಲವೋ
ಆಗಲೇ ಅವರ ಆತ್ಮವು ಪರಮಾತ್ಮನೆಂಬ ಬಟ್ಟಬಯಲುಸ್ವರೂಪದಲ್ಲಿ
ಹೋಗಿ ಸೇರುತ್ತದೆ. ಅಂದರೆ ತನ್ನ ಹೃದಯಕಮಲದಲ್ಲಿ ಆತ್ಮನೆಂಬ
ಹೆಸರಿನಿಂದ ಇರುವ ಸಣ್ಣಬಯಲು, ಎಲ್ಲೆಲ್ಲಿಯೂ ಪರಿಪೂರ್ಣವಾಗಿ
ತುಂಬಿ ಒಂದೇ ದೊಡ್ಡ ಬಯಲಾಗಿರುವ ಪರಬ್ರಹ್ಮವೆಂಬ ಬಟ್ಟಬಯಲಿ
ನಲ್ಲಿ ಹೋಗಿಸೇರಿ ಪೂರ್ಣವಾಗಿ ಕಲೆತುಹೋಗುತ್ತದೆ. ಹೀಗೆ ಐಕ್ಯ
ವಾದಮೇಲೆ ಪುನಃ ಆ ಪರಬ್ರಹ್ಮನೆಂದೆಂಬ ದೊಡ್ಡ ಬಯಲಿನಿಂದ
ಜೀವಾತ್ಮನೆಂಬ ಸಣ್ಣ ಬಯಲು ಬಿಡುಗಡೆಯನ್ನು ಹೊಂದಿ ಈಚೆಗೆ ಬರ
ಲಾರದು. ಹಾಗೆ ಆ ಆತ್ಮನು ಪುನಃ ಹಿಂದಿರುಗದಿರುವಿಕೆಯೇ ಮೋಕ್ಷ
ವೆಂದು ಹೇಳಲ್ಪಡುತ್ತದೆ. ಈ ಕಲಿಯುಗದಲ್ಲಿ ಈಶ್ವರಭಕ್ತಿಯೆಂಬುದು
ಕೆಲವರಿಗೆ ಮಾತ್ರ ಹೊರತು, ಉಳಿದ ಅನೇಕರಿಗೆ ತೃಣಮಾತ್ರವೂ (ಸ್ವಲ್ಪ
ವೂ) ಇಲ್ಲದೆ, ಕಾಮಕ್ರೋಧಾದಿ ದುರ್ಗುಣಗಳಿಗೆ ಒಳಗಾಗಿ ಸಂಸಾರವೆಂಬ
ಸಮುದ್ರದಲ್ಲಿ ಮುಳುಗುತ್ತ, ಪುನಃ ಆ ಸಂಸಾರಸಮುದ್ರದಲ್ಲಿ ಈಜುತ್ತ
ದಡಸೇರುವುದಕ್ಕೆ ದಾರಿಗಾಣದೆ, ಸಂತೆಯಲ್ಲಿ ಒಟ್ಟು ಸೇರಿದ ಗುಂಪಿನಂತೆ,
ಜೀವನು ತನ್ನ ಮನೆಗೆ ಬಂದು ಸೇರಿದ ಬಂಧುಗಳಿಗಾಗಿ ಧನವನ್ನು ಕೂಡಿ
ಹಾಕಿರಿಸಿ, ಪುನಃ ಅವರನ್ನೆಲ್ಲಾ ತ್ಯಜಿಸಿ ತಾನೊಬ್ಬನೇ ತನ್ನ ಶರೀರವೆಂಬ
ಗೂಡನ್ನು ಬಿಟ್ಟು ಮೇಲೆದ್ದು ಬೇರೊಂದು ಶರೀರದ ಗೂಡೊಳಕ್ಕೆ ಹೋಗಿ
ಸೇರುತ್ತಾನೆ. ಆಮೇಲೆ ತಾನು ಮತ್ತೊಂದು ದೇಹವೆಂಬ ಗೂಡೊಳಕ್ಕೆ
ಹೋಗಿ ಸೇರಿದಮೇಲೆ ಪುನಃ ಸ್ವಲ್ಪಕಾಲ ಮಾತ್ರವೇ ಆ ಹೊಸ ಶರೀರ
ಗೂಡಿನಲ್ಲಿದ್ದು ಪುನಃ ಅದನ್ನೂ ಬಿಟ್ಟು ಮತ್ತೊಂದು ಗೂಡನ್ನಾಶ್ರಯಿಸು
ತ್ತಾನೆ.

ಈರೀತಿಯಾಗಿ ಮಾನವರೆಲ್ಲರೂ ಪ್ರತಿಯೊಂದು ಯುಗದಲ್ಲಿಯೂ
ಹುಟ್ಟಿ, ತಾನು ಯಾರೆಂದು ವಿಚಾರಿಸಿ ತನ್ನ ನಿಜ ಸ್ವರೂಪವನ್ನು ತಿಳಿಯದೆ
ಇರುತ್ತಾರೆ. ತನ್ನ ನಿಜಸ್ವರೂಪವನ್ನು ತಿಳಿದುಕೊಂಡಮೇಲೆ ಬಂಧು
ಗಳ ಮೇಲಿದ್ದ ಆಸೆಗಳೂ ಮೋಹಗಳೂ ತಾವಾಗಿಯೇ ಬಿಟ್ಟುಹೋಗು

ತ್ತವೆ. ಕೆಲವು ದಿನಗಳಿದ್ದು ಹೊರಟುಹೋಗುವ ಹೆಂಡತಿಮಕ್ಕಳೂ ಬಂಧುಗಳೂ ಸಂಪತ್ತುಗಳೂ ಹೇಗಿವೆಯೆಂದರೆ:— ಇಂದ್ರಜಾಲ ವಿದ್ಯೆಯನ್ನು ತೋರಿಸುವವನು ಅನೇಕ ಚಿತ್ರವಿಚಿತ್ರಗಳಾದ ವಸ್ತುಗಳನ್ನು ತನ್ನ ಇಂದ್ರಜಾಲ ವಿದ್ಯೆಯಿಂದ ಕಲ್ಪಿಸಿ ಜನಗಳಿಗೆ ಅವನ್ನು ತೋರಿಸಿ, ಪುನಃ ತಕ್ಷಣವೇ ಅವೆಲ್ಲವನ್ನೂ ಹೇಗೆ ಮಾಯ ಮಾಡುತ್ತಿದ್ದಾನೋ ಹಾಗೆಯೇ, ತಮ್ಮ ಹೆಂಡತಿಮಕ್ಕಳೂ ನೆಂಟರುಗೆಳೆಯರೂ, ಸಕಲೈಶ್ವರ್ಯಗಳೂ ಎಲ್ಲವೂ ಕೆಲವು ಕಾಲದವರೆಗೆ ಮಾತ್ರವೇ ಮೇಲೆ ಹೇಳಿದ ಇಂದ್ರಜಾಲದಂತೆ ಕಾಣಬಂದು, ಪುನಃ ಆದಷ್ಟು ಜಾಗ್ರತೆಯಾಗಿ ಮಾಯವಾಗುತ್ತವೆ. ಈ ಕಲಿಯುಗವು ಮುಗಿದಮೇಲೆ ಮಾಯೆಯೆಂಬ ತೆರೆಯಿಂದ ಮುಚ್ಚಲ್ಪಟ್ಟಿರುವ ಈ ಕಲಿಯುಗದ ಜನರೆಲ್ಲರೂ ಪುನಃ ಕೃತಯುಗದಲ್ಲಿ ಹುಟ್ಟುವವರಾಗುತ್ತಾರೆ. ಇವರೆಲ್ಲರೂ ಮೋಕ್ಷವೆಂಬ ಗೃಹವನ್ನು ಹೊಂದುವವರಿವಿಗೂ ಪ್ರತಿ ಯುಗದಲ್ಲಿಯೂ ಹುಟ್ಟುತ್ತ ನಂಟರಮೇಲೆಯೂ, ಹಣ ಕಾಸು ಮೊದಲಾದುವುಗಳಲ್ಲಿಯೂ, ವಸ್ತುವಾಹನ ಮೊದಲಾದುವುಗಳ ಮೇಲೆಯೂ ಆಸೆಯಿಡುತ್ತ, ಪುನಃ ಅವೆಲ್ಲವನ್ನೂ ಬಿಟ್ಟು ಸಾಯುತ್ತಲೂ ಪುನಃ ಹುಟ್ಟುತ್ತಲೂ ಇರುವರು. ಸ್ತ್ರೀಪುರುಷರಿಗೆಲ್ಲರಿಗೂ ಈ ಹಾಳು ಆಸೆಗಳೇ ಬೀಜಗಳಾಗಿದ್ದು ಕೃತ ತ್ರೇತ ದ್ವಾಪರ ಕಲಿಗಳೆಂಬ ಎಷ್ಟೋ ಲೆಕ್ಕವಿಲ್ಲದ ಯುಗಗಳಲ್ಲಿ ಪುನಃಪುನಃ ಹುಟ್ಟುಸಾವುಗಳನ್ನನುಭವಿಸುತ್ತಲೇ ಇದ್ದಾರೆ. ಆದುದರಿಂದ ಜನಗಳೆಲ್ಲರೂ ಇವೆಲ್ಲವನ್ನು ಸ್ವಲ್ಪ ಚನ್ನಾಗಿ ಆಲೋಚಿಸಿ ನೋಡಿ, ಈ ಗ್ರಂಥದಲ್ಲಿ ಹೇಳಿರುವ ಉಪದೇಶವಾಕ್ಯಗಳನ್ನು ಓದಿ, ಇದರಲ್ಲಿ ಹೇಳಿರುವ ರೀತಿಯನ್ನೇ ಸಾಧನೆಮಾಡುತ್ತ ಬಂದಲ್ಲಿ, ಆಗ ತಮಗಿರುವ ಆಸೆಯೆಂಬ ಬೀಜಗಳೆಲ್ಲವೂ ನಶಿಸಿ ಇನ್ನು ಮುಂದೆ ತಮಗೆ ದೊರಕುವ ಜನ್ಮದಲ್ಲಿ ಉತ್ತಮವಾದ ಪದವಿಯನ್ನು ಹೊಂದಬಹುದು. ಪ್ರಾಣವಿರುವ ಮನುಷ್ಯರೇ ಮೊದಲಾದ ಎಲ್ಲಾ ಜೀವರಾಶಿಗಳನ್ನೂ, ಪ್ರಾಣವಿಲ್ಲದ ಜಡಪದಾರ್ಥಗಳೆಲ್ಲವನ್ನೂ ಆದಿಯಲ್ಲಿಯೇ ಈಶ್ವರನು ಸೃಷ್ಟಿಮಾಡಿ ಮುಗಿಸಿದನು. ಆದುದರಿಂದ ಪ್ರತಿ ಯುಗದಲ್ಲಿಯೂ ಮೇಲೆ ಹೇಳಿದವುಗಳನ್ನು ಪುನಃಪುನಃ ಈಶ್ವರನು ಸೃಷ್ಟಿಸನು. ತಮ್ಮತಮ್ಮ ಸಂಕಲ್ಪಗಳಿಂದಲೇ ಜೀವಿಗಳು ತಮತಮಗೆ ಮುಂದೆ ಬರುವುದಾದ ಶರೀರಗಳನ್ನು ಏರ್ಪಡಿಸಿ

ಕೊಳ್ಳುತ್ತಿದ್ದಾರೆಂಬ ವಿಷಯವನ್ನು ಮತ್ತೊಂದು ವೇಳೆ ಒತ್ತಿ ಹೇಳುತ್ತಿದ್ದೇವೆ. ಇದಕ್ಕೆ ಹಿಂದೆಯೇ 220ನೇ ಪುಟದಿಂದ 239ನೇ ಪುಟದವರಿವಿಗೂ ಇರುವ 'ಪುನರ್ಜನ್ಮ ಮತ್ತು ಪೂರ್ವಜನ್ಮ ಸಂಸ್ಕಾರ' ವೆಂಬ ಪ್ರಕರಣದಲ್ಲಿ ಹೇಳಿರುವ ಶಾಂತಿದೇವಿ, ಮೂಕಕವಿ ಮೊದಲಾದವರೇ ಈ ಮೇಲೆ ಹೇಳಿದವುಗಳಿಗೆಲ್ಲಾ ಪ್ರತ್ಯಕ್ಷ ದೃಷ್ಟಾಂತವೆಂದು ಭಾವಿಸಬೇಕು. ಇನ್ನು ಮುಂದಿನ ಪ್ರಕರಣದಲ್ಲಿ ಎಡಬಲದ ಮೂಗಿನ ಹೊಳ್ಳೆಗಳಲ್ಲಿ ಶ್ವಾಸವನ್ನು ತಿರುಗಿಸುವ ವಿಷಯವನ್ನು ಕುರಿತು ವಿಶದಪಡಿಸಿದೆ.



# ಎಡಬಲದ ಮೂಗಿನ ಹೊಳ್ಳೆಗಳಲ್ಲಿ ಶ್ವಾಸವನ್ನು ತಿರುಗಿಸುವಿಕೆ.

ಸೀ ॥ ಬಲದ ಮೂಗಿನ ಹೊಳ್ಳೆ ♦ ಯಲಿ ಶ್ವಾಸ ನಡೆದೊ ಡಿನ-
ನಾಡಿ; ಯೆಡದ ಲಿಂದು ♦ ನಾಡಿ ಯೆಂಬರ್
ಭಾನು ಮಂಗಳ ಸ್ಥಿರ ♦ ವಾರಂಗಳಲಿ ಸೂರ್ಯ-
ನಾಡಿಯಾಗಿ ಶ್ವಾಸ ♦ ನಡೆಸ ಬೇಕು;
ಸೋಮ ಬುಧ ಶುಕ್ರಗಳ ♦ ಲಿಂದುನಾಡಿಯಾಗಿ
ಶ್ವಾಸ ನಡೆಸಲು ಬೇಕು ♦ ನಳಿನನಾಭ!
ಕೃಷ್ಣಪಕ್ಷದಲಿ ಗುರು ♦ ವಾರಂಗಳಲಿ ಸೂರ್ಯ-
ನಾಡಿಯೋಳ್ ಶ್ವಾಸವನು ♦ ನಡೆಸಬೇಕು

ಗೀ ॥ ಶುದ್ಧಗುರುವಾರಂಗಳೊ ♦ ಳಿಂದುನಾಡಿ,
ನಡೆವುದು; ಶನಿವಾರಗಳ ರಾತ್ರಿ ♦ ಹಗಲುಗಳಲಿ
ಮಿಕ್ಕವಾರಗಳ ಬೆಳಗಿನ ♦ ಝಾವವೊಂದೆ
ಶ್ವಾಸವ ನಡೆಸುತ್ತಲಿಹುದು ♦ ಮೇಲಿನಂತೆ ॥ (ತೆಲುಗು.)

"ಆದಿ ಮಂಗಳ ಶನಿವಾರಗಳಲ್ಲಿ ಸೂರ್ಯನಾಡಿಯು ಬಲದಮೂಗಿನ ಹೊಳ್ಳೆಯಲ್ಲಿಯೂ, ಸೋಮ ಶುಕ್ರ ಬುಧವಾರಗಳಲ್ಲಿ ಚಂದ್ರನಾಡಿಯು

ಎಡದ ಹೊಳ್ಳೆಯಲ್ಲಿಯೂ, ಕೃಷ್ಣಪಕ್ಷದ ಗುರುವಾರದ ದಿನ ಸೂರ್ಯನಾಡಿಯು ಬಲದಮೂಗಿನ ಹೊಳ್ಳೆಯಲ್ಲಿಯೂ, ಶುಕ್ಲಪಕ್ಷದ ಗುರುವಾರದ ದಿನ ಚಂದ್ರನಾಡಿಯು ಎಡದ ಹೊಳ್ಳೆಯಲ್ಲಿಯೂ ಶ್ವಾಸವು ನಡೆಯುತ್ತಿರುತ್ತದೆ. ಶನಿವಾರದ ದಿನ ಹಗಲುರಾತ್ರಿಗಳಲ್ಲಿಯೂ ಶ್ವಾಸವು ಸೂರ್ಯನಾಡಿಯಲ್ಲಿರಬೇಕು.''

ಸರಸ್ವತೀ ಅಂಶವೇ 'ಅವ್ವಯ' ಎಂಬ ಹೆಸರಿನಿಂದ ಅವತಾರವೆತ್ತಿ ಲೋಕರಕ್ಷಣಾರ್ಥವಾಗಿ ಆಕೆಯು ಅನೇಕ ಉಪದೇಶಗಳನ್ನು ಶಾಸ್ತ್ರಗಳಲ್ಲಿ ಗೂಢಾರ್ಥವನ್ನಿಟ್ಟು ರಚಿಸಿದಳು. ಅವುಗಳಲ್ಲಿ ಮುಖ್ಯವಾದವುಗಳನ್ನು ಕನ್ನಡದಲ್ಲಿ ಪದ್ಯರೂಪವಾಗಿ ಮೇಲೆಹೇಳಿದೆ. ಆ ಪದ್ಯಗಳನ್ನು ಓದಿ ನೆನಪಿನಲ್ಲಿಟ್ಟುಕೊಂಡು, ಈ ಮುಂದೆ ಹೇಳುವ ವಿಧದಲ್ಲಿ ಆಯಾ ವಾರಗಳಲ್ಲಿ ಬೆಳಿಗ್ಗೆ ನಾಲ್ಕು ಘಂಟೆಯಿಂದ ಮೊದಲು ಆರು ಘಂಟೆಯವರಿವಿಗೂ ಶ್ವಾಸವನ್ನು ಆಯಾ ಮೂಗಿನ ಹೊಳ್ಳೆಗಳಲ್ಲಿ ಎರಡು ಘಂಟೆಗಳ ಕಾಲ ನಿಲ್ಲಿಸಿರಬೇಕು. ಆಮೇಲೆ ಆ ಶ್ವಾಸವು ಯಾವ ಹೊಳ್ಳೆಯಲ್ಲಿ ನಡೆದರೂ ನೀವು ಗಮನಿಸಬೇಕಾದುದಿಲ್ಲ. ಆದರೆ ನೀವು ಯಾವ ಕಾರ್ಯಗಳನ್ನು ಕುರಿತು ಹೊರಹೊರಡುತ್ತೀರೋ, ಆ ಸಮಯದಲ್ಲಿ ಈ ಕೆಳಗೆ ಹೇಳುವ ರೀತಿಯಲ್ಲಿ ಶ್ವಾಸವನ್ನು ಬದಲಾಯಿಸುವ ಕ್ರಮವನ್ನು ಅಭ್ಯಾಸಮಾಡಿ ತಿಳಿದುಕೊಳ್ಳಬೇಕು. ಹೀಗೆ ಶ್ವಾಸ ತಿರುಗಿಸುವುದನ್ನು ತಿಳಿದುಕೊಂಡಮೇಲೆ, ಬಲದಮೂಗಿನ ಶ್ವಾಸವು ತಾನಾಗಿಯೇ ನಡೆಯುತ್ತಿರುವಾಗ ನೀವು ಹೊರಟಿದ್ದೀ ಆದರೆ, ನಿಮ್ಮ ಕಾರ್ಯಗಳೆಲ್ಲವೂ ಸಿದ್ಧಿಸುವುವು. ಈ ರಹಸ್ಯಾರ್ಥವು ದ್ರವಿಡ (ಅರವ), ತೆಲುಗು ಭಾಷಾಗ್ರಂಥಗಳಲ್ಲಿ ಬರೆಯಲ್ಪಟ್ಟಿದೆ. ಈ ರಹಸ್ಯವನ್ನು ಆ ಭಾಷೆಯನ್ನಾಡುವ ಜನಗಳನೇಕರು ತಿಳಿದುಕೊಂಡು ಯಾವುದೋ ಒಂದು ಕಾರ್ಯವನ್ನು ಮನಸ್ಸಿನಲ್ಲೆಣಿಸಿ ಶ್ವಾಸವನ್ನು ಬಲದ ಮೂಗಿನಲ್ಲಿ ನಿಲ್ಲಿಸಿಕೊಂಡು ಹೊರಟರು. ಆದುದರಿಂದ ಅವರ ಕಾರ್ಯಗಳು ಸಿದ್ಧಿಯಾದವೆಂದು ಹೆಚ್ಚಾಗಿ ಸಂತೋಷಿಸಿ, ಅವರು ಈ ಗ್ರಂಥಕರ್ತರಿಗೆ ತಾವಾಗಿಯೇ ಬಂದು ಈ ವಿಷಯವನ್ನು ತಿಳಿಸಿರುತ್ತಾರೆ. ಅವರ ತೆಲುಗು ಭಾಷೆಯ ಗ್ರಂಥದಲ್ಲಿದ್ದ ರಹಸ್ಯಾರ್ಥವನ್ನು ಈಗ ಈ ಕನ್ನಡ ಗ್ರಂಥದಲ್ಲಿ ಹೊರಪಡಿಸಿದ್ದೇವೆ. ಸ್ತ್ರೀಪುರುಷರಿರಾ!

ಇದರಲ್ಲಿ ಹೇಳಿದ ರೀತಿಯಾಗಿ ನೀವು ಸಾಧನಮಾಡಿದಲ್ಲಿ ನಿಮ್ಮ ಕಾರ್ಯಗಳು ಸಿದ್ಧಿಸುವುವೆಂದು ತಿಳಿಯಿರಿ. ಇದಕ್ಕೆ ಒಂದು ದೃಷ್ಟಾಂತವನ್ನು ಈ ಮುಂದೆ ವಿವರಿಸಿದೆ. ಗಮನವಿಟ್ಟು ಓದಿ.

ಈ ಗ್ರಂಥಕರ್ತರಿಗೆ ತಿಳಿದಿದ್ದ ಒಬ್ಬ ಹುಡುಗನು ಬಿ. ಎ. (B. A.) ತರಗತಿಯಲ್ಲಿ ಓದುತ್ತಿದ್ದನು. ಬಲಮೂಗಿನಲ್ಲಿದ್ದ ಶ್ವಾಸವನ್ನು ಎಡಮೂಗಿಗೂ, ಎಡಮೂಗಿನಲ್ಲಿರುವ ಶ್ವಾಸವನ್ನು ಬಲಕ್ಕೂ ತಿರುಗಿಸುವ ವಿಧಗಳನ್ನು ಆತನಿಗೆ ತೋರಿಸಿಕೊಟ್ಟು, "ಓ! ಬಾಲಕಾ! ನೀನು ಪರೀಕ್ಷೆಯದಿನ ಮನೆಯಿಂದ ಹೊರಹೊರಡುವ ಸಮಯದಲ್ಲಿ ಶ್ವಾಸವು ಬಲಮೂಗಿನಲ್ಲಿರುವುದನ್ನು ನೋಡಿ ಹೊರಡಬೇಕು. ಹೊರಡುವಾಗ ಆ ಶ್ವಾಸವು ಪುನಃ ಎಡದಮೂಗಿಗೆ ತಿರುಗದಂತೆ ಪುಸ್ತಕಗಳನ್ನು ನಿನ್ನೆಡದ ಕಾಂಕುಳಲ್ಲಿಟ್ಟುಕೊಂಡು ಹೋಗಬೇಕು. ಅವುಗಳನ್ನು ಆ ಸ್ಥಳದಲ್ಲಿಯೇ ಒತ್ತಿ ಹಿಡಿದುಕೊಂಡು ಹೋದದ್ದೇ ಆದರೆ, ಶ್ವಾಸವು ಬಲದಮೂಗಿನಲ್ಲಿಯೇ ನಿಂತಿರುತ್ತದೆ. ಹೀಗೆ ನಿಲ್ಲಿಸಿಕೊಂಡು ಹೊರಟು, ಪರೀಕ್ಷೆಯಾಗುವ ಸ್ಥಳದಲ್ಲಿ ನಿನ್ನ ಆಸನದಲ್ಲಿ ಕುಳಿತುಕೊಂಡು ಎಡದ ಕೈಯನ್ನು ನೀನು ಬರೆಯುವ ಕಾಲ್ಮಣೆಯಮೇಲೆ ಚನ್ನಾಗಿ ಊರಿಕೊಂಡು ಉತ್ತರಪತ್ರಗಳನ್ನು ಬರೆದಿದ್ದೇ ಆದರೆ, ಶ್ವಾಸವು ಎಡಮೂಗಿನೊಳಕ್ಕೆ ತಿರುಗದಂತೆ ಬಲಮೂಗಿನಲ್ಲಿಯೇ ನಿಲ್ಲುತ್ತದೆ. ಹಾಗಿರುವುದಾದರೆ ನೀನು ತಪ್ಪದೆ ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದುವಿ," ಎಂದು ಈ ಗ್ರಂಥಕರ್ತರು ಆ ಹುಡುಗನಿಗೆ ಹೇಳಿದರು. ಆ ದಿನದ ಮೊದಲು ಆತನು ಈ ಶ್ವಾಸಾಭ್ಯಾಸವನ್ನು ಸ್ವಲ್ಪಸ್ವಲ್ಪವಾಗಿ ಸಾಧಿಸುತ್ತ ಬಂದನು. ಹೀಗೆ ಸಾಧನಮಾಡುತ್ತಿದ್ದು ಕಡೆಯಲ್ಲಿ ಈ ಗ್ರಂಥಕರ್ತರು ಹೇಳಿದ ಬಗೆಯಲ್ಲಿ ಪರೀಕ್ಷೆ ದಿನಗಳಲ್ಲಿ ಪ್ರತಿ ದಿನವೂ ಶ್ವಾಸವನ್ನು ಬಲದ ಮೂಗಿನಲ್ಲಿಯೇ ಹೊತ್ತು ಹುಟ್ಟಿದಮೊದಲು ಸಾಯಂಕಾಲದವರಿವಿಗೂ ನಿಲ್ಲಿಸಿ, ಮೂರು ದಿನಗಳವರಿವಿಗೂ ನಡೆದ ಪರೀಕ್ಷೆಯಲ್ಲಿ ಚನ್ನಾಗಿ ಬರೆದಿದ್ದೇನೆಂದು ಬಹಳವಾಗಿ ಸಂತೋಷಿಸುತ್ತಿದ್ದನು. ಆದರೆ ಪರೀಕ್ಷೆಯ ನಾಲ್ಕನೆ ದಿನವೂ ಕೂಡ ಆ ಹುಡುಗನು ಬೆಳಗಿನಿಂದ ಸಾಯಂಕಾಲದವರಿವಿಗೂ ಶ್ವಾಸವನ್ನು ಬಲಮೂಗಿನಲ್ಲಿಯೇ ನಿಲ್ಲಿಸಿ ಪರೀಕ್ಷಾಪ್ರಶ್ನೆ ಪತ್ರಿಕೆಗಳಿಗೆ ಉತ್ತರವನ್ನು ಬರೆದುಕೊಟ್ಟನು. ಹಾಗೆ ಬರೆದೂ ಕೂಡ ತಾನು

ಆ ದಿನ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆಯಲಿಲ್ಲ. ಆದರಲ್ಲಿ ಮಟ್ಟಿಗೆ ತಪ್ಪಿಹೋದೆನು ಎಂದು ತನ್ನ ಮನಸ್ಸಿನಲ್ಲಿ ಭಾವಿಸಿಕೊಂಡು ಬಹಳ ವ್ಯಸನಪಟ್ಟು ಮುಖ ಕಪ್ಪಾಗಿ ಯಾರೊಡನೆಯೂ ಮಾತನಾಡದೆ ಕುಳಿತುಕೊಂಡು ದುಃಖಭಾವವನ್ನು ಹೊರಪಡಿಸುತ್ತಿದ್ದನು. ಹೀಗಿರುವ ಸಮಯದಲ್ಲಿ ಈ ಗ್ರಂಥಕರ್ತರು ಆ ಹುಡುಗನನ್ನು ನೋಡಿ, 'ಎಲೈ! ನೀನು ಈ ದಿನ ಬಹು ಚಿಂತೆಯಿಂದ ಕೂಡಿರುವವನಂತೆ ಕಾಣುತ್ತಿದ್ದೀಯೇ, ಏನು ಕಾರಣ? ನಾನು ಹೇಳಿದ ರೀತಿಯಲ್ಲಿ ಕಡೆಯುವರಿವಿಗೂ ಶ್ವಾಸವನ್ನು ಬಲಮೂಗಿನಲ್ಲಿರಿಸಿಯೇ ಉತ್ತರಗಳನ್ನು ಬರೆದೆಯೋ ಇಲ್ಲವೋ?' ಎಂದು ಕೇಳಲು 'ನಿಸ್ಸಂಶಯವಾಗಿಯೂ ಮೊದಲಿನಿಂದ ಕಡೆಯುವರಿವಿಗೂ ಬಲದ ಮೂಗಿನಲ್ಲಿ ಶ್ವಾಸವನ್ನು ನಿಲ್ಲಿಸಿಯೇ ಎಲ್ಲಾ ಕಾರ್ಯಗಳನ್ನೂ ಮಾಡಿದೆನು. ಆದರೆ ಈ ದಿನ ಪರೀಕ್ಷೆಯಲ್ಲಿ ನಾನು ಖಂಡಿತವಾಗಿಯೂ ಉತ್ತರಗಳನ್ನು ಸರಿಯಾಗಿ ಬರೆಯದೆ ತಪ್ಪಿಹೋದೆನು. ಈ ಮಾತು ನಿಜ;' ಎಂದು ಒಂದೇ ಮಾತಿನಿಂದ ಹೇಳಿದನು. ಅದಕ್ಕೆ 'ಅಯ್ಯಾ! ಮೇಲೆ ಹೇಳಿದ ಸರಸ್ವತಿಯು 'ಅವ್ವಯ' ಎಂಬ ಹೆಸರಿನಿಂದ ಅವತಾರವನ್ನೆತ್ತಿ ಉಪದೇಶಿಸಿದ ವಾಕ್ಯಗಳು ಎಂದಿಗೂ ಸುಳ್ಳಾಗುವುದಿಲ್ಲವಲ್ಲಾ? ನೀನು ಬಲದಮೂಗಿನಲ್ಲಿಯೇ ಶ್ವಾಸವನ್ನು ನಿಲ್ಲಿಸಿರುವುದು ನಿಜವಾಗಿದ್ದಲ್ಲಿ, ಸತ್ಯವಾಗಿಯೂ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತಿ. ಶ್ವಾಸವು ಎಡದ ಮೂಗಿನಲ್ಲಿ ನಡೆದಿದ್ದರೆ ನೀನು ತೇರ್ಗಡೆಯಾಗಲಾರೆ.' ಎಂದು ಈ ಗ್ರಂಥ ಕರ್ತರು ಆ ಹುಡುಗನಿಗೆ ಹೇಳಿದರು. ಅದಕ್ಕೆ ಅವನು "ಸ್ವಾಮಿ! ಇಲ್ಲ, ಕಡೆಯುವರಿವಿಗೂ ನಾನು ಶ್ವಾಸವನ್ನು ಬಲದ ಮೂಗಿನಲ್ಲಿರುವಂತೆಯೇ ಮಾಡಿದ್ದೆನು" ಎಂದು ಉತ್ತರಕೊಟ್ಟನು. ಇದನ್ನು ಕೇಳಿ ಈ ಗ್ರಂಥ ಕರ್ತರು ಅವನನ್ನು ಕುರಿತು, 'ನೀನು ಹೇಳಿದುದೆಲ್ಲವೂ ಸತ್ಯವಾದರೆ ನೀನು ಖಂಡಿತವಾಗಿಯೂ ತೇರ್ಗಡೆಯಾಗಬೇಕು' ಎಂದು ಹೇಳಿದರು. ಆತನು ಈ ಮಾತನ್ನು ನಂಬದೆ ಹೆಚ್ಚಾದ ವ್ಯಸನದಲ್ಲಿಯೇ ಇದ್ದು ತನ್ನ ಊರಿಗೆ ಹೋಗಿ, 'ಸರಿಯಾಗಿ ಉತ್ತರವನ್ನು ಬರೆಯದೆ ತಪ್ಪಿಹೋದೆನಲ್ಲಾ' ಎಂದು ವ್ಯಸನದಲ್ಲಿಯೇ ಮುಗ್ನನಾಗಿದ್ದನು. ಹೀಗಿರಲು ಕೆಲವು ದಿನ ಕಳೆದಬಳಿಕ 'ಈ ಹುಡುಗನು ಪರೀಕ್ಷೆಯಲ್ಲಿ ತೇರ್ಗಡೆಯಾದನೆಂದು

ಈತನ ರಿಜಿಸ್ಟರ್ ಸಂಖ್ಯೆಯು ಪತ್ರಿಕೆಯಲ್ಲಿ ಹೊರಪಡಿಸಿರುವುದನ್ನು ನೋಡಿ ಬಹು ಆಶ್ಚರ್ಯಪಟ್ಟು, 'ಆಹಾ! ಸ್ವಾಮಿಗಳಾದ ಯೋಗೀಶ್ವರರು ಹೇಳಿದುದೇ ಸತ್ಯವಾದ ನುಡಿ,' ಎಂದು ಭಾವಿಸಿ, ಆ ದಿನದ ಮೊದಲು ಶ್ವಾಸವನ್ನು ಬಹುವಾಗಿ ಗಮನಿಸುತ್ತ, ಬಿ. ಯಲ್ (B. L.) ಎಂಬ ಪರೀಕ್ಷೆಯಲ್ಲಿಯೂ ಉತ್ತೀರ್ಣನಾಗಿ 1926ನೇ ಸಂವತ್ಸರದ ಮೊದಲು ಆತನು ಅನಂತಪುರಂ ಜಿಲ್ಲೆಯಲ್ಲಿ ವಕೀಲನಾಗಿರುತ್ತಾನೆ.

ಇದಕ್ಕೆ ಮತ್ತೊಂದು ದೃಷ್ಟಾಂತವನ್ನೂ ಇಲ್ಲಿ ತಿಳಿಸಿದೆ. ಈ ಗ್ರಂಥ ಕರ್ತರಾದ ಯೋಗೀಶ್ವರರು ,1928ನೇ ಸಂವತ್ಸರದಲ್ಲಿ ಮೇ ತಿಂಗಳು 5ನೇ ತಾರೀಖಿನ ದಿನ ಮದ್ರಾಸಿನಿಂದ ಹೈದರಾಬಾದಿಗೆ ಹೊರಟು, ಅಲ್ಲಿ ತೆಲುಗು ಭಾಷೆಯಲ್ಲಿ ಉಪನ್ಯಾಸವನ್ನು ಮಾಡುತ್ತಿದ್ದರು. ಹೀಗಿರುವಾಗ ಹೈದರಾಬಾದಿಗೆ ಸೇರಿದ 'ಪಲಕುನಾಮಾ' ಎಂಬ ರೈಲ್ವೆ ಸ್ಟೇಷನ (ಹಬೆಗಾಡಿಯ ನಿಲ್ದಾಣ) ನಲ್ಲಿ ಸುಮಾರು ಇಪ್ಪತ್ತು ಸಂವತ್ಸರ ವಯಸ್ಸುಳ್ಳ ಒಬ್ಬ ಯುವಕನೊಬ್ಬನಿದ್ದನು. ಆತನು ತೆಲುಗಿನಲ್ಲಿರುವ 'ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತ' ವೆಂಬ ಈ ಗ್ರಂಥವನ್ನು ತರಿಸಿಕೊಂಡು ಅದರಲ್ಲಿ ಹೇಳಿರುವ ರೀತಿಯಲ್ಲಿ ಎಡದ ಮೂಗಿನಲ್ಲಿರುವ ಶ್ವಾಸವನ್ನು ಬಲದ ಮೂಗಿಗೂ, ಬಲದ ಮೂಗಿನಲ್ಲಿರುವುದನ್ನು ಎಡಕ್ಕೂ ಬದಲಾಯಿಸುವ ಪದ್ಧತಿಯೆಲ್ಲವನ್ನೂ ಚನ್ನಾಗಿ ತಿಳಿದುಕೊಂಡು, ಆ ಮೇಲೆ ತಂತೀವರ್ತಮಾನದ (Telegraph) ಪರೀಕ್ಷಾ ಸ್ಥಳಕ್ಕೆ ಹೋಗುವಾಗ ಮನೆಯಿಂದ ಹೊರಟ ಮೊದಲು ಶ್ವಾಸವನ್ನು ಸೂರ್ಯನಾಡಿ ಅಂದರೆ ಬಲಮೂಗಿನಲ್ಲಿಯೇ ನಿಲ್ಲಿಸಿಕೊಂಡುಹೋಗಿ,ಪರೀಕ್ಷಾ ಗೃಹದಲ್ಲಿಯೂ ಕೂಡ ಸೂರ್ಯನಾಡಿಯಿಂದಲೇ ಕುಳಿತುಕೊಂಡು ನಿಮಿಷವೊಂದಕ್ಕೆ ನಲವತ್ತು ಮಾತುಗಳಂತೆ ಬರಮಾಡಿಕೊಳ್ಳುವುದಕ್ಕೆ (Receive) ಬದಲಾಗಿ ಅದಕ್ಕಿಂತಲೂ ಕಡಿಮೆಯಾಗಿ ತಂತಿಯಿಂದ 'ರಿಸೀವ್' (Receive) ಮಾಡಿದವನಾಗಿ, 'ಈದಿನ ನಾನು ತಪ್ಪಿಹೋದೆನು,' ಎಂದು ವ್ಯಸನದಿಂದ ಮನೆಯಲ್ಲಿದ್ದನಂತೆ. ಹತ್ತು ದಿನಗಳು ಕಳೆದ ಮೇಲೆ "ನೀನು 'ಟೆಲಿಗ್ರಾಫ್' ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದಿ, ಗೊತ್ತಾದ ಇಂತಹ ರೈಲ್ವೇ ಸ್ಟೇಷನಿಗೆ ಹೋಗಿ ಇಂತಹ ಕೆಲಸಕ್ಕೆ ಸೇರಿ ತಿಳಿಸತಕ್ಕದು," ಎಂದು ಆ ಯುವಕನಿಗೆ ಆರ್ಡರು ಬಂದಿತ್ತು. ಅಂತಹ

ಸಮಯದಲ್ಲಿ ಈ ಗ್ರಂಥಕರ್ತರಾದ ಯೋಗೀಶ್ವರರು ಹೈದರಾಬಾದಿಗೆ ಬಂದಿದ್ದ ವಿಷಯವು ಆತನಿಗೆ ತಿಳಿದುಬಂದು, ತಕ್ಷಣವೇ ಈ ಗ್ರಂಥಕರ್ತರ ಸಮೀಪಕ್ಕೆ ಬಂದು ಅವರನ್ನು 'ಪಲಕನಾಮ' ಎಂಬ ಸ್ಟೇಷನಿಗೆ ಕರೆದು ಕೊಂಡು ಹೋಗಿ ಅವರಿಗೆ ಸರಿಯಾದ ಪೂಜೆ ಮತ್ತು ಮರ್ಯಾದೆಗಳನ್ನು ಸಲ್ಲಿಸಿ ಮುಗಿಸಿದ ಮೇಲೆ, "ನಾನು ತಂತಿ ವರ್ತಮಾನದ (Telegraph) ಪರೀಕ್ಷೆಗೆ ಹೊರಡುವಾಗ ತಾವು ತಮ್ಮ ಗ್ರಂಥದಲ್ಲಿ ಹೇಳಿರುವ ರೀತಿಯಲ್ಲಿ ಶ್ವಾಸವನ್ನು ಸೂರ್ಯನಾಡಿಯಲ್ಲಿಯೇ ನಿಲ್ಲಿಸಿ ನಿಮಿಷವೊಂದಕ್ಕೆ ನಲವತ್ತು ಮಾತುಗಳನ್ನು ಬರಮಾಡಿಕೊಳ್ಳಲಾರದೆ ಮೂವತ್ತೈದು ಮಾತುಗಳನ್ನು ಮಟ್ಟಿಗೆ ಬರಮಾಡಿಕೊಂಡೆನು. ಆದರಿಂದ ನಾನು ತಪ್ಪಿಹೋದೆನೆಂದು ಬಹಳ ಚಿಂತೆಯಿಂದಿದ್ದೆನು. ಹೀಗಾದ ಹತ್ತು ದಿನಗಳು ಕಳೆದ ಮೇಲೆ ಪರೀಕ್ಷೆಯಲ್ಲಿ ನಾನು ತೇರ್ಗಡೆಯಾಗಿರುವೆನೆಂದೂ, ಇಂತಹ ಸ್ಥಳಕ್ಕೆ ಹೋಗಿ ಕೆಲಸಕ್ಕೆ ಸೇರಬೇಕೆಂದೂ ಆರ್ಡರು ಬಂದಿತು' ಎಂದು ಹೇಳಿದನು. ಆ ಊರಿನ ಹೆಸರು ಜ್ಞಾಪಕವಿಲ್ಲವಾಗಿ ಇಲ್ಲಿ ಅದನ್ನು ತಿಳಿಸಿಲ್ಲ.

ಇದೇ ರೀತಿಯಲ್ಲಿಯೇ ಇನ್ನೂ ಅನೇಕರು ಈ ಗ್ರಂಥಕರ್ತರಿಂದ ಬರೆಯಲ್ಪಟ್ಟ ತೆಲುಗು, ಅರವ ಗ್ರಂಥಗಳನ್ನು ಚನ್ನಾಗಿ ಓದಿ, ಶ್ವಾಸವನ್ನು ಮೂಗಿನ ಹೊಳ್ಳೆಗಳಲ್ಲಿ ತಿರುಗಿಸುವ ಕ್ರಮವೆಲ್ಲವನ್ನೂ ಕಲಿತು, ತಮ್ಮತಮ್ಮ ಕಾರ್ಯಗಳಿಗೆ ಹೊರಡುವಾಗ ಶ್ವಾಸವನ್ನು ಸೂರ್ಯನಾಡಿಯಲ್ಲಿ ನಿಲ್ಲಿಸಿಕೊಂಡು ಹೊರಟು ತಮ್ಮ ಕಾರ್ಯಗಳು ಸಿದ್ಧಿಯಾದುದನ್ನು ಈ ಗ್ರಂಥಕರ್ತರಿಗೆ ಕಾಗದದ ಮೂಲಕ ತಿಳಿಸಿ ಸಂತೋಷಪಟ್ಟರು. ಹೀಗೆಯೇ ಇನ್ನೂ ಅನೇಕ ದೃಷ್ಟಾಂತಗಳು ನಡೆದಿವೆ. ಆದುದರಿಂದ ಈ ಕನ್ನಡ ಗ್ರಂಥವನ್ನು ಓದುವ ನಿಮಗೆ ಒಂದೆರಡು ದೃಷ್ಟಾಂತಗಳನ್ನು ತೋರಿಸಿದಲ್ಲಿ ಇದರಲ್ಲಿ ಶ್ರದ್ಧೆಯುಂಟಾಗಿ, ನೀವೂ ಹಾಗೆಯೇ ಮಾಡುತ್ತೀರೆಂದು ಭಾವಿಸಿ ಮೇಲೆ ಹೇಳಿದ ಇಬ್ಬರ ವಿಷಯವನ್ನು ಮಟ್ಟಿಗೆ ಪ್ರಮಾಣಕ್ಕಾಗಿ ಹೇಳಬೇಕಾಯಿತು. ಇನ್ನು ಶ್ವಾಸವನ್ನು ಮೂಗಿನಲ್ಲಿ ತಿರುಗಿಸುವ ರೀತಿಯನ್ನು ಈ ಮುಂದೆ ತಿಳಿಸಲಾಗಿದೆ.

ಹಿಂದೆ ಹೇಳಿದಂತೆ ಶ್ವಾಸವು ಬಲಮೂಗಿನಲ್ಲಿ ನಡೆದರೆ ಸೂರ್ಯನಾಡಿಯೆಂದೂ, ಎಡಮೂಗಿನಲ್ಲಿ ನಡೆದರೆ ಚಂದ್ರನಾಡಿಯೆಂದೂ ಕರೆಯಲ್ಪ

ಡುತ್ತದೆ. ಶ್ವಾಸಕ್ಕೆ 'ಹಂಸ'ವೆಂಬ ಹೆಸರಿದೆ. ಈ ಶ್ವಾಸವನ್ನು ಹೊರಕ್ಕೆ ಬಿಡುವುದೇ 'ರೇಚಕ'ವೆಂದೂ, ಒಳಕ್ಕೆ ಎಳೆಯುವಿಕೆಯೇ 'ಪೂರಕ'ವೆಂದೂ, ಒಳಕ್ಕೆ ಎಳೆದ ಶ್ವಾಸವನ್ನು ಅಲ್ಲಿಯೇ ನಿಲ್ಲಿಸುವಿಕೆಯೇ 'ಕುಂಭಕವೆಂದೂ, ಕರೆಯುತ್ತಾರೆ. ಬಲಮೂಗಿಗೆ ಬರುವ ಶ್ವಾಸವು 'ಸೂರ್ಯನಾಡಿ'ಯೆಂದೂ, 'ಇಡಾನಾಡಿ' ಯೆಂದೂ ಹೇಳಲ್ಪಡುತ್ತದೆ. ಮತ್ತು ಎಡಮೂಗಿಗೆ ಬರುವ ಶ್ವಾಸಕ್ಕೆ 'ಚಂದ್ರನಾಡಿ' ಯೆಂದೂ, 'ಪಿಂಗಳನಾಡಿ' ಯೆಂದೂ ಹೇಳುತ್ತಾರೆ. ಇದೂ ಅಲ್ಲದೆ 'ಮೂಲಾಧಾರ ಚಕ್ರ'ದ ಮೊದಲು ಅಂದರೆ, ಗುದಸ್ಥಾನದಿಂದ 'ಸಹಸ್ರಾರ ಚಕ್ರ' (ಬ್ರಹ್ಮಕಪಾಲದ)ವರಿವಿಗೂ ನಡೆಯುತ್ತಿರುವ ಶ್ವಾಸಕ್ಕೆ 'ಸುಷುಮ್ನಾ' ನಾಡಿಯೆಂದೂ ಹೆಸರು.

ಆದಿ-ಮಂಗಳ-ಶನಿವಾರಗಳಲ್ಲಿ ಬೆಳಗಿನ ಝಾವ ನಾಲ್ಕು ಘಂಟೆಯಿಂದ ಆರು ಘಂಟೆಯ ವರಿವಿಗೆ ಶ್ವಾಸವನ್ನು 'ಸೂರ್ಯ ನಾಡಿ' ಅಂದರೆ ಬಲ ಮೂಗಿನಲ್ಲಿರುವಂತೆ ತಿರುಗಿಸಬೇಕು.

ಸೋಮ-ಶುಕ್ರ-ಬುಧವಾರಗಳಲ್ಲಿ ಬೆಳಗಿನ ಝಾವ 4 ಘಂಟೆಯಿಂದ ಬೆಳಿಗ್ಗೆ 6 ಘಂಟೆಯ ವರಿವಿಗೂ ಶ್ವಾಸವನ್ನು 'ಚಂದ್ರ ನಾಡಿ' ಅಂದರೆ ಎಡಮೂಗಿನಲ್ಲಿರುವಂತೆ ತಿರುಗಿಸಿಕೊಳ್ಳಬೇಕು.

ಕೃಷ್ಣಪಕ್ಷದ ಗುರುವಾರಗಳಲ್ಲಿ ಬೆಳಗಿನ ಝಾವ 4 ಘಂಟೆಯಿಂದ 6 ಘಂಟೆಯ ವರಿವಿಗೂ ಶ್ವಾಸವನ್ನು 'ಸೂರ್ಯ ನಾಡಿ' ಅಂದರೆ ಬಲದ ಮೂಗಿನಲ್ಲಿರುವಂತೆ ತಿರುಗಿಸಿಕೊಳ್ಳಬೇಕು.

ಶುಕ್ಲಪಕ್ಷದ ಗುರುವಾರಗಳಲ್ಲಿ ಬೆಳಗಿನ ಝಾವ 4 ಘಂಟೆಯಿಂದ 6 ಘಂಟೆಗಳವರಿವಿಗೂ ಶ್ವಾಸವನ್ನು 'ಚಂದ್ರನಾಡಿ' ಅಂದರೆ ಎಡದಮೂಗಿನ ಹೊಳ್ಳೆಯಲ್ಲಿ ನಡೆಯುತ್ತಿರುವಂತೆ ತಿರುಗಿಸಿಕೊಳ್ಳಬೇಕು.

ಶನಿವಾರದ ದಿನಗಳಲ್ಲಿ ಶ್ವಾಸವನ್ನು ಹಗಲೂ ರಾತ್ರಿಯೂ ಸೂರ್ಯನಾಡಿಯಲ್ಲಿಯೇ ಇರುವಂತೆ ಮಾಡಬೇಕು. ಎಡಬಲ ಮೂಗಿನ ಹೊಳ್ಳೆಗಳಲ್ಲಿ ತಿರುಗಿಸುವ ಕ್ರಮವನ್ನು ಈ ಕೆಳಗೆ ವಿವರಿಸಿದೆ.

ನಿತ್ಯವೂ ಬೆಳಗಿನ ಝಾವ ನಾಲ್ಕು ಘಂಟೆಗೆ ಮುಂಚೆಯೇ ನಿದ್ರೆಯನ್ನು ಬಿಟ್ಟು ಏಳಬೇಕು. ಎದ್ದಮೇಲೆ ಎಡದ ಮೂಗಿನ ಶ್ವಾಸವು ನಡೆಯುತ್ತಿದ್ದುದೇ ಆದರೆ, ಅದು ಬಲಮೂಗಿಗೆ ಬರುವಂತೆ ತಿರುಗಿಸಬೇಕೆಂದು ಮನಸ್ಸಿನಲ್ಲೆಣಿಸಿ ಇಗೋ ☞ ಈ ಎದುರು ಭಾಗದಲ್ಲಿ ಕಾಣ



ಗ್ರಂಥಕರ್ತರಾದ ಶ್ರೀ ಯೋಗೀಶ್ವರರು ತಮ್ಮ ಎಡದ ಮೂಗಿನಲ್ಲಿರುವ ಶ್ವಾಸವನ್ನು ಬಲದಮೂಗಿಗೆ ಬರುವಂತೆ ತಿರುಗಿಸಿ ತೋರಿಸುತ್ತಿದ್ದಾರೆ.

Sri Yogiswarar the author, of this is demonstrating the change of breath from the left nostril to the right.

ಬರುವ ಚಿತ್ರಪಠದಲ್ಲಿ ಈ ಗ್ರಂಥಕರ್ತರು ಯಾವ ರೀತಿಯಾಗಿ ಕುಳಿತು ಕೊಂಡಿದ್ದಾರೋ, ಅದೇ ರೀತಿಯಲ್ಲಿ ಎಡದ ಕಾಲಿನಮೇಲೆ ಬಲಗಾಲನ್ನು ಬೆರಳುಗಳು ಕೂಡ ಒಂದರಮೇಲೊಂದನ್ನು ಸರಿಯಾಗಿ ಇಟ್ಟು, ಎಡದ ಕೈಯನ್ನು ನೆಲದಮೇಲೆ ಊರಿಕೊಂಡು, ಬಲಗಾಲಿನ ಮಣಿಕಟ್ಟು ಪ್ರದೇಶ ದಲ್ಲಿ ಆ ಬಲಗಾಲಿನ ಹೆಬ್ಬೆಟ್ಟಿಗೆ ಸರಿಯಾಗಿರುವ ದೊಡ್ಡ ನರವನ್ನು ಬಲಗೈ ಮಧ್ಯದ ಬೆಟ್ಟಿನಿಂದ ತಂಬೂರಿಯ ತಂತಿಯನ್ನಾಡಿಸುವಂತೆ ಹಿಂದಕ್ಕೂ ಮುಂದಕ್ಕೂ ಆಡಿಸುತ್ತಿರಬೇಕು. ಇವೆಲ್ಲವನ್ನೂ ಈ ಚಿತ್ರಪಠದಲ್ಲಿ ಕಾಣಿ ಸಿದೆ. ಗಮನವಿಟ್ಟು ನೋಡಿರಿ. ಹೀಗೆ ಕೆಲವು ನಿಮಿಷಗಳು ಮಾಡು ತ್ತಿದ್ದದೇ ಆದರೆ, ಎಡದ ಮೂಗಿನಲ್ಲಿ ಆಡುತ್ತಿರುವ ಶ್ವಾಸವು ಬಲದ ಮೂಗಿಗೆ ತಿರುಗುತ್ತದೆ.

ಬಲದ ಮೂಗಿನಲ್ಲಿ ನಡೆಯುತ್ತಿರುವ ಶ್ವಾಸವನ್ನು ಎಡದ ಮೂಗಿ ನೊಳಕ್ಕೆ ತಿರುಗಿಸಬೇಕಾದರೆ ಬಲಗಾಲಿನ ಮೇಲೆ ಎಡಗಾಲನ್ನು ಬೆರಳು ಗಳು ಕೂಡ ಒಂದರಮೇಲೊಂದು ಬರುವಂತೆ ಸರಿಯಾಗಿಟ್ಟು ಬಲಗೈಯ ನ್ನು ನೆಲದಮೇಲೆ ಊರಿ, ಎಡದ ಕಾಲಿನ ಮಣಿಕಟ್ಟಿನ ಸಮೀಪದಲ್ಲಿರುವ ಎಡಗಾಲ ಹೆಬ್ಬೆರಳಿಗೆ ಸರಿಯಾದ ದೊಡ್ಡ ನರವನ್ನು ಎಡಗೈ ನಡುಬೆರಳಿ ನಿಂದ ತಂಬೂರಿಯ ತಂತಿಯನ್ನು ಆಡಿಸುವಂತೆ ಕದಲಿಸುತ್ತಿರಬೇಕು. ಹೀಗೆ ಕೆಲವು ನಿಮಿಷಗಳು ಮೇಲೆ ಹೇಳಿದಂತೆ ಹೆಬ್ಬೆಟ್ಟಿನ ದೊಡ್ಡ ನರವನ್ನು ಕದಲಿಸುತ್ತ ಬಂದರೆ, ಬಲಮೂಗಿನಲ್ಲಿರುವ ಶ್ವಾಸವು ಎಡಮೂಗಿನೊಳಕ್ಕೆ ತಿರುಗುತ್ತದೆ.

ಈ ಎರಡು ಶ್ವಾಸಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಿರುಗಿಸುವ ಸ್ಥಳವು ಭ್ರೂಮಧ್ಯ ಅಂದರೆ ಹುಬ್ಬುಗಳ ನಡುಭಾಗ. ಈ ಭ್ರೂಮಧ್ಯಭಾಗದಲ್ಲಿ ತಾವರೆಯ ದಂಟಿನೊಳಗಿನ ಮೃದುವಾದ ತಂತುವಿನಷ್ಟು ಒಂದು ಸಣ್ಣ ರಂಧ್ರವಿದೆ. ಅದನ್ನೇ ತ್ರಿವೇಣೀಸಂಗಮವೆಂದು ಹೇಳು ತ್ತಾರೆ. ಈ ಭ್ರೂಮಧ್ಯ ಭಾಗದಲ್ಲಿ ಇಡಾ, ಪಿಂಗಳಾ, ಮತ್ತು ಸುಷುಮ್ನಾ ಎಂಬ ಈ ಮೂರು ನಾಡಿಗಳೂ ಒಟ್ಟು ಸೇರುತ್ತವೆ. ಈ ಮೂರು ನಾಡಿ ಗಳೇ, ಯಜ್ಞೋಪವೀತದ ಅಂದರೆ ಜನಿವಾರದ ಮೂರು ಎಳೆಗಳು ಎಂದು

ಹೇಳಲ್ಪಡುತ್ತವೆ. ಈ ವಿಷಯಗಳೆಲ್ಲವೂ ಇನ್ನು ಮುಂದೆ 'ಯಜ್ಞೋಪವೀತದ ರಹಸ್ಯಾರ್ಥ' ವೆಂಬ ಪ್ರಕರಣದಲ್ಲಿ ವಿಶೇಷವಾಗಿ ಹೇಳಲ್ಪಡುವುದು.

ಶ್ಲೋ ॥ ಧ್ವನೇ ರಂತರ್ಗತಂ ಜ್ಯೋತಿಃ ♦ ಜ್ಯೋತಿ ರಂತರ್ಗತಂ ಮನಃ ।
ತನ್ಮನೋ ವಿಲಯಂ ಯಾತಿ ♦ ತದ್ವಿಷ್ಣೋಃ ಪರಮಂ ಪದಂ ॥

ಶ್ಲೋ ॥ ಪ್ರಾಣ ಏವ ಸದಾ ನಾದಃ ♦ ಮನೋಬಿಂದು ಸ್ತಥೈವ ಚ ।
ಕಳಾ ತು ಬುದ್ಧಿ ರಿತ್ಯುಕ್ತಂ ♦ ಏವಂ ಧ್ಯಾಯೇತ್ ಸದಾ ಯತಿಃ ॥

ಧ್ವನಿಯಲ್ಲಿ ಜ್ಯೋತಿಯು ಅಡಗಿದೆ. ಆ ಜ್ಯೋತಿಯಲ್ಲಿ ಮನಸ್ಸು ಅಡಗಿದೆ. ಆ ಮನಸ್ಸು ಲಯವಾದದ್ದೇ ಆದರೆ, ಅದೇ ಪರಮಾತ್ಮನ ಪರಮಪದವಿಯೆಂದೆನಿಸುತ್ತದೆ. ಇದೂ ಅಲ್ಲದೆ ಪ್ರಾಣವೇ 'ನಾದ'ವು; ಮನಸ್ಸೇ 'ಬಿಂದು'ವು. ಬುದ್ಧಿಯೇ 'ಕಳೆ'ಯೆಂದು ಕರೆಯಲ್ಪಡುವಂಥದು. ಈ ನಾದಬಿಂದು ಕಳೆಗಳನ್ನು ಸದಾ ಧ್ಯಾನಿಸುವವನು ಯತಿಯೆಂದೆನಿಸುತ್ತಾನೆ. ಈ ನಾದಬಿಂದುಕಳೆಗಳಿಗೆ 'ತ್ರಿಕೂಟಸ್ಥಾನ'ವೇ ಆಧಾರವಾಗಿರುತ್ತದೆ. ಈ ತ್ರಿಕೂಟವನ್ನು 'ಶೃಂಗಾಟ' ವೆಂದೂ, 'ಭ್ರೂಮಧ್ಯ' ವೆಂದೂ, 'ಕಾಶಿ'ಯೆಂದೂ ಹೇಳುತ್ತಾರೆ. "ಭ್ರುವೋರ್ಮಧ್ಯೇ ವಾರಣಾಸೀ ♦ ತತ್ರೈವ ಪರಂಜ್ಯೋತಿ ರ್ವಿರಾಜತೇ ♦" ಎಂಬಂತೆ ಭ್ರೂಮಧ್ಯವನ್ನೇ 'ವಾರಣಾಸಿ' ಅಂದರೆ 'ಕಾಶೀಕ್ಷೇತ್ರ' ವೆಂದು ಕರೆಯುವರು. ಇಂತಹ ಕಾಶೀಕ್ಷೇತ್ರದಲ್ಲಿಯೇ ಸ್ವಯಂಜ್ಯೋತಿ ಸ್ವರೂಪನಾದ ಪರಮಾತ್ಮನು ಪ್ರಕಾಶಿಸುತ್ತಿರುವನು. ಇಡಾ, ಪಿಂಗಳಾ ಮತ್ತು ಸುಷುಮ್ನಾ ಎಂಬ ಈ ಮೂರು ನಾಡಿಗಳನ್ನು 'ಸತ್,' 'ಚಿತ್,' ಮತ್ತು 'ಆನಂದ' ಎಂಬುದಾಗಿ ಕರೆಯುತ್ತಾರೆ. ಇವನ್ನು ಒಟ್ಟು ಸೇರಿಸಿದ್ದರಿಂದ 'ಸಚ್ಚಿದಾನಂದ'ವೆಂಬುದಾಯಿತು. ಅಂದರೆ ಇಡಾಪಿಂಗಳಾ ಮತ್ತು ಸುಷುಮ್ನಾ ನಾಡಿಗಳ ಸಂಗಮವೇ ಸಚ್ಚಿದಾನಂದನಾದ ಪರಮಾತ್ಮನ ವಾಸಸ್ಥಾನವೆಂದಾಯಿತು. ಈ ಸಚ್ಚಿದಾನಂದನೇ ಜೀವಾತ್ಮ. ಈ 'ಜೀವಾತ್ಮನೇ ಪುರುಷನು' ಎಂದು ಛಾಂದಾಗ್ಯೋಪನಿಷತ್ತಿನಲ್ಲಿ ಶ್ವೇತಕೇತುವಿಗೆ ಸೂರ್ಯನು ಉಪದೇಶಿಸಿದ್ದಾನೆ. ಶ್ವಾಸವನ್ನು ಎಡಬಲ ಮೂಗಿನ

ಹೊಳ್ಳೆಗಳಿಗೆ ಬದಲಾಯಿಸುವ ರೀತಿಯನ್ನು ಮುಂದೆ ಹೇಳಲಾಗಿದೆ. ಎಚ್ಚ
ರಿಕೆಯಿಂದ ಅದನ್ನು ಗಮನಿಸಿರಿ.

ಸಾಧಾರಣವಾಗಿ ಕುಳಿತಿರುವಾಗ ಬಲಮೂಗಿನಲ್ಲಿರುವ ಶ್ವಾಸವನ್ನು
ಎಡಮೂಗಿನೊಳಕ್ಕೆ ತಿರುಗಿಸಬೇಕೆಂದು ಅಪೇಕ್ಷಿಸಿದರೆ, ಬಲಗೈ ಕೌಂಕು
ಳಿಗೂ ಮತ್ತು ಮೊಣಕೈಗೂ ಮಧ್ಯಭಾಗದಲ್ಲಿ ಯೋಗದಂಡವನ್ನಾಗಲಿ
ಇಲ್ಲವೇ, ಕೌಂಕುಳಿನ ಎತ್ತರಕ್ಕೆ ಸರಿಯಾದ ಒಂದು ಎತ್ತರವಾದ ಕಾಲ್ಮ
ಯನ್ನಾಗಲಿ ಇಟ್ಟು, ಕೌಂಕುಳು ಮತ್ತು ಮೊಣಕೈ ಇವುಗಳ ಮಧ್ಯಭಾ
ದಲ್ಲಿರುವ ದೊಡ್ಡ ನರಕ್ಕೆ ಮಣೆಯು ಮುಟ್ಟುವಂತಿಟ್ಟು ಅದುಮಿದುದೆ
ಆದರೆ, ಬಲಮೂಗಿನಲ್ಲಿರುವ ಶ್ವಾಸವು ಎಡದಮೂಗಿಗೆ ತಿರುಗುತ್ತದೆ
ಇಲ್ಲವೇ, ಆ ಯೋಗದಂಡವನ್ನೇ ಕೌಂಕುಳಲ್ಲಿಟ್ಟು ಅದುಮಿದರೂ ಶ್ವಾಸವ
ಎಡದಮೂಗಿನೊಳಕ್ಕೆ ಬರುತ್ತದೆ. ಶ್ವಾಸವನ್ನು ಸೂರ್ಯನಾಡಿಯಲ್ಲಿ
ಅಂದರೆ,ಬಲದಮೂಗಿನಲ್ಲಿ ಬರಮಾಡಿಕೊಳ್ಳುವುದಕ್ಕೆ ಯೋಗಿಗಳು ಯಾವಾ
ಗಲೂ ತಮ್ಮ ಸಮೀಪದಲ್ಲಿ 'ಯೋಗದಂಡ'ವನ್ನು ಇಟ್ಟುಕೊಂಡಿರುತ್ತಾರೆ
ಯೋಗಕ್ಕೆ ಅಂದರೆ ಶ್ವಾಸವನ್ನು ಒಂದು ಮೂಗಿನಿಂದ ಇನ್ನೊಂದು
ಮೂಗಿಗೆ ತಿರುಗಿಸಿಕೊಳ್ಳುವುದಕ್ಕಾಗಿ ಉಪಯೋಗಿಸುವಂಥ ದಂಡಕ್ಕೆ
'ಯೋಗದಂಡ' ವೆಂದು ಹೆಸರು.

ಈಗ ಕುಳಿತುಕೊಂಡಕಾಲದಲ್ಲಿ ಎಡದ ಮೂಗಿನಲ್ಲಿರುವ ಶ್ವಾಸವನ್ನು
ಬಲಭಾಗಕ್ಕೆ ತಿರುಗಿಸಿಕೊಳ್ಳಬೇಕೆಂದು ಇಚ್ಛಿಸುವವರು ಎಡದ ಕೌಂಕು
ಳಿಗೂ ಎಡದ ಮೊಣಕೈಗೂ ನಡುಭಾಗದಲ್ಲಿ ಯೋಗದಂಡವನ್ನಿಟ್ಟು
ಭಾಗದಲ್ಲಿರುವ ದೊಡ್ಡ ನರಕ್ಕೆ ಆ ಯೋಗದಂಡವು ತಗಲುವಂತೆ ಮಾ
ಅದನ್ನು ಅದುಮಿದ್ದೇ ಆದರೆ, ಎಡದಮೂಗಿನಿಂದ ಬಲದಮೂಗಿಗೆ ಶ್ವಾಸ
ತಿರುಗುವುದು. ಇಲ್ಲವೇ ಆ ಯೋಗದಂಡವನ್ನು ಕೌಂಕುಳಲ್ಲಿಟ್ಟು ಅದು
ದರೂ ಶ್ವಾಸವು ತಿರುಗುವುದು.

ಅಥವಾ ಕುಳಿತಿರುವಾಗ ಎಡಗೈಯನ್ನು ಭೂಮಿಯಮೇಲೆ ಊ
ಕೊಂಡು ಬೆನ್ನಿನ ಎಡಭಾಗವನ್ನು ಗೋಡೆಗೆ ಆನಿಸಿ, (ತಗಲುವಂತೆ ಒತ್ತಿ

ಕುಳಿತುಕೊಂಡಿದ್ದೇ ಆದರೆ, ಎಡಮೂಗಿನೊಳಗಿರುವ ಶ್ವಾಸವು ಬಲಮೂಗಿನೊಳಕ್ಕೆ ತಿರುಗುವುದು. ಇದರಂತೆಯೇ ಬಲಗೈಯನ್ನು ಭೂಮಿಯಮೇಲೆ ಊರಿಕೊಂಡು ಬೆನ್ನಿನ ಬಲಭಾಗವನ್ನು ಗೋಡೆಗೆ ಆನಿಸಿಟ್ಟು ಕುಳಿತುಕೊಂಡಿದ್ದೇ ಆದರೆ, ಎಡಗಡೆಯಲ್ಲಿರುವ ಶ್ವಾಸವು ಬಲದಮೂಗಿನೊಳಕ್ಕೆ ತಿರುಗುತ್ತದೆ.

ಮಲಗುವಾಗ ಬಲದ ಪಕ್ಕಕ್ಕೆ ತಿರುಗಿ ಮಲಗಿಕೊಂಡು, ಬಲಗೈಯನ್ನು ತಲೆಯಕೆಳಗಿಟ್ಟುಕೊಂಡಿದ್ದೇ ಆದರೆ, ಶ್ವಾಸವು ಬಲದಿಂದ ಎಡಮೂಗಿನೊಳಕ್ಕೆ ತಿರುಗುವುದು. ಹೀಗೆಯೇ ಎಡಪಕ್ಕಕ್ಕೆ ತಿರುಗಿಕೊಂಡು ಎಡಗೈಯನ್ನು ತಲೆಯಕೆಳಗಿಟ್ಟು ಮಲಗಿದ್ದೇ ಆದರೆ, ಎಡಮೂಗಿನಲ್ಲಿರುವ ಶ್ವಾಸವು ಬಲಮೂಗಿನೊಳಕ್ಕೆ ತಿರುಗುವುದು.

ನಡೆಯುವಾಗ ಒಂದು ಸಣ್ಣ ಬಟ್ಟೆಯ ಸುತ್ತನ್ನಾಗಲಿ ಇಲ್ಲವೇ ಒಂದು ಮಡಿಸಿದ ಕೊಡೆಯನ್ನಾಗಲಿ, ಎಡದ ಕೌಂಕುಳಲ್ಲಿಟ್ಟು ಅದನ್ನು ಒತ್ತಿ ಹಿಡಿದು ನಡೆದದ್ದೇ ಆದರೆ, ಎಡಮೂಗಿನಿಂದ ಶ್ವಾಸವು ಬಲಮೂಗಿನೊಳಕ್ಕೆ ಬರುವುದು. ಹಾಗೆಯೇ ಆ ಬಟ್ಟೆಯಸುತ್ತು ಅಥವಾ ಕೊಡೆ ಇವುಗಳಲ್ಲೊಂದನ್ನು ಬಲದಕೌಂಕುಳಲ್ಲಿಟ್ಟು ಒತ್ತಿ ಹಿಡಿದು ನಡೆದದ್ದೇ ಆದರೆ, ಶ್ವಾಸವು ಬಲಮೂಗಿನಿಂದ ಎಡಭಾಗಕ್ಕೆ ತಿರುಗುವುದು. ಹೀಗೆ ಪ್ರತಿದಿನವೂ ಸಾಧನೆಮಾಡುತ್ತ ಬಂದರೆ, ಶ್ವಾಸವನ್ನು ಯಾವ ಕಡೆಯಿಂದ ಯಾವ ಕಡೆಗೆ ತಿರುಗಿಸಬೇಕೆಂದು ನೀವು ಅಪೇಕ್ಷಿಸಿದರೂ, ಆಯಾಯಾ ಕಾಲಕ್ಕೆ ಮತ್ತು ಸಂದರ್ಭಕ್ಕೆ ತಕ್ಕಂತೆ ಶ್ವಾಸವನ್ನು ಎಡದಿಂದ ಬಲಕ್ಕೂ ಮತ್ತು ಬಲದಿಂದ ಎಡಕ್ಕೂ ತಿರುಗಿಸುತ್ತಿರಬಹುದು.

ಮೇಲೆ ಹೇಳಿದಂತೆ ಆದಿವಾರದ ಮೊದಲು ಆ ವಾರದ ಏಳು ದಿನಗಳಲ್ಲಿಯೂ ಬೆಳಗಿನ ಝಾವ ನಾಲ್ಕು ಘಂಟೆಯಿಂದ ಮೊದಲು ಬೆಳಗ್ಗೆ ಆರು ಘಂಟೆಯವರಿವಿಗೂ ಆಯಾಯಾ ಮೂಗಿನಲ್ಲಿ ಶ್ವಾಸವನ್ನು ನಡೆಸುತ್ತಾ ಬಂದರೆ, ಅಂಥವರು ಯಾವ ವ್ಯಸನವೂ ಇಲ್ಲದೆ ಸಂತೋಷಚಿತ್ತರಾಗಿಯೇ ಇದ್ದು, ಧನಾರ್ಜನೆ, ಧರ್ಮಾರ್ಜನೆ ಮೊದಲಾದುವುಗಳನ್ನು ಮಾಡುತ್ತಿರು

ವರು. ಮತ್ತು ಯಾವ ಕಾರ್ಯವನ್ನು ಮಾಡಬೇಕೆಂದು ಉದ್ದೇಶಿಸಿ ಎಲ್ಲಿಗೆ ಹೊರಟರೂ, ತನ್ನ ಮನೆಯಿಂದ ಹೊರಹೊರಡುವಾಗ ಶ್ವಾಸವನ್ನು ಸೂರ್ಯನಾಡಿಯಲ್ಲಿ ಅಂದರೆ ಬಲಮೂಗಿನಲ್ಲಿ ನಡೆವಂತೆ ಮಾಡಿ ಹೊರಟಿದ್ದೇ ಆದರೆ, ಅವರ ಕಾರ್ಯಗಳು ಖಂಡಿತವಾಗಿಯೂ ಸಿದ್ಧಿಸುವುವು. ಸಕಲ ಜೀವರಾಶಿಗಳಿಗೂ ಈ ಶ್ವಾಸವು ಪ್ರಾಣವಾಯುವಾಗಿದ್ದು, ಮೂಗಿನ ಹೊಳ್ಳೆಗಳಲ್ಲಿ ಉಚ್ಛ್ವಾಸ ನಿಶ್ವಾಸವಾಗಿ ಆಡುತ್ತಿರುತ್ತವೆ. ಈ ಉಚ್ಛ್ವಾಸ ನಿಶ್ವಾಸಗಳನ್ನೇ 'ಹಂಸ' ವೆಂದು ಹೇಳುತ್ತಾರೆ.

ಮೂಗಿನಲ್ಲಿ ಶ್ವಾಸವನ್ನು ತಿರುಗಿಸುವ ರೀತಿಯನ್ನು ಹೇಳಿದವರು ಈ ಗ್ರಂಥಕರ್ತರನ್ನು ಕುರಿತು, 'ಈ ರಹಸ್ಯವನ್ನು ನೀನು ಯಾರಿಗೂ ತಿಳಿಸಬೇಡ, ಹಾಗೆ ನೀನು ಅದನ್ನು ಹೊರಪಡಿಸಿದ್ದೇ ಆದರೆ, **ಕಾಶಿಯಲ್ಲಿ ಕಾಮಧೇನುವನ್ನು ಕೊಂದ ಪಾಪದಲ್ಲಿ ಬಿದ್ದು ಹೋಗುತ್ತಿ'** ಎಂದು ಶಾಪವಿಟ್ಟರು. ಅದನ್ನು ಈ ಗ್ರಂಥಕರ್ತರು ಚನ್ನಾಗಿ ಆಲೋಚಿಸಿ 'ಒಬ್ಬನು ಮೇಲೆ ಹೇಳಿದಂಥ ಪಾಪಕ್ಕೆ ಗುರಿಯಾದರೂ ಜನಗಳು ಇದರಿಂದ ಸುಖವನ್ನು ಪಡೆದರೆ ಸಾಕು' ಎಂದು ಮನಸ್ಸಿನಲ್ಲೆಣಿಸಿ ಈ ಶ್ವಾಸವನ್ನು ಮೂಗಿನ ಎಡಬಲ ಭಾಗಗಳಿಗೆ ತಿರುಗಿಸುವ ವಿಷಯವೆಲ್ಲವನ್ನೂ ಇಲ್ಲಿ ಹೊರಪಡಿಸಿರುತ್ತಾರೆ.



# ಯೋಗಾಭ್ಯಾಸಕ್ಕೆ ಯಜುರ್ವೇದ ಯೋಗತತ್ವೋಪನಿಷತ್ತು ಪ್ರಮಾಣವು.

1. ಶ್ಲೋ ॥ ವಿಷ್ಣು ರ್ನಾಮ ಮಹಾಯೋಗೀ ♦ ಮಹಾಭೂತೋ ಮಹಾತಪಾಃ ।
ತತ್ವಮಾರ್ಗೇ ಯಥಾ ದೀಪೋ ♦ ದೃಶ್ಯತೇ ಪುರುಷೋತ್ತಮಃ ॥

(ಶ್ಲೋಕ 2.)

ಪುರುಷೋತ್ತಮನೂ, ಮಹಾ ಯೋಗಿಯೂ, ಮಹಾ ತಪಸ್ಸಂಪನ್ನನೂ ಮತ್ತು ಮಹಾ ಭೂತಸ್ವರೂಪನಾಗಿಯೂ ಇರುವಂಥ ಮಹಾವಿಷ್ಣುವು, ಸಕಲ ಭೂತಗಳಿಗೂ ತತ್ವೋಪದೇಶವನ್ನು ಮಾಡುವ ಸಲುವಾಗಿ ಮಹಾ ತೇಜಸ್ಸಿನಿಂದ ಕೂಡಿದ ದೀಪದಂತೆ ಪ್ರಕಾಶಿಸುತ್ತ ಮಹಾನುಭಾವನೆನಿಸಿರುತ್ತಾನೆ.

2. ಶ್ಲೋ ॥ ಜನ್ಮಮೃತ್ಯುಜರಾವ್ಯಾಧಿ ♦ ನಾಶನಂ ಮೃತ್ಯುತಾರಕಂ ।
ನಾನಾಮಾರ್ಗೈಸ್ತು ದುಷ್ಪ್ರಾಪಂ ♦ ಕೈವಲ್ಯಂ ಪರಮಂ ಪದಂ ॥

(ಶ್ಲೋಕ 6.)

ಜೀವಿಗಳಿಗೆ ವ್ಯಾಧಿ, ಮುದಿತನ, ಹುಟ್ಟುಸಾವುಗಳು ಮೊದಲಾದುವುಗಳು ಸಂಭವಿಸದಿರುವಂತೆ ಮಾಡಿ, ಮಾಯೆಯಿಂದ ಅವುಗಳನ್ನು ಹೊರಕ್ಕೆ ತೆಗೆದು ಪರಮಪದವೆಂಬ ಕೈವಲ್ಯವನ್ನು ಕೊಡುವುದಕ್ಕೆ ಭಕ್ತಿಜ್ಞಾನಯೋಗಗಳೇ ಮುಖ್ಯವಾದವುಗಳು.

3. ಶ್ಲೋ ॥ ಪತಿತಾಃ ಶಾಸ್ತ್ರಜಾಲೇಷು ♦ ಪ್ರಜ್ಞಯಾ ತೇನ ಮೋಹಿತಾಃ ।
ಅನಿರ್ವಾಚ್ಯಂ ಪದಂ ವಕ್ತುಂ ♦ ನ ಶಕ್ಯಂ ತೈಃ ಸುರೈರಪಿ ॥

ಶ್ಲೋ ॥ ಸ್ವಾತ್ಮಪ್ರಕಾಶರೂಪಂ ತತ್ ♦ ಕಿಂ ಶಾಸ್ತ್ರೇಣ ಪ್ರಕಾಶ್ಯತೇ ।

(ಶ್ಲೋಕ 6–7.)

'ಮೋಕ್ಷ' ವೆಂಬ ಪದವಿಯನ್ನು ದೇವತೆಗಳೂ ಕೂಡ ಹೊಂದುವುದಕ್ಕೆ ಅಸಾಧ್ಯ. ತನಗೆ ತಾನೇ ಬೆಳಗುತ್ತಿರುವ ಆತ್ಮನ ಸ್ವರೂಪವು ಕೇವಲ ಶಾಸ್ತ್ರವಿಚಾರದಿಂದ ಮಾತ್ರ ತಿಳಿದುಕೊಳ್ಳುವಂಥದಲ್ಲವು. ಹಾಗಿರಲು ಮಾನವರೆಲ್ಲರೂ ಶಾಸ್ತ್ರವೆಂಬ ಮಾಯಾಜಾಲದಲ್ಲಿ ಸಿಕ್ಕಿಕೊಂಡು ಆ ಮಾಯಾಶಾಸ್ತ್ರಗಳನ್ನೇ ಸರ್ವದಾ ಪಠಿಸುತ್ತಿರುವರು. ಈ ಬಗೆಯಾದ ಶಾಸ್ತ್ರಗಳಿಗೆ ಆತ್ಮನ ನಿಜಸ್ವರೂಪವನ್ನು ತಿಳಿಸುವುದಕ್ಕೆ ಎಷ್ಟು ಮಾತ್ರವೂ ಸಾಧ್ಯವಿಲ್ಲ.

4. ಶ್ಲೋ || ನಿಷ್ಕಳಂ ನಿರ್ಮಲಂ ಶಾಂತಂ ♦ ಸರ್ವಾತೀತಂ ನಿರಾಮಯಂ |
ತದೇವ ಜೀವರೂಪೇಣ ♦ ಪುಣ್ಯಪಾಪಫಲೈ ರ್ವೃತಂ || (ಶ್ಲೋಕ 8.)

ನಿಷ್ಕಳಂಕನಾದ, ನಿರ್ಮಲನಾದ, ಶಾಂತನಾದ, ಎಲ್ಲಕ್ಕಿಂತಲೂ ಶ್ರೇಷ್ಠನೆನಿಸಿದ, ನಿರಾಮಯನಾದ ಅಂದರೆ ಜನನಮರಣ, ಸುಖದುಃಖ, ಶೀತೋಷ್ಣ, ನೆನಪುಮರವು ಮೊದಲಾದ ದ್ವಂದ್ವಗಳಿಲ್ಲದೇ ಇರುವ ಜೀವಾತ್ಮನು ಸಮಸ್ತ ಜಂತುಜಾಲಗಳ ದೇಹಗಳನ್ನು ಒಳಹೊಕ್ಕು ಪುಣ್ಯಪಾಪ ಕರ್ಮಗಳಿಂದ ಮುಚ್ಚಲ್ಪಟ್ಟಿರುತ್ತಾನೆ.

5. ಶ್ಲೋ || ಧಾತು ಸ್ತ್ರೀಲೌಲ್ಯಕಾದೀನಿ ♦ ಮೃಗತೃಷ್ಣಾಮಯಾನಿ ವೈ |
ಜ್ಞಾತ್ವಾ ಸುಧೀ ಸ್ತ್ಯಜೇತ್ ಸರ್ವಾ ♦ ವಿಘ್ನಾ ಪುಣ್ಯಪ್ರಭಾವತಃ ||
(ಶ್ಲೋಕ 31.)

ರಸವಾದವು ಅಂದರೆ ಭಂಗಾರಮಾಡುವುದು, ಸ್ತ್ರೀಸಂಭೋಗ ಮೊದಲಾದುವುಗಳಲ್ಲಿ ಹೆಚ್ಚಾದ ಆಸಕ್ತಿಗಳು, ಮಂತ್ರಪಠನೆಗಳು, ದುರ್ಜನರ ಸಹವಾಸ, ಆತ್ಮಪ್ರಶಂಸೆ, ಜೂಜು ಪಾನ ಮೊದಲಾದ ಸಪ್ತವ್ಯಸಗಳಲ್ಲಿ ಆಸಕ್ತಿ ಮೊದಲಾದುವುಗಳು ಮರೀಚಿಕೆಯಂತೆ ಅಂದರೆ ಬಿಸಿಲ್ಗುದುರೆಯಂತೆ ಭ್ರಾಂತಿಯನ್ನುಂಟುಮಾಡುವವುಗಳು. ಈ ವಿಧವಾದ ವಿಘ್ನಗಳೆಲ್ಲವೂ ಯೋಗಾಭ್ಯಾಸವನ್ನು ಮಾಡುವವನಿಗೆ ಉಂಟಾಗುತ್ತವೆ. ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಲು ಶಕ್ತಿಯುಳ್ಳ ಚತುರರಾದ ಯೋಗಿಗಳು ಈ ವಿಘ್ನಗಳೆಲ್ಲವನ್ನೂ ಜಯಿಸಿ ತಮ್ಮ ಬಯಕೆಯನ್ನು ಪಡೆಯುತ್ತಾರೆ.

6. ಶ್ಲೋ || ಪ್ರಾಣಾಯಾಮಂ ತತಃ ಕುರ್ಯಾತ್ ♦ ಪದ್ಮಾಸನಗತಃ ಸ್ವಯಂ |
(ಶ್ಲೋಕ 32.)

ಮೇಲೆ ಹೇಳಿದ ರೀತಿಯಲ್ಲಿ ವಿಘ್ನಗಳೆಲ್ಲವನ್ನೂ ಜಯಿಸಿದಮೇಲೆ, ಪೂಜೆಮಾಡುವ ಕೋಣೆಯಲ್ಲಿ ಪದ್ಮಾಸನವನ್ನು ಹಾಕಿಕೊಂಡು ಕುಳಿತು, ಇನ್ನು ಮುಂದೆ ವಿವರಿಸಲ್ಪಡುವ ಪ್ರಾಣಾಯಾಮವನ್ನು ಅಭ್ಯಾಸಮಾಡುವುದಕ್ಕೆ ಯತ್ನಿಸಬೇಕು. ಪ್ರಾಣಾಯಾಮವನ್ನು ಅಭ್ಯಾಸಮಾಡುವ ಪೂಜೆಯ ಕೊಠಡಿಯು ಹೇಗಿರಬೇಕೆಂಬುದನ್ನು ಈ ಕೆಳಗೆ ವಿವರಿಸಿದೆ.

7. ಶ್ಲೋ ॥ ಸುಶೋಭನಂ ಮಠಂ ಕುರ್ಯಾತ್ ♦ ಸೂಕ್ಷ್ಮದ್ವಾರಂ ತು ನಿರ್ವ್ರಣಂ ।
ಸುಷ್ಠು ಲಿಪ್ತಂ ಗೋಮಯೇನ ♦ ಸುಧಯಾ ವಾ ಪ್ರಯತ್ನತಃ ॥

ಶ್ಲೋ ॥ ಮತ್ಕುಣೈ ರ್ಮಶಕೈ ರ್ಲೂತೈಃ ♦ ವರ್ಜಿತಂ ಚ ಪ್ರಯತ್ನತಃ ।
ದಿನೇ ದಿನೇ ಚ ಸಮ್ಮೃಷ್ಟಂ ♦ ಸಮ್ಮಾರ್ಜನ್ಯಾ ವಿಶೇಷತಃ ॥

ಶ್ಲೋ ॥ ವಾಸಿತಂ ಚ ಸುಗಂಧೇನ ♦ ಧೂಪಿತಂ ಗುಗ್ಗಲಾದಿಭಿಃ ।
(ಶ್ಲೋಕ 32-33-34.)

ಕಂಡಿಗಳಿಲ್ಲದಿರುವ ಸಣ್ಣ ಕೊಠಡಿಯಲ್ಲಿ, ಒಂದು ಸಣ್ಣ ಬಾಗಿಲಿರುವಂತೆ ಮಾಡಿಕೊಳ್ಳಬೇಕು. ಅನಂತರ ಆ ಕೊಠಡಿಯ ಗೋಡೆಗಳಿಗೆ ಸುಣ್ಣವನ್ನು ಬಳಿಸಿ, ನೆಲವನ್ನು ಚನ್ನಾಗಿ ಸಗಣಿಯಿಂದ ಸಾರಿಸಿ, ಅಲ್ಲಿ ತಿಗಣೆ, ಸೊಳ್ಳೆ, ಜಿಗಟೆ ಮೊದಲಾದ ರಕ್ತವನ್ನು ಹೀರುವ ಸಣ್ಣಸಣ್ಣ ಕ್ರಿಮಿಗಳು ಸೇರದಂತೆ ದಿನದಿನವೂ ಗುಡಿಸಿ ಸಾರಿಸಿ ಒಳ್ಳೆಯ ವಾಸನೆಯನ್ನುಳ್ಳ ಸಾಂಬ್ರಾಣಿ ಧೂಪವನ್ನೂ, ಸುವಾಸನೆಯುಳ್ಳ ಒಳ್ಳೆಯ ಅಗರು ಬತ್ತಿಗಳನ್ನೂ ಹೊತ್ತಿಸಿ, ಆ ವಾಸನೆಗಳು ಹೊರಗೆ ಹೋಗದಿರುವಂತೆ ಸರ್ವದಾ ಆ ಕೊಠಡಿಯ ಬಾಗಿಲನ್ನು ಹಾಕಿಕೊಂಡೇ ಇರಬೇಕು.

8. ಶ್ಲೋ ॥ ನಾಽತ್ಯುಚ್ಛ್ರಿತಂ ನಾಽತಿನೀಚಂ ♦ ಚೈಲಾಽಜಿನಕುಶೋತ್ತರಂ ।
ತತ್ರೋಪವಿಶ್ಯ ಮೇಧಾವೀ ♦ ಪದ್ಮಾಸನಸಮನ್ವಿತಃ ॥ (ಶ್ಲೋಕ 35.)

ಶ್ಲೋ ॥ ಋಜುಕಾಯಃ ಪ್ರಾಂಜಲಿ ಶ್ಚ ♦ ಪ್ರಣಮೇ ದಿಷ್ಟದೇವತಾಂ ।

ತಾನು ಕುಳಿತುಕೊಳ್ಳುವುದಕ್ಕಾಗಿ ತಕ್ಕಷ್ಟು ಉದ್ದ ಅಗಲಗಳೂ, ಒಂದಂಗುಲ ಎತ್ತರವೂ ಇರುವ ಒಂದು ಮಣೆಯನ್ನು ಸಿದ್ಧಪಡಿಸಿಕೊಂಡು ಅದರಮೇಲೆ ದರ್ಭಾಸನವನ್ನಾಗಲಿ, ಕೃಷ್ಣಾಜಿನವನ್ನಾಗಲಿ ಹಾಸಿ, ಅಪಾನ

ವಾಯುವಿನ ಭಾಗವು ಅಂದರೆ, ಗುದಸ್ಥಾನವು ಅದಕ್ಕೆ ತಗಲದಿರುವಂತೆ ಅದರಮೇಲೆ ಬಿಳುಪಾದ ವಸ್ತ್ರವನ್ನು ಮಡತೆಹಾಕಿ ಆದರಮೇಲೆ ಹಾಸಿ ಕುಳಿತುಕೊಂಡು **ಶರೀರವನ್ನು ಬಗ್ಗಿಸದಂತೆ ಕಡ್ಡಿಯಂತೆ ನೇರವಾಗಿ (ನೆಟ್ಟಗೆ) ನಿಲ್ಲಿಸಿಕೊಂಡು ತನ್ನ ಇಷ್ಟ ದೇವತೆಯನ್ನೂ ಗುರುವನ್ನೂ ನಮಸ್ಕರಿಸಿ** ಇನ್ನು ಮುಂದೆ ವಿವರಿಸಲ್ಪಡುವ ಪ್ರಾಣಾಯಾಮ ಕ್ರಮವನ್ನು ಅನುಸರಿಸಬೇಕು.

9. ಶ್ಲೋ ॥ ತತೋ ದಕ್ಷಿಣಹಸ್ತಸ್ಯ ♦ ಅಂಗುಷ್ಠೇನೈವ ಪಿಂಗಳಾಂ । (ಶ್ಲೋಕ 36.)

ಶ್ಲೋ ॥ ನಿರುಧ್ಯ ಪೂರಯೇ ದ್ವಾಯು ♦ ಮಿಡಯಾ ತು ಶನೈ ಶ್ಶನೈಃ ।
ಯಥಾ ಶಕ್ತ್ಯ ವಿರೋಧೇನ ♦ ತತಃ ಕುರ್ಯಾಚ್ಚ ಕುಂಭಕಂ ॥

(ಶ್ಲೋಕ 37.)

ಮೇಲೆ ಹೇಳಿದ ರೀತಿಯಲ್ಲಿ ಆಸನದಮೇಲೆ ಕುಳಿತು, **ಬಲಗೈ** ಹೆಬ್ಬೆಟ್ಟಿನಿಂದ ಬಲದಮೂಗಿನ ಹೊಳ್ಳೆಯನ್ನು ಅದುಮಿಕೊಂಡು (**ಒತ್ತಿ** ಹಿಡಿದು), ಎಡದಮೂಗಿನ ಹೊಳ್ಳೆಯ ಮೂಲಕವಾಗಿ ವಾಯುವನ್ನು ಒಳಕ್ಕೆ ಸೆಳೆದು, ಅದನ್ನು ನುಂಗಿ, ಅಲ್ಲಿಯೇ ಸ್ವಲ್ಪಕಾಲ ನಿಲ್ಲಿಸಬೇಕು. ಹೀಗೆ ನಿಲ್ಲಿಸುವುದೇ ಕುಂಭಕವೆಂದು ಕರೆಯಲ್ಪಡುವುದು.

10. ಶ್ಲೋ ॥ ಧಾರಯಿತ್ವಾ ಯಥಾಶಕ್ತಿ ♦ ರೇಚಯೇ ದಿಡಯಾ ಶನೈಃ ।
ಯಯಾ ತ್ಯಜೇತ್ ತಯಾ ಪೂರ್ಯ ♦ ಧಾರಯೇ ದವಿರೋಧತಃ ॥

(ಶ್ಲೋಕ 39.)

ಶಕ್ತಿಗೆ ಅನುಗುಣವಾಗಿ ಗರ್ಭದಲ್ಲಿ ವಾಯುವನ್ನು ನಿಲ್ಲಿಸಿ, **ಪುನಃ** ಅದನ್ನು ನೆಮ್ಮದಿಯಾಗಿ ಬಲಮೂಗಿನಲ್ಲಿ ಬಿಡಬೇಕು. ಯಾವ ಮೂಗಿನಿಂದ ವಾಯುವನ್ನು ಬಿಡುತ್ತೀಯೋ ಆ ಮೂಗಿನಿಂದಲೇ ಪುನಃ ವಾಯುವನ್ನು ಮೇಲಕ್ಕೆ ಸೆಳೆದು ಪುನಃ ಎಡದ ಮೂಗಿನಿಂದ ಮೆಲ್ಲಗೆ ಅದನ್ನು ಹೊರಕ್ಕೆ ಬಿಡಬೇಕು.

11. ಶ್ಲೋ ॥ ಏವಂ ಮಾಸತ್ರಯಾಭ್ಯಾಸ ♦ ನಾಡೀಶುದ್ಧಿ ಸ್ತತೋ ಭವೇತ್ ।
ಯದಾ ತು ನಾಡೀಶುದ್ಧಿ ಸ್ಸ್ಯಾತ್ ♦ ತದಾ ಚಿಹ್ನಾನಿ ಬಾಹ್ಯತಃ ॥

(ಶ್ಲೋಕ 44.)

ಶ್ಲೋ || ಜಾಯಂತೇ ಯೋಗಿನೋ ದೇಹೇ ♦ ತಾನಿ ವಕ್ಷ್ಯಾಮ್ಯಶೇಷತಃ ||

ಮೇಲೆ ಹೇಳಿದ ರೀತಿಯಾಗಿ ಮೂರು ತಿಂಗಳಕಾಲ ಸಾಧನೆಮಾಡಿದ್ದೇ ಆದರೆ, ಶರೀರದಲ್ಲಿರುವ ನಾಡಿಗಳೆಲ್ಲವೂ ಶುದ್ಧಿಯಾಗುತ್ತವೆ.

ಹೀಗೆ ನಾಡಿಗಳು ಶುದ್ಧಿಯಾದಮೇಲೆ ಯೋಗಾಭ್ಯಾಸಿಯ ಶರೀರ ಬಾಹ್ಯ ಚಿಹ್ನೆಗಳು ಬದಲಾಯಿಸುತ್ತವೆ. ಆ ಬದಲಾವಣೆಗಳು ಈ ಕೆಳಗೆ ಹೇಳಲ್ಪಡುತ್ತವೆ.

12. ಶ್ಲೋ || ಶರೀರಲಘುತಾ ದೀಪ್ತಿಃ ♦ ಜಾಠರಾಗ್ನಿ ವಿವರ್ಧನಂ ||45||

ಶ್ಲೋ || ಕೃಶತ್ವಂ ಚ ಶರೀರಸ್ಯ ♦ ತದಾ ಜಾಯೇತ ನಿಶ್ಚಿತಂ |
ಯೋಗವಿಘ್ನಕರಾಹಾರಂ ♦ ವರ್ಜಯೇ ದ್ಯೋಗವಿತ್ತಮಃ ||46||

ದೇಹವು ಹಗುರವಾಗಿಯೂ ಪ್ರಕಾಶವಾಗಿಯೂ ಇರುತ್ತದೆ. ಜಠರಾಗ್ನಿಯು ವೃದ್ಧಿಯಾಗುತ್ತದೆ. ದೇಹವು ಶೋಷಿಸುತ್ತ (ಕೃಶವಾಗುತ್ತ) ಬರುತ್ತದೆ. ಈ ಲಕ್ಷಣಗಳು ಸ್ಪಷ್ಟವಾಗಿ ಕಾಣ್ಬರುತ್ತವೆ. ಯೋಗಕ್ಕೆ ವಿಘ್ನವನ್ನುಂಟುಮಾಡುವ ಆಹಾರಗಳನ್ನು ಯೋಗಾಭ್ಯಾಸದ ಕ್ರಮವನ್ನು ತಿಳಿದವನು ಬಿಟ್ಟುಬಿಡಬೇಕು.

13. ಶ್ಲೋ || ಅಭ್ಯಾಸಕಾಲೇ ಪ್ರಥಮಂ ♦ ಶಸ್ತಂ ಕ್ಷೀರಾಜ್ಯಭೋಜನಂ ||48||

ಯೋಗಾಭ್ಯಾಸದಕಾಲದಲ್ಲಿ ಹಾಲು ತುಪ್ಪ ಇವುಗಳೊಡನೆ ಭುಜಿಸಬೇಕು.

14. ಶ್ಲೋ || ಗೋಧೂಮ ಮುದ್ಗ ಶಾಲ್ಯನ್ನಂ ♦ ಯೋಗವೃದ್ಧಿಕರಂ ವಿದುಃ |

ಗೋಧಿ, ಹೆಸರು, ಶಾಲ್ಯನ್ನವು, ತುಪ್ಪ ಇವುಗಳನ್ನು ಯೋಗಾಭ್ಯಾಸಿಯಾದವನು ಭುಜಿಸಬೇಕು. ಇವುಗಳನ್ನು ಸೇವಿಸಿದ್ದೇ ಆದರೆ, ಯೋಗಸಿದ್ಧಿಯು ಸುಲಭವಾಗಿ ದೊರಕುತ್ತದೆಂದು ತಿಳಿಯಬೇಕು.

15. ಶ್ಲೋ || ತತಃ ಪರಂ ಯಥೇಷ್ಟಂ ತು ♦ ಶಕ್ತಃ ಸ್ಯಾ ದ್ವಾಯುಧಾರಣೇ ||49||

ಶ್ಲೋ || ಯಥೇಷ್ಟಧಾರಣಾ ದ್ವಾಯೋಃ ♦ ಸಿದ್ಧ್ಯೇ ತ್ಕೇವಲಕುಂಭಕಃ |
ಕೇವಲೇ ಕುಂಭಕೇ ಸಿದ್ಧೇ ♦ ರೇಚಪೂರವಿವರ್ಜಿತೇ ||50||

ಶ್ಲೋ ॥ ನ ತಸ್ಯ ದುರ್ಲಭಂ ಕಿಂಚಿತ್ ♦ ತ್ರಿಷು ಲೋಕೇಷು ವಿದ್ಯತೇ ॥

ಯೋಗಸಿದ್ಧಿಯನ್ನು ಹೊಂದಿದ ಮೇಲೆ ತನ್ನ ಇಷ್ಟಪ್ರಕಾರವಾಗಿ ವಾಯುಧಾರಣೆಯನ್ನು ಮಾಡುವುದಕ್ಕೆ ವಿಶೇಷ ಶಕ್ತಿಯುಳ್ಳವನಾಗುತ್ತಾನೆ. ಹೀಗೆ ವಾಯುಧಾರಣೆಯನ್ನು ಮಾಡುವುದರಿಂದ ಕೇವಲ ಕುಂಭಕವು ಸಿದ್ಧಿಸುತ್ತದೆ. 'ರೇಚಕ' 'ಪೂರಕ' ಗಳು ಇಲ್ಲದಿರುವ ಕುಂಭಕವು ಸಿದ್ಧಿಸಿದರೆ ಮೂರುಲೋಕಗಳಲ್ಲಿಯೂ ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲವು.

16. ಶ್ಲೋ ॥ ಪ್ರಸ್ವೇದೋ ಜಾಯತೇ ಪೂರ್ವಂ ♦ ಮರ್ದನಂ ತೇನ ಕಾರಯೇತ್॥5॥

ಯೋಗಾಭ್ಯಾಸಕಾಲದಲ್ಲಿ ಮೊದಲು ಬೆವರುಬರುತ್ತದೆ. ಆ ಬೆವರನ್ನು ದೇಹದಲ್ಲಿಯೇ ಇಂಗುವಂತೆ ಮಾಡಿಕೊಳ್ಳಬೇಕು. ಅಂದರೆ ಬೆವರನ್ನು ತೈಲದಂತೆ ಕೈಗಳಿಂದ ಚನ್ನಾಗಿ ಉಜ್ಜಬೇಕು. ಯೋಗಾಭ್ಯಾಸವು ವೃದ್ಧಿಯಾಗುತ್ತ ಆಗುತ್ತ ಆ ಬೆವರು ಬರದೆ ನಿಂತುಹೋಗುತ್ತದೆ.

17. ಶ್ಲೋ ॥ ತತೋಽಪಿ ಧಾರಣಾತ್ ವಾಯೋಃ ♦ ಕ್ರಮೇಣೈವ ಶನೈ ಶ್ಶನೈಃ ।
ಕಂಪೋ ಭವತಿ ದೇಹಸ್ಯ ♦ ಆಸನ ಸ್ತಸ್ಯ ದೇಹಿನಃ ॥52॥

ಹೀಗೆ ಕ್ರಮಕ್ರಮವಾಗಿ ವಾಯುಧಾರಣೆಯನ್ನು ಮಾಡಿದವನಿಗೆ ದೇಹಕ್ಕೆ ಕಂಪವು ಅಂದರೆ ನಡುಗುವ ಸ್ಥಿತಿಯು ಉಂಟಾಗುತ್ತದೆ.

18. ಶ್ಲೋ ॥ ತತೋಽಧಿಕತರಾಭ್ಯಾಸಾ ♦ ದ್ದಾರುಣಾ ತ್ಸ್ವೇದ ಉದ್ಭವೇತ್ ।
ಯದಾ ಚ ದರ್ದುರೋ ಭಾವಃ♦ಉತ್ಪ್ಲುತ್ಯೋತ್ಪ್ಲುತ್ಯ ಗಚ್ಛತಿ॥53॥

ಶ್ಲೋ ॥ ಪದ್ಮಾಸನಸ್ಥಿತೋ ಯೋಗೀ ♦ ತಥಾ ಗಚ್ಛತಿ ಭೂತಲೇ ।
ತತೋಽಧಿಕತರಾಽಭ್ಯಾಸಾತ್ ♦ ಭೂಮಿತ್ಯಾಗ ಶ್ಚ ಜಾಯತೇ ॥54॥

ಪದ್ಮಾಸನಸ್ಥ ಏವಾಽಸೌ ♦ ಭೂಮಿ ಮುತ್ಸೃಜ್ಯ ವರ್ತತೇ ।

ಹೀಗೆ ಕುಂಭಕವನ್ನು ಮಾಡುವ ಸಾಮರ್ಥ್ಯವು ವೃದ್ಧಿಯಾಗುತ್ತಿದ್ದಷ್ಟೂ ಶರೀರದಲ್ಲಿ ಬಿಸಿಯಾದ ಬೆವರು ಉತ್ಪತ್ತಿಯಾಗುತ್ತಿರುತ್ತದೆ. ಆ ಮೇಲೆ ಯೋಗಿಗೆ ಕಪ್ಪೆಯಂತೆ ಕುಪ್ಪಳಿಸಿಕೊಂಡು ಹಾರುತ್ತಿರುವ ಒಂದಾ

ನೊಂದು ಶಕ್ತಿಯುಂಟಾಗುತ್ತದೆ. ಇಂತಹ ಶಕ್ತಿಯು 'ದರ್ದುರಿಕಶಕ್ತಿ' ಯೆಂದೆನಿಸುತ್ತದೆ. ಮತ್ತು ಅಧಿಕಾಭ್ಯಾಸದಿಂದ ಯೋಗಿಗೆ ಭೂಮಿಯನ್ನು ಬಿಟ್ಟಿರುವ ಶಕ್ತಿಯುಂಟಾಗುತ್ತದೆ. ಇನ್ನೂ ವಿಶೇಷವಾಗಿ ಯೋಗಾಭ್ಯಾಸವನ್ನು ಮಾಡಿದ್ದೇ ಆದರೆ, ಭೂಮಿಯನ್ನು ಬಿಟ್ಟು ಮೇಲಕ್ಕೇರುವ ಶಕ್ತಿಯುಂಟಾಗುತ್ತದೆ.

19. ಶ್ಲೋ ॥ ಅತಿಮಾನುಷಚೇಷ್ಟಾದಿ ♦ ತದಾ ಸಾಮರ್ಥ್ಯ ಮುದ್ಭವೇತ್ ॥55॥

ಶ್ಲೋ ॥ ನ ದರ್ಶಯೇ ಚ್ಚ ಸಾಮರ್ಥ್ಯಂ ♦ ದರ್ಶನಂ ವೀರ್ಯವತ್ತರಂ ।
ಸ್ವಲ್ಪಂ ವಾ ಬಹುಧಾ ದುಃಖಂ ♦ ಯೋಗೀ ನ ವ್ಯಥತೇ ತದಾ ॥56॥

ಈ ಯೋಗಾಭ್ಯಾಸದಿಂದ ಅಸಾಧ್ಯವಾದ ಕೆಲಸವನ್ನು ಮಾಡುವುದಕ್ಕೆ ಶಕ್ತಿಯುಂಟಾಗುತ್ತದೆ. ಈ ಶಕ್ತಿಯನ್ನು ಗೂಢವಾಗಿಟ್ಟಿರಬೇಕು. ಇಷ್ಟು ಸಾಮರ್ಥ್ಯವನ್ನುಳ್ಳ ಯೋಗಿಯು ಬಹು ತೇಜಸ್ವಿಯಾಗಿಯೂ ಮಹಾ ಬಲಾಢ್ಯನಾಗಿಯೂ ಕಾಣಬರುತ್ತಾನೆ. ಈ ಯೋಗಿಗೆ ದುಃಖವು ಸ್ವಲ್ಪವಾಗಿದ್ದರೂ ಅಥವಾ ಹೆಚ್ಚಾಗುಂಟಾದರೂ ಅವನು ವ್ಯಸನಪಡೆನು.

20. ಶ್ಲೋ ॥ ಅಲ್ಪಮೂತ್ರಪುರೀಷ ಶ್ಚ ♦ ಸ್ವಲ್ಪನಿದ್ರ ಶ್ಚ ಜಾಯತೇ ।
ಕೀಲವೋ ದೂಷಿಕಾ ಲಾಲಾ ♦ ಸ್ವೇದದುರ್ಗಂಧತಾ ऽऽನನೇ ॥ 57 ॥

ಶ್ಲೋ ॥ ಏತಾನಿ ಸರ್ವಥಾ ತಸ್ಯ ♦ ನ ಜಾಯಂತೇ ತತಃ ಪರಂ ॥

ಇಂತಹ ಯೋಗಪುಂಗವನಿಗೆ ಮಲಮೂತ್ರಾದಿಗಳೂ, ನಿದ್ರೆಯೂ ಬಹು ಕಡಿಮೆಯಾಗಿರುತ್ತವೆ. ಕೀವು, ಕಣ್ಣಿನ ಪಿಸುರು, ಜೊಲ್ಲು, ಬೆವರು, ಬಾಯಿವಾಸನೆ ಮೊಲಾದುವುಗಳೊಂದೂ ಉಂಟಾಗವು.

21. ತತೋऽಧಿಕತರಾऽಭ್ಯಾಸಾ ♦ ದ್ಬಲ ಮುತ್ಪದ್ಯತೇ ಬಹು ॥ 58 ॥

ಶ್ಲೋ ॥ ಯೇನ ಭೂಚರ ಸಿದ್ಧಿಸ್ಸ್ಯಾತ್ ♦ ಭೂಚರಾಣಾಂ ಜಯೇ ಕ್ಷಮಃ ।
ವ್ಯಾಘ್ರೋ ವಾ ಶರಭೋ ವಾऽಪಿ ♦ ಗಜೋ ಗವಯ ಏವ ವಾ ॥ 59 ॥

ಸಿಹ್ಮೋ ವಾ ಯೋಗಿನಾ ತೇನ ♦ ಮ್ರಿಯಂತೇ ಹಸ್ತತಾಡಿತಾಃ ॥

ಮತ್ತು ಯೋಗಾಭ್ಯಾಸದಿಂದ ಮನುಷ್ಯನು ಹೆಚ್ಚು ಬಲಾಢ್ಯನಾಗುತ್ತಾನೆ. ಅಂತಹ ಬಲಾಢ್ಯನಿಗೆ 'ಭೂಚರಸಿದ್ಧಿ'ಯುಂಟಾಗುತ್ತದೆ. ಅಂದರೆ ಭೂಮಿಯ ಮೇಲಿರುವ ಸಕಲ ಜಂತುಗಳನ್ನು ಜಯಿಸುವ ಪರಾಕ್ರಮವುಂಟಾಗುತ್ತದೆ. ಹುಲಿ, ಆನೆ, ಸಿಹ್ಮ, ಗವಯ, ಶರಭ ಮೊದಲಾದ ಮೃಗಗಳನ್ನು ತನ್ನ ಒಂದು ಗುದ್ದಿನಿಂದಲೇ ಕೊಲ್ಲುವ ಶಕ್ತಿಯುಂಟಾಗುವುದು.

22. ಶ್ಲೋ ॥ ಕಂದರ್ಪಸ್ಯ ಯಥಾ ರೂಪಂ ♦ ತಥಾ ಸ್ಯಾದಪಿ ಯೋಗಿನಃ ।
ತದ್ರೂಪವಶಗಾ ನಾರ್ಯಃ ♦ ಕಾಂಕ್ಷಂತೇ ತಸ್ಯ ಸಂಗಮಂ ॥ 60 ॥

ಶ್ಲೋ ॥ ಯದಿ ಸಂಗಂ ಕರೋತ್ಯೇಷ ♦ ತಸ್ಯ ಬಿಂದುಕ್ಷಯೋ ಭವೇತ್ ॥ 61 ॥

ಶ್ಲೋ ॥ ವರ್ಜಯಿತ್ವಾ ಸ್ತ್ರಿಯಾಂ ಸಂಗಂ ♦ ಕುರ್ಯಾದಭ್ಯಾಸ ಮಾದರಾತ್ ।
ಯೋಗಿನೋಽಂಗೇ ಸುಗಂಧಶ್ಚ ♦ ಜಾಯತೇ ಬಿಂದುಧಾರಣಾತ್॥62॥

ಇಂತಹ ಯೋಗಾಭ್ಯಾಸವನ್ನುಳ್ಳವನು ಮನ್ಮಥನಂತೆ ವಿಶೇಷ ಸೌಂದರ್ಯವುಳ್ಳವನಾಗಿರುತ್ತಾನೆ. ಸ್ತ್ರೀಯರು ಈತನ ಸೌಂದರ್ಯಕ್ಕೆ ಮೋಹಗೊಳ್ಳುವರು. ಆಗ ಈತನು ಆ ಸ್ತ್ರೀಯರ ಮೋಹಕ್ಕೆ ಒಳಗಾಗದೆ ಜಿತೇಂದ್ರಿಯನಾಗಿರಬೇಕು. ಇದೂ ಅಲ್ಲದೆ ಆತನು ಬಹಳ ಶ್ರದ್ಧೆಯಿಂದ ಯೋಗಾಭ್ಯಾಸವನ್ನು ಮಾಡುತ್ತ ಬರಬೇಕು. ಈ ವಿಧವಾಗಿ ಅಭ್ಯಾಸ ಮಾಡುತ್ತ ಇಂದ್ರಿಯಸ್ಖಲನವಾಗುವುದಕ್ಕೆ ಅವಕಾಶಕೊಡದ ಯೋಗಿಯ ಶರೀರವು ಬಹಳ ಪರಿಮಳವುಳ್ಳದ್ದಾಗಿರುತ್ತದೆ.

23. ಶ್ಲೋ ॥ ತತೋ ರಹ ಸ್ಯುಪಾವಿಷ್ಟಃ ♦ ಪ್ರಣವಂ ಪ್ಲುತಮಾತ್ರಯಾ ।
ಜಪೇ ತ್ಪೂರ್ವಾರ್ಜಿತಾನಾಂ ತು ♦ ಪಾಪಾನಾಂ ನಾಶಹೇತವೇ ॥ 63 ॥

ಇದಾದನಂತರ ರಹಸ್ಯವಾಗಿ ಅಂದರೆ ಒಂಟಿಯಾಗಿ ಕುಳಿತುಕೊಂಡು ಪ್ಲುತದಿಂದ ಕೂಡಿದ 'ಓಂ' ಎಂಬ ಪ್ರಣವವನ್ನು ಜಪಿಸುತ್ತಿದ್ದು ಯೋಗಾಭ್ಯಾಸವನ್ನು ಮುಂದುವರಿಸಿದ್ದೇ ಆದರೆ, ತಾನು ಪೂರ್ವಜನ್ಮದಲ್ಲಿ ಗಳಿಸಿದಂಥ ಪಾಪಗಳೆಲ್ಲವೂ ನಾಶವನ್ನು ಹೊಂದುತ್ತವೆ.

24. ಶ್ಲೋ ॥ ಸರ್ವವಿಘ್ನಹರೋ ಮಂತ್ರಃ ♦ ಪ್ರಣವ ಸ್ಸರ್ವದೋಷಹಾ ।
ಏವ ಮಭ್ಯಾಸಯೋಗೇನ ♦ ಸಿದ್ಧಿ ರಾರಂಭಸಂಭವಾ ॥ 64 ॥

ಆ 'ಓಂ' ಕಾರವೆಂಬ ಪ್ರಣವವು ಸಮಸ್ತ ವಿಘ್ನಗಳನ್ನೂ ಹೋಗಲಾಡಿಸುವಂಥದು ಮತ್ತು ಎಲ್ಲಾ ದೋಷಗಳನ್ನು ಕಳೆಯುವ ಶಕ್ತಿಯುಳ್ಳದು. ಇಂತಹ ಮಂತ್ರವನ್ನು ಎಡೆಬಿಡದೆ ಜಪಿಸುತ್ತ ಬಂದರೆ ಬಹು ಜಾಗ್ರತೆಯಾಗಿ ಯೋಗಸಿದ್ಧಿಯಾಗುತ್ತದೆ.

25. ಶ್ಲೋ ॥ ಏಕವಾರಂ ಪ್ರತಿದಿನಂ ♦ ಕುರ್ಯಾತ್ಕೇವಲಕುಂಭಕಂ ॥

ಯೋಗಾಭ್ಯಾಸವನ್ನು ದಿನಕ್ಕೆ ನಾಲ್ಕುವೇಳೆ ಮಾಡಬೇಕು ಎಂದು ಹಿಂದೆ ಹೇಳಿದೆ, ಆದರೂ ಹೊಸದಾಗಿ ಯೋಗಾಭ್ಯಾಸವನ್ನು ಮಾಡುವುದಕ್ಕೆ ಯತ್ನಿಸುವವರು ದಿನವೊಂದಕ್ಕೆ ಬೆಳಿಗ್ಗೆ ಒಂದುವೇಳೆ ಮತ್ತು ಸಾಯಂಕಾಲ ಒಂದುವೇಳೆ ಹೀಗೆ ಎರಡುಸಾರಿ ಅಭ್ಯಾಸಮಾಡಬೇಕು. ಅಥವಾ ಪ್ರತಿದಿನವೂ 'ಕುಂಭಕ' ವನ್ನು ಒಂದು ಸಾರಿಯಾದರೂ ಅಭ್ಯಾಸ ಮಾಡಲೇ ಬೇಕು.

26. ಶ್ಲೋ ॥ * * * * * * * * *
ಇಂದ್ರಿಯಾಣೀಂದ್ರಿಯಾರ್ಥೇಭ್ಯೋ♦ಯತ್ಪ್ರತ್ಯಾಹರಣಂ ಸ್ಫುಟಂ ॥68॥

ಶ್ಲೋ ॥ * * * * * * * * *
ಯೋಗೀ ಕುಂಭಕ ಮಾಸ್ಥಾಯ ♦ ಪ್ರತ್ಯಾಹಾರ ಸ್ಸ ಉಚ್ಯತೇ ॥ 69 ॥

ಕೇವಲ 'ಕುಂಭಕ'ವನ್ನೇ ಸಾಧನೆಯನ್ನು ಮಾಡುವ ಯೋಗಿಯು ತನ್ನ ಇಂದ್ರಿಯಗಳನ್ನು ವಿಷಯಗಳಲ್ಲಿ ಹೋಗಲೀಯದೆ ಹಿಂದಿರುಗಿಸುತ್ತಾನೆ. ಈರೀತಿಯಾಗಿ ಇಂದ್ರಿಯಗಳನ್ನು ತಿರುಗಿಸಿಕೊಳ್ಳುವುದಕ್ಕೆ 'ಪ್ರತ್ಯಾಹಾರ' ಎಂದು ಹೆಸರು.

27. ಶ್ಲೋ ॥ ಯಾಮಮಾತ್ರಂ ಪ್ರತಿದಿನಂ ♦ ಯೋಗೀ ಯತ್ನಾದತಂದ್ರಿತಃ ।
ಯಥಾ ವಾ ಚಿತ್ತಸಾಮರ್ಥ್ಯಂ♦ಜಾಯತೇ ಯೋಗಿನೋ ಧ್ರುವಂ ॥72॥

ಯೋಗಿಯಾದವನು ಪ್ರತಿದಿನವೂ ಒಂದು ಯಾಮ (ಝಾವ) ಕಾಲವಾದರೂ ಬಿಡದೆ ಯೋಗಾಭ್ಯಾಸವನ್ನು ಮಾಡುತ್ತಿದ್ದುದೇ ಆದರೆ,

ಅಂತಹ ಯೋಗಿಗೆ ನಿಜವಾಗಿಯೂ ಚಿತ್ತಸಾಮರ್ಥ್ಯವು ಅಂದರೆ ಬುದ್ಧಿ ಬಲವು ಹೆಚ್ಚುತ್ತದೆ. ಆ ಚಿತ್ತಸಾಮರ್ಥ್ಯಗಳಾವುವುವೆಂದರೆ,

28. ಶ್ಲೋ ॥ ದೂರಶ್ರುತಿ ರ್ದೂರದೃಷ್ಟಿಃ ♦ ಕ್ಷಣಾ ದ್ದೂರಗತ ಸ್ತಥಾ ॥ 73 ॥

ಶ್ಲೋ ॥ ವಾಕ್ಸಿದ್ಧಿಃ ಕಾಮರೂಪತ್ವ ♦ ಮದೃಶ್ಯಕರಣೀ ತಥಾ ।
ಮಲಮೂತ್ರಪ್ರಲೇಪೇನ ♦ ಲೋಹಾದೇಃ ಸ್ವರ್ಣತಾ ಭವೇತ್ ॥ 74 ॥

ಶ್ಲೋ ॥ ಖೇ ಗತಿ ಸ್ತಸ್ಯ ಜಾಯೇತ ♦ ಸಂತತಾಽಭ್ಯಾಸಯೋಗತಃ ।

ಸರ್ವದಾ ಯೋಗಾಭ್ಯಾಸವನ್ನು ಮಾಡುವುದರಿಂದ 'ದೂರಶ್ರವಣ,' ಅಂದರೆ ಬಹುದೂರದಲ್ಲಿ ಮಾತನಾಡುವವರ ಶಬ್ದವನ್ನು ತಿಳಿದುಕೊಳ್ಳುವುದು, 'ದೂರದೃಷ್ಟಿ' ಅಂದರೆ ದೂರದಲ್ಲಿರುವ ಸಣ್ಣ ವಸ್ತುವನ್ನಾದರೂ ನೋಡುವ ಶಕ್ತಿ, ಒಂದು ಕ್ಷಣಕಾಲದಲ್ಲಿ ಎಷ್ಟು ದೂರವಾದರೂ ಹೋಗುವ ಶಕ್ತಿ, 'ವಾಕ್ಸಿದ್ಧಿ' ಅಂದರೆ ಆಡಿದ ಮಾತು ತಪ್ಪದೆ ನಡೆಯುವ ಪ್ರಭಾವ, 'ಕಾಮರೂಪತ್ವ' ಅಂದರೆ ತನಗೆ ಬೇಕಾದ ಆಕಾರವನ್ನು ಪಡೆಯುವ ಶಕ್ತಿ, 'ಅದೃಶ್ಯಕರಣಿ' ಅಂದರೆ ಎದುರಿಗಿರುವ ಪದಾರ್ಥವನ್ನು ಇತರರ ಕಣ್ಣಿಗೆ ಕಾಣದಂತೆ ಮಾಡುವ ಶಕ್ತಿ, ತನ್ನ ಮಲಮೂತ್ರಗಳನ್ನು ಲೋಹಾದಿಗಳಿಗೆ ಲೇಪನಮಾಡಿದ್ದೇ ಆದರೆ ಅದು ಭಂಗಾರವಾಗುವುದು ಮತ್ತು ಆಕಾಶದಲ್ಲಿ ಗಮನ, ಈ ಸಾಮರ್ಥ್ಯಗಳೆಲ್ಲವೂ ಯೋಗಾಭ್ಯಾಸದಿಂದುಂಟಾಗುತ್ತವೆ.

29. ಶ್ಲೋ ॥ ಸದಾ ಬುದ್ಧಿಮತಾ ಭಾವ್ಯಂ ♦ ಯೋಗಿನಾ ಯೋಗಸಿದ್ಧಯೇ ।
ಏತೇ ವಿಘ್ನಾಃ ಮಹಾಸಿದ್ಧೇಃ ♦ ನ ರಮೇತ್ ತೇಷು ಬುದ್ಧಿಮಾನ್ ॥76॥

ಸದಾ ನಿಶ್ಚಲಬುದ್ಧಿಯಿಂದ ಯೋಗಾಭ್ಯಾಸವನ್ನು ಮಾಡುವ ಬುದ್ಧಿವಂತನು, ಮೇಲೆ ಹೇಳಿದ ಚಿತ್ತಸಾಮರ್ಥ್ಯಗಳು ಮಹಾ ಯೋಗಸಿದ್ಧಿಗೆ ವಿಘ್ನಗಳೆಂದು ಭಾವಿಸಿ, ಅವುಗಳಲ್ಲಿ ಅವನು ಎಂದಿಗೂ ಆಸಕ್ತಿಯನ್ನಿಡಬಾರದು.

30. ಶ್ಲೋ ॥ ಶಿಷ್ಯಾ ಶ್ಚ ಸ್ವಸ್ವಕಾರ್ಯೇಷು ♦ ಪ್ರಾರ್ಥಯಂತಿ ನ ಸಂಶಯಃ ।
ತತ್ತತ್ಕರ್ಮ ಕರವ್ಯಗ್ರಃ ♦ ಸ್ವಾಭ್ಯಾಸೋ ವಿಸ್ಮೃತೋ ಭವೇತ್ ॥78॥

ಶಿಷ್ಯರಾಗಿರುವವರು ತಮ್ಮತಮ್ಮ ಕಾರ್ಯಗಳನ್ನು ಸಾಧಿಸುವ ನಿಮಿತ್ತವಾಗಿ ಯೋಗಿಯಾದವನನ್ನು ಪ್ರಾರ್ಥಿಸಿದರೂ, ಅಂತಹ ವಿಷಯಗಳಲ್ಲಿ ಯೋಗಿಯು ಎಂದಿಗೂ ಯತ್ನಿಸಬಾರದು. ಏತಕ್ಕೆಂದರೆ, ಈ ವಿಧವಾದ ಕಾರ್ಯಗಳು ಯೋಗಿಗಳಿಗೆ ವಿಘ್ನವನ್ನುಂಟುಮಾಡುತ್ತವೆ, ಎಂದು ಭಾವಿಸಬೇಕು.

31. ಶ್ಲೋ ॥ ಅವಿಸ್ಮೃತ್ಯ ಗುರೋರ್ವಾಕ್ಯಂ ♦ ಅಭ್ಯಸೇ ತ್ತದಹರ್ನಿಶಂ ।
ತತಃ ಪರಿಚಯಾವಸ್ಥಾ ♦ ಜಾಯತೇಽಭ್ಯಾಸಯೋಗತಃ ॥ 79 ॥

ಗುರುವಾಕ್ಯವನ್ನು ನೆನಪಿನಲ್ಲಿಟ್ಟು• ಹಗಲಿರುಳೂ ಅದನ್ನು ಅಭ್ಯಾಸ ಮಾಡುತ್ತ ಬರಬೇಕು. ಹೀಗೆ ಯೋಗಾಭ್ಯಾಸವನ್ನು ಚನ್ನಾಗಿ ಮಾಡಿದ ನಂತರ ಮೇಲೆ ಹೇಳಿದವುಗಳೆಲ್ಲವೂ ಅವರ ಅನುಭವಕ್ಕೆ ಬರುತ್ತವೆ.

32. ಶ್ಲೋ ॥ ವಾಯುಃ ಪರಿಚಿತೋ ಯತ್ನಾತ್ ♦ ಅಗ್ನಿನಾ ಸಹ ಕುಂಡಲೀಂ ॥81॥

ಶ್ಲೋ ॥ ಭಾವಯಿತ್ವಾ ಸುಷುಮ್ನಾಯಾಂ ♦ ಪ್ರವಿಶೇ ದನಿರೋಧತಃ ।
ವಾಯುನಾ ಸಹ ಚಿತ್ತಂ ಚ ♦ ಪ್ರವಿಶೇ ಚ್ಚ ಮಹಾಪಥಂ ॥ 82 ॥

ಕ್ರಮಕ್ರಮವಾಗಿ ಪ್ರಯತ್ನಪಟ್ಟು ಶ್ವಾಸವನ್ನು 'ಕುಂಭಕ' ಮಾಡುವುದನ್ನು ತಿಳಿದುಕೊಂಡಮೇಲೆ, ಆ ಶ್ವಾಸದಿಂದ ನಾಭಿಯಲ್ಲಿರುವ ಕುಂಡಲಿಶಕ್ತಿಯನ್ನು ಎಬ್ಬಿಸಬೇಕು. ಆಗ ಆ ಶ್ವಾಸವು ಬೆನ್ನೆಲುಬಿನ ಮಧ್ಯದಲ್ಲಿರುವ ಬೆಳಿಯ ನರದಿಂದ ಸುಷುಮ್ನಾ ಎಂಬ ನಾಡಿಯೊಳಕ್ಕೆ ವಿಚಿತ್ರವಾಗಿ ಪ್ರವೇಶಿಸುತ್ತದೆ.

33. ಶ್ಲೋ ॥ ಬ್ರಹ್ಮಣಃ ಪ್ರಳಯೇನಾಽಪಿ ♦ ನ ಸೀ ದತಿಮಹಾಮತಿಃ ।
ಸಮಭ್ಯಸೇತ್ ತಥಾ ಧ್ಯಾನಂ ♦ ಘಟಿಕಾ ಷಷ್ಟಿಮೇವ ಚ ॥ 104 ॥

ಮೇಲೆ ಹೇಳಿದ ರೀತಿಯಲ್ಲಿ ಯೋಗಾಭ್ಯಾಸವನ್ನು ಮಾಡಿದ ಯೋಗಿಯು, ಬ್ರಹ್ಮಪ್ರಳಯದಲ್ಲಿಯೂ ಕೂಡ ನಾಶಹೊಂದನು. ಆದುದರಿಂದ ಹಗಲಿರುಳೂ ಅಂದರೆ ಅರವತ್ತು ಘಳಿಗೆಯೂ ನಿಶ್ಚಲಮನಸ್ಕನಾಗಿ ಯೋಗಾಭ್ಯಾಸವನ್ನು ಮಾಡುತ್ತಿರಬೇಕು. ಈ ಯೋಗಾಭ್ಯಾಸವು ಹಣ್ಣಾದುದೇ ಆದರೆ, ಪುನಃ ಅವರ ಮೂಗಿನ ಹೊಳ್ಳೆಗಳಲ್ಲಿ ಶ್ವಾಸವು ನಡೆ

ಯದೆ ನಿಂತುಹೋಗುವುದು. ಆದುದರಿಂದ ಇವರಿಗೆ ಮರಣವೆಂಬುದೇ ಇಲ್ಲವು.

34. ಶ್ಲೋ ॥ ವಾಯುಂ ನಿರುಧ್ಯ ಮೇಧಾವೀ ♦ ಜೀವನ್ಮುಕ್ತೋ ಭವತ್ಯಯಂ ।
ಸಮಾಧಿ ಸ್ಸಮತಾಽವಸ್ಥಾ ♦ ಜೀವಾತ್ಮಪರಮಾತ್ಮನೋಃ ॥ 106 ॥

ವಾಯುವನ್ನು ಸ್ತಂಭಿಸಿದ (ತಡೆದ) ಚಿತ್ತಶುದ್ಧಿಯುಳ್ಳ ಯೋಗಿಯು ಜೀವನ್ಮುಕ್ತನಾಗುತ್ತಾನೆ. ಜೀವಾತ್ಮ ಪರಮಾತ್ಮರ 'ಸಮತಾವಸ್ಥೆ'ಯೇ ಅಂದರೆ ಐಕ್ಯವೇ ಸಮಾಧಿಯೆಂದೆನಿಸುತ್ತದೆ.

35. ಶ್ಲೋ ॥ ಯದಿ ಸ್ವದೇಹ ಮುತ್ಸ್ರಷ್ಟುಂ♦ಇಚ್ಛಾ ಚೇ ದುತ್ಸೃಜೇತ್ ಸ್ವಯಂ ।
ಪರಬ್ರಹ್ಮಣಿ ಲೀಯೇತ ♦ ನ ತಸ್ಯೋತ್ಕ್ರಾಂತಿ ರಿಷ್ಯತೇ ॥ 107 ॥

ಯೋಗಿಯಾದವನು ತನಗೆ ಇಷ್ಟಬಂದ ಕಾಲದಲ್ಲಿ ತನ್ನ ಕಳೇಬರವನ್ನು ಬಿಡಬಲ್ಲನು. ಅಂದರೆ ಆತನಿಗೆ ಮೃತ್ಯುವು ವಶವಾಗುವುದೇ ಹೊರತು, ಆತನು ಮೃತ್ಯುವಿಗೆ ವಶವಾಗುವುದಿಲ್ಲ. ಪರಬ್ರಹ್ಮನಲ್ಲಿ ಐಕ್ಯನಾದ ಮೇಲೆ, ಆ ಯೋಗಿಯು, ಪುನಃ ಅದನ್ನು ಬಿಟ್ಟು ಈಚೆಗೆ ಬರನು, ಎಂದು ತಿಳಿಯಬೇಕು.

36. ಶ್ಲೋ ॥ ಅಥ ನೋ ಚೇತ್ ಸಮುತ್ಸ್ರಷ್ಟುಂ ♦ ಸ್ವಶರೀರಂ ಪ್ರಿಯಂ ಯದಿ ।
ಸರ್ವಲೋಕೇಷು ವಿಹರೇ ♦ ಅಣಿಮಾದಿ ಗುಣಾನ್ವಿತಃ ॥ 108 ॥

ಶ್ಲೋ ॥ ಕದಾಚಿ ತ್ಸ್ವೇಚ್ಛಯಾ ದೇವೋ ♦ ಭೂತ್ವಾ ಸ್ವರ್ಗೇ ಮಹೀಯತೇ ।
ಮನುಷ್ಯೋ ವಾಽಪಿ ಯಕ್ಷೋ ವಾ ♦ಸ್ವೇಚ್ಛಯಾಽಪಿ ಕ್ಷಣಾ ದ್ಭವೇತ್॥109॥

ಇಂತಹ ಯೋಗಿಯು ಅಣಿಮಾದಿ ಅಷ್ಟೈಶ್ವರ್ಯಗಳಿಂದ ಕೂಡಿರುವುದರಿಂದ ಆತನು ಸರ್ವಲೋಕಗಳಲ್ಲಿಯೂ ವಿಹರಿಸಲು ಶಕ್ತನು. ಒಂದು ವೇಳೆ ತಾನಾಗಿಯೇ ಸ್ವರ್ಗವನ್ನು ಪ್ರವೇಶಿಸಿ ದೇವತೆಗಳಿಂದಲೂ ಪೂಜೆಯನ್ನು ಹೊಂದಬಹುದು. ಮನುಷ್ಯಮಾತ್ರನಾದರೂ ತನಗಿಷ್ಟಬಂದದ್ದೇ ಆದರೆ ಕ್ಷಣಮಾತ್ರದಲ್ಲಿ ಯಕ್ಷನಾಗಬಹುದು. ತನ್ನ ದೇಹವನ್ನು ಬಿಡುವುದಕ್ಕೆ ಇಚ್ಛೆಯಿಲ್ಲದ ಯೋಗಿಯೂ ಈ ಮೇಲಿನ ಅದ್ಭುತಕಾರ್ಯಗಳನ್ನು ಮಾಡಿ ತೋರಿಸಬಲ್ಲನು.

37. ಶ್ಲೋ॥ ಸಿಂಹೋ ವ್ಯಾಘ್ರೋ ಗಜೋ ವಾಽಶ್ವಃ ♦ ಸ್ವೇಚ್ಛಯಾ ಬಹುತಾ ಮಿಯಾತ್।

ಶ್ಲೋ॥ ಯಥೇಷ್ಟ ಮೇವ ವರ್ತೇತ ♦ ಯದ್ವಾ ಯೋಗೀ ಮಹೇಶ್ವರಃ।
ಅಭ್ಯಾಸಭೇದತೋ ಭೇದಃ ♦ ಫಲಂ ತು ಸಮ ಮೇವ ಹಿ ॥110-111॥

ಹುಲಿ, ಸಿಹ್ಮ, ಆನೆ, ಕುದುರೆ ಮೊದಲಾದ ಪ್ರಾಣಿಗಳಾದರೂ ಯೋಗಿಯ ಇಷ್ಟಾನುಸಾರವಾಗಿ ನಡೆದುಕೊಳ್ಳುತ್ತವೆ; ಮತ್ತು ತನ್ನಿಷ್ಟ ಬಂದಂತೆ ಪ್ರವರ್ತಿಸಬಹುದು. ಆತನು ಪ್ರಯತ್ನಪಟ್ಟರೆ ಸಾಕ್ಷಾತ್ ಮಹೇಶ್ವರನೇ ತಾನಾಗುತ್ತಾನೆ. ಯೋಗಾಭ್ಯಾಸವನ್ನು ಮಾಡುವ ಪದ್ಧತಿಗಳಲ್ಲಿ ಭೇದಗಳಿದ್ದರೂ ಫಲವನ್ನು ಹೊಂದುವುದರಲ್ಲಿ ಭೇದವಿರದು.

38. ಶ್ಲೋ॥ ಸಿಶ್ಚಿತಂ ತ್ವಾತ್ಮಮಾತ್ರೇಣಾ ♦ ಽವಶಿಷ್ಟಂ ಯೋಗಸೇವಯಾ ॥143॥

ಮನುಷ್ಯನು ನಿರ್ಜನವಾದ, ಉಪದ್ರವಗಳಿಲ್ಲದಿರುವ ರಹಸ್ಯಸ್ಥಳದಲ್ಲಿ ಯೋಗಾಭ್ಯಾಸವನ್ನು ಮಾಡುತ್ತಿದ್ದುದೇ ಆದರೆ, ಆತ್ಮಮಾತ್ರನಾಗುತ್ತಾನೆ. ಅಂದರೆ ಮನಸ್ಸಿನ ಕೋರಿಕೆಗಳೆಲ್ಲವೂ ಯೋಗಬಲದಿಂದ ನಾಶಹೊಂದಿ, ತಾನು ಬ್ರಹ್ಮಸ್ವರೂಪನಾಗುತ್ತಾನೆ. ಈ ಮಾತು ನಿಶ್ಚಯವು.

ಹೀಗೆಂದು ಯೋಗತತ್ವೋಪನಿಷತ್ತು ಹೇಳುತ್ತದೆ. ಆದುದರಿಂದ ಇದರಲ್ಲಿ ಹೇಳಿರುವುದನ್ನೇ ಸದ್ಗುರು ವಚನವೆಂದು ಗ್ರಹಿಸಿ ಈ ಕೆಳಗೆ ತಿಳಿಯಹೇಳುವ ಪ್ರಾಣಾಯಾಮ ವಿಷಯಗಳನ್ನು ಚನ್ನಾಗಿ ತಿಳಿದು ಅದರಂತೆ ನಡೆದುದೇ ಆದರೆ, ಓ ಸ್ತ್ರೀ ಪುರುಷರಿರಾ! ನಿಮಗೆ ಯೋಗಸಿದ್ಧಿಯು ತಪ್ಪದೆ ಲಭಿಸುವುದು. ಈ ಯೋಗವಿಷಯದ ರಹಸ್ಯವನ್ನು ತೋರಿಸುವುದಕ್ಕಾಗಿ ಪರಮೇಶ್ವರನು ಎರಡು ಅವತಾರಗಳನ್ನೆತ್ತಿ ತನ್ನ ಕೈಗಳಲ್ಲಿ ಬೇರೆ ಬೇರೆ ಆಯುಧಗಳನ್ನೂ, ಕಂಠದಲ್ಲಿ ಧರಿಸಿರುವ ರುಂಡಮಾಲೆಯನ್ನೂ, ಸರ್ಪಾಭರಣಗಳನ್ನೂ ತೋರಿಸಿ ನಾಟ್ಯಮಾಡಿದ ರಹಸ್ಯವನ್ನು ಈ ಕೆಳಗೆ ಹೇಳಿದ ತರುವಾಯ ಪ್ರಾಣಾಯಾಮವನ್ನು ಅನುಸರಿಸತಕ್ಕ ಪದ್ಧತಿಯನ್ನು ತಿಳಿಸುತ್ತೇವೆ.



# ಪ್ರಾಣಾಯಾಮಾಭ್ಯಾಸದಿಂದ ಉಂಟಾಗುವ ಫಲಗಳು.

---

ಓ ಪುರುಷಶ್ರೇಷ್ಠರೇ! ಪ್ರಾಣಾಯಾಮವನ್ನು ಮಾಡುವ ಪುರುಷರಿಗೆ ಉಂಟಾಗುವ ಫಲಗಳನ್ನು ಈ ಕೆಳಗೆ ವಿವರಿಸಿದೆ.

ಪ್ರಾಣಾಯಾಮಾಭ್ಯಾಸವನ್ನು ಮಾಡುತ್ತ ಬರಬರಲು, ಮಾಡುವವರಿಗೆ ಯಾವದಾದರೂ ಒಂದು ವ್ಯಾಧಿಯು ಶರೀರದಲ್ಲಿ ಅಡಗಿದ್ದರೆ, ಶ್ವಾಸವನ್ನು ಕುಂಭಿಸುವಾಗ ಆ ಕುಂಭಿಸಿದ ಶ್ವಾಸವು ಒಳಭಾಗದಲ್ಲಿ ಅಣಗಿರುವ ರೋಗವನ್ನು ಮೇಲಕ್ಕೆ ವ್ಯಾಪಿಸುವಂತೆ ಮಾಡುತ್ತದೆ. ಹಾಗೆ ಮಾಡಿದ ಮೇಲೆ, ಮತ್ತೆ ಸ್ವಲ್ಪ ಕಾಲದೊಳಗಾಗಿ ಅದನ್ನು ನಿರ್ಮೂಲ ಮಾಡುತ್ತದೆ. ಪ್ರಾಣಾಯಾಮಾಭ್ಯಾಸವನ್ನು ಮಾಡುವವರು, ಎಷ್ಟು ಸ್ಥೂಲಶರೀರಿಗಳಾಗಿದ್ದರೂ ಸರಿಯೆ, ಈ ಅಭ್ಯಾಸವು ಅವರಲ್ಲಿರುವ ಮಾಂಸಖಂಡ ಮೇದಸ್ಸು ಮೊದಲಾದುವುಗಳನ್ನು ತಗ್ಗಿಸಿ ಅವರ ಶರೀರದ ಅಳತೆಯನ್ನು ಕಡಿಮೆಮಾಡುತ್ತದೆ, ಅವರಿಗೆ ಆರೋಗ್ಯ ಭಾಗ್ಯವನ್ನು ಮತ್ತು ಚುರುಕುತನವನ್ನೂ ಹುಟ್ಟಿಸುವುದಲ್ಲದೆ ಅವನ್ನು ಹೆಚ್ಚಿಸುತ್ತದೆ. ಇವರು ಕೋರಿದುದನ್ನು ವಾಯುವೇಗದಿಂದ ನಡೆಸುವಂತೆ ಮಾಡುತ್ತದೆ. ಈ ಪ್ರಾಣಾಯಾಮಾಭ್ಯಾಸವು ಅದನ್ನು ಮಾಡುವವರಿಗೆ ಕುಟುಂಬದ ವಿಷಯದಲ್ಲಿ ಕಷ್ಟನಷ್ಟ ಆಪತ್ತುಗಳುಂಟೆಂದು ತೋರಿಸುತ್ತದೆ. ಇವರಿಗೆ ತಮ್ಮ ಸಂಬಂಧಿಗಳಾದ ತಂದೆತಾಯಿ, ಹೆಂಡತಿಮಕ್ಕಳು, ಅಣ್ಣತಮ್ಮಂದಿರು ಮೊದಲಾದವರಲ್ಲಿ ಇರುವ ಮೋಹವನ್ನು ಕ್ರಮಕ್ರಮವಾಗಿ ತಗ್ಗಿಸಿ ವಿರಕ್ತಿಯನ್ನು ಹೆಚ್ಚಿಸುತ್ತದೆ. ಎಷ್ಟು ಮಹಾತ್ಮರಾದರೂ ಅವರೊಡನೆ ಸ್ವಪ್ರಯೋಜನವನ್ನು ಕುರಿತು ಮಾತನಾಡುವುದಕ್ಕೆ ಇಚ್ಛೈಪಡರು. ಸುಖದುಃಖಗಳನ್ನು ಲೆಕ್ಕಿಸರು. ಮನೋಧೈರ್ಯವನ್ನು ಸದಾ ಹೊಂದಿರುವರು. ಇಂದ್ರಿಯಗಳನ್ನು ನಿಗ್ರಹಿಸಬಲ್ಲ ಧೀರರು. ಇವೆಲ್ಲವೂ ಈ ಗ್ರಂಥಕರ್ತ

ರಿಗೆ ಪ್ರತ್ಯಕ್ಷ ದೃಷ್ಟಾಂತಾನುಭವವಾಗಿರೋಣದರಿಂದ ತಮ್ಮ ಅನುಭವಗಳೆಲ್ಲವನ್ನೂ ತಿಳಿಯಹೇಳಬೇಕಾಗಿ ಬಂದಿತು. ಈ ಪ್ರಾಣಾಯಾಮವು ಜನ್ಮರಾಹಿತ್ಯವನ್ನುಂಟುಮಾಡುವಂಥದು. ಇಂತಹ ರಹಸ್ಯಾರ್ಥವನ್ನು ತಿಳಿದುಕೊಳ್ಳಲಾರದೆ ಜೀವಿಯು ಧನಾರ್ಜನೆಯನ್ನು ಮಾಡುತ್ತ ಬಂದಾಗ ಅಕಸ್ಮಾತ್ತಾಗಿ ಏನೋ ಒಂದು ರೋಗವು ಪ್ರಾಪ್ತವಾಗಿ ಅದರಿಂದ ಅವನು ಮೃತಿಹೊಂದಿ ಬೇರೊಬ್ಬ ತಾಯಿಯ ಗರ್ಭದಲ್ಲಿ ಹುಟ್ಟಿ ಹಿಂದಿನ ಜನ್ಮದಲ್ಲಿ ತಮಗೆ ಸಿಕ್ಕಿದ್ದ ಹೆಂಡತಿಮಕ್ಕಳಿಗೆ ಹೇಗೆ ಹಣವನ್ನು ಗಳಿಸಿಟ್ಟನೋ ಅದರಂತೆಯೇ, ಈ ಜನ್ಮದಲ್ಲಿ ತನಗೆ ದೊರೆತ ಹೆಂಡತಿ ಮಕ್ಕಳಿಗೂ ದ್ರವ್ಯವನ್ನು ಸಂಪಾದಿಸಿಟ್ಟು ಹಿಂದಿನಂತೆಯೇ ಯಾವುದೋ ಒಂದು ಬೇನೆಗೆ ತುತ್ತಾಗಿ ಆ ಶರೀರವನ್ನೂ ಬಿಡುತ್ತಾನೆ. ಆಮೇಲೆ ಹಿಂದೆ ಹೇಳಿದಂತೆಯೇ ಬೇರೊಬ್ಬ ತಾಯಿಯ ಗರ್ಭದಲ್ಲಿ ಹೋಗಿ ಸೇರಿ ಪುನಃ ಜನ್ಮವನ್ನೆತ್ತುತ್ತಾನೆ. ಹೀಗೆಯೇ ಜನಗಳು ತಮ್ಮ ತಮ್ಮ ಪೂರ್ವಕರ್ಮ ಫಲಗಳಿಗೆ ತಕ್ಕಂತೆ ಬೇರೆ ಬೇರೆ ಯೋನಿಯಲ್ಲಿ ಹುಟ್ಟಿ ತಮ್ಮ ಕರ್ಮಗಳಿಗನುಗುಣವಾಗಿ ಬೇರೆ ಬೇರೆ ಲೆಕ್ಕದಿಂದ ಕೆಲವು ವರ್ಷಗಳು ಬದುಕಿ ಆಯಾಯಾ ಜನ್ಮದಲ್ಲಿ ತಮಗೆ ದೊರಕಿದ ತಂದೆತಾಯಿ ಹೆಂಡತಿಮಕ್ಕಳು ಮೊದಲಾದ ಸಂಬಂಧಿಗಳನ್ನು ಪೋಷಿಸುತ್ತ ಬರುತ್ತಿರುವರೇ ಹೊರತು, ತಾವು ಜನ್ಮವೆತ್ತಿದ್ದಕ್ಕೆ ಯಾವ ಈಶ್ವರಧ್ಯಾನವೂ ಇಲ್ಲದೆ ಅಧೋಗತಿಗೆ ಬೀಳುತ್ತಿದ್ದಾರೆ.

ಮನುಷ್ಯರು ತಾವು ಜೀವಿಸಿರುವ ಎಪ್ಪತ್ತು ಎಂಭತ್ತು ವರ್ಷಗಳಲ್ಲಿನ ಈ ಪ್ರಪಂಚದ ಅನುಭವವು ಒಂದು ದೊಡ್ಡ ಕನಸಿನಂತೆ ಇರುತ್ತದೆ. ಆದುದರಿಂದ ಈ ಗ್ರಂಥವನ್ನು ಪಠಿಸುವ ಸ್ತ್ರೀಪುರುಷರೆಲ್ಲರೂ ಇದರಲ್ಲಿ ಉಪದೇಶಿತವಾದ ಅನೇಕ ಗುರೂಪದೇಶ ರಹಸ್ಯಗಳನ್ನೂ ಸ್ವೀಕರಿಸಿ ಪ್ರತಿದಿನವೂ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಸಾಧನವು ಮಾಡುತ್ತ ಬಂದು, ಸತ್ಯದ ಹಾದಿಯಲ್ಲಿಯೇ ನಡೆದು, ದಾನಧರ್ಮಾದಿಗಳನ್ನು ಮಾಡುತ್ತ, ಹಾಸ್ಯಕ್ಕಾದರೂ ಸುಳ್ಳನ್ನು ಹೇಳದೆ, ಅತಿ ಪರಿಶುದ್ಧವಾದ ಮನಸ್ಸುಳ್ಳವರಾಗಿದ್ದದ್ದೇ ಆದರೆ, ನಮ್ಮ ನೆರಳು ನಮ್ಮನ್ನು ಬೆನ್ನಂಟೆ ಬರುವಂತೆ ಈ ಧರ್ಮಗಳೂ ಸತ್ಯವೂ ಮರುಜನ್ಮದಲ್ಲಿ ನಿಮಗೆ ಸಹಾಯವಾಗಿ ಬಂದು ಉತ್ತಮ ಸ್ಥಿತಿಯನ್ನು ನಿಮಗೆ ಕೊಡುತ್ತವೆ. ಅನಂತರ ಈ

ಧರ್ಮಾದಿಗಳೇ ಮೋಕ್ಷವೆಂಬ ಶ್ರೇಷ್ಠಪದವಿಗೆ ನಿಮ್ಮನ್ನು ಕರೆದುಕೊಂಡು ಹೋಗಿ ಬಿಡುತ್ತವೆ. ಈ ವಿಷಯಗಳನ್ನು ಕುರಿತು ಹಿಂದೆ 159ನೇ ಪುಟ ದಲ್ಲಿ "ಜನನೀತಾತರು ತಂಗಿತಮ್ಮಂದಿರು........ಕರ್ಮಾಂತ ಕಾಲಂ ಬರಲ್" ಎಂಬ ಕನ್ನಡ ವೃತ್ತ ಪದ್ಯದಲ್ಲಿ ವಿಸ್ತರಿಸಿದೆ. ಈ ಸಂದರ್ಭದಲ್ಲಿ ಅದರ ತಾತ್ಪರ್ಯವನ್ನು ಪಾಠಕರು ಓದುವುದು ಉತ್ತಮ.

ಮೋಕ್ಷವೆಂಬ ಪದವಿಯನ್ನು ದಯಪಾಲಿಸುವುದಕ್ಕಾಗಿ ಪರಮ ಶಿವನು ಡಮರುಗ, ಮೃಗ (ಜಿಂಕೆ), ಅಗ್ನಿ, ತ್ರಿಶೂಲ ಮೊದಲಾದುವುಗ ಳನ್ನು ಕೈಯಲ್ಲಿ ಹಿಡಿದು ತೋರಿಸಿ, ಯಮಪಟ್ಟಣಕ್ಕೆ ಹೋಗುವವರನ್ನು ಹೋಗಲೀಯದೆ ಅಡ್ಡಗಟ್ಟಿ ಕರೆಯುತ್ತಿರುವ ವಿಷಯವನ್ನು ಈ ಮುಂದಿನ ಪ್ರಕರಣದಲ್ಲಿ ಹೇಳಲಾಗಿದೆ.

---

# ಪರಮಶಿವನು ಮೋಕ್ಷವನ್ನು ಕೊಡಲು ಡಮರುಗ ಶಬ್ದದಿಂದ ಜನಗಳನ್ನು ಕರೆಯುವುದು.

---

ಶ್ಲೋ ॥ ವಂದೇ ಶಂಭು ಮುಮಾಪತಿಂ ಸುರುಗುರುಂ ♦ ವಂದೇ ಜಗತ್ಕಾರಣಂ ।
ವಂದೇ ಪನ್ನಗಭೂಷಣಂ ಮೃಗಧರಂ ♦ ವಂದೇ ಪಶೂನಾಂ ಪತಿಂ ॥
ವಂದೇ ಸೂರ್ಯಶಶಾಂಕವಹ್ನಿನಯನಂ ♦ ವಂದೇ ಮುಕುಂದಪ್ರಿಯಂ ।
ವಂದೇ ಭಕ್ತಜನಾಶ್ರಯಂ ಚ ವರದಂ ♦ ವಂದೇ ಶಿವಂ ಶಂಕರಂ ॥

ಶ್ಲೋ ॥ ಆತ್ಮಾ ತ್ವಂ, ಗಿರಿಜಾ ಮತಿಃ, ಪರಿಜನಾಃ ♦ ಪ್ರಾಣಾಃ, ಶರೀರಂ ಗೃಹಂ, ।
ಪೂಜಾ ತೇ ವಿಷಯೋಪಭೋಗರಚನಾ, ♦ ನಿದ್ರಾ ಸಮಾಧಿ ಸ್ಥಿತಿಃ, ॥
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ, ♦ ಸ್ತೋತ್ರಾಣಿ ಸರ್ವಾ ಗಿರೋ, ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ, ♦ ಶಂಭೋ! ತವಾऽऽರಾಧನಂ ॥

ಪರಮಾನಂದಸ್ವರೂಪಿಯಾದ, ಪಾರ್ವತೀಪತಿಯಾದ, ದೇವತೆಗಳಲ್ಲಿ ಶ್ರೇಷ್ಠನೆನಿಸಿದ, ಪ್ರಪಂಚೋತ್ಪತ್ತಿಗೆ ಕಾರಣನಾದ, ಸರ್ಪಗಳನ್ನೇ ಒಡವೆಗಳನ್ನಾಗಿ ಉಳ್ಳ, ಕೈಲಿ ಜಿಂಕೆಯನ್ನು ಹಿಡಿದಿರುವ, ಜೀವಿಗಳನ್ನು ಸಂಸಾರಬಂಧನದಿಂದ ರಕ್ಷಿಸಿ ಅವರಿಗೆ ಮೋಕ್ಷವನ್ನು ಕೊಡುವ, ಸೂರ್ಯಚಂದ್ರ ಮತ್ತು ಅಗ್ನಿ ಇವುಗಳನ್ನೇ ಮೂರು ಕಣ್ಣುಗಳಾಗಿ ಉಳ್ಳ, ವಿಷ್ಣುವಿಗೆ ಮಹಾ ಪ್ರಿಯನಾದ, ಭಕ್ತಜನರಿಗೆ ಆಶ್ರಯಭೂತನಾದ, ಆಶ್ರಿತರ ಕೋರಿಕೆಗಳನ್ನು ಸಲ್ಲಿಸುವ ಪ್ರಪಂಚಕ್ಕೆಲ್ಲವೂ ಮಂಗಳವನ್ನುಂಟುಮಾಡುವ ಮತ್ತು ನಿತ್ಯಾನಂದ ಸುಖವನ್ನು ದಯಪಾಲಿಸುವ ಶ್ರೀ ಮಹೇಶ್ವರನಿಗೆ, ನಮಸ್ಕಾರವು.

"ಪರಮಾನಂದಸ್ವರೂಪಿಯಾದ ಓ ಶಂಭುವೇ! ನೀನೇ ನನ್ನಲ್ಲಿ ನೆಲೆಸಿರುವ ಆತ್ಮ. ನಿನ್ನ ಪ್ರಿಯ ಪತ್ನಿಯಾದ ಪಾರ್ವತೀದೇವಿಯೇ ನನ್ನ ಬುದ್ಧಿ, ಪ್ರಾಣಾದಿ ಪಂಚವಾಯುಗಳೇ ನನ್ನ ಪರಿಜನರು, ನನ್ನ ಶರೀರವೇ ಗೃಹವು. ನಾನು ಅನುಭವಿಸುವ ವಿಷಯಾದಿಸುಖಗಳೇ ನಾನು ನಿನಗೆ ಮಾಡುವ ಪೂಜೆ. ನನ್ನ ನಿದ್ರೆಯೇ ಸಮಾಧಿಸ್ಥಿತಿಯು, ನಾನು ನನ್ನ ಪಾದಗಳಿಂದ ಸಂಚಾರಮಾಡುವಿಕೆಯೇ ನಿನಗೆ ನಾನು ಮಾಡುವ ಪ್ರದಕ್ಷಿಣೆ, ನಾನಾಡುವ ಮಾತುಗಳೇ ನಿನ್ನ ಸ್ತೋತ್ರಗಳು; ಹೀಗೆ ನಾನು ಯಾವಯಾವ ಕಾರ್ಯಗಳನ್ನು ಮಾಡುವೆನೋ ಅವೆಲ್ಲವೂ ನಿನ್ನ ಆರಾಧನೆಗಳೇ."

ಅಯ್ಯಾ! ಪೂರ್ವ ಪಶ್ಚಿಮ ಉತ್ತರ ದಕ್ಷಿಣಗಳೆಂಬ ನಾಲ್ಕು ದಿಕ್ಕುಗಳಿವೆ. ಅವುಗಳಲ್ಲಿ ದಕ್ಷಿಣದಿಕ್ಕಿನಲ್ಲಿ ಯಮನ ಪಟ್ಟಣವಿದೆ. ಜನಗಳು ಆ ಯಮಪಟ್ಟಣದ ಕಡೆಗೆ ಹೋಗದಂತೆ ಮಾಡುವುದಕ್ಕಾಗಿ ಪರಮೇಶ್ವರನು ತನ್ನ ನಾಲ್ಕು ಕೈಗಳಲ್ಲಿಯೂ ಡಮರುಗ (ಬುಡುಬುಡಿಕೆ), ಮೃಗ (ಜಿಂಕೆ), ಅಗ್ನಿ (ಬೆಂಕಿ) ಮತ್ತು ತ್ರಿಶೂಲ (ಮೂರು ಮೊನೆಗಳುಳ್ಳ ಭರ್ಜಿ) ಇವುಗಳನ್ನು ಒಂದೊಂದು ಕೈಲಿ ಒಂದೊಂದರಂತೆ ಹಿಡಿದು, ದಕ್ಷಿಣಾಮೂರ್ತಿಯವತಾರವನ್ನೆತ್ತಿ ಡಮರುಗವನ್ನು ಶಬ್ದ ಮಾಡುವುದರಿಂದ ಜನಗಳಿಗೆ ಮೋಕ್ಷಮಾರ್ಗವನ್ನು ತೋರಿಸುತ್ತಾನೆ. ಆ ಅವತಾರವು ಹೇಗಿದೆಯೆಂದರೆ,

ಶ್ಲೋ ॥ ರಣಡ್ಡಮರುಣಾ ಸ್ಫುರದ್ಧರಿಣಯಾ ಸಖಟ್ವಾಂಗಯಾ ।
ಧಗದ್ಧಗಿತವಹ್ನಿನಾ ಲಲಿತಶೂಲಯಾ ವಾಹಯಾ ॥
ಚಲಾಭಿ ರಚಲಾಭಿ ರಪ್ಯಗಣಿತಾಭಿ ರುನ್ಮೃತ್ಯತಃ ।
ಚತುರ್ದಶ ಜಗಂತಿ ತೇ ಜಯಜಯೇ ತ್ಯಯುರ್ವಿಸ್ಮಯಂ ॥

(ನಾರಾಯಣಕೃತ ಶಿವಸ್ತೋತ್ರ, ಶ್ಲೋಕ 6.)

ಶ್ಲೋ ॥ ದೇಹಂ ಪ್ರಾಣ ಮಪೀಂದ್ರಿಯಾ ಣ್ಯಪಿ ಚಲಾಂ♦ ಬುದ್ಧಿಂ ಚ ಶೂನ್ಯಂ ವಿದುಃ।
ಸ್ತ್ರೀಬಾಲಾಂಧಜಡೋಪಮಾ ಸ್ತ್ವಹ ಮಿತಿ ♦ ಭ್ರಾಂತಾ ಭೃಶಂ ವಾದಿನಃ ॥
ಮಾಯಾಶಕ್ತಿವಿಲಾಸಕಲ್ಪಿತಮಹಾ ♦ ವ್ಯಾಮೋಹ ಸಂಹಾರಿಣೇ ।
ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ♦ ಶ್ರೀ ದಕ್ಷಿಣಾಮೂರ್ತಯೇ॥

(ದಕ್ಷಿಣಾಮೂರ್ತಿ ಸ್ತೋತ್ರ, ಶ್ಲೋಕ 5.)

ಶ್ಲೋ ॥ ಫಣೀ ನಾಗಕಂಠೇ ♦ ಭುಜಂಗಾ ದ್ಯನೇಕಂ ।
ಗಳೇ ರುಂಡಮಾಲಂ ♦ ಮಹಾವೀರಶೂರಂ ॥
ಕಟಿವ್ಯಾಘ್ರಚರ್ಮಂ ♦ ಚಿತಾಭಸ್ಮಲೇಪಂ ।
ಭಜೇ ಪಾರ್ವತೀವ ♦ ಲ್ಲಭಂ ನೀಲಕಂಠಂ ॥

(ಪಾರ್ವತೀವಲ್ಲಭಾಷ್ಟಕಂ, ಶ್ಲೋಕ 5.)

ಶ್ರೀ ಪರಮೇಶ್ವರನು ದುಷ್ಟಶಿಕ್ಷಣ ಶಿಷ್ಟಪರಿಪಾಲನಾರ್ಥವಾಗಿ ಒಂದು ಕೈಲಿ 'ರಣರಣ' ಎಂದು ಶಬ್ದಮಾಡುತ್ತಿರುವ ಡಮರುಗ (ಬುಡುಬುಡಿಕೆ) ಯಿಂದಲೂ, ಮತ್ತೊಂದರಲ್ಲಿ ಪ್ರಕಾಶಿಸುತ್ತಿರುವ ಜಿಂಕೆಯಿಂದಲೂ, ಇನ್ನೊಂದರಲ್ಲಿ ಧಗಧಗಿಸುತ್ತಿರುವ ಅಗ್ನಿಯಿಂದಲೂ ಮತ್ತು ನಾಲ್ಕನೆಯ ಕೈಯಲ್ಲಿ ತ್ರಿಶೂಲದಿಂದಲೂ ಮೆರೆಯುವವನಾಗಿದ್ದಾನೆ. ಆತನು ತನ್ನ ಡಮರುಗ (ಬುಡುಬುಡಿಕೆ) ಯನ್ನು ಬಾರಿಸುವುದರಮೂಲಕ ಹದಿನಾಲ್ಕು ಲೋಕಗಳಲ್ಲಿರುವ ಜೀವಿಗಳಿಗೆಲ್ಲವೂ ಮಂಗಳವನ್ನುಂಟುಮಾಡುತ್ತ ಅವ ರಿಂದ ಜಯಜಯವೆಂದು ಹೊಗಳಿಸಿಕೊಳ್ಳುತ್ತ ಲೋಕಕ್ಕೆಲ್ಲಾ ಅತ್ಯಾಶ್ಚ ರ್ಯವನ್ನುಂಟುಮಾಡುತ್ತಿದ್ದಾನೆ. ಈ ಪರಮಶಿವನನ್ನು ಇಗೋ ☞ ಎದುರಾಗಿರುವ ಪಟದಲ್ಲಿ ಕಾಣಿಸಿದೆ.



ಪರಮಶಿವನು ಮೋಕ್ಷವನ್ನು ಕೊಡುವುದಕ್ಕಾಗಿ ತನ್ನ ಡಮರುಗವನು
ಬಾರಿಸಿ ಮಾನವರನ್ನು ಕರೆಯುತ್ತಿರುವುದು.

ಮೇಲೆ ಹೇಳಿದ ದಕ್ಷಿಣಾಮೂರ್ತಿಸ್ವರೂಪವು ದೇಹ ಪ್ರಾಣ ಇಂದ್ರಿಯಾದಿಗಳು ಮತ್ತು ಅವುಗಳಿಗೆ ಸಂಬಂಧಪಟ್ಟವುಗಳು ಅಚಲವೆಂದೂ, ಬುದ್ಧಿಯು ಶೂನ್ಯವೆಂದೂ ಹೆಂಡತಿಮಕ್ಕಳೆಂಬುವರು ಅಂಧರೂ ಮತ್ತು ಜಡರೆಂದೂ ತಾವು ಮೋಹಪಾಶದಲ್ಲಿ ಸಿಕ್ಕಿ ಭ್ರಾಂತರಾಗಿರುವರೆಂದೂ ತಿಳಿದಿರುವ ಮಹಾತ್ಮರಿಗೆ ಆಗಾಗ್ಗೆ ಸಂಭವಿಸುವ ಮಾಯಾಶಕ್ತಿ ವಿಲಾಸದಿಂದುಂಟಾದ ವ್ಯಾಮೋಹವನ್ನು ಸಂಹಾರಮಾಡುವಂಥದು. ಅಜ್ಞಾನವನ್ನು ಕಳೆದು ಜ್ಞಾನೋದಯವನ್ನುಂಟುಮಾಡುವ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರವು. ಕಂಠದಲ್ಲಿ ರುಂಡಮಾಲೆಯನ್ನೂ ಕೈಕಾಲುಗಳಲ್ಲಿ ಸರ್ಪಾಭರಣಗಳನ್ನೂ ತಲೆಯಲ್ಲಿ ಚಂದ್ರನನ್ನೂ ಸೊಂಟದಲ್ಲಿ ವ್ಯಾಘ್ರ ಚರ್ಮವನ್ನೂ ಮತ್ತು ಮೈಗೆ ಚಿತಾಭಸ್ಮಲೇಪವನ್ನೂ ಉಳ್ಳಂಥ ಆ ಪಾರ್ವತೀಪತಿಗೆ ನಮಸ್ಕಾರವು.

ಆ ಪರಮಶಿವನು ದಕ್ಷಿಣಾಮೂರ್ತಿಯವತಾರವನ್ನು ಹೊಂದಿ ಜನಗಳನ್ನು ಕುರಿತು ಹೀಗೆಂದು ಹೇಳುತ್ತಾನೆ.

ಸೀ ॥ ಕೈಲೊಂದು ಬುಡುಬುಡಿಕೆ ♦ ಯೆತ್ತಿ ಬಾರಿಸಿ ಕರೆವ
ನೊಂದುಕೈ ಲೇಣವ ♦ ನ್ನೆತ್ತಿ ತೋರಿ ;
ಮನುಜರೇ ! ಈ ಪರಿಯೊ ♦ ಳರಚಿಕೊಂಡೋಡುತಿಹ
ನಿಮ್ಮ ಮನದಾಕಪಿಯು ♦ ಬಿಡದೆ ಭಸ್ಮ-
ಮಾಡಲಿಕೆ ದಕ್ಷಿಣಾ ♦ ಮೂರ್ತಿಯಾ ಗಿಹೆನು ನಾ
ನೆನಗೊಡವೆಯುಹ ಸರ್ಪ ♦ ಪುತ್ತವುಗುವ
ಪೋಲ್ನಿಮ್ಮ ದೇಹವಂ ♦ ಪ್ರಾಣವಾಯುಗಳೈದು
ಮೂಗಿನಿಂದೊಳಪೊಕ್ಕು ♦ ತಿರುಗುತಿಹುವು ॥

ಗೀ ॥ ಅವುಗಳನೆ ಯೋಗಿ ಹಾವಾ ♦ ಡಿಗನ ತೆರದಿ
ಪಿಡಿದು ವೇಗವ ನಿಳಿಪ ಜ್ಞಾ ♦ ನಿಗಳ ನಂಟ-
ಬಂದ ಮಾಯಾರಾಕ್ಷಸನ ♦ ಬಿಡದೆ ನನ್ನ
ಪಾದಗಳ ಕೆಳಗಿಟ್ಟು ನಿಜ, ♦ ತುಳಿವೆ ನಾನು ॥

ಗೀ ॥ ಇಷ್ಟಲ್ಲ ಪಾಯೋಗಿ ಮನವ ♦ ನೊಂದು ಕೈಯ-
ಶೂಲದಿಂ ತಿವಿದೆತ್ತಿ ಜೇ ♦ ನೊಂದು ಕೈಯೊ-

ಅಗ್ನಿಯಿಂ ಭಸ್ಮಗೈ ದದನು ♦ ಧರಿಸಿ ಯೋಗಿ-
ಶಿರವ ಗಳದೊಳು ಧರಿಪೆ ನಿನ್ನು ♦ ಪುಟ್ಟ ಸವನು ॥

"ಓ ಸ್ತ್ರೀಪುರುಷರಿರಾ! ದಕ್ಷಿಣದಿಕ್ಕಿನಲ್ಲಿ ಯಮಪಟ್ಟಣವಿದೆ. ಆ ಕಡೆಗೆ ಹೋಗಬಾರದು. ಉತ್ತರದಿಕ್ಕಿನ ಕಡೆಗೆ ನೋಡಿರಿ. ಅಲ್ಲಿ ಮೋಕ್ಷವೆಂಬ ಭವನವಿದೆ." ಎಂದು ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಪರಮಶಿವನು ಹೇಳುತ್ತ ತನ್ನ ಕೈಲಿದ್ದ ಬುಡುಬುಡಿಕೆಯನ್ನು ಆಡಿಸುತ್ತಿದ್ದಾನೆ. ಹೀಗೆ ಆ ಡಮರುಗವನ್ನು ಬಾರಿಸಿ, ಅವರು ತನ್ನನ್ನು ಹಿಂದಿರುಗಿ ನೋಡುವಂತೆ ಮಾಡಿ ತನ್ನ ಕೈಲಿದ್ದ ಜಿಂಕೆಯನ್ನು ಅವರ ಕಡೆಗೆತ್ತಿ ತೋರಿಸಿ, 'ಇಗೋ! ಈ ಜಿಂಕೆಯಂತೆ ಕಿರಿಚಿಕೊಳ್ಳುತ್ತ ಹಾರಿ ಕುಣಿಯುತ್ತ ಅನೇಕ ವಿಧವಾಗಿ ಓಡುತ್ತಿರುವ ವಾಯುವಿನಂಶವಾದ ನಿಮ್ಮ ಮನಸ್ಸೆಂಬ ಕಪಿಯನ್ನು ಭಸ್ಮವನ್ನಾಗಿ ಮಾಡಿ ದಕ್ಷಿಣಾಮೂರ್ತಿಯವತಾರವನ್ನು ನಾನು ಕೈಕೊಂಡು ನಿಮ್ಮೆದುರುಭಾಗದಲ್ಲಿ ನಿಂತಿದ್ದೇನೆ. ನನ್ನ ಶರೀರಕ್ಕೆ ಆಭರಣಗಳಾಗಿ ಧರಿಸಿರುವ ಐದು ಸರ್ಪಗಳೂ ನಿಮ್ಮ ಶರೀರದಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳಾಗಿದ್ದು ಹುತ್ತದೊಳಕ್ಕೆ ಹೋಗಿ ಬರುತ್ತಿರುವ ಸರ್ಪಗಳಂತೆ ನಿಮ್ಮ ಮೂಗಿನ ಹೊಳ್ಳೆಗಳ ಮೂಲಕ ಶರೀರವೆಂಬ ಹುತ್ತದೊಳಕ್ಕೆ ಶ್ವಾಸವೆಂಬುವ ಹಾವು ಉಚ್ಛ್ವಾಸ ನಿಶ್ವಾಸಗಳಾಗಿ ಹತ್ತಿ ಇಳಿಯುತ್ತಿರುತ್ತದೆ.

"ಹಾವಾಡಿಗನು ಅಡವಿಯಲ್ಲಿರುವ ಸರ್ಪವನ್ನು ಹಿಡಿದುತಂದು, ಅನೇಕವೇಳೆ ಅದನ್ನು ಆಡಿಸಿ ಅದು ಕೋಪದಿಂದ ಬುಸುಗುಟ್ಟುವ ವೇಗವನ್ನು ಹೇಗೆ ಅಣಗಿಸುತ್ತಾನೆಯೋ ಹಾಗೆಯೇ, ಮೂಗಿನದ್ವಾರದಲ್ಲಿ ಹತ್ತಿ ಇಳಿಯುತ್ತಿರುವ ಉಚ್ಛ್ವಾಸ ನಿಶ್ವಾಸಗಳ ವೇಗವನ್ನು ಯಾವ ಯೋಗಿಯು ಅಣಗಿ ತುಳಿಯುತ್ತಾನೆಯೋ ಅಂತಹ ಯೋಗಪುರುಷನನ್ನು ಜನ್ಮಜನ್ಮಗಳಿಂದ ಬೆನ್ನಂಟಬಂದ ಮಾಯೆಯೆಂಬ ರಾಕ್ಷಸನನ್ನು ನನ್ನ ಕಾಲಿನ ಕೆಳಗೆ ಹಾಕಿಕೊಂಡು ತುಳಿಯುತ್ತೇನೆ. ಇದೂ ಅಲ್ಲದೆ, ಆ ಯೋಗಿಯ ಮಾಯಾಮನಸ್ಸನ್ನು ನನ್ನ ಕೈಲಿರುವ ಶೂಲಾಯುಧದಿಂದ ತಿವಿದು, ಇಗೋ! ನನ್ನ ಎಡಗೈಯಲ್ಲಿರುವ ಈ ಅಗ್ನಿಯಿಂದ ಸುಟ್ಟು ಬೂದಿಮಾಡಿ

ಆ ಬೂದಿಯನ್ನು ನನ್ನ ಶರೀರಕ್ಕೆಲ್ಲಾ ಬಳಿದುಕೊಳ್ಳುವೆನು. ಹೀಗೆ ಬಳಿದು ಕೊಂಡಮೇಲೆ ಅಂತಹ ಯೋಗಿಗಳು ಬೇರೆ ತಲೆಬುರುಡೆಯೊಳಕ್ಕೆ ಹೋಗಿ ಸೇರಿ ಬೇರೆ ಶರೀರವನ್ನು ಪಡೆಯದಿರುವಂತೆ ಆ ಯೋಗಿಗಳ ತಲೆಬುರುಡೆ ಗಳೆಲ್ಲವನ್ನೂ ಹಾರವಾಗಿ ಪೋಣಿಸಿ ಆ ರುಂಡಮಾಲೆಯನ್ನು ನನ್ನ ಕೊರ ಳಲ್ಲಿ ಧರಿಸುತ್ತೇನೆ,'' ಎಂದು ಜನಗಳು ತಿಳಿದುಕೊಳ್ಳುವುದಕ್ಕಾಗಿಯೇ ಪರಮಾತ್ಮನಾದ ಪರಮಶಿವನು ಸರ್ಪವನ್ನು ಆಭರಣಗಳಾಗಿಯೂ, ತಲೆ ಬುರುಡೆಗಳನ್ನು ಮಾಲೆಯಾಗಿಯೂ ಧರಿಸಿ ತೋರಿಸುತ್ತಿದ್ದಾನೆ. ಇಂತಹ ರಹಸ್ಯಾರ್ಥವನ್ನು ಈ ಗ್ರಂಥದಲ್ಲಿ ತಿಳಿಯಪಡಿಸಿದ್ದೇವೆ.

ಆ ಪರಮಶಿವನ ಸ್ವರೂಪವನ್ನು ಕುರಿತು ಹೀಗೆಂದು ಹೇಳಿದೆ.

ಶ್ಲೋ ॥ ಅತಿಭೀಷಣ ಕಟುಭಾಷಣ ♦ ಯಮಕಿಂಕರ ಪಟಲೀ- ।
ಕೃತತಾಡನ ಪರಿಪೀಡನ ♦ ಮರಣಾಗಮ ಸಮಯೇ ॥
ಉಮಯಾ ಸಹ ಮಮ ಚೇತಸಿ ♦ ಯಮಶಾಸನ! ನಿವಸ ।
ಶಿವಶಂಕರ! ಶಿವಶಂಕರ! ♦ ಹರ ಮೇ ದುರಿತಂ ॥

ಶ್ಲೋ ॥ ಆಕಾಶ ಶ್ಚಿಕುರಾಯತೇ, ದಶದಿಶಾ ♦ ಭೋಗೋ ದುಕೂಲಾಯತೇ, ।
ಶೀತಾಂಶುಃ ಪ್ರಸವಾಯತೇ, ಸ್ಥಿರತರಾ ♦ ನಂದಃ ಸ್ವರೂಪಾಯತೇ, ॥
ವೇದಾಂತೋ ನಿಲಯಾಯತೇ, ಸುವಿನಯೋ ♦ ಯಸ್ಯ ಸ್ವಭಾವಾಯತೇ, ।
ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ♦ ಸಾಂಬೇ ಪರಬ್ರಹ್ಮಣಿ ॥

ಭಾಮಿನೀಷಟ್ಪದಿ ॥

ನೋಡುವುದು ಸಾಲೋಕ್ಯ, ಪೂಜೆಯ ।
ಮಾಡುವುದು ಸಾಮೀಪ್ಯ, ಧ್ಯಾನವ ।
ಮಾಡಿ ಹೃತ್ಕಮಲದಲಿ ನಿಲಿಪ ಸಮಾಧಿ ಸಾರೂಪ್ಯ, ॥
ಕೂಡಿ ಭಕ್ತರೊಳಾಡಿ ನುತಿಗಳ ।
ಮಾಡುವುದೆ ಸಾಯುಜ್ಯ, ವಿವುಗಳ ।
ಬೇಡಿಕೊಂಬೆನು ಶಿವನೆ! ರಕ್ಷಿಸು ನಮ್ಮ ನನವರತ ॥

(ಶಿವಭಕ್ತಿಸಾರ, ಪದ್ಯ 12.)

ಈ ಪರಮಶಿವನು ಬೇರೊಂದು ವೇಳೆಯಲ್ಲಿ 'ಚಿದಂಬರಂ' ಎಂಬ ಮಹಾ ದಿವ್ಯಕ್ಷೇತ್ರದಲ್ಲಿ ಪಂಚಾಕ್ಷರವನ್ನೇ ದಿವ್ಯಶರೀರವನ್ನಾಗಿ ಧರಿಸಿ ನಟರಾಜನಾಗಿ ಅವತರಿಸಿ, ಯೋಗಮಾರ್ಗವನ್ನು ತಿಳಿಯಹೇಳುವ ತನ್ನ ಪಾದಗಳನ್ನು ಎತ್ತಿ ನಾಟ್ಯವಾಡಿ ತೋರಿಸುವ ರಹಸ್ಯಾರ್ಥವನ್ನು ಈ ಮುಂದಿನ ಪ್ರಕರಣದಲ್ಲಿ ವಿಶದಪಡಿಸಿದೆ.



# ಈಶ್ವರನು 'ಶಿವಾಯನಮಃ' ಎಂಬ ಪಂಚಾಕ್ಷರವನ್ನೇ ಶರೀರವನ್ನಾಗಿ ಧರಿಸಿ ನರ್ತನಮಾಡುವುದು.

---

### ಶಿವಪಂಚಾಕ್ಷರೀ ಸ್ತೋತ್ರಂ.

ಶ್ಲೋ ॥ ನಾಗೇಂದ್ರಹಾರಾಯ ♦ ತ್ರಿಲೋಚನಾಯ ।
ಭಸ್ಮಾಂಗರಾಗಾಯ ♦ ಮಹೇಶ್ವರಾಯ ॥
ನಿತ್ಯಾಯ ಶುದ್ಧಾಯ ♦ ದಿಗಂಬರಾಯ ।
ತಸ್ಮೈ ' **ನ** 'ಕಾರಾಯ ♦ ' ನಮಶ್ಶಿವಾಯ ' ॥ ೧ ॥

ಶ್ಲೋ ॥ ಮಂದಾಕಿನೀ ಸಲಿಲ ♦ ಚಂದನ ಚರ್ಚಿತಾಯ ।
ನಂದೀಶ್ವರ ಪ್ರಮಥ ♦ ನಾಥ ಮಹೇಶ್ವರಾಯ ॥
ಮಂದಾರಮುಖ್ಯಬಹು ♦ ಪುಷ್ಪ ಸುಪೂಜಿತಾಯ ।
ತಸ್ಮೈ ' **ಮ** 'ಕಾರಮಹಿ ♦ ಮಾಯ ' ನಮಶ್ಶಿವಾಯ ' ॥ ೨ ॥

ಶ್ಲೋ ॥ ಶಿವಾಯ ಗೌರೀವದನಾರವಿಂದ ♦ ಸೂರ್ಯಾಯ ದಕ್ಷಾಧ್ವರನಾಶನಾಯ ।
ಶ್ರೀನಿಲಕಂಠಾಯ ವೃಷಧ್ವಜಾಯ ♦ ತಸ್ಮೈ ' **ಶಿ** 'ಕಾರಾಯ ' ನಮಶ್ಶಿವಾಯ ' ॥ ೩ ॥

ಶ್ಲೋ॥ವಸಿಷ್ಠಕುಂಭೋದ್ಭವಗೌತಮಾದಿ ♦ ಮುನೀಂದ್ರ ದೇವಾರ್ಚಿತ ಶೇಖರಾಯ ।
ಚಂದ್ರಾರ್ಕವೈಶ್ವಾನರಲೋಚನಾಯ♦ತಸ್ಮೈ 'ವ'ಕಾರಾಯ 'ನಮಶ್ಶಿವಾಯ'॥೪॥

ಶ್ಲೋ॥ಯಕ್ಷಸ್ವರೂಪಾಯ ಜಟಾಧರಾಯ ♦ ಪಿನಾಕಹಸ್ತಾಯ ಸನಾತನಾಯ ।
ದಿವ್ಯಾಯ ದೇಹಾಯ ದಿಗಂಬರಾಯ♦ತಸ್ಮೈ 'ಯ'ಕಾರಾಯ'ನಮಶ್ಶಿವಾಯ'॥೫॥

ಹೀಗೆಂದು ಶಂಕರಾಚಾರ್ಯರು **ನ–ಮ–ಶ್ಶಿ–ವಾ–ಯ** ಎಂಬ **ಪಂಚಾಕ್ಷರೀ** ಮಂತ್ರಗಳ ಪ್ರತಿಯೊಂದು ಅಕ್ಷರದ ಗೂಢಾರ್ಥವನ್ನು ವಿಶದಪಡಿಸಿ, ಪಂಚಾಕ್ಷರೀಸ್ವರೂಪನಾದ ಪರಬ್ರಹ್ಮನ ನಿಜಸ್ವರೂಪವನ್ನು ವ್ಯಕ್ತಪಡಿಸಿರುತ್ತಾರೆ.

ಇದೇ ವಿಷಯವನ್ನು ಕುರಿತು ದ್ರಾವಿಡ ಭಾಷೆಯಲ್ಲಿರುವ 'ಉಣ್ಮೈ ವಿಳಕ್ಕಂ' ಎಂಬ ಶ್ರುತಿಪ್ರಮಾಣವನ್ನು ಕನ್ನಡ ಪದ್ಯರೂಪವಾಗಿ ಈ ಕೆಳಗೆ ತಿಳಿಸಿದೆ.

ಸೀ ॥ ಡಮರುಗವು ಧರಿಸಿರುವ ♦ ರೀತಿಯೇ 'ಶಿ'ಕಾರವುಂ
ಕೈಯೆರಡ ಚಾಚುವುದೆ ♦ 'ವಾ' ಎನಿಪುದು ;
ಎರಡುಪಾದಗಳೆತ್ತಿ ♦ ಸುಮ್ಮನಿಹು ದೆಂದೆನುತ
ಲಭಯವೀಯುತ್ತಿರುವು ♦ ದದೆ 'ಯ'ಕಾರ;
ಅಗ್ನಿಯಂ ಪಿಡಿದಿರುವ ♦ ಹಸ್ತವೇ 'ನ'ಕಾರವುಂ
ಮಾಯೆಯೆಂ ಬಸುರನನ ♦ ಕಾಲ ಕೆಳಗೆ
ತುಳಿದ ಪಾದವೆ 'ಮ'ಕಾ ♦ ರಾಕಾರವನೆ ಪೊಂದಿ,
ಸೊಗಸಾದ ದೇಹವನು ♦ ತಾನು ಧರಿಸಿ,

ಗೀ ॥ ಶ್ರೀಚಿದಂಬರವೆಂಬ ಸು ♦ ಕ್ಷೇತ್ರದಲ್ಲಿ
ನಾಟ್ಯವಾಡುವ ಶಂಕರನು ♦ ದಾರ ನಮಲ
ನೆಂದೆನಿಪ ನಟರಾಜನಾ ♦ ಮವನೆ ಕೊಂಡು,
ಪುಟ್ಟಿ ಯೋಗಕ್ರಮುವ ಬೋ ♦ ಧಿಸಿಯೆ ಮೆರೆದ ॥

ಅಂದರೆ, ಬುಡುಬುಡಿಕೆಯನ್ನು ಹಿಡಿದ ಹಸ್ತವೇ 'ಶಿ' ಕಾರವಾಗಿಯೂ, ಮುಂದಕ್ಕೆ ಚಾಚಿ ತೋರಿಸಿದ ಕೈಗಳೆರಡೂ 'ವ'ಕಾರವಾಗಿಯೂ

'ಸುಮ್ಮನಿರಿ, ಭಯಪಡಬೇಡಿ' ಎಂದು ಭಕ್ತರಿಗೆ ಅಭಯವನ್ನು ಕೊಡುವುದಕ್ಕಾಗಿ ಮೇಲಕ್ಕೆತ್ತಿದ ಎಡಬಲ ಪಾದಗಳೆರಡು 'ಯ'ಕಾರವಾಗಿಯೂ, ಅಗ್ನಿಯನ್ನು ಹಿಡಿದ ಹಸ್ತವೇ 'ನ'ಕಾರವಾಗಿಯೂ ಮತ್ತು ಮಾಯೆಯೆಂಬ ಕಾಳ ರಕ್ಕಸನನ್ನು ಅಣಗಿ ತುಳಿಯುವುದಕ್ಕಾಗಿ ಕಾಲುಗಳನ್ನೆತ್ತುವುದೇ 'ಮ'ಕಾರವಾಗಿಯೂ ತೋರಿಸುವ ಪರಮಶಿವನು, ಅಂದವಾದ ಶರೀರವನ್ನು ಧರಿಸಿ, 'ಚಿದಂಬರಂ' ಎಂಬ ದಿವ್ಯಕ್ಷೇತ್ರದಲ್ಲಿ ನಟರಾಜನೆಂಬ ಹೆಸರಿನಿಂದ ಅವತರಿಸಿ ನಾಟ್ಯವಾಡಿ ಯೋಗಕ್ರಮಗಳನ್ನು ಬೋಧಿಸಿದಂಥ ರಹಸ್ಯಾರ್ಥವನ್ನು ಇಲ್ಲಿ ತಿಳಿಯಹೇಳಿದೆ.

ಗೀ ॥ ಎರಡುಮೂಗಿನ ಹೊಳ್ಳೆಯೊಳು ♦ ಶ್ವಾಸವೆಂಬ
ಚರಣಯುಗವೆತ್ತಿ ಕುಣಿವ ಹಂ ♦ ಸಸ್ವರೂಪ !
ಹಗಲಿರುಳುಗಳೊ ಳೆನ್ನಲ್ಲಿ ♦ ನೆಲೆಸಿ ಯಿರುವ
ನಿನ್ನ ನರಿಯದಿಹೆ ನೆಷ್ಟು ಜ ♦ ನ್ಮಗಳು ತೊಲಗೆ.

ಓ ಪರಮಾತ್ಮಸ್ವರೂಪಿಯಾದ ಪರಮಶಿವನೇ! ನೀನು ನನ್ನಲ್ಲಿ ಅನೇಕಕೋಟಿ ಜನ್ಮಗಳಿಂದ 'ಹಂಸ' ಸ್ವರೂಪನಾಗಿದ್ದು, ಹಗಲಿರುಳೂ ಎಡಬಲಮೂಗಿನ ಹೊಳ್ಳೆಗಳಲ್ಲಿ ಆಗಾಗ್ಗೆ ಒಂದರಿಂದೊಂದಕ್ಕೆ ಬದಲಾಯಿಸುತ್ತ, ಶ್ವಾಸವೆಂಬ ನಿನ್ನ ಪಾದಗಳನ್ನು ಎತ್ತಿ ಕುಣಿಯುತ್ತಿದ್ದರೂ, ನಾನು ನಿನ್ನ ಸ್ವರೂಪವನ್ನು ತಿಳಿಯದಿದ್ದೇನೆ.

ಗೀ ॥ ನಾಸಿಕಾ ದ್ವಾರಗಳ ಮೂಲಕವೆ ♦ ಶ್ವಾಸವಾಗಿ
ನಿರುತ ಕುಣಿಯುತ್ತಲಿಹ ನಿ ♦ ನ್ನರಿಯದಂತೆ
ಯಿಾ ತೆರದಿ ಪುಟ್ಟುಸಾವ್ಗಳ ♦ ನೊಂದಿದೆಷ್ಟು
ಕೋಟಿಜನ್ಮ ಗಳನೆತ್ತಿಹೆನು? ♦ ಸರ್ವಸಾಕ್ಷಿ !

ನನ್ನ ಮೂಗಿನ ಹೊಳ್ಳೆಗಳಲ್ಲಿ ಉಚ್ಛ್ವಾಸ ನಿಶ್ವಾಸವಾಗಿ, ಮೇಲಕ್ಕೂ ಕೆಳಕ್ಕೂ ನಾಟ್ಯವಾಡುತ್ತಿರುವ ನಿನ್ನನ್ನು ತಿಳಿಯದೆಯೇ ನಾನು ಅನೇಕಕೋಟಿ ಜನ್ಮಗಳನ್ನು ಪಡೆಯುತ್ತಿದ್ದೇನೆ.

ಗೀ || ಎಡಬಲದ ಹೊಳ್ಳೆಗಳೊಳಗೆ ♦ ನಡೆಯುವಾಗ,
ಲೆರಡಾಗಿ ಸೀಳಿ ಭ್ರೂಮಧ್ಯ ♦ ದಲ್ಲಿ ಕಲೆತು
ಪರಮಶ್ವಾಸ ವೆಂದೆನುವ ♦ ಫಣಿಯ ತಿವಿದು
ಮೇಲ್ನಿಲಿಸಿ ಕುಂಭಿಪು ದೆನಗೆ ♦ ಘಟಪುದೆಂದು ||

ನನ್ನೆರಡು ಮೂಗಿನ ಹೊಳ್ಳೆಗಳೊಳಗೆ ಶ್ವಾಸವನ್ನು ಎರಡಾಗಿ ಸೀಳಿ ಪುನಃ ಭ್ರೂಮಧ್ಯದಲ್ಲಿ ಅವೆರಡೂ ಒಂದಾಗಿ ಸೇರಿ, ಅಲ್ಲಿ ನಡೆಯುತ್ತಿರುವ ಶ್ವಾಸವೆಂಬ ಸರ್ಪವನ್ನು ಎಬ್ಬಿಸಿ ಚಿತ್ರದಂತೆ ಅದನ್ನು ನಿಲ್ಲಿಸಿ ಕುಂಭಿಸುವ ಯೋಗವು ನನಗೆಂದಿಗೆ ದೊರಕುವುದೋ ಕಾಣೆನು.

ಎಡಬಲಮೂಗಿನ ಹೊಳ್ಳೆಗಳೆರಡೂ ಒಂದಾಗಿ ಸೇರುವ ಸ್ಥಳವೇ ಭ್ರೂಮಧ್ಯ ಅಂದರ ಹುಬ್ಬಿನ ನಡುಭಾಗ. ಹಿಂದೆ ಹೇಳಿದಂತೆ ಈ ಭ್ರೂಮಧ್ಯವೇ ತ್ರಿವೇಣೀಸಂಗಮವು. ಇಲ್ಲಿಯೇ ಇಡಾ ಪಿಂಗಳಾ ಮತ್ತು ಸುಷುಮ್ನಾ ಎಂಬ ಮೂರು ನಾಡಿಗಳು ಕಲೆಯುವುವು. ಆ ಸ್ಥಳದಲ್ಲಿ ಹಾವು ಹೆಡೆಯನ್ನೆತ್ತಿ ನಿಂತು ಆಟಗಳಾಡುವಂತೆ ಈ ಮೂರು ನಾಡಿಗಳೂ ಕಲೆತು ಆಟವಾಡುವ ರಹಸ್ಯವನ್ನು ತಿಳಿಯಲಾರದೆ ಮೃತಿಹೊಂದುತ್ತಿರುವ ಜನಗಳೆಷ್ಟೋ ಮಂದಿ ಇರುತ್ತಾರೆ.

ಸೀ || ಬಲದ ನಾಸಿಕದಿ ಮೇ ♦ ಣೆಡದ ನಾಸಿಕದೊಳಗೆ
ಬೇರ್ಬೇರೆ ಶ್ವಾಸಗಳ ♦ ಸೆಳೆದು ನಿಲಿಸಿ
ಬಿಟ್ಟು ; ಬೇರೊಂದು ಬಾ ♦ ರಿಯು ಹಾಗೆ ಮೇಲೆಳೆದು
ನಿಲಿಸಿಬಿಟ್ಟೀತೆರದಿ ♦ ಕೆಲವು ಸಾರಿ
ಮಾಡುವಭ್ಯಾಸವನು ♦ ಪೊಂದಿದಾ ಕ್ಷಣ ಪರಂ-
ಜ್ಯೋತ್ಯಪರಂಜ್ಯೋತಿ ♦ ಯೆಂದೆನಿಸುವ
ಸ್ತನಗಳಂ ಪೊಂದಿರುವ ♦ ಪಾರ್ವತೀದೇವಿ ಯೊಡ
ಗೂಡಿ ಸುಖದಿಂದಿಹನು ♦ ಶಿಶುವ ತೆರದಿ ||

ಗೀ || ಇದನು ಬುಧರೆಂಬರು ಪ್ರಾಣಾ ♦ ಯಾಮವೆಂದು ;
ಸಂತತಾಭ್ಯಾಸ ಮಾಡಲಿಕೆ ♦ ಸಕಲ ಸಂಚಿ

ತಂಗ ಳಡಗುವುದು ; ಭವಬಂದ ♦ ತತಿ ಕಳೆವುದು ;
ಶಾಶ್ವತಾನಂದ ಸುಖವ ಸಾ ♦ ಧಿಸಲು ಬಹುದು ||

ಅಂದರೆ ಎಡಬಲಮೂಗಿನ ಹೊಳ್ಳೆಗಳಲ್ಲಿ ಶ್ವಾಸವನ್ನು ಬೇರೆಬೇರೆ ಒಳಕ್ಕೆ ಸೆಳೆದು ಭ್ರೂಮಧ್ಯದಲ್ಲಿ ಅದನ್ನು ಸ್ವಲ್ಪಹೊತ್ತು ನಿಲ್ಲಿಸಿ ಪುನಃ ಎರಡು ಮೂಗಿನ ದ್ವಾರಗಳಲ್ಲಿಯೂ ನಿಧಾನವಾಗಿ ಅದನ್ನು ಬಿಡುವ ಅಭ್ಯಾಸವನ್ನು ಮಾಡಬೇಕು. ಹೀಗೆ ಮಾಡಲು ಶಕ್ತಿಯನ್ನು ಪಡೆದಿದ್ದೇ ಆದರೆ, ಪರಂಜ್ಯೋತಿ ಮತ್ತು ಅಪರಂಜ್ಯೋತಿಯೆಂಬುವ ಪಾರ್ವತೀ ದೇವಿಯ ಸ್ತನದ್ವಯಗಳನ್ನು ಪಾನಮಾಡುತ್ತಿರಬಹುದು. ಆಗ ಸಂಸಾರ ಬಂಧವೆಂಬುದು ನಶಿಸಿ ಶಾಶ್ವತಾನಂದ ಸುಖಕ್ಕೆ ಭಾಗಿಯಾಗಬಹುದು.

ಸೀ || ನಾಭಿಪಂಕೇರುಹ ♦ ದೊಳು ನಿದ್ರೆಗೈವ ಕುಂ
ಡಲಿಶಕ್ತಿ, ಶ್ವಾಸದಿಂ ♦ ಜ್ವಲಿಸು ವಗ್ನಿ-
ಯಿಂದೆಬ್ಬಿಸಿ ಬೆನ್ನೊ ♦ ಳುರಿವ ಬಿಳುಪಾದ ನರ
ಗಳಲಿರುವ ಸೂಕ್ಷ್ಮರಂ ♦ ಧ್ರಗಳ ಹೊಕ್ಕು,
ಆ ಬ್ರಹ್ಮಕಪಾಲಪ ♦ ವರಿಗೆ ಕೊಂಡೊಯ್ಯಲಿಕೆ
ಆ ಯಗ್ನಿಕಾವಿನಿಂ ♦ ಬಹಳವಾಗಿ
ಯಮೃತವು ತಾ ಕರಗಿ ♦ ಬಿಂದು ಬಿಂದುಗಳಾಗಿ
ಯದು ಜಾರಿ ಸುರಿಯುವುದು ♦ ಸರ್ವಕಾಲ

ಗೀ || ಅದನು ಕುಡಿಯುತಲಿರಲು ತಾ ♦ ಸ್ನಾನವನ್ನೆ,
ದಿನವು ಮಾಡಿದ ತೆರದಿ ಬೆವರು ♦ ಪುಟ್ಟುತಿಹುದು.
ಇದನು ಸ್ವಾನುಭವದಿಂದಲೆ ♦ ತಿಳಿಯ ಲಹುದು ;
ಉಪನಿಷದ್ವಾಕ್ಯ ಗೂಡಾರ್ಥ ♦ ವಿದುವೆ ತಿಳಿಯ.

ಸ್ತ್ರೀಪುರುಷರ ನಾಭಿಕಮಲದಲ್ಲಿ ಮಲಗಿ ನಿದ್ರೆಮಾಡುತ್ತಲಿರುವ ಕುಂಡಲಿಶಕ್ತಿಯನ್ನು ಶ್ವಾಸವೆಂಬ ಮೂಲ ಜ್ವಾಲಾಗ್ನಿಯಿಂದ ತಿವಿದೆಬ್ಬಿಸಿ

ಅದನ್ನು ಈ ಕೆಳಭಾಗದಲ್ಲಿ ತೋರಿಸಿರುವ ಪಟದಲ್ಲಿ ಬೆನ್ನೆಲುಬಿನಲ್ಲಿರುವ ಬಿಳಿಯ ನರದಲ್ಲಿನ ಸಣ್ಣ ರಂಧ್ರದ ಮೂಲಕವಾಗಿ ಬ್ರಹ್ಮ




ಬೆನ್ನೆಲುಬಿನಲ್ಲಿರುವ ಬಿಳಿಯ ನರವನ್ನು ತೋರಿಸುವ ಚಿತ್ರಪಟ.

ಕಪಾಲಕ್ಕೆ ತೆಗೆದುಕೊಂಡು ಹೋದದ್ದೇ ಆದರೆ, ಆಗ ಆ ಉಷ್ಣದಿಂದ ಬ್ರಹ್ಮಕಪಾಲದಲ್ಲಿರುವ ಅಮೃತವು ಕರಗಿ ಹನಿಹನಿಗಳಾಗಿ ಸೋರು

ತ್ತಿರುತ್ತದೆ. ಆ ಹನಿಗಳನ್ನು ನುಂಗುತ್ತಾ ಇರುವಾಗ ಪ್ರತಿದಿನವೂ ಸ್ನಾನಮಾಡಿದವನಂತೆ ಬೆವರುಂಟಾಗುತ್ತದೆ. ಈ ರಹಸ್ಯವು ಉಪನಿಷತ್ಪ್ರಮಾಣವು.

ಶ್ವಾಸವೆಂಬ ಅಗ್ನಿಯಿಂದ, ಜೀವರೆಂಬ ನೀರು ನಿನ್ನಲ್ಲುದಿಸುವುದಾದರೆ, ಅದನ್ನು ಯೋಗಾಭ್ಯಾಸದ ಅನುಭವದಿಂದ ತಿಳಿದುಕೊಂಡು ಹೇಳುವುದಕ್ಕೆ ನೀನು ಶಕ್ತಿಯುಳ್ಳವನಾದರೆ ಆಗ ಮಿತಿಯಿಲ್ಲದಿರುವ ಆ ಜ್ಯೋತಿಸ್ವರೂಪದಲ್ಲಿ ನೀನು ಸೇರಿಹೋಗುತ್ತೀ.

ಲೋಕದಲ್ಲಿರುವ ಮಾನವರೆಲ್ಲರೂ ಮಿತಿಯಿಲ್ಲದೆ ಎಲ್ಲೆಲ್ಲಿಯೂ ತುಂಬಿರುವ ಜ್ಯೋತಿಸ್ಸ್ವರೂಪದಲ್ಲಿ ಸೇರಿ ಹೋಗುವುದಕ್ಕಾಗಿಯೇ ಚಿದಂಬರದಲ್ಲಿ ಅಂದರೆ 'ಚಿತ್' ಎಂಬ ಆಕಾಶದಲ್ಲಿ ಶ್ರೀ ಪರಮಶಿವನು ನಟರಾಜನ ವೇಷವನ್ನು ಧರಿಸಿ, ಎಡಬಲ ಪಾದಗಳೆರಡನ್ನೂ ಮೇಲಕ್ಕೆತ್ತಿ ನರ್ತನವನ್ನು ಮಾಡಿ ಪ್ರಪಂಚಕ್ಕೆ ತೋರಿಸಿದನು.

ಚಿದಂಬರವು ಆಕಾಶದ (ಬಟ್ಟಬಯಲಿನ) ಅಂಶವು. ತಿರುವಣ್ಣಾಮಲೆಯು ಅಗ್ನಿಯಂಶವು. ಶ್ರೀ ಕಾಳಹಸ್ತಿಯು ವಾಯುವಿನಂಶವು. ಕಂಚಿಯು ಪೃಥ್ವಿಯ (ಭೂಮಿಯ) ಅಂಶವು. ಕಾಶೀಕ್ಷೇತ್ರವು ಜಲದ (ನೀರಿನ) ಅಂಶವು. ಎಂದು ತಿಳಿಯಬೇಕು.

ಈ ಚಿದಂಬರ ಕ್ಷೇತ್ರವು ಆಕಾಶದ ಅಂಶವಾಗಿರುವುದರಿಂದ, ನಟರಾಜ ವೇಷಧಾರಿಯಾದ ಪರಮಶಿವನು ವಾಸಿಸುವ ಮೂಲಸ್ಥಾನದ ಬಲಭಾಗಕ್ಕೆ ಒಂದು ಕೋಣೆಯಿದೆ. ಅದಕ್ಕೆ ಮೂರು ಪಕ್ಕಗಳಲ್ಲಿ ಗೋಡೆಗಳನ್ನೂ ನಾಲ್ಕನೆಯ ಪಕ್ಕದಲ್ಲಿ ಗೋಡೆಗೆ ಬದಲಾಗಿ ಒಂದು ಪರದೆ (ತೆರೆ) ಯನ್ನೂ ಹಾಕಿ ಮುಚ್ಚಿಟ್ಟಿರುತ್ತಾರೆ. ಆ ತೆರೆಯೊಳಗಿರುವ ಬಯಲುಜಾಗಕ್ಕೆ 'ರಹಸ್ಯದರ್ಶನ'ವೆಂದು ಅಲ್ಲಿನ ಬ್ರಾಹ್ಮಣರು ಹೆಸರನ್ನಿಟ್ಟು ಆ ರಹಸ್ಯಪ್ರದೇಶವನ್ನು ತೋರಿಸುವುದಕ್ಕಾಗಿ ಆ ದೇವಸ್ಥಾನದ ಅರ್ಚಕರು ಭಕ್ತಾದಿಗಳಿಂದ ಕಾಣಿಕೆಯನ್ನು ತೆಗೆದುಕೊಂಡು ಕರ್ಪೂರವನ್ನು ಹೊತ್ತಿಸಿ ಪರದೆಯನ್ನು ಸ್ವಲ್ಪವಾಗಿ ತೆರೆದು, ಬಟ್ಟಬಯಲಾಗಿರುವ ಆ ಆಕಾಶಪ್ರದೇಶಕ್ಕೆ ಆ

ಕರ್ಪೂರದಾರತಿಯನ್ನು ತೋರಿಸಿ ತಕ್ಷಣವೇ ಆ ಬಯಲುಪ್ರದೇಶವನ್ನು ತೆರೆಯಿಂದ ಮುಚ್ಚಿಬಿಡುವರು. ಅಷ್ಟರಲ್ಲಿ ಆ ಬಯಲುದೇಶವನ್ನು ನೋಡಿದ ಸ್ತ್ರೀಪುರುಷರೆಲ್ಲರೂ ಹೀಗೆಂದುಕೊಳ್ಳುತ್ತಾರೆ:—"ಇದೇನು? ಆ ಸ್ಥಳ ದಲ್ಲಿ ಏನೂ ಇಲ್ಲವಲ್ಲಾ! ಕಗ್ಗತ್ತಲು ಮಟ್ಟಿಗೆ ತುಂಬಿದೆಯಲ್ಲಾ! ರಹಸ್ಯ ದರ್ಶನವೆಂಬುದು ಆ ಕತ್ತಲೆಯೋ?" ಎಂದು ಒಬ್ಬರಿಗೊಬ್ಬರು ಮಾತ ನಾಡಿಕೊಳ್ಳುತ್ತಾರೆಯೇ ಹೊರತು, ಅದರ ನಿಜವಾದ ರಹಸ್ಯಾರ್ಥವು ಯಾರಿ ಗೂ ತಿಳಿಯದು. ಅದರ ತತ್ವವೇನೆಂದರೆ ಪರಮೇಶ್ವರನ ರೂಪವೇ ಆಕಾಶರೂಪವು. ಅಂದರೆ ಭಗವಂತನು ಯಾವ ರೂಪಗಳೂ ಇಲ್ಲದೆ ಆಕಾಶಸ್ವರೂಪಿಯಾಗಿ ಅಂದರೆ ಬಟ್ಟಬಯಲಾಗಿ ಎಲ್ಲೆಲ್ಲಿಯೂ ತುಂಬಿರು ವವನು. ಈ ಚಿದಂಬರಂ ಕ್ಷೇತ್ರವು ಆಕಾಶ ತನ್ಮಾತ್ರವಾದುದರಿಂದ ಗುಡಿಯಲ್ಲಿರುವ ಒಂದು ಬಯಲುಪ್ರದೇಶವನ್ನು ಮುಚ್ಚಿಟ್ಟು 'ರಹಸ್ಯ ದರ್ಶನ'ವೆಂಬ ಹೆಸರನ್ನಿಟ್ಟು ಜನಗಳಿಗೆ ತೋರಿಸುತ್ತಿದ್ದಾರೆ. ಇದೇ ಚಿದಂಬರಂನಲ್ಲಿರುವ 'ರಹಸ್ಯದರ್ಶನ'ದ ಅಂತರಾರ್ಥವು. ಈ ಚಿದಂಬರಂ ಕ್ಷೇತ್ರದ ವಿಷಯುವನ್ನು ಕುರಿತು ಇನ್ನು ಮುಂದೆ ವಿಸ್ತರಿಸಿ ತಿಳಿಯಹೇಳು ತ್ತೇವೆ. ಇದುವರಿವಿಗೂ ಹೇಳಿದ ರಹಸ್ಯವೇ ಸತ್ಯವೆಂದು ತಿಳಿಯಬೇಕು.

ಶ್ರೀ ನಟರಾಜನು ಮೊದಲು ಎಡದ ಪಾದವನ್ನು ನೆಲಕ್ಕೂರಿ ಬಲ ಗಾಲನ್ನು ಮೇಲೆತ್ತಿ ನಿಲ್ಲಿಸಿ ಸ್ವಲ್ಪಕಾಲ ನರ್ತನವನ್ನು ಮಾಡಿ ತೋರಿಸಿ ಅನಂತರ ಬಲದ ಪಾದವನ್ನು ನೆಲಕ್ಕೆ ಒತ್ತಿ ಎಡದ ಪಾದವನ್ನು ಮೇಲೆತ್ತಿ ನಿಲ್ಲಿಸಿ ಸ್ವಲ್ಪಹೊತ್ತು ನರ್ತನವನ್ನು ಮಾಡಿ ತೋರಿಸಿದನು. ಅನಂತರ ಪರಮಶಿವನಾದ ನಟರಾಜನು ಎಡಬಲ ಪಾದಗಳೆರಡನ್ನೂ ಮೇಲೆತ್ತಿ ನಟನೆ ಯನ್ನು ಮಾಡಿ ತೋರಿಸಿದನು. ಅದರಂತೆ ಮಹಾ ಕಾಳಿಯಾದ ಶಕ್ತಿಯೂ ಕೂಡ ನಟರಾಜನಿಗೆ ಸರಿಸಮನಾಗಿ ಎಡಬಲಪಾದಗಳನ್ನು ಮೇಲೆತ್ತಿ ನಾಟ್ಯ ವಾಡಿ ತೋರಿಸಿದಳು. ಅನಂತರ ನಟರಾಜನ ಬಲದ ಪಾದವನ್ನು ಕಿವಿಯ ವರಿವಿಗೂ ಎತ್ತಿ ಎಡಗೈಯನ್ನು ತಲೆಗಿಂತಲೂ ಮೇಲಕ್ಕೆತ್ತಿ ನಾಟ್ಯವನ್ನು ಮಾಡುವಾಗ ಹಿಂದೆ ತನ್ನ ಪ್ರಿಯಪತಿಯಾದ ನಟರಾಜನಿಗೆ ಸರಿಸಮನಾಗಿ ನಾಟ್ಯವಾಡಿ ತೋರಿದಂಥ ಕಾಳಿಯು, ಸ್ತ್ರೀಯಾಗಿರುವುದರಿಂದ ತನ್ನ

ಪಾದವನ್ನು ಕಿವಿಯವರಿವಿಗೂ ಎತ್ತಿ ತೋರಿಸುವುದಕ್ಕೆ ನಾಚಿಕೆಪಟ್ಟು ಓಡಿಹೋದಳೆಂದು ಪುರಾಣಕಥೆಗಳನ್ನು ಹೇಳುವರೇ ಹೊರತು, ಅದರ ನಿಜ ರಹಸ್ಯಾರ್ಥವನ್ನು ಯಾರೂ ಹೇಳಲಾರರು. ಆ ರಹಸ್ಯಾರ್ಥವನ್ನು ಈ ಮುಂದೆ ವಿಶದಪಡಿಸಿದೆ.

ಗೀ ‖ ಮೊದಲು ಬಲಮೂಗಿನಲಿ ಶ್ವಾಸ ♦ ವನ್ನೆ ಸೆಳೆದು
ನಿಲಿಸೆಂದು ತಿಳಿಸಲಿಕೆ ನೀಲ ♦ ಗಳನು, ಬಲದ
ಪಾದವನ್ನೆತ್ತಿದನು ತಾ ನ ♦ ರ್ತನದ ನೆಪದ
ಲಿದ ನರಿಯ ಪ್ರಾಣಯಾಮಾ ♦ ಭ್ಯಸನವೆಂದು ‖

ಪ್ರಾಣಾಯಾಮವಿಲ್ಲದೆ ಸಂಧ್ಯಾವಂದನೆಯನ್ನು ಮಾಡುವವರು, ಮೊದಲು ಎಡದಮೂಗಿನ ಹೊಳ್ಳೆಯನ್ನು ಮುಚ್ಚಿ ಬಲದ ಹೊಳ್ಳೆಯಲ್ಲಿ ಶ್ವಾಸವನ್ನು ಒಳಕ್ಕೆಳೆದು ಅಲ್ಲಿ ನಿಲ್ಲಿಸಬೇಕೆಂದು ತೋರಿಸುವ ಸಲುವಾಗಿ ನಟರಾಜನು ಮೊದಲು ಎಡಪಾದವನ್ನು ನೆಲಕ್ಕೂರಿ ಬಲಪಾದವನ್ನು ಮೇಲಕ್ಕೆತ್ತಿ ನಟನೆಯನ್ನು ಮಾಡಿ ತೋರಿಸಿದನು. ಆದುದರಿಂದ ಆ ಸ್ವಾಮಿಯು ಮೊದಲು ಬಲಗಾಲನ್ನೇ ಮೇಲಕ್ಕೆತ್ತಿ ತೋರಿಸುವುದಕ್ಕೆ ಕಾರಣವಾಯಿತು.

ಗೀ ‖ ಎಡಮೂಗಿನೊಳು ಮತ್ತೆ ಶ್ವಾಸ ♦ ವನ್ನೆ ಸೆಳೆದು,
ನಿಲಿಸೆಂದು ತೋರಿಸಲು ನೀಲ ♦ ಕಂಠ, ನೆಡದ
ಪಾದ ವೆತ್ತೆರಡನೆಯುಸಾರಿ ♦ ಪ್ರಥಿತನಾಟ್ಯ
ವಿದನೆ ತಿಳಿ ಪ್ರಾಣಯಾಮಾ ♦ ಭ್ಯಾಸವೆಂದು ‖

ಬಲಮೂಗನ್ನು ಮುಚ್ಚಿ ಎಡಮೂಗಿನಲ್ಲಿ ಶ್ವಾಸವನ್ನು ಒಳಕ್ಕೆಳೆದು ಅಲ್ಲಿ ಸ್ವಲ್ಪಹೊತ್ತು ನಿಲ್ಲಿಸಬೇಕೆಂದು ತೋರಿಸುವುದಕ್ಕಾಗಿಯೇ ಶ್ರೀ ಪರಮೇಶ್ವರನು ತನ್ನ ಬಲಪಾದವನ್ನು ನೆಲದಮೇಲೂರಿ ಎಡಪಾದವನ್ನು ಮೇಲೆತ್ತಿ ಅಲ್ಲಿ ಕೊಂಚಕಾಲ ನಿಲ್ಲಿಸಿ ತೋರಿಸಿದನು. ಇದೂ ಪ್ರಾಣಾಯಾಮಾಭ್ಯಾಸದ ರಹಸ್ಯವೇ. ಪರಮಶಿವನು ಯೋಗಕ್ರಮಗಳನ್ನು ತಿಳಿಸುವುದಕ್ಕಾಗಿ ತನ್ನ ಪಾದಗಳನ್ನೆತ್ತಿ ನರ್ತನವನ್ನು ಮಾಡುವ ಚಿತ್ರಪಠವನ್ನು ಇದರ ಹಿಂದೆ 754-ನೇ ಪುಟದಲ್ಲಿ ತೋರಿಸಿರುತ್ತದೆ. ನೋಡಿರಿ.







ಶ್ರೀ ಪರಮೇಶ್ವರನು ಯೋಗಮಾರ್ಗವನ್ನು ತಿಳಿಸುವುದಕ್ಕಾಗಿ ತನ್ನ ಪಾದಗಳನ್ನೆತ್ತಿ ನರ್ತನವನ್ನು ಮಾಡಿ ತೋರಿಸುವುದು.

ಸೀ ‖ ಕಮ್ಮಾರ ತಿದಿಗಳನು ♦ ಕರಗ ಳೆರಡಲಿ ಪಿಡಿಯು
ತೊಂದಾದಮೇಲೊಂದ ♦ ನೊತ್ತುವಂತೆ
ಮೂಗಿ ನೆಡಬಲ ದೆಡೆಗ ♦ ಳನ್ನು ಕೈ ಹೆಬ್ಬೆಟ್ಟು
ಮೇಣುಂಗುರದ ಬೆರಳ ♦ ಲೊತ್ತಿ ಹಿಡಿದು,
ಒಂದು ಸಾ ರೊಂದರಲಿ ♦ ಮತ್ತೆ ಮತ್ತೊಂದರಲಿ
ಶ್ವಾಸವನು ಮೇಲೆಳೆದು ♦ ಜೊತೆಯು ಸೇರಿ,
ಕೂಡಿಸಿಯೆ ನಿಲಿಸುವುದ ♦ ಕೋರಿ ತಿಳಿಸಲಿಕೆ ತಾ
ನೊಂದು ಪಾದವನು ಕಿವಿ ♦ ವರೆಗೆ ಎತ್ತಿ,

ಗೀ ‖ ನಟನೆಯನು ಮಾಡಿ ತೋರಿದನು ♦ ಪರಮಶಿವನು
ನಟರಾಜ ರೂಪವನ್ನೆತ್ತಿ ♦ ಕ್ಷಿತಿತಲದೊಳು;
ತತ್ವವೇತ್ತರು ಸದಾ ತಮ್ಮ ♦ ಚಿತ್ತದೊಳಗೆ;
ಇದರ ಲಕ್ಷ್ಯಾರ್ಥವ ನರಿದು ವ ♦ ರ್ತಿಸಲು ಬೇಕು.

**ಕ**ಮ್ಮಾರನು ಕುಲಿಮೆಯಲ್ಲಿ ಚರ್ಮದ ಎರಡು ತಿದಿಗಳನ್ನಿಟ್ಟು ಅವೆರಡನ್ನೂ ತನ್ನೆರಡು ಕೈಗಳಲ್ಲಿ ಒಂದೊಂದರಲ್ಲಿ ಒಂದೊಂದರಂತೆ ಹಿಡಿದು, ಒಂದಾದಮೇಲೊಂದನ್ನು ಹೇಗೆ ಒತ್ತಿ ಕುಲಿಮೆಯನ್ನೂದುತ್ತಾನೆಯೋ ಹಾಗೆಯೇ, ಬಲಗೈ ಹೆಬ್ಬೆರಳು ಉಂಗುರದ ಬೆರಳು ಈ ಎರಡನ್ನೂ ಮೂಗಿನ ಎಡಬಲ ಭಾಗಗಳಲ್ಲಿಟ್ಟು ಒತ್ತಿ ಹಿಡಿದು ಒಂದಾದಮೇಲೊಂದರ ಮೂಲಕ ಶ್ವಾಸವನ್ನು ಒಳಕ್ಕೆ ಹೀರುತ್ತ ಅಲ್ಲಿ ಅಂದರೆ ಭ್ರೂಮಧ್ಯದಲ್ಲಿ ನಿಲ್ಲಿಸಬೇಕೆಂದು ತೋರಿಸುವ ಸಲುವಾಗಿಯೇ ನಟರಾಜನು ಮೊದಲು ತನ್ನ ಒಂದು ಪಾದವನ್ನೂ, ಅನಂತರ ಇನ್ನೊಂದನ್ನೂ ಕಿವಿಯವರಿವಿಗೆ ಎತ್ತಿ ನಾಟ್ಯವನ್ನಾಡಿ ತೋರಿಸಿದನು. ಇದಕ್ಕೆ ಕಾಲಜ್ಞಾನ ತತ್ವವನ್ನು ಪ್ರಮಾಣಕ್ಕಾಗಿ ಈ ಕೆಳಗೆ ಕೊಟ್ಟಿದೆ.

ರಾಗ—ಆನಂದಭೈರವಿ—ಆದಿತಾಳ.

ಚಂದಮಾಮ - ಚಂದಮಾಮ - ಚಂದಮಾಮ ‖ ಪಲ್ಲವಿ ‖
ಈ ಗುಟ್ಟನು ತಿಳಿಯರಿ ಜ್ಞಾನಿಗಳಿರಾ! ಚಂದಮಾಮ ‖ ಅನುಪಲ್ಲವಿ ‖
ದೇಹವೆಂಬ ಹುತ್ತದೊಳಗೆ-ಚಂದಮಾಮ -
ಶ್ವಾಸವೆಂಬ ಹಾವು ತಿರುಗುತಿಹುದು ಚಂದಮಾಮ ‖ ಚಂ ‖ ‖ ೧ ‖

ಜೋಡಿ ನಾಗಸ್ವರಗಳೂದಿ – ಚಂದವೂವು –
ಹಾವನು ಬಿಡದೆ ನಿಲಿಸಲುಬೇಕು – ಚಂದವೂವು ॥ ೨ ॥

ಒಂಭತ್ತು ಬಾಗಿಲುಗಳ ಮುಚ್ಚಿ–ಚಂದವೂವು –
ಹಾವನು ಸುಲಭವಾಗಿ ಹಿಡಿಯಬೇಕು – ಚಂದವೂವು ॥ ೩ ॥

ದೇಹಿಯು ದೇಹಗಳ ಸಂದನು – ಚಂದವೂವು –
ಹಾವು ಬಿಡದೆ ಸುತ್ತುತಲಿಹುದು – ಚಂದವೂವು ॥ ೪ ॥

ಭಕ್ತಿಯೆಂಬ ಕಟ್ಟನು ಕಟ್ಟಿ – ಚಂದವೂವು –
ಯುಕ್ತಿಯಿಂದದ ಸಾಧಿಸಬೇಕು – ಚಂದವೂವು ॥ ೫ ॥

ಅಜಪ ಮಂತ್ರ ಧ್ಯಾನದಿಂದ – ಚಂದವೂವು –
ಹಾವು ಅಖಂಡ ಕಳೆಯಿಂ ದೆಸೆವುದು – ಚಂದವೂವು ॥ ೬ ॥

ಈ ಹಾವನು ಹಿಡಿವ ಜೋಗಿ ಯಾವನೊ – ಚಂದವೂವು
ಓಹೋ! ಆತನ ಹೆಸರೇ 'ಸಿದ್ಧಗುರು'ವು – ಚಂದವೂವು ॥ ೭ ॥

ಶರೀರವೆಂಬ ಹುತ್ತದಲ್ಲಿ, ಶ್ವಾಸವೆಂಬ ಹಾವು ಮಲಗಿ ನಿದ್ರೆಮಾಡು ತ್ತಿರುತ್ತದೆ. ಎರಡುಮೂಗಿನ ಹೊಳ್ಳೆಗಳಲ್ಲಿಯೂ ಶ್ವಾಸವನ್ನು ಜೋಡಿ ನಾಗಸ್ವರಗಳಂತೆ ಊದಿ ಆ ಹಾವನ್ನು ಸ್ತಬ್ಧವಾಗಿ ನಿಲ್ಲಿಸಬೇಕು. ಮತ್ತು ಒಂಭತ್ತು ಬಾಗಿಲುಗಳನ್ನೂ ಅಂದರೆ ಶರೀರದ ನವದ್ವಾರಗಳನ್ನೂ ಮುಚ್ಚಿ ದೇಹವನ್ನೆಲ್ಲಾ ಆವರಿಸಿಕೊಂಡಿರುವ ಆ ಹಾವನ್ನು ಹಿಡಿಯಬೇಕು. ಇದಕ್ಕೆ ಭಕ್ತಿಯೆಂಬ ಹಗ್ಗವನ್ನು ಕಟ್ಟಿ ಯುಕ್ತಿಯಿಂದ ಅದನ್ನು ವಶಪಡಿಸಿ ಕೊಳ್ಳಬೇಕು. ಇದೂ ಅಲ್ಲದೆ 'ಸೋऽಹಂ' ಎಂಬ ಅಜಪಮಂತ್ರ ಧ್ಯಾನವನ್ನು ಮಾಡುತ್ತ ಬಂದರೆ ಈ ಹಾವು ನಿಂತಲ್ಲಿಯೇ ನಿಂತು, ಅಖಂಡ ಕಳೆಯಿಂದ ಪ್ರಕಾಶಿಸುತ್ತಿರುವುದು. ಶ್ವಾಸವೆಂಬ ಈ ಹಾವನ್ನು ಹಿಡಿದು ನಿಲ್ಲಿಸಿ ಯಾವ ಜೋಗಿಯು (ಹಾವಾಡಿಗನು) ತನ್ನ ವಶಪಡಿಸಿಕೊಳ್ಳುತ್ತಾನೆ ಯೋ, ಆತನನ್ನೇ ಜ್ಞಾನಿಗಳು 'ಸಿದ್ಧಗುರು' ಎಂದು ಕರೆಯುತ್ತಾರೆ.

ರಾಗ—ಮುಖಾರಿ—ಏಕತಾಳ.

ಊದುವ ತಿದಿಗಳ–ಮೇಲ್ಗಡೆಯಿರುವುದು–ಮನದೊಳು–ತಿಳಿಯೈ ಓ! ಅಣ್ಣಾ ॥
ತಿದಿಗಳ – ಮಧ್ಯದಿ – ಕಣ್ಗಳ – ಮೇಲ್ಗಡೆ ತನುವನು ಕಳೆವುದು ಓ
ಅಣ್ಣಾ! ॥ ಊದುವ ತಿದಿಗಳ ॥ ॥ ೧ ॥

ತನುವನು ಕಳೆವ 'ಸೋऽಹಂ' ಮಂತ್ರವು – ಕಾವನು ಪುಟ್ಟಿಪುದೋ ಅಣ್ಣಾ !
ಈ ಕಾವಿನ ಬೇಗೆಯ ಲೇಳ್ವುದು ಸರ್‍ರನೆ ಶ್ವಾಸದ ಸರ್ಪವು ಓ ಅಣ್ಣಾ !
ಊದುವ ತಿದಿಗಳ ‖ ‖ ೨ ‖

ಶಂಖ ಚಕ್ರಗಳ ನಟ್ಟನಡುವೆ ಆದಿಶೇಷನ ನೆಬ್ಬಿಸು ಓ ಅಣ್ಣಾ ! 'ಓಂ'ಕಾರಿ
ಸದೆಯ – ಯಿರುವುದು ಸರ್ಪವು – ಬಿಡದೆ ನೀನೆಬ್ಬಿಸು ಓ ಅಣ್ಣಾ !
ಊದುವ ತಿದಿಗಳ ‖ ‖ ೩ ‖

ಆರು ಚಕ್ರಗಳೊಳಗಡೆ ಹೊರಗಡೆ ಬಿಡದೆ ನಡೆಯುವುದೋ ಅಣ್ಣಾ ! ಆರು
ಚಕ್ರಂಗಳಲಿ ಶ್ವಾಸದ ಸರ್ಪವು ಅಧೋಮುಖವಾಗುವುದೋ ಅಣ್ಣಾ !
ಊದುವ ತಿದಿಗಳ ‖ ‖ ೪ ‖

ಎರಡು ಚಕ್ರಗಳ ಬಿಟ್ಟಿರುವುದು ಹಾವು ಕುಂಡಲಿ ಯೆಬ್ಬಿಸು ಓ ಅಣ್ಣಾ ! ಎರಡನು
ತಿಳಿದು ಮೇಲಕೆ ನಿಲಿಸಿದ ಪೋತಲೂರ ವೀರಣ್ಣಾ ‖ ಊದುವ ತಿದಿಗಳ ‖ ೫ ‖

ಹಿಂದೆ ಹೇಳಿದಂತೆ ಶ್ವಾಸವನ್ನು ಎರಡು ಮೂಗಿನ ಹೊಳ್ಳೆಗಳ ಮೂಲಕ ಊದಿ ಊದಿ ಅಂದರೆ ಒಂದರಿಂದೊಂದಕ್ಕೆ ತಿರುಗಿಸಿ ತಿರುಗಿಸಿ ಹೃದಯದ ಸಮೀಪದಲ್ಲಿರುವ ಶ್ವಾಸವೆಂಬ ಹಾವನ್ನು ತುಂಬಿ ಶ್ವಾಸಕೋಶಗಳಲ್ಲಿ ನಿಲ್ಲಿಸಿ ಎರಡು ಕಣ್ಣುಗಳ ಮೇಲ್ಗಡೆ ಅಂದರೆ ಹುಬ್ಬುಗಳ ನಡುಸ್ಥಳದಲ್ಲಿ ಅಜ್ಞಾನವನ್ನು ಹೋಗಲಾಡಿಸುವ 'ಓಂ'ಕಾರವೆಂಬ ಅಜಪಮಂತ್ರವನ್ನು ಜಪಮಾಡುತ್ತಿದ್ದುದೇ ಆದರೆ, ಆಗ ಅದರಿಂದುಂಟಾಗುವ ಉಷ್ಣಕ್ಕೆ ಶ್ವಾಸವೆಂಬ ಹಾವು ಕೋಪದಿಂದ ಸರ್‍ರನೆ ಎದ್ದುನಿಂತು ಆಡುತ್ತಿರುತ್ತದೆ. ಶಂಖ ಚಕ್ರಗಳೆಂಬ ಎಡಬಲ ಮೂಗಿನ ಹೊಳ್ಳೆಗಳಲ್ಲಿಯೂ ಶ್ವಾಸವೆಂಬ ಹಾವು ಹಗಲಿರುಳೂ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಗ್ನೇಯವೆಂಬ ಷಟ್ಚಕ್ರಗಳಲ್ಲಿಯೂ 'ಸೋऽಹಂ' ಎಂಬ ಅಜಪ ಮಂತ್ರದಿಂದ ತಲೆ ಕೆಳಗೂ ಬಾಲವು ಮೇಲಕ್ಕೂ ನೆಮ್ಮದಿಯಿಂದ ಎದ್ದು ನಡೆಯುತ್ತಿರುತ್ತದೆ. ಈ ಶ್ವಾಸವೆಂಬ ಸೂತ್ರವು ನಡೆಯುವಂಥ ಎರಡು ಮೂಗಿನ ಹೊಳ್ಳೆಗಳಿಗೆ ಮೇಲ್ಭಾಗದಲ್ಲಿ ಭ್ರೂಮಧ್ಯ ರಂಧ್ರವೊಂದೇ ಇರುತ್ತದೆ. ಈ ರಹಸ್ಯಗಳೆಲ್ಲವನ್ನೂ ಜನಗಳಿಗೆ ತೋರಿಸುವುದಕ್ಕಾಗಿಯೇ ಪರಮಶಿವನು ತನ್ನೆರಡು ಪಾದಗಳನ್ನೂ ಮೇಲಕ್ಕೆತ್ತಿ ನರ್ತನಮಾಡಿ ತೋರಿಸಿದನು.

ಹೀಗೆ ಯೋಗಾಭ್ಯಾಸವನ್ನು ಮಾಡುತ್ತಿರುವ ಪುರುಷನನ್ನು ಮುಚ್ಚಿಕೊಂಡಿರುವ ಮಾಯೆಯೆಂಬ ರಾಕ್ಷಸನನ್ನು ಪರಮಶಿವನು ತನ್ನ ಕಾಲಿನ ಕೆಳಕ್ಕೆ ಕೆಡವಿ ಅಣಗಿ ತುಳಿದು ಆ ಪುರುಷನಿಗೆ ಮೋಕ್ಷವನ್ನು ಕೊಡುತ್ತಿದ್ದಾನೆ. ಮತ್ತು ನಾವು ಹೊರಕ್ಕೆ ಬಿಡುತ್ತಿರುವ, ಮತ್ತೆ ಒಳಕ್ಕೆ ಸೆಳೆಯುತ್ತಿರುವ ಶ್ವಾಸಕ್ಕೆ 'ಪಾದ'ವೆಂಬ ಹೆಸರೂ ಉಂಟು. ಅದರಿಂದ ನಟರಾಜನು ತನ್ನ ಪಾದಗಳನ್ನು ಮೇಲೆತ್ತಿ ತೋರಿಸಿದನು. ಮತ್ತು ಈ ಶ್ವಾಸವು ಯಜ್ಞೋಪವೀತವೆಂದೂ, ಬ್ರಹ್ಮಸೂತ್ರವೆಂದೂ, ಹಂಸವೆಂದೂ, ಉಸಿರೆಂದೂ, ಜೀವನೆಂದೂ, ಪ್ರಾಣವೆಂದೂ, ಕುದುರೆಯೆಂದೂ, ಪಾದವೆಂದೂ, ತಂತುವೆಂದೂ ಹೀಗೆ ಅನೇಕ ನಾಮಗಳನ್ನು ಹೊಂದಿದೆ. ಇಂತಹ ಶ್ವಾಸವೆಂಬ ತಂತುವು ಯಾವುದೋ ಒಂದು ದಿನ ಹರಿದು ಮೂಗಿನ ಹೊಳ್ಳೆಯಿಂದ ಆಚೆಗೆ ಓಡುತ್ತದೆ. ಆದುದರಿಂದ ಶ್ವಾಸವೆಂಬ ಈ ತಂತುವು (ನೂಲು) ಶರೀರವನ್ನು ಬಿಟ್ಟು ಹೋಗುವುದಕ್ಕೆ ಮೊದಲೇ ಸ್ತ್ರೀಪುರುಷರೆಲ್ಲರೂ ಬಹಳ ಜಾಗ್ರತೆಯುಳ್ಳವರಾಗಿರಬೇಕು.

'ನಮಶ್ಶಿವಾಯ' ಎಂಬ ಪಂಚಾಕ್ಷರೀ ವಿಷಯವನ್ನು ಇಷ್ಟು ಹೇಳಿದ್ದಾಯಿತು. ಈ ಮಂತ್ರಾಕ್ಷರಗಳ ಮಹಿಮೆಯನ್ನು ಕುರಿತು ಶಂಕರಾಚಾರ್ಯರು ಹೀಗೆಂದು ಹೇಳಿರುತ್ತಾರೆ.

ಶ್ಲೋ ॥ ಓಂಕಾರ ಬಿಂದು ಸಂಯುಕ್ತಂ ♦ ನಿತ್ಯಂ ಧ್ಯಾಯಂತಿ ಯೋ ನರಃ ।
ಕಾಮದಂ ಮೋಕ್ಷದಂ ತಸ್ಮಾತ್ ♦ '**ಓಂ**'ಕಾರಾಯ ನಮೋ ನಮಃ ॥

ಓಂ ॥ ನಂ ॥ ನಮಂತಿ ಮುನಯ ಸ್ಸರ್ವೇ ♦ ನಮಂ ತ್ಯಪ್ಸರಸಾಂ ಗಣಾಃ ।
ನರಾಣಾ ಮಾದಿದೇವಾನಾಂ ♦ '**ನ**'ಕಾರಾಯ ನಮೋ ನಮಃ ॥

ಓಂ ॥ ಮಂ ॥ ಮಹತ್ತತ್ವಂ ಮಹಾದೇವ! ♦ ಪ್ರಿಯಂ ಜ್ಞಾನಪ್ರದಂ ಪರಂ ।
ಮಹಾಪಾಪಹರಂ ತಸ್ಮಾತ್ ♦ '**ಮ**'ಕಾರಾಯ ನಮೋ ನಮಃ ॥

ಓಂ ॥ ಶಿಂ ॥ ಶೈವಂ ಶಾಂತಂ ಶಿವಾಕಾರಂ ♦ ಶಿವಾನುಗ್ರಹಕಾರಣಂ ।
ಮಹಾಪಾಪಹರಂ ತಸ್ಮಾತ್ ♦ '**ಶಿ**'ಕಾರಾಯ ನಮೋ ನಮಃ ॥

ಓಂ ॥ ವಾಂ ॥ ವಾಹನಂ ವೃಷಭಂ ಯಸ್ಯ ♦ ವಾಸುಕೀಕಂಠಭೂಷಣಂ ।
ವಾಮಶಕ್ತಿಧರಂ ದೇವಂ ♦ '**ವ**'ಕಾರಾಯ ನಮೋ ನಮಃ ॥

ಓಂ ॥ ಯಂ ॥ ಯಕಾರೇ ಸಂಸ್ಥಿತೋ ದೇವೋ ♦ ಯಕಾರಂ ಪರಮಂ ಶುಭಂ ।
ಯಂ ನಿತ್ಯಂ ಪರಮಾನಂದಂ ♦ 'ಯ'ಕಾರಾಯ ನಮೋ ನಮಃ ॥

ಮತ್ತು ಶಿವಭುಜಂಗಸ್ತೋತ್ರದಲ್ಲಿ ಈ ಪಂಚಾಕ್ಷರಿಯನ್ನು ಕುರಿತು ಹೀಗೆಂದು ಹೇಳಿರುತ್ತಾರೆ.

ಗೀ ॥ ಶಿವಾಯೇತಿ ಶಬ್ದೋ ♦ ನಮಃ ಪೂರ್ವ ಏಷಃ ।
ಸ್ಮರನ್ ಮುಕ್ತಿಕೃ ♦ ನ್ಮೃತ್ಯುಹಾ ತತ್ವವಾಚೀ ॥
ಮಹೇಶೇತ್ಥಮಾರಾ ♦ ನ್ಮನಸ್ತಾಪಶಸ್ತ್ರಂ ।
ಸದಾ ಮಹ್ಯಮೇತತ್ ♦ ಪ್ರದಾನಂ ಪ್ರಯಚ್ಛ ॥

ಮಹೇಶ್ವರನ ಪರಮಭಕ್ತನಾದ ರಾವಣನೂ ಕೂಡ ಆ ಪರಮಾತ್ಮನ ನಿಜಸ್ವರೂಪವನ್ನೂ ಮತ್ತು ಅವನ ನರ್ತನದ ರಹಸ್ಯವನ್ನೂ ಕುರಿತು 'ಶಿವತಾಂಡವಸ್ತೋತ್ರ'ವೆಂಬುದರಲ್ಲಿ ಈ ಕೆಳಗೆ ಹೇಳಿದಂತೆ ತಿಳಿಸಿರುತ್ತಾನೆ.

ಪಂಚಚಾಮರ ವೃತ್ತ ॥

ಶ್ಲೋ ॥ ಜಟಾಕಟಾಹ ಸಂಭ್ರಮ ♦ ಭ್ರಮನ್ನಿಲಿಂಪನಿರ್ಝರೀ- ।
ವಿಲೋಲವೀಚಿವಲ್ಲರೀ ♦ ವಿರಾಜಮಾನ ಮೂರ್ಧನೀ ॥
ಧಗದ್ಧಗದ್ಧಗಜ್ಜ್ವಲ ♦ ಲ್ಲಲಾಟ ಪಟ್ಟಪಾವಕೇ ।
ಕಿಶೋರಚಂದ್ರಶೇಖರೇ! ♦ ರತಿಃ ಪ್ರತೀಕ್ಷಣಂ ಮಮ ॥

ಶ್ಲೋ ॥ ಅಗರ್ವಸರ್ವಮಂಗಳಾ ♦ ಕಳಾಕದಂಬ ಮಂಜರೀ ।
ರಸಪ್ರವಾಹಮಾಧುರೀ ♦ ವಿಜೃಂಭಣಾ ಮಧುವ್ರತಂ ॥
ಸ್ಮರಾಂತಕಂ ಪುರಾಂತಕಂ ♦ ಭವಾಂತಕಂ ಮಖಾಂತಕಂ ।
ಗಜಾಂತ ಕಾಂಧಕಾಂತಕಂ ♦ ತಮಂತಕಾಂತಕಂ ಭಜೇ ॥

ಶ್ಲೋ ॥ ಜಯತ್ವದಭ್ರ ವಿಭ್ರಮ ♦ ಭ್ರಮದ್ಭುಜಂಗ ಮಸ್ಫುರತ್ ।
ಧಗದ್ಧಗ ದ್ವಿನಿರ್ಗಮತ್ ♦ ಕರಾಳ ಬಾಲ ಹವ್ಯವಾಟ್ ॥
ಧಿಮಿ ದ್ಧಿಮಿ ದ್ಧಿಮಿಧ್ವನ ♦ ನ್ಮೃದಂಗ ತುಂಗ ಮಂಗಳ- ।
ಧ್ವನಿ ಕ್ರಮ ಪ್ರವರ್ತಿತ ♦ ಪ್ರಚಂಡ ತಾಂಡವ ಶ್ಶಿವಃ ॥

'ನಮಶ್ಶಿವಾಯ' ಎಂಬುದೇ ಪರಮಾತ್ಮನ ಸ್ವರೂಪವು. ಈ ಪಂಚಾಕ್ಷರಿಯೇ ಮುಕ್ತಿಸಾಧನೆಗೆ ಮಾರ್ಗ. 'ಸೋಽಹಂ' ಮಂತ್ರವೂ ಇದೇ. ಇದನ್ನು ಸದಾ ಜಪಿಸುತ್ತಾ ಬಂದ ಪುರುಷನು ಸಾಕ್ಷಾತ್ ಪರಬ್ರಹ್ಮನೇ ಆಗುತ್ತಾನೆ. ಎಂಬುದನ್ನು ಕುರಿತು, ಶ್ರೀ ಶಂಕರಾಚಾರ್ಯರು 'ಶಿವ ಪಂಚಾಕ್ಷರೀ ನಕ್ಷತ್ರಮಾಲಿಕಾ' ಎಂಬ ಇಪ್ಪತ್ತೇಳು ಶ್ಲೋಕಗಳುಳ್ಳ ಒಂದು ಪದ್ಯಮಾಲಿಕೆಯನ್ನು ರಚಿಸಿರುತ್ತಾರೆ. ಅದರಲ್ಲಿ ಕೆಲವನ್ನು ಮಟ್ಟಿಗೆ ಇಲ್ಲಿ ಕೊಟ್ಟಿದೆ.

ಶ್ಲೋ ॥ ಶ್ರೀಮದಾತ್ಮನೇ ಗುಣೈಕಸಿಂಧವೇ ♦ 'ನಮಶ್ಶಿವಾಯ' ।
ಧಾಮಲೇಶಧೂತಲೋಕಬಂಧವೇ ♦ 'ನಮಶ್ಶಿವಾಯ' ॥
ನಾಮಶೋಷಿತಾ ನಮದ್ಭವಾಂಧವೇ ♦ 'ನಮಶ್ಶಿವಾಯ' ।
ಪಾಮರೇತರಪ್ರಧಾನಬಂಧವೇ ♦ 'ನಮಶ್ಶಿವಾಯ' ॥

ಶ್ಲೋ ॥ ಅಪ್ರಮೇಯ ದಿವ್ಯಸುಪ್ರಭಾವತೇ ♦ 'ನಮಶ್ಶಿವಾಯ' ।
ಸತ್ಪ್ರಪನ್ನರಕ್ಷಣಸ್ವಭಾವತೇ ♦ 'ನಮಶ್ಶಿವಾಯ' ॥
ಸ್ವಪ್ರಕಾಶನಿಸ್ತುಲಾನುಭಾವತೇ ♦ 'ನಮಶ್ಶಿವಾಯ' ।
ವಿಪ್ರಡಿಂಭದರ್ಶಿತಾರ್ದ್ರಭಾವತೇ ♦ 'ನಮಶ್ಶಿವಾಯ' ॥

ಶ್ಲೋ ॥ ಶೂಲಿನೇ ನಮೋನಮಃ ಕಪಾಲಿನೇ ♦ 'ನಮಶ್ಶಿವಾಯ' ।
ಪಾಲಿನೇ ವಿರಿಂಚಿರುಂಡಮಾಲಿನೇ ♦ 'ನಮಶ್ಶಿವಾಯ' ॥
ಲೀಲಿನೇ ವಿಶೇಷರುಂಡಮಾಲಿನೇ ♦ 'ನಮಶ್ಶಿವಾಯ' ।
ಶೀಲಿನೇ ನಮಃಪ್ರಪುಣ್ಯಶಾಲಿನೇ ♦ 'ನಮಶ್ಶಿವಾಯ' ॥

ಶ್ಲೋ ॥ ಶಿವಪಂಚಾಕ್ಷರಮುದ್ರಾಂ ♦ ಚತುಃಪದೋಲ್ಲಾಸಪದ್ಯಮಣಿಘಟಿತಾಂ ।
ನಕ್ಷತ್ರಮಾಲಿಕಾ ಮಿಹ ದಧತ್ ♦ ಉಪಕಂಠಂ ನರೋ ಭವೇ ತ್ಸೋಮಃ ॥

ಅನೇಕ ಕನ್ನಡ ಕವಿಗಳೂ ಈ ಶಿವಪಂಚಾಕ್ಷರಿಯ ಮಹಿಮೆಯನ್ನು ಹೊಗಳಿದ್ದಾರೆ. ಅವುಗಳಲ್ಲಿ ಒಂದೆರಡು ಕನ್ನಡ ಪದ್ಯಗಳನ್ನು ಮಟ್ಟಿಗೆ ಇಲ್ಲಿ ಕೊಟ್ಟಿದೆ.

ಭಾಮಿನೀಷಟ್ಪದಿ ||

'ಓನ್ನಮಶ್ಶಿವ' ವೈಭವೋದ್ಧತ |
'ಓನ್ನಮಶ್ಶಿವ' ಪುರವಿರಾಜಿತ |
'ಓನ್ನಮಶ್ಶಿವ' ಗೌರಿದೇವೀಪತಿಯೆ ಪರಶಿವನೇ! ||
'ಓನ್ನಮಶ್ಶಿವ' ಶಕ್ತಿಧರಪಿತ |
'ಓನ್ನಮಶ್ಶಿವ' ವಿಷ್ಣುವಂದಿತ |
'ಓನ್ನಮಶ್ಶಿವ' ನೀನೆ ರಕ್ಷಿಸು ನಮ್ಮನನವರತ ||

ಭಾಮಿನೀಷಟ್ಪದಿ ||

ಈಡ ಪಿಂಗಳ ನಾಡಿಯೆರಡನು |
ಕೂಡಿ ರೇಚಕ ಪೂರಕಗಳೆಡೆ |
ಯಾಡುವುವು ಬಂಧಿಸುತ ಕುಂಭಕವನು ಸುಷುಮ್ನೆಯಲಿ ||
ಕೂಡಿ ಕುಂಡಲಿಯನು ವಿಭಾಗಿಸಿ |
ನೋಡಿ ನಿಮ್ಮನು ಕಂಡು ಭಜಿಸುವ |
ಗಾಢಭಕ್ತಿಯ ನಿತ್ತು ರಕ್ಷಿಸು ನಮ್ಮನನವರತ || (ಶಿವಭಕ್ತಿಸಾರ.)

ಎಡಗಡೆ ಹೊಳ್ಳೆಯಿಂದ ಉಸಿರನ್ನೇರಿಸುವುದೆಂಬ 'ರೇಚಕ' ಪ್ರಾಣಾಯಾಮವನ್ನೂ, ಬಲಗಡೆಯ ಹೊಳ್ಳೆಯಿಂದ ಉಸಿರನ್ನಿಳಿಸುವುದೆಂಬ 'ಪೂರಕ' ಪ್ರಾಣಾಯಾಮವನ್ನೂ ಮಾಡಿ, ಆಮೇಲೆ ಭ್ರೂಮಧ್ಯ ಭಾಗದಲ್ಲಿ ಉಸಿರನ್ನು ನಿಲ್ಲಿಸಿ 'ಕುಂಭಕ' ಪ್ರಾಣಾಯಾಮದಿಂದ ನಿಮ್ಮ ಸ್ವರೂಪವನ್ನು ಪ್ರತ್ಯಕ್ಷವಾಗಿ ನೋಡುವ ಸ್ಥೈರ್ಯವನ್ನು ಕೊಟ್ಟು ರಕ್ಷಿಸು, ಪರಶಿವನೇ!

ಈ ಮುಂದಿನ ಅಧ್ಯಾಯದಲ್ಲಿ ಯೋಗಾಭ್ಯಾಸವನ್ನು ಮಾಡುವ ವಿಷಯವನ್ನು ಕುರಿತು 'ಶ್ರೀ ಭಗವದ್ಗೀತ,' 'ಭಾಗವತ' ಮತ್ತು 'ಸೀತಾರಾಮಾಂಜನೇಯ' ಇವುಗಳ ಪ್ರಮಾಣಗಳನ್ನು ಕೊಟ್ಟಿದೆ.



# ಯೋಗಾಭ್ಯಾಸವಿಷಯುವನ್ನು ಕುರಿತು ಶ್ರೀ ಭಗವದ್ಗೀತೆ ಸೀತಾರಾಮಾಂಜನೇಯ ಮತ್ತು ಶ್ರೀ ಭಾಗವತ ಇವುಗಳ ಪ್ರಮಾಣಗಳು.

---

ಈ ಗ್ರಂಥಕರ್ತರು ಶ್ರೀ ಭಗವದ್ಗೀತೆಯ ಮೊದಲನೆಯ ಆರು ಅಧ್ಯಾಯಗಳನ್ನು ತೆಲುಗುಭಾಷೆಯಲ್ಲಿ ರಚಿಸಿರುತ್ತಾರೆ. ಅದರ ಕನ್ನಡಾನುವಾದವು ಕ್ಷಿಪ್ರದಲ್ಲಿಯೇ ಪ್ರಚುರವಾಗುತ್ತದೆ. ಈ ಗ್ರಂಥದ ಅಧ್ಯಾಯ 4-ಶ್ಲೋಕ, 29-30 ಇವುಗಳನ್ನು, ಪ್ರಾಣಾಯಾಮದ ವಿಷಯವನ್ನು ಕುರಿತು ಪ್ರಮಾಣಕ್ಕಾಗಿ ಈ ಕೆಳಗೆ ಕೊಟ್ಟಿದೆ.

ಶ್ಲೋ ॥ ಅಪಾನೇ ಜುಹ್ವತಿ ಪ್ರಾಣಂ ♦ ಪ್ರಾಣೇಽಪಾನಂ ತಥಾಽಪರೇ ।
ಪ್ರಾಣಾಪಾನಗತೀ ರುದ್ಧ್ವಾ ♦ ಪ್ರಾಣಾಯಾಮ ಪರಾಯಣಾಃ ॥

ಶ್ಲೋ ॥ ಅಪರೇ ನಿಯತಾಹಾರಾಃ ♦ ಪ್ರಾಣಾನ್ ಪ್ರಾಣೇಷು ಜುಹ್ವತಿ ॥

ಅರ್ಥ :—ಪ್ರಾಣಾಯಾಮಪರಾಯಣಾಃ=ಪ್ರಾಣಾಯಾಮವನ್ನು ಮಾಡುವಂಥ, ಅಪರೇ=ಕೆಲವರು, ಪ್ರಾಣಾಪಾನಗತೀಃ=ಪ್ರಾಣಾಪಾನಗಳ ಗತಿಗಳನ್ನು, ರುಧ್ವಾ=ತಡೆದು, ಪ್ರಾಣಂ=ಪ್ರಾಣವನ್ನು, ಅಪಾನೇ=ಅಪಾನದಲ್ಲಿ, ಜುಹ್ವತಿ=ಹೋಮ ಮಾಡುತ್ತಿದ್ದಾರೆ ಅಂದರೆ ಸೇರಿಸುತ್ತಿದ್ದಾರೆ. ಅಪರೇ=ಇನ್ನು ಕೆಲವರು, ನಿಯತಾಹಾರಾಃ=ಪಥ್ಯವಾದ ಮತ್ತು ಮಿತವಾದ ಆಹಾರವುಳ್ಳವರಾಗಿ, ಪ್ರಾಣಾನ್=ಪ್ರಾಣಗಳನ್ನು, ಪ್ರಾಣೇಷು=ಪ್ರಾಣಗಳಲ್ಲಿಯೇ, ಜುಹ್ವತಿ=ಹೋಮ ಮಾಡುತ್ತಿದ್ದಾರೆ.

ಕೃಷ್ಣ:—ಓ ಅರ್ಜುನಾ! ಯೋಗಯಜ್ಞವೆನ್ನುವುದು ನಿನಗೆ ಇನ್ನೂ ಚನ್ನಾಗಿ ಭೋಧೆಯಾಗದಿರಬಹುದು. ಪುನಃ ಅದೇ ವಿಷಯವನ್ನು ನಿನಗೆ

ಚನ್ನಾಗಿ ಮನದಟ್ಟುವಂತೆ ವಿವರಿಸಿ ಹೇಳುತ್ತೇನೆ ಕೇಳು. ಯೋಗವೆಂದರೆ ಪ್ರಾಣಾಯಾಮವು. ಪ್ರಾಣಾಯಾಮವೆಂದರೆ ಮೂಗಿನ ಹೊಳ್ಳೆಗಳ ಮೂಲಕ ನಡೆಯುತ್ತಿರುವ ಪ್ರಾಣವಾಯುವನ್ನು 'ಓಂ' ಎಂಬ ಪ್ರಣವ ಮಂತ್ರದಿಂದ ಒಳಕ್ಕೆಳೆದು ನಿಲ್ಲಿಸುವುದು.

ಈ ಪ್ರಾಣಾಯಾಮವು ಮೂರು ಅಂತಸ್ತಿನಿಂದ ಕೂಡಿದುದು. 'ರೇಚಕ,' 'ಪೂರಕ' ಮತ್ತು 'ಕುಂಭಕ' ಗಳೇ ಅವುಗಳು. ಅದರಲ್ಲಿ ರೇಚಕವೆಂದರೆ ಉಸಿರನ್ನು ಒಳಗಿನಿಂದ ಹೊರಕ್ಕೆ ಬಿಡುವುದು ಇದಕ್ಕೆ 'ನಿಶ್ವಾಸ'ವೆಂದು ಹೆಸರು. ಪೂರಕವೆಂದರೆ ಉಸಿರನ್ನು ತುಂಬುವುದು ಅಂದರೆ ವಾಯುವನ್ನು ಹೊರಗಿನಿಂದ ಮೂಗಿನ ಮೂಲಕ ಶರೀರದೊಳಕ್ಕೆ ಎಳೆಯುವುದು. ಇದಕ್ಕೆ 'ಉಚ್ಛ್ವಾಸ' ವೆಂದು ಹೆಸರು. ಇದಕ್ಕೆ ಅಪಾನವೆಂದೂ ಹೆಸರುಂಟು. ಈ ಅಪಾನವು ಗುದಸ್ಥಾನ ಮಾರ್ಗವಾಗಿ ಹೋಗುತ್ತಿರುತ್ತದೆ. 'ಕುಂಭಕ' ವೆಂದರೆ ವಾಯುವನ್ನು ಒಳಕ್ಕೂ ಹೊರಕ್ಕೂ ಹೋಗಗೊಡಿಸದೆ ನಿಲ್ಲಿಸುವುದು. ಇದರಲ್ಲಿ ಮೇಲ್ಭಾಗದಲ್ಲಿರುವುದು 'ಪ್ರಾಣ'ವೆಂದೂ ಕೆಳಭಾಗದಲ್ಲಿರುವುದು 'ಅಪಾನ' ವೆಂದೂ ಕರೆಯಲ್ಪಡುತ್ತವೆ. ಹೀಗೆ ಮೇಲಕ್ಕೆ ಕೆಳಕ್ಕೆ ನಡೆಯುತ್ತಿರುವ ಉಸಿರನ್ನು ಬಿಗಿಹಿಡಿದು ಸಾಧನಮಾಡುವವನು ಮೇಲ್ಭಾಗದಲ್ಲಿ ನಡೆಯುತ್ತಿರುವ ಪ್ರಾಣವಾಯುವನ್ನೂ ಕೆಳಭಾಗದಲ್ಲಿ ನಡೆಯುತ್ತಿರುವ ಅಪಾನವಾಯುವನ್ನೂ ಒಟ್ಟಿಗೆ ಸೇರಿಸುವವನಾಗುತ್ತಾನೆ· ಅಂದರೆ ಪ್ರಾಣಾಯಾಮವನ್ನು ಮಾಡುವವನು ಉಸಿರನ್ನು ಒಂದು ಮೂಗಿನಲ್ಲೆಳೆದು ಮತ್ತೊಂದರಲ್ಲಿ ಬಿಡುತ್ತಾನೆ. ಹೀಗೆ ಮಾಡುವುದರಿಂದ ಅವನು ಊರ್ಧ್ವವಾಯು ಅಧೋವಾಯುಗಳನ್ನು ಒಂದಾಗಿ ಸೇರಿಸುತ್ತಾನೆ. ಇದಕ್ಕೆ ಪ್ರಾಣಾಪಾನಗಳ ಸಂಯೋಗವೆಂದು ಹೆಸರು. ಇಂಥವನನ್ನು 'ಪ್ರಾಣವನ್ನು ಅಪಾನದಲ್ಲಿ ಹೋಮಮಾಡಿದವ'ನೆಂದು ಹೇಳುತ್ತಾರೆ. ಕೆಲವರು ಅಲ್ಪಾಹಾರವನ್ನು ಸೇವಿಸಿ ಪ್ರಾಣವಾಯುವನ್ನು ಹೊರಕ್ಕೆ ಬಿಡದೆ ನಿಲ್ಲಿಸುವರು. ಹೀಗೆ ಮಾಡುವುದಕ್ಕೆ 'ಕುಂಭಕ' ಪ್ರಾಣಾಯಾಮವೆಂದು ಹೆಸರು. ಇಂಥವರು ಪ್ರಾಣವಾಯುವನ್ನು ಬಂಧಿಸಿದವರಾಗುತ್ತಾರೆ; ಅಂದರೆ ಅವರು ಪಂಚಪ್ರಾಣಗಳ ವ್ಯಾಪಾರವಾದ ಉಚ್ಛ್ವಾಸ ನಿಶ್ವಾಸಾದಿಗಳನ್ನೂ,

ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ಉಪವಾಯುಗಳ ವ್ಯಾಪಾರಗಳನ್ನು ಸ್ತಂಭಿಸಿ ನಿಶ್ಚೇಷ್ಟಿತರಾಗಿರುತ್ತಾರೆ.

ಅರ್ಜುನ:—ಸ್ವಾಮಿಾ! ಆದರೆ ಪ್ರಾಣಾಯಾಮವನ್ನು ಮಾಡುವವನು ಪ್ರಾಣವಾಯುವನ್ನು ಬಂಧಿಸುತ್ತಾನೆ, ಎಂದು ನೀವು ಹೇಳುತ್ತಿದ್ದೀರಲ್ಲವೇ? ಶರೀರಸಾಧನೆಗಳಲ್ಲಿ ಇದೊಂದು ಸಾಧನೆಯಾಗಿದೆ. ಹೀಗೆ ಉಸಿರನ್ನು ಬಿಗಿಹಿಡಿಯುವ ಸಾಧನೆಗಳನ್ನು ಯಾರು ಮಾಡುತ್ತಾರೆಂದರೆ, ಗಾರುಡವಿದ್ಯೆಯಲ್ಲಿ ಪರಿಶ್ರಮವುಳ್ಳವರೇ ಹೊರತು ಬೇರಲ್ಲ. ಉಸಿರನ್ನು ಬಿಗಿಹಿಡಿದು ಆಕಾಶಮಾರ್ಗದಲ್ಲಿ ಕೇಕೆಹಾಕಿಕೊಂಡು ಹಾರುವ ವಿದ್ಯೆಯೇ ಗಾರುಡಿವಿದ್ಯೆಯು. ಈ ವಿದ್ಯೆಯನ್ನು ಜನಗಳು ಅತಿಯಾಗಿ ಭಾವಿಸುತ್ತಿರುವರಲ್ಲಾ, ಇದಕ್ಕೆ ಕಾರಣವೇನು? ಇಂತಹ ಶರೀರಸಾಧನೆಗಳಿಂದ ಯೋಗಾಭ್ಯಾಸವನ್ನು ಮಾಡುವವರಿಗೆ ಉಂಟಾಗುವ ಪ್ರಯೋಜನವಾದರೂ ಯಾವುದು?

ಕೃಷ್ಣ:—ಅರ್ಜುನಾ! ನೀನು ಹೇಳಿದಂತೆ ಗಾರುಡಿವಿದ್ಯೆಯನ್ನು ಬಲ್ಲವರು ಈ ಲೋಕದಲ್ಲಿ ಲೆಕ್ಕವಿಲ್ಲದಷ್ಟಿದ್ದಾರೆ. ಇಂಥವರಿಗೂ ಯೋಗಾಭ್ಯಾಸವನ್ನು ಮಾಡುವವರಿಗೂ ಬಹಳ ವ್ಯತ್ಯಾಸವಿದೆ. ಅದು ಹೇಗೆಂದರೆ, ಗಾರುಡಿವಿದ್ಯೆಯನ್ನು ಕಲಿತವರು ಆ ವಿದ್ಯೆಯನ್ನು ಇತರರ ಮುಂದೆ ತೋರಿಸಿ ಆದರಿಂದ ಹಣವನ್ನು ಗಳಿಸಿ ಹೊಟ್ಟೆಹೊರೆದುಕೊಳ್ಳುತ್ತಾರೆ; ಆದರೆ ಯೋಗಾಭ್ಯಾಸವನ್ನು ಮಾಡುವವರಾದರೋ, ಅದನ್ನು ಮಾಡುತ್ತ ಮಾಡುತ್ತ ಮನಸ್ಸನ್ನು ಅತ್ತಿತ್ತ ಕದಲದೆ ಒಂದೇಕಡೆ ನಿಲ್ಲುವಂತೆ ಮಾಡಿ ಮೋಕ್ಷವನ್ನು ಸಾಧಿಸುವುದಕ್ಕೆ ಯತ್ನಿಸುತ್ತಾರೆ. ಅಂದರೆ ಯೋಗವು ಮೋಕ್ಷಕ್ಕೆ ಸಾಧನೆಯು ಎಂದು ತಿಳಿಯಬೇಕು.

ಅರ್ಜುನ:—ಸ್ವಾಮಿಾ! 'ಕೆಲವರು ಅಲ್ಪಾಹಾರವನ್ನು ಸೇವಿಸಿ ಪ್ರಾಣವಾಯುವನ್ನು ಹೊರಕ್ಕೆ ಬಿಡದೆ ಒಳಗೇ ನಿಲ್ಲಿಸುವರೆಂದು ಹೇಳಿದರಲ್ಲವೇ? ಹೊಟ್ಟೆಯ ತುಂಬ ಭುಜಿಸಿ ಪ್ರಾಣವಾಯುವನ್ನು ಏಕೆ ಬಂಧಿಸಬಾರದು?

ಕೃಷ್ಣ:—ಅರ್ಜುನಾ! ಪ್ರಾಣಾಯಾಮವನ್ನು ಮಾಡುವವರು ಶ್ವಾಸವನ್ನು ಒಳಕ್ಕೆಳೆದು ಗರ್ಭದಲ್ಲಿ ಅದನ್ನು ನಿಲ್ಲಿಸುತ್ತಾರೆ. ಆ ಸಮಯದಲ್ಲಿ ಗರ್ಭದಲ್ಲಿ ಆಹಾರವಿದ್ದದ್ದೇ ಆದರೆ, ಶ್ವಾಸವನ್ನು ನಿಲ್ಲಿಸುವುದಕ್ಕೆ ಸಾಧ್ಯವಾಗದೆ ಹೊಟ್ಟೆಯೊಡೆಯುವಂತೆ ಅವರಿಗೆ ತೋರುತ್ತದೆ. ಶ್ವಾಸವನ್ನು ಎಳೆದು ಗರ್ಭದಲ್ಲಿ ನಿಲ್ಲಿಸುವಾಗ ಹೊಟ್ಟೆಯಲ್ಲಿ ಯಾವ ಆಹಾರವೂ ಇಲ್ಲದೆ ಬರಿಯದಾಗಿದ್ದರೆ ಈ ಯೋಗಾಭ್ಯಾಸಕ್ಕೆ ಬಹಳ ಅನುಕೂಲವಾಗಿರುತ್ತದೆ. ಇದೇ ಅಲ್ಪಾಹಾರದಿಂದಾಗುವ ಉಪಯೋಗ. ಉಸಿರನ್ನು ಗರ್ಭದಲ್ಲಿ ನಿಲ್ಲಿಸಿ ಯೋಗಾಭ್ಯಾಸವನ್ನು ಸಾಧಿಸುತ್ತ ಬರಬರಲು ಅಂಥವರಿಗೆ ಹಸಿವೇ ಇರಲಾರದು. ಯಾವಾಗ ಹಸಿವಿಲ್ಲದಿರುತ್ತದೆಯೋ ಆಗ ಅವರು ವಾಯು ಭಕ್ಷಕರಾಗುತ್ತಾರೆ.

ಶ್ಲೋ ॥ "ಯಥಾ ಯಥಾ ಸದಾಽಭ್ಯಾಸಾತ್ ♦ ಪುನಸಃ ಸ್ಥಿರತಾ ಭವೇತ್ ।
ವಾಯುವಾಕ್ಕಾಯದೃಷ್ಟೀನಾಂ ♦ ಸ್ಥಿರತಾ ಚ ತಥಾ ತಥಾ" ॥

ಪ್ರಾಣಾಯಾಮವನ್ನು ಮಾಡುತ್ತ ಬರಬರಲು ಕ್ರಮಕ್ರಮವಾಗಿ ಮನಸ್ಸಿನ ವ್ಯಾಪಾರಗಳೆಲ್ಲವೂ ಸ್ವಲ್ಪಸ್ವಲ್ಪವಾಗಿ ತಗ್ಗುತ್ತಲೇ ಬರುತ್ತವೆ. ಮನೋವ್ಯಾಪಾರವು ತಗ್ಗುತ್ತ ಬರಲು ಪ್ರಾಣಾದಿ ದಶವಾಯುಗಳ ವೇಗವು ಅಣಗುವುದು. ಅವುಗಳ ವೇಗವಣಗಿದ ತಕ್ಷಣವೇ ಮೂಗಿನ ಹೊಳ್ಳೆಗಳ ಮೂಲಕ ಆಡುತ್ತಿರುವ ಉಚ್ಛ್ವಾಸ ನಿಶ್ವಾಸಗಳು ನಿಂತುಹೋಗುತ್ತವೆ. ಇವುಗಳು ನಿಂತ ತಕ್ಷಣವೇ ಇಂದ್ರಿಯವ್ಯಾಪಾರಗಳೆಲ್ಲವೂ ನಾಶಹೊಂದಿ ಜೀವವಿಲ್ಲದ ಶವದಂತೆಯೂ ಕಲ್ಲು ಬೊಂಬೆಯಂತೆಯೂ ಸಮಾಧಿನಿಷ್ಠೆಯಲ್ಲಿಯೇ ಜನಗಳು ನಿಂತಿರುವರು. ಇದೇ ಯೋಗದಿಂದುಂಟಾಗುವ ಫಲಿತಾರ್ಥವು. ಶ್ರೀ ಭಗವದ್ಗೀತೆ ಅಧ್ಯಾಯ 6-ಶ್ಲೋಕ, 41-42.

ಶ್ಲೋ ॥ ಪ್ರಾಪ್ಯ ಪುಣ್ಯಕೃತಾಂ ಲೋಕಾನ್ ♦ ಉಷಿತ್ವಾ ಶಾಶ್ವತೀ ಸ್ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ ♦ ಯೋಗಭ್ರಷ್ಟೋಽಭಿಜಾಯತೇ ॥

ಶ್ಲೋ ॥ ಅಥವಾ ಯೋಗಿನಾಮೇವ ♦ ಕುಲೇ ಭವತಿ ಧೀಮತಾಂ ।
ಏತದ್ಧಿ ದುರ್ಲಭತರಂ ♦ ಲೋಕೇ ಜನ್ಮ ಯದೀದೃಶಂ ॥

ಅರ್ಥ :—ಯೋಗಭ್ರಷ್ಟಃ = ಯೋಗಭ್ರಷ್ಟನು, ಪುಣ್ಯಕೃತಾಂ = ಪುಣ್ಯಮಾಡಿದವರ, ಲೋಕಾನ್=ಸ್ವರ್ಗಾದಿ ಲೋಕಗಳನ್ನು, ಪ್ರಾಪ್ಯ=ಹೊಂದಿ, ಶಾಶ್ವತೀಸ್ಸಮಾಃ=ಅನೇಕ ಸಂವತ್ಸರಗಳವರಿವಿಗೂ, ಉಷಿತ್ವಾ=ವಾಸಮಾಡಿ, ಶುಚೀನಾಂ=ಸದಾಚಾರಸಂಪನ್ನರಾದ, ಶ್ರೀಮತಾಂ=ಶ್ರೀಮಂತರ, ಗೇಹೇ=ಮನೆಯಲ್ಲಿ, ಅಭಿಜಾಯತೇ=ಹುಟ್ಟುತ್ತಾನೆ. ಅಥವಾ = ಹಾಗಿಲ್ಲದಿದ್ದರೆ, ಧೀಮತಾಂ=ಬುದ್ಧಿವಂತರಾದ ಅಂದರೆ ಜ್ಞಾನಿಗಳಾದ, ಯೋಗಿನಾಮೇವ=ಯೋಗಿಗಳ, ಕುಲೇ=ವಂಶದಲ್ಲಿ, ಭವತಿ=ಹುಟ್ಟುತ್ತಾನೆ. ಈದೃಶಂ ಜನ್ಮ=ಯೋಗಿಗಳ ವಂಶದಲ್ಲಿನ ಇಂತಹ ಜನ್ಮವು, ಯತ್=ಯಾವುದುಂಟೋ, ಏತದ್ಧಿ=ಅದೇ ಅಲ್ಲವೇ, ಲೋಕೇ=ಈ ಲೋಕದಲ್ಲಿ, ದುರ್ಲಭತರಂ=ಮಹಾ ದುರ್ಲಭವಾದದ್ದು.

ಕೃಷ್ಣ :—ಅರ್ಜುನಾ! ಯೋಗಾಭ್ಯಾಸವನ್ನು ಮಾಡಿ ಯೋಗಭ್ರಷ್ಟನಾಗಿ ಮೃತಿಹೊಂದದ್ದೇ ಆದರೆ, ಅಂಥವನು ಎಂದಿಗೂ ನರಕಲೋಕವನ್ನು ಸೇರನು. ಯೋಗಾಭ್ಯಾಸವೆಂಬುದು ಬಹು ಕಷ್ಟವಾದ ಬ್ರಹ್ಮವಿದ್ಯೆ. ಯೋಗವಿದ್ಯೆಯಷ್ಟು ಕಷ್ಟವು ಮತ್ತಾವುದೂ ಇಲ್ಲವು. ಇಂತಹ ಶ್ರಮಸಾಧ್ಯವಾದ ವಿದ್ಯೆಯನ್ನು ಸಾಧನೆಮಾಡುವುದರಿಂದ ಯೋಗಾಭ್ಯಾಸವನ್ನು ಮಾಡುತ್ತಿರುವಂತೆಯೇ ಶರೀರವನ್ನು ಬಿಟ್ಟವನು ತನಗೆ ಒಂದು ಕವಡೆಯಾದರೂ ಖರ್ಚಿಲ್ಲದೆ, ಸಾವಿರಾರು ಯಜ್ಞಗಳನ್ನು ಮಾಡಿದವನಿಗೆ ಲಭಿಸಬಹುದಾದ ದೇವತಾಶರೀರದಿಂದ ದೇವಲೋಕಸುಖವನ್ನು ಚಿರಕಾಲ ಅನುಭವಿಸಿ, ಅನಂತರ ಆ ಶರೀರವನ್ನು ಬಿಟ್ಟು ಈ ಭೂಲೋಕದಲ್ಲಿ ಆಚಾರಸಂಪನ್ನರಾದ ಶ್ರೀಮಂತರ ಮನೆಯಲ್ಲಿ ಪುನಃ ಹುಟ್ಟುವನು. ಇನ್ನೂ ಹೆಚ್ಚಾಗಿ ಯೋಗಸಾಧನೆಯನ್ನು ಪಡೆದಿದ್ದೇ ಆದರೆ, ಅತನು ಜ್ಞಾನೈಶ್ವರ್ಯಸಂಪನ್ನರ ಮನೆಯಲ್ಲಿ ಜನ್ಮವೆತ್ತುವನು. ಇದೇ ಅತಿ ಶ್ರೇಷ್ಠವಾದ ಜನ್ಮವು. ಏಕೆಂದರೆ,

ಕಂ ॥ ಧನವ ನುಳ್ಳವನು ಮೃತ್ಯುವ-
ದನಮೊಳ ಗಿರುವಂತೆ ಭಯುವ ♦ ವನ ಚಿತ್ತದೊಳುಂ ॥
ಜನಿಸಲು ಗಡಗಡ ನಡುಗುವ ।
ನೆನೆ ಶಿಖಿ ಚೋರಾದಿ ಮುಖ್ಯ ♦ ವಿಷಯಾಪದಕುಂ ॥

ಕಂ ॥ ಕೋಪವನುಂ ಲೋಭವನುಂ ।
ಕಾಪಾಡಲಿ!ಕದನು ನರನು ♦ ಮನದೊಳು ಚಿಂತಾ- ॥

ತಾಪವನೊಂದುವ ಸಧನಂ।
ಗಾಪದವಲ್ಲದೆ ಯದರಿಂ ♦ ಸುಖವುಂ ಬಹುದೇ ? ।

(ಪರಿವರ್ತನೆ–ತೆಲುಗು ಭಾರತ, ಶಾಂತಿ, 4ನೇ ಅಧ್ಯಾಯ.)

ಐಶ್ವರ್ಯವಂತನ ಮನೆಯಲ್ಲಿ ಹುಟ್ಟಿದುದೇ ಆದರೆ, ಅವನ ಮನಸ್ಸು ಹಣವನ್ನು ಸಂಪಾದಿಸುವುದರಲ್ಲಿಯೇ ಇರುತ್ತದೆ. ಮತ್ತು ಅದನ್ನು ಕಾಪಾಡುವುದಕ್ಕಾಗಿ ಅದರಿಂದ ಯಾವಾಗಲೂ ಕೋಪತಾಪಾದಿಗಳು ಮನಸ್ಸಿನಲ್ಲಿ ಹುಟ್ಟುತ್ತಲೇ ಇರುತ್ತವೆ. ಈ ಧನದಿಂದ ಮನುಷ್ಯನಿಗೆ ಅಪತ್ತುಂಟಾಗುವುದಲ್ಲದೆ ಸುಖವೆಂದಿಗಾದರೂ ಉಂಟಾಗುವುದೇ ? ಇಂಥವನು ಪೂರ್ವಜನ್ಮದ ಯೋಗವಾಸನೆಯಿಂದ ಯೋಗವನ್ನಭ್ಯಾಸಮಾಡಿದರೂ, ಅದು ಅವನಿಗೆ ನಿರ್ವಿಘ್ನವಾಗಿ ನೆರವೇರಲಾರದು. ಹಾಗಿಲ್ಲದೆ ದ್ರವ್ಯವಿಲ್ಲದೆ ಬಡವರಾಗಿರುವ ಯೋಗಿಗಳ ಮನೆಯಲ್ಲಿ ಹುಟ್ಟಿದ್ದೇ ಆದರೆ, ದ್ರವ್ಯವನ್ನು ಸಂಪಾದಿಸುವುದು, ಅದನ್ನು ಕಾಪಾಡುವುದು ಮೊದಲಾದ ವ್ಯಾಪಾರಗಳಾವುವೂ ಆ ಯೋಗಿಗೆ ಇಲ್ಲದಿರುವುದರಿಂದ ಅವನ ಮನಸ್ಸು ಕಪಟವಿಲ್ಲದೆ ನಿರ್ಮಲವಾಗಿಯೂ ನಿಶ್ಚಿಂತವಾಗಿಯೂ ಇರುತ್ತದೆ. ಈ ಯೋಗಿವಂಶದಲ್ಲಿ ಹುಟ್ಟಿದವರಿಗೆ ಯೋಗಾಭ್ಯಾಸವೆಂಬುದು ಪಾರಂಪರ್ಯವಾಗಿ ಬರುತ್ತಿರುವುದರಿಂದ ಅವನಿಗೆ ಆ ಜನ್ಮದಲ್ಲಿ ಯೋಗವನ್ನು ಅಭ್ಯಾಸಮಾಡುವುದಕ್ಕೆ ಹಿಂದಿನ ಜನ್ಮಕ್ಕಿಂತಲೂ ಅತಿ ಸುಲಭಸಾಧ್ಯವಾಗಿರುತ್ತದೆ. ಆದುದರಿಂದ ಯೋಗವಂಶದಲ್ಲಿ ಹುಟ್ಟುವುದೇ ಶ್ರೇಷ್ಠವಾದುದು. ಶ್ರೀ ಭಗವದ್ಗೀತೆ ಅಧ್ಯಾಯ 6, ಶ್ಲೋಕ 43.

ಶ್ಲೋ ॥ ತತ್ರ ತಂ ಬುದ್ಧಿಸಂಯೋಗಂ ♦ ಲಭತೇ ಪೌರ್ವದೈಹಿಕಂ ।
ಯತತೇ ಚ ತತೋ ಭೂಯಃ ♦ ಸಂಸಿದ್ಧೌ ಕುರುನಂದನ ! ॥

ಅರ್ಥ :—ಹೇಕುರುನಂದನ !=ಓ ಅರ್ಜುನಾ !, ತತ್ರ=ಆ ಮರುಜನ್ಮದಲ್ಲಿ, ಪೌರ್ವದೈಹಿಕಂ = ಹಿಂದಿನಜನ್ಮದ ಸಂಬಂಧವಾದುದಾಗಿಯೂ, ಬುದ್ಧಿಸಂಯೋಗಂ = ಜ್ಞಾನ ಹಿತವಾದುದಾಗಿಯೂ, ತತ್=ಅದನ್ನು (ಪೂರ್ವಜನ್ಮದಲ್ಲಿ ಕಡಿಮೆಬಿದ್ದ ಯೋಗವನ್ನು), ಲಭತೇ=ಹೊಂದುತ್ತಾನೆ. ತತಃ=ಹಾಗೆ ಹೊಂದುವುದರಿಂದ, ಸಂಸಿದ್ಧೌ= ಯೋಗಸಿದ್ಧಿ ವಿಷಯವಾಗಿ, ಭೂಯಃ=ಪುನಃ, ಯತತೇ ಚ=ಯತ್ನವನ್ನು ಕೂಡ ಮಾಡುತ್ತಿದ್ದಾನೆ.

ಆದುದರಿಂದ ಓ ಅರ್ಜುನಾ ! ಅವನು ಅಂಥಯೋಗಿಗಳ ವಂಶದಲ್ಲಿ ಹುಟ್ಟಿದುದೇ ಆದರೆ ಅವನೇನು ಮಾಡುವನೆಂದರೆ,

ಕಂ ॥ ಹರಿಚರಣಾಂಬುಜ ಮಕರಂ-।
ದ ರಸಾವೇಶಿತ ಮನಃಪ್ರ ♦ ಧಾನಸಾದ ಸ-॥
ತ್ಪುರುಷಗೆ ವಿಘ್ನಗಳಾವಗು ।
ಬರಲಿಕ್ಕವ ಪೂರ್ವಮಾರ್ಗ ♦ ವಸು ಬಿಡದಿರುವಂ ॥

(ಪರಿವರ್ತನೆ–ತೆಲುಗು ಭಾಗವತ, 5ನೇ ಸ್ಕಂದ.

ಪೂರ್ವಜನ್ಮದಲ್ಲಿ ಸ್ವಲ್ಪಮಟ್ಟಿಗಾದರೂ ಯೋಗವನ್ನಭ್ಯಾಸಮಾಡಿ ಭಗವದ್ಧ್ಯಾನವನ್ನು ಮಾಡಿದವನು ಆ ವಾಸನೆಯಿಂದ ಈ ಜನ್ಮದಲ್ಲಿಯೂ ಪುನಃ ಆ ಯೋಗವನ್ನೇ ಅಭ್ಯಾಸಮಾಡಬೇಕೆಂಬುವ ಬುದ್ಧಿಯುಂಟಾಗುತ್ತದೆ. ಅಂತಹ ಬುದ್ಧಿಯು ಯಾವಾಗ ಹುಟ್ಟುತ್ತದೆಯೋ, ಆಗ ಪುನಃ ಆ ಯೋಗವನ್ನು ಅಭ್ಯಸಿಸುವುದಕ್ಕೆ ತಕ್ಕ ಪ್ರಯತ್ನವನ್ನು ತಕ್ಷಣವೇ ಮಾಡುತ್ತಿರುತ್ತಾನೆ.

ಆದುದರಿಂದ ಓ ಸಹೋದರ ಸಹೋದರಿಯರೇ ! ಈ ಗ್ರಂಥದಲ್ಲಿ ಇನ್ನು ಮುಂದೆ ವಿವರಿಸಲ್ಪಡುವ ಯೋಗಾಭ್ಯಾಸಕ್ರಮವನ್ನು ಗ್ರಹಿಸಿ ಸಾಧನೆಮಾಡುವುದಕ್ಕಾಗಿ ಈ ಯೋಗದ ಮಹಿಮೆಯನ್ನೆಲ್ಲಾ ನಿಮಗೆ ಶ್ರೀ ಭಗವದ್ಗೀತೆಯೊಳಗಿನ ಪ್ರಮಾಣಗಳೊಡನೆ ಹೇಳುತ್ತ ಬಂದುದಾಯಿತು. ಆದುದರಿಂದ ನೀವು ಈ ಜನ್ಮದಲ್ಲಿ ಯೋಗವನ್ನು ಎಷ್ಟು ಮಾಡಿ ಬಿಟ್ಟರೂ ಅದರ ಫಲವು ವ್ಯರ್ಥವಾಗದೇ ಮರುಜನ್ಮದಲ್ಲಿ ಈ ಯೋಗವನ್ನೇ ಅಭಿವೃದ್ಧಿಮಾಡುತ್ತದೆ. ಇದಕ್ಕೆ ವಿಷ್ಣುಪುರಾಣವನ್ನು ಪ್ರಮಾಣಕ್ಕಾಗಿ ಈ ಕೆಳಗೆ ಹೇಳಿದೆ.

ಶ್ಲೋ ॥ ಅನಿಷ್ಪನ್ನಸಮಾಧಿಸ್ತು ♦ ಪರಬ್ರಹ್ಮೋಪಲಬ್ಧಿಮಾ೯ ।
ಅತ್ಯಂತರಾಯಡೋಷೇಣ ♦ ದುಷ್ಯತೇ ಹಿ ಸ್ವಮಾನಸೇ ॥

ಶ್ಲೋ ॥ ವಿನಿಷ್ಪನ್ನಸಮಾಧಿಸ್ತು ♦ ಮುಕ್ತಿ ಮತ್ರೈವ ಜನ್ಮನಿ ।
ಪ್ರಾಪ್ನೋತಿ ಯೋಗೀ ಯೋಗಾಗ್ನಿ ♦ ದಗ ಕರ್ಮ ಸ ನೋ ಚಿರಾತ್ ॥

ಯೋಗಾಭ್ಯಾಸವನ್ನು ಮಾಡುವವನಿಗೆ ಆ ಜನ್ಮದಲ್ಲಿಯೇ ಬ್ರಹ್ಮ ಪದವಿಯು ಸಿದ್ಧಿಸದೆ ಹೋದರೂ, ಮರುಜನ್ಮದಲ್ಲಿ ಯೋಗಾಭ್ಯಾಸವನ್ನು ಮಾಡಿ ಆ ಬ್ರಹ್ಮಪದವಿಯನ್ನು ಅವನು ಹೊಂದುವನು. ಆಗಲೂ ಬ್ರಹ್ಮ ಪದವಿಯು ದೊರಕದಿದ್ದರೆ, ಯಾವ ಜನ್ಮದಲ್ಲಿ ಯೋಗಾಭ್ಯಾಸವೆಂಬ ಅಗ್ನಿಯಿಂದ ಪುಣ್ಯಪಾಪಗಳೆಂಬ ಎರಡು ಕರ್ಮಗಳನ್ನೂ ಭಸ್ಮವಾಗಿ ಮಾಡಿ ಸಂಚಿತದ ಹೊರೆಗಳನ್ನು ಹೋಗಲಾಡಿಸಿಕೊಳ್ಳುತ್ತಾನೋ, ಆ ಕ್ಷಣವೇ ಬ್ರಹ್ಮಪದವಿಯನ್ನು ಹೊಂದುವವನಾಗುತ್ತಾನೆ. ಮತ್ತು ಶ್ರೀ ಭಗವದ್ಗೀತೆ ಅಧ್ಯಾಯ 6, ಶ್ಲೋಕ 45.

ಶ್ಲೋ ॥ ಪ್ರಯತ್ನಾದ್ಯತಮಾನಸ್ತು ♦ ಯೋಗೀ ಸಂಸಿದ್ಧಕಿಲ್ಬಿಷಃ ।
ಅನೇಕಜನ್ಮಸಂಸಿದ್ಧಃ ♦ ತತೋ ಯಾತಿ ಪರಾಂ ಗತಿಂ ॥

ಅರ್ಜುನಾ! ಮೋಕ್ಷಪ್ರಾಪ್ತಿಗಾಗಿ ಅನೇಕ ಜನ್ಮಗಳಿಂದ ಮಾಡುತ್ತ ಬಂದ ಪುಣ್ಯಪಾಪಗಳೆಂಬ ಕರ್ಮಗಳನ್ನು ಯೋಗಾಗ್ನಿಯಿಂದ ನಾಶ ಮಾಡುತ್ತ ಬರಬೇಕು. ಹಾಗೆ ಅವುಗಳೆಲ್ಲವನ್ನೂ ನಾಶಮಾಡಿದಮೇಲೆ ಮೋಕ್ಷವನ್ನು ಸುಲಭವಾಗಿ ಪಡೆಯಬಹುದು. ಅಂದರೆ ಸಂಚಿತ ಪ್ರಾರಬ್ಧ ಆಗಾಮಿಯೆಂಬ ಮೂರುವಿಧ ಕರ್ಮಗಳು ನಶಿಸಿದ ಹೊರತು ಮೋಕ್ಷವೆಂಬುದು ದೊರಕಲಾರದು. ಈ ಕರ್ಮಗಳು ಯೋಗಾಭ್ಯಾಸದಿಂದ ನಶಿಸುವುವಲ್ಲದೆ ಮತ್ತಾವುದರಿಂದಲೂ ನಶಿಸಲಾರವು. ಮತ್ತು ಅಧ್ಯಾಯ 6, ಶ್ಲೋಕ 46ನ್ನು ಪ್ರಮಾಣಕ್ಕಾಗಿ ಈ ಮುಂದೆ ಹೇಳಿದೆ.

ಶ್ಲೋ ॥ ತಪಸ್ವಿಭ್ಯೋಽಧಿಕೋ ಯೋಗೀ ♦ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ♦ ತಸ್ಮಾದ್ಯೋಗೀ ಭವಾರ್ಜುನ! ॥

ಕೃಷ್ಣ :—ಅರ್ಜುನಾ! ಯೋಗವನ್ನು ಕುರಿತು ಮತ್ತಷ್ಟು ಹೇಳುತ್ತೇನೆ, ಕೇಳು. ಶಾಸ್ತ್ರಪಂಡಿತರಿಗಿಂತಲೂ, ಸತ್ಕರ್ಮಾನುಷ್ಠಾನಪರರಿಗಿಂತಲೂ, ಜ್ಞಾನಿಗಳಿಗಿಂತಲೂ, ತಪಸ್ವಿಗಳಿಗಿಂತಲೂ, ಯೋಗಿಯೇ ಮಹಾ ಶ್ರೇಷ್ಠನೆಂದು ನನ್ನ ಅಭಿಪ್ರಾಯವು. ಆದುದರಿಂದ ಯೋಗಾಭ್ಯಾಸವನ್ನೇ ನೀನು ಮಾಡುತ್ತಿರಬೇಕು.

ಅರ್ಜುನ:—ಓ ಸ್ವಾಮಿೀ! ಯೋಗಿಯು ತಪಸ್ವಿಗಳಿಗಿಂತಲೂ ಶ್ರೇಷ್ಠನೆಂದು ಹೇಳುವುದಕ್ಕೆ ಕಾರಣವೇನು?

ಕಂ ॥ ತಪವು ನಿಧಾನವು ಧರ್ಮ-।
ಪ್ರಪಂಚಗಳೆಲ್ಲವದರ ♦ ಕ್ರಮದಲಿ ವ್ರತ ತಂ- ॥
ತ್ರ ಪರಾಯಣ ರೆಸಗುತಿಹ ರ।
ಧಿಪ! ಫಲಮೂಲಾಂಬುವೃತ್ತಿ ♦ ತೃಪ್ತಿಯೊಂದುತಲಿ ॥

ಪರಿವರ್ತನೆ-(ತೆಲುಗು- ಭಾರತ ಶಾಂತಿ, 3 ಅ.)

ಎಂಬಂತೆ ಈ ಪ್ರಪಂಚದಲ್ಲಿರುವ ಸಮಸ್ತ ಧರ್ಮಗಳಲ್ಲಿ ತಪಸ್ಸೇ ಮಹಾ ಶ್ರೇಷ್ಠವೆಂದೆಣಿಸಿ ಹಿರಿಯರು ಆಚರಿಸುತ್ತಿರುವಂತೆ ನಾವು ಕೇಳಿರುತ್ತೇವಲ್ಲವೇ? ಹಾಗಿರಲು, ಅಂತಹ ತಪಸ್ಸನ್ನು ಮಾಡುವವರಿಗಿಂತಲೂ ಯೋಗಿಗಳು ಅದು ಹೇಗೆ ಶ್ರೇಷ್ಠರೆಂದೆನಿಸುವರು?

ಕೃಷ್ಣ:—ಅರ್ಜುನಾ! ನಿನ್ನ ಮಾತು ಸತ್ಯವೇ ಸರಿ. ತಪಸ್ಸೆಂತಹುದೆಂಬುದನ್ನು ಹೇಳುತ್ತೇನೆ ಕೇಳು.

ಕಂ ॥ ನೆನೆ ಯಶನನಿಗ್ರಹವು ತಪ-।
ವೆನು ವಭಿಧಾನವ ನುಳ್ಳ ಮ ♦ ಹಾಧರ್ಮವು ತ ॥
ದ್ಧನಪಂತನ ಚಿತ್ತ ವಶಗತಿ।
ಜನ ವಖಿಲಸ್ಥಾವರಗಳು ♦ ಜಂಗಮತತಿಗಳ್ ॥

ಪರಿವರ್ತನೆ-(ತೆಲುಗು-ಭಾರತ ಶಾಂತಿ, 3 ಅ.)

ಎಂಬಂತೆ ಆಹಾರವನ್ನು ಬಿಟ್ಟು ಆಚರಿಸಬೇಕಾದುದು ತಪಸ್ಸು. ಹೀಗೆ ಆಹಾರವನ್ನು ಬಿಟ್ಟು ಇರುವ ಶಕ್ತಿಯಾವನಿಗುಂಟೋ, ಅವನಿಗೆ ಈ ತಪಸ್ಸು ಸಿದ್ಧಿಸುವುದೇ ಹೊರತು, ಉಳಿದವರಿಗೆಂದಿಗೂ ಸಿದ್ಧಿಸದು. ತಪಸ್ಸಿದ್ಧಿಯು ಉಂಟಾಯಿತೆಂದರೆ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ವಶವಾಗುತ್ತದೆ. ಆದರೆ ಇಂದ್ರಿಯನಿಗ್ರಹವು ಮತ್ತು ಮನೋನಿಗ್ರಹವು ಇವುಗಳನ್ನು ಪಡೆಯುವುದೇ ಎಷ್ಟೋ ಕಷ್ಟವಾಗಿರುವಲ್ಲಿ ದೇಹಧಾರಣೆಗೆ ಅತಿ ಮುಖ್ಯವಾದ ಆಹಾರವನ್ನು ತ್ಯಜಿಸಿ ತಪಸ್ಸಾಧನೆಯನ್ನು

ಮಾಡುವುದು ಎಷ್ಟು ಕಷ್ಟವೆಂಬ ವಿಷಯವನ್ನು ನೀನೇ ಆಲೋಚಿಸಿ ನೋಡು. ಯೋಗಿಯಾದವನು ಈ ಬಗೆಯಾಗಿ ಆಹಾರವನ್ನು ಬಿಡಬೇಕಾದ ಅವಶ್ಯಕತೆಯಿಲ್ಲವು. ಹಸಿವಾದಾಗ ತನಗೆ ಬೇಕಾದ್ದರಲ್ಲಿ ಸ್ವಲ್ಪ ಭಾಗ ಆಹಾರವನ್ನು ಭುಜಿಸಿ ಇಂದ್ರಿಯಮನೋನಿಗ್ರಹಗಳನ್ನು ಮಾತ್ರವೇ ಮಾಡುತ್ತ ಬಂದರೆ ಯೋಗವು ಸಿದ್ಧಿಸುತ್ತದೆ. ಆದುದರಿಂದ ತಪಸ್ಸಿಗಿಂತಲೂ ಯೋಗವೇ ಶ್ರೇಷ್ಠವಾದುದೆಂದು ಹೇಳುವುದಕ್ಕೆ ಕಾರಣವಾಯಿತು.

ಅರ್ಜುನ:—ಒಳ್ಳೆಯದು. ಹಿಂದೆ ಅಧ್ಯಾಯ 4 ಶ್ಲೋಕ 39 ರಲ್ಲಿ ಜ್ಞಾನವೇ ಎಲ್ಲದಕ್ಕಿಂತಲೂ ಶ್ರೇಷ್ಠವೆಂದೂ, ಇಂತಹ ಜ್ಞಾನವನ್ನು ಹೊಂದಿದವನು ಶೀಘ್ರವಾಗಿ ಮೋಕ್ಷವನ್ನು ಪಡೆಯಬಲ್ಲನೆಂದೂ ಹೇಳಿದ್ದಿರಲ್ಲವೇ? ಹಾಗಿರಲು ಜ್ಞಾನಿಗಿಂತಲೂ ಯೋಗಿಯೇ ಶ್ರೇಷ್ಠನು ಎಂದು ಹೇಳಲು ಕಾರಣವೇನು?

ಕೃಷ್ಣ:—ಜ್ಞಾನಗಳಲ್ಲಿ ಎರಡು ಬಗೆಗಳುಂಟು. ಅವು ಯಾವುವೆಂದರೆ, 'ಶಾಸ್ತ್ರಜ್ಞಾನ' ಮತ್ತು 'ಆತ್ಮಜ್ಞಾನ'. ಶಾಸ್ತ್ರಜ್ಞಾನವೆಂದರೆ ಇತಿಹಾಸ ಪುರಾಣಶಾಸ್ತ್ರಾದಿಗಳನ್ನು ಪಠಿಸಿ ಅವುಗಳಲ್ಲಿರುವ ವಿಷಯವೆಲ್ಲವನ್ನು ಗ್ರಹಿಸುವಿಕೆ. ಸದಸದ್ವಿವೇಕವುಂಟಾಗಿ ಪರಮಾತ್ಮಸ್ವರೂಪವೆಂಥದೆಂದು ತಿಳಿಯುವಿಕೆಗೆ ಆತ್ಮಜ್ಞಾನವೆಂದು ಹೆಸರು. ಇವೆರಡರಲ್ಲಿ ಆತ್ಮಜ್ಞಾನವೇ ಬಹು ಶ್ರೇಷ್ಠವಾದುದು. ಇದಿದ್ದರೆ ಆದಷ್ಟು ಬೇಗ ಮುಕ್ತಿಯನ್ನು ಪಡೆಯಬಹುದು. ಶಾಸ್ತ್ರಜನ್ಯಜ್ಞಾನದಿಂದ ಈ ಬಗೆಯ ಪ್ರಯೋಜನವಿರದು. ಆದುದರಿಂದ ಶಾಸ್ತ್ರಜ್ಞಾನಿಗಿಂತಲೂ ಯೋಗಿಯೇ ಶ್ರೇಷ್ಠನು. ಮತ್ತು ಯೋಗಿಯೇ ಸತ್ಕರ್ಮಾನುಷ್ಠಾನಪರರಿಗಿಂತಲೂ ಶ್ರೇಷ್ಠನು, ಎಂದು ಹೇಳುವುದಕ್ಕೆ ಕಾರಣವೇನೆಂದರೆ:—ಈ ಲೋಕದಲ್ಲಿರುವವರು ಯಾವುದೋ ಒಂದು ಫಲವನ್ನಾಶ್ರಯಿಸಿ ಸತ್ಕರ್ಮಾನುಷ್ಠಾನುಷ್ಠಾನಗಳನ್ನು ಮಾಡುತ್ತಿದ್ದಾರೆ. ಹಾಗೆ ಮಾಡಿ ಅವುಗಳ ಫಲಗಳನ್ನು ಈ ಜನ್ಮದಲ್ಲಿ ಅವರು ಅನುಭವಿಸದೆ ಹೋದರೂ, ಇನ್ನು ಮುಂದೆ ಎತ್ತಬಹುದಾದ ಜನ್ಮದಲ್ಲಿ ತಪ್ಪದೆ ಅವನ್ನು ಅನುಭವಿಸಬೇಕು. ಅಂದರೆ ಕೆಲವು ಜನರು ಭೋಗಭಾಗ್ಯಗಳನ್ನು ಅನುಭವಿಸಬೇಕೆಂದೆಣಿಸಿ ದಾನಧರ್ಮಾದಿ

ಗಳನ್ನು ಮಾಡುತ್ತಿರುವರು. ಕೆಲವರು ಮಕ್ಕಳನ್ನು ಪಡೆಯಬೇಕೆಂದು ಕಾಶೀ ರಾಮೇಶ್ವರಾದಿ ತೀರ್ಥಯಾತ್ರೆಗಳನ್ನು ಮಾಡಿ ಆಯಾ ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿ, ದಾನಧರ್ಮಾದಿ ಕಾರ್ಯಗಳನ್ನು ನೆರವೇರಿಸಿ, ನಾಗಪ್ರತಿಷ್ಠೆ, ಅಶ್ವತ್ಥಪ್ರದಕ್ಷಿಣೆ ಮೊದಲಾದ ಕಾಮ್ಯಕರ್ಮಗಳನ್ನು ಮಾಡುವರು. ಮತ್ತೆ ಕೆಲವರು ಸ್ವರ್ಗಾದಿ ಭೋಗಗಳನ್ನಪೇಕ್ಷಿಸಿ ನೂರಾರು ಯಜ್ಞಗಳನ್ನು ಮಾಡುತ್ತಾರೆ. ಹೀಗೆ ಇಂತಹ ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳುವವರು ಮೇಲೆ ಹೇಳಿದಂತೆ ಬೇರೆಬೇರೆ ಅನೇಕ ಕಾಮ್ಯ ಕರ್ಮಗಳನ್ನು ಮಾಡುತ್ತಾರೆ. ಆದರೆ ಯೋಗಿಯಾದರೋ, ತಾನೂ ಮೇಲೆ ಹೇಳಿದವರಂತೆಯೇ ಅನೇಕ ಸತ್ಕರ್ಮಗಳನ್ನು ಮಾಡಿದರೂ, ಅದನ್ನು ಭಗವತ್ಪ್ರೀತಿಗಾಗಿ ಮಾಡುವನೇ ಹೊರತು, ಸ್ವಪ್ರಯೋಜನವನ್ನು ಕೋರಿಯಲ್ಲ. ಆದುದರಿಂದ ಸತ್ಕರ್ಮಾನುಷ್ಠಾನಪರರಲ್ಲಿ ಯೋಗಿಯೇ ಶ್ರೇಷ್ಠನೆಂದು ನಿರ್ಧರಿಸಿದ್ದಾಯಿತು. ಮತ್ತು ಭಗವದ್ಗೀತೆ, ಅಧ್ಯಾಯ 6, ಶ್ಲೋಕ 47, ಏನು ಹೇಳುತ್ತದೆಂದರೆ,

ಶ್ಲೋ ॥ ಯೋಗಿನಾ ಮಪಿ ಸರ್ವೇಷಾಂ ♦ ಮದ್ಗತೇ ನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ♦ ಸ ಮೇ ಯುಕ್ತತಮೋ ಮತಃ ॥

ಓ ಅರ್ಜುನಾ! ಆದರೆ, ಅಂತಹ ಯೋಗಿಗಳಲ್ಲಿಯೂ ತಾರತಮ್ಯ ವುಂಟೆಂದು ಹೇಗೆ ಹೇಳುತ್ತೀರೆಂದು ಕೇಳುವೆಯಾ? ಹೇಳುತ್ತೇನೆ ಕೇಳು. ಯೋಗವೆಂದರೆ ಕಣ್ಣು, ಮೂಗು, ಬಾಯಿ, ಕಿವಿ, ಚರ್ಮಗಳೆಂಬ ಪಂಚೇಂದ್ರಿಯವ್ಯಾಪಾರಗಳನ್ನೂ ಮನೋವ್ಯಾಪಾರವನ್ನೂ ನಿಗ್ರಹಿಸಿ ಬುದ್ಧಿಯನ್ನು ನನ್ನಲ್ಲಿ ನೆಲೆಸುವಂತೆ ಮಾಡುವುದು. ಹೀಗೆ ನಿಶ್ಚಲಭಕ್ತಿಯಿಂದ ನನ್ನನ್ನು ಯಾವನು ನಿರಂತರವಾಗಿ ಧ್ಯಾನಮಾಡುತ್ತಾನೆಯೋ, ಅವನೇ ಯೋಗಿಗಳಲ್ಲಿ ಶ್ರೇಷ್ಠನು. ಈ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ತೆಲುಗು ಭಾಗವತದ 2ನೇ ಸ್ಕಂದದಲ್ಲಿ ಹೀಗೆಂದು ಹೇಳಿದೆ.

ಗದ್ಯ ॥ "ಸಂಸಾರಪ್ರವರ್ತಕನಿಗೆ ತಪೋಯೋಗಾದಿಗಳೆಂಬ ಮೋಕ್ಷಮಾರ್ಗಗಳನೇಕವಿರುವುವು; ಅದರಲ್ಲಿ ಭಕ್ತಿಮಾರ್ಗಕ್ಕಿಂತಲೂ ಶುಭಕರವಾದುದು ಮತ್ತಾವುದೂ ಇಲ್ಲವು."–(ಪರಿವರ್ತನೆ.)

ಅರ್ಜುನ:—ಅಯ್ಯಾ! ಕೃಷ್ಣಮೂರ್ತಿ! ಮನಸ್ಸನ್ನು ಯೋಗದಲ್ಲಿಯೇ ನಿಲ್ಲಿಸುವುದು ಕಷ್ಟಸಾಧ್ಯವಾಗಿರುವಾಗ, ಅಂತಹ ಪ್ರಯತ್ನವಿಲ್ಲದೆಯೇ ಮನಸ್ಸನ್ನು ನಿಲ್ಲಿಸುವುದಕ್ಕೆ ಹೇಗೆ ಸಾಧ್ಯವಾದೀತು? ಹಾಗೆ ನಿಲ್ಲಿಸುವವರು ಪ್ರಪಂಚದಲ್ಲಿರುವರೇನು?

ಕೃಷ್ಣ:—ಆಹಾ! ಹಾಗೆ ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ನಿಲ್ಲಿಸುವವರೂ ಇದ್ದಾರೆ. ಇದಕ್ಕೆ ಅನೇಕ ದೃಷ್ಟಾಂತಗಳಿವೆ, ಕೇಳು. ಪೂರ್ವದಲ್ಲಿ ಕೃತಯುಗದಲ್ಲಿ ಯೋಗಸಿದ್ಧಿಯನ್ನು ಹೊಂದಿ ಸ್ವಲ್ಪ ಕರ್ಮಶೇಷವಿದ್ದದ್ದರಿಂದ ಮರುಜನ್ಮದಲ್ಲಿ ಪರಮಭಾಗವತೋತ್ತಮನಾದ ಪ್ರಹ್ಲಾದನು ಅವತರಿಸಿ, ತನ್ನ ಬಾಲ್ಯದಲ್ಲಿಯೇ ಯೋಗಾಭ್ಯಾಸದಿಂದ ತನಗೇನೂ ಪ್ರಯೋಜನವಿಲ್ಲದ್ದರಿಂದ ನನ್ನಲ್ಲಿ ನಿಶ್ಚಲಭಕ್ತಿಯುಳ್ಳವನಾಗಿ ಯಾವ ವಿಷಯಚಿಂತೆಯೂ ಇಲ್ಲದೆ ಇದ್ದನು. ಆತನ ಚರ್ಯೆಗಳು ಹೇಗಿದ್ದವೆಂದರೆ:—ಶ್ರೀಮದ್ಭಾಗವತ 7ನೇ ಸ್ಕಂದ, 4ನೇ ಅಧ್ಯಾಯ, ಶ್ಲೋಕ 32, 33, 34ರಲ್ಲಿ ಹೀಗೆಂದು ಹೇಳಿದೆ.

ಶ್ಲೋ॥ ಬ್ರಹ್ಮಣ್ಯ ಶ್ಶೀಲಸಂಪನ್ನಃ ♦ ಸತ್ಯಸಂಧೋ ಜಿತೇಂದ್ರಿಯಃ ।
ಆತ್ಮವ ತ್ಸರ್ವಭೂತಾನಾಂ ♦ ಏಕಃ ಪ್ರಿಯಸುಹೃತ್ತಮಃ ॥

ಶ್ಲೋ॥ ದಾಸವ ತ್ಸನ್ನತಾರ್ಯಾಂಘ್ರಿಃ ♦ ಪಿತೃವ ದ್ದೀನವತ್ಸಲಃ ।
ಭ್ರಾತೃವ ತ್ಸದೃಶ ಸ್ಸ್ನಿಗ್ಧೋ ♦ ಗುರು ಷ್ವೀಶ್ವರಭಾವನಃ ॥

ಶ್ಲೋ॥ ನೋದ್ವಿಗ್ನಚಿತ್ತೋ ♦ ವ್ಯಸನೇಷು ನಿಸ್ಪೃಹಃ ।
ಶ್ರುತೇಷು ದೃಷ್ಟೇಷು ♦ ಗುಣೇಷ್ವವಸ್ತುದೃಕ್ ॥
ದಾಂತೇಂದ್ರಿಯಪ್ರಾಣ ♦ ಶರೀರಧೀ ಸ್ಸದಾ ।
ಪ್ರಶಾಂತಕಾಮೋ ♦ ರಹಿತಾ ಸುರೋಽಸುರಃ ॥

ಗದ್ಯ॥ "ಈರೀತಿಯಾಗಿ ಸದ್ಗುಣಗರಿಷ್ಠನಾದ ಪ್ರಹ್ಲಾದನು ಭಗವಂತನಾದ ಶ್ರೀ ವಾಸುದೇವನಲ್ಲಿ ಸಹಜಸಂವರ್ಧಮಾನಧ್ಯಾನರತನಾಗಿ,"

ಸೀ ॥ ಶ್ರೀವಲ್ಲಭನು ತನ್ನ ♦ ಸೇರಿಕೊಂಡಿರ್ಪಂತೆ,
ಜೊತೆಗಾರರಂ ಸೇರು ♦ ವುದನೆ ಮರೆವ ;
ನಸುರಾರಿ ತನ್ನೆಡೆಯೊ ♦ ಳಾಡುತ್ತಲಿರ್ಪಂತೆ,
ದೈತ್ಯಬಾಲರೊಡನಾ ♦ ಡುವದ ಮರೆವ ;
ಭಕ್ತವತ್ಸಲನು ಸಂ ♦ ಭಾಷಿಸುತಲಿರ್ಪಂತೆ,
ಪರಭಾಷೆ ಗಳಿಗುತ್ತ ♦ ರವನೆ ಮರೆವ ;
ಸುರವಂದ್ಯ ತನ್ನೊಳಗೆ ♦ ನೋಡುತ್ತಲಿರ್ಪಂತೆ,
ಸರ್ವವಂ ತಾ ನೋಡು ♦ ವುದನೆ ಮರೆವ ;

ತೇ ॥ ಹರಿಪದಾಂಭೋಜಯುಗಚಿಂತ ♦ ನಾಮೃತದೊಳ
ಗಂತರಂಗವು ತುಂಬಿರು ♦ ವಂತೆ ಯಾತ
ನಿತ್ಯಪರಿಪೂರ್ಣನಾಗಿ ನ ♦ ನ್ನಿಯನೆ ಮರೆತು,
ಜಡತೆಯಿಲ್ಲದೆ ಮೆರೆವ ತಾ ♦ ಜಡನ ತೆರದಿ ॥

ಶಾ ॥ ಪಾನೀಯಂಗಳ ನಿತ್ಯ ತಾಂ ಕುಡಿಯುತಂ ♦ ಮಾತಾಡುತಂ ಹಾಸಲೀ-।
ಲಾ ನಿದ್ರಾದಿಗಳೊಂದುತಂ ತಿರುಗುತಂ ♦ ನೋಡುತ್ತಲುಂ ಸಂತತ ॥
ಶ್ರೀನಾರಾಯಣ ಪಾದಪದ್ಮಯುಗಳೀ ♦ ಚಿಂತಾಮೃತಾಸ್ವಾದ ಸಂ-।
ಧಾನಂ ಪೊಂ ದಸುರಾತ್ಮಜಂ ಮರೆತ ನೇ ♦ ತದ್ವಿಶ್ವಮುಂ ಭೂವರಾ ! ॥

ಸೀ ॥ ವೈಕುಂಠಚಿಂತಾ ವಿ ♦ ವರ್ಜಿತ ಚೇಷ್ಟನೆಂ-
ದೋರ್ವ ತಾ ನಳುತಿರುವ ♦ ನೊಂದೆಡೆಯೊಳು ;
ಅಶ್ರಾಂತಹರಿಭಾವ ♦ ನಾರೂಢಚಿತ್ತನೆಂ-
ದುತ್ಸುಕದಿ ಪಾಡುತಿಹ ♦ ನೊಂದೆಡೆಯೊಳು ;
ವಿಷ್ಣುದೇವನ ಬಿಟ್ಟು ♦ ಬೇರೊಬ್ಬನಿಲ್ಲವೆನು-
ತೊತ್ತಿ ತಾ ನಗುತಿರುವ ♦ ನೊಂದೆಡೆಯೊಳು ;
ನಳಿನಾಕ್ಷನೆಂಬ ನಿಧಿ ♦ ಯನು ಕಂಡೆ ನಾನೆನುತ
ಲುಬ್ಬಿ ಕೇಕೆಯ ಹಾಕು ♦ ವೊಂದೆಡೆಯೊಳು ॥

ಆ ॥ ನುಡಿವ ನೊಂದೆಡೆಯೊಳು ♦ ಪರಮೇಶ ಮಾಧವ ।
ಪ್ರಣಯಹರ್ಷಜನಿತ ♦ ಬಾಷ್ಪಸಲಿಲ ॥

ಮಿಳಿತಪುಲಕನುಂ ನಿಮಿಾ ♦ ಲಿತನೇತ್ರನುಂ ತಾ ।
ನೊಂದೆಡೆಯೊಳು ನಿಂದು ♦ ಸುಮ್ಮನಿರುವ ॥ (ಕನ್ನಡ ಪರಿವರ್ತನೆ.)

(ತೆಲುಗು ಭಾಗವತಂ, 7ನೇ ಸ್ಕಂದ, 4ನೇ ಅಧ್ಯಾಯ ಶ್ಲೋಕ 122-123-124.)

ಆ ಪ್ರಹ್ಲಾದನು ಬ್ರಹ್ಮಜ್ಞಾನವುಳ್ಳವನು, ಒಳ್ಳೆಯ ಸ್ವಭಾವವುಳ್ಳವ, ಸತ್ಯಸಂಧ, ಜಿತೇಂದ್ರಿಯ, ಸಮಸ್ತ ಚರಾಚರಗಳನ್ನೂ ಸಮನಾಗಿ ನೋಡುವವ, ಸನ್ಮಿತ್ರರಲ್ಲಿ ಅಗ್ರಗಣ್ಯ, ಪೂಜ್ಯರಲ್ಲಿ ದಾಸನ ಭಾವವನ್ನು ತೋರಿಸುವವ, ತಂದೆಯಂತೆ ದೀನರನ್ನು ಕಾಪಾಡುವವ, ಎಲ್ಲಾ ಜನಗಳಲ್ಲಿಯೂ ಸಹೋದರ ವಾತ್ಸಲ್ಯವನ್ನು ತೋರಿಸುವವ, ಮಹಾ ಪ್ರೇಮ ಸಂಪನ್ನ, ಗುರುಗಳನ್ನು ದೈವವೆಂದು ಭಾವಿಸುವವನು ಮತ್ತು ಆತನು ದುಃಖದಿಂದ ಕಳವಳಪಡದಿರುವವನು, ಯಾವುದರಲ್ಲಿಯೂ ಅತ್ಯಾಸಕ್ತಿಯನ್ನಿಡದವನು, ಕಿವಿಯಿಂದ ಕೇಳಿದ ಮತ್ತು ಕಣ್ಣಿಂದ ಕಂಡ ಶಬ್ದಾಕಾರಗಳನ್ನುಳ್ಳ ವಸ್ತುಗಳಲ್ಲಿ ನಶ್ವರಭಾವವನ್ನು ಹೊಂದಿರುವವ, ಇಂದ್ರಿಯಗಳು, ಪ್ರಾಣ, ಶರೀರ, ಬುದ್ಧಿ ಇವುಗಳನ್ನು ನಿಗ್ರಹಿಸಿದಂಥವನು ಮತ್ತು ಶಾಂತ ಚಿತ್ತವುಳ್ಳವನು ಮತ್ತು ಆಸುರಯೋನಿಯಲ್ಲಿ ಹುಟ್ಟಿದ್ದರೂ ಆಸುರಗುಣಗಳಿಂದಂಟದವನು.

ಇದೂ ಅಲ್ಲದೆ, ಆ ಪ್ರಹ್ಲಾದನು, ಶ್ರೀಪತಿಯಾದ ವಿಷ್ಣುವು ತನ್ನೊಡನೆ ಸದಾ ಸೇರಿರುವನೆಂದು ತಿಳಿದು ಇತರ ಜೊತೆಗಾರರೊಡನೆ ಸೇರುವುದಕ್ಕೆ ಇಚ್ಛೆಪಡನು. ರಾಕ್ಷಸಾಂತಕನಾದ ಆ ವಿಷ್ಣುವು ತನ್ನೊಡನೆ ಸರ್ವದಾ ಆಡುತ್ತಿರುವನೆಂದು ತಿಳಿದು ಮತ್ತಾವ ಬಾಲರೊಡನೆಯೂ ಆಡುವುದಕ್ಕೆ ಮನಗೊಡನು. ಭಕ್ತವತ್ಸಲನಾದ ಪರಮಾತ್ಮನು ಸದಾ ತನ್ನೊಡನೆ ಸಂಭಾಷಿಸುತ್ತಿದ್ದಾನೆಂದರಿತು ಇತರರು ಆಡಿದ ಮಾತಿಗೆ ಉತ್ತರಕೊಡುವುದನ್ನೇ ಮರೆಯುತ್ತಿದ್ದನು. ದೇವವಂದ್ಯನಾದ ಆ ನಾರಾಯಣನನ್ನು ತನ್ನಲ್ಲಿಯೇ ಸದಾ ನೋಡುತ್ತಿದ್ದನಾದುದರಿಂದ ಉಳಿದ ಪ್ರಾಪಂಚಿಕ ವಸ್ತುಗಳಾವುದನ್ನೂ ನೋಡುವುದಕ್ಕೆ ಇಚ್ಛಿಸನು. ಹೀಗೆ ಆತನು ನಿರಂತರವೂ ತನ್ನಲ್ಲಿ ತುಂಬಿರುವ, ನಿತ್ಯಪರಿಪೂರ್ಣನಾದ ಶ್ರೀಹರಿಯ ಪಾದಪದ್ಮಗಳನ್ನು ನಿಷ್ಠನಾಗಿ ಧ್ಯಾನಿಸುತ್ತಿದ್ದನಾದುದರಿಂದ

ತಾನು ಜಡನಲ್ಲದಿದ್ದರೂ ಇತರ ಜನಗಳಿಗೆ ಜಡನಂತೆ ಕಾಣುತ್ತಿದ್ದನು. ಮತ್ತೆ ಆ ಪ್ರಹ್ಲಾದನು ತಾನು ಕುಡಿಯುವಾಗಲೂ, ತಿನ್ನುವಾಗಲೂ, ಮಾತಾಡುವಾಗಲೂ, ಹಾಸ್ಯ ಕ್ರೀಡೆ ನಿದ್ರೆ ಇವುಗಳನ್ನು ಮಾಡುವಾಗಲೂ, ತಿರುಗಾಡುತ್ತಿರುವಾಗಲೂ, ಪದಾರ್ಥಗಳನ್ನು ನೋಡುತ್ತಿರುವಾಗಲೂ ಅಂದರೆ ಸರ್ವ ಕಾಲದಲ್ಲಿಯೂ ಶ್ರೀಮನ್ನಾರಾಯಣನ ದಿವ್ಯ ಪಾದಯುಗ್ಮಗಳನ್ನು ಸ್ಮರಿಸುವುದರಿಂದುಂಟಾಗುವ ಆನಂದಾಮೃತವನ್ನು ಕುಡಿದು ಸೊಕ್ಕಿ ಈ ಪ್ರಾಪಂಚಿಕ ವಸ್ತುಗಳೆಲ್ಲವನ್ನೂ ಮರೆತವನಾದನು.

ಮೇಲೆ ಹೇಳಿದುವುಗಳಲ್ಲದೆ, ಶ್ರೀ ಮಹಾವಿಷ್ಣುವಿನ ಚಿಂತೆಯನ್ನು ಬಿಟ್ಟುಬಿಟ್ಟೆನೆಂದು ಒಂದು ಕಡೆ ಕುಳಿತುಕೊಂಡು ಅಳುತ್ತಿರುವನು. ಎಡೆಬಿಡದೆ ಶ್ರೀಮನ್ನಾರಾಯಣನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿದ್ದೇನೆಂದು ಬಹು ಸಂತೋಷದಿಂದ ಒಂದು ಸ್ಥಳದಲ್ಲಿ ಹಾಡುತ್ತಿರುವನು. ಶ್ರೀ ಮಾಧವನ ವಿನಹ ಬೇರೊಬ್ಬ ದೈವವೇ ಇಲ್ಲವೆಂದು ಒಂದು ಕಡೆ ನಿಂತು ನಗುತ್ತಿರುವನು. ಆ ನಳಿನಾಕ್ಷನೆಂಬ ನಿಧಿಯನ್ನು ನಾನು ಕಂಡೆನು ಎಂದು ಉಬ್ಬಿ ಕೇಕೆಯನ್ನು ಹಾಕುತ್ತ ಒಂದು ಕಡೆಯಲ್ಲಿರುವನು. ಒಂದು ಕಡೆ ಆ ಪರಮಾತ್ಮನ ಮಹಿಮೆಯನ್ನು ಹೊಗಳುತ್ತಿರುವನು. ಮತ್ತೊಂದು ಕಡೆ ಆ ವೈಕುಂಠನಲ್ಲಿ ತನಗಿರುವ ಪ್ರೇಮದಿಂದ ಹುಟ್ಟಿದ ಆನಂದಬಾಷ್ಪದಿಂದ ರೋಮಾಂಚಿತನಾಗಿ ಕಣ್ಣು ಮುಚ್ಚಿ ಒಂದೆಡೆ ಸುಮ್ಮನೆ ನಿಂತಿರುವನು. ಹೀಗೆ ಸದಾ ಪರಮಾತ್ಮನಲ್ಲಿ ನಟ್ಟಮನಸ್ಸುಳ್ಳ ಪ್ರಹ್ಲಾದಬಾಲಕನು ವರ್ತಿಸುತ್ತಿದ್ದನು.

ಮತ್ತು, ಪ್ರಾಣಾಯಾಮಾಭ್ಯಾಸವನ್ನು ಕುರಿತು ಶ್ರೀ ಭಗವದ್ಗೀತೆ 6ನೇ ಅಧ್ಯಾಯ, ಶ್ಲೋಕ 11, 12, 13, 14ನೇ ಶ್ಲೋಕಗಳನ್ನು ಪ್ರಮಾಣಕ್ಕಾಗಿ ಈ ಮುಂದೆ ಹೇಳಿದೆ.

ಕೃಷ್ಣ :—ಅರ್ಜುನಾ ! ಯೋಗವನ್ನು ಯಾವ ರೀತಿಯಲ್ಲಿ ಅಭ್ಯಾಸ ಮಾಡಬೇಕೆಂಬುದಿದೆಯೋ ಅದನ್ನು ಇಲ್ಲಿ ಹೇಳುತ್ತೇನೆ ಕೇಳು.

ಶ್ಲೋ ॥ " ಶುಚೌ ದೇಶೇ ಪ್ರತಿಷ್ಠಾಪ್ಯ ♦ ಸ್ಥಿರ ಮಾಸನ ಮಾತ್ಮನಃ ।
ನಾಽತ್ಯುಚ್ಛ್ರಿತಂ ನಾಽತಿನೀಚಂ ♦ ಚೇಲಾಜಿನಕುಶೋತ್ತರಂ ॥ ೧೧ ॥

ಶ್ಲೋ ॥ ತತ್ರೈಕಾಗ್ರಂ ಮನಃ ಕೃತ್ವಾ ♦ ಯತ ಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾತ್ ♦ ಯೋಗ ಮಾತ್ಮ ವಿಶುದ್ಧಯೇ ॥ ೧೨ ॥

ಶ್ಲೋ ॥ ಸಮಂ ಕಾಯ ಶಿರೋಗ್ರೀವಂ ♦ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ♦ ದಿಶಶ್ಚಾನವಲೋಕಯನ್ ॥ ೧೩ ॥

ಶ್ಲೋ ॥ ಪ್ರಶಾಂತಾತ್ಮಾ ವಿಗತಭೀಃ ♦ ಬ್ರಹ್ಮಚಾರೀವ್ರತೇ ಸ್ಥಿತಃ ।
ಮನ ಸ್ಸಂಯಮ್ಯ ಮಚ್ಚಿತ್ತೋ ♦ ಯುಕ್ತ ಆಸೀತ ಮತ್ಪರಃ ॥ ೧೪ ॥

ಸೀ ॥ ವಿತತವಹ ವಿಜನವಹ ♦ ವಿಮಲವಹ ಸುಖವ ತಾ
ಕೊಡುವ ವಿವಿಕ್ತವಹ ♦ ದೇಶದಲ್ಲಿ
ಸಮಭೂಮಿಯಲ್ಲಿ ನಿ ♦ ಶ್ಚಲತೆಯಿಂ ಹಳ್ಳ ತಿ-
ಟ್ಟುಗಳು ಮಿಲ್ಲದ ಮರದ ♦ ಮಣೆಯ ಮೇಲೆ
ಕುಶಮೃಗಾಜಿನ ಶುಭ್ರ ♦ ವಸ್ತ್ರವನು ಕ್ರಮದಿಂದ
ಹಾಸಿ ಸರಿಮಾಡಿಕೊಂ ♦ ಡದರ ಮೇಲೆ
ಬಿಡದೆ ಪದ್ಮಾಸನಾ ♦ ಸೀನನಾ ದಾಬಳಿಕ
ಕಾಯಮಧ್ಯವನು ♦ ಗಳವು ಶಿರವ

ಗೀ ॥ ಚನ್ನಾಗಿ ನಿಲಿಸಿ ದೃಷ್ಟಿಯಂ ♦ ಮೂಗತುದಿಯೊ
ಳಿಟ್ಟು ಳಿದ ದಿಗ್ಭಾಗವನು ♦ ನೋಡಪಂತೆ
ದಶೇಂದ್ರಿಯಗಳನೆಲ್ಲ ನಿ ♦ ಗ್ರಹವಮಾಡಿ
ಕ್ರಮದಿಂದ ಯೋಗವನ್ನ ♦ ಭ್ಯಸಿಸಬೇಕು

ಪರಿವರ್ತನೆ-(ತೆಲುಗು-ಸೀತಾರಾಮಾಂಜನೇಯ, ಅಧ್ಯಾಯ 1.)

ಎಂಬಂತೆ ಬಹು ಪರಿಶುದ್ಧವಾದ ಸ್ಥಳದಲ್ಲಿ ಕೇವಲ ಎತ್ತು ತಗ್ಗುಗಳಿಲ್ಲದಿರುವ ಒಂದು ಮಣೆಯನ್ನು ಆರಿಸಿಕೊಂಡು ಅದರ ಮೇಲೆ ದರ್ಭಾಸನವನ್ನು ಅದರ ಮೇಲೆ ಕೃಷ್ಣಾಜಿನವನ್ನು ಅದರ ಮೇಲೆ ಶುಭ್ರವಸ್ತ್ರವನ್ನು ಹಾಸಿ ಆ ವಸ್ತ್ರದ ಮೇಲ್ಭಾಗದಲ್ಲಿ ಪದ್ಮಾಸನದಿಂದ ಕುಳಿತು, ಕೊರಳು ತಲೆ ಇವುಗಳನ್ನು ಕದಲದಂತೆ ನೇರವಾಗಿ ನಿಲ್ಲಿಸಿ, ಅತ್ತಿತ್ತ ಕದ

ಲದೆ ಆ ಕಡೆ ಈ ಕಡೆ ತಿರುಗದೆ ದೃಷ್ಟಿಯನ್ನು ಮೂಗಿನ ತುದಿಯಲ್ಲಿಟ್ಟು ಧ್ಯಾನಯೋಗವನ್ನು ಅಭ್ಯಾಸಮಾಡಲು ಯತ್ನಿಸಬೇಕು.

ಅರ್ಜುನ:—ಧ್ಯಾನಯೋಗವೆಂಬುದೆಂತಹದು? ಅದನ್ನು ಅಭ್ಯಾಸ ಮಾಡುವ ಕ್ರಮ ಹೇಗೆ?

ಕೃಷ್ಣ:—

ಗೀ ॥ ಪವನಗಳ ಲಯಮಾಡಿ ಪರಿಹೃತ ♦ ಸಂಗನಾಗಿ
ಇಂದ್ರಿಯಂಗಳ ಗರ್ವ ♦ ವೆಲ್ಲ ತುಳಿದು
ಹರಿ ವಿಶಾಲ ರೂಪದಲ್ಲಿ ♦ ಮನವ ನಿಟ್ಟು
ನಿಲಿಸಬೇಕು ಬುದ್ಧಿಯನು ♦ ಬಿಡದೆ ಬುಧನು

ಎಂಬಂತೆ, ಇಂದ್ರಿಯಗಳನ್ನು ನಿಗ್ರಹಮಾಡಿ, ಯಾವುದರಲ್ಲಿಯೂ ಆಸೆಯಿಲ್ಲದಂತಿದ್ದು ಪ್ರಾಣವಾಯುವನ್ನು ಬಂಧಿಸಿ, ತನ್ನ ಮನಸ್ಸನ್ನು ಬಯಲುಸ್ವರೂಪನಾದ ವಿರಾಟ್ಪುರುಷನಲ್ಲಿ ಐಕ್ಯಮಾಡಬೇಕು.

ಅರ್ಜುನ:—ಸ್ಥಳವು ಪರಿಶುದ್ಧವಾಗಿರಬೇಕೆಂದೂ, ಕುಳಿತುಕೊಳ್ಳುವ ಆಸನವು ಬಹಳ ಎತ್ತರತಗ್ಗುಗಳಾಗಿರಕೂಡದೆಂದೂ, ಆ ಪೀಠದ ಮೇಲೆ ದರ್ಭಾಸನ, ಕೃಷ್ಣಾಜಿನ ಮತ್ತು ಶುಭ್ರವಸ್ತ್ರ ಇವುಗಳನ್ನು ಒಂದರಮೇಲೊಂದನ್ನು ಹಾಸಬೇಕೆಂದೂ ಹೇಳಿದಿರಲ್ಲವೇ? ಇದಕ್ಕೆ ಕಾರಣವೇನು? ಹೀಗೆ ಮಾಡಿದ್ದರಿಂದ ಯೋಗಿಗುಂಟಾಗುವ ಪ್ರಯೋಜನವಾದರೂ ಯಾವುದು?

ಕೃಷ್ಣ:—ಅರ್ಜುನಾ! ಸ್ಥಳವು ಪರಿಶುದ್ಧವಾಗಿಲ್ಲದಿದ್ದರೆ ಅಲ್ಲಿರುವ ಕ್ರಿಮಿಕೀಟಾದಿಗಳಿಂದ ಬಾಧೆಯುಂಟಾಗುತ್ತದೆ. ಈ ಬಾಧೆಯಿಂದ ಮನಸ್ಸು ಒಂದೆಡೆ ನಿಲ್ಲದೆ ಅತ್ತಿತ್ತ ಸರಿಯುವುದಕ್ಕೆ ಕಾರಣವಾಗುತ್ತದೆ. ಆದುದರಿಂದ ಯೋಗಾಭ್ಯಾಸವನ್ನು ಮಾಡುವ ಸ್ಥಳವು ಬಹಳ ಶುದ್ಧವಾಗಿರಬೇಕು. ಮಣೆಯು ಬಹಳ ತಗ್ಗಾಗಿದ್ದರೆ ನೆಲದಲ್ಲಿ ಹರಿದಾಡುವ ಕ್ರಿಮಿಕೀಟಾದಿಗಳು ಅದರ ಮೇಲೆ ಹತ್ತಿ ಯೋಗಾಭ್ಯಾಸಕ್ಕೆ ಅಡ್ಡಿಯನ್ನುಂಟು

ಮಾಡುತ್ತವೆ. ಆ ಪೀಠವು ಬಹಳ ಎತ್ತರವಾಗಿದ್ದರೆ ಆ ಯೋಗಿಯು ಒಂದಲ್ಲೊಂದುವೇಳೆ ಆಯತಪ್ಪಿ ಕೆಳಕ್ಕೆ ಬೀಳುವ ಸಂಭವವಿದೆ. ಆದುದರಿಂದ ಕೂಡುವ ಮಣೆಯು ಬಹಳ ಎತ್ತರತಗ್ಗುಗಳಿಲ್ಲದಿರಬೇಕು.

ಪೀಠದಮೇಲೆ ದರ್ಭಾಸನ, ಕೃಷ್ಣಾಜಿನ ಮತ್ತು ಅದರ ಮೇಲೆ ಶುಭ್ರವಸ್ತ್ರ ಇವುಗಳನ್ನು ಹಾಸಬೇಕಾದ ಕಾರಣವೇನೆಂದರೆ:—ದರ್ಭೆಯು ಪವಿತ್ರವಾದುದು. ಆದುದರಿಂದ ಅದನ್ನು ಮೊದಲನೆಯ ಆಸನವನ್ನಾಗಿ ಮಾಡಿಕೊಳ್ಳಬೇಕು. ದರ್ಭಾಸನದ ವಿಷಯವನ್ನು ಈ ಗ್ರಂಥಕರ್ತರ ಜನ್ಮ ಚರಿತ್ರೆಯಲ್ಲಿ ವಿಶದಪಡಿಸಿದೆ. ಈ ಸಂದರ್ಭದಲ್ಲಿ ಅದನ್ನು ಓದಿ ತಿಳಿದು ಕೊಳ್ಳಬೇಕು. ಭೂಮಿಗೆ ಆಕರ್ಷಣಶಕ್ತಿಯುಂಟು. ಈಶ್ವರಧ್ಯಾನದಲ್ಲಿರುವಾಗ ಆ ಧ್ಯಾನದ ಫಲವನ್ನೆಲ್ಲಾ ಈ ಭೂಮಿಯು ಆಕರ್ಷಿಸುತ್ತದೆ. ಕೃಷ್ಣಾಜಿನದಮೇಲೆ ಕುಳಿತುಕೊಂಡರೆ ಭೂಮಿಯು ಆಕರ್ಷಿಸಲಾರದು. ಆದಕಾರಣದಿಂದಲೇ ಯಾವ ಪೂಜಾ ಜಪತಪಗಳನ್ನು ಮಾಡಬೇಕಾದರೂ ಕೃಷ್ಣಾಜಿನವು ಅತ್ಯವಶ್ಯಕವಾಗಿರಬೇಕು. ಮತ್ತು ಆ ಕೃಷ್ಣಾಜಿನಕ್ಕೆ ಅಪಾನವಾಯುವಿನ ಭಾಗವು ತಗಲದಿರುವುದಕ್ಕಾಗಿಯೇ ಶುಭ್ರವಸ್ತ್ರವನ್ನು ಮಡತೆಹಾಕಿ, ಅದರ ಮೇಲೆ ಹಾಸಬೇಕು.

ಅರ್ಜುನ:—ಯೋಗಾಭ್ಯಾಸಿಯು ಶರೀರವನ್ನೂ ತಲೆ ಕೊರಳು ಮೊದಲಾದುವುಗಳನ್ನೂ ಕದಲದಂತೆ ನಿಲ್ಲಿಸಿ ದಿಕ್ಕುಗಳ ಕಡೆಗೆ ನೋಡದೆ ತನ್ನ ಮೂಗಿನ ತುದಿಯಲ್ಲಿಯೇ ದೃಷ್ಟಿಯಿಡಬೇಕೆಂದು ಹೇಳಲು ಕಾರಣ ವೇನು?

ಕೃಷ್ಣ:—ಹಾಗೆ ಮಾಡುವುದರಿಂದ ಯೋಗಾಭ್ಯಾಸಿಯ ದೃಷ್ಟಿಯು ತನ್ನ ಸುತ್ತಲೂ ಇರುವ ವಸ್ತುಗಳ ಕಡೆಗೆ ತಿರುಗದಿರುತ್ತದೆ; ಅದರಿಂದ ಅವನ ಮನಸ್ಸು ಚಲಿಸದಿರುತ್ತದೆ. ಹೀಗೆ ಮಾಡದಿದ್ದಲ್ಲಿ ಅವನ ದೃಷ್ಟಿಗೆ ಇತರ ವಿಷಯಗಳು ಗೋಚರಿಸುತ್ತಿರುತ್ತವೆ. ಆಗ ಅವನ ಮನಸ್ಸು ಆ ವಿಷಯಗಳ ಕಡೆಗೆ ಓಡುತ್ತದೆ. ಹಾಗೆ ಓಡಿದರೆ ಆ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದಕ್ಕೆ ಅಸಾಧ್ಯವು.

ಅರ್ಜುನ:—ಆದರೆ, ಸ್ವಾಮೀ! ಹಾಗೆ ಧ್ಯಾನವನ್ನು ಮಾಡುವಾಗ ಪ್ರಾಣವಾಯುವನ್ನು ಬಂಧಿಸಬೇಕೆಂದು ಈಗ ನೀವು ಹೇಳಿದ ಮಾತಿನಿಂದ ತಿಳಿಯಬರುತ್ತದೆ. ಹಾಗೆ ಏತಕ್ಕೆ ಪ್ರಾಣವಾಯುವನ್ನು ಬಂಧಿಸಬೇಕು?

ಕೃಷ್ಣ :—ಅರ್ಜುನಾ! ಹಾಗೆ ಮಾಡದಿದ್ದಲ್ಲಿ ದೃಷ್ಟಿಯನ್ನು ನಾಸಿಕಾಗ್ರದಲ್ಲಿ ನಿಲ್ಲಿಸಲು ಸಾಧ್ಯವಿಲ್ಲ. ಹಾಗೆ ದೃಷ್ಟಿಯನ್ನು ಮೂಗಿನ ತುದಿಯಲ್ಲಿ ನಿಲ್ಲಿಸಿ ಗುರೂಪದೇಶವನ್ನನುಸರಿಸಿ ಪ್ರಾಣವಾಯುವನ್ನು ಬಂಧಿಸಬೇಕು.

ಅರ್ಜುನ :—ಆದರೆ ಹಾಗೆ ಪ್ರಾಣವಾಯುವನ್ನು ಬಂಧಿಸಿದ್ದರಿಂದ ಪ್ರಾಣಕ್ಕೆ ಅಪಾಯವುಂಟಾಗುವುದಿಲ್ಲವೇ ?

ಕೃಷ್ಣ :—ಮಾಡಬೇಕಾದ ಕ್ರಮವನ್ನು ಮೀರಿದರೆ ಅಪಾಯವುಂಟಾಗುತ್ತದೆಯಾಗಿ,

ಕಂ ॥ ಪ್ರಾಣಾಯಾಮುವ ಕ್ರಮುದಲಿ ।
ಪ್ರಾಣೋತ್ಪೀಡನವು ಬಾರ ♦ ದಂತೆ ನಡೆಸುತ್ತಂ ॥
ಘ್ರಾಣಾಗ್ರಸ್ಥಿತಿ ವಿಷಯು ।
ಶ್ರೇಣಿಯ ನೊಂದಿರಲು ಯೋಗ ♦ ಸಿದ್ಧತೆಯಹುದೈ ॥

ಪರಿವರ್ತನೆ-(ಭಾರತ, ಶಾಂತಿಪರ್ವ, 6ನೇ ಅಧ್ಯಾಯ.)

ಯೋಗಾಭ್ಯಾಸಕನು ಧ್ಯಾನಮಾಡುವಾಗ ಬಹು ಜಾಗರೂಕನಾಗಿ ಪ್ರಾಣಕ್ಕೆ ಅಪಾಯವುಂಟಾಗದಂತೆ ಗುರುವಾಕ್ಯಕ್ಕನುಗುಣವಾಗಿ ಉಸಿರನ್ನು ಬಿಗಿಹಿಡಿದು ಅಭ್ಯಾಸಮಾಡಬೇಕು. ಹೀಗೆ ಅಭ್ಯಾಸಮಾಡುತ್ತ ಬರಬರಲು ಕ್ರಮಕ್ರಮವಾಗಿ ಯೋಗಸಿದ್ಧಿಯನ್ನು ಹೊಂದಿ ಅವನ ಮನಸ್ಸು ಕದಲದೆ ಪರಬ್ರಹ್ಮವೆಂಬ ಗುರಿಯಲ್ಲಿಯೇ ನಿಂತಿರುತ್ತದೆ.

ಮ ॥ ಯತಧೀಚಿತ್ತಮುರುಪ್ರಶೇಂದ್ರಿಯತನು ♦ ವ್ಯಾಪಾರನುಂ ಮೌನಿಯುಂ ।
ಹತಕಾಮಾದಿವಿಕಾರನುಂ ಗತಭಯುಂ ♦ ಮೇಣ್ ಬ್ರಹ್ಮಚಾರಿವ್ರತ-॥
ಸ್ಥಿತನುಂ ಶಾಂತಮನಸ್ಕನುಂ ಸ್ವಗುರುಮೂ ♦ ರ್ತಿ ಪ್ರೋಕ್ತಲಕ್ಷ್ಯಾರ್ಥಸಂ-।
ಗತಿ ಯಾಮುದ್ವಯ ಮಭ್ಯಸಂ ಪಡೆವನೈ ♦ ಯೋಗಾಂಚಿತೋದ್ಯೋಗನುಂ ॥

ಪರಿವರ್ತನೆ-(ತೆಲುಗು ಸೀತಾರಾಮಾಂಜನೇಯು, ಅಧ್ಯಾಯ 1.)

ಎಂಬಂತೆ ಯೋಗಾಭ್ಯಾಸಕನು, ಮನೋಬುದ್ಧೀಂದ್ರಿಯಗಳು, ಪ್ರಾಣವಾಯುಗಳು ಮತ್ತು ಈ ಶರೀರ ಇವುಗಳ ವ್ಯಾಪಾರಗಳೆಲ್ಲವನ್ನೂ, ಇದುವರಿವಿಗೂ ಹೇಳಿದ ಪ್ರಕಾರವೇ ಮಾಡುವವನಾಗುತ್ತಾನೆ. ಶಾಂತಚಿತ್ತನು ಅಂದರೆ ಕಾಮಾದಿ ಅರಿಷಡ್ವರ್ಗಗಳ ದೆಸೆಯಿಂದ ಬಾಧಿಸಲ್ಪಡದಿರುವ ಮನಸ್ಸುಳ್ಳವನೂ ಭಯರಹಿತನೂ, ಬ್ರಹ್ಮಚರ್ಯ ವ್ರತನಿಷ್ಠನೂ, ಆಗಿರುತ್ತಾನೆ.

ಮ ॥ ಗುರುಶುಶ್ರೂಷೆ ಗಳಾಗ ಮಾಧ್ಯಯನಗಳ್ ♦ ಗೋಷ್ಠೀನಿರಾಸಂಗತ- ।
ತ್ಪರತಂ ಸಂಗಪನೊಂದಿರಲ್ ಕಲೆಯದೇ ♦ ಭೈಕ್ಷಾಶನಂ ಮತ್ತೆ ಷ-॥
ಡ್ವರ ಕರ್ಮಂಗಳೊಳುಂ ಸುರಾಗ ಭರ ಗಾ ♦ ಢದ್ವೇಷಗಳ್ ತಾ ।
ವ್ವೆರಸ ಲ್ಕಾಣದೆ ಮುಕ್ತಿಪೊಂದಿಪುವು ಭ ♦ ವ್ಯ ಬ್ರಹ್ಮಚರ್ಯೋಕ್ತಿಗಳ್ ॥

ಪರಿವರ್ತನೆ-(ತೆಲುಗು ಭಾರತ, ಶಾಂತಿಪರ್ವ, 2ನೇ ಅಧ್ಯಾಯ.)

ಎಂಬ ರೀತಿಯಲ್ಲಿ ಒಬ್ಬ ಸದ್ಗುರುವನ್ನು ಆಶ್ರಯಿಸಿ ಆತನಿಗೆ ಶುಶ್ರೂಷೆಯನ್ನು ಮಾಡುತ್ತ ಆತನಿಂದ ಉಪದೇಶವನ್ನು ಹೊಂದಿ ವೇದಾಧ್ಯಯನಾದಿಗಳನ್ನಭ್ಯಾಸಮಾಡುವುದೂ, ಜನಸಮೂಹವಿರುವಕಡೆ ಸೇರದಿರುವುದೂ, ಒಂದು ವೇಳೆ ಅಂತಹ ಜನಸಮೂಹವು ತಾನಿರುವಕಡೆ ಬಂದರೂ ಅವರೊಡನೆ ತಾನು ಬೆರೆಯದೆ ಭಿಕ್ಷಾನ್ನವನ್ನೆತ್ತಿ ಜೀವನ ಮಾಡುತ್ತ ರಾಗದ್ವೇಷರಹಿತನಾಗಿದ್ದು ಯಾರೊಡನೆಯೇ ಆಗಲಿ, ಯಾವ ಕಾರಣದಿಂದಲಾದರೂ ವಿರೋಧವನ್ನು ಬೆಳೆಸದೆ ಇರುವುದೂ, ಇವೆಲ್ಲವೂ ಬ್ರಹ್ಮಚರ್ಯ ವ್ರತಗಳೆನ್ನಿಸುತ್ತವೆ. ಆದುದರಿಂದ ಇಂತಹ ಬ್ರಹ್ಮಚರ್ಯವ್ರತವನ್ನು ಅನುಷ್ಠಾನಮಾಡುತ್ತ ಯೋಗವಿದ್ಯೆಯನ್ನು ಗುರುವಾಕ್ಯದಿಂದ ತಿಳಿದುಕೊಂಡು ಅದನ್ನು ಅಭ್ಯಾಸಮಾಡುತ್ತಾ ಸದಾ ನನ್ನನ್ನೇ ಧ್ಯಾನಮಾಡುತ್ತಲಿರಬೇಕು.



# ಪ್ರಾಣಾಯಾಮುವನ್ನು ಮಾಡಲಿಚ್ಛಿಸುವ ಸ್ತ್ರೀಪುರುಷರು ಮೊಟ್ಟಮೊದಲು ತಿಳಿದುಕೊಳ್ಳಬೇಕಾದ ಪದ್ಧತಿಗಳು.

ಓ ಸಹೋದರ ಸಹೋದರಿಯರೇ!

ಪ್ರಾಣವಾಯುವನ್ನು ಬಿಗಿಹಿಡಿದು ನಿಲ್ಲಿಸುವುದಕ್ಕೆ ಪ್ರಾಣಾಯಾಮವೆಂದು ಹೆಸರು. ಪ್ರಾಣಾಯಾಮುವನ್ನು ಮಾಡಲಿಚ್ಛಿಸುವವರು ಮೊದಲು ಬಲಗೈಯ 1-2-3-4-5 ಬೆರಳುಗಳನ್ನೂ ಒಂದಾದಮೇಲೊಂದರಂತೆ ಮಡಿಸಿ ಮುಗಿಸಿದಮೇಲೆ ಎಡಗೈ ಕಿರುಬೆರಳನ್ನು ಮಡಿಸಬೇಕು. ಅನಂತರ ಪುನಃ ಬಲಗೈಯ ಐದು ಬೆಟ್ಟುಗಳನ್ನೂ ಮೇಲಿನಂತೆ ಮಡಿಸಿ ಮುಗಿಸಿದಮೇಲೆ ಎಡಗೈ ಉಂಗುರದ ಬೆರಳನ್ನು ಮಡಿಸಬೇಕು. ಈ ಪ್ರಕಾರವಾಗಿ ಬಲಗೈ ಐದು ಬೆರಳುಗಳನ್ನು ಮಡಿಸುವ ಪ್ರತಿಯೊಂದು ಸಲಕ್ಕೂ ಎಡಗೈ ಒಂದೊಂದು ಬೆರಳನ್ನು ಮಡಿಸುತ್ತಾ ಬರಬೇಕು. ಹೀಗೆ ಸುಮಾರು ಐವತ್ತು ಸಲ ಬಲಗೈ ಐದು ಬೆರಳುಗಳನ್ನು ಮಡಿಸುತ್ತಲೂ ಅದಕ್ಕೆ ತಕ್ಕಂತೆ ಎಡಗೈ ಒಂದೊಂದು ಬೆರಳನ್ನು ಮಡಿಸುತ್ತಲೂ ಬರುವುದನ್ನು ಮೊದಲು ಕಲಿತುಕೊಳ್ಳಬೇಕು.

1. ಹೀಗೆ ಮೊದಲು ಬೆರಳು ಮಡಿಸುವುದರ ಲೆಕ್ಕವನ್ನು ಸಾಧಿಸದಿದ್ದರೆ ಶ್ವಾಸವನ್ನೆಳೆದು ನುಂಗಿ ಇಪ್ಪತ್ತೈದರವರಿವಿಗೆ ಎಣಿಸುವಾಗ ಬೆರಳುಗಳನ್ನು ಮಡಿಸುವುದಕ್ಕೆ ನಿಮಗೆ ದಿಕ್ಕುತೋರದಂತಾಗುತ್ತದೆ. ಆದುದರಿಂದಲೇ ಬೆರಳು ಮಡಿಸುವುದರ ಮೂಲಕ ಈ ವಿಧವಾದ ಲೆಖ್ಖವನ್ನು ಮೊದಲು ಸಾಧಿಸಬೇಕು. ಪ್ರಾಣಾಯಾಮಾಭ್ಯಾಸವನ್ನು ಮಾಡಲಿಚ್ಛಿಸುವವರೆಲ್ಲರೂ ಇದನ್ನು ಚನ್ನಾಗಿ ಮೊದಲು ತಿಳಿಯಬೇಕೆಂದು ಮತ್ತೊಂದು ಸಾರಿ ಒತ್ತಿ ಹೇಳುತ್ತೇವೆ.

2. ಹೀಗೆ ಸಾಧನೆಮಾಡಿಕೊಂಡಮೇಲೆ ಮೂರು ಸಣ್ಣ ಗುಟುಕು ನೀರನ್ನು ಕುಡಿದು ಎಡಮೂಗನ್ನೂ ಕಣ್ಣುಗಳನ್ನೂ ಮುಚ್ಚಿ ಬಲದ ಶ್ವಾಸಕೋಶ (ಉಸಿರಿನ ಚೀಲ) ದಲ್ಲಿ ನಿಂತಿರುವ ಹಳೆಯ ಶ್ವಾಸವೆಲ್ಲವನ್ನೂ ಎರಡಂಗುಲಗಳುದ್ದದ ಶ್ವಾಸವನ್ನೂ, ಓಂ-ಓಂ-ಓಂ ಎಂಬ ಮಂತ್ರದಿಂದ ಬಲದಮೂಗಿನ ಮೂಲಕ ಪೂರ್ಣವಾಗಿ ಹೊರಕ್ಕೆ ಬಿಟ್ಟು, ಪುನಃ ಅದರ ಹಿಂದೆಯೇ ಬಲಮೂಗಿನಲ್ಲಿ ಎರಡಂಗಲುಗಳುದ್ದದಷ್ಟು ಶ್ವಾಸವನ್ನು ಓಂ-ಓಂ-ಓಂ ಎಂಬ ಮಂತ್ರದಿಂದ ಒಳಕ್ಕೆಳೆದು ನುಂಗಿ, ಅನಂತರ ಮತ್ತೊಂದು ವೇಳೆ ಶ್ವಾಸವನ್ನು ಓಂ-ಎಂಬ ಮಂತ್ರದಿಂದೆಳೆದು ನೋಡಬೇಕು. ಆಗ ½-1 ಇಲ್ಲವೇ 2-3 ಅಂಗುಲಗಳ ಉದ್ದದಷ್ಟು ಶ್ವಾಸವು ಮೇಲಕ್ಕೆ ಹತ್ತುತ್ತದೆ. ಇಲ್ಲವೇ ಹತ್ತದೆಯೂ ಇರಬಹುದು. ಹಾಗೆ ಹತ್ತದೆ ಹೋದರೂ, ಶ್ವಾಸವನ್ನು ಎಳೆದೇ ನೋಡಬೇಕು. ಆಗ ಆ ಶ್ವಾಸವನ್ನು ಕೂಡ ನುಂಗಬೇಕು.

3. ಹೀಗೆ ಬಲಮೂಗಿನಿಂದ ಒಳಕ್ಕೆಳೆದು ನುಂಗಿದಮೇಲೆ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸಬೇಕು. ಹೀಗೆ ನಿಲ್ಲಿಸಿದ ಮೇಲೆ ಪುನಃ ಆ ಶ್ವಾಸವನ್ನು ಬಿಡುವಾಗ ಹಲ್ಲುಗಳನ್ನು ಗಟ್ಟಿಯಾಗಿ ಬಿಗಿಹಿಡಿದು, ಮೊದಲು ಎಳೆದ ಬಲಮೂಗಿನ ಶ್ವಾಸವನ್ನು ಹೊರಕ್ಕೆ ಬಿಡದೆ ಬಲಮೂಗನ್ನು ಮುಚ್ಚಿ, ಎಡಮೂಗಿನ ಮೂಲಕ ಗದ್ದದವರಿವಿಗೂ ಶ್ವಾಸವನ್ನು 'ಓಂ' ಎಂದು ಮನಸ್ಸಿನಲ್ಲಿ ಭಾವಿಸಿ ಹೊರಕ್ಕೆ ಬಿಟ್ಟು, ಪುನಃ ಎಡದಮೂಗಿನಿಂದ ಮೊದಲು ಬಿಟ್ಟ ಗದ್ದ (Chin) ದುದ್ದದಷ್ಟು ಅಂದರೆ ಮೂಗಿನ ತುದಿಯಿಂದ ಗದ್ದದ ಕೊನೆಯವರಿವಿಗೂ ಶ್ವಾಸವನ್ನು ಮಾತ್ರವೇ 'ಓಂ' ಎಂದು ಮನಸ್ಸಿನಲ್ಲಿ ಭಾವಿಸಿ ಒಳಕ್ಕೆಳೆದು ಎಡದಮೂಗನ್ನು ಮುಚ್ಚಿ ಮೊದಲಿನಂತೆಯೇ ಬಲಮೂಗಿನಲ್ಲಿ ಗದ್ದ(Chin) ದುದ್ದದಷ್ಟು ಶ್ವಾಸವನ್ನು ಮಾತ್ರವೇ 'ಓಂ'ಎಂದು ನೆನೆಸಿ, ಹೊರಕ್ಕೆ ಬಿಡಬೇಕು. ಈರೀತಿಯಾಗಿ ಶ್ವಾಸದ ವೇಗವು ಅಣಗುವವರಿವಿಗೂ ಎಡಬಲ ಮೂಗುಗಳೆರಡನ್ನೂ ಬೆಟ್ಟುಗಳಿಂದ ತಿರುಗಿಸಿ ತಿರುಗಿಸಿ 'ಓಂ' ಎಂಬ ಮಂತ್ರದಿಂದ ಗದ್ದದುದ್ದದಷ್ಟು ಶ್ವಾಸವನ್ನು ಹೊರಕ್ಕೆ ಬಿಡುತ್ತ, ಪುನಃ ಅಷ್ಟನ್ನೇ ಒಳಕ್ಕೆ ಎಳೆಯುತ್ತಿದ್ದು ಶ್ವಾಸದ ವೇಗವು ಅಣಗಿದ ಮೇಲೆ ಮೂಗನ್ನು

ಬದಲಾಯಿಸುತ್ತಿದ್ದ ಬೆರಳುಗಳನ್ನು ತೆಗೆದು, ಶರೀರದಲ್ಲಿ ಹುಟ್ಟಿದ ಬೆವರನ್ನು ಪುನಃ ಶರೀರದಲ್ಲಿಯೇ ಇಂಗುವಂತೆ ಕೈಯಿಂದುಜ್ಜಿ ಆಮೇಲೆ ಕಣ್ಣುಗಳನ್ನು ಮುಚ್ಚಿಕೊಂಡು, 'ಚಿನ್ಮುದ್ರೆ' ಯನ್ನು ಕೈಯಲ್ಲಿ ಹಿಡಿದು, ಯೋಗಾಭ್ಯಾಸವನ್ನು ಮಾಡಿದ ಶ್ರಮವನ್ನು ತೀರಿಸಿಕೊಳ್ಳುವುದಕ್ಕಾಗಿ ಹತ್ತು ನಿಮಿಷಗಳಕಾಲ ನಿಷ್ಠೆಯಿಂದಿರಬೇಕು. ಆಗ ಮನಸ್ಸು ನಿಷ್ಠೆಯಲ್ಲಿರದೆ ಪರಿಪರಿವಿಧವಾಗಿ ಓಡುತ್ತಿರುತ್ತದೆ. ಆ ಸಮಯದಲ್ಲಿ ಶ್ವಾಸವನ್ನು 'ಸೋ' ಎಂಬ ಮಂತ್ರದಿಂದ ಒಳಕ್ಕೆಳೆದು, ಪುನಃ ಶ್ವಾಸವನ್ನು ಹೊರಕ್ಕೆ ಬಿಡುವಾಗ ಆ ಶ್ವಾಸದೊಡನೆ 'ऽಹಂ' ಮಂತ್ರವನ್ನು ಸೇರಿಸಿ ಹೊರಕ್ಕೆ ಬಿಡಬೇಕು.

4. ಮೇಲೆಹೇಳಿದ ರೀತಿಯಂತೆ ಎಡದಮೂಗಿನಲ್ಲಿಯೂ ಮಾಡಬೇಕು. ಈ ಎಡಮೂಗಿನಲ್ಲಿ ನಡೆಸುವುದನ್ನೂ ಕೂಡ ಕಂಠಪಾಠವಾಗಿ ಮಾಡಿಕೊಂಡಿಟ್ಟುಕೊಳ್ಳಬೇಕು.

5. ಮೊದಲು ಬಲಮೂಗಿನಲ್ಲಿಯೂ ಎರಡನೆಯಸಾರಿ ಎಡಮೂಗಿನಲ್ಲಿಯೂ 25 ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸಬೇಕಲ್ಲವೇ? ಈಗ ಮೂರನೆಯಬಾರಿ ಎರಡು ಮೂಗಿನ ಹೊಳ್ಳೆಗಳಲ್ಲಿಯೂ ಮಾಡಬೇಕು. ಹಾಗೆ ಎರಡು ಮೂಗಿನಲ್ಲಿಯೂ ಮಾಡುವಾಗ ಒಂದಾದಮೇಲೊಂದರಂತೆ ಹಿಂದುಮುಂದಕ್ಕೆ ತಿರುಗಿಸಿತಿರುಗಿಸಿ ನಡೆಸಬೇಕು. ಹಾಗೆ ಮಾಡುವ ಪದ್ಧತಿಯನ್ನು ಈ ಕೆಳಗೆ ವಿವರಿಸಿರುತ್ತೇವೆ. ಮೊದಲು ಬಲಮೂಗಿನ ಮೂಲಕ ಶ್ವಾಸವನ್ನು ಒಳಕ್ಕೆಳೆದದ್ದರಿಂದ ಅದೇ ಮೂಗಿನಲ್ಲಿ ಮೂರನೆಯ ಸಾರಿಯೂ ಮಾಡಬೇಕು. ಅದು ಹೇಗೆಂದರೆ, ಎಡದಮೂಗನ್ನು ಮುಚ್ಚಿ ಬಲಮೂಗಿನಲ್ಲಿ ಗದ್ದದ ಉದ್ದದಷ್ಟು ಶ್ವಾಸವನ್ನು 'ಓಂ' ಎಂದು ಹೊರಕ್ಕೆ ಬಿಟ್ಟು, ಬಲಮೂಗನ್ನು ಮುಚ್ಚಿ ಗದ್ದದುದ್ದದಷ್ಟು ಶ್ವಾಸವನ್ನು 'ಓಂ' ಎಂದು ಹೊರಕ್ಕೆ ಬಿಟ್ಟು, ಎಡದಮೂಗನ್ನು ಮುಚ್ಚಿ ಬಲಮೂಗಿನಲ್ಲಿ ಗದ್ದದುದ್ದದಷ್ಟು ಶ್ವಾಸವನ್ನು 'ಓಂ' ಎಂದು ಹೊರಕ್ಕೆ ಬಿಟ್ಟು, ಹೀಗೆ ಎಡಬಲದ ಎರಡು ಮೂಗಿನ ಹೊಳ್ಳೆಗಳಲ್ಲಿಯೂ ಒಳಗೆ ನಿಂತಿರುವ ಹಳೆಯ ಶ್ವಾಸವೆಲ್ಲವನ್ನೂ 'ಓಂ' ಎಂಬ ಮಂತ್ರದಿಂದ ಗದ್ದದುದ್ದದಷ್ಟು ಶ್ವಾಸವನ್ನು

ಹೊರಕ್ಕೆ ಬಿಡುತ್ತ ಬಂದು, ಕಡೆಯ ಶ್ವಾಸವು ಸ್ವಲ್ಪವಾಗಿರುವಾಗ ಬಲ ಮೂಗಿನಲ್ಲಿ ಹೊರಕ್ಕೆ ಬಿಟ್ಟು ಪುನಃ ಅದರ ಹಿಂದೆಯೇ ಗದ್ದದುದ್ದದಷ್ಟು ಶ್ವಾಸವನ್ನು 'ಓಂ' ಎಂದು ಒಳಕ್ಕೆಳೆದು, ಬಲಮೂಗನ್ನು ಮುಚ್ಚಿ ಪುನಃ ಎಡದಮೂಗಿನಲ್ಲಿ ಗದ್ದದುದ್ದದ ಪ್ರಮಾಣದಷ್ಟು ಶ್ವಾಸವನ್ನು 'ಓಂ' ಎಂದು ಒಳಕ್ಕೆ ಎಳೆದು, ಎಡದಮೂಗನ್ನು ಮುಚ್ಚಿ ಹೀಗೆ ಎಡಬಲ ಎರಡು ಶ್ವಾಸಕೋಶಗಳಲ್ಲಿಯೂ ಎಷ್ಟು ಶ್ವಾಸವು ಹಿಡಿಯುತ್ತದೆಯೋ ಅಷ್ಟನ್ನೂ ಒಳಕ್ಕೆಳೆದು ನುಂಗಿ ಮತ್ತೊಂದುವೇಳೆ ಎಡಬಲಗಳೆರಡು ಮೂಗಿನೊಳಗೂ 'ಓಂ' ಎಂಬ ಮಂತ್ರದಿಂದ ಒಳಕ್ಕೆಳೆದು ನೋಡಬೇಕು. ಆಗ $\frac{1}{2}$, 1 ಇಲ್ಲವೇ 2, 3 ಅಂಗುಲಗಳುದ್ದದಷ್ಟು ಶ್ವಾಸವು ಮೇಲೇರುತ್ತದೆ. ಇಲ್ಲವೇ ಮೇಲಕ್ಕೇರದೆಯೂ ಇರಬಹುದು. ಹಾಗೆ ಏರದಿದ್ದರೂ ಶ್ವಾಸವನ್ನು ಒಳಕ್ಕೆಳೆದೇ ನೋಡಬೇಕು. ಆಗ ಆ ಶ್ವಾಸವನ್ನು ಕೂಡ ನುಂಗಬೇಕು. ಹೀಗೆ ನುಂಗಿದಮೇಲೆ ಮೊದಲು ಎಡಬಲ ಎರಡು ಮೂಗಿನ ಹೊಳ್ಳೆಗಳಲ್ಲಿಯೂ ಶ್ವಾಸವನ್ನೆಳೆದು ನುಂಗಿ 25-ಎಣಿಸುವವರಿವಿಗೂ ನಿಲ್ಲಿಸಿದ ರೀತಿಯಲ್ಲಿಯೇ ಈ ಮೂರನೆಯ ಸಲವೂ 25-ಎಣಿಸುವವರಿವಿಗೆ ಶ್ವಾಸವನ್ನುನಿಲ್ಲಿಸಬೇಕು.

6. ಹೀಗೆ ನಿಲ್ಲಿಸಿದಮೇಲೆ, ಪುನಃ ಶ್ವಾಸವನ್ನು ಹೊರಕ್ಕೆ ಬಿಡುವಾಗ ಬಲದಮೂಗನ್ನು ಮುಚ್ಚಿ ಎಡದಮೂಗಿನಿಂದ ಗದ್ದದುದ್ದದಷ್ಟು ಶ್ವಾಸವನ್ನು ಹೊರಕ್ಕೆ ಬಿಟ್ಟು, ಪುನಃ ಆಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ ಎಡಮೂಗಿನಿಂದ ಒಳಕ್ಕೆ ಎಳೆದು ಎಡಮೂಗನ್ನು ಮುಚ್ಚಬೇಕು. ಈ ರೀತಿಯಾಗಿ ಶ್ವಾಸದ ವೇಗವನ್ನಣಗಿಸುವವರಿಗೂ ಎಡಬಲ ಮೂಗುಗಳನ್ನು ಬದಲಾಯಿಸುತ್ತ, ಶ್ವಾಸವನ್ನು ಬಿಡುತ್ತ ಒಳಕ್ಕೆಳೆಯುತ್ತ, ಶ್ವಾಸದ ವೇಗವು ತಗ್ಗಿದಮೇಲೆ ಶರೀರದಲ್ಲುಂಟಾದ ಬೆವರನ್ನು ಅದರಲ್ಲಿಯೇ ಇಂಗುವಂತೆ ಕೈಗಳಿಂದ ಚನ್ನಾಗಿ ಉಜ್ಜಿ ಅನಂತರ ಕಣ್ಣುಗಳನ್ನು ಮುಚ್ಚಿ ಚಿನ್ಮುದ್ರೆಯನ್ನು ಕೈಯಲ್ಲಿ ಹಿಡಿದು 'ಸೋಽಹಂ' ಮಂತ್ರವನ್ನು ಶ್ವಾಸದೊಡನೆ ಸೇರಿಸಿ, ಹತ್ತು ನಿಮಿಷಗಳವರಿವಿಗೆ ಜಪವನ್ನು ಮಾಡುತ್ತ ಬರಬೇಕು. ಮೊದಲು ಈ ಅಭ್ಯಾಸವನ್ನು ಮಾಡುವವರಿಗೆ ವಿಶೇಷವಾಗಿ

ಬೆವರು ಹುಟ್ಟದು. ಯೋಗಾಭ್ಯಾಸವು ಹೆಚ್ಚುತ್ತ ಹೆಚ್ಚುತ್ತ ಶರೀರ ದಲ್ಲಿ ಬೆವರು ಸ್ನಾನಮಾಡಿದವನಂತೆ ವಿಶೇಷವಾಗಿ ಸುರಿಯುತ್ತಲಿರುತ್ತದೆ. ಅಲ್ಲಿಗೂ ಪ್ರಾರಂಭದಿಂದ ಶರೀರದಲ್ಲಿ ಬೆವರು ಹುಟ್ಟದಿದ್ದರೂ ಯೋಗಾ ಭ್ಯಾಸವನ್ನು ಮಾಡಿ ಮುಗಿಸಿದ ಮೇಲೆ ಶರೀರವನ್ನು ಚನ್ನಾಗಿ ಉಜ್ಜಿ ಶುದ್ಧಿಮಾಡುತ್ತ ಬರಬೇಕು.

7. ಮೇಲೆ ಹೇಳಿದವುಗಳೆಲ್ಲವನ್ನೂ ಕಂಠಪಾಠವಾಗುವಷ್ಟು ಚನ್ನಾಗಿ ಓದಿ ಕಲಿತುಕೊಳ್ಳಬೇಕು. ಇವುಗಳನ್ನು ನೀವು ತಿಳಿದುಕೊಂ ಡಿದ್ದೇ ಆದರೆ, ಇನ್ನು ಮುಂದೆ ಹೇಳುವ ಯೋಗಾಭ್ಯಾಸವನ್ನು ಅಂದರೆ ಪ್ರಾಣಾಯಾಮವನ್ನು ಬಹಳ ಸುಲಭರೀತಿಯಲ್ಲಿ ಮಾಡಲು ಸಾಧ್ಯ ವಾಗುತ್ತದೆ. ಇವೆಲ್ಲವನ್ನೂ ತಿಳಿದುಕೊಳ್ಳದಿದ್ದಲ್ಲಿ ನೀವು ಪ್ರಾಣಾ ಯಾಮವನ್ನು ಅಭ್ಯಸಿಸಲಾರಿರಿ. ಆದುದರಿಂದ ಇವೆಲ್ಲವನ್ನೂ ಸರಿಯಾಗಿ ಪಠಿಸಿ ಮನದಟ್ಟುವಂತೆ ತಿಳಿದು, ಈ ಕೆಳಗೆ ಹೇಳುವ ರೀತಿಯಲ್ಲಿ ಮೊದಲು 25-ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸುವ ಪ್ರಯತ್ನವನ್ನು ಮಾಡಿರಿ. ಇನ್ನು ಪ್ರಾಣಾಯಾಮವನ್ನು ಮಾಡುವ ಪದ್ಧತಿಯನ್ನು ಈ ಕೆಳಗೆ ವಿವರಿ ಸುತ್ತೇವೆ.



# ಯೋಗಾಭ್ಯಾಸ ಪ್ರಾರಂಭವು.

ಯೋಗಾಭ್ಯಾಸವನ್ನು ಮಾಡುವುದಕ್ಕೆ ಆರಂಭಿಸುವವರು ತಮ್ಮ ಮನೆ ಯಲ್ಲಿ ಒಂದು ಸಣ್ಣ ಕೊಠಡಿಯನ್ನು ಕತ್ತಲೆಯಾಗಿರುವಂತೆ ಮಾಡಿಕೊಂ ಡಿರಬೇಕು. ಅಂತಹ ಸಣ್ಣ ಕೋಣೆಯಿಲ್ಲದಿದ್ದಲ್ಲಿ ಗೋಡೆಗೆ ಸಂಬಂಧಿಸಿ ಬಾಗಿಲು ಸಹ ಇರುವಂತೆ ಎರಡು ಪಕ್ಕಗಳಲ್ಲಿಯೂ ತಡಿಕೆಯನ್ನು ಕಟ್ಟಿ ಮೇಲ್ಭಾಗವನ್ನು ತಡಿಕೆಯಿಂದ ಮುಚ್ಚಿ, ಅದನ್ನೇ ಒಂದು ಸಣ್ಣ ಪೂಜಾ

ಗೃಹವಾಗಿ ಮಾಡಿಕೊಳ್ಳಬೇಕು. ಆ ಕೊಠಡಿಯಲ್ಲಿ ಇರುವೆಗಳು, ತಗಣಿಗಳು, ಜಿಗಟೆಗಳು ಮೊದಲಾದುವು ಯಾವುವೂ ಸೇರದಿರುವಂತೆ ಗೋಡೆಗಳಿಗೆ ಸುಣ್ಣವನ್ನು ಬಳಿದು, ಹಸುವಿನ ಸಗಣಿಯಿಂದ ನೆಲವನ್ನು ಸಾರಿಸಿ, ಒಳ್ಳೆಯ ಕವಡೆಯ ಸಾಂಬ್ರಾಣಿಯ ಧೂಪವನ್ನು ಹಾಕಿ, ಸುವಾಸನೆಯುಳ್ಳ ಊದುಬತ್ತಿಗಳನ್ನು ಹೊತ್ತಿಸಿ ಮತ್ತು ಅನೇಕ ವಿಧವಾದ ಸುವಾಸನಾ ದ್ರವ್ಯಗಳನ್ನಿಟ್ಟು ಆ ವಾಸನೆಯು ಹೊರಕ್ಕೆ ಹೋಗದಂತೆ ಸದಾ ಆ ಕೊಠಡಿಯಲ್ಲಿಯೇ ಇರುವಂತೆ ಬಾಗಿಲನ್ನು ಮುಚ್ಚಿ ಸರ್ವದಾ ಚಿಲಕವನ್ನು ಹಾಕಿರಬೇಕು. ಹಾಗೆ ಮಾಡಿದಮೇಲೆ ಆ ಚಿಕ್ಕ ಮನೆಯಲ್ಲಿ ತಾನು ಕುಳಿತುಕೊಳ್ಳುವುದಕ್ಕಾಗಿ ಎರಡಡಿ ಉದ್ದ, ಒಂದೂವರೆ ಅಡಿ ಅಗಲ, ಮುಕ್ಕಾಲಂಗುಲ ದಪ್ಪ ಒಂದಂಗುಲ ಎತ್ತರವುಳ್ಳ ಒಂದು ಪೀಠವನ್ನು ಸಿದ್ಧಪಡಿಸಿ ಆ ಪೂಜಾಗೃಹದಲ್ಲಿ ಪೂರ್ವ-ಪಶ್ಚಿಮವಾಗಿ ಹಾಕಿರಬೇಕು. ಹೀಗೆ ಸಿದ್ಧಪಡಿಸಿಟ್ಟಮೇಲೆ ಆ ಮಣೆಯಮೇಲೆ ದರ್ಭಾಸನವನ್ನೂ ಅದರ ಮೇಲೆ ಜಿಂಕೆಯ ಚರ್ಮವನ್ನೂ ಅದರಮೇಲೆ ಅಪಾನವಾಯುವು ತಗಲದಿರುವುದಕ್ಕಾಗಿ ಬಿಳಿಯ ಬಟ್ಟೆಯನ್ನೂ ಮಡಿತೆಹಾಕಿ ಹಾಸಬೇಕು. ಇದಾದಮೇಲೆ ತನ್ನ ಗುರುಗಳ ಪಠವನ್ನು ಮಾತ್ರವೇ ಆ ಕೋಣೆಯಲ್ಲಿಡಬೇಕು. ಅದಾದಮೇಲೆ ಪ್ರಾಣಾಯಾಮಾಭ್ಯಾಸವನ್ನು ಪ್ರಾರಂಭಿಸುವುದಕ್ಕಾಗಿ, ಮೇಲೆ ಹೇಳಿದ ಚಿಕ್ಕ ಮನೆಯೊಳಕ್ಕೆ ಹೋಗಬೇಕು. ಪ್ರವೇಶಿಸುವಾಗ ಒಂದು ತಂಬಿಗೆ ತುಂಬ ನೀರು, ಪಂಚಪಾತ್ರೆ, ತೆಂಗಿನಕಾಯಿ ಮೊದಲಾದ ಫಲಗಳು, ಕರ್ಪೂರ, ಹೂಪತ್ರೆಗಳು, ಊದಿನಕಡ್ಡಿ, ತುಪ್ಪದ ದೀವಿಗೆ, ಬೆಂಕಿಯಪೆಟ್ಟಿಗೆ, ಎಳ್ಳು, ತಟ್ಟೆಗಳು ಮೊದಲಾದುವುಗಳನ್ನು ಆ ಪೂಜೆಯ ಮನೆಯಲ್ಲಿ ಸಿದ್ಧಮಾಡಿಟ್ಟಿರಬೇಕು. ಹೀಗಿಟ್ಟಮೇಲೆ ಆ ಕೋಣೆಯೊಳಕ್ಕೆ ಹೋಗಿ ಇತರರು ಒಳಕ್ಕೆ ಬರದಿರುವಂತೆ ಪೂಜಾಗೃಹದ ಬಾಗಿಲನ್ನು ಮುಚ್ಚಿ ಅಗಣಿಯನ್ನು ಹಾಕಿಕೊಂಡಮೇಲೆ, ತುಪ್ಪದ ದೀಪವನ್ನೂ, ಊದುಬತ್ತಿಗಳನ್ನೂ ಹೊತ್ತಿಸಿ, ಮೊದಲೇ ಸಿದ್ಧಪಡಿಸಿಟ್ಟಿದ್ದ ಮಣೆಯಮೇಲೆ ಉತ್ತರಾಭಿಮುಖವಾಗಿ ಕುಳಿತುಕೊಳ್ಳಬೇಕು. ಹೀಗೆ ಕುಳಿತುಕೊಂಡಮೇಲೆ ತನ್ನ ಗುರುಗಳ ಪಠಕ್ಕೆ ಪತ್ರಪುಷ್ಪಗಳನ್ನು ಸಮರ್ಪಿಸಿ, ಕೈಯಿಂದ ಎಳ್ಳನ್ನು ಎತ್ತಿ ಅದರೊಳಕ್ಕೆ ನೀರನ್ನು ಬಿಡುತ್ತ

"ದೇಹವು, ಪ್ರಾಣವು, ಧನವು ಈ ಮೂರನ್ನೂ ಗುರುಸ್ವಾಮಿಗಳಿಗೆ ಸಮರ್ಪಿಸಿದೆನು" ಎಂದು ಮನಸ್ಸಿನಲ್ಲಿ ಭಾವಿಸುತ್ತ ಎಳ್ಳುನೀರನ್ನು ತಟ್ಟೆಯಲ್ಲಿ ಬಿಡಬೇಕು. ಹೀಗೆ ಬಿಟ್ಟಮೇಲೆ ತೆಂಗಿನಕಾಯನ್ನು ಒಡೆದು ಕರ್ಪೂರದಾರತಿಯನ್ನೆತ್ತಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮತ್ತೆ ಪೀಠದಮೇಲೆ ಕುಳಿತುಕೊಂಡು ಪಠವನ್ನು ನೋಡುತ್ತ ಎರಡು ಕೈಗಳನ್ನೂ ಜೋಡಿಸಿ,

ಶ್ಲೋ ॥ ಗುರು ರ್ಬ್ರಹ್ಮಾ ಗುರು ರ್ವಿಷ್ಣುಃ ♦ ಗುರು ರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮಾ ♦ ತಸ್ಮೈ ಶ್ರೀಗುರವೇ ನಮಃ ॥

ಈ ಶ್ಲೋಕವನ್ನು ಭಕ್ತಿಯಿಂದ ಪಠಿಸಿದಮೇಲೆ "ನನಗೆ ಯೋಗಸಿದ್ಧಿಯುಂಟಾಗುವಂತೆ ವರವನ್ನು ದಯಪಾಲಿಸಬೇಕು" ಎಂದು ಮನಸ್ಸಿನಲ್ಲೆಣಿಸಿ ಆ ಗುರುಗಳ ಪಠಕ್ಕೆ ನಮಸ್ಕರಿಸಿ ಪದ್ಮಾಸನವನ್ನು ಹಾಕಿ ಕುಳಿತು, ಬೆನ್ನು ಎದೆ ಕೊರಳು ತಲೆ ಮೊದಲಾದುವುಗಳನ್ನು ವಕ್ರವಿಲ್ಲದೆ ಕಡ್ಡಿಯಂತೆ ನೇರವಾಗಿ ನಿಲ್ಲಿಸಬೇಕು. ಶರೀರವನ್ನು ಹೀಗಿಟ್ಟಮೇಲೆ ಯೋಗಾಭ್ಯಾಸವನ್ನು ಮಾಡುವುದಕ್ಕೆ ಪ್ರಾರಂಭಿಸಬೇಕು. ಈ ಯೋಗಾಭ್ಯಾಸವನ್ನು ಮಾಡುವ ಕ್ರಮವನ್ನು ಈ ಕೆಳಗೆ ವಿವರಿಸುತ್ತೇವೆ.

ಶ್ಲೋ ॥ ರೇಚಕೋ ಚ್ಛ್ವಾಸನಿಶ್ವಾಸಃ ♦ ಪೂರಕಃ ಪರಿಚಕ್ಷತೇ ।
ತದ್ರೋಧಃ ಕುಂಭಕಶ್ಚೈವ ♦ ಪ್ರಾಣಾಯಾಮ ಸ್ಸ ಉಚ್ಯತೇ ॥

ಅರ್ಥ :—ಉಚ್ಛ್ವಾಸನಿಶ್ವಾಸಃ = ಒಳಕ್ಕೆ ತೆಗೆದುಕೊಂಡ ಪ್ರಾಣವಾಯುವನ್ನು ಮೂಗಿನ ಹೊಳ್ಳೆಗಳ ಮೂಲಕ ಹೊರಕ್ಕೆ ಬಿಡುವುದು ರೇಚಕಃ = ರೇಚಕವೆಂದೂ, 'ಪೂರಕಃ' = ಶ್ವಾಸವನ್ನು ಒಳಕ್ಕೆ ಎಳೆದುಕೊಳ್ಳುವುದಕ್ಕೆ ಪೂರಕವೆಂದೂ, ಪರಿಚಕ್ಷತೇ = ಹೇಳಲ್ಪಡುತ್ತವೆ. ತದ್ರೋಧಃ = ಆ ಪ್ರಾಣವಾಯುವನ್ನು ಒಳಕ್ಕೂ ಹೊರಕ್ಕೂ ಹೋಗಲೀಯದೆ ಗರ್ಭದಲ್ಲಿಯೇ ನಿಲ್ಲಿಸುವುದಕ್ಕೆ, ಕುಂಭಕಃ = ಕುಂಭಕವೆಂದೂ, ಪರಿಚಕ್ಷತೇ = ಹೇಳಲ್ಪಡುತ್ತದೆ. ಸಃ = ಅದೇ, ಪ್ರಾಣಾಯಾಮಃ = ಪ್ರಾಣಾಯಾಮವೆಂದು, ಉಚ್ಯತೇ = ಹೇಳಲ್ಪಡುತ್ತದೆ.

ಅಂದರೆ ಒಳಗೆ ನಿಂತಿರುವ ಪ್ರಾಣವಾಯುವನ್ನು ಮೂಗಿನ ರಂಧ್ರಗಳ ಮೂಲಕ ಹೊರಕ್ಕೆ ಬಿಡುವುದಕ್ಕೆ 'ರೇಚಕ'ವೆಂದೂ, ತಾನು

ಹೊರಕ್ಕೆಬಿಟ್ಟ ಅಶುದ್ಧವಾಯುವು ಹೊರಗಡೆ ಇರುವ ಒಳ್ಳೆಯ ವಾಯುವಿನೊಡನೆ ಕಲೆತು ಶುದ್ಧಿಹೊಂದಿ, ಪುನಃ ಆ ಶ್ವಾಸದಲ್ಲಿ ಸ್ವಲ್ಪಭಾಗ ಶ್ವಾಸವನ್ನು ಒಳಕ್ಕೆಳೆಯುವುದಕ್ಕೆ 'ಪೂರಕ'ವೆಂದೂ ಮತ್ತು ಉಚ್ಛ್ವಾಸವಾಯುವನ್ನು ಹೊರಕ್ಕೆ ಬಿಡದೆ ಒಳಗೆ ನಿಲ್ಲಿಸಿದ್ದೇ ಆದರೆ, ಅದಕ್ಕೆ 'ಕುಂಭಕ' ವೆಂದೂ ಹೆಸರು. **ಇದು ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯವು ಪ್ರಾಣಾಯಾಮಾಭ್ಯಾಸಕ್ಕೆ ಇದು ಮುಖ್ಯ ಪ್ರಾರಂಭ ಸಾಧನೆಯು.** ಇನ್ನು ಪ್ರಾಣಾಯಾಮಾಭ್ಯಾಸವನ್ನು ಮಾಡುವ ಕ್ರಮವನ್ನು ಕುರಿತು ಈ ಕೆಳಗೆ ತಿಳಿಯಹೇಳುತ್ತೇವೆ.

ಅಯ್ಯಾ! ಮೇಲೆ ಹೇಳಿದ ರೀತಿಯಲ್ಲಿ ಪೂಜೆಯ ಕೋಣೆಯಲ್ಲಿ ಗುರುಗಳ ಪೂಜೆಯನ್ನು ಮಾಡಿ ಮುಗಿಸಿದಮೇಲೆ, ಮುಖವನ್ನು ಉತ್ತರಕ್ಕೆ ತಿರುಗಿಸಿ ಪೀಠದಮೇಲೆ ಕುಳಿತು ಪಂಚಪಾತ್ರೆಯಲ್ಲಿರುವ ನೀರಿನಲ್ಲಿ ಮೂರು ಗುಟುಕು ನೀರನ್ನು ಕುಡಿದು ಅಂದರೆ 'ತ್ರಿರಾಚಮನ'ವನ್ನು ಮಾಡಿ, ತಲೆ ಕತ್ತು ಹೆಗಲು ಬೆನ್ನು ಎದೆ ಮೊದಲಾದುವುಗಳನ್ನು ನೇರವಾಗಿ ಕಡ್ಡಿಯಂತೆ ನಿಲ್ಲಿಸಿ, ಕಣ್ಣುಗಳನ್ನೂ ಬಾಯನ್ನೂ ಮುಚ್ಚಿ ಬಲಗೈಯ ಉಂಗುರದ ಬೆರಳು ಹೆಬ್ಬೆಟ್ಟು ಈ ಎರಡನ್ನೂ ಮೂಗಿನ ಎಡಬಲ ಭಾಗಗಳನ್ನು ಮುಟ್ಟುವಂತೆ ಇಡಬೇಕು. ಹೀಗಿಟ್ಟಮೇಲೆ ಬಲಗೈಯುಂಗುರದ ಬೆಟ್ಟಿನಿಂದ ಎಡದಮೂಗನ್ನು ಮುಚ್ಚಿ ಬಲಭಾಗದ ಶ್ವಾಸಕೋಶದಲ್ಲಿ ನಿಂತಿರುವ ಹಳೆಯ ಶ್ವಾಸವೆಲ್ಲವನ್ನೂ ಸ್ವಲ್ಪವೂ ಒಳಗೆ ನಿಲ್ಲಿಸದೆ ಬಲಮೂಗಿನ ಮೂಲಕ ಹೊರಕ್ಕೆ ಬಿಟ್ಟುಬಿಡಬೇಕು. ಹೀಗೆ ಶ್ವಾಸವೆಲ್ಲವನ್ನೂ ಬಲ ಮೂಗಿನ ಮೂಲಕ ಹೊರಕ್ಕೆ ಬಿಟ್ಟೊಡನೆಯೇ ಅದರ ಹಿಂದೆಯೇ ಪುನಃ ಶ್ವಾಸವನ್ನು ಒಳಕ್ಕೆಳೆಯಬೇಕು. ಹೀಗೆ ಮೇಲಕ್ಕೆಳೆಯುವ ಶ್ವಾಸದೊಡನೆ 'ಓಂ-ಓಂ-ಓಂ' ಎಂಬ ಪ್ರಣವಮಂತ್ರವನ್ನು ಸೇರಿಸಿ, ಹೃದಯದಲ್ಲಿರುವ ಶ್ವಾಸಕೋಶದಲ್ಲಿ ಎಷ್ಟು ಶ್ವಾಸವು ಹಿಡಿಯುತ್ತದೆಯೋ ಅಷ್ಟು ಶ್ವಾಸವನ್ನೂ ಸ್ವಲ್ಪಸ್ವಲ್ಪವಾಗಿ ಅಂದರೆ ನೆಮ್ಮದಿಯಾಗಿ 'ಓಂ-ಓಂ' ಎಂಬ ಮಂತ್ರದೊಡನೆ ಎಳೆದು ನುಂಗಿ ತಕ್ಷಣವೇ ಆ ಶ್ವಾಸವು ಹೊರಕ್ಕೆ ಬಾರದಿರುವಂತೆ

ಕಂಠವನ್ನು ಮುಚ್ಚಿಬಿಡಬೇಕು. ಈರೀತಿಯಾಗಿ ಮುಚ್ಚಿದಮೇಲೆ ಇನ್ನೇನಾದರೂ ಸ್ವಲ್ಪ ಶ್ವಾಸವು ಒಳಗೆ ಹಿಡಿಯುತ್ತದೆಯೋ ಎಂದು ಎಣಿಸಿ, ಮತ್ತೊಂದುಬಾರಿ ಶ್ವಾಸವನ್ನು ಒಳಕ್ಕೆಳೆದು ನೋಡಬೇಕು. ಆಗ ಅರ್ಧ ಒಂದು ಇಲ್ಲವೇ, ಎರಡು ಮೂರು ನಾಲ್ಕಂಗುಲಗಳುದ್ದದಷ್ಟು ಶ್ವಾಸವು ಮೇಲಕ್ಕೇರುತ್ತದೆ. ಹಾಗೆ ಹತ್ತದಿದ್ದರೂ ಇರಬಹುದು. ಆದರೂ ಶ್ವಾಸವನ್ನು ಎಳೆದೇ ನೋಡಬೇಕು. ಆಗ ಆ ಶ್ವಾಸವನ್ನು ಕೂಡ ನುಂಗಿ ಮತ್ತೆ ಗಂಟಲನ್ನು ಮುಚ್ಚಿಬಿಡಬೇಕು. ಹೀಗೆ ಕಂಠವನ್ನು ಮುಚ್ಚಿದಮೇಲೆ ಒಳಕ್ಕೆಳೆದ ಶ್ವಾಸವು ಹೊರಕ್ಕೆ ಬರದಂತೆ ಬಲಭಾಗದ ಶ್ವಾಸಕೋಶದಲ್ಲಿಯೇ ನಿಂತಿರುವುದು. ಕಂಠದ ಸಮೀಪದಲ್ಲಿ ಮುಂಭಾಗದಲ್ಲಿ ನರಗಳಿಂದ ಕೂಡಿದ ದೊಡ್ಡ ನಾಳವೊಂದಿದೆ. ಆ ನಾಳದ ಮೂಲಕ ಉಚ್ಛ್ವಾಸ ನಿಶ್ವಾಸಗಳು ನಡೆಯುತ್ತಿರುತ್ತವೆ. ಈ ದೊಡ್ಡ ನಾಳದ ಹಿಂದೆ ಸಣ್ಣದಾದ ಚರ್ಮನಾಳವು ಮತ್ತೊಂದಿದೆ. ಇದೇ ಅನ್ನನಾಳ. ಇದರ ಮೂಲಕ ತಿನ್ನುವ ಆಹಾರವೂ ಕುಡಿಯುವ ನೀರೂ ಶರೀರದೊಳಕ್ಕೆ ಹೋಗುತ್ತವೆ. ಯಾವಾಗಲಾದರೂ ಒಂದುವೇಳೆ ಅನ್ನವನ್ನು ನುಂಗುವಾಗ ಕಂಠದ ಹಿಂದಿರುವ ಈ ಸಣ್ಣ ಅನ್ನನಾಳದಲ್ಲಿ ಹೋಗುತ್ತಿರುವ ಅನ್ನದ ಒಂದೆರಡು ಅಗಳುಗಳು ಉಚ್ಛ್ವಾಸ ನಿಶ್ವಾಸಗಳಾಡುತ್ತಿರುವ ದೊಡ್ಡ ನಾಳದೊಳಕ್ಕೆ ಇಳಿಯುತ್ತವೆ. ಆಗ ಉಚ್ಛ್ವಾಸ ನಿಶ್ವಾಸಗಳು ನಡೆಯುತ್ತಿರುವ ನಾಳದಲ್ಲಿ ಅಗಳುಗಳು ಇಳಿದ ತಕ್ಷಣವೇ, ಶ್ವಾಸಕೋಶಗಳಿಂದ ಹೊರಕ್ಕೆ ಬರುತ್ತಿರುವ ಶ್ವಾಸವು ಆ ಅಗಳುಗಳನ್ನು ಒಳಕ್ಕಿಳಿಯಲೀಯದೆ ಮೂಗಿನ ಮೂಲಕ ಹೊರಕ್ಕೆ ಬರುವಂತೆ ಮಾಡುತ್ತದೆ. ಒಂದೊಂದು ಸಮಯದಲ್ಲಿ ನೀರು ಅಹಾರನಾಳದ ಮೂಲಕ ಹೋಗುವುದು ತಪ್ಪಿ ಅದು ಗಂಟಲಿನಲ್ಲಿರುವ ಶ್ವಾಸನಾಳದೊಳಕ್ಕೆ ಹೋಗುತ್ತದೆ. ಆಗ ಆ ಜಲವನ್ನು ಕೂಡ ಶರೀರದೊಳಕ್ಕೆ ಹೋಗಲೀಯದೆ, ಹೊರಬರುತ್ತಿರುವ ಶ್ವಾಸವು ಮೂಗಿನ ಮೂಲಕವಾಗಿ ಈಚೆಗೆ ತೆಗೆದುಕೊಂಡು ಬಂದು ಹೊರಕ್ಕೆ ತಳ್ಳುತ್ತದೆ. ಈ ರಹಸ್ಯವನ್ನು ಜನಗಳು ತಿಳಿಯಲಾರದೆ "ಹೊರೆ ಹೋಯಿತು" ಎಂದು ತಲೆಯಮೇಲೆ ತಟ್ಟುತ್ತಾರೆ. ಶ್ವಾಸನಾಳವನ್ನೂ




ಅನ್ನನಾಳವನ್ನೂ ಬೇರೆ ಬೇರೆಯಾಗಿ ತೋರಿಸಿ ಆ ಎರಡು ನಾಳಗಳು ಒಂದಾಗಿ ಸೇರಿರುವುದನ್ನು ಇಗೋ ☛ ಈ ಮುಂಭಾಗದರುವಲ್ಲಿ ಚಿತ್ರಪಠದಲ್ಲಿ ತೋರಿಸಿದೆ.

ಪ್ರಾಣಾಯಾಮಾಭ್ಯಾಸವನ್ನು ಮಾಡುವ ಪುರುಷನು ಮೊದಲು ಹೇಳಿದ ರೀತಿಯಲ್ಲಿ ಬಲಮೂಗಿನಲ್ಲಿ ಶ್ವಾಸವನ್ನು ಒಳಕ್ಕೆಳೆದು ನುಂಗಿದ ಮೇಲೆ ಪುನಃ ಆ ಶ್ವಾಸವು ಹೊರಕ್ಕೆ ಬರದಿರುವಂತೆ ಶ್ವಾಸನಾಳ ಆಹಾರ ನಾಳ ಇವೆರಡೂ ಒಂದಾಗಿ ಕಲೆಯುವ ಸ್ಥಳದಲ್ಲಿ ಗಂಟಲನ್ನು ಮುಚ್ಚಿಬಿಡಬೇಕು. ಹೀಗೆ ಮುಚ್ಚಿದುದೇ ಆದರೆ, ಶ್ವಾಸವು ಹೊರಕ್ಕೆ ಬರುವುದಕ್ಕೆ ಅವಕಾಶವಿಲ್ಲದೆ ಕಂಠದ ಸಮೀಪದಲ್ಲಿಯೇ ನಿಂತುಹೋಗುವುದು. ಮುಖ್ಯಮುಖ್ಯವಾದ ಸಂದರ್ಭಗಳಲ್ಲಿ ಒಂದುವೇಳೆ ಹೇಳಿದ ವಿಷಯವನ್ನೇ ಈ ಗ್ರಂಥದಲ್ಲಿ ಅನೇಕಬಾರಿ ಒತ್ತಿಒತ್ತಿ ಹೇಳಿರುತ್ತೇವೆ. ಹೀಗೆ ಪುನಃಪುನಃ ಹೇಳದಿದ್ದಲ್ಲಿ ಈ ಪ್ರಾಣಾಯಾಮ ವಿಷಯವು ಬುದ್ಧಿಗೆ ಸುಲಭವಾಗಿ ನಿಲುಕದು. ಸೂಕ್ಷ್ಮಬುದ್ಧಿಯುಳ್ಳವರು ಒಂದುಸಾರಿ ಈ ವಿಷಯವನ್ನು ಓದಿದ ಮಾತ್ರದಿಂದಲೇ ಎಲ್ಲವನ್ನೂ ಗ್ರಹಿಸಬಲ್ಲರು. ಸ್ವಲ್ಪ ಸಾವಧಾನ ಬುದ್ಧಿಯುಳ್ಳವರು ಹಾಗೆ ಈ ವಿಷಯವನ್ನು ಸುಲಭವಾಗಿ ಗ್ರಹಿಸಲಾರರೆಂದು ತಿಳಿದು ಅವರಿಗೋಸ್ಕರ ಹೇಳಿದುದನ್ನೇ ಪುನಃಪುನಃ ಹೇಳಿದೆ.

ಪ್ರಾಣಾಯಾಮಾಭ್ಯಾಸಿಗಳು ಮೊದಮೊದಲು 25-ಎಣಿಸುವವರೆಗೆ ಮಾತ್ರವೇ ಶ್ವಾಸವನ್ನು ನಿಲ್ಲಿಸಬೇಕು. ಇದಕ್ಕೆ ಹೆಚ್ಚು ಹೋಗಬಾರದು. ಹಾಗೆ ಇದಕ್ಕಿಂತಲೂ ಹೆಚ್ಚಾಗಿ ಶ್ವಾಸವನ್ನು ನಿಲ್ಲಿಸಿದ್ದೇ ಆದರೆ, ಅಂಥವರಿಗೆ ದೇಹಾಪಾಯವು ಸಂಭವಿಸಬಹುದು. ಈ ಗ್ರಂಥಕರ್ತರು ಈ ಗ್ರಂಥದಲ್ಲಿ ಹೇಳುವ ರೀತಿಯಲ್ಲಿಯೇ ಮಾಡಬೇಕು. ಹಾಗೆ ಮಾಡಿದ್ದೇ ಆದರೆ, ನಿಮಗೆ ಎಂತಹ ವ್ಯಾಧಿಯಾಗಲಿ, ಶರೀರಶ್ರಮವಾಗಲಿ, ಆಪತ್ತುಗಳಾಗಲಿ

ಬರಲಾರವು. ಈ ಪ್ರಾಣಾಯಾಮಾಭ್ಯಾಸವನ್ನು ಪ್ರಾರಂಭಿಸಿದಮೇಲೆ ನಲವತ್ತು ದಿನಗಳಿಗೆ ಒಂದುಸಾರಿ ಶ್ವಾಸವನ್ನು ನಿಲ್ಲಿಸಿ ಇಪ್ಪತ್ತೈದು ಇಪ್ಪತ್ತೈದಾಗಿ ಹೆಚ್ಚಿಸಿಕೊಂಡು ಹೋಗಬೇಕೇ ಹೊರತು, ನಲವತ್ತು ದಿನಗಳೊಳಗಾಗಿ ಶ್ವಾಸವನ್ನು ನಿಲ್ಲಿಸಿ ಎಣಿಕೆಯನ್ನು ಹೆಚ್ಚಿಸಬಾರದು. ಈ ಗ್ರಂಥಕರ್ತರು ಇನ್ನು ಮುಂದೆ ಹೇಳುವ ರೀತಿಯಲ್ಲಿ ನೀವು ನಡೆದಿದ್ದೇ ಆದರೆ, ಈ ಪ್ರಾಣಾಯಾಮವು ನಿಮ್ಮನ್ನು ಉತ್ತಮವಾದ ಸ್ಥಿತಿಗೆ ತಂದು ನಿಮಗೆ ಜನ್ಮರಾಹಿತ್ಯವನ್ನುಂಟುಮಾಡುವುದು. ನಿಮ್ಮ ಇಷ್ಟಾನುಸಾರ ವಾಗಿ ಶ್ವಾಸವನ್ನು ನಿಲ್ಲಿಸಿ ಆತುರಪಟ್ಟು ಸಂಖ್ಯೆಗಳನ್ನು ಹೆಚ್ಚಿಸಿ ಕೊಂಡು ಹೋದರಾಗಲಿ, ಇಲ್ಲವೇ ದಿನವೊಂದಕ್ಕೆ ಮೂರು ನಾಲ್ಕುಸಾರಿ ಮಾಡಿದರಾಗಲಿ, ಆ ಶ್ವಾಸವು ಯಾವುದೋ ಒಂದು ದಿನ ನಿಮಗೆ ಪ್ರಾಣಾಂತಕವಾದ ಅಪಾಯವನ್ನುಂಟುಮಾಡುತ್ತದೆ. ಇದಕ್ಕೆ ಯೋಗ ಚೂಡಾಮಣ್ಯುಪನಿಷತ್ತಿನ ಪ್ರಮಾಣವನ್ನು ಇನ್ನು ಮುಂದೆ ಹೇಳು ತ್ತೇವೆ. ಆದುದರಿಂದ ಈ ವಿಷಯದಲ್ಲಿ ಮಟ್ಟಿಗೆ ಬಹಳ ಜಾಗರೂಕ ರಾಗಿರಬೇಕು.

ಅಯ್ಯಾ! ನೀವು ಈ ಗ್ರಂಥಕರ್ತರು ಹೇಳಿದ ಬಗೆಯಲ್ಲಿ ಮಾಡದೆ ನಿಮ್ಮ ಇಷ್ಟಾನುಸಾರವಾಗಿಯೇ ನಡೆದು ಅದರಿಂದ ಯಾವುದೋ ಒಂದು ವಿಪತ್ತಿಗೆ ಈಡಾಗಿ ನಿಮ್ಮ ಕುಟುಂಬದವರೂ, ಬಂಧುಮಿತ್ರರೂ ಈ ಗ್ರಂಥಕರ್ತರನ್ನು ದೂಷಿಸುವಂಥ ಸ್ಥಿತಿಗೆ ದಯವಿಟ್ಟು ತರಬೇಡಿ. ನೀವು ಬುದ್ಧಿಯಿಲ್ಲದೆ ಮಾಡಿಕೊಂಡು ಈ ಗ್ರಂಥಕರ್ತರನ್ನು ಅನ್ಯಾಯವಾಗಿ ದೂಷಿಸಿದುದರಿಂದ ಫಲವೇನು? ಆದುದರಿಂದ ಜಾಗ್ರತೆ! ಜಾಗ್ರತೆ!! ಜಾಗ್ರತೆ!!! ಎಂದು ನಿಮಗೆ ಮೂರು ಸಾರಿ ಎಚ್ಚರಿಕೆ ಹೇಳುತ್ತಿದ್ದೇವೆ. ಬಲಮೂಗಿನಲ್ಲಿ 25-ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸುವ ವಿಷಯ ವನ್ನು ಇನ್ನು ಮುಂದೆ ತಿಳಿಸುತ್ತೇವೆ.



# ಬಲಮೂಗಿನಲ್ಲಿ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸುವಿಕೆ.

---

ಅಯ್ಯಾ! ಈ ಹಿಂದೆ ಸಿದ್ಧಪಡಿಸಿದ್ದ ಪೂಜೆಯ ಕೋಣೆಯೊಳಕ್ಕೆ ಹೋಗಿ ಹಿಂದೆ ಹೇಳಿದಂತೆ ತುಪ್ಪದ ದೀಪ ಮತ್ತು ಊದುಬತ್ತಿಗಳು ಇವುಗಳನ್ನು ಹೊತ್ತಿಸಿ, ಮಣೆಯಮೇಲೆ ಹಾಕಿಟ್ಟಿದ್ದ ಕೃಷ್ಣಾಜಿನ ಅಂದರೆ ಜಿಂಕೆಯಚರ್ಮದಮೇಲೆ ಉತ್ತರಾಭಿಮುಖವಾಗಿ ಪದ್ಮಾಸನದಿಂದ ಕುಳಿತುಕೊಂಡು, ನಿಮ್ಮ ಗುರುಗಳ ಪಠಕ್ಕೆ ಪತ್ರ ಪುಷ್ಪ ಫಲ ಕರ್ಪೂರದಾರತಿ ಮೊದಲಾದುವುಗಳನ್ನು ಸಮರ್ಪಿಸಿ ಎರಡು ಕೈಗಳನ್ನೂ ಜೋಡಿಸಿ ಸಾಷ್ಟಾಂಗಪ್ರಣಾಮವನ್ನು ಮಾಡುತ್ತ, ಈ ಹಿಂದೆ ಹೇಳಿದ ಪ್ರಕಾರವೇ,

ಶ್ಲೋ॥ ಗುರು ಬ್ರ್ಹಹ್ಮಾ ಗುರುರ್ವಿಷ್ಣುಃ ♦ ಗುರು ದೇರ್ವೋ ಮಹೇಶ್ವರಃ।
ಗುರು ಸ್ಸಾಕ್ಷಾತ್ ಪರಬ್ರಹ್ಮಾ ♦ ತಸ್ಮೈ ಶ್ರೀ ಗುರವೇ ನಮಃ॥

ಎಂದು ಶ್ರೀ ಗುರುಧ್ಯಾನವನ್ನು ಮಾಡಿ ಮುಗಿಸಿದಮೇಲೆ "ನನಗೆ ಯೋಗವು ಸಿದ್ಧಿಸುವಂತೆ ವರವನ್ನು ಅನುಗ್ರಹಿಸಬೇಕು" ಎಂದು ಮನಸ್ಸಿನಲ್ಲಿ ಕೋರಬೇಕು. ಹೀಗೆ ಮನಸ್ಸಿನಲ್ಲೆಣಿಸಿದಮೇಲೆ ಒಂದು ಪಂಚಪಾತ್ರೆಯಲ್ಲಿ ನೀರನ್ನಿರಿಸಿಕೊಂಡು ಅದನ್ನು ಉದ್ಧರಣೆಯಿಂದ ಮೂರುಸಾರಿ ಆಚಮನಮಾಡಬೇಕು. ಆಮೇಲೆ ಶರೀರವನ್ನು ವಕ್ರವಿಲ್ಲದೆ ಕಡ್ಡಿಯಂತೆ ನೇರವಾಗಿ ನಿಲ್ಲಿಸಿ, ಕಣ್ಣುಗಳು ಮತ್ತು ಬಾಯಿ ಇವುಗಳನ್ನು ಮುಚ್ಚಿಕೊಳ್ಳಬೇಕು. ಇವನ್ನು ಮುಚ್ಚಿದಮೇಲೆ, ಎಡದ ಮೂಗಿನ ಹೊಳ್ಳೆಯನ್ನು

ಬಲಗೈ ಉಂಗುರದ ಬೆರಳಿನಿಂದ ಮುಚ್ಚಿಕೊಂಡು ಬಲಭಾಗದ ಶ್ವಾಸ ಕೋಶದಲ್ಲಿರುವ ಹಿಂದೆ ಎಳೆದಿದ್ದ ವಾಯುವನ್ನು ಸ್ವಲ್ಪಮಾತ್ರವೂ ಅದರಲ್ಲುಳಿಸದೆ ಬಲದಮೂಗಿನ ಹೊಳ್ಳೆಯ ಮೂಲಕ ಒಂದೇಸಾರಿ ಒಟ್ಟಿಗೆ ಬಿಡದೆ ಸ್ವಲ್ಪಸ್ವಲ್ಪವಾಗಿ ಅಂದರೆ ನಿಧಾನವಾಗಿ 'ಓಂ-ಓಂ' ಎಂಬ ಮಂತ್ರದಿಂದ ಹೊರಕ್ಕೆ ಬಿಡುತ್ತ, ಪುನಃ ಅದರ ಹಿಂದೆಯೇ ಶ್ವಾಸವನ್ನು ಬಲದ ಮೂಗಿನ ಮೂಲಕ 'ಓಂ-ಓಂ' ಎಂಬ ಮಂತ್ರದೊಡನೆ ಒಳಕ್ಕೆಳೆಯಬೇಕು.

ಅಯ್ಯಾ! ಶ್ವಾಸವನ್ನು ನಿಲ್ಲಿಸದೆ ಒಂದೇ ಸಮನಾಗಿ ಒಳಕ್ಕೆಳೆಯುವಾಗ, ಸುಮಾರು ಒಂದು ಮೊಳದುದ್ದ ಶ್ವಾಸವು ಒಳಕ್ಕೆ ಪ್ರವೇಶಿಸುತ್ತದೆ. ಆಗ ಈ ಒಂದು ಮೊಳದುದ್ದ ಶ್ವಾಸವನ್ನು ಒಂದೇಸಾರಿ ಎಳೆಯದೆ ಸಲ ಒಂದಕ್ಕೆ ಎರಡೆರಡಂಗುಲದ ಮಾತ್ರವೇ ಸ್ವಲ್ಪಸ್ವಲ್ಪವಾಗಿ ಶ್ವಾಸಕೋಶದಲ್ಲಿ ಹಿಡಿಯುವಷ್ಟು ಶ್ವಾಸವನ್ನು ಬಲಮೂಗಿನ ಹೊಳ್ಳೆಯಲ್ಲಿ ಶರೀರದೊಳಕ್ಕೆ ಎಳೆಯಬೇಕು. ಹಾಗೆ ಸ್ವಲ್ಪಸ್ವಲ್ಪವಾಗಿ ಎಳೆಯುವಾಗ ಒಂದೊಂದು ಶ್ವಾಸಭಾಗದಲ್ಲಿಯೂ 'ಓಂ-ಓಂ' ಎಂಬ ಏಕಾಕ್ಷರ ಪ್ರಣವವನ್ನು ಮನಸ್ಸಿನಲ್ಲಿ ನೆನೆಯುತ್ತ, ಪ್ರತಿ ಶ್ವಾಸದಲ್ಲಿಯೂ ಸೇರಿಸುತ್ತ, ಬಲದ ಮೂಗಿನಿಂದ ಎಳೆಯುತ್ತ, ಶರೀರದಲ್ಲಿರುವ ಬಲದ ಶ್ವಾಸಕೋಶ (Right Lung) ದಲ್ಲಿ ಎಷ್ಟು ಶ್ವಾಸವು ಹಿಡಿಯುತ್ತದೆಯೋ ಅಷ್ಟನ್ನೂ ನುಂಗಿ, ಈ ಹಿಂದೆ ತೋರಿಸಿರುವ ರುಂಡಭಾಗದ ಚಿತ್ರಪಠದಲ್ಲಿ ಶ್ವಾಸನಾಳ (Air Path) ಆಹಾರನಾಳ (Food Path) ಇವೆರಡೂ ಕೂಡುವ ಸ್ಥಳದಲ್ಲಿ ಕಂಠವನ್ನು ಮುಚ್ಚಿಬಿಡಬೇಕು. ಹೀಗೆ ಮುಚ್ಚಿದನಂತರ, ಇನ್ನೂ ಏನಾದರೂ ಶ್ವಾಸವು ಶ್ವಾಸಕೋಶದಲ್ಲಿ ಹಿಡಿಯುವುದೋ ಏನೋ ಎಂದು ಎಣಿಸಿ, ಪುನಃ ಶ್ವಾಸವನ್ನು 'ಓಂ'-ಎಂಬ ಪ್ರಣವಮಂತ್ರದಿಂದ ಒಳಕ್ಕೆಳೆದು ನೋಡಬೇಕು. ಆಗ ಒಂದಂಗುಲದುದ್ದದಷ್ಟು ಶ್ವಾಸವಾಗಲಿ ಅಥವ ಎರಡುಮೂರಂಗುಲದುದ್ದದಷ್ಟಾಗಲಿ ಬಲದಮೂಗಿನಲ್ಲಿ ಏರುತ್ತದೆ. ಒಂದುವೇಳೆ ಏರದೆಯೂ ಇರಬಹುದು. ಹಾಗೇರದಿದ್ದರೂ ಶ್ವಾಸವನ್ನು

ಎಳೆದೇ ನೋಡಬೇಕು. ಆಗ ಆ ಶ್ವಾಸವನ್ನು ಕೂಡ ನುಂಗಬೇಕು. ಹಾಗೆ ನುಂಗಿದ್ದರಿಂದ ಶ್ವಾಸಕೋಶವು ಪೂರ್ತಿಯಾಗಿ ತುಂಬುತ್ತದೆ. ಇದಾದನಂತರ ಮೂಗಿನ ಎಡಬಲ ಭಾಗದ ಮೇಲಿರುವ ಉಂಗುರದಬೆಟ್ಟು ಹೆಬ್ಬೆಟ್ಟುಗಳನ್ನು ತೆಗೆದುಬಿಡಬೇಕು. ತರುವಾಯ, ರಸ್ತೆಯಲ್ಲಿ ಮೈಲಿಗಳ ಸಂಖ್ಯೆಯನ್ನು ತೋರಿಸುವುದಕ್ಕಾಗಿ ಹಾಕಿರುವ ಮೈಲಿ ಕಲ್ಲುಗಳಮೇಲೆ ಕೆತ್ತಿರುವಂಥ **1-2-3-4** ಎಂಬ ದೊಡ್ಡದಾದ ಸಂಖ್ಯೆಗಳಲ್ಲಿ **1**-ಎಂಬ ಸಂಖ್ಯೆಯನ್ನು, ಕಣ್ಣುಗಳನ್ನು ಮುಚ್ಚಿ ಮನಸ್ಸಿನಲ್ಲಿ ನೆನೆಸಿಕೊಂಡು ಭ್ರೂ ಮಧ್ಯವನ್ನು ನೋಡಿದ್ದೇ ಆದರೆ, ಆ **1**-ಎಂಬ ಸಂಖ್ಯೆಯೇ ಆ ಭ್ರೂ ಮಧ್ಯದಲ್ಲಿ ಕಂಡುಬರುತ್ತದೆ. ಆ ಸಂಖ್ಯೆಯನ್ನೇ ದೃಷ್ಟಿಸಿ ನೋಡುತ್ತಿರ ಬೇಕು. ಹಾಗೆ ಅದನ್ನು ದೃಷ್ಟಿಸುತ್ತಿರುವಾಗ ನಿಮ್ಮ ಮನಸ್ಸು ಅಲ್ಲಿಗಿಲ್ಲಿಗೆ ಚಲಿಸುವುದಕ್ಕಾರಂಭಿಸಿದರೆ ಆ **1**-ಎಂಬ ಸಂಖ್ಯೆಯು ತಕ್ಷಣವೇ ಕಣ್ಮರೆ ಯಾಗುತ್ತದೆ. ಆದುದರಿಂದ ಮನಸ್ಸನ್ನು ಅತ್ತಿತ್ತ ಕದಲದಂತೆ ಮಾಡಿ ದೃಷ್ಟಿಯನ್ನು ಆ ಸಂಖ್ಯೆಯಮೇಲೆಯೇ ನಿಲ್ಲಿಸಬೇಕು. ಹೀಗೆ ನಿಲ್ಲಿಸಿದ ಮೇಲೆ ಎರಡು ಕೈಗಳನ್ನೂ ಎರಡು ತೊಡೆಗಳ ಮೇಲಿಟ್ಟು ಭ್ರೂಮಧ್ಯ ದಲ್ಲಿರುವ ಆ **1**-ಎಂಬ ಸಂಖ್ಯೆಯನ್ನು ಮನೋದೃಷ್ಟಿಯಿಂದ ನೋಡುತ್ತ, ಬಲಗೈಯ 1-2-3-4-5 ಈ ಬೆಟ್ಟುಗಳನ್ನು ನೀಡುವುದರಿಂದಲೋ ಇಲ್ಲವೇ ಮಡಿಸುವುದರಿಂದಲೋ ಎಣಿಸಿ ಮುಗಿಸಿದಮೇಲೆ, ಎಡಗೈಯ ಕಿರುಬೆರಳನ್ನು ಮಡಿಸಬೇಕು. ಪುನಃ ಬಲಗೈ ಐದು ಬೆರಳುಗಳನ್ನೂ ಒಂದೊಂದರಂತೆ ಮಡಿಸಿದಮೇಲೆ ಎಡಗೈ ಉಂಗುರದ ಬೆರಳನ್ನು ಮಡಿಸಬೇಕು. ಈರೀತಿ ಯಾಗಿ ಎಡಗೈ ಐದು ಬೆರಳುಗಳನ್ನೂ ಮಡಿಸುವ ಹೊತ್ತಿಗೆ ಐದು ಐದಲ ಇಪ್ಪತ್ತೈದು ($5 \times 5 = 25$) ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸಬೇಕು. ಎಚ್ಚರಿಕೆ ! ಎಚ್ಚರಿಕೆ !! ಭ್ರೂಮಧ್ಯದಲ್ಲಿರುವ **1**-ಎಂಬ ಸಂಖ್ಯೆಯಿಂದ ದೃಷ್ಟಿಯನ್ನು ಅತ್ತಿತ್ತ ಕದಲಿಸದಂತೆ ಎಚ್ಚರಿಕೆಯಿಂದಿರಬೇಕು. ಭ್ರೂಮಧ್ಯದಲ್ಲಿರುವ ಸಂಖ್ಯೆಯು ಈಗ ನಿಮಗೆ ಪ್ರಯೋಜನಕಾರಿಯಲ್ಲ.

ಇನ್ನುಮುಂದೆ ಇದರ ಪ್ರಯೋಜನವು ಕಂಡುಬರುತ್ತದೆ. ಆ ಸಮಯ ಕ್ಕಾಗಿಯೇ ಈಗಿನಿಂದ ಭ್ರೂಮಧ್ಯದಲ್ಲಿ ಸಂಖ್ಯೆಗಳನ್ನು ನಿಲ್ಲಿಸುವಂತೆ ಅಭ್ಯಸಿಸುತ್ತಿರಬೇಕು. ಈಗ ಆ ಅಭ್ಯಾಸವಾಗದಿದ್ದಲ್ಲಿ ಮುಂದಕ್ಕೆ ಸಂಖ್ಯೆ ಗಳನ್ನು ಭ್ರೂಮಧ್ಯದಲ್ಲಿ ನಿಲ್ಲಿಸಲು ಸಾಧ್ಯವಾಗಲಾರದು. ಆದುದರಿಂದ ಪ್ರಾರಂಭದಲ್ಲಿಯೇ ಈ ಅಭ್ಯಾಸವನ್ನು ಚನ್ನಾಗಿ ಮಾಡಿಕೊಳ್ಳಬೇಕು. ಮೇಲೆಹೇಳಿದ ರೀತಿಯಲ್ಲಿ ಬಲಮೂಗಿನಲ್ಲಿ ಶ್ವಾಸವನ್ನು ಮೇಲಕ್ಕೆಳೆದು ನಿಲ್ಲಿಸಿ ಇಪ್ಪತ್ತೈದರ (25) ವರಿವಿಗೆ ಎಣಿಸಿ ಮುಗಿಸಿದ ತಕ್ಷಣವೇ ಆ ಶ್ವಾಸವನ್ನು ಪುನಃ ಹೊರಕ್ಕೆ ಬಿಡಬಹುದು. ಅದನ್ನು ಹೊರಕ್ಕೆ ಬಿಡುವ ಕ್ರಮವನ್ನು ಈ ಕೆಳಗೆ ಹೇಳಿದೆ.

ಶ್ವಾಸವನ್ನು ಮೇಲಕ್ಕೆಳೆಯುವಾಗ ಎಡಮೂಗನ್ನು ಮುಚ್ಚಿ ಬಲ ಮೂಗಿನಲ್ಲಿ ಎಳೆಯಬೇಕು, ಎಂದು ಹಿಂದೆಯೇ ಹೇಳಿದೆ. ಬಲಮೂಗಿನಲ್ಲಿ ಎಳೆದು ಇಪ್ಪತ್ತೈದು (25) ಎಣಿಸಿ ಮುಗಿಸಿದಮೇಲೆ, ಪುನಃ ಆ ಶ್ವಾಸ ವನ್ನು ಹೊರಕ್ಕೆ ಬಿಡುವಾಗ ಬಲಗೈ ಉಂಗುರದ ಬೆರಳು ಮತ್ತು ಹೆಬ್ಬೆಟ್ಟು ಇವೆರಡನ್ನು ಎಡಬಲ ಮೂಗಿನಮೇಲೆ ಅದಕ್ಕೆ ಚನ್ನಾಗಿ ತಗಲುವಂತಿಡ ಬೇಕು. ಹೀಗಿಟ್ಟಮೇಲೆ ಬಲಮೂಗನ್ನು ಮುಚ್ಚಿ ಹಲ್ಲುಗಳನ್ನು ಬಲವಾಗಿ ಬಿಗಿಹಿಡಿದು ಅಂದರೆ 'ಹಲ್ಲುಗದಿ' ಹಾಕಿ, ಎಡದ ಮೂಗಿನ ಮೂಲಕ ಗದ್ದದ ಉದ್ದದಷ್ಟು ಮಾತ್ರವೇ ಅಂದರೆ ಎರಡಂಗುಲ ಉದ್ದ ಶ್ವಾಸವನ್ನು 'ಓಂ' ಎಂಬ ಮಂತ್ರದಿಂದ ಹೊರಕ್ಕೆ ಬಿಟ್ಟು ಪುನಃ ಅಷ್ಟೇ ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಎಡಮೂಗಿನಲ್ಲೆಳೆದು, ಅನಂತರ ಎಡಮೂಗನ್ನು ಮುಚ್ಚಿ ಬಲಮೂಗನ್ನು ತೆರೆದು ಮೊದಲಿನಂತೆಯೇ ಗದ್ದ ದುದ್ದ ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಬಲಮೂ ಗಿನಲ್ಲಿ ಹೊರಕ್ಕೆ ಬಿಟ್ಟು, ಪುನಃ ಅಷ್ಟೇ ಉದ್ದ ಶ್ವಾಸವನ್ನು 'ಓಂ' ಎಂಬ ಮಂತ್ರದಿಂದ ಬಲಮೂಗಿನಲ್ಲಿ ಎಳೆಯಬೇಕು. ಹೀಗೆ ಶ್ವಾಸದ ವೇಗವು ತಗ್ಗುವವರಿವಿಗೂ ಬೆರಳುಗಳಿಂದ ಎಡಬಲ ಮೂಗುಗಳನ್ನು

ಒಂದಾದಮೇಲೊಂದು ಬದಲಾಯಿಸುತ್ತ ಪುನಃಪುನಃ ಶ್ವಾಸವನ್ನು ಸುಮಾರು ಹತ್ತು ನಿಮಿಷಗಳವರಿವಿಗೆ ಎಳೆಯುತ್ತ ಮತ್ತೆ ಬಿಡುತ್ತ ಬರ ಬೇಕು. ಈ ಶ್ವಾಸವು ಸರ್ಪದಂತಿರುವುದು. ಸರ್ಪವು ಹೆಡೆಯನ್ನೆತ್ತಿ ಆಡುತ್ತ ಹೇಗೆ ಬುಸುಗುಟ್ಟುತ್ತದೆಯೋ ಹಾಗೆಯೇ, ಶ್ವಾಸವೆಂಬ ಸರ್ಪ ವನ್ನು ಇಪ್ಪತ್ತೈದು (25) ಎಣಿಸುವವರಿವಿಗೂ ನಿಲ್ಲಿಸಿ, ಆ ಶ್ವಾಸವೆಲ್ಲ ವನ್ನೂ ಹೊರಕ್ಕೆ ಬಿಡದೆ ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ ಹೊರಕ್ಕೆ ಬಿಡುತ್ತ, ಪುನಃ ಒಳಕ್ಕೆ ಎಳೆಯುತ್ತಿರುವಾಗ, ಆ ಶ್ವಾಸಕ್ಕೆ ಬಹಳ ವಾಗಿ ಕೋಪವು ಹುಟ್ಟಿ ಶ್ವಾಸದ ವೇಗವು ಅಣಗುವವರಿವಿಗೂ ಅದು 'ಬುಸ್, ಬುಸ್, ಬುಸ್' ಎಂದು ಸುಮಾರು ಹತ್ತು ನಿಮಿಷಗಳವರಿವಿಗೂ ಬುಸುಗುಟ್ಟುತ್ತ ಬಂದು, ಶ್ವಾಸದವೇಗವು ಅಣಗಿದಮೇಲೆ ಈ ಬುಸು ಗುಟ್ಟುವ ಶಬ್ದವನ್ನು ನಿಲ್ಲಿಸುತ್ತದೆ. ಆ ಸಮಯದಲ್ಲಿ ಈ ಶರೀರವೆಲ್ಲವೂ ಬೆವರುತ್ತದೆ. ಆ ಬೆವರನ್ನು ಶರೀರದಲ್ಲಿಯೇ ಇಂಗುವಂತೆ ಕೈಗಳಿಂದ ಚನ್ನಾಗಿ ತಿಕ್ಕಿ ಬೆವರು ಇಂಗಿದಮೇಲೆ ಇಗೋ ☞ ಇದರ ಹಿಂಭಾಗ ದಲ್ಲಿ ತೋರಿಸುವ ಚಿತ್ರಪಠದಲ್ಲಿ ಈ ಗ್ರಂಥಕರ್ತರು ಚಿನ್ಮುದ್ರೆಯನ್ನು ಕೈಯಲ್ಲಿ ಹಿಡಿದು ತೋರಿಸಿ ಕುಳಿತಿರುವ ರೀತಿಯಂತೆ ನೀವೂ 'ಚಿನ್ಮುದ್ರೆ' ಯನ್ನು ಕೈಲಿ ಹಿಡಿದು, ಯೋಗಾಭ್ಯಾಸವನ್ನು ಮಾಡಿದ ಶ್ರಮವನ್ನು ತೀರಿಸಿಕೊಳ್ಳುವುದಕ್ಕಾಗಿ ಹತ್ತು ನಿಮಿಷಗಳವರಿವಿಗೂ ಸುಮ್ಮನೆ ಕುಳಿತು ನಿಷ್ಠೆಯಿಂದಿರಬೇಕು. ನಿಷ್ಠೆಯೆಂಬುದು ಹೇಗೆನ್ನುವುದನ್ನು ಇನ್ನು ಮುಂದೆ ವಿವರಿಸುತ್ತೇವೆ. ಇಲ್ಲಿ 'ಚಿನ್ಮುದ್ರೆ'ಯ ರಹಸ್ಯಾರ್ಥವನ್ನು ತಿಳಿಯ ಹೇಳುತ್ತೇವೆ.

## ಚಿನ್ಮುದ್ರೆಯ ರಹಸ್ಯಾರ್ಥವು.

ಈ ಗ್ರಂಥಕರ್ತರಾದ ಯೋಗೀಶ್ವರರು ಮುಂದಿನ ಪುಟದಲ್ಲಿ ತಮ್ಮ ಎರಡು ಕೈ ಗಳನ್ನೂ ಎರಡು ತೊಡೆಯಮೇಲಿಟ್ಟು 'ಚಿನ್ಮುದ್ರೆ'ಯನ್ನು ಕೈಲಿ ಹಿಡಿದು ತೋರಿಸುತ್ತಿ ದ್ದಾರೆ. ಮತ್ತು ಆ ಪಠದಕೆಳಗೆ ತೋರಿಸಿರುವ ಬಲಗೈ ಕಿರುಬೆರಳು, ಉಂಗುರದ ಬೆರಳು

ಮತ್ತು ಮಧ್ಯದ ಬೆರಳು ಈಮೂರು ಬೆರಳುಗಳನ್ನೂ ನೀಳವಾಗಿ ಚಾಚಿ ಪುನಃ ತೋರು ಬೆರಳಿನ ಕೊನೆಯನ್ನು ಹೆಬ್ಬೆಟ್ಟಿನ ಗಿಣ್ಣಿಗೆ ಸರಿಯಾದ ಮಧ್ಯದ ಗೀರಿಗೆ ಸೇರಿಸಿ 'ಚಿನ್ಮುದ್ರೆಯ'ನ್ನು ಹಿಡಿದು, 1-2-3-4-5 ಎಂಬ ಸಂಖ್ಯೆಗಳಿಂದ 5 ಬೆಟ್ಟುಗಳ ಕೊನೆಗಳನ್ನು ಈ ಪಠದಲ್ಲಿ ತೋರಿಸಿದೆ ನೋಡಿರಿ.



1—ಎಂಬ ಸಂಖ್ಯೆಯುಳ್ಳ ಕಿರುಬೆರಳು (Little finger) ನಮ್ಮ ಕಣ್ಣಿಗೆ ಕಾಣ್ಬರುವ ಸ್ಥೂಲ ಶರೀರವನ್ನು ಸೂಚಿಸುತ್ತದೆ. 'ಈ ಸ್ಥೂಲ ಶರೀರವು ಜೀವಾತ್ಮ ಸ್ವರೂಪನಾದ ನೀನಲ್ಲವು. ಆದುದರಿಂದ ಇದನು ದೂರವಾಗಿ ಓಡಿಸು' ಎಂದು ಕಿರುಬೆರಳನ್ನು ಉದ್ದಕ್ಕೆ ಚಾಚಿ ತೋರಿಸಿದೆ.

2—ನೇ ಉಂಗುರುದ ಬೆರಳಿನ (Ring finger) ಸೂಚನೆ ಯೇನೆಂದರೆ:—ಮನಸ್ಸು, ಬುದ್ಧಿ, ಚಿತ್ತ, ಅಹಂಕಾರವೆಂಬುವು ಅಂತಃಕರಣಚತುಷ್ಟಯಗಳು. ಈ ಅಂತಃಕರಣಗಳು ನಾಲ್ಕೂ ಮೇಲೆ ಹೇಳಿದ ಸ್ಥೂಲ ಶರೀರದಲ್ಲಿ ನೆಲೆಯಾಗಿ ನಿಂತಿವೆ. ಇವುಗಳನ್ನೇ ಸೂಕ್ಷ್ಮಶರೀರವೆಂದು ಅಂದರೆ ಮನುಷ್ಯರ ಕಣ್ಣಿಗೆಕಾಣಬರದ ಶರೀರವೆಂದು ಹೇಳುತ್ತಾರೆ. 'ಈ ಸೂಕ್ಷ್ಮ ಶರೀರವು ಜೀವಾತ್ಮಸ್ವರೂಪಿಯಾದ ನೀನಲ್ಲವು. ಆದುದರಿಂದ ಅದನ್ನು ಕೂಡ ದೂರವಾಗಿ ಓಡಿಸಿರಿ,' ಎಂದು ಉಂಗುರದ ಬೆರಳನ್ನು ಉದ್ದಕ್ಕೆ ಚಾಚಿ ತೋರಿಸಿದೆ.

3—ನೇ ನಡು ಬೆರಳಿನ (Middle finger) ಸೂಚನೆ ಯೇನಂದರೆ:—ಲೆಕ್ಕವಿಲ್ಲದಷ್ಟು ಅಂದರೆ ಅನೇಕಕೋಟಿ ಜನ್ಮಗಳಿಂದ ಮಾಡುತ್ತ ಬರುತ್ತಿರುವ ಪುಣ್ಯ ಪಾಪಗಳ ಮೂಟೆಗಳುಂಟು. ಈ ಮೂಟೆಗಳಿಗೆ ಸಂಚಿತ ಕರ್ಮವೆಂದೂ ಕಾರಣ ಶರೀರವೆಂದೂ ಎರಡುವಿಧವಾದ ಹೆಸರುಗಳುಂಟು. 'ಈ ಕಾರಣ ಶರೀರವೂ ಜೀವಾತ್ಮ ಸ್ವರೂಪಿಯಾದ ನೀನಲ್ಲವು. ಆದುದರಿಂದ ಇದನ್ನು ಕೂಡ ದೂರವಾಗಿ ಓಡಿಸು,' ಎಂದು ಈ ಮಧ್ಯದ ಬೆರಳನ್ನು ನೀಳವಾಗಿ ಚಾಚಿ ತೋರಿಸಿದೆ. ಹೀಗೆ ಮೇಲೆ ಹೇಳಿದ ಮೂರು ಕೈ ಬೆರಳುಗಳನ್ನೂ ನೀಳವಾಗಿ ನೀಡಿ ತೋರಿಸುವುದಕ್ಕೆ ಇದೇ ಕಾರಣವು. ಮೂರನೇ ಸಂಖ್ಯೆಯಲ್ಲಿ ತೋಸಿರುವ ಕಾರಣ ಶರೀರದಿಂದಲೇ ಸ್ತ್ರೀ ಪುರುಷರಿಗೆ ಲೆಕ್ಕವಿಲ್ಲದಷ್ಟು ಜನ್ಮಗಳು ಬಂದು ಹೋಗುತ್ತಿರುತ್ತವೆ. ಮೇಲೆ ಹೇಳಿದ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳು ಯಾವ ಜನ್ಮದಲ್ಲಿ ನಶಿಸುತ್ತವೆಯೋ, ಆ ಜನ್ಮದಲ್ಲಿಯೇ, ಈ ಮೂರು ಶರೀರಿಗಳಿಗೆ ಕಾರಣಭೂತನಾದ ಆತ್ಮನು ತನ್ನ ನಿಜಸ್ವರೂಪವಾದ ಪರಮಾತ್ಮನಲ್ಲಿ ಹೋಗಿ ಸೇರುತ್ತಾನೆ. ಈ ಆತ್ಮನು ಪರಮಾತ್ಮನಲ್ಲಿ ಹೇಗೆ ಐಕ್ಯವಾಗುವನೆಂಬ ವಿಷಯವನ್ನು ಈ ಮುಂದೆ ತಿಳಿಸಿದ್ದೇವೆ.

4—ನೇ ಸಂಖ್ಯೆಯಲ್ಲಿ ಕಾಣಿಸಿರುವ ತೋರು ಬೆರಳಿನ (Fore finger) ತುದಿಯನ್ನು ಜೀವಾತ್ಮನೆಂದು ತಿಳಿದುಕೊಳ್ಳಬೇಕು. ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳನ್ನು ತೋರಿಸುವ ಕಿರುಬೆರಳು, ಉಂಗುರದ ಬೆರಳು ಮತ್ತು ನಡುಬೆರಳು ಇವುಗಳೊಡನೆ ಜೀವಾತ್ಮನನ್ನು ತೋರಿಸುವ ನಾಲ್ಕನೇ ಬೆರಳಿನ ತುದಿಯು ಸೇರಿಕೊಂಡಿದ್ದಿತು. ಹೀಗಿರಲು ಒಬ್ಬ ಪುರುಷನು ತನಗಿರುವ ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳನ್ನು ನಾಶಮಾಡಿದನೆಂದು ಭಾವಿಸೋಣ. ಅಂಥವನಿಗೆ ಪುನಃ ಶರೀರವು ದೊರಕುವುದಕ್ಕೆ ಯಾವ ಆಧಾರವೂ ಇಲ್ಲವು. ಆದುದರಿಂದ ಅವನ ಶರೀರದಲ್ಲಿ ಸಂಸಾರ ಮಾಡಿಕೊಂಡಿದ್ದ ಅಂದರೆ ನೆಲೆಸಿದ್ದ ಆತ್ಮನು ಈ ಕೆಳಗೆ ಹೇಳುವ ರೀತಿಯಲ್ಲಿ ತನ್ನಲ್ಲಿ ತಾನೇ ಯೋಚಿಸಿಕೊಳ್ಳುತ್ತಿದ್ದಾನೆ.

" ಲೆಕ್ಕವಿಲ್ಲದಷ್ಟು ಎಷ್ಟೋ ಕೋಟಿ ಜನ್ಮಗಳಲ್ಲಿ ಈ ದೇಹಿಗೆ ಸಾಕ್ಷಿಮಾತ್ರನಾಗಿರುವುದಕ್ಕಾಗಿಯೇ ನಾನು ಇವನೊಡನೆಯೇ ಬರುತ್ತಿದ್ದೆನು. ಆದರೆ ಇವನಿಗಿರುವ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳು ಈ ಜನ್ಮದಲ್ಲಿ ನಶಿಸಿಹೋದವು. ಇನ್ನು ಮುಂದೆ ನಾನು ಇವನೊಡನೆ ಸೇರಿರುವುದಕ್ಕೆ ಶರೀರವೇ ಇಲ್ಲ. ಆದುದರಿಂದ ನಾನು ಬಟ್ಟಬಯಲಾಗಿರುವ ನನ್ನ ಸ್ವಗೃಹಕ್ಕೆ ಹೋಗಿ ಸೇರುತ್ತೇನೆ." ಎಂದು ಮನಸ್ಸಿನಲ್ಲೆಣಿಸಿ ಇದುವರಿವಿಗೂ ಮೇಲೆ ಸೂಚಿತವಾದ ಮೊದಲನೇ ಮೂರು ಬೆರಳುಗಳಿಂದ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನು ಬಿಟ್ಟು ನಾಲ್ಕನೇ ಬೆರಳಿನಿಂದ ಸೂಚಿತವಾದ ಜೀವಾತ್ಮವು ಪ್ರತ್ಯೇಕವಾಯಿತು. ಅಂದರೆ ಕಿರುಬೆರಳು, ಉಂಗುರದ ಬೆರಳು ಮತ್ತು ನಡುಬೆರಳು ಇವುಗಳಿಂದ ಸೂಚಿಸಲ್ಪಟ್ಟ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳನ್ನೂ ಬಿಟ್ಟು, ತೋರುಬೆರಳಿನ ಕೊನೆಯಿಂದ ಸೂಚಿಸಲ್ಪಟ್ಟ ಜೀವಾತ್ಮನು ತಾನು ನೆಲೆಸುವುದಕ್ಕೆ ಶರೀರವಿಲ್ಲದೆ ತನ್ನ ಸ್ವರೂಪದಲ್ಲಿ ಸೇರುವುದಕ್ಕಾಗಿ ಬೇರೆ ಬಂದು

ನಿಂತನು. ಈ ಜೀವಾತ್ಮನು ಮಾಯೆಯೆಂಬ ಕಟ್ಟಿನಿಂದ ಬಿಡುಗಡೆಯನ್ನು ಹೊಂದಿ ಪ್ರತ್ಯೇಕವಾಗಿ ಬಂದಿದ್ದರಿಂದ ಆ ಜೀವಾತ್ಮನನ್ನು ಪರಮಾತ್ಮನಾದ ತನ್ನಲ್ಲಿ ಸೇರಿಸಿ ಕೊಳ್ಳುವುದಕ್ಕಾಗಿ ಈ ಕೆಳಗೆ ಹೇಳುವ ರೀತಿಯಲ್ಲಿ ಆ ಪರಮಾತ್ಮನನ್ನು ಸೂಚಿಸುವ ಐದನೇ ಬೆರಳಾದ ಹೆಬ್ಬೆರಳು ತನ್ನ ಕೊನೆಯಿಂದ ಆಕಾಶವನ್ನು ತೋರಿಸಿ ಜೀವಾತ್ಮ ನನ್ನು ಕರೆಯುತ್ತದೆ. ಐದನೇ ಸಂಖ್ಯೆಯು ಹೆಬ್ಬೆರಳು ಏನನ್ನು ಸೂಚಿಸುತ್ತದೆಯೋ ಅದನ್ನು ಇನ್ನುಮುಂದೆ ತಿಳಿಸುತ್ತೇವೆ.

5—ನೇ ಸಂಖ್ಯೆಯಿಂದ ತೋರಿಸಲ್ಪಡುವ ಹೆಬ್ಬೆರಳಿನ ತುದಿಯೇ ಪರಮಾತ್ಮನು, ಎಂದು ಭಾವಿಸಿ. ನಾಲ್ಕನೇ ಸಂಖ್ಯೆಯು ತೋರುಬೆರಳು ಜೀವಾತ್ಮನೆಂದು ಮೊದಲೇ ತಿಳಿ ಸಿರುತ್ತೇವೆ. ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಂದ ಈ ಜೀವಾತ್ಮನು ಬಿಡುಗಡೆಯು ನ್ನು ಹೊಂದಿದ್ದರಿಂದ ಬಹಳ ಪರಿಶುದ್ಧನಾದನು. ಅಂತಹ ಪರಿಶುದ್ಧನಾದ ಆತ್ಮನನ್ನು ತನ್ನಲ್ಲಿ ಸೇರಿಸಿಕೊಳ್ಳುವುದಕ್ಕಾಗಿ ಪರಮಾತ್ಮ ಸೂಚಕವಾದ ಹೆಬ್ಬೆರಳು ಏನುಮಾಡುತ್ತ ದೆಂದರೆ :—ತನ್ನ ತುದಿಯಿಂದ ಆಕಾಶವನ್ನು ತೋರಿಸಿ ಪುನಃ ತೋರು ಬೆರಳಿನ ತುದಿ ಯನ್ನು ನೋಡಿ ಹೀಗೆಂದು ಹೇಳುತ್ತದೆ. 'ನಾನು ಎಲ್ಲೆಲ್ಲಿಯೂ ಪರಿಪೂರ್ಣನಾಗಿರುವ ಬಟ್ಟಬಯಲು ಸ್ವರೂಪಿಯಾದ ದೇವರು. ನನ್ನಂಶವೇ ನೀನು. ಇದುವರಿವಿಗೂ ನೀನು ಸ್ಥೂಲ ಸೂಕ್ಷ್ಮ ಕಾರಣಗಳೆಂಬ ತ್ರಿಪುರಗಳಲ್ಲಿ ಸೇರಿದ್ದೆ. ಈಗ ಅವುಗಳು ನಾಶ ವಾದವು. ಇನ್ನು ಮೇಲೆ ನೀನು ನನ್ನಲ್ಲಿ ಸೇರಿಹೋಗು.' ಎಂದು ಆಜ್ಞಾಪಿಸುತ್ತದೆ. ಆಗ ತಕ್ಷಣವೇ ತೋರುಬೆರಳಿನ ತುದಿಯು ಹೆಬ್ಬೆರಳಿನ ನಡು ಗೆರೆಯಲ್ಲಿ ಬಂದು ಸೇರಿತು. ಜೀವಾತ್ಮಪರಮಾತ್ಮರ ಐಕ್ಯವನ್ನು ತೋರಿಸುವುದಕ್ಕಾಗಿ ಈ 'ಚಿನ್ಮುದ್ರೆ' ಯನ್ನು ಒಂದು ದೃಷ್ಟಾಂತವಾಗಿ ಕಾಣಿಸಿದೆಯೇ ಹೊರತು, ಈ ಬೆರಳುಗಳೇ ಜೀವಾತ್ಮ ಪರಮಾತ್ಮರೆಂದು ತಿಳಿಯಬಾರದು. ಚಿನ್ಮುದ್ರೆಯನ್ನು ಕೈಲಿ ಹಿಡಿದು ದೊಡ್ಡವರು ತೋರಿಸಿದ ರಹಸ್ಯಾರ್ಥವು ಇದೇ. ಅನೇಕ ಯೋಗಿಗಳ ಪಠವನ್ನು ನೋಡಿರಿ; ಅವರೆಲ್ಲ ರೂ ಚಿನ್ಮುದ್ರೆಯನ್ನು ಕೈಲಿ ಹಿಡಿದು ತೋರಿಸುತ್ತಿದ್ದಾರೆ. ಆದರೆ ಅವರು ಇದರ ರಹಸ್ಯ ವನ್ನು ಬಿಚ್ಚಿ ಹೇಳಿಲ್ಲ. ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಪ್ರಾಣಾಯಾಮವನ್ನು ಮಾಡಿದ ಶ್ರಮವನ್ನು ತೀರಿಸಿಕೊಳ್ಳುವುದಕ್ಕಾಗಿ ಪ್ರತಿಯೊಂದು ಸಲವೂ ಚಿನ್ಮುದ್ರೆ ಯನ್ನು ಕೈಲಿ ಹಿಡಿದು ಹತ್ತು ನಿಮಿಷಗಳಕಾಲ ನಿಷ್ಠೆಯಿಂದಿರಬೇಕು. ನಿಷ್ಠೆಯೆಂದರೆ ಕಣ್ಣುಗಳನ್ನು ಮುಚ್ಚಿ ಯಾವ ದೇವತೆಯ ರೂಪವನ್ನಾಗಲಿ, ಯಾವ ಮಂತ್ರಜಪವ ನ್ನಾಗಲಿ ಮನಸ್ಸಿನಲ್ಲಿ ನೆನೆಯದೆ, ಮನಸ್ಸನ್ನು ಪರಮಾತ್ಮನ ಸ್ವರೂಪವಾಗುಳ್ಳ ಬಟ್ಟ ಬಯಲಿನಲ್ಲಿ ಬಯಲಾಗಿ ಕಲೆಸಿಬಿಡಬೇಕು. ಹೀಗೆ ಮನಸ್ಸನ್ನು ಬಯಲಿನಲ್ಲಿ ಬಯಲಾಗಿ ಸೇರಿಸುವುದೇ ನಿಷ್ಠೆಯೆಂದೂ, ಮೌನವೆಂದೂ, ಸಮಾಧಿಯೆಂದೂ, ನಿರ್ವಿಕಲ್ಪವೆಂದೂ ಹೀಗೆ ಅನೇಕ ವಿಧವಾಗಿ ಹೇಳುತ್ತಾರೆ. ಎಡಮೂಗಿನಲ್ಲಿ ಇಪ್ಪತ್ತೈದು (25) ಎಣಿ ಸುವ ವರಿವಿಗೂ ಶ್ವಾಸವನ್ನು ನಿಲ್ಲಿಸುವ ವಿಷಯವನ್ನು ಇನ್ನು ಮುಂದೆ ವಿವರಿಸುತ್ತೇವೆ.

# ಎಡದಮೂಗಿನಲ್ಲಿ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸುವಿಕೆ.

ಹಿಂದೆ ಬಲಮೂಗಿನಲ್ಲಿ ಶ್ವಾಸವನ್ನು ನಿಲ್ಲಿಸುವಾಗ ಮಾಡಿದಂತೆಯೇ ಎಡಮೂಗಿನಲ್ಲಿ ಅದನ್ನು ಅಭ್ಯಾಸಮಾಡುವಾಗಲೂ, ಮೊದಲು ಮೂರು ಸಣ್ಣ ಗುಟುಕು ನೀರನ್ನು ಕುಡಿಯಬೇಕು. ಕುಡಿದಮೇಲೆ ಶರೀರವನ್ನು ಕಡ್ಡಿಯಂತೆ ನೆಟ್ಟಗೆ ನಿಲ್ಲಿಸಿ ಬಾಯಿ ಕಣ್ಣುಗಳನ್ನು ಮುಚ್ಚಬೇಕು. ಅನಂತರ ಬಲಮೂಗಿನ ಹೊಳ್ಳೆಯನ್ನು ಬಲಗೈ ಹೆಬ್ಬೆರಳಿನಿಂದ ಮುಚ್ಚಿ ಎದೆಯ ಎಡಭಾಗದಲ್ಲಿರುವ ಎಡ ಶ್ವಾಸಕೋಶದಲ್ಲಿ ನಿಂತಿರುವ ಹಿಂದಿನ ಶ್ವಾಸವೆಲ್ಲವನ್ನೂ ಸ್ವಲ್ಪಮಾತ್ರವೂ ಒಳಗೆ ನಿಲ್ಲಿಸದೆ ಎಡಮೂಗಿನ ಹೊಳ್ಳೆಯಿಂದ 'ಓಂ-ಓಂ-ಓಂ' ಎಂಬ ಮಂತ್ರದಿಂದ ಮೆಲ್ಲಮೆಲ್ಲನೆ ಅಂದರೆ ಸ್ವಲ್ಪಸ್ವಲ್ಪವಾಗಿ ಹೊರಕ್ಕೆ ಬಿಟ್ಟು ಪುನಃ ಅದರ ಹಿಂದೆಯೇ ಶ್ವಾಸವನ್ನು 'ಓಂ-ಓಂ-ಓಂ' ಎಂಬ ಮಂತ್ರದಿಂದ ಮೆಲ್ಲಮೆಲ್ಲಗೆ ಒಳಕ್ಕೆಳೆಯಬೇಕು. ಹೀಗೆಳೆಯುವಾಗ ಒಂದೇ ಸಮನಾಗಿ (ನೀಳವಾಗಿ) ಶ್ವಾಸವನ್ನು ಎಳೆಯಬಾರದು. ಈ ವಿಷಯವನ್ನು ಬಲಮೂಗಿನಲ್ಲಿ ಶ್ವಾಸವನ್ನು ನಡೆಸುವ ಕ್ರಮದಲ್ಲಿ ಹಿಂದೆಯೇ ತಿಳಿಸಿದೆ. ಆದರೂ ಒಂದೇ ಬಾರಿ ತಿಳಿದುಕೊಳ್ಳಲು ಸಾಧ್ಯವಾಗದ ಸೂಕ್ಷ್ಮ ಬುದ್ಧಿಯಿಲ್ಲದವರಿಗಾಗಿ ಮತ್ತೊಂದುಸಾರಿ ಆ ವಿಷಯವನ್ನು ಇಲ್ಲಿ ಹೇಳಿದೆ.

ಶ್ವಾಸವನ್ನು ನಿಲ್ಲಿಸದೆ ಒಂದೇ ಸಮನಾಗಿ ಅಂದರೆ ನೀಳವಾಗಿ ಒಳಕ್ಕೆಳೆದರೆ ಸುಮಾರು ಒಂದು ಮೊಳದುದ್ದ ಶ್ವಾಸವು ಒಳಕ್ಕೆ ಪ್ರವೇಶಿಸುತ್ತದೆ. ಆಗ ಒಂದೇ ಸಮನಾಗಿ ಆ ಮೊಳದುದ್ದ ಶ್ವಾಸವನ್ನು ಒಳಕ್ಕೆಳೆಯದೆ ಎರಡೆರಡಂಗುಲಗಳುದ್ದ ಶ್ವಾಸವನ್ನು ಮಾತ್ರವೇ ಸ್ವಲ್ಪಸ್ವಲ್ಪವಾಗಿ 'ಓಂ-ಓ-ಓಂ' ಎಂಬ ಏಕಾಕ್ಷರೀ ಮಂತ್ರದಿಂದಲೇ ಒಳಕ್ಕೆಳೆಯಬೇಕು. ಹಾಗೆ ಸ್ವಲ್ಪಸ್ವಲ್ಪವಾಗಿ ಒಳಕ್ಕೆಳೆಯುವಾಗ ಪ್ರತಿಸಲವೂ 'ಓಂ-

ಓಂ-ಓಂ' ಎಂಬ ಏಕಾಕ್ಷರೀ ಪ್ರಣವವನ್ನು ಮನಸ್ಸಿನಲ್ಲಿ ನೆನೆಯುತ್ತ ಪ್ರತಿ ಶ್ವಾಸದಲ್ಲಿಯೂ ಸೇರಿಸುತ್ತ, ಎಡಮೂಗಿನ ಹೊಳ್ಳೆಯಲ್ಲೆಳೆಯುತ್ತ ಎದೆಯ ಎಡಭಾಗದಲ್ಲಿನ ಶ್ವಾಸಕೋಶ (Left Lung) ದಲ್ಲಿ ಎಷ್ಟು ಶ್ವಾಸವು ಹಿಡಿಯುವುದೋ ಅಷ್ಟನ್ನೂ ಒಳಕ್ಕೆಳೆದು ನುಂಗಿ ಆಮೇಲೆ 791-ನೇ ಪುಟದಲ್ಲಿ ತೋರಿಸಿರುವ ಚಿತ್ರಪಟದಲ್ಲಿ ಕಾಣಿಸಿದ ಶ್ವಾಸನಾಳ (Air Path) ಮತ್ತು ಆಹಾರನಾಳ (Food Path) ಇವೆರಡೂ ಒಟ್ಟಿಗೆ ಕೂಡುವ ಸ್ಥಳದಲ್ಲಿ ಕಂಠವನ್ನು ಮುಚ್ಚಿ ಬಿಡಬೇಕು.

ಹೀಗೆ ಕಂಠವನ್ನು ಮುಚ್ಚಿದಮೇಲೆ ಶ್ವಾಸಕೋಶದಲ್ಲಿ ಶ್ವಾಸವಿನ್ನೇನಾದರೂ ಹಿಡಿಯುತ್ತದೆಯೋ ಏನೋ ಎಂದು ಮನಸ್ಸಿನಲ್ಲಿ ಎಣಿಸಿ, ಪುನಃ ಶ್ವಾಸವನ್ನು 'ಓಂ-ಓಂ' ಎಂಬ ಪ್ರಣವಮಂತ್ರದಿಂದ ಒಳಕ್ಕೆಳೆದು ನೋಡಬೇಕು. ಆಗ ½, 1, ಇಲ್ಲವೇ 2-3 ಅಂಗುಲಗಳುದ್ದ ಮಾತ್ರವೇ ಶ್ವಾಸವು ಎಡದಮೂಗಿನೊಳಕ್ಕೆ ಪ್ರವೇಶಿಸುತ್ತದೆ. ಒಂದುವೇಳೆ ಪ್ರವೇಶಿಸದಿದ್ದರೂ ಶ್ವಾಸವನ್ನು ಎಳೆದೇ ನೋಡಬೇಕು. ಇದಾದಮೇಲೆ ಮೊದಲು ಮುಚ್ಚಿದ ಕಂಠವನ್ನು ತೆರೆದು ಮತ್ತೆ ಒಳಕ್ಕೆಳೆದ ಆ ಶ್ವಾಸವನ್ನು ಕೂಡ ನುಂಗಬೇಕು. ಹಾಗೆ ನುಂಗಿದ್ದೇ ಆದರೆ, ಉಸಿರಿನ ಚೀಲವು ಪೂರ್ಣವಾಗಿ ತುಂಬಿಕೊಳ್ಳುತ್ತದೆ. ಹೀಗೆ ತುಂಬಿದಮೇಲೆ ಮೂಗಿನ ಹೊಳ್ಳೆಗಳ ಮೇಲಿರುವ ಎರಡು ಬೆರಳುಗಳನ್ನೂ ತೆಗೆದುಬಿಡಬೇಕು. ಹೀಗೆ ಬೆರಳುಗಳು ತೆಗೆದಮೇಲೆ, 1-ಎಂಬ ಸಂಖ್ಯೆಯನ್ನು ಮನಸ್ಸಿನಲ್ಲಿ ನೆನೆಸಿ, ಭ್ರೂಮಧ್ಯದಲ್ಲಿ ಅದನ್ನು ನಿಲ್ಲಿಸಿ, ಆ 1-ಎಂಬ ಸಂಖ್ಯೆಯನ್ನು ಅಂತರ್ದೃಷ್ಟಿಯಿಂದ ಅಂದರೆ ಮನಸ್ಸಿನಲ್ಲಿ ನೋಡಿದ್ದೇ ಆದರೆ, ಆ ಸಂಖ್ಯೆಯು ಹುಬ್ಬಿನ ನಡುಭಾಗದಲ್ಲಿ ಬಂದು ನಿಲ್ಲುತ್ತದೆ. ಆಮೇಲೆ ಒಂದೇ ಸಮನಾದ ದೃಷ್ಟಿಯಿಂದ ಆ ಸಂಖ್ಯೆಯನ್ನೇ ಲಕ್ಷಿಸುತ್ತಿರಬೇಕು. ಹೀಗೆ ದೃಷ್ಟಿಸಿ ನೋಡುತ್ತಿದ್ದಾಗ ನಿಮ್ಮ ಮನಸ್ಸನ್ನು ಅತ್ತಿತ್ತ ತಿರುಗಿಸಿದ್ದೇ ಆದರೆ, ಆ 1-ಎಂಬ ಸಂಖ್ಯೆಯು ಕಣ್ಮರೆಯಾಗುತ್ತದೆ. ಆದುದರಿಂದ ಮನಸ್ಸನ್ನು ಅತ್ತಿತ್ತ ಚಲಿಸದಂತೆ ಮಾಡಿ ದೃಷ್ಟಿಯನ್ನು ಆ 1-ಎಂಬ ಸಂಖ್ಯೆಯಲ್ಲಿಯೇ ನಿಲ್ಲಿಸಬೇಕು. ಹೀಗೆ ನಿಲ್ಲಿಸಿದಮೇಲೆ ಎರಡು ಕೈಗಳನ್ನೂ ಎರಡು ತೊಡೆಗಳ ಮೇಲಿಟ್ಟು ಭ್ರೂಮಧ್ಯ ಪ್ರದೇಶದಲ್ಲಿ 1-ಎಂಬ ಸಂಖ್ಯೆಯನ್ನು ಮನೋದೃಷ್ಟಿಯಿಂದ

ನೋಡುತ್ತ, ಬಲಗೈಯ 1-2-3-4-5 ಬೆರಳುಗಳನ್ನು ಚಾಚುವುದ ರಿಂದಲೋ ಇಲ್ಲವೇ ಮಡಿಸುವುದರಿಂದಲೋ ಎಣಿಸಿ ಮುಗಿಸಿದಮೇಲೆ ಎಡಗೈ ಕಿರುಬೆರಳನ್ನು ಮಡಿಸಬೇಕು. ಹೀಗೆ ಎಡಗೈ ಐದು ಬೆರಳುಗಳ ನ್ನೂ ಒಂದಾದಮೇಲೊಂದು ಮಡಿಸಿದುದೇ ಆದರೆ (5×5=25) ಐದೈವಲ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸಬೇಕು. ಎಚ್ಚ ರಿಕೆ! ಎಚ್ಚರಿಕೆ! ಭ್ರೂಮಧ್ಯದಲ್ಲಿರುವ 1-ಎಂಬ ಸಂಖ್ಯೆಯಮೇಲೆ ದೃಷ್ಟಿಯನ್ನು ವಿಶೇಷ ಎಚ್ಚರಿಕೆಯಿಂದ ನಿಲ್ಲಿಸಬೇಕು. ಹಾಗೆ ದೃಷ್ಟಿ ಯನ್ನು ನಿಲ್ಲಿಸದಿದ್ದಲ್ಲಿ ಆ 1-ಎನ್ನುವ ಸಂಖ್ಯೆಯು ಮಾಯವಾಗುತ್ತದೆ. ಹೀಗೆ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸಿ ಪುನಃ ಅದನ್ನು ಹೊರಕ್ಕೆ ಬಿಟ್ಟು ಬಿಡಬೇಕು. ಶ್ವಾಸವನ್ನು ಹೊರಕ್ಕೆ ಬಿಡುವ ಕ್ರಮವನ್ನು ಇನ್ನು ಮುಂದೆ ಹೇಳುತ್ತೇವೆ. ಅದನ್ನು ಬಹಳ ಜಾಗರೂಕ ರಾಗಿ ಗಮನಿಸಬೇಕು.

ಶ್ವಾಸವನ್ನು ಒಳಕ್ಕೆಳೆಯುವಾಗ ಎಡದಮೂಗಿನಲ್ಲಿ ಎಳೆಯಬೇ ಕೆಂದು ಹಿಂದೆ ಹೇಳಿದ್ದೇವೆ. ಶ್ವಾಸವನ್ನು ಎಡದಮೂಗಿನಿಂದೆಳೆದು, 25- ಎಣಿಸಿ ಮುಗಿಸಿದಮೇಲೆ ಪುನಃ ಆ ಶ್ವಾಸವನ್ನು ಬಿಡುವಾಗ ಎಡಮೂಗನ್ನು ಮುಚ್ಚಿ ಹಲ್ಲುಗಳನ್ನು ಗಟ್ಟಿಯಾಗಿ ಗದಿಹಾಕಿ ಗದ್ದದವರಿವಿಗೆ ಇರುವ ಶ್ವಾಸ ವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಬಲಮೂಗಿನ ಮೂಲಕ ಹೊರಕ್ಕೆ ಬಿಟ್ಟು, ಪುನಃ ಗದ್ದದುದ್ದದ ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಬಲಮೂಗಿನಿಂದೆಳೆದು ಬಲಮೂಗನ್ನು ಮುಚ್ಚಿ ಎಡಮೂಗ ನ್ನು ತೆರೆದು ಮೊದಲಿನಂತೆಯೇ ಗದ್ದದುದ್ದದಷ್ಟು ಶ್ವಾಸವನ್ನು 'ಓಂ' ಎಂಬ ಮಂತ್ರದಿಂದ ಎಡಮೂಗಿನಿಂದ ಹೊರಕ್ಕೆ ಬಿಡಬೇಕು. ಹೀಗೆ ಶ್ವಾಸದ ವೇಗವಣಗುವವರಿವಿಗೂ ಮೂಗುಗಳನ್ನು ಬೆರಳುಗಳಿಂದ ಪಕ್ಕ ದಿಂದ ಪಕ್ಕಕ್ಕೆ ತಿರುಗಿಸಿ ತಿರುಗಿಸಿ ಸುಮಾರು ಹತ್ತು ನಿಮಿಷಗಳವರಿವಿಗೂ 'ಓಂ' ಎಂಬ ಪ್ರಣವಮಂತ್ರವನ್ನು ಶ್ವಾಸದೊಡನೆ ಸೇರಿಸಿ ಶ್ವಾಸದವೇಗವು ಅಣಗುವವರಿವಿಗೂ ಬೆರಳುಗಳಿಂದ ಮಾರಿಸಿಮಾರಿಸಿ ಶ್ವಾಸವನ್ನು ಹೊರಕ್ಕೆ ಬಿಡುತ್ತ ಪುನಃ ಒಳಕ್ಕೆಳೆಯುತ್ತ, ಶ್ವಾಸದವೇಗವು ತಗ್ಗಿದಮೇಲೆ ಮೂಗಿನ ಮೇಲಿರುವ ಬೆರಳುಗಳನ್ನು ತೆಗೆದುಬಿಡಬೇಕು. ಹೀಗೆ ಒಂದರಿಂದೊಂ ದಕ್ಕೆ ಮಾರಿಸುತ್ತಿರುವಾಗ ಶರೀರದಲ್ಲಿ ಬಹಳ ಬೆವರು ಹುಟ್ಟುತ್ತದೆ. ಆಗ

ಆ ಬೆವರನ್ನು ಶರೀರದಲ್ಲಿಯೇ ಇಂಗುವಂತೆ ಚನ್ನಾಗಿ ಕೈಗಳಿಂದ ಉಜ್ಜಿ ಇನ್ನೂ ಇಂಗದೆ ಇರುವ ಬೆವರು ಇದ್ದ ಪಕ್ಷದಲ್ಲಿ ಶುಭ್ರವಾದ ಬಟ್ಟೆಯಿಂದ ಅದನ್ನು ಚನ್ನಾಗಿ ಒರೆಸಬೇಕು.

ಪ್ರಾರಂಭದಲ್ಲಿ ಶ್ವಾಸವನ್ನು ನಿಲ್ಲಿಸಿದ 25-ಎಣಿಸುವವರಿವಿಗೂ ವಿಶೇಷವಾಗಿ ಬೆವರು ಹುಟ್ಟದು. ಈ ಸಂಖ್ಯೆಯನ್ನು ನೂರರಷ್ಟು, ಸಾವಿರ ರಷ್ಟು ಹೆಚ್ಚಿಸುತ್ತ ಹೊರಡುವಾಗ ಸ್ನಾನಮಾಡಿದವನಂತೆ ಶರೀರದಲ್ಲೆಲ್ಲಾ ವಿಶೇಷವಾಗಿ ಬೆವರು ಹುಟ್ಟುತ್ತದೆ. ಆ ಹೊತ್ತಿಗೆ ಈಗಿನಿಂದಲೇ ಅಷ್ಟೊಂದು ಬೆವರು ಹುಟ್ಟದಿದ್ದರೂ ಕೈಗಳಿಂದ ಶರೀರವನ್ನೆಲ್ಲಾ ಚನ್ನಾಗಿ ಉಜ್ಜಿ ಶುದ್ಧಮಾಡುತ್ತ ಬರಬೇಕು. ಈ ವಿಷಯವನ್ನು ಈ ಹಿಂದೆ ವಿಶದ ವಾಗಿ ತಿಳಿಸಿದೆ. ಇವೆಲ್ಲವೂ ಈ ಗ್ರಂಥಕರ್ತರ ಸ್ವಾನುಭವವು. ಆ ತಮ್ಮ ಅನುಭವವನ್ನೇ ಇಲ್ಲಿ ಹೇಳಿರುತ್ತಾರೆ. ಬೆವರೆಲ್ಲವೂ ಶರೀರದೊಳಕ್ಕೆ ಇಂಗಿದಮೇಲೆ ಚಿನ್ಮುದ್ರೆಯನ್ನು ಕೈಲಿ ಹಿಡಿದು ಶರೀರಶ್ರಮವನ್ನು ತೀರಿಸು ವುದಕ್ಕಾಗಿ ಹತ್ತು ನಿಮಿಷಗಳಕಾಲ ನಿಷ್ಠೆಯಿಂದಿರಬೇಕು. ಈ ನಿಷ್ಠೆಯು ಪೂರೈಸಿದಮೇಲೆ ಪುನಃ ಎಡಬಲಮೂಗುಗಳಲ್ಲಿ ಶ್ವಾಸವನ್ನು ಈ ಮುಂದಿನ ಪ್ರಕರಣದಲ್ಲಿ ವಿವರಿಸುವಂತೆ ನಡೆಸಬೇಕು.

# ಎಡಬಲಮೂಗುಗಳಲ್ಲಿ ಇಪ್ಪತ್ತೈದು ಎಣಿಸುವವರಿವಿಗೂ ಶ್ವಾಸವನ್ನು ನಿಲ್ಲಿಸುವಿಕೆ.

ಕಮ್ಮಾರಕೆಲಸವನ್ನು ಮಾಡುವವನು, ಚರ್ಮದ ಎರಡು ತಿದಿಗಳನ್ನು ಕುಲುಮೆಯಲ್ಲಿಟ್ಟು ಆ ತಿದಿಗಳನ್ನು ಎರಡು ಕೈಗಳಲ್ಲಿಯೂ ಹಿಡಿದು ಒಂದಾದಮೇಲೊಂದರಂತೆ ಹೇಗೆ ಮಾರಿಸಿ ಮಾರಿಸಿ ಒತ್ತಿ ಊದುತ್ತಾ ನೆಯೋ, ಹಾಗೆಯೇ ಎದೆಯಲ್ಲಿರುವ ಎಡಬಲ ಶ್ವಾಸಕೋಶಗಳಲ್ಲಿ ನಿಂತಿದ್ದ ಶ್ವಾಸವೆಲ್ಲವನ್ನೂ ಎರಡು ಮೂಗಿನ ಹೊಳ್ಳೆಗಳ ಮೂಲಕ ಮಾರಿಸಿ

ಮಾರಿಸಿ ಹೊರಕ್ಕೆ ಬಿಟ್ಟು ಬಿಡಬೇಕು. ಹಾಗೆ ಶ್ವಾಸವನ್ನು ಬಿಡುವ ಕ್ರಮವನ್ನು ಈ ಕೆಳಗೆ ಹೇಳಿದ್ದೇವೆ.

ಎಡಬಲಮೂಗುಗಳಲ್ಲಿ ಜೊತೆಯಾಗಿ ಶ್ವಾಸವನ್ನು ನಡೆಸುವಾಗ ಮೊದಲುಮಾಡಿದಂತೆ ಈಗಲೂ ಮೂರು ಸಣ್ಣ ಗುಟುಕು ನೀರನ್ನು ಕುಡಿಯ ಬೇಕು. ಕುಡಿದಮೇಲೆ ಬಾಯಿ ಕಣ್ಣುಗಳನ್ನು ಮುಚ್ಚಬೇಕು. ಹೀಗೆ ಮುಚ್ಚಿದಮೇಲೆ, ಬಲಗೈ ಹೆಬ್ಬೆರಳು ಉಂಗುರದ ಬೆರಳು ಇವೆರಡನ್ನೂ ಬಲ ಮತ್ತು ಎಡಮೂಗಿನ ಮೇಲಿಟ್ಟು ಎಡಮೂಗನ್ನು ಮುಚ್ಚಿ ಬಲಮೂ ಗಿನ ಹೊಳ್ಳೆಯಮೂಲಕ ಒಳಭಾಗದಲ್ಲಿ ನಿಂತಿರುವ ಶ್ವಾಸದಲ್ಲಿ ಗದ್ದದುದ್ದ ದಷ್ಟು ಅಂದರೆ ಮೂಗಿನ ತುದಿಯಿಂದ ಹಿಡಿದು ಗದ್ದದ ಕೊನೆಯುವರಿವಿಗೂ ಇರುವ ಉದ್ದದಷ್ಟು ಶ್ವಾಸವನ್ನು ಮಾತ್ರವೇ ಹೊರಕ್ಕೆ ಬಿಟ್ಟು, ಎಡಮೂ ಗನ್ನು ಮುಚ್ಚಿ ಬಲಮೂಗನ್ನು ತೆರೆದು ಹಿಂದಿನಂತೆಯೇ ಒಳಗಡೆ ನಿಂತಿರುವ ಶ್ವಾಸದಲ್ಲಿ ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ ಹೊರಕ್ಕೆ ಬಿಟ್ಟು ಎಡದಮೂಗನ್ನು ಮುಚ್ಚಿ ಬಲಮೂಗನ್ನು ತೆರೆದು ಗದ್ದದುದ್ದದಷ್ಟು ಶ್ವಾಸ ವನ್ನು ಮಾತ್ರವೇ ಹೊರಕ್ಕೆ ಬಿಟ್ಟು ಬಲಮೂಗನ್ನು ಮುಚ್ಚಬೇಕು. ಈ ರೀತಿಯಾಗಿ ಎದೆಯ ಎಡಬಲ ಪಾರ್ಶ್ವಗಳಲ್ಲಿರುವ ಶ್ವಾಸಕೋಶಗಳಲ್ಲಿ ನಿಂ ತಿರುವ ಹಳೆಯ ಶ್ವಾಸವೆಲ್ಲವನ್ನೂ ಎರಡು ಮೂಗಿನ ಹೊಳ್ಳೆಗಳ ಮೂಲಕ 'ಓಂ' ಎಂಬ ಮಂತ್ರದಿಂದ ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ ಹೊರಕ್ಕೆ ಬಿಡುತ್ತ ಬಂದು, ಕಡೆಯಲ್ಲಿ ಶ್ವಾಸವು ಸ್ವಲ್ಪವಾಗಿರುವಾಗ ಬಲ ಮೂಗಿನಲ್ಲಿ ಪೂರ್ತಿಯಾಗಿ ಹೊರಕ್ಕೆ ಬಿಟ್ಟು, ಪುನಃ ಅದರ ಹಿಂದೆಯೇ ಮೊದಲು ಬಿಟ್ಟಂಥ ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಒಳಕ್ಕೆಳೆದು ಬಲಮೂಗನ್ನು ಮುಚ್ಚಿ ಎಡಮೂಗನ್ನು ತೆರೆದು ಗದ್ದದುದ್ದ ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಒಳಕ್ಕೆಳೆದು, ಎಡಮೂಗನ್ನು ಮುಚ್ಚಿ ಪುನಃ ಬಲಮೂಗನ್ನು ತೆರೆದು ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ ಒಳಕ್ಕೆಳೆಯಬೇಕು. ಹೀಗೆ ಸಲವೊಂದಕ್ಕೆ ಗದ್ದದುದ್ದದಷ್ಟು ಶ್ವಾಸದಂತೆ ಎರಡು ಮೂಗಿನ ಹೊಳ್ಳೆಗ ಳಲ್ಲಿಯೂ ಒಂದೇ ಸಮವಾಗಿ ಮಾರಿಸಿ ಮಾರಿಸಿ ಒಳಕ್ಕೆಳೆಯುತ್ತ ಬಂದು, ಕಡೆಯಶ್ವಾಸವು ಸ್ವಲ್ಪ ಉಳಿದಿರುವಾಗ ಅಂದರೆ ಗದ್ದದುದ್ದದಷ್ಟು ಶ್ವಾಸವು

ಮಾತ್ರವೇ ಶ್ವಾಸಕೋಶವು ಹಿಡಿಯಬಹುದೆಂದು ನಿಮಗೆ ತೋರಿಬಂದಾಗ ಅಷ್ಟೇ ಉದ್ದ ಶ್ವಾಸವನ್ನು ಕಡೆಯಲ್ಲಿ ಬಲಮೂಗಿನಲ್ಲಿಯೇ ಒಳಕ್ಕೆಳೆದು ನುಂಗಬೇಕು. ಹೀಗೆ ನುಂಗಿದಮೇಲೆ ಪುನಃ ಏನಾದರೂ ಶ್ವಾಸವು ಒಳಗೆ ಹಿಡಿಯುತ್ತದೆಯೋ ಏನೋ, ಎಂದು ನೆನೆದು ಬಲಮೂಗಿನಲ್ಲಿ ಸ್ವಲ್ಪವೂ ಎಡಮೂಗಿನಲ್ಲಿ ಸ್ವಲ್ಪವೂ ಶ್ವಾಸವನ್ನು ಸಮವಾಗಿ ಎಳೆದು ನೋಡಬೇಕು. ಆಗ ಅರ್ಧಂಗುಲದುದ್ದ ಶ್ವಾಸವಾಗಲಿ, ಇಲ್ಲವೇ ಒಂದು ಒಂದೂವರೆ ಎರಡು ಎರಡೂವರೆ ಮೂರು ಅಂಗುಲಗಳುದ್ದ ಶ್ವಾಸವಾಗಲಿ, ಒಳಕ್ಕೆ ಪ್ರವೇಶಿಸಿದರೂ ಪ್ರವೇಶಿಸಬಹುದು. ಇಲ್ಲವೇ ಪ್ರವೇಶಿಸದೆಯೇ ಇರಬಹುದು. ಆದರೂ ನೀವು ಶ್ವಾಸವನ್ನೆಳೆದೇ ನೋಡಬೇಕು. ಆಗ ಆ ಶ್ವಾಸವನ್ನು ಕೂಡ ನುಂಗಿ ಬಿಡಬೇಕು. ಹೀಗೆ ನುಂಗಿದಮೇಲೆ ಮೊದಲು ಎಡಬಲ ಮೂಗಿನ ಹೊಳ್ಳೆಗಳಲ್ಲಿ ಬೇರೆಬೇರೆಯಾಗಿ ಶ್ವಾಸವನ್ನು ಒಳಕ್ಕೆಳೆದು ನುಂಗಿ ಹಿಂದೆ ಹೇಳಿದಂತೆ ಭ್ರೂಮಧ್ಯದಲ್ಲಿ 1-ಎಂಬ ಸಂಖ್ಯೆಯನ್ನು ನಿಲ್ಲಿಸಿ ಅದನ್ನು ಮನೋನೇತ್ರದಿಂದ ನೋಡುತ್ತ ಮೊದಲು ಹೇಳಿದ ರೀತಿಯಲ್ಲಿ ಬೆರಳುಗಳನ್ನು ಮಡಿಸುತ್ತ ಹಿಂದಿನಂತೆ ಇಪ್ಪತ್ತೈದ (25) ರವರಿವಿಗೂ ಎಣಿಸಬೇಕು. ಹೀಗೆ ಎಣಿಸಿ ಮುಗಿಸಿದಮೇಲೆ ಬಲ ಮೂಗನ್ನು ಮುಚ್ಚಿ ಎಡದಮೂಗಿನಿಂದ ಮೊದಲಿನಂತೆಯೇ ಗದ್ದದುದ್ದದಷ್ಟು ಶ್ವಾಸವನ್ನು 'ಓಂ' ಎಂಬ ಮಂತ್ರದಿಂದ ಹೊರಕ್ಕೆ ಬಿಟ್ಟು ಪುನಃ ಆ ಗುದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಎಡಮೂಗಿನಲ್ಲೆಳೆದು ಅದನ್ನು ಮುಚ್ಚಿ ಬಲಮೂಗನ್ನು ತೆರೆದು ಗದ್ದದುದ್ದದಷ್ಟು ಶ್ವಾಸವನ್ನು ಮಾತ್ರವೇ 'ಓಂ' ಎಂಬ ಮಂತ್ರದಿಂದ ಬಲ ಮೂಗಿನಿಂದ ಹೊರಕ್ಕೆ ಬಿಟ್ಟು, ಪುನಃ ಅಷ್ಟೇ ಉದ್ದ ಶ್ವಾಸವನ್ನು 'ಓಂ-' ಎಂಬ ಮಂತ್ರದೊಡನೆ ಒಳಕ್ಕೆಳೆದು ಬಲಮೂಗನ್ನು ಮುಚ್ಚಬೇಕು. ಹೀಗೆ ಶ್ವಾಸದ ವೇಗವಣಗುವವರಿವಿಗೂ ಎರಡು ಮೂಗುಗಳನ್ನೂ ಬೆರಳುಗಳಿಂದ ಮಾರಿಸಿ ಮಾರಿಸಿ ಸುಮಾರು ಹತ್ತು ನಿಮಿಷಗಳವರಿವಿಗೂ 'ಓಂ-' ಎಂಬ ಪ್ರಣವಮಂತ್ರದಿಂದ ಶ್ವಾಸವನ್ನು ಬಿಡುತ್ತ ಪುನಃ ಒಳಕ್ಕೆಳೆಯುತ್ತಲಿರಬೇಕು. ಹೀಗೆ ಎಳೆಯುತ್ತಿದ್ದ ಶ್ವಾಸದ ವೇಗವು ತಗ್ಗಿದ ಬಳಿಕ ಶರೀರದಲ್ಲಿ ಹುಟ್ಟಿದ ಬೆವರನ್ನು ಅದರಲ್ಲಿಯೇ ಇಂಗುವಂತೆ ಕೈಗಳಿಂದುಜ್ಜಿ,

ಬೆವರೆಲ್ಲಾ ಇಂಗಿದಮೇಲೆ 'ಚಿನ್ಮುದ್ರೆ'ಯನ್ನು ಕೈಲಿ ಹಿಡಿದು ಶರೀರ ಶ್ರಮವು ತೀರುವ ವರಿವಿಗೂ ಹತ್ತು ನಿಮಿಷಗಳಕಾಲ 'ನಿಷ್ಠೆ'ಯಿಂದಿರ ಬೇಕು.

ಅಯ್ಯಾ! ಬಲಮೂಗಿನಲ್ಲಿಯೂ, ಎಡಮೂಗಿನಲ್ಲಿಯೂ, ಎಡಬಲ ರೆರಡರಲ್ಲಿಯೂ ಮೂರುಸಾರಿ ಪ್ರಾಣಾಯಾಮಗಳನ್ನು ಮಾಡಿ ಮುಗಿಯುವ ವರಿವಿಗೂ ತಾನು ಕುಳಿತಿದ್ದ ಆಸನವನ್ನು ಬಿಟ್ಟು ಏಳಬಾರದು. ಈ ಮೂರು ಪ್ರಾಣಾಯಾಮಗಳನ್ನೂ ಮಾಡಿ ಮುಗಿಸುವುದಕ್ಕೆ ಒಂದು ಘಂಟೆ ಹೊತ್ತಾದರೂ ಆಗುತ್ತದೆ. ಈ ಪ್ರಾಣಾಯಾಮವನ್ನು ಬೆಳಗಿನ ಝಾವದ ನಾಲ್ಕು ಘಂಟೆ ಮೊದಲು ಆರು ಘಂಟೆಯವರಿವಿನ ಮಧ್ಯಕಾಲದಲ್ಲಿ ನಿಮ್ಮ ಅನುಕೂಲವನ್ನು ನೋಡಿಕೊಂಡು ನಿತ್ಯವೂ ಅಭ್ಯಾಸಮಾಡಬೇಕು. ಇದೇ ವಿಧವಾಗಿ ಸಾಯಂಕಾಲ ಆರು ಘಂಟೆಯಿಂದ ಮೊದಲು ಎಂಟು ಘಂಟೆ ಯೊಳಗಿನ ಮಧ್ಯ ಕಾಲದಲ್ಲಿ ಅವರವರ ಅನುಕೂಲಕ್ಕೆ ತಕ್ಕಂತೆ ಪ್ರಾಣಾ ಯಾಮಾಭ್ಯಾಸವನ್ನು ಮಾಡಿಕೊಳ್ಳಬೇಕು. ಸಾಯಂಕಾಲ ಮಾಡುವಾಗ ಹಿಂದುಮುಂದಾಗಿ (Revese) ಮಾಡಬೇಕು. ಅಂದರೆ ಮೊದಲು ಎಡ ಮೂಗಿನಲ್ಲಿ ಆಮೇಲೆ ಬಲಮೂಗಿನಲ್ಲಿ ಅನಂತರ ಎಡಬಲ ಮೂಗುಗಳಲ್ಲಿ ಕ್ರಮವಾಗಿ ಮಾಡಬೇಕು. ಪ್ರಾಣಾಯಾಮವನ್ನು ಮಾಡುವಾಗ ಯಾವ ಮಾತ್ರ ಆಹಾರವೂ ಹೊಟ್ಟೆಯಲ್ಲಿರಬಾರದು. ಅಂದರೆ ಆ ಸಮಯದಲ್ಲಿ ಬರೀ ಹೊಟ್ಟೆಯಲ್ಲಿರಬೇಕು.

ಪ್ರಾತಃಕಾಲದಲ್ಲಿ ಮೊದಲು ಬಲಮೂಗಿನಲ್ಲಿಯೂ ಅನಂತರ ಎಡ ಮೂಗಿನಲ್ಲಿಯೂ ಆಮೇಲೆ ಬಲಎಡಮೂಗುಗಳಲ್ಲಿಯೂ ಕ್ರಮವಾಗಿ ಪ್ರಾಣಾ ಯಾಮವನ್ನು ಮಾಡಬೇಕೆಂದು ಹಿಂದೆ ಹೇಳಿದೆ. ಸಾಯಂಕಾಲದಲ್ಲಿ ಮಾತ್ರ ಹೀಗೆ ಮಾಡದೆ ಮೇಲೆ ವಿಶದಪಡಿಸಿದಂತೆ ಹಿಂದುಮುಂದಾಗಿ ಮಾಡಬೇಕು ಅಂದರೆ ಮೊದಲು ಎಡ, ಅನಂತರ ಬಲ, ಆಮೇಲೆ ಎಡಬಲ ಮೂಗುಗಳಲ್ಲಿ ಪ್ರಾಣಾಯಾಮವನ್ನು ಕ್ರಮವಾಗಿ ನಡೆಸಬೇಕು. ಪ್ರಾಣಾ ಯಾಮವನ್ನು ಮಾಡಿ ಮುಗಿಸಿದ ತಕ್ಷಣವೇ ಭೋಜನವನ್ನು ಮಾಡ ಕೂಡದು. ಹತ್ತು ನಿಮಿಷಗಳಾದರೂ ಬಿಟ್ಟು ಅನಂತರ ಆಹಾರವನ್ನು ತೆಗೆದು

ಕೊಳ್ಳಬೇಕು. ಯೋಗಾಭ್ಯಾಸದ ಪ್ರಾರಂಭದಲ್ಲಿ ಮೊದಲು ಒಂದೊಂದು ಮೂಗಿನಲ್ಲಿಯೂ ಐದನೂರು (500) ಎಣಿಸುವ ತನಕ ಶ್ವಾಸವನ್ನು ನಿಲ್ಲಿಸುವ ಪರ್ಯಂತ ಇದುವರಿವಿಗೂ ನೀವು ಸಾಧಾರಣವಾಗಿ ಭುಜಿಸುತ್ತಾ ಬಂದ ಆಹಾರವನ್ನೇ ಭುಜಿಸುತ್ತಿರಬಹುದು. ಆದರೆ ಮಾಂಸಾಹಾರಿಗಳು ಅವುಗಳನ್ನು ಪೂರ್ಣವಾಗಿ ಬಿಡುವುದಲ್ಲದೆ ಆ ವಿಷಯವನ್ನು ಕನಸ್ಸಿನಲ್ಲಿ ಕೂಡ ಸ್ಮರಿಸಬಾರದು. ಆಹಾರವನ್ನು ಮಾರಿಸುವ (ಬದಲಾಯಿಸುವ) ವಿಧವನ್ನೂ, ಅದನ್ನು ತಗ್ಗಿಸುವ ವಿಧವನ್ನೂ ಇನ್ನು ಮುಂದೆ ವಿಶದಪಡಿಸುತ್ತೇವೆ. ಹಾಗೆ ಅಲ್ಲಿ ಹೇಳಿದ ಕ್ರಮದಲ್ಲಿ ಆಹಾರವನ್ನು ಭುಜಿಸಬೇಕು.

ಇದುವರಿವಿಗೂ ಹೇಳಿದ ಪ್ರಾಣಾಯಾಮವು ಮೊದಲಿನಿಂದ ತುದಿಯ ವರಿವಿಗೂ ಸೂಕ್ಷ್ಮ ಬುದ್ಧಿಯುಳ್ಳವರು ಮೂರು ನಾಲ್ಕು ಸಾರಿ ಪಠಿಸಿದ್ದೇ ಆದರೆ, ಬಹು ಸುಲಭವಾಗಿ ಗ್ರಹಿಸಿ ಪ್ರಾಣಾಯಾಮಾಭ್ಯಾಸವನ್ನು ಮಾಡಬಹುದು. ಇಷ್ಟೇ ಅಲ್ಲದೆ, ಇತರರಿಗೆ ಈ ಪ್ರಾಣಾಯಾಮಾಭ್ಯಾಸದ ಕ್ರಮವನ್ನು ಬೋಧಿಸುವುದರಲ್ಲಿ ಪಂಡಿತರಾಗಿಯೂ ಅವರಿಗೆ ಗುರುಗಳಾಗಿಯೂ ಆಗಬಹುದು. ಹಾಗೆ ಸೂಕ್ಷ್ಮಬುದ್ಧಿಯಿಲ್ಲದವರು ಮೊದಲಿನಿಂದ ತುದಿಯ ವರಿವಿಗೂ ಪ್ರಾಣಾಯಾಮವನ್ನು ನಡೆಸುವ ಕ್ರಮವನ್ನು ಎಚ್ಚರಿಕೆಯಿಂದ ಪಠಿಸಿ ಹೃದ್ಗತಮಾಡಿಕೊಳ್ಳಬೇಕು. ಹಾಗೆ ಮಾಡಿಟ್ಟುಕೊಂಡರೆ ಆಗ ಅವರು ಬಹು ಸುಲಲಿತವಾಗಿ ಪ್ರಾಣಾಯಾಮವನ್ನು ನಡೆಸುವ ಕ್ರಮವನ್ನು ತಿಳಿದುಕೊಳ್ಳುತ್ತಾರೆ. ಇಂಥವರು ಪ್ರಾಣಾಯಾಮಾಭ್ಯಾಸಕ್ಕಾಗಿ ಬೇರೆ ಗುರುವನ್ನು ಹುಡುಕಬೇಕಾದ ಅಗತ್ಯವಿಲ್ಲ. ಶ್ವಾಸವನ್ನು ಬಿಡುವ ಕ್ರಮ, ಮತ್ತು ಒಳಕ್ಕೆಳೆಯುವ ಕ್ರಮ, ಇವುಗಳನ್ನು ಮೊದಲೇ ತಿಳಿದುಕೊಂಡಿದ್ದರೆ, ಪ್ರಾಣಾಯಾಮಾಭ್ಯಾಸದ ಕ್ರಮವನ್ನು ಬಹು ಸುಲಭವಾಗಿ ತಿಳಿಯಬಹುದು. ಆದುದರಿಂದ ಈಗ ಹೇಳಿರುವ ವರಿವಿಗೂ ಚನ್ನಾಗಿ ನೀವು ತಿಳಿದುಕೊಳ್ಳಬೇಕೆಂಬುದೇ ಈ ಗ್ರಂಥಕರ್ತರ ಉದ್ದೇಶ.



# ಪ್ರಾಣಾಯಾಮಾಭ್ಯಾಸಿಗಳು ಮುಖ್ಯವಾಗಿ ಗಮನಿಸಬೇಕಾದ ವಿಷಯಗಳು.

ಅಯ್ಯಾ! ನೀವು ಪ್ರಾಣಾಯಾಮವನ್ನು ಮಾಡುವಾಗ ಈ ಗ್ರಂಥವನ್ನು ಕೈಲಿ ಹಿಡಿದು ಇದರಲ್ಲಿ ಯಾವ ಮೂಗನ್ನು ಮುಚ್ಚಿ ಯಾವ ಮೂಗಿನಲ್ಲಿ ಶ್ವಾಸವನ್ನು ಬಿಡಬೇಕೆಂದು ಇಲ್ಲವೇ ಒಳಕ್ಕೆಳೆಯಬೇಕೆಂದು ಹೇಳಿರುತ್ತೇವೆಯೋ, ಹಾಗೆಯೇ ಮೂಗುಗಳ ಮೇಲೆ ಹೆಬ್ಬೆರಳು ಉಂಗುರದ ಬೆರಳು (Thumb and Ring finger) ಇವುಗಳನ್ನಿಟ್ಟು ಈ ಗ್ರಂಥದಲ್ಲಿ ಹೇಳಿದಂತೆ ಬೆರಳುಗಳನ್ನು ಮಾರಿಸುತ್ತ ಬಂದಿರಾದರೆ, ಆಗ ನಿಮಗೆ ಬಹು ಸುಲಭವಾಗಿ ಪ್ರಾಣಾಯಾಮವನ್ನು ಮಾಡುವ ಕ್ರಮವು ಚನ್ನಾಗಿ ಮನದಟ್ಟುತ್ತದೆ. ಪ್ರಾಣಾಯಾಮವನ್ನು ಮಾಡುವ ಪದ್ಧತಿಯನ್ನು ಜ್ಞಾಪಕದಲ್ಲಿಡಲಾರಿರಿ. ಆದುದರಿಂದ ಮೊದಮೊದಲು ಪುಸ್ತಕವನ್ನು ಕೈಲಿ ಹಿಡಿದು ಅದರಲ್ಲಿ ಹೇಳಿದ ಕ್ರಮದಂತೆ ಮೂಗಿನಮೇಲೆ ಬೆರಳುಗಳನ್ನಿಟ್ಟು ಒಂದಾದಮೇಲೊಂದರಂತೆ ಮಾರಿಸುತ್ತ ಬಂದಿರಾದರೆ ಆಗ ನೀವು ಬಹು ಸುಲಲಿತವಾಗಿ ಈ ವಿಷಯವನ್ನು ಗ್ರಹಿಸುವಿರಿ. ಪ್ರಾಣಾಯಾಮವನ್ನು ಪುರುಷರು ಮಾತ್ರವೇ ಮಾಡಬೇಕೆಂದೂ ಸ್ತ್ರೀಯರು ಮಾಡಕೂಡದೆಂದೂ ಕೆಲವರು ಹೇಳುವುದುಂಟು. ಇದು ಸರಿಯಲ್ಲ. ಪುರುಷರೇ ಮಾಡಬೇಕೆಂದೂ ಸ್ತ್ರೀಯರು ಮಾಡಕೂಡದೆಂದೂ ಯಾವ ವೇದಶಾಸ್ತ್ರಗಳಲ್ಲಿಯೂ ಹೇಳಿಲ್ಲ. ಸುಚೀಲಿ, ಸುನೀತಿ ಎಂಬ ಋಷಿಪತ್ನಿಯರು ಪ್ರಾಣಾಯಾಮಾಭ್ಯಾಸವನ್ನು ಮಾಡಿ ಸಿದ್ಧಿಹೊಂದಿದರೆಂಬು ಪುರಾಣ ಪ್ರಮಾಣವುಂಟು. ಅಲ್ಲದೆ ಶ್ರೀಮದ್ರಾಮಾಯಣದಲ್ಲಿ ಶ್ರೀರಾಮನು ವನವಾಸಕ್ಕೆ ಹೊರಡುವ ಮೊದಲು ತಾಯಿಯಾದ ಕೌಸಲ್ಯೆ

**ಯನ್ನು ನೋಡಿಬರಲು ಹೋದಾಗ ಆಕೆಯು ಪ್ರಾಣಾಯಾಮ ಕ್ರಮದಿಂದ ಇಷ್ಟದೇವತೆಯಲ್ಲಿ ಮನಸ್ಸನ್ನು ಲೀನಮಾಡಿದ್ದವಳಾಗಿ, ಶ್ರೀರಾಮನು ಬಂದಿದ್ದನ್ನು ತಿಳಿಯದಿದ್ದಳೆಂದೂ ಹೇಳಿದೆ. ಹೀಗಿರಲು ಈಗಿನ ಸ್ತ್ರೀಯರೂ ಕೂಡ ಪ್ರಾಣಾಯಾಮಾಭ್ಯಾಸವನ್ನು ಮಾಡಬಹುದು.** ಈ ಪ್ರಾಣಾಯಾಮವನ್ನೇ ಸಂಧ್ಯಾವಂದನೆಯೆಂದು ತಿಳಿದುಕೊಳ್ಳಿ. ಸಂಧ್ಯಾವಂದನೆಯನ್ನು ಮಾಡುವವರು,

ಶ್ರುತಿ ॥ "ಓಂ ಭೂಃ-ಓಂ ಭುವಃ-ಓಂ ಸುವಃ-ಓಂ ಮಹಃ-ಓಂ ಜನಃ-ಓಂ ತಪಃ ಓಗ್ಂ ಸತ್ಯಂ-ಓಂ ತತ್ಸವಿತೃವರೇಣ್ಯಂ-ಭರ್ಗೋದೇವಸ್ಯ-ಧೀಮಹಿ ♦ ಧಿಯೋ ಯೋ ನಃ-ಪ್ರಚೋದಯಾತ್ ♦ ಓಂ ಆಪೋ ಜ್ಯೋತೀ ರಸೋ ಅಮೃತಂ-ಬ್ರಹ್ಮ-ಭೂರ್ಭುವ-ಸ್ಸುವಃ-ಓಂ ♦"

ಎಂಬುವ ಈ ಗಾಯತ್ರೀ ಮಂತ್ರವನ್ನು ಜಪಮಾಡುವಾಗ ಮೂಗಿನ ಮೇಲೆ ಬೆರಳುಗಳನ್ನು ಇಡುವಾಗಲೂ ಶ್ವಾಸವನ್ನು ಹೊರಕ್ಕೆ ಬಿಡುತ್ತ ಪುನಃ ಒಳಕ್ಕೆಳೆಯುತ್ತ ಎಡಗೈಯ ಐದು ಬೆರಳುಗಳನ್ನೂ ಮಡಿಸುತ್ತಿರುತ್ತೀರಿ. ಆದರೆ ಸಂಧ್ಯಾವಂದನೆಯನ್ನು ಮಾಡುವ ಪದ್ಧತಿಯನ್ನು ನೀವು ತಿಳಿದುಕೊಂಡವರಲ್ಲವು. ಮೂಗಿನ ಎಡಬಲ ಭಾಗಗಳಲ್ಲಿ ಬೆರಳುಗಳನ್ನಿಡುವ ಕಾರಣವೇನೆಂದರೆ, ಶ್ವಾಸವನ್ನು ಹೊರಕ್ಕೆ ಹೋಗಲೀಯದೆ ನಿಲ್ಲಿಸಿ ಸಂಧ್ಯಾವಂದನೆಯನ್ನು ಮಾಡುತ್ತಿರುವರೆಂದು ತಿಳಿಯುವಿರೇ ಹೊರತು, ಶ್ವಾಸವನ್ನು ನಿಲ್ಲಿಸುವವರಲ್ಲವು. ಶ್ವಾಸವನ್ನು ಹೊರಕ್ಕೆ ಬಿಡುತ್ತ ಪುನಃ ಒಳಕ್ಕೆಳೆಯುತ್ತಲೇ ಗಾಯತ್ರೀ ಮಂತ್ರವನ್ನು ಮನಸ್ಸಿನಲ್ಲಿ ಧ್ಯಾನಿಸಿ ಜಪವನ್ನು ಮಾಡುತ್ತಿರುತ್ತಾರೆ. ಹೀಗೆ ಮಾಡದಂತೆ ಪ್ರಾಣಾಯಾಮ ಕ್ರಮವನ್ನನುಸರಿಸಿ ಶ್ವಾಸವನ್ನು ಒಳಗೆ ನಿಲ್ಲಿಸಿ ಸಂಧ್ಯಾವಂದನೆಯನ್ನು ಮಾಡುವುದೇ ಸರಿಯಾದ ಸಂಧ್ಯಾವಂದನೆಯೆಂದು ತಿಳಿದುಕೊಳ್ಳಬೇಕು. ಅಂದರೆ ಶ್ವಾಸವನ್ನು ಹೊರಕ್ಕೆ ಬಿಡದೆ ಒಳಗೆ ನಿಲ್ಲಿಸಿ ಗಾಯತ್ರೀ ಮಂತ್ರವನ್ನು ಜಪಮಾಡಬೇಕೆಂಬುದೇ ಇದರ ಭಾವ.

ಸಂಧ್ಯಾವಂದನೆಯನ್ನು ಮಾಡುವಾಗ ಅಂಗೈ ಗುಣಿಯಲ್ಲಿ ಜಲವನ್ನೆತ್ತಿ ಮೂರುವೇಳೆ ನೀರು ಕುಡಿದು ಅಂದರೆ ತ್ರಿರಾಚಮನವನ್ನು ಮಾಡಿ

ಮೂಗನ್ನು ಬೆರಳುಗಳಿಂದ ಹಿಡಿಯುತ್ತಾರೆ. ಇದರ ರಹಸ್ಯಾರ್ಥವೇನೆಂದರೆ, ಶ್ವಾಸವನ್ನು ಒಳಕ್ಕೆಳೆಯುವುದಕ್ಕೆ ಮೊದಲು ಮೂರು ಗುಟುಕು ನೀರನ್ನು ಕುಡಿಯಬೇಕು. ನೀರನ್ನು ಕುಡಿದಮೇಲೆ ಶ್ವಾಸವನ್ನು ಒಳಕ್ಕೆಳೆಯಬೇಕು. ಸಂಧ್ಯಾವಂದನೆಯನ್ನು ಮಾಡುವಾಗ ಮೂರು ವೇಳೆ ಆಚಮನವನ್ನು ಮಾಡಿ ಮೂಗಿನಮೇಲೆ ಬೆರಳುಗಳನ್ನಿಟ್ಟು ಶ್ವಾಸವನ್ನು ಒಳಕ್ಕೆಳೆಯಬೇಕೆಂಬುದೇ ಆಚಮನವನ್ನು ಮಾಡುವ ರಹಸ್ಯಾರ್ಥವು. ನೀರನ್ನು ಕುಡಿದು ಶ್ವಾಸವನ್ನು ಮೇಲಕ್ಕೆಳೆಯುವ ರಹಸ್ಯಾರ್ಥವನ್ನು ಕುರಿತು ಇನ್ನು ಮುಂದೆ ವಿವರಿಸುವ ಪ್ರಾಣಾಯಾಮದಲ್ಲಿ ವಿಶದವಾಗಿ ತಿಳಿಯಪಡಿಸುತ್ತೇವೆ.

ಬ್ರಹ್ಮ ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣಗಳವರ ಮನೆಯಲ್ಲಿ ಹುಟ್ಟಿದ ಬಾಲಕರಿಗೆ ಎಂಟು, ಹನ್ನೆರಡು, ಹದಿನಾರನೆಯ ಸಂವತ್ಸರಗಳಲ್ಲಿ ಕ್ರಮವಾಗಿ ಉಪನಯನವನ್ನು ಮಾಡಬೇಕೆಂಬ ಒಂದು ಪದ್ಧತಿಯನ್ನಿಟ್ಟಿರುತ್ತಾರೆ. ಆ ಬಾಲಕನಿಗೆ ಉಪನಯನ ಮಾಡುವಾಗ ಮೂಗಿನ ಮೇಲೆ ಹೇಗೆ ಬೆರಳುಗಳನ್ನಿಟ್ಟು ತೋರಿಸಬೇಕೋ ಹಾಗಿಟ್ಟು ತೋರಿಸಿ ಸಪ್ರಣವವಾದ ಗಾಯತ್ರೀ ಮಂತ್ರವನ್ನೂ ಮತ್ತು ಇತರ ಮಂತ್ರಗಳನ್ನೂ ಆ ಬಾಲಕನಿಗೆ ಉಪದೇಶಮಾಡಿದ ದಿನಥ ಮೊದಲು ಪ್ರಾತಃಕಾಲ ಸಾಯಂಕಾಲಗಳಲ್ಲಿ ಸಂಧ್ಯಾವಂದನೆಯನ್ನು ಕ್ರಮವಾಗಿ ಮಾಡಿಕೊಂಡು ಬರಬೇಕೆಂದು ಆಜ್ಞಾಪಿಸುತ್ತಾರೆ. ಆ ಬಾಲಕರೂ ಅದರಂತೆಯೇ ತಮ್ಮ ಎಂಟನೇ ವರ್ಷದಿಂದ ಮೊದಲು ಎಂಭತ್ತನೇ ವಯಸ್ಸಿನವರಿವಿಗೂ ಆ ಮಂತ್ರಗಳನ್ನೇ ಗೊತ್ತಾದ ಕಾಲಗಳಲ್ಲಿ ಜಪಮಾಡುತ್ತ ಸಂಧ್ಯಾವಂದನೆಯ ಅಂತರಾರ್ಥವನ್ನು ತಿಳಿದುಕೊಳ್ಳಲಾರದೆ ಕಡೆಯಲ್ಲಿ ಮೃತಿಹೊಂದುತ್ತಿರುತ್ತಾರೆ.

ಆದುದರಿಂದ ಮೂಗಿನ ಹೊಳ್ಳೆಗಳಲ್ಲಿ ಕುದುರೆಯಂತೆ ಅತಿವೇಗವಾಗಿ ಓಡುತ್ತಿರುವ ಶ್ವಾಸದ ವೇಗವನ್ನು ನಿಲ್ಲಿಸಿ ಸಂಧ್ಯಾವಂದನೆಯನ್ನು ಮಾಡಬೇಕೇ ಹೊರತು, ಬೆರಳುಗಳಿಂದ ಮೂಗನ್ನು ಮುಟ್ಟುತ್ತ ಶ್ವಾಸವನ್ನೆಳೆಯುತ್ತ ಪುನಃ ಬಿಡುತ್ತ ಮಾಡುವಂಥ ಸಂಧ್ಯಾವಂದನೆಯು 'ಸಂಧ್ಯಾವಂದನೆ' ಯೆಂದೆನಿಸಲಾರದು. ಶಾಸ್ತ್ರಪ್ರಮಾಣವಾಗಿ (ಕ್ರಮವನ್ನನು

ಸರಿಸಿ) ಶ್ವಾಸವನ್ನು ನಿಲ್ಲಿಸಿ ಸಂಧ್ಯಾವಂದನೆಯನ್ನು ಮಾಡುತ್ತ ಬರಬೇಕು. ಈರೀತಿಯಾಗಿ ಮಾಡುವ ಸಂಧ್ಯಾವಂದನೆಯೇ ಪ್ರಾಣಾಯಾಮವೆಂದು ಕರೆಯಲ್ಪಡುವುದು. ಹೀಗೆ ಪ್ರಾಣಾಯಾಮವನ್ನು ಮಾಡಿ ಮುಗಿಸಿ ತಕ್ಷಣವೇ 'ಚಿನ್ಮುದ್ರೆ'ಯನ್ನು ಕೈಲಿ ಹಿಡಿದು, ಶರೀರಶ್ರಮವನ್ನು ತೀರಿ ಕೊಳ್ಳುವುದಕ್ಕಾಗಿ ಹತ್ತು ನಿಮಿಷಗಳವರಿವಿಗೆ ನಿಷ್ಠೆಯಿಂದಿರಬೇಕು. ಈ 'ಚಿನ್ಮುದ್ರೆ'ಯ ರಹಸ್ಯವನ್ನು ಕುರಿತು ಹಿಂದೆಯೇ ವಿವರಿಸಿದೆ. ಈ 'ಚಿನ್ಮುದ್ರೆ'ಯನ್ನು ಶ್ರೀ ಶಂಕರಾಚಾರ್ಯರು ಕೈಲಿ ಹಿಡಿದು ತೋರಿಸಿ ದರು. ಆ ಮಹಾನುಭಾವರು ತೋರಿಸಿದ ರಹಸ್ಯವನ್ನು ಮುಂದಿನ ಪ್ರಕರಣ ದಲ್ಲಿ ಬಹು ವಿಸ್ತಾರವಾಗಿ ತಿಳಿಸಿದೆ. ಈ ವಿಷಯವನ್ನು ಹೇಳಿ ಮುಗಿಸಿ ಮೇಲೆ ಇಪ್ಪತ್ತೈದಕ್ಕಿಂತಲೂ ಹೆಚ್ಚಾಗಿ ಶ್ವಾಸವನ್ನು ನಿಲ್ಲಿಸುವ ಕ್ರಮ ವನ್ನು ಕುರಿತು ಈ ಗ್ರಂಥದ ಎರಡನೇ ಭಾಗದಲ್ಲಿ ವಿಶದವಾಗಿ ತಿಳಿಯ ಹೇಳುತ್ತೇವೆ.

---

## ಶಾಂತಿ ಮಂತ್ರವು.

ಶ್ರುತಿ ॥ ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮಥೋ ಬಲ ಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ಮಾಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾಕರೋ ದನಿರಾಕರಣ ಮಸ್ತ್ವನಿ-ರಾಕರಣಂ ಮೇಅಸ್ತು ◆ ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು ◆ ಓಂ ಶಾಂತಿ ಶ್ಶಾಂತಿ ಶ್ಶಾಂತಿಃ ॥

ಶಿರಸ್ಸಿನಿಂದ ಹಿಡಿದು ಪಾದಗಳವರಿವಿಗೂ ಇರುವ ನನ್ನ ಸರ್ವಾ ವಯವಗಳನ್ನೂ ಬಾಯಿಯಲ್ಲಿ ಮಾತನಾಡುವಂಥ ಸರ್ವ ವಾಕ್ಕುಗಳನ್ನೂ, ಕಣ್ಣುಗಳೂ, ಕಿವಿಗಳೂ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಮೊದ ಲಾದ ಅಂತಃಕರಣಚತುಷ್ಟಯಗಳು ಇವುಗಳು ಪ್ರಾಪಂಚಿಕ ವ್ಯವಹಾರ ಗಳಲ್ಲಿ ಪ್ರವೇಶಿಸದೆ ಪರಬ್ರಹ್ಮವಾದ ಆತ್ಮಸ್ವರೂಪದಲ್ಲಿಯೇ ನಿಲ್ಲಿಸಿ ನನ್ನನ್ನು ಪರಬ್ರಹ್ಮನಾಗುವಂತೆ ನಿನ್ನ ಕೃಪಾಕಟಾಕ್ಷವನ್ನು ಅನುಗ್ರಹಿಸು ವವನಾಗು. ಇದೂ ಅಲ್ಲದೆ, ಸತ್, ಚಿತ್, ಆನಂದವೆಂಬ ಸಚ್ಚಿದಾನಂದ

ಪರಬ್ರಹ್ಮಸ್ವರೂಪವೇ ನಾನಾಗುವಂತೆ ವರವನ್ನು ಅನುಗ್ರಹಿಸುವವನಾಗು. ಪರಬ್ರಹ್ಮಸ್ವರೂಪಿಯಾದ ನಾನು ಆ ಪರಬ್ರಹ್ಮನನ್ನು ನಿರಾಕರಿಸದಂತೆ ಮಾಡುವವನಾಗು. ಆ ಪರಬ್ರಹ್ಮನ ಸಹಾಯವು ನನಗೆ ಸದಾ ಇರುವಂತೆ ಅನುಗ್ರಹಿಸುವವನಾಗು. ನನಗೆ ಆ ಪರಬ್ರಹ್ಮನಲ್ಲಿಯೇ ಸದಾ ವಿಶ್ವಾಸವಿರುವಂತೆ ಮಾಡುವವನಾಗು. ಉಪನಿಷತ್ತಿನಲ್ಲಿ ಹೇಳಿರುವ ವಾಕ್ಯಗಳ ರೀತಿಯಲ್ಲಿ ಸಕಲ ಧರ್ಮಗಳೂ ನನಗಿರುವಂತೆ ವರವನ್ನು ದಯಪಾಲಿಸುವವನಾಗು.



ಓ ! ಪ್ರಣವಸ್ವರೂಪಿಯಾದ ಪರಬ್ರಹ್ಮನೇ ! ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣಮೂರ್ತಿಯೇ ! ನಿನಗೆ,

ಶಾಂತಿ ♦ ಶ್ಶಾಂತಿ ♦ ಶ್ಶಾಂತಿಃ.

ಸಕಲ ಧರ್ಮಗಳೂ ನನ್ನಲ್ಲಿರುವಂತೆ ವರಗಳನ್ನು ಕೊಡುವವನಾಗು ಕೃಷ್ಣಾ !

ಈ ಗ್ರಂಥವನ್ನು ಭಕ್ತಿ ವಿಶ್ವಾಸ ಗೌರವಗಳಿಂದ ಪಠಿಸಿ ಅದರಲ್ಲಿ ಹೇಳಿರುವಂತೆ ಅಭ್ಯಾಸಮಾಡುವವರಿಗೆ ಮಂಗಳವುಂಟಾಗಲಿ. ಈ ಗ್ರಂಥವನ್ನು ಇದುವರಿವಿಗೂ ನಡೆಸಿಕೊಂಡು ಬಂದಂಥ ಆ ಪರಮಾತ್ಮನಿಗೆ ನಿತ್ಯಮಂಗಳವಾಗಲಿ.

---

## ಮಂಗಳಾಚರಣೆ.

ಮಾಲಿನೀ ॥ ಸಕಲಗುಣನಿಧಾನಂ ♦ ಯೋಗಿಭಿ ಸ್ತೂಯಮಾನಂ ।
ಭುಜವಿಜತಸಮಾನಂ ♦ ರಾಕ್ಷಸೇಂದ್ರಾದಿಮಾನಂ ॥
ಮಹಿತನೃಪಭಯಾನಂ ♦ ಸೀತಯಾ ಶೋಭಮಾನಂ ।
ಸ್ಮರಹೃದಯವಿಮಾನಂ ♦ ಬ್ರಹ್ಮ ರಾಮಾಭಿದಾನಂ ॥

